# ಪರಿಪೂರ್ಣಚಂದ್ರಿಕಾ

## ಭಾಗ - 5

ಸೂತ್ರ-ಭಾಷ್ಯ-ಟೀಕಾ-ಟಿಪ್ಪಣೀ-ಮೊದಲಾದ 18 ಗ್ರಂಥಗಳೊಂದಿಗೆ
ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕಾ ಸಂಸ್ಕೃತಮೂಲ ಹಾಗೂ ಕನ್ನಡಾನುವಾದ



ಸರ್ವಗತತ್ವಾಧಿಕರಣ, ಅತ್ತೃತ್ವಾಧಿಕರಣ,
ಗುಹಾಧಿಕರಣ, ಅಂತರಾಧಿಕರಣ

ಪ್ರಕಾಶಕರು : ಶ್ರೀಪಾದರಾಜಮಠ, ಮುಳಬಾಗಿಲು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

ಭಾಗ -೫

# ಪರಿಪೂರ್ಣಚಂದ್ರಿಕಾ

## ಸರ್ವಗತತ್ವಾಧಿಕರಣ, ಅತ್ತೃತ್ವಾಧಿಕರಣ, ಗುಹಾಧಿಕರಣ, ಅಂತರಾಧಿಕರಣ

ಬ್ರಹ್ಮಸೂತ್ರ
ಸೂತ್ರದೀಪಿಕಾ
ತಂತ್ರದೀಪಿಕಾ
ನ್ಯಾಯಮುಕ್ತಾವಳಿ
ಬ್ರಹ್ಮಸೂತ್ರಭಾಷ್ಯ
ಭಾಷ್ಯದೀಪಿಕಾ
ಸತ್ತರ್ಕದೀಪಾವಳಿ
ತತ್ವಪ್ರಕಾಶಿಕಾ
ಭಾವದೀಪ
ವಾಕ್ಯಾರ್ಥಮಂಜರೀ
ತಾತ್ಪರ್ಯಚಂದ್ರಿಕಾ
ಪ್ರಕಾಶ
ಗುರುರಾಜೀಯ
ಭಾಟ್ಟಸಂಗ್ರಹ
ನ್ಯಾಯವಿವರಣ
ನ್ಯಾಯವಿವರಣಟೀಕಾ
ಅಣುಭಾಷ್ಯ
ತತ್ವಮಂಜರೀ

(ಶಂಕರಭಾಷ್ಯ, ಭಾಮತೀ, ಶ್ರೀಭಾಷ್ಯ ಇವುಗಳ ಆಯ್ದ ಭಾಗಗಳು)

* * * * * *

ಪ್ರಧಾನಸಂಪಾದಕರು :
ವಿ॥ ಆರ್. ವೇಂಕಟೇಶಾಚಾರ್ಯ
ಶ್ರೀರಂಗಮ್

ಸಂಗ್ರಹ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು

- - - - - -

ಪ್ರಕಾಶಕರು
ಶ್ರೀಪಾದರಾಜಮಠ
ಮುಳಬಾಗಿಲು.

‘ಪರಿಪೂರ್ಣಚಂದ್ರಿಕಾ’ ಖರನಾಮಸಂವತ್ಸರ ಜೇಷ್ಠ ಶುದ್ಧ ಚತುರ್ದಶೀ (ದಿನಾಂಕ : 14-06-2011) ಶ್ರೀಶ್ರೀ ಶ್ರೀಪಾದರಾಜರ ೬೧೧ನೇ ಆರಾಧನಾಮಹೋತ್ಸವದ ಶುಭಮುಹೂರ್ತದಲ್ಲಿ ಮುಳಬಾಗಿಲು ಕ್ಷೇತ್ರದಲ್ಲಿ ಬಿಡುಗಡೆಯಾಯಿತು.

ಪ್ರಕಾಶನ : ಶ್ರೀಪಾದರಾಜಮಠ, ಮುಳುಬಾಗಿಲು.

ಸಹಯೋಗ : ಶ್ರೀಮತಿ ಲೀಲಾ ಮತ್ತು ಶ್ರೀನಿವಾಸ ಪ್ರಹ್ಲಾದ
ಡಾಯಲ್ಸ್ ಟೌನ್, ಪೆನ್ಸಿಲ್‌ವೆನಿಯಾ, ೧೮೯೦೧,
ಯು.ಎಸ್.ಎ.

ಪ್ರಥಮಮುದ್ರಣ : 2011

ಬೆಲೆ : 1000 ರೂ

ಪ್ರತಿಗಳು : 1000





ಅಕ್ಷರಜೋಡಣೆ :

ಕೆ. ವೆಂಕಟೇಶಮೂರ್ತಿ - 9480261663

ನಾಗಲತಾ(ಸುಧಾ)ಗಿರಿ, ಬೆಂಗಳೂರು.

ಮುದ್ರಣ
ದರ್ಶನ್ ಪ್ರಿಂಟರ್ಸ್, ರಾಘವೇಂದ್ರಕಾಲೋನಿ, ಬೆಂಗಳೂರು.

# ನಿವೇದನೆ

ನಾಲ್ಕು ಸಂಪುಟಗಳಲ್ಲಿ ನಾಮಪಾದದ ಅಧ್ಯಯನವನ್ನು ಮುಗಿಸಿದ್ದಾಯಿತು. ಮುಂದಿನ ನಾಲ್ಕು ಸಂಪುಟಗಳಲ್ಲಿ ಪ್ರಥಮಾಧ್ಯಾಯದ ಉಳಿದ ಮೂರು ಪಾದಗಳ ನಿರೂಪಣೆಯು ಇರುತ್ತದೆ. ಈ ಸಂಪುಟದಲ್ಲಿ ಲಿಂಗಪಾದವು ಪ್ರಾರಂಭವಾಗುತ್ತಿದೆ. ಏಳು ಅಧಿಕರಣಗಳನ್ನೊಳಗೊಂಡಿರುವ ಈ ಪಾದದಲ್ಲಿ ಮೊದಲಿನ ನಾಲ್ಕು ಅಧಿಕರಣಗಳ ನಿರೂಪಣೆ ಈ ಸಂಪುಟದಲ್ಲಿದೆ. ಓದುಗರ ಅನುಕೂಲಕ್ಕಾಗಿ ಈ ಸಂಪುಟದಿಂದ ಪ್ರಾರಂಭಿಸಿ ಮುಂದಿನ ಎಲ್ಲಾ ಸಂಪುಟಗಳಲ್ಲಿಯೂ ಸಂಸ್ಕೃತ ಭಾಗವನ್ನು ದೀರ್ಘವಾಗಿ ನೀಡದೆ ಒಂದು ಅಥವಾ ಎರಡು ವಾಕ್ಯಗಳನ್ನೇ ತೆಗೆದುಕೊಂಡು ಅನುವಾದ ಮಾಡಲಾಗಿದೆ. ಈ ವ್ಯತ್ಯಾಸವನ್ನು ಗಮನಿಸಿ ಅಧ್ಯಯನ ಮಾಡಬೇಕೆಂದು ನಿವೇದಿಸಲಾಗಿದೆ. ಮುಂದಿನ ಸಂಪುಟಗಳಲ್ಲಿಯೂ ಇದನ್ನು ಗಮನಿಸಬೇಕು.

ನಾಲ್ಕನೆಯ ಮತ್ತು ಐದನೆಯ ಸಂಪುಟಗಳೆರಡನ್ನೂ ಶ್ರೀಪಾದರಾಜರು ತಮ್ಮ ಆರಾಧನೆಯ ಶುಭಸಂದರ್ಭದಲ್ಲಿ ಸ್ವೀಕರಿಸುತ್ತಿರುವುದು ಬಹಳ ಸಂತೋಷವನ್ನುಂಟುಮಾಡುವ ವಿಷಯ. ಮುಂದಿನ ೬೧೨ನೆಯ ಆರಾಧನೆಯಲ್ಲಿ ಸಮಗ್ರ ತಾತ್ಪರ್ಯಚಂದ್ರಿಕಾ ಗ್ರಂಥದ ಅನುವಾದವನ್ನು ಸ್ವೀಕರಿಸಿ ಎಲ್ಲಾ ಬುಭುತ್ಸುಗಳ ಸಾಧನೆಯು ಮತ್ತಷ್ಟು ಹೆಚ್ಚಾಗುವಂತೆ ಅನುಗ್ರಹಿಸಬೇಕೆಂದು ಶ್ರೀಪಾದರಾಜರಲ್ಲಿ ಸಾಷ್ಟಾಂಗ ಪ್ರಣಾಮವನ್ನು ಮಾಡುತ್ತಾ ಪ್ರಾರ್ಥನೆಯನ್ನು ಮಾಡೋಣ.

ಸಂಪೂರ್ಣವಾಗಿ ಅನುವಾದದ ಕಾರ್ಯಕ್ಕೆ ದೊಡ್ಡವಿಘ್ನವು ಪ್ರಾಪ್ತವಾದಾಗ ಶ್ರೀಪಾದರಾಜರೇ ಇಲ್ಲಿಯತನಕ ಈ ಕಾರ್ಯವನ್ನು ಮಾಡಿಸಿಕೊಂಡು ನಿರಾತಂಕವಾಗಿ ಮುಂದಿನ ಕೆಲಸಕ್ಕೂ ಅಣಿಮಾಡಿಕೊಟ್ಟಿದ್ದಾರೆಂಬ ವಿಷಯದಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಶ್ರೀಪಾದರಾಜರ ಹಾಗೂ ಶ್ರೀ ವ್ಯಾಸತೀರ್ಥರ ಅಧ್ಯಾತ್ಮಬಾಂಧವ್ಯ ಹಾಗೂ ವಿದ್ಯಾಬಾಂಧವ್ಯವು ಆದರ್ಶಪ್ರಾಯವಾಗಿತ್ತು. ಗುರುಶಿಷ್ಯರಲ್ಲಿ ಪರಸ್ಪರ ಸಹಕಾರ, ವಾತ್ಸಲ್ಯ - ಭಕ್ತಿ, ಕಾರುಣ್ಯ - ವಿನಯ ಮೊದಲಾದ ಗುಣಗಳಿಗೆಲ್ಲಾ ಅಸಾಧಾರಣ ಉದಾಹರಣೆಯೆಂದರೆ ಇವರೀರ್ವರ ವಿದ್ಯಾಬಾಂಧವ್ಯವೆಂದು ಹೇಳಬಹುದು. ಆಗಿನಕಾಲದಲ್ಲಿದ್ದ ಗುರುಶಿಷ್ಯರ ವಿದ್ಯಾಬಾಂಧವ್ಯವೇ ಇಂದಿಗೂ ಮಧ್ವಮತದ ಭದ್ರಕೋಟೆಯಾಗಿದೆ. ಇವರೀರ್ವರ ಆಶೀರ್ವಾದ ನಮ್ಮ ಮೇಲೆ ನಿರಂತರವಾಗಿ ಇರಲೆಂದು ಪ್ರಾರ್ಥಿಸೋಣ.

*ಪರಿಪೂರ್ಣಚಂದ್ರಿಕಾ*

ಪ್ರತ್ಯಕ್ಷವಾಗಿ ಅನುಕೂಲ ಮಾಡಿಕೊಡುತ್ತಿರುವ ಶ್ರೀಪಾದರಾಜ ಮಠದ ಶ್ರೀಗಳವರಿಗೆ ಹಾಗೂ ಪೂಜ್ಯ ಶ್ರೀಲಕ್ಷ್ಮೀನಾರಾಯಣಾಚಾರ್ಯರವರಿಗೆ ನಮಸ್ಕಾರಗಳು ಹಾಗೂ ಕೃತಜ್ಞತೆಗಳು. ಹಿಂದೊಮ್ಮೆ ಶ್ರೀಪಾದಪುತ್ರರಾದ ಲಕ್ಷ್ಮೀನಾರಾಯಣಾಚಾರ್ಯರು ಈಶಾವಾಸ್ಯೋಪನಿಷತ್ತಿನ ಪಾಠವನ್ನು ಕೇಳುವಾಗ ಒಂದೇ ಕ್ಷಣದಲ್ಲಿ ಉಪನಿಷತ್ತಿನ ಅಂತರಂಗಕ್ಕಿಳಿದು ಸಮಸ್ತ ಲೌಕಿಕ ಪ್ರಪಂಚವನ್ನೇ ತೊರೆದು ಗುರುಗಳ ಸೇವೆಯಲ್ಲಿ ಧುಮುಕಿದ ದೊಡ್ಡ ಮಹಾನುಭಾವರು. ಇವರ ನಿರ್ಮಲ ಮನಸ್ಸಿನಿಂದ ತಾತ್ಪರ್ಯಚಂದ್ರಿಕಾ ಗ್ರಂಥದ ಪ್ರಕಾಶನಕಾರ್ಯವು ನಿರಾಂತಕವಾಗಿ ನಡೆಯುತ್ತಿದೆಯೆಂದು ಹೇಳಲು ಸಂತೋಷ ಪಡುತ್ತೇನೆ.

ಶ್ರೀಮತಿ ಲೀಲಾ ಮತ್ತು ಶ್ರೀನಿವಾಸ ಪ್ರಹ್ಲಾದ ಡಾಯಲ್ಸ್ ಟೌನ್, ಪೆನ್ಸಿಲ್‌ವೆನಿಯಾ, ೧೮೯೦೧, ಯು.ಎಸ್.ಎ. ಇವರು ಈಸಂಪುಟಕ್ಕೂ ಸಹ ಉತ್ತಮರೀತಿಯಲ್ಲಿ ಧನಸಹಾಯವನ್ನು ಮಾಡಿ ಬಹಳಷ್ಟು ಉಪಕರಿಸುತ್ತಿದ್ದಾರೆ. ಸಾಧಕರಾದ ಭಗವದ್ಭಕ್ತರಾದ ಇವರೀರ್ವದಂಪತಿಗಳಿಗೆ ಶ್ರೀಪಾದರಾಜರು ಪರಮಾನುಗ್ರಹವನ್ನು ಮಾಡಿ ಸಕಲವಿಧ ಮಂಗಳವನ್ನುಂಟು ಮಾಡಲಿ ಎಂದು ಪ್ರಾರ್ಥಿಸುತ್ತೇವೆ.

ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಉಪಕರಿಸುತ್ತಿರುವ ಎಲ್ಲಾ ಮಹನೀಯರಿಗೂ ಅನಂತ ಕೃತಜ್ಞತೆಗಳು

ದಾನಶೂರಕರ್ಣರಂತೆ ಪ್ರಸಿದ್ಧಿಪಡೆದ ಶ್ರೀಮತಿ ಶುಭಾ ಮತ್ತು ಶ್ರೀ ರಂಗನಾಥ್ ದಂಪತಿಗಳು ಈ ಸಂಪುಟದ ಪ್ರಕಾಶನಕ್ಕೆ ಉದಾರವಾಗಿ ಸೇವೆ ಸಲ್ಲಿಸಿದ್ದಾರೆ. ಜ್ಞಾನಸೇವೆಯ ಕಾರ್ಯದಲ್ಲಿ ಅವಿರತವಾಗಿ ಶ್ರಮಿಸುತ್ತಾ ಸರಳಜೀವನಶೈಲಿಯನ್ನು ಅಳವಡಿಸಿಕೊಂಡಿರುವ ಇವರೀರ್ವ ದಂಪತಿಗಳಿಗೆ ಶ್ರೀಹರಿವಾಯುಗುರುಗಳು ಶ್ರೀವ್ಯಾಸತೀರ್ಥರು ಹಾಗೂ ಶ್ರೀರಾಘವೇಂದ್ರಸ್ವಾಮಿಗಳವರು ಜ್ಞಾನಭಕ್ತಿವೈರಾಗ್ಯಗಳನ್ನು ನೀಡಿ ಇನ್ನೂ ಹೆಚ್ಚಿನ ರೀತಿಯಲ್ಲಿ ಸಾಧನೆಯನ್ನು ಮಾಡಿಸಿಕೊಳ್ಳಲಿ ಎಂದು ಭಗವಂತನಲ್ಲಿ ಪ್ರಾರ್ಥಿಸೋಣ.

ಅನುವಾದಕರು

ಬೆಮ್ಮತ್ತಿ ವೆಂಕಟೇಶಾಚಾರ್ಯ

# ಒಳಗೇನಿದೆ...?

## ಸರ್ವಗತತ್ವಾಧಿಕರಣ

*ನಾಮಾತ್ಮಕಶಬ್ದಗಳ ಸಮನ್ವಯಸಿದ್ಧಿಗಾಗಿ ಲಿಂಗಸಮನ್ವಯ*

ಎರಡನೆಯ ಪಾದವು ಪ್ರಾರಂಭವಾಗುತ್ತಿದೆ. ಅನ್ಯತ್ರಪ್ರಸಿದ್ಧವಾದ ನಾಮಾತ್ಮಕಶಬ್ದಗಳ ಸಮನ್ವಯವನ್ನು ಹಿಂದಿನ ಪಾದದಲ್ಲಿ ಮಾಡಲಾಯಿತು. ಈ ಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಮಾಡುತ್ತಿದ್ದಾರೆ.

ಹಿಂದಿನ ಪಾದದಲ್ಲಿ ಯಾವ ಲಿಂಗಗಳ ಬಲದಿಂದ ನಾಮಾತ್ಮಕಶಬ್ದಗಳ ಸಮನ್ವಯವನ್ನು ಮಾಡಲಾಯಿತೋ ಅಂತಹ ಲಿಂಗಗಳ ಸಮನ್ವಯಕ್ಕಾಗಿ ಎರಡನೆಯ ಪಾದ ಹೊರಟಿದೆ. ಆದ್ದರಿಂದ ಈ ಪಾದದಲ್ಲಿ ಲಿಂಗಗಳನ್ನು ಸಮನ್ವಯ ಮಾಡದಿದ್ದರೆ ಪ್ರಥಮಪಾದದಲ್ಲಿ ನಾಮಗಳೂ ಸಹ ಸಮನ್ವಯವಾಗಲಾರವು.

ಮೊದಲನೆಯ ಅಧಿಕರಣದಲ್ಲಿ ಸರ್ವಗತತ್ವಲಿಂಗವನ್ನು ಸಮನ್ವಯ ಮಾಡುತ್ತಿದ್ದಾರೆ. ಬೇರೆ ಪಾದವಾಗಿದ್ದರೂ ಹಿಂದಿನ ಅಧಿಕರಣದಿಂದ ಅವಾಂತರ ಸಂಗತಿಯನ್ನು ತಿಳಿಯಬೇಕು.

*ಸರ್ವಗತತ್ವದ ಬಗ್ಗೆ ಸಂಶಯ ಪರಂಪರೆ*

'ಸರ್ವೇಷು ಭೂತೇಷು' ಎಂಬಲ್ಲಿರುವ ಭೂತಪದದ ಮಹಿಮೆಯಿಂದ ಬೇರೆಲ್ಲೂ ಇಲ್ಲದೆ ಕೇವಲ ಭೂತಪದಾರ್ಥಗಳಲ್ಲಿ ಇರುವಿಕೆಯೇ ಅಲೌಕಿಕತ್ವ ಎಂದು ತಿಳಿಯುತ್ತದೆ. (ಅನ್ಯತ್ರಾನವಸ್ಥಿತತ್ವೇ ಸತಿ ಭೂತಮಾತ್ರಾವಸ್ಥಿತತ್ವರೂಪಾಲೌಕಿಕತ್ವಂ) ಇದು ಅಯುಕ್ತವಾದರೆ ಬ್ರಹ್ಮಶಬ್ದಾದಿಗಳನ್ನು ಗೌಣವೆಂದು ಅವಶ್ಯ ಅಂಗೀಕರಿಸಬೇಕು. ಆವಾಗ ಬ್ರಹ್ಮಶಬ್ದದ ವಿರೋಧವಿಲ್ಲದ ಕಾರಣ ಹಿಂದಿನ ಶ್ರುತಿವಾಕ್ಯವು ಆದಿತ್ಯವಿಷಯಕವಾಗುತ್ತದೆ. ಆದ್ದರಿಂದ 'ಏತಮಸ್ಯಾಮ್' ಎಂಬಲ್ಲಿ 'ಏತದ್' ಶಬ್ದದಿಂದ ಆದಿತ್ಯನನ್ನೇ ಪರಾಮರ್ಶಿಸಬಹುದು. ಆವಾಗ ಆದಿತ್ಯನೇ ಸರ್ವಗತನಾಗುತ್ತಾನೆಂಬುದು ಪೂರ್ವಪಕ್ಷದ ಗುರಿ.

ಒಂದು ವೇಳೆ ಹಿಂದೆ ಹೇಳಿದ ಅಲೌಕಿಕತ್ವವು ಯುಕ್ತವಾದರೆ ಆವಾಗ ಬಾಧಕವಿಲ್ಲದ ಕಾರಣ ಬ್ರಹ್ಮಶಬ್ದಾದಿಗಳನ್ನು ಗೌಣವೆನ್ನಬೇಕಿಲ್ಲ. ಅದಕ್ಕೆ ವಿರುದ್ಧವಾಗಿ ಹಿಂದಿನ ವಾಕ್ಯವು ಆದಿತ್ಯನನ್ನು ವಿಷಯೀಕರಿಸುವುದಿಲ್ಲ. ಆದ್ದರಿಂದ ವಿಷ್ಣುವೇ ಸರ್ವಗತನಾಗುತ್ತಾನೆಂಬುದು ಸಿದ್ಧಾಂತದ ಗುರಿ.

*ಪರಿಪೂರ್ಣಚಂದ್ರಿಕಾ*

*ಆದಿತ್ಯನೇ ಸರ್ವಗತನೆಂದು ಪೂರ್ವಪಕ್ಷ*

ಆದಿತ್ಯನೇ ಸರ್ವಗತನೆಂಬ ಪೂರ್ವಪಕ್ಷವನ್ನು ವಿವರವಾಗಿ ಮಾಡುತ್ತಿದ್ದಾರೆ.

'ತಸ್ಸೈತಸ್ಯಾಸಾವಾದಿತ್ಯೋ ರಸಃ' ಇತ್ಯಾದಿಯಾಗಿ ಪ್ರಕೃತನಾದ ಆದಿತ್ಯನನ್ನೇ 'ಏತಮ್' ಎಂದು ಪರಾಮರ್ಶಿಸಲಾಗಿದೆ. ಆದ್ದರಿಂದ ಆದಿತ್ಯನೇ ಸರ್ವಗತನಾಗಬೇಕು. ಅಂತರಧಿಕರಣದ ನ್ಯಾಯದಿಂದ ಈ ಆದಿತ್ಯಶಬ್ದವೂ ಸಹ ವಿಷ್ಣುವಿನಲ್ಲಿ ಸಮನ್ವಯವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಬಲಿಷ್ಠವಾದ ವಿಷ್ಣುಲಿಂಗಗಳಿದ್ದರೆ ಮಾತ್ರ ವಿಷ್ಣುಪರತ್ವವನ್ನು ಅಲ್ಲಿ ಹೇಳಿದ್ದಾರೆ. ಆದರೆ ಪ್ರಕೃತ ಅಂತಹ ಲಿಂಗಗಳು ಕಾಣಿಸುತ್ತಿಲ್ಲ.

ಇಷ್ಟಾದರೂ ಪೂರ್ವಪಕ್ಷ ಹುಟ್ಟಲು ಸಾಧ್ಯವಿಲ್ಲವೆಂಬ ಆಕ್ಷೇಪ ಬಂದೇ ಬರುತ್ತದೆ. ದೇವಾವಾಚಿಯಾದ ಎಲ್ಲಾ ಶಬ್ದಗಳನ್ನು ಸಮನ್ವಯ ಮಾಡಿದ ಮೇಲೆ ವಿಷ್ಣುಲಿಂಗಗಳು ಇರುವುದು ಅಥವಾ ಇಲ್ಲದಿರುವುದು ಕಾರಣವಾಗುವುದಿಲ್ಲ. ಸಮಾನನ್ಯಾಯದಿಂದ ಎಲ್ಲಾ ದೇವತಾವಾಚಕಶಬ್ದಗಳ ಸಮನ್ವಯವು ಸಿದ್ಧವಾಗುತ್ತದೆ.

*ಅಂತರಧಿಕರಣದಿಂದ ಪುನುರುಕ್ತಿ ದೋಷ*

ಅಂತರಧಿಕರಣದಿಂದ ಈ ಅಧಿಕರಣ ಪುನರುಕ್ತವಾಗಿದೆ. ದೇವತಾವಾಚಿಯಾದ ಸಕಲಶಬ್ದಗಳ ಸಮನ್ವಯದಿಂದ ಆದಿತ್ಯಶಬ್ದದ ಸಮನ್ವಯವೂ ಸಹ ಸಿದ್ಧವಾಗುತ್ತದೆಂದು ಹಿಂದೆ ಆಕ್ಷೇಪಿಸಿದ್ದಾಯಿತು. ಈಗ ಅಂತರಧಿಕರಣದಲ್ಲಿ ಚಂದ್ರಾದಿ ದೇವತೆಗಳ ಅಂತರ್ಯಾಮಿಯಾಗಿದ್ದಾನೆಂದು ಹೇಳಿದ್ದರಿಂದಲೇ ಈ ಅಧಿಕರಣದಲ್ಲಿ ಸಮನ್ವಯ ಮಾಡಲ್ಪಡುವ ಸರ್ವಗತತ್ವವೂ ಸಿದ್ಧವಾಗುತ್ತದೆ. ವಸ್ತುತಃ ಅಂತರಧಿಕರಣದಲ್ಲಿ ಆದಿತ್ಯನಲ್ಲಿದ್ದಾನೆಂದು ಹೇಳದಿರಬಹುದು. ಅದಕ್ಕೋಸ್ಕರ ಈ ಅಧಿಕರಣ ಹೊರಡಬೇಕಾಗಿಲ್ಲ. 'ಸರ್ವೇಷು ಭೂತೇಷು' ಎಂಬಲ್ಲಿರುವ ಸರ್ವಶಬ್ದದಿಂದಲೇ ಆದಿತ್ಯನನ್ನೂ ವಿವಕ್ಷಿಸಬಹುದು. ಆದ್ದರಿಂದ 'ಆದಿತ್ಯೇ ಅನುಕ್ತತ್ವ' ಎಂಬ ಲಿಂಗವು ಸಾವಕಾಶವಾಗಿದೆ.

ಮತ್ತು ವಿಷ್ಣು ಸಕಲರ ಅಂತರ್ಯಾಮಿಯಾಗಿದ್ದಾನೆನ್ನಲು ಅನೇಕ ಬಲಿಷ್ಠವಾದ ಶ್ರುತಿಲಿಂಗಗಳು ಆಧಾರವಾಗಿವೆ. ಪ್ರಕೃತ ಈ ಅಧಿಕರಣದಲ್ಲಿ ಕೇವಲ ಒಂದೇ ಆದಿತ್ಯಲಿಂಗದಿಂದ ಸೂರ್ಯನನ್ನೂ ಅಂತರ್ಯಾಮಿ ಎನ್ನಲಾಗದು. ಹೀಗಿರುವಾಗ ಈ ಅಧಿಕರಣ ಹೊರಟಿದ್ದು ವ್ಯರ್ಥವಲ್ಲವೇ?

*ಜೀವನೆಂಬ ಪೂರ್ವಪಕ್ಷಕ್ಕೂ ಅವಕಾಶವಿಲ್ಲ*

ಆದಿತ್ಯನೇ ಸರ್ವಗತನೆಂಬ ಪೂರ್ವಪಕ್ಷ ಹುಟ್ಟಲು ಹೇಗೆ ಸಾಧ್ಯವಿಲ್ಲವೋ? ಆದರಂತೆ ಜೀವನು ಸರ್ವಗತನೆಂಬ ಪೂರ್ವಪಕ್ಷವೂ ಹುಟ್ಟುವುದಿಲ್ಲ. ಆನಂದಮಯಾಧಿಕರಣದ ನ್ಯಾಯದಂತೆ ವಿಶೇಷಜ್ಞಾನ ಹೊಂದಿರುವ ಕಾರಣ ಭಗವಂತನೇ ಚಕ್ಷುರ್ಮಯನಾಗುತ್ತಾನೆ. ಅಥವಾ ಆದಿತ್ಯಶ್ರುತಿಯ ಬಲದಿಂದ ಚಕ್ಷುರ್ಮಯತ್ವಾದಿಲಿಂಗಗಳನ್ನು ಆದಿತ್ಯಪರವೆನ್ನಬಹುದು. ಹೀಗೆ ಜೀವಪ್ರಾಪಕವಾದ ಲಿಂಗವಿಲ್ಲದ ಕಾರಣ ಪೂರ್ವಪಕ್ಷ ಹುಟ್ಟುವುದಿಲ್ಲ. ಈ ಕಾರಣದಿಂದಲೂ ಈ ಅಧಿಕರಣಕ್ಕೆ ಸಾರ್ಥಕ್ಯವಿಲ್ಲ.

*ಪೂರ್ವಪಕ್ಷ ಹುಟ್ಟುವುದರಿಂದ ಅಧಿಕರಣವು ಆರಂಭಣೀಯ*

ಇಲ್ಲಿಯ ತನಕ ಮಾಡಿದ ಆಕ್ಷೇಪದಲ್ಲಿ ಹುರುಳಿಲ್ಲ.

*ಪರಿಪೂರ್ಣಚಂದ್ರಿಕಾ*

ಆದಿತ್ಯನು ಸರ್ವಗತನೆಂಬ ಪೂರ್ವಪಕ್ಷ ಹುಟ್ಟಲು ಅನೇಕ ಲಿಂಗಗಳಿವೆ. 'ಸವಂತ್ಸರಾಧಿಪತಿತ್ವ', 'ಪ್ರತಿಪುರುಷಾಭಿಮುಖ್ಯ', 'ಯಚ್ಛಬ್ದಸ್ಯ ಲೋಕೇ ಪ್ರಸಿದ್ಧತ್ವ' ಮೊದಲಾದ ಲಿಂಗಗಳು ಸೂರ್ಯನಲ್ಲಿ ಮಾತ್ರ ಪ್ರಸಿದ್ಧವಾಗಿವೆ. ಇವುಗಳಿಂದ ಆದಿತ್ಯಶ್ರುತಿಯು ಉಪೋದ್ಬಲಿತವಾಗುತ್ತದೆ.

*ಅಂತರಾದ್ಯಧಿಕರಣಗಳಿಂದ ಪುನರುಕ್ತಿ ಇಲ್ಲ*

ಆಯಾ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಗುಣಗಳು ಲಾಭವಾಗಬೇಕೆಂದರೆ ವಕ್ಷ್ಯಮಾಣನ್ಯಾಯದ ಅಪೇಕ್ಷೆಯಿರುತ್ತದೆ. ಆದರೆ ಆಯಾ ಪ್ರಕರಣದಲ್ಲಿರುವ ಗುಣಗಳಷ್ಟೇ ತಿಳಿಯಬೇಕೆಂದರೆ ಹಿಂದಿನ ಅಧಿಕರಣದ ಮೇಲೆ ಬರುವ ಆಕ್ಷೇಪವನ್ನು ನಿರಾಕರಿಸಿದರೆ ಸಾಕು. ಆದ್ದರಿಂದ ಪೂರ್ವಾಧಿಕರಣದ ಆಕ್ಷೇಪ ಹಾಗೂ ಸಮಾಧಾನ ಮಾಡುವುದು ಆಯಾ ಅಧಿಕರಣಗಳಿಂದಷ್ಟೇ ಸಾಧ್ಯವಾಗುತ್ತದೆ. ಈ ಪ್ರಯೋಜನವು 'ತದಧೀನತ್ವ' ಸೂತ್ರದಿಂದ ದೊರೆಯುವುದಿಲ್ಲ. ಆದ್ದರಿಂದ ಆದಿತ್ಯಾದಿಶಬ್ದಗಳಿಗೆ ವಿಷ್ಣುವಿನಲ್ಲಿ ಮುಖ್ಯಪ್ರತಿಪಾದ್ಯತ್ವವನ್ನು ಅಂಗೀಕರಿಸದ ಕಾರಣ ಪೂರ್ವಪಕ್ಷವು ಹುಟ್ಟಬಹುದು

*ಒಬ್ಬ ದೇವತೆಯ ಪರ್ಯಾಯಶಬ್ದಗಳ ಸಮನ್ವಯವನ್ನು ಬೇರೆ ಬೇರೆ ಅಧಿಕರಣಗಳಲ್ಲಿ ಮಾಡಬಹುದು*

ಅಥವಾ ಹಿಂದಿನ ಅಂತರಧಿಕರಣದಲ್ಲಿ ಇಂದ್ರಾದಿಶಬ್ದಗಳು ವಿಷ್ಣುವಿನಲ್ಲೇ ಮುಖ್ಯವಾಗಿವೆಯೆಂದು ನಿರ್ಣಯಿಸಲಾಗಿದೆಯೆಂಬ ವಿಚಾರವನ್ನು ಒಪ್ಪಿಕೊಳ್ಳೋಣ. ಆದರೂ ಸಹ ಆದಿತ್ಯಾದಿಶಬ್ದವು ಅಂತರಧಿಕರಣದ ವಿಷಯವಾಕ್ಯದಲ್ಲಿ ಕೇಳಿಸುತ್ತಿಲ್ಲ. ಮತ್ತು ಅಂತರಧಿಕರಣದ ನ್ಯಾಯಕ್ಕೆ ವಿಷಯವೂ ಆಗಿಲ್ಲ. ಈ ಅಧಿಕರಣದಲ್ಲಿ ನಿರವಕಾಶವಾದ ಆದಿತ್ಯಾದಿ ದೇವತಾಲಿಂಗಗಳಿದ್ದಂತೆ ಅಂತರಧಿಕರಣದ ವಿಷಯವಾಕ್ಯದಲ್ಲಿ ಅಂತಹ ದೇವತಾಲಿಂಗಗಳೂ ಸಹ ಇರುವುದಿಲ್ಲ. ಆದ್ದರಿಂದಲೇ ಟೀಕೆಯಲ್ಲಿ ಆದಿತ್ಯಾದಿ ಶಬ್ದಗಳು ಅಂತರಧಿಕರಣದ ನ್ಯಾಯಕ್ಕೆ ವಿಷಯವಾಗಿಲ್ಲವೆಂಬುದನ್ನು ತೋರಿಸುವುದಕ್ಕಾಗಿಯೇ ದೇವತಾಲಿಂಗಪ್ರತಿಪಾದಕವಾದ ಅಂಶವನ್ನೂ ಸಹ ಉದಾಹರಿಸಿದ್ದಾರೆ.

ವಸ್ತುತಃ ಒಬ್ಬ ದೇವತೆಯನ್ನೇ ಹೇಳುವ ಪರ್ಯಾಯ ಶಬ್ದಗಳ ಸಮನ್ವಯವನ್ನು ಬೇರೆ ಬೇರೆ ಅಧಿಕರಣಗಳಲ್ಲಿ ಮಾಡುತ್ತಿದ್ದಾರೆ. ಇದೇನು ತಪ್ಪಲ್ಲ ? ಏಕೆಂದರೆ ಪರ್ಯಾಯ ಶಬ್ದವಾಗಿದ್ದರೂ ಸಹ ಆಯಾ ಅಧಿಕರಣದ ನ್ಯಾಯಕ್ಕೆ ವಿಷಯವಾದದ್ದನ್ನು ಮಾತ್ರ ಆಯಾ ಅಧಿಕರಣದಲ್ಲಿ ಸಮನ್ವಯ ಮಾಡುತ್ತಾರೆ. ಹೊರತು ಆಯಾ ಅಧಿಕರಣದ ನ್ಯಾಯಕ್ಕೆ ವಿಷಯವಾಗದ ಶಬ್ದಸಮನ್ವಯವನ್ನು ಮಾಡುವುದಿಲ್ಲ.

*ಸರ್ವಗತತ್ವಾಧಿಕರಣವು ನಾಮಪಾದದಲ್ಲಿ ಸೇರದು*

ಸರ್ವಗತತ್ವಾಧಿಕರಣವನ್ನು ನಾಮಪಾದದಲ್ಲಿ ಸೇರಿಸಬಹುದು. ಅಥವಾ ಲಿಂಗಪಾದದಲ್ಲಿ ಸೇರಿದರೂ ನಾಮಸಮನ್ವಯವನ್ನೇ ಮಾಡಬಹುದೆಂದು ಪ್ರಶ್ನಿಸುತ್ತಿದ್ದಾರೆ. ಏಕೆಂದರೆ ಆದಿತ್ಯಶ್ರುತಿಯ ಬೆಂಬಲದಿಂದಷ್ಟೇ ಸರ್ವಗತತ್ವವನ್ನು ಅನ್ಯತ್ರಪ್ರಸಿದ್ಧವೆನ್ನಬೇಕು. ಹೀಗಿರುವಾಗ ಆದಿತ್ಯವೆಂಬ ಶ್ರುತಿಸಮನ್ವಯವನ್ನೇ ಮಾಡುವುದು ಹೆಚ್ಚು ಸ್ವರಸ. ಮತ್ತು ವೈಶ್ವಾನರಾಧಿಕರಣದಲ್ಲಿ ಒಂದು ನಾಮದ ಸಮನ್ವಯದಿಂದ ಅನೇಕ ಲಿಂಗಗಳನ್ನು ಸಮನ್ವಯ ಮಾಡಿದಂತೆ ಇಲ್ಲಿಯೂ 'ಸಂವತ್ಸರಸಾರತ್ವ' ಮೊದಲಾದ ಅನೇಕ ಲಿಂಗಗಳ ಸಮನ್ವಯವು ಒಂದೇ ಆದಿತ್ಯಶಬ್ದದ

ಸಮನ್ವಯದಿಂದ ಸಿದ್ಧವಾಗುತ್ತದೆ. ಆದ್ದರಿಂದ ಸರ್ವಗತತ್ವಲಿಂಗದ ಸಮನ್ವಯಕ್ಕೋಸ್ಕರ ಈ ಅಧಿಕರಣವು ಹೊರಟಿದೆ ಎಂದು ಹೇಗೆ ಹೇಳುತ್ತೀರಿ ?

ಈ ಪ್ರಶ್ನೆಗೆ ಗ್ರಂಥಕಾರರು ಹಲವು ಮುಖಗಳಲ್ಲಿ ಉತ್ತರಿಸಿದ್ದಾರೆ. ಲಿಂಗಪಾದದಲ್ಲಿರುವ ಎಲ್ಲಾ ಅಧಿಕರಣಗಳಲ್ಲಿಯೂ ಹೀಗೆಯೇ ಪ್ರಶ್ನಿಸುತ್ತಿರೋ? ಅಥವಾ ಈ ಅಧಿಕರಣದಲ್ಲಿ ಮಾತ್ರ ನಾಮಸಮನ್ವಯ ಮಾಡಬಹುದೆಂದು ಪ್ರಶ್ನಿಸುತ್ತಿರೋ? ಎಲ್ಲಾ ಅಧಿಕರಣಗಳಲ್ಲಿಯೂ ನಾಮಸಮನ್ವಯವನ್ನೇ ಮಾಡಿರಿ? ಎಂದು ಪ್ರಶ್ನಿಸಲಾಗದು. ಏಕೆಂದರೆ ಅಂತರ್ಯಾಮ್ಯಧಿಕರಣದಲ್ಲಿ ನಾಮಾತ್ಮಕ ಶಬ್ದಗಳ ಪ್ರಸಕ್ತಿಯೇ ಇರುವುದಿಲ್ಲ. ಕೇವಲ ಲಿಂಗಗಳ ಬೆಂಬಲದಿಂದಷ್ಟೇ ಅಂತರ್ಯಾಮಿತ್ವ ಮೊದಲಾದ ಲಿಂಗಗಳಿಗೆ ಅನ್ಯತ್ರಪ್ರಸಿದ್ಧತ್ವವನ್ನು ಸಮರ್ಥಿಸಲಾಗಿದೆ. ಈ ಅಂತರ್ಯಾಮ್ಯಧಿಕರಣಕ್ಕೋಸ್ಕರವಂತು ಲಿಂಗಪಾದವು ಹೊರಡಲೇಬೇಕು. ಇನ್ನು ಸರ್ವಗತತ್ವಾಧಿಕರಣಕ್ಕೆ ಮಾತ್ರ ಈ ಪಾದದಲ್ಲಿ ಸಂಗತಿಯಿಲ್ಲವೆನ್ನಬೇಕು. ಆದರೆ ಅಂತರಧಿಕರಣದಿಂದ ಆದಿತ್ಯಶ್ರುತಿಯ ಸಮನ್ವಯವು ಸಿದ್ಧವಾಗಿರುವಾಗ ಪುನಃ ಈ ಅಧಿಕರಣಕ್ಕೆ ಸಂಗತಿಯಿರುವುದಿಲ್ಲ. ಮತ್ತು ಪೂರ್ವಪಕ್ಷ ಪ್ರಾಪಕವಾದ ಅಥವಾ ಸಿದ್ಧಾಂತಪ್ರಾಪಕವಾದ ಯುಕ್ತಿಗಳೆಲ್ಲವೂ ದೊರೆಯುವುದು ಸರ್ವಗತತ್ವವೆಂಬ ಲಿಂಗವನ್ನು ಸಮನ್ವಯ ಮಾಡಲು ಹೊರಟಾಗ ಮಾತ್ರ. ಈ ಎಲ್ಲಾ ಯುಕ್ತಿಗಳನ್ನು ಆಲೋಚಿಸಿದಾಗ ವೈಶ್ವಾನರಾಧಿಕರಣದಂತೆ ಸರ್ವಗತತ್ವಾಧಿಕರಣವನ್ನು ವಿವಕ್ಷಿಸಲು ಸಾಧ್ಯವಿಲ್ಲ.

*ಸಕಲ ಜೀವರೇ ಸರ್ವಗತರೆಂದು ಪೂರ್ವಪಕ್ಷ*

ಇಲ್ಲಿಯ ತನಕ ಆದಿತ್ಯಪ್ರಾಪಕವಾದ ಪೂರ್ವಪಕ್ಷ ಲಿಂಗಗಳನ್ನು ನಿರೂಪಿಸಿದರು. ಈಗ ಜೀವಪ್ರಾಪಕವಾದ ಪೂರ್ವಪಕ್ಷಲಿಂಗಗಳನ್ನು ಹೇಳುತ್ತಿದ್ದಾರೆ. 'ಚಕ್ಷುರ್ಮಯತ್ವ' ಎಂಬುದು ಜೀವನೇ ಸರ್ವಗತನೆನ್ನಲು ಲಿಂಗವಾಗಿದೆ. ಒಂದುವೇಳೆ 'ಚಕ್ಷುರ್ಮಯ' ಎಂಬಲ್ಲಿರುವ ಮಯಟ್ ಪ್ರತ್ಯಯಕ್ಕೆ 'ಪ್ರಾಚುರ್ಯ' ಎಂಬರ್ಥವನ್ನು ಹೇಳಿದರೆ ಮಾತ್ರ ಪರಮಾತ್ಮನೇ ಚಕ್ಷುರ್ಮಯನೆನ್ನಬಹುದು. ಆದರೆ ಅನೇಕ ಬಾಧಕಗಳಿರುವುದರಿಂದ ಇಲ್ಲಿರುವ 'ಮಯಟ್' ಪ್ರತ್ಯಯಕ್ಕೆ 'ಪ್ರಾಚುರ್ಯ' ಎಂಬರ್ಥವನ್ನು ಹೇಳಲು ಸಾಧ್ಯವಿಲ್ಲ. ಹೊರತಾಗಿ 'ವಿಕಾರ' ಎಂಬರ್ಥವನ್ನೇ ಹೇಳಬೇಕು. ಆವಾಗ ಜೀವನೇ ಚಕ್ಷುರ್ಮಯನಾಗುತ್ತಾನೆ. ಈ ಕಾರಣದಿಂದ ಜೀವನನ್ನೇ ಸರ್ವಗತನೆನ್ನಬೇಕು.

*ಜೀವನ ಪ್ರಾಪಕಲಿಂಗಗಳು ಆದಿತ್ಯನಲ್ಲಿಲ್ಲ*

ಚಕ್ಷುರ್ಮಯತ್ವ ಎಂಬ ಲಿಂಗದಿಂದ ಜೀವನನ್ನು ಸರ್ವಗತನೆಂದು ಪೂರ್ವಪಕ್ಷ ಮಾಡಲಾಗಿದೆ. ಈ ಚಕ್ಷುರ್ಮಯತ್ವವು ಜೀವನಲ್ಲಿಯೇ ಪರ್ಯವಸಾನವಾಗುತ್ತದೆ ಹೊರತು ಆದಿತ್ಯನಲ್ಲಲ್ಲ. ಏಕೆಂದರೆ ಉಪಕ್ರಮ ಹಾಗೂ ಉಪಸಂಹಾರದಲ್ಲಿ ಒಂದೇ ವಿಷಯವು ಪ್ರಸಕ್ತವಾಗಿರುವುದರಿಂದ ಒಬ್ಬನನ್ನೇ ಹೇಳಬೇಕು. ಆದ್ದರಿಂದ ಆದಿತ್ಯನೇ ಪ್ರತಿಪಾದ್ಯನೆಂಬ ಶಂಕೆಯು ಸಹಜವಾಗಿ ಬರುತ್ತದೆ. ಆದರೆ ಪ್ರಾರಂಭದಿಂದ ಕೊನೆಯತನಕ ಅನೇಕ ಬಾರಿ 'ಏತತ್' ಎಂಬ ಪದವು ಕೇಳಿಸುತ್ತಿದೆ. ಈ ಪದವು ಮುಂದೆ ಪ್ರಸಕ್ತನಾಗುವ ಜೀವನನ್ನೇ ಪರಾಮರ್ಶಿಸುತ್ತದೆ. ಆದ್ದರಿಂದ ಚಕ್ಷುರ್ಮಯತ್ವವು ಜೀವಪ್ರಾಪಕವೇ ಹೊರತು ಆದಿತ್ಯ ಪ್ರಾಪಕವಲ್ಲ.

*ಅಲ್ಪದೇಶದಲ್ಲಿರುವವನು ಸರ್ವಗತನಾಗಲಾರ*

ಆದಿತ್ಯ ಅಥವಾ ಜೀವನು ಸರ್ವಗತನಾಗಬಹುದೇ ಹೊರತು ವಿಷ್ಣು ಸರ್ವಗತನಾಗಲು ಸಾಧ್ಯವಿಲ್ಲ. ಅಂತರಧಿಕರಣದಲ್ಲಿ, ಅಂತರ್ಯಾಮ್ಯಧಿಕರಣದಲ್ಲಿ ಮತ್ತು 'ಉಪಾಸಾತ್ರೈವಿಧ್ಯಾತ್' ಇತ್ಯಾದಿ

ಸೂತ್ರಗಳಲ್ಲಿ ಭಗವಂತನನ್ನು ಹೃದಯಾಕಾಶದಲ್ಲಿರುವವನೆಂದು ಬಣ್ಣಿಸಲಾಗಿದೆ. ಹೃದಯಾಕಾಶವು ಅಂಗುಷ್ಠಪರಿಮಾಣದಲ್ಲಿರುವುದರಿಂದ ಅಲ್ಲಿರುವ ಭಗವಂತನೂ ಸಹ ಅಂಗುಷ್ಠಪರಿಮಾಣವುಳ್ಳವನೇ ಆಗುತ್ತಾನೆ. ಇಷ್ಟು ಸಣ್ಣರೂಪವುಳ್ಳ ಭಗವಂತನು ಎಲ್ಲೆಡೆ ವ್ಯಾಪಿಸಿರಲು ಹೇಗೆ ಸಾಧ್ಯ ? ''ಸರ್ವಭೂತಾಶಯಃ ಸ್ಥಿತಃ'' ಎಂಬ ಶ್ರುತಿಯ ಆಧಾರದಿಂದಲೂ ಈ ವಿಷಯವು ಮತ್ತಷ್ಟು ದೃಢವಾಗುತ್ತದೆ.

ಒಂದು ವೇಳೆ ಅಲ್ಪದೇಶದಲ್ಲಿರುವವನು ಸರ್ವಗತನೂ ಆಗಬಹುದೆಂದು ಎಲ್ಲಾದರೂ ಸಮರ್ಥಿಸಿದ್ದರೆ ಭಗವಂತನನ್ನು ಸರ್ವಗತನೆನ್ನಬಹುದಿತ್ತು. ಆದರೆ ಎಲ್ಲಿಯೂ ಸಹ ಈ ವಿರೋಧವನ್ನು ಪರಿಹರಿಸಿಯೇ ಇಲ್ಲ. ಆದ್ದರಿಂದ ಭಗವಂತನನ್ನು ಹೃದಯದಲ್ಲಿದ್ದಾನೆಂದು ಹೇಳಿ ಆದಿತ್ಯಾದಿಗಳನ್ನು ಎಲ್ಲೆಡೆ ಇದ್ದಾರೆಂದು ಹೇಳುವುದೇ ಸ್ವರಸವೆಂದು ಪೂರ್ವಪಕ್ಷದ ಆಶಯ.

*ಸರ್ವಗತನಾದವನು ಅಲ್ಪದೇಶದಲ್ಲಿರಲಾರ*

ಅಂತರ್ಯಾಮಿಯಲ್ಲಿಯೂ ಸಹ ಅಲ್ಪಸ್ಥಾನಸ್ಥಿತತ್ವವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ''ಹೃದಯೇ ಜ್ಯಾಯಾನ್ ಪೃಥಿವ್ಯಾಃ'' ಎಂಬ ಶ್ರುತಿಯು ಹೃದಯದಲ್ಲಿರುವ ಅಂತರ್ಯಾಮಿಗೆ ಸರ್ವಗತತ್ವವನ್ನೇ ಹೇಳುತ್ತಿದೆ. ಸರ್ವಗತನಲ್ಲಿಅಲ್ಪದೇಶಸ್ಥಿತತ್ವವನ್ನು ಹೇಳಲಾಗದೆಂದು ವಾದ ಮಾಡಿದರೆ ಆದಿತ್ಯನಲ್ಲಿಯೂ ಅಲ್ಪದೇಶಸ್ಥಿತತ್ವವನ್ನು ಹೇಳಲು ಸಾಧ್ಯವಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಆದಿತ್ಯಶ್ರುತಿಗೆ ಅನುಸಾರಿಯಾಗಿ ಆದಿತ್ಯನಲ್ಲಿರುವ ಸರ್ವಗತತ್ವವನ್ನು ಸಂಕೋಚ ಮಾಡಬೇಕಾಗುತ್ತದೆ. ಆದಿತ್ಯನಲ್ಲಿ ಸಂಕುಚಿತವಾದ ಅರ್ಥವನ್ನು ಹೇಳಿದಂತೆ ಬ್ರಹ್ಮನಲ್ಲಿ ಹೇಳಲಾಗದೆಂಬುದನ್ನು ಮಾತ್ರ ಗಮನಿಸಬೇಕು.

*ಬಾಧಕಪರಿಹಾರದೊಂದಿಗೆ ಪೂರ್ವಪಕ್ಷದ ಉಪಸಂಹಾರ*

ಆದಿತ್ಯನೇ ಸರ್ವಗತನೆನ್ನಲು ಅನೇಕ ಸಾಧಕಯುಕ್ತಿಗಳನ್ನು ಪೂರ್ವಪಕ್ಷಕಾರರು ಮಂಡಿಸಿ ಈಗ ಬಾಧಕವನ್ನು ಪರಿಹರಿಸಿಕೊಳ್ಳುತ್ತಿದ್ದಾರೆ. ಯಾವ ಶ್ರುತಿಭಾಗದಲ್ಲಿ ಸರ್ವಗತತ್ವವು ಕೇಳಿಸುತ್ತಿದೆಯೋ ಅಲ್ಲಿ ಬ್ರಹ್ಮಶಬ್ದವೇ ಮೊದಲಾದ ವಿಷ್ಣುಲಿಂಗಗಳೂ ಸಹ ಇವೆ. ಇದರ ಬಲದಿಂದ ವಿಷ್ಣುವೇ ಸರ್ವಗತನಾಗುತ್ತಾನೆಂಬುದು ಪೂರ್ವಪಕ್ಷಕಾರರಿಗಿರುವ ದೊಡ್ಡ ಸವಾಲು ? ಅರ್ಭಕೌಕಸ್ತ್ವ ಎಂಬ ಧರ್ಮವೂ ಸಹ ಅದೇ ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ಸೂರ್ಯನೇ ಸರ್ವಗತನಾಗಬೇಕು. ಅರ್ಭಕೌಕಸ್ತ್ವ ಎಂಬ ಪ್ರಬಲವಾದ ಒಂದೇ ಯುಕ್ತಿಯಿಂದ ಬ್ರಹ್ಮನ ಲಿಂಗಗಳೆಲ್ಲವನ್ನೂ ಬಾಧಿಸಬೇಕು. ಅರ್ಭಕೌಕಸ್ತ್ವ ಲಿಂಗವನ್ನು ವಿಷ್ಣುವಿನಲ್ಲಿ ಹೇಳಲು ಸಾಧ್ಯವೂ ಇಲ್ಲ. ಆದ್ದರಿಂದ ಸೂರ್ಯ ಅಥವಾ ಸಕಲ ಜೀವರು ಸರ್ವಗತರಾಗುತ್ತಾರೆಂಬ ಪೂರ್ವಪಕ್ಷವು ಉದಯವಾಗುತ್ತದೆ.

*ವಿಷ್ಣುವೇ ಸರ್ವಗತನೆಂದು ಸಿದ್ಧಾಂತ*

ಸಿದ್ಧಾಂತವು ಪ್ರಾರಂಭವಾಗುತ್ತಿದೆ. ಸೂತ್ರಕಾರರು ಹೇಳಿದ ಸಿದ್ಧಾಂತಲಿಂಗಗಳನ್ನು ಸಮರ್ಥಿಸುವುದಕ್ಕಿಂತ ಮೊದಲು ಪೂರ್ವಪಕ್ಷಪ್ರಾಪಕಲಿಂಗಗಳನ್ನು ವಿಷ್ಣುವಿನಲ್ಲಿ ಸಮರ್ಥಿಸುತ್ತಾರೆ.

ಪೂರ್ವಪಕ್ಷ ಮಾಡುವಾಗ ಆದಿತ್ಯನೇ ಸರ್ವಗತನೆನ್ನಲು ಸಂವತ್ಸರಸಾರತ್ವ, ಆದಿತ್ಯನಲ್ಲಿ ಪ್ರಸಿದ್ಧವಾದ ಯಜ್ಞಬ್ರೋಪಬಂಧ ಹಾಗೂ ಸರ್ವಪುರುಷಾಭಿಮುಖ್ಯ ಎಂಬುದಾಗಿ ಮೂರು ಹೇತುಗಳನ್ನು ಹೇಳಿದ್ದರು. ಇವುಗಳಲ್ಲಿ ಸಂವತ್ಸರಸಾರತ್ವವು ಆದಿತ್ಯನಲ್ಲಿ ಬರುವುದಿಲ್ಲ ಹೊರತಾಗಿ ವಿಷ್ಣುವಿನಲ್ಲಿಯೇ ಬರುತ್ತದೆಂದು ಇಲ್ಲಿ ಸಮರ್ಥಿಸುತ್ತಿದ್ದಾರೆ.

೩೬೦ ದಿವಸಗಳೆಂಬ ಒಂದು ವರ್ಷವು ಸಂವತ್ಸರಶಬ್ದದ ಅರ್ಥವಲ್ಲ, ಹೊರತಾಗಿ ಚತುರ್ಮುಖಬ್ರಹ್ಮನೆಂದು ಅರ್ಥ. 'ಸಂವತ್ಸರನಾಮ ಬ್ರಹ್ಮಾಣಂ'' ಇತ್ಯಾದಿಯಾಗಿ ಸ್ಮೃತಿಶ್ರುತಿಗಳೆಲ್ಲವು ಚತುರ್ಮುಖಬ್ರಹ್ಮನನ್ನೇ ಸಂವತ್ಸರ

ಎನ್ನುತ್ತಿವೆ. ಐತರೇಯೋಪನಿಷತ್ತಿನಲ್ಲಿಯೂ ಸಹ ಮಹಾಪುರುಷ ಎಂಬುದಾಗಿ ಚತುರ್ಮುಖನನ್ನೇ ಸಂವತ್ಸರನೆಂದು ಹೇಳಿರುವುದು ಕಾಣಿಸುತ್ತಿದೆ. ಆದ್ದರಿಂದ ಸಂವತ್ಸರ ಸಾರನೆಂದರೆ ಸಂವತ್ಸರ ಎನಿಸಿದ ಚತುರ್ಮುಖನಿಗಿಂತ ಪರಮಾತ್ಮನು ಉತ್ತಮನಾಗಿದ್ದಾನೆಂದು ತಿಳಿಯಬೇಕು.

### *ಉಳಿದೆರಡು ಪೂರ್ವಪಕ್ಷ ಯುಕ್ತಿಗಳು ಬ್ರಹ್ಮನಲ್ಲೇ ಇವೆ*

'ಯಚ್ಛಬ್ದೋಪಬಂಧ' 'ಸರ್ವಪುರುಷಾಭಿಮುಖ್ಯ' ಎಂಬೆರಡು ಪೂರ್ವಪಕ್ಷಯುಕ್ತಿಗಳೂ ಸಹ ವಿಷ್ಣುವಿನಲ್ಲಿಯೇ ಬರುತ್ತವೆ. ಶ್ರುತಿಪ್ರಸಿದ್ಧವಾದ ವಿಷ್ಣುವನ್ನು 'ಯಶ್ಚಾಸಾವಾದಿತ್ಯೇ' ಎಂಬಲ್ಲಿರುವ 'ಯತ್' ಶಬ್ದದಿಂದ ಗ್ರಹಣ ಮಾಡಬಹುದು. ಆದಿತ್ಯಶಬ್ದವೂ ಸಹ 'ಆದಿತ್ಯೋ ಜ್ಯೋತಿರಾದಿತ್ಯಃ' ಎಂಬ ವಿಷ್ಣುಸಹಸ್ರನಾಮ ಹೇಳುವಂತೆ ವಿಷ್ಣುವಿನಲ್ಲಿಯೇ ಪ್ರಸಿದ್ಧವಾಗಿದೆ.

ಸಕಲಪುರುಷಾಭಿಮುಖ್ಯವೆಂಬ ಲಿಂಗವು ವಿಷ್ಣುವಿನಲ್ಲಿಯೇ ಮುಖ್ಯವಾಗಿವೆ. ವಿಚಾರ ಮಾಡಿದರೆ ಪ್ರತಿಯೊಬ್ಬ ಪುರುಷನಿಗೆ ಅಭಿಮುಖವಾದದ್ದು ಸೂರ್ಯಮಂಡಲವೇ ಹೊರತು ಸೂರ್ಯನಲ್ಲ. ಆದರೂ ಸೂರ್ಯಮಂಡಲದ ಮೂಲಕವಾಗಿ ಸೂರ್ಯನೇ ಅಭಿಮುಖನೆಂದು ಪೂರ್ವಪಕ್ಷಕಾರರು ಹೇಳುವುದಾದರೆ ಅಲ್ಲಿಯೇ ಇರುವ ಸೂರ್ಯನಾರಾಯಣನನ್ನು ಅಭಿಮುಖನೆಂದು ಏಕೆ ಹೇಳಬಾರದು.

### *ಆದಿತ್ಯ ಹಾಗೂ ಜೀವರ ಲಿಂಗಗಳೆಲ್ಲವು ವಿಷ್ಣುವಿನಲ್ಲಿ ಸಾವಕಾಶವಾಗಿವೆ*

ಆದಿತ್ಯಲಿಂಗಗಳು ವಿಷ್ಣುವಿನಲ್ಲಿಯೇ ಇವೆಯೆಂದು ಸಮರ್ಥಿಸಿದ್ದಾಯಿತು. ಪ್ರಕೃತ ಆದಿತ್ಯಲಿಂಗಗಳ ಬಲದಿಂದ ಸೂರ್ಯ ಮೊದಲಾದ ಶಬ್ದಗಳು ಆದಿತ್ಯನನ್ನೇ ಪ್ರತಿಪಾದಿಸುತ್ತವೆಂಬುದನ್ನು ನಿರಾಕರಿಸುತ್ತಿದ್ದಾರೆ. ಯಾವ ಮಂತ್ರವು ಸೂರ್ಯನನ್ನು ಪ್ರತಿಪಾದಿಸುತ್ತದೆಂದು ನೀವು ಹೇಳುತ್ತಿದ್ದೀರೋ ಅದೇ ಮಂತ್ರದಲ್ಲಿ ವಿಷ್ಣುವಿನ ಅಸಾಧಾರಣ ಲಿಂಗವೆನಿಸಿದ ಸಕಲಜಗನ್ನಿಯಾಮಕತ್ವವು ಕೇಳಿಸುತ್ತಿದೆ. ಆದ್ದರಿಂದ ಸೂರ್ಯಮಂತ್ರವು ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತಿದೆ. ಸಕಲ ದೇವತೆಗಳಿಗೆ ಕಣ್ಣಿನಂತಿರುವ ವಿಷ್ಣುವೇ 'ಚಕ್ಷುಃ' ಎನಿಸುತ್ತಾನೆ.

ಎಲ್ಲವನ್ನು ನೋಡುವ ಶಕ್ತಿಯುಳ್ಳವನಾದ್ದರಿಂದ ಅಥವಾ ಚಕ್ಷುರಾದಿ ಸಮಸ್ತ ಇಂದ್ರಿಯಗಳಿಗೆ ಸ್ವಾಮಿಯಾದ್ದರಿಂದ ವಿಷ್ಣುವೇ ಚಕ್ಷುರ್ಮಯನಾಗಬೇಕು. ಜೀವನಲ್ಲಿ ಇಂತಹ ಚಕ್ಷುರ್ಮಯತ್ವವು ಬರಲು ಸಾಧ್ಯವಿಲ್ಲ.

ಸರ್ವಗತನಾದ ವಿಷ್ಣುವಿನಲ್ಲಿ ಅಲ್ಪದೇಶಸ್ಥಿತತ್ವವನ್ನು ಹೇಳುವುದು ವಿರುದ್ಧವೆಂದು ಹಿಂದೆ ಆಕ್ಷೇಪಿಸಲಾಗಿತ್ತು. ಇದೂ ಸಹ ತಪ್ಪು. ಒಂದು ವೇಳೆ ಸೂತ್ರಕಾರರು ಅಲ್ಪದೇಶದಲ್ಲಿ ಮಾತ್ರ ಇದ್ದಾನೆಂದು ಹೇಳಿದ್ದರೆ ನಿಮ್ಮ ಮಾತು ಸರಿಯಾಗುತ್ತಿತ್ತು. ಸರ್ವದೇಶದಲ್ಲಿರಬೇಕಾದರೆ ಅಲ್ಪದೇಶದಲ್ಲಿ ಇರಲೇಬೇಕು. ಅಲ್ಪದೇಶದಲ್ಲಿಯೇ ಇರದವನು ಸಕಲದೇಶದಲ್ಲಿ ಇರಲು ಹೇಗೆ ಸಮರ್ಥನಾಗುತ್ತಾನೆ ? ನೂರು ರೂಪಾಯಿಗಳು ಇರಬೇಕಾದರೆ ಹತ್ತು ರೂಪಾಯಿ ಇರಲೇಬೇಕಲ್ಲವೇ? ಆದ್ದರಿಂದ ಭಗವಂತನು ಅಲ್ಪದೇಶವೆನಿಸಿದ ಹೃದಯದಲ್ಲೂ ಇದ್ದಾನೆ. ವಿಶಾಲವಾದ ಜಗತ್ತಿನಲ್ಲಿಯೂ ವ್ಯಾಪಿಸಿದ್ದಾನೆ. ಯಾವುದೇ ವಿರೋಧಕ್ಕೆ ಇಲ್ಲಿ ಅವಕಾಶವಿಲ್ಲ.

### *ಸ್ವಪಕ್ಷದಲ್ಲಿ ಸಾಧಕ ಪ್ರಮಾಣಗಳೂ ಸಹ ಇವೆ*

ಹಿಂದೆ ಪೂರ್ವಪಕ್ಷ ಮಾಡುವಾಗ 'ಸರ್ವೇಷು ಭೂತೇಷು' ಎಂಬುದಾಗಿ ಖುದ್ದಾಗಿ ಭೂತಪದವನ್ನು ಬಳಸಿದ್ದರಿಂದ ಭೂತಪದಾರ್ಥದಲ್ಲಷ್ಟೇ ಬ್ರಹ್ಮನಿದ್ದಾನೆಂದು ಹೇಳಬೇಕು ಎಂದು ಆಕ್ಷೇಪಿಸಿದ್ದರು. ಆದರೆ ಉಪಾಸನೆಗೋಸ್ಕರವಷ್ಟೇ ಭೂತಪದವನ್ನು ಬಳಸಲಾಗಿದೆ. ಸಕಲಭೂತಗಳಲ್ಲಿಯೂ ಭಗವಂತನನ್ನು ಉಪಾಸನೆ ಮಾಡಬೇಕು.

ಶ್ರುತಿಯಲ್ಲಿರುವ ಸರ್ವಪದದಿಂದಲೇ ಆದಿತ್ಯನನ್ನು ಸಂಗ್ರಹಿಸಬಹುದಾದ್ದರಿಂದ ಚಂದ್ರ, ನಕ್ಷತ್ರಾದಿಗಳನ್ನು ಹೇಳಿ ಆದಿತ್ಯನನ್ನು ಹೇಳಿಲ್ಲ ಎಂಬ ಶಂಕೆಗೆ ಅವಕಾಶವಿಲ್ಲ.

ಮತ್ತು ವಿಷ್ಣುವಿನ ಲಿಂಗವೆನಿಸಿದ ಬ್ರಹ್ಮಶಬ್ದ ಅಶ್ರುತತ್ವಾದಿಗಳನ್ನು ಅಮುಖ್ಯವೆಂದು ಹೇಳಲಾಗದು. ಏಕೆಂದರೆ ಈಗಾಗಲೇ ಸಮರ್ಥಿಸಿದಂತೆ ಸಂವತ್ಸರಸಾರತ್ವ ಮೊದಲಾದ ಲಿಂಗಗಳು ವಿಷ್ಣುವಿನಲ್ಲೇ ಇರುವುದರಿಂದ.

ಸಕಲ ಶ್ರುತಿಗಳಲ್ಲಿರುವ ಬ್ರಹ್ಮಶಬ್ದವು ವಿಷ್ಣುವಿನಲ್ಲೇ ಪ್ರಸಿದ್ಧವಾಗಿವೆ ಎಂಬುದನ್ನು ಸಮರ್ಥಿಸಲು ಸೂತ್ರದಲ್ಲಿ ಪ್ರಸಿದ್ಧ ಪದವನ್ನು ಪ್ರಯೋಗಿಸಿದ್ದಾರೆ. 'ತದೇವ ಬ್ರಹ್ಮ' ಎಂಬಲ್ಲಿರುವ ಬ್ರಹ್ಮಶಬ್ದವು ಅವಧಾರಣ ಸಹಿತವಾಗಿ ವಿಷ್ಣುವೊಬ್ಬನನ್ನೇ ಬ್ರಹ್ಮನೆನ್ನುತ್ತಿದೆ. ಉಳಿದವರು ಬ್ರಹ್ಮರಲ್ಲವೆಂದೂ ಸಹ ಸಮರ್ಥಿಸುತ್ತಿದೆ. ಈ ಅರ್ಥವನ್ನು ಜೀವಾದಿಗಳು ಬ್ರಹ್ಮರೆಂದು ಒಪ್ಪಿದಾಗ ಹೇಳಲಾಗದು. ಜ್ಞಾನಿಪ್ರಸಿದ್ಧಿಯೂ ಸಹ ವಿಷ್ಣುವಿನಲ್ಲೇ ಇರುತ್ತದೆ. ಉಪಸಂಹಾರದಲ್ಲಿ ಅಶ್ರುತತ್ವಾದಿಲಿಂಗಗಳು ಕೇಳಿಸುತ್ತಿರುವುದರಿಂದಲೂ ಉಪಕ್ರಮದಲ್ಲಿರುವ ಅರ್ಭಕೌಕಸ್ತ್ವಾದಿಲಿಂಗಗಳನ್ನು ವಿಷ್ಣುವಿನಲ್ಲೇ ಸಮರ್ಥಿಸಬೇಕು.

*ಅಣುಜೀವನು ಎಲ್ಲೆಡೆ ವ್ಯಾಪಿಸಲಾರ*

ಪೂರ್ವಪಕ್ಷಕಾರರು ಜೀವನನ್ನು ಸರ್ವಗತನೆಂದು ಸಮರ್ಥಿಸಿದ್ದರು. ಅದೂ ಸಹ ತಪ್ಪು. ಜೀವನು ಸರ್ವಗತನೆಂದರೆ ಒಬ್ಬೊಬ್ಬ ಜೀವನು ಜಗತ್ತಿನಲ್ಲಿರುವ ಕೋಟ್ಯಾಂತರ ಶರೀರಗಳಲ್ಲಿದ್ದಾನೆಂದು ಅರ್ಥ. ಆವಾಗ ಪ್ರತಿಯೊಬ್ಬರೂ ಅನುಭವಿಸುವ ಕಷ್ಟ-ನಷ್ಟಗಳಿಂದ ಬರುವ ದುಃಖವು ಪ್ರತಿಯೊಬ್ಬರಿಗೂ ಬರಬೇಕಾದೀತು. ಮತ್ತು ಈ ಶರೀರವೇ ದೇವದತ್ತನದ್ದು ಮತ್ತೊಂದು ದೇವದತ್ತನದ್ದಲ್ಲವೆಂದು ವ್ಯವಸ್ಥೆಯನ್ನೇ ಮಾಡಲಾಗದು. ಆದ್ದರಿಂದ ಅಣುವಾದ ಜೀವನನ್ನು ಸರ್ವಗತನೆಂದು ಹೇಳುವುದು ಹಾಸ್ಯಾಸ್ಪದ ಮಾತು.

ಭಗವಂತನೇ ಸರ್ವಗತನಾಗಿದ್ದಾನೆ. ಸಕಲಜೀವರ ಶರೀರದ ಸಂಬಂಧವೂ ಸಹ ಭಗವಂತನಿಗಿದೆ. ಆದರೂ ತನ್ನಲ್ಲಿರುವ ಸ್ವಾಭಾವಿಕವಾದ ಸಾಮರ್ಥ್ಯದಿಂದ ಆಯಾ ಶರೀರಗಳಲ್ಲುಂಟಾಗುವ ಸುಖದುಃಖಾದಿಗಳನ್ನು ಅನುಭವಿಸಲಾರ. ಇಂತಹ ಭಗವಂತನನ್ನೇ ಶ್ರುತಿಯು ಸರ್ವಗತನೆಂದು ಕೊಂಡಾಡುತ್ತಿದೆ.

*ಕರ್ಮಕರ್ತೃಗಳಿಗೆ ಭೇದವಿರುವುದರಿಂದಲೂ ವಿಷ್ಣುವೇ ಸರ್ವಗತನು*

ಒಂದೇ ಕ್ರಿಯೆಗೆ ಯಾವುದು ಕರ್ಮವೋ ಅದು ಕರ್ತೃವಾಗುವುದಿಲ್ಲವೆಂಬ ವ್ಯಾಪ್ತಿಯು ಲೋಕದಲ್ಲಿ ಸಿದ್ಧವಾಗಿದೆ. 'ಆತ್ಮಾನಂ ಪರಸ್ಮೈ ಶಂಸತಿ' ಎಂಬಲ್ಲಿ ಪರಮಾತ್ಮನು 'ಶಂಸನ' ಎಂಬ ಕ್ರಿಯೆಯಲ್ಲಿ ಕರ್ಮನಾದ್ದರಿಂದ ಕರ್ತೃವಾಗಲು ಸಾಧ್ಯವಿಲ್ಲ. ಇದರಿಂದ ಸರ್ವಗತನೆನಿಸಿದ ಆತ್ಮನೇ ಬೇರೆ ಕರ್ತೃವೆನಿಸಿದ ಜೀವನೇ ಬೇರೆ ಎಂದು ನಿರ್ಣಯವಾಗುತ್ತದೆ.

'ಮಾಮಹಂ ಜಾನಾಮಿ' ಇತ್ಯಾದಿ ಸ್ಥಳಗಳಲ್ಲಿ ಈ ನಿಯಮಕ್ಕೆ ವ್ಯಭಿಚಾರವಿರಬಹುದು. ಆದರೆ ಅನುಭವವೆಂಬ ಪ್ರಬಲ ಪ್ರಮಾಣದ ಬಲದಿಂದ ಕರ್ಮ ಹಾಗೂ ಕರ್ತೃಗಳು ಒಂದೇ ಆಗಬಹುದು 'ಆತ್ಮಾನಂ ಪರಸ್ಮೈ ಶಂಸತಿ' ಎಂಬಲ್ಲಿ ಇಂತಹ ಅಪವಾದ ಪ್ರಮಾಣವಿರುವುದಿಲ್ಲ. ಹೀಗೆ ಕರ್ಮಕರ್ತೃಗಳ ಭೇದವ್ಯಪದೇಶದಿಂದ ಸರ್ವಗತನು ಪರಮಾತ್ಮನೆಂದು ತಿಳಿಯುತ್ತದೆ.

ಸರ್ವಗತನೆಂದರೆ ಸಕಲ ಪದಾರ್ಥಗಳಲ್ಲಿ ಆಕಾಶದಂತೆ ಹೆಣೆದುಕೊಂಡಿದ್ದಾನೆಂದಷ್ಟೇ ಅರ್ಥ ಅಲ್ಲ. ಹಾಗೇನಾದರು ಹೇಳಿದರೆ ಅದು ಗುಣವೇ ಆಗುವುದಿಲ್ಲ. ಆದ್ದರಿಂದ ಪ್ರತಿಯೊಂದು ಪದಾರ್ಥಗಳಲ್ಲಿ ನೆಲೆಸಿ ಆಯಾ ಪದಾರ್ಥಗಳ ಶಕ್ತಿಯನ್ನು ಪ್ರಕಟಪಡಿಸಿ ನಿಯಮನ ಮಾಡುವಂತಹ ಗುಣವೇ ಸರ್ವಗತವೆಂಬುದರಿಂದ ತಿಳಿಯುತ್ತದೆ.

ವಸ್ತುತಸ್ತು ಭಗವಂತನು ದೂರದಲ್ಲಿದ್ದೂ ಸಹ ಸಕಲ ಪದಾರ್ಥಗಳನ್ನೂ ನಿಯಂತ್ರಣ ಮಾಡಬಹುದು ಆದರೂ ಕೇವಲ ಲೀಲೆಯಿಂದ ಆಯಾ ವಸ್ತುಗಳಲ್ಲೇ ಇದ್ದು ಸಕಲಪದಾರ್ಥಗಳನ್ನು ನಿಯಂತ್ರಣ ಮಾಡುವುದು ಅವನಲ್ಲಿರುವ ಮತ್ತೊಂದು ದೊಡ್ಡಗುಣ.

*ಸೂತ್ರಗಳ ಜೋಡಣೆಯಲ್ಲೂ ಸ್ವಾರಸ್ಯ*

ಸೂತ್ರದ ಜೋಡಣೆಯಲ್ಲಿ ಬಹಳ ಸ್ವಾರಸ್ಯವಿದೆ. ವಿಷಯವಾಕ್ಯದಲ್ಲಿರುವ ಬ್ರಹ್ಮಶಬ್ದವನ್ನು ಸ್ವಪಕ್ಷಸಾಧಕವನ್ನಾಗಿ ಪ್ರಥಮಸೂತ್ರವು ಹೇಳುವುದರಿಂದ ಮೊದಲು ಉಕ್ತವಾಗಿದೆ. ಅದೇ ವಿಷಯವಾಕ್ಯದ ಮುಂದಿನ ಶ್ರುತಿಯಲ್ಲಿರುವ ಲಿಂಗವನ್ನು ಸಾಧಿಸುತ್ತಿರುವುದರಿಂದ 'ಅನುಪಪತ್ತೇಸ್ತು' ಎಂಬ ಸೂತ್ರವು ಅನಂತರ ಬಂದಿದೆ. ಹೀಗೆ ಮೊದಲೆರೆಡು ಸೂತ್ರಗಳಲ್ಲಿ ಸ್ವಪಕ್ಷಸಾಧಕಗಳನ್ನು ಸಮರ್ಥಿಸಿ ಅಣುವಾದ ಜೀವನಲ್ಲಿ ಸರ್ವಗತತ್ವವು ಅತ್ಯಂತ ಅನುಪಪನ್ನವಾಗಿದೆಯೆಂದು ಮೂರನೆಯ ಸೂತ್ರವು ಹೇಳುತ್ತಿದೆ.

ನಾಲ್ಕನೆಯ ಸೂತ್ರವು ಕರ್ಮಕರ್ತೃಭಾವ ವಿರೋಧದಿಂದ ಜೀವನಲ್ಲಿ ಸರ್ವಗತತ್ವವನ್ನು ಅಲ್ಲಗಳೆಯುತ್ತಿದೆ. ಆದ್ದರಿಂದ ಮೂರನೆ ಮತ್ತು ನಾಲ್ಕನೆಯ ಸೂತ್ರಗಳು ಪರಪಕ್ಷದಲ್ಲಿ ಬಾಧಕಗಳನ್ನು ತೋರಿಸುವುದಕ್ಕಾಗಿ ಹೊರಟಿರುವುದರಿಂದ ಅನಂತರ ಪ್ರಸಕ್ತವಾಗಿವೆ. ಅವುಗಳಲ್ಲಿಯೂ ಅಂತರಂಗಹೇತುವನ್ನು ಮೂರನೆಯ ಸೂತ್ರವು ಹೇಳುವುದರಿಂದ ಬಹಿರಂಗಹೇತುವನ್ನು ಸಮರ್ಥಿಸುವ ನಾಲ್ಕನೆಯ ಸೂತ್ರಕ್ಕಿಂತ ಮೊದಲು ಪ್ರಸಕ್ತವಾಗಿದೆ.

*'ಶಬ್ದವಿಶೇಷಾತ್' ಮೊದಲಾದ ಸೂತ್ರಗಳ ವಿನ್ಯಾಸಕ್ರಮ*

ನಾಲ್ಕನೆಯ ಸೂತ್ರದಲ್ಲಿ ಹೇಳುವ ಕರ್ಮಕರ್ತೃಭಾವವೆಂಬ ಬಾಧಕವನ್ನು ಸಮರ್ಥಿಸುವುದಕ್ಕಾಗಿ ಐದನೆಯ ಸೂತ್ರವು ಹೊರಟಿದೆ. ಈ ಸೂತ್ರದಲ್ಲಿ ಅವಧಾರಣ ಸಹಿತವಾದ ಬ್ರಹ್ಮಶಬ್ದವೆಂಬ ಸ್ವಪಕ್ಷಸಾಧಕವನ್ನು ಹೇಳಿದ್ದರೂ ಸಹ ನಾಲ್ಕನೆಯ ಸೂತ್ರವನ್ನು ಸಮರ್ಥಿಸಿರುವುದರಿಂದ ಐದನೆಯ ಸ್ಥಾನವೇ ಇದಕ್ಕೆ ಯುಕ್ತವಾಗಿದೆ.

ಶ್ರುತಿಗೆ ಸಂಬಂಧಿಸಿದ ಸ್ವಪಕ್ಷಸಾಧಕವನ್ನು ಐದನೆಯ ಸೂತ್ರವು ಸಮರ್ಥಿಸಿದ ಮೇಲೆ ಸ್ಮೃತಿಗೆ ಸಂಬಂಧಿಸಿದ ಸ್ವಪಕ್ಷಸಾಧಕವನ್ನು ಆರನೆಯ ಸೂತ್ರವು ಹೇಳುತ್ತಿದೆ. ಏಳನೆಯ ಸೂತ್ರದಲ್ಲಿ ಸ್ವಪಕ್ಷಬಾಧಕವನ್ನು ಉದ್ಧರಿಸಲಾಗಿದೆ. ಆದ್ದರಿಂದ ಉಳಿದ ಆರು ಸೂತ್ರಗಳಲ್ಲಿ ಪ್ರಸಕ್ತವಾದ ವಿಷಯದ ಮೇಲೆ ಬರುವ ತೊಂದರೆಗಳನ್ನೆಲ್ಲಾ ನಿರಾಕರಿಸುವುದರಿಂದ ಇದಕ್ಕೆ ಏಳನೆಯ ಸ್ಥಾನವು ಯುಕ್ತವಾಗಿದೆ.

ಸರ್ವಗತನಾದ ಬ್ರಹ್ಮನು ಎಲ್ಲೆಡೆ ಇರುವಂತೆ ಜೀವನ ಜೊತೆಗೂ ಸಹ ಇರುತ್ತಾನೆ. ಆವಾಗ ಜೀವನಿಗುಂಟಾಗುವ ಸುಖದುಃಖಾದಿಗಳ ಅನುಭವವು ಚೇತನನಾದ ಬ್ರಹ್ಮನಿಗೂ ಸಹ ಬರಬೇಕಲ್ಲವೇ? ಎಂಬ ಸ್ವಪಕ್ಷಬಾಧಕವನ್ನು ಪರಿಹರಿಸಲು ಎಂಟನೆಯ ಸೂತ್ರವು ಹೊರಟಿದೆ. ತನ್ನಲ್ಲಿರುವ ಅದ್ಭುತ ಸಾಮರ್ಥ್ಯದಿಂದ ಭಗವಂತನು ಜೀವನ ಜೊತೆಗಿದ್ದರೂ ಸುಖದುಃಖಾದಿಗಳನ್ನು ಅನುಭವಿಸಲಾರ.

*ಲಿಂಗಪಾದದ ಏಳು ಅಧಿಕರಣಗಳ ಉಪಾಧಿಗಳು*

ಅಧಿಕರಣಗಳ ಉಪಾಧಿ ಹೀಗಿವೆ -

೧. ಸರ್ವಗತತ್ವಾಧಿಕರಣ - 'ಸರ್ವತ್ರಾವಸ್ಥಿತಿ' ಎಂಬ ಧರ್ಮರೂಪ ಲಿಂಗಸಮನ್ವಯ.

೨. ಅತ್ತೃತ್ವಾಧಿಕರಣ - 'ಸಂಹಾರವೆಂಬ' ಕ್ರಿಯಾರೂಪ ಲಿಂಗಸಮನ್ವಯ.

೩. ಗುಹಾಧಿಕರಣ - 'ಕರ್ಮಫಲಭೋಗ' ಎಂಬ ಕ್ರಿಯಾರೂಪ ಲಿಂಗಸಮನ್ವಯ.

೪. ಅಂತರಾಧಿಕರಣ - 'ಅಂತಸ್ಥಿತನಾಗಿದ್ದು ರಮಣ ಮಾಡುವಿಕೆಯೆಂಬ' ಧರ್ಮಸಹಿತವಾದ ಕ್ರಿಯಾರೂಪದ ಲಿಂಗಸಮನ್ವಯ.

೫. ಅಂತರ್ಯಾಮ್ಯಧಿಕರಣ - 'ಧರ್ಮಸಹಿತವಾದ ನಿಯಮನ' ಎಂಬ ಕ್ರಿಯಾರೂಪ ಲಿಂಗಸಮನ್ವಯ.

೬. ಅದೃಶ್ಯತ್ವಾಧಿಕರಣ - 'ಅಭಾವ ರೂಪ' ಲಿಂಗಸಮನ್ವಯ

೭. ವೈಶ್ವಾನರಾಧಿಕರಣ - 'ಪಾಚಕತ್ವವೇ' ಮೊದಲಾದ ಅನೇಕ ಲಿಂಗಗಳಿಂದ ಸಹಿತವಾದ 'ವೈಶ್ವಾನರ' ಎಂಬ ನಾಮಸಮನ್ವಯ.

ಅಧಿಕರಣಸಂಗತಿ ಹೀಗಿದೆ - ಸರ್ವಗತತ್ವಾಧಿಕರಣದಲ್ಲಿ ಭಾವರೂಪವಾದ ಲಿಂಗವನ್ನು ಸಮನ್ವಯ ಮಾಡಿದ್ದಾರೆ. ಅತ್ತೃತ್ವಾಧಿಕರಣದಲ್ಲಿ ಕ್ರಿಯಾರೂಪವಾದ ಲಿಂಗವನ್ನು ಸಮನ್ವಯ ಮಾಡಿದ್ದಾರೆ. ವಸ್ತು ಇದ್ದರೆ ಮಾತ್ರ ಅದರಲ್ಲಿ ಕ್ರಿಯೆ ಉಂಟಾಗಲು ಸಾಧ್ಯ. ಆದ್ದರಿಂದ ಇರುವಿಕೆಯನ್ನು ಮೊದಲಿನ ಅಧಿಕರಣದಲ್ಲಿ ಹೇಳಿ ಅನಂತರ ಕ್ರಿಯೆಯನ್ನು ಹೇಳುವುದು ಸೂಕ್ತವೆಂದು ತಿಳಿದು ಅತ್ತೃತ್ವಾಧಿಕರಣವು ಅನಂತರವೇ ಪ್ರಸಕ್ತವಾಗುತ್ತದೆ. ಮುಂದಿನ ಗುಹಾಧಿಕರಣದಲ್ಲಿಯೂ ಕರ್ಮಫಲಭೋಕ್ತೃತ್ವವೆಂಬ ಕ್ರಿಯಾರೂಪವಾದ ಲಿಂಗವನ್ನೇ ಸಮನ್ವಯ ಮಾಡುತ್ತಾರೆ. ಆದರೆ ಸಂಹರ್ತೃತ್ವಕ್ಕಿಂತ ಕರ್ಮಫಲಭೋಕ್ತೃತ್ವದ ಸಮನ್ವಯವು ಕಷ್ಟಸಾಧ್ಯವಾದ್ದರಿಂದ ಅನಂತರವೇ ಹೇಳಿದ್ದಾರೆ.

ಮೊದಲು ಭಾವ ಹಾಗೂ ಕ್ರಿಯಾರೂಪವಾದ ಲಿಂಗಳನ್ನು ಸಮನ್ವಯ ಮಾಡಿದ ಮೇಲೆ ಕ್ರಿಯಾವಿಶಿಷ್ಟವಾದ ಲಿಂಗವನ್ನು ಸಮನ್ವಯ ಮಾಡುವುದು ಯುಕ್ತ. ಆದ್ದರಿಂದ ಅಂತರಾಧಿಕರಣ ಹಾಗೂ ಅಂತರ್ಯಾಮ್ಯಧಿಕರಣಗಳು ಅನಂತರ ಹೊರಟಿವೆ. ಭಾವರೂಪವಾದ ಲಿಂಗಗಳ ಸಮನ್ವಯದ ಅನಂತರ ಭಾವನಿರೂಪ್ಯವಾದ ಅಭಾವರೂಪಧರ್ಮವನ್ನು ಅದೃಶ್ಯತ್ವಾಧಿಕರಣದಲ್ಲಿ ಸಮನ್ವಯ ಮಾಡಲಾಗಿದೆ. ಅನೇಕ ಲಿಂಗಗಳ ಸಮನ್ವಯಕ್ಕಾಗಿ ಕೊನೆಯ ವೈಶ್ವಾನರಾಧಿಕರಣ ಹೊರಟಿದೆ.

*ಅದ್ವೈತಿಗಳ ಅಧಿಕರಣಶರೀರ*

ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - 'ಮನೋಮಯಃ ಪ್ರಾಣಶರೀರಃ ಭಾರೂಪಃ ಸತ್ಯಸಂಕಲ್ಪಃ' ಎಂಬುದು ವಿಷಯವಾಕ್ಯ. ಮನಸ್ಸು ಮೊದಲಾದವುಗಳ ಸಂಬಂಧವಿರುವ ಜೀವನೇ ಮನೋಮಯನೆಂದು ಉಪಾಸಿಸಬೇಕೆಂದು ಪೂರ್ವಪಕ್ಷ. ಸತ್ಯಕಾಮತ್ವಾದಿಲಿಂಗಗಳಿರುವುದರಿಂದ ಬ್ರಹ್ಮನೇ ಉಪಾಸ್ಯನೆಂದು ಸಿದ್ಧಾಂತ. ಮನೋಮಯತ್ವ ಮೊದಲಾದ ಜೀವನ ಧರ್ಮಗಳೆಲ್ಲವನ್ನು ಜಿವಾಭಿನ್ನನಾದ್ದರಿಂದ ಬ್ರಹ್ಮನಲ್ಲಿಯೇ ಹೊಂದಿಸಬೇಕು.

ಜೀವನ ಧರ್ಮವನ್ನು ಬ್ರಹ್ಮನಲ್ಲಿ ಕೂಡಿಸುವುದಾದರೆ ಬ್ರಹ್ಮನಲ್ಲಿರುವ ಸತ್ಯಸಂಕಲ್ಪತ್ವವೇ ಮೊದಲಾದ ಬ್ರಹ್ಮನ ಧರ್ಮಗಳನ್ನು ಜೀವನಲ್ಲೇಕೆ ಕೂಡಿಸಬಾರದು? ಎಂಬ ಪ್ರಶ್ನೆಗೆ ಅದ್ವೈತಿಗಳ ಉತ್ತರ ಹೀಗಿದೆ - ಜೀವನು ಬ್ರಹ್ಮನಲ್ಲಿ ಅಧ್ಯಸ್ತನಾಗಿದ್ದಾನೆ. ಅಧ್ಯಸ್ತಪದಾರ್ಥದಲ್ಲಿರುವ ಧರ್ಮವು ಅಧಿಷ್ಠಾನದಲ್ಲಿ ಬರಬಹುದು. ಆದರೆ ಅಧಿಷ್ಠಾನದಲ್ಲಿರುವ ಧರ್ಮವು ಅಧ್ಯಸ್ತದಲ್ಲಿ ಬರಲು ಸಾಧ್ಯವಿಲ್ಲ. ಹಗ್ಗವನ್ನು ನೋಡಿ ಹಾವು ಎಂದು ಭ್ರಮಿಸಿದಾಗ ಭಯವನ್ನು ಹುಟ್ಟಿಸುವಿಕೆ ಎಂಬುದು ಸರ್ಪದಲ್ಲಿರುವ ಧರ್ಮವಾಗಿದೆ. ಇದು ರಜ್ಜುವಿನಲ್ಲಿ ಬರುವುದು ಕಂಡಿದೆ. ಆದರೆ ರಜ್ಜುವಿನಲ್ಲಿ ಅಭಿಮುಖವಾಗಿ ಹೋಗುವಿಕೆ ಎಂಬ ಧರ್ಮವಿದೆ. ಈ ಧರ್ಮವು ಸರ್ಪದಲ್ಲಿರುವುದು ಕಂಡಿಲ್ಲ. ಅಂದರೆ ಹಗ್ಗವನ್ನು ಸ್ವೀಕರಿಸಲು ಹೋಗುತ್ತೇವೆ. ಆದರೆ ಸರ್ಪವನ್ನು ಸ್ವೀಕರಿಸಲು ಯಾರೂ ಹೋಗುವುದಿಲ್ಲ.

*ಅದ್ವೈತಮತ ವಿಮರ್ಶೆ*

ಅದ್ವೈತಿಗಳ ಅಧಿಕರಣಶರೀರವು ಅಸಾಧುವಾಗಿದೆ. ತಮ್ಮ ಸಿದ್ಧಾಂತದಲ್ಲಿ ಜೀವಬ್ರಹ್ಮರ ಅಭೇದವನ್ನು

ಒಪ್ಪಿ ಜೀವನಲ್ಲಿರುವ ಮನೋಮಯತ್ವಾದಿ ಧರ್ಮಗಳನ್ನು ಬ್ರಹ್ಮನಲ್ಲಿ ಸಮರ್ಥಿಸಿದ್ದು ಸರಿಯಲ್ಲ. ಏಕೆಂದರೆ ಸತ್ಯಸಂಕಲ್ಪತ್ವವೇ ಮೊದಲಾದ ಧರ್ಮಗಳಿಂದ ಅಧಿಷ್ಠಾನಭೂತನಾದ ಬ್ರಹ್ಮನು ತೋರುತ್ತಿರುವಾಗ ಜೀವನಲ್ಲಿರುವ ಮನೋಮಯತ್ವಾದಿಧರ್ಮಗಳನ್ನು ಆರೋಪಿಸಲು ಸಾಧ್ಯವೇ ಇಲ್ಲ. ಶುಕ್ತಿಯಲ್ಲಿ ಶುಕ್ತಿತ್ವವೆಂಬ ಧರ್ಮವು ಸ್ಪಷ್ಟವಾಗಿ ತೋರುವ ಕಾಲದಲ್ಲಿ ರಜತತ್ವವನ್ನು ಆರೋಪಿಸಲು ಹೇಗೆ ಸಾಧ್ಯ ? ಕಾಮಾಲೆಯಿರುವಂತಹ ವ್ಯಕ್ತಿಗೆ ಶಂಖವು ಬಿಳಿಯೆಂದು ತಿಳಿದಿದ್ದರೂ ಹಳದಿಬಣ್ಣವನ್ನು ಆರೋಪಿಸುವುದು ಕಂಡಿದೆಯಲ್ಲವೇ? ಅದರಂತೆ ಬ್ರಹ್ಮನಲ್ಲಿ ಸತ್ಯಕಾಮತ್ವಾದಿ ಧರ್ಮಗಳು ತೋರುತ್ತಿದ್ದರೂ ಮನೋಮಯತ್ವಾದಿಗಳನ್ನು ಆರೋಪಿಸುತ್ತೇವೆಂದು ಅದ್ವೈತಿಗಳು ತಮ್ಮ ವಾದವನ್ನು ಸಮರ್ಥಿಸಿಕೊಳ್ಳಬಹುದು. ಆದರೆ ಇದು ವಿಷಮದೃಷ್ಟಾಂತವಾಗಿದೆ. ಶಂಖದಲ್ಲಿ ಮಾಡುತ್ತಿರುವ ಹಳದಿಬಣ್ಣದ ಆರೋಪವು ಅಪರೋಕ್ಷವಾಗಿದೆ ಮತ್ತು ಸೋಪಾಧಿಕವಾಗಿದೆ. ಆದರೆ ಬ್ರಹ್ಮನಲ್ಲಿ ಅದ್ವೈತಿಗಳು ಮಾಡುತ್ತಿರುವ ಮನೋಮಯತ್ವಾದಿ ಧರ್ಮಗಳ ಆರೋಪವು ಅಪರೋಕ್ಷವಾಗಿದೆ. ಮತ್ತು ನಿರುಪಾಧಿಕವಾಗಿದೆ. ಆದ್ದರಿಂದ ಸೋಪಾಧಿಕ ಬ್ರಹ್ಮಸ್ಥಳದಲ್ಲಿ ಮಾತ್ರ ಅಧಿಷ್ಠಾನದಲ್ಲಿರುವ ಧರ್ಮವು ತೋರಿದರೂ ಆರೋಪವನ್ನು ಮಾಡಬಹುದು. ಆದರೆ ನಿರುಪಾಧಿಕಬ್ರಹ್ಮಸ್ಥಳದಲ್ಲಿ ಹೀಗೆ ಆರೋಪಿಸುವುದು ಎಲ್ಲಿಯೂ ಕಂಡುಬಂದಿಲ್ಲ.

*ಅಧಿಷ್ಠಾನ ತತ್ತ್ವಜ್ಞಾನವಿದ್ದಾಗ ಆರೋಪವು ಅಸಂಭಾವಿತ*

'ಪ್ರಾಣಶರೀರಃ ಭಾವರೂಪಃ' ಎಂಬ ವಾಕ್ಯವು ಸಗುಣಬ್ರಹ್ಮ ವಿಷಯಕವೆಂದು ನೀವು ಹೇಳಿದಂತಾಯಿತು. ಜೀವ ಹಾಗೂ ಸಗುಣಬ್ರಹ್ಮರಿಬ್ಬರು ನಿರ್ಗುಣಬ್ರಹ್ಮನಲ್ಲಿ ಆರೋಪಿತರಾದ್ದರಿಂದ ಜೀವ ಹಾಗೂ ಸಗುಣಬ್ರಹ್ಮರಿಗೆ ಪರಸ್ಪರವಾಗಿ ಅಧಿಷ್ಠಾನ ಅಧ್ಯಸ್ತಭಾವವು ಕೂಡುವುದಿಲ್ಲ.

ಹುತ್ತವನ್ನು ನೋಡಿ ಕಂಬವೆಂದು ಮೊದಲು ಭ್ರಾಂತಿ ಬರುತ್ತದೆ. 'ಇದು ಕಂಬವಲ್ಲ ಪುರುಷನು' ಎಂಬ ಭ್ರಾಂತಿ ಬರುತ್ತದೆ. ಈ ಸ್ಥಳದಲ್ಲಿ ಸ್ಥಾಣುತ್ವ ಹಾಗೂ ಪುರುಷತ್ವ ಆರೋಪಗಳಿಗೆ ಅಧಿಷ್ಠಾನವು ಒಂದೇ ಆಗಿವೆ. ಅದರಂತೆ ನಿರ್ಗುಣಬ್ರಹ್ಮನನ್ನು ಮೊದಲು ಸತ್ಯಕಾಮನೆಂದು ತಿಳಿದು ಅನಂತರ ಮನೋಮಯನೆಂದು ತಿಳಿಯುತ್ತಾನೆ. ಈ ಸ್ಥಳದಲ್ಲಿ ಸತ್ಯಕಾಮತ್ವ ಹಾಗೂ ಮನೋಮಯತ್ವ ಎಂಬ ಆರೋಪಗಳಿಗೆ ಒಬ್ಬನೇ ನಿರ್ಗುಣ ಬ್ರಹ್ಮನು ಅಧಿಷ್ಠಾನನಾಗಿದ್ದಾನಲ್ಲವೇ? ಇದೂ ಸಹ ತಪ್ಪು. ಹಾಗಾದರೆ ಹಗ್ಗವನ್ನು ನೋಡಿ ಭಯಾನಕವೆಂಬ ವ್ಯವಹಾರವು ಹೇಗೆ ಅಪ್ರಮಾಣವಾಗುತ್ತದೋ ಅದರಂತೆ ಬ್ರಹ್ಮನಲ್ಲಿ ಮಾಡುವ ಮನೋಮಯತ್ವಾದಿ ವ್ಯವಹಾರಗಳೂ ಸಹ ಅಪ್ರಮಾಣವಾಗಬೇಕಾದೀತು. ಮತ್ತು ಬ್ರಹ್ಮನಲ್ಲಿ ಅಸತ್ಯವಾದ ಮನೋಮಯತ್ವಾದಿಗಳನ್ನು ಉಪಾಸನೆ ಮಾಡುವುದಕ್ಕಾಗಿ ಈ ವಾಕ್ಯವು ಹೊರಟಿದೆ ಎಂದು ಹೇಳಿದರೆ ಜೀವನಲ್ಲಿ ಸತ್ಯಸಂಕಲ್ಪತ್ವಾದಿಗಳನ್ನು ಉಪಾಸನೆ ಮಾಡುವುದಕ್ಕಾಗಿ ಈ ವಾಕ್ಯ ಹೊರಟಿದೆ ಎಂದು ಏಕೆ ಹೇಳಬಾರದು? ಮನೋಮಯತ್ವ ಹಾಗೂ ಸತ್ಯಸಂಕಲ್ಪತ್ವಗಳು ಒಟ್ಟಿಗೆ ಕೇಳಿಸುತ್ತಿರುವಾಗ ಒಂದನ್ನು ಉಪಾಸನೆ ಮಾಡಬೇಕು. ಮತ್ತೊಂದನ್ನು ಉಪಾಸನೆ ಮಾಡಬಾರದೆನ್ನಲು ವಿನಿಗಮಕ ಪ್ರಮಾಣವಿಲ್ಲ.

*ಅದ್ವೈತಿಗಳ ಸೂತ್ರವ್ಯಾಖ್ಯಾನ ನಿರಾಕರಣೆ*

ಅದ್ವೈತಿಗಳ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ. ಪ್ರಥಮಸೂತ್ರದಲ್ಲಿ ಪ್ರತಿಜ್ಞಾಭಾಗವನ್ನು ಹೇಳದೆ ಹೇತುಭಾಗವನ್ನಷ್ಟೇ ಹೇಳಿದಂತಾಗುತ್ತದೆ. ಆವಾಗ ಪ್ರತಿಜ್ಞಾಭಾಗವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಮತ್ತು ಹೇತುವಿನಲ್ಲಿರುವ ಸರ್ವತ್ರ ಎಂಬ ಪದವನ್ನು ವ್ಯರ್ಥವೆಂದು ಹೇಳಬೇಕಾಗುತ್ತದೆ.

*ಪರಿಪೂರ್ಣಚಂದ್ರಿಕಾ*

ಎರಡನೆಯ ಸೂತ್ರದಲ್ಲಿ ಮಿಥ್ಯಾಭೂತವಾದ ಸತ್ಯಕಾಮತ್ವಾದಿಗುಣಗಳನ್ನು ಬ್ರಹ್ಮನಲ್ಲಿ ಸಮರ್ಥಿಸುತ್ತೀರಿ. ಆದರೆ ಈ ಗುಣಗಳ ಪ್ರತಿಪಾದನೆಯಲ್ಲಿ ಶ್ರುತಿಗೆ ತಾತ್ಪರ್ಯವೇ ಇಲ್ಲದ ಕಾರಣ ಸೂತ್ರದಲ್ಲಿರುವ ವಿವಕ್ಷಿತ ಹಾಗೂ ಉಪಪತ್ತಿಪದಗಳು ಅಸ್ವರಸವಾಗುತ್ತವೆ.

ಮೂರನೆಯ ಸೂತ್ರದಲ್ಲಿ ಸತ್ಯಕಾಮತ್ವಾದಿಗುಣಗಳು ಜೀವನಲ್ಲಿ ಅನುಪಪನ್ನವೆನ್ನುತ್ತೀರಿ ಆದರೆ ಎರಡನೆಯ ಸೂತ್ರದಲ್ಲಿ ಬ್ರಹ್ಮನಲ್ಲಿ ಸತ್ಯಕಾಮತ್ವಾದಿಗುಣಗಳು ಉಪಪನ್ನವಾಗುತ್ತವೆಂದು ಹೇಳಿದ್ದರಿಂದಲೇ ಜೀವನಲ್ಲಿ ಅನುಪಪನ್ನವಾಗುತ್ತವೆಂದು ತಿಳಿಯುವುದಿಲ್ಲವೇ?

ನಾಲ್ಕನೆಯ ಸೂತ್ರದಲ್ಲಿ ವಿರುದ್ಧವಿಭಕ್ತಿಗಳಿಂದ ಕರ್ಮಕರ್ತೃಭಾವವು ತಿಳಿಯುತ್ತದೆನ್ನುತ್ತೀರಿ. ಇದೂ ಸಹ ಐದನೆಯ ಸೂತ್ರಾರ್ಥದಿಂದ ಪುನರುಕ್ತವಾಗುತ್ತದೆ.

### *ಐದನೆಯ ಸೂತ್ರಾರ್ಥವೂ ಅಯುಕ್ತ*

ಅದ್ವೈತಿಗಳ ಐದನೇ ಸೂತ್ರವ್ಯಾಖ್ಯಾನವೂ ಸಹ ಸರಿಯಿಲ್ಲ. ಏಕೆಂದರೆ ವಿರುದ್ಧ ವಿಭಕ್ತಿಗಳಿಂದ ಒಬ್ಬನೇ ಪ್ರತಿಪಾದ್ಯನಾಗುವುದಿಲ್ಲವೆಂದು ಅವರ ವ್ಯಾಖ್ಯಾನ. ಆದರೆ ಬೇರೆ ಬೇರೆ ಶ್ರುತಿಯಲ್ಲಿರುವ ವಿರುದ್ಧ ವಿಭಕ್ತಿಗಳನ್ನು ಆಶ್ರಯಿಸಿ ಕಷ್ಟ ಕೊಡುವುದಕ್ಕಿಂತ ಅನಾಯಾಸವಾಗಿ ಸಾವಧಾರಣವಾದ ಬ್ರಹ್ಮಶಬ್ದದಲ್ಲಿಯೇ ಶಬ್ದವಿಶೇಷವನ್ನು ಹೇಳುವುದು ಶ್ರೇಯಸ್ಕರವಾಗಿದೆ. ಇದರಂತೆ ಅದ್ವೈತಿಗಳ ಆರನೆಯ ಸೂತ್ರವು ಐದನೆಯ ಸೂತ್ರದಿಂದ ಗತಾರ್ಥವಾಗಿದೆ. ಏಳನೆಯ ಸೂತ್ರದಲ್ಲಿ ವೈಪರೀತ್ಯ ದೋಷವಿದೆ. ಎಂಟನೆಯ ಸೂತ್ರದಲ್ಲಿ ಅನಿಷ್ಟಾಪಾದನವನ್ನೇ ಪೂರ್ವಪಕ್ಷಿಗೆ ಮಾಡಲಾಗದೆಂಬ ದೋಷವಿದೆ. ಹೀಗೆ ಪ್ರತಿಯೊಂದು ಸೂತ್ರಗಳಲ್ಲಿಯೂ ಅನೇಕ ದೋಷಗಳಿರುವುದರಿಂದ ಅದ್ವೈತಿಗಳು ಸೂತ್ರವನ್ನು ವ್ಯಾಖ್ಯಾನಿಸಲು ಅನರ್ಹರಾಗಿದ್ದಾರೆ.

ಹಿಂದಿನ ಅಧಿಕರಣದಂತೆ ಇಲ್ಲಿಯೂ ಸಹ ಜೀವಬ್ರಹ್ಮರ ಭೇದವನ್ನೇ ಅದ್ವೈತಿಗಳು ಒಪ್ಪಿದ್ದಾರೆ. ಬ್ರಹ್ಮನಲ್ಲಿರುವ ಗುಣಗಳು ಜೀವನಲ್ಲಿ ಅನುಪಪನ್ನವಾಗಿವೆ ಎಂದು ಹೇಳುವಾಗ ಜೀವಬ್ರಹ್ಮರ ಭೇದವನ್ನು ಒಪ್ಪಿದಂತಾಯಿತು. ಮತ್ತು ಬ್ರಹ್ಮಮೀಮಾಂಸಾ ಶಾಸ್ತ್ರವು ನಿರ್ಗುಣಬ್ರಹ್ಮ ಪ್ರತಿಪಾದಕವೆನ್ನುತ್ತಾರೆ. ಆದರೆ 'ವಿವಕ್ಷಿತಗುಣೋಪಪತ್ತೇಃ' ಎಂಬ ಸೂತ್ರದಲ್ಲಿ ನಿರ್ಗುಣತ್ವಕ್ಕೆ ಪ್ರತಿಕೂಲವಾದ ಗುಣಗಳನ್ನು ಸಮರ್ಥಿಸಿದ್ದಾರೆ.

### *ರಾಮಾನುಜರ ಅಧಿಕರಣ ಶರೀರ*

ಛಾಂದೋಗ್ಯದಲ್ಲಿರುವ 'ಮನೋಮಯಃ ಪ್ರಾಣಶರೀರಃ' ಎಂಬ ವಾಕ್ಯವೇ ಈ ಅಧಿಕರಣದ ವಿಷಯವೆನ್ನುತ್ತಾರೆ ರಾಮಾನುಜರು. 'ಸರ್ವಂ ಖಲ್ವಿದಂ' ಎಂಬ ವಾಕ್ಯವು ಆಪಾತತಃ ಬ್ರಹ್ಮಪರವೆಂದು ತಿಳಿದರೂ ಸಹ ಮನೋಮಯ ಶಬ್ದವಿರುವುದರಿಂದ ಜೀವನೇ ಪ್ರತಿಪಾದ್ಯನು. ಆದ್ದರಿಂದ 'ಸರ್ವಂ ಖಲ್ವಿದಂ' ಎಂಬ ವಾಕ್ಯವನ್ನೂ ಸಹ ಜೀವಪರವೆಂದೇ ಹೇಳಬೇಕೆಂದು ಪೂರ್ವಪಕ್ಷ.

ಸಕಲ ವೇದಾಂತ ವಾಕ್ಯಗಳಲ್ಲಿ ಎಲ್ಲೆಲ್ಲಿ ಮನೋಮಯ ಶಬ್ದಗಳಿವೆಯೋ? ಅವೆಲ್ಲವೂ ಬ್ರಹ್ಮನನ್ನೇ ಪ್ರತಿಪಾದಿಸುತ್ತವೆ. 'ಮನೋಮಯಃ ಪ್ರಾಣಶರೀರನೇತಾ' ಎಂಬುದಾಗಿ ಮಾಂಡೂಕ್ಯದಲ್ಲಿ, ತೈತ್ತಿರೀಯಾದಲ್ಲೂ 'ತಸ್ಮಿನ್ ಅಯಂ ಪುರುಷಃ ಮನೋಮಯಃ' ಎಂಬುದಾಗಿ ಮನೋಮಯಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ. ಹೀಗೆ ಬ್ರಹ್ಮನನ್ನು ಬೇರೆ ಉಪನಿಷತ್ತುಗಳು ಮನೋಮಯನೆಂದು ಕರೆದಿರುವಾಗ ಛಾಂದೋಗ್ಯದಲ್ಲಿ ಹೇಳಿರುವ ಮನೋಮಯನೂ ಸಹ ಬ್ರಹ್ಮನೇ ಆಗುತ್ತಾನೆ. ಜೀವನಿಗೆ ಸರ್ವಾತ್ಮಕತ್ವನ್ನಾಗಲೀ ಸಕಲಜಗತ್ಕಾರಣತ್ವವನ್ನಾಗಲೀ ಹೇಳಲು ಸಾಧ್ಯವಿಲ್ಲದ ಕಾರಣ 'ಸರ್ವಂ ಖಲ್ವಿದಂ' ಎಂಬ ವಾಕ್ಯದಿಂದ ಪ್ರತಿಪಾದ್ಯನಾಗಲಾರನೆಂದು ಸಿದ್ಧಾಂತ.

ರಾಮಾನುಜರ ಸೂತ್ರ ವ್ಯಾಖ್ಯಾನ ಹೀಗಿದೆ - ಸರ್ವತ್ರ = 'ಸರ್ವಂ ಖಲ್ವಿದಂ' ಎಂಬ ಶ್ರುತಿಯಿಂದ ಪ್ರತಿಪಾದ್ಯನಾದವನು ಪರಬ್ರಹ್ಮನೇ ಆಗಿದ್ದಾನೆ. ಪ್ರಸಿದ್ಧೋಪದೇಶಾತ್ = ಶ್ರುತ್ಯಂತರದಲ್ಲಿ ಪ್ರಸಿದ್ಧವಾದ ಜಗತ್ಕಾರಣತ್ವವನ್ನು ಹೇಳಿರುವುದರಿಂದ

*ರಾಮಾನುಜರ ಮತನಿರಾಕರಣೆ*

ರಾಮಾನುಜರ ಉಳಿದ ಸೂತ್ರಗಳ ವ್ಯಾಖ್ಯಾನ ಹೀಗಿದೆ -

ವಿವಕ್ಷಿತಗುಣೋಪಪತ್ತೇಶ್ಚ - ಮನೋಮಯನೆನಿಸಿರುವ ಬ್ರಹ್ಮನಲ್ಲಿ ವಿವಕ್ಷಿತವಾದ ಸತ್ಯಕಾಮತ್ವಾದಿ-ಗುಣಗಳು ಉಪಪನ್ನವಾಗುತ್ತವೆ. ಜೀವನಲ್ಲಿ ಆ ಗುಣಗಳು ಇಲ್ಲದ ಕಾರಣ ಉಪಪನ್ನವಾಗುವುದಿಲ್ಲ.

ಅನುಪಪತ್ತೇಸ್ತು ನ ಶಾರೀರಃ - ಆ ಸತ್ಯಕಾಮತ್ವಾದಿಗುಣಗಳು ಜೀವನಲ್ಲಿಲ್ಲದ ಕಾರಣ ಮನೋಮಯನಾಗಿ ವಿವಕ್ಷಿತನಾಗುವುದಿಲ್ಲ.

ಕರ್ಮಕರ್ತೃವ್ಯಪದೇಶಾಚ್ಚ - 'ಏತಂ ಇತಃ ಪ್ರೇತ್ಯ' ಎಂಬಲ್ಲಿ ಮನೋಮಯನನ್ನು ಪ್ರಾಪ್ತನೆಂದು ಜೀವನನ್ನು ಪ್ರಾಪ್ಯವೆಂದು ಹೇಳಲಾಗಿದೆ. ಈ ಕಾರಣದಿಂದಲೂ ಜೀವನು ಮನೋಮಯನಲ್ಲ.

ಶಬ್ದವಿಶೇಷಾತ್ - 'ಏಷ ಮೇ ಆತ್ಮಾ' ಎಂಬ ಶ್ರುತಿಯಲ್ಲಿ ಷಷ್ಠಿ ವಿಭಕ್ತಿಯಲ್ಲಿ ಮೇ ಎಂಬ ಪದದಿಂದ ಆತ್ಮಾ ಎಂಬ ಪ್ರಥಮಾವಿಭಕ್ತಿಪದದಿಂದ ಮನೋಮಯನನ್ನು ನಿರ್ದೇಶಿಸಲಾಗಿದೆ. ಈ ಕಾರಣದಿಂದಲೂ ಜೀವನು ಮನೋಮಯನಲ್ಲ.

ಸ್ಮೃತೇಶ್ಚ - 'ಸರ್ವತ್ರ ಚ' ಎಂಬ ಗೀತೆಯಲ್ಲಿ ಜೀವನ ಹೃದಯದಲ್ಲಿರುವವನು ಬ್ರಹ್ಮನೇ ಎಂದು ಹೇಳಲಾಗಿದೆ. ಪ್ರಕೃತ ಉಪನಿಷತ್ತಿನಲ್ಲಿಯೂ ಸರ್ವಗತನೆಂದು ಹೇಳಲ್ಪಟ್ಟಿರುವವನು ಬ್ರಹ್ಮನೇ ಆಗಬೇಕು.

'ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ' ಅಲ್ಪದೇಶದಲ್ಲಿ ಇರುವಂತಹ ಬ್ರಹ್ಮನು ಸರ್ವಗತನಾಗಲಾರನೆಂದು ಆಕ್ಷೇಪಿಸಬಾರದು. ಕೇವಲ ಉಪಾಸನೆಗಾಗಿ ಅಲ್ಪದೇಶದ ಇರುವಿಕೆಯು ಹೇಳಲಾಗಿದೆ. ಎಲ್ಲೆಡೆ ವ್ಯಾಪಿಸಿರುವ ಆಕಾಶವು ಅಲ್ಪದೇಶದಲ್ಲಿಯೂ ಇರುವಂತೆ.

ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ - ಒಂದೇ ದೇಹದಲ್ಲಿ ಜೀವನೊಡನೆ ನೆಲೆಸಿರುವ ಬ್ರಹ್ಮನಿಗೆ ಸುಖದುಃಖಗಳು ಬರಬೇಕಲ್ಲವೇ? ಎಂದು ಪ್ರಶ್ನಿಸಿದರೆ ಪಾಪದ ಸಂಪರ್ಕವಿಲ್ಲದ ಕಾರಣ ಬ್ರಹ್ಮನಿಗೆ ಸುಖದುಃಖಗಳ ಅನುಭವವು ಬರುವುದಿಲ್ಲವೆಂದು ಉತ್ತರಿಸಲು ಕೊನೆಯ ಸೂತ್ರ ಹೊರಟಿದೆ.

ರಾಮಾನುಜರ ಅಧಿಕರಣಶರೀರವಾಗಲೀ, ಸೂತ್ರಾರ್ಥವಾಗಲಿ ಸಮಂಜಸವಲ್ಲ. ಸೂತ್ರದಲ್ಲಿರುವ 'ಸರ್ವತ್ರ' ಎಂಬ ಪದಕ್ಕೆ ಎಲ್ಲೆಡೆ ಇರುವ ಎಂಬರ್ಥವನ್ನು ಹೇಳಬೇಕು. ಆದರೆ ಅವರು ''ಎಲ್ಲವೂ'' ಎಂಬರ್ಥವನ್ನು ಹೇಳುತ್ತಾರೆ. ಈ ಅರ್ಥದಲ್ಲಿ 'ಸರ್ವಂ' ಎಂಬ ಪದವಿರಬೇಕೇ ಹೊರತು 'ಸರ್ವತ್ರ' ಎಂಬ ಪದವು ತಪ್ಪಾಗುತ್ತದೆ. ಮತ್ತು 'ಪ್ರಸಿದ್ಧತ್ವೇನ ಉಪದೇಶಾತ್' ಎಂದು ಅವರ ಪ್ರಕಾರ ಹೇಳಬೇಕಾಗುತ್ತದೆ. ಇದೂ ಸಹ ಸ್ವಾರಸ್ಯವಲ್ಲ. ಮತ್ತು ಬೇರೆ ವಾಕ್ಯಗಳಲ್ಲಿ ಜಗತ್ಕಾರಣತ್ವವು

ಪ್ರಸಿದ್ಧವಾಗಿದೆಯೆಂದು ಪೂರ್ವಪಕ್ಷಿಯು ಒಪ್ಪುವುದೇ ಇಲ್ಲ. ಇವೇ ಮೊದಲಾದ ಕಾರಣಗಳಿಂದ ರಾಮಾನುಜರ ಮತವು ಅಸಾಧುವಾಗಿದೆ. ಅದ್ವೈತ ಮತ ನಿರಾಕರಣೆಯಿಂದಲೇ ಅವರ ಸೂತ್ರಾರ್ಥಗಳನ್ನೂ ಸಹ ನಿರಾಕರಿಸಿದಂತಾಗುತ್ತದೆ.

*ರಾಮಾನುಜರ ಸೂತ್ರಾರ್ಥ ನಿರಾಕರಣೆ*

ರಾಮಾನುಜರ ಸೂತ್ರಾರ್ಥವೂ ಸಹ ತಪ್ಪಿದೆ. ಸರ್ವಾತ್ಮಕತ್ವವನ್ನು ಸಾಧ್ಯವೆನ್ನುತ್ತಾರೆ. ಆದರೆ ಸರ್ವಾತ್ಮಕತ್ವವನ್ನು ಪ್ರತಿಪಾದನೆ ಮಾಡುವುದಕ್ಕಾಗಿ 'ಸರ್ವಂ' ಎಂದೇ ಸೂತ್ರದಲ್ಲಿ ನಿರ್ದೇಶಿಸಬೇಕು. ಹಾಗೇ ನಿರ್ದೇಶಿಸುವುದರಿಂದ ಶ್ರುತಿಯ ಆನುಗುಣ್ಯವೂ ಸಹ ಬರುತ್ತದೆ. ಏಕೆಂದರೆ 'ಸರ್ವತ್ರ' ಎಂಬ ಪದದಿಂದ ಸರ್ವಾತ್ಮಕತ್ವ ತಿಳಿಯುವುದಿಲ್ಲ. ಕೇವಲ ಸರ್ವಗತತ್ವ ತಿಳಿಯುತ್ತದೆ. ಮತ್ತು ಸೂತ್ರದಲ್ಲಿರುವ ಪ್ರಸಿದ್ಧಶಬ್ದಕ್ಕೆ ಕಾರಣವಿಲ್ಲದೆ ಭಾವಪ್ರಧಾನವಾಚಿತ್ವವನ್ನು ಒಪ್ಪಬೇಕಾಗುತ್ತದೆ.

ಮತ್ತು ರಾಮಾನುಜರು 'ಅರ್ಭಕೌಕಸ್ತ್ವಾತ್' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾಸಿದ್ದಾರೆ - ''ಏಷ ಮೇ ಆತ್ಮಾಽಂತರ್ಹೃದಯೇಽಣೀಯಾನ್ ವ್ರೀಹೇರ್ವಾ ಯವಾದ್ವಾ ಸರ್ಷಪಾದ್ವಾ'' ಎಂಬಲ್ಲಿ ಹೇಳಲ್ಪಟ್ಟ ಅಣೀಯಸ್ತ್ವವು ಔಪಾಧಿಕವಾಗಿದೆ. ಏಕೆಂದರೆ ಹೃದಯವೆಂಬ ಉಪಾಧಿಯನ್ನು ಹೇಳಿರುವುದರಿಂದ ಆದರೆ 'ಜ್ಯಾಯಾನ್ ಪೃಥಿವ್ಯಾಃ' ಎಂಬಲ್ಲಿ ಹೇಳಲ್ಪಟ್ಟ ಮಹತ್ವವು ಸ್ವಾಭಾವಿಕವಾಗಿದೆ. ಏಕೆಂದರೆ ಇಲ್ಲಿ ಯಾವುದೇ ವಿಧವಾದ ಉಪಾಧಿಯನ್ನು ಹೇಳಿರುವುದಿಲ್ಲವೆಂದು

ಇದು ತಪ್ಪು. 'ಹೃದ್ಯಪೇಕ್ಷಯಾ' ಎಂಬಲ್ಲಿ ಹೃದಯವು ಅಂಗುಷ್ಠಪ್ರಮಾಣವುಳ್ಳದ್ದಾಗಿದೆಯೆಂದು ನೀವೇ ಒಪ್ಪಿರುತ್ತೀರಿ? ಹೀಗಿರುವಾಗ ಪರಮಾತ್ಮನು ಸರ್ಷಪಕ್ಕಿಂತ ಅಣುವಾಗಿದ್ದಾನೆನ್ನಲು ಇಂತಹ ಹೃದಯವು ಉಪಾಧಿಯಾಗುವುದಿಲ್ಲ.

# ಅತ್ತೃತ್ವಾಧಿಕರಣ

*ಪ್ರತ್ಯುದಾಹರಣ ಸಂಗತಿಯ ಪ್ರದರ್ಶನ*

ಅತ್ತೃತ್ವಾಧಿಕರಣವು ಪ್ರಾರಂಭವಾಗುತ್ತಿದೆ. 'ತತ್ತದತ್ತುಮಧ್ರಿಯತ' ಎಂಬುದು ಈ ಅಧಿಕರಣದ ವಿಷಯವಾಕ್ಯ. ಈ ವಿಷಯವಾಕ್ಯದಲ್ಲಿ ಸಕಲ ಪದಾರ್ಥಗಳ ಅತ್ತೃತ್ವವನ್ನು ಅದಿತಿಗೆ ಹೇಳಲಾಗಿದೆ. ಇಲ್ಲಿರುವ ಅದಿತಿ ಶಬ್ದವು ದೇವಮಾತೆಯಾದ ಅದಿತಿದೇವಿಯನ್ನು ಹೇಳುತ್ತಿದೆಯೋ ಅಥವಾ ವಿಷ್ಣುವನ್ನು ಹೇಳುತ್ತಿದೆಯೋ? ಎಂದು ಸಹಜವಾಗಿ ಸಂಶಯ ಬರುತ್ತದೆ.

ಒಂದು ವೇಳೆ ಕೆಲವು ಪದಾರ್ಥಗಳನ್ನಷ್ಟೇ ಸರ್ವಶಬ್ದವು ಹೇಳುವುದಾದರೆ ಕೆಲವು ಪದಾರ್ಥಗಳನ್ನು ಅದಿತಿದೇವಿಯು ತಿನ್ನುವುದರಿಂದ ಅದಿತಿಯಲ್ಲಿಯೇ ಅತ್ತೃತ್ವಧರ್ಮವು ಬರುತ್ತದೆ. ಅದಿತಿ ಶಬ್ದವು ಅದಿತಿದೇವಿಯಲ್ಲಿ ರೂಢವಾಗಿರುವುದೂ ಸಹ ಮತ್ತೊಂದು ಕಾರಣ.

ಒಂದು ವೇಳೆ ಸರ್ವಶಬ್ದಕ್ಕೆ ಸಂಕೋಚ ಮಾಡದಿದ್ದರೆ ಸಕಲ ಪದಾರ್ಥಗಳನ್ನು ತಿನ್ನುವ ವಿಷ್ಣುವನ್ನೇ ಅದಿತಿಯೆನ್ನಬೇಕಾಗುತ್ತದೆ. ಇದರಿಂದ ಸಕಲ ಸಂಹರ್ತೃತ್ವ ಎಂಬ ಗುಣವು ವಿಷ್ಣುವಿನಲ್ಲಿ ಸಿದ್ಧವಾಗುತ್ತದೆ.

*ಅದಿತಿಶ್ರುತಿ ಹಾಗೂ ಅದಿತಿತ್ವಲಿಂಗಗಳಿಂದ ಪೂರ್ವಪಕ್ಷ*

'ಆದಿತೇಯ' ಶಬ್ದದಿಂದ ವಾಚ್ಯಳಾದವಳು ಅದಿತಿದೇವಿಯೇ ಆಗಿದ್ದಾಳೆಂದು ಪೂರ್ವಪಕ್ಷ. ಕಾರಣವೇನೆಂದರೆ ಅದಿತಿಶ್ರುತಿ ಹಾಗೂ ಅದಿತಿತ್ವವೆಂಬ ಲಿಂಗ. ಇವೆರಡೂ ಸಹ ನಿರವಕಾಶವೇ ಆಗಿವೆ. ಹಿಂದೆ ಅಂತರಧಿಕರಣದಲ್ಲಿ ಅದಿತಿಶಬ್ದದ ಪರ್ಯಾಯಶಬ್ದಗಳನ್ನು ಸಮನ್ವಯ ಮಾಡದ ಕಾರಣ ಅದಿತಿಶ್ರುತಿಯು ನಿರವಕಾಶವಾಗಲು ಒಂದು ಕಾರಣ. ಅದಿತಿಶ್ರುತಿಯ ಸಮನ್ವಯವನ್ನು ಅಂತರಧಿಕರಣದಲ್ಲಿ ಮಾಡದಿದ್ದರೂ ಅಸಾಧಾರಣವಾದ ವಿಷ್ಣುಲಿಂಗಗಳಿರುವಿಕೆಯೆಂಬ ಅಂತರಧಿಕರಣದ ನ್ಯಾಯಕ್ಕೆ ವಿಷಯವಾಗದಿರುವಿಕೆಯು ಅದಿತಿಶ್ರುತಿ ನಿರವಕಾಶಕ್ಕೆ ಮತ್ತೊಂದು ಕಾರಣ. ಹೀಗೆ ಶ್ರುತಿ ಹಾಗೂ ಲಿಂಗಗಳೆರಡು ನಿರವಕಾಶಗಳೆಂದು ಒಪ್ಪಿ ಪೂರ್ವಪಕ್ಷವನ್ನು ಪುಷ್ಟೀಕರಿಸಲಾಗಿದೆ. ಹಿಂದಿನ ಅಧಿಕರಣದಲ್ಲಿ ಲಿಂಗವನ್ನು ಮಾತ್ರ ನಿರವಕಾಶವೆಂದು ಒಪ್ಪಲಾಗಿತ್ತು. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕಿರುವ ವೈಷಮ್ಯವನ್ನೂ ಸಹ ಗಮನಿಸಬೇಕು.

ಆದರೆ ಟೀಕೆಯಲ್ಲಿ ಅದಿತಿಶ್ರುತಿಯನ್ನು ಸಾವಕಾಶವೆಂದು ಒಪ್ಪಿ ಲಿಂಗವನ್ನು ನಿರವಕಾಶವೆಂದು ಹೇಳಿದ್ದಾರೆ. ನಿರವಕಾಶವಾದ ಒಂದೇ ಲಿಂಗದಿಂದ ಪೂರ್ವಪಕ್ಷವನ್ನು ದೃಢಗೊಳಿಸಬಹುದು. ಏಕೆಂದರೆ ಅದಿತಿತ್ವವು ಜಾತಿರೂಪವಾದ್ದರಿಂದ ವಿಷ್ಣುವಿನಲ್ಲಿ ಬರಲು ಸಾಧ್ಯವೇ ಇಲ್ಲ. ಮತ್ತು ಲೋಕರೂಢಿಯೂ ಸಹ ಅದಿತಿದೇವಿಯಲ್ಲಿಯೇ ಇರುತ್ತದೆ. ಆದ್ದರಿಂದ ಕೇವಲ ಲಿಂಗದಿಂದ ಪೂರ್ವಪಕ್ಷ ಮಾಡಿದ್ದು ತಪ್ಪಲ್ಲ.

*ಜಾತಿರೂಪವಾದ ಅದಿತಿತ್ವವು ಬಲಿಷ್ಠಲಿಂಗ*

ಶ್ರುತಿ ಹಾಗೂ ಲಿಂಗಗಳೆರಡೂ ನಿರವಕಾಶವೆಂದು ಗ್ರಂಥಕಾರರು ಸಮರ್ಥಿಸಿದರು. ಆದರೆ ಟೀಕೆಯಲ್ಲಿ ಲಿಂಗವನ್ನಷ್ಟೇ ನಿರವಕಾಶವೆಂದು ಹೇಳಿದ್ದಾರೆ. ಈ ಟೀಕೆಯ ಅಭಿಪ್ರಾಯವನ್ನು ಹಿಂದೆ ಒಂದು ಪ್ರಕಾರದಲ್ಲಿ ಸ್ಪಷ್ಟಪಡಿಸಿದರು. ಈಗ ಮತ್ತೊಂದು ಪ್ರಕಾರದಲ್ಲಿ ಟೀಕೆಯ ಅಭಿಪ್ರಾಯವನ್ನು ಹೇಳುತ್ತಿದ್ದಾರೆ. ಅದಿತಿತ್ವ ಎಂಬ ಲಿಂಗಕ್ಕೆ ಪ್ರವೃತ್ತಿನಿಮಿತ್ತವೆಂಬರ್ಥವನ್ನು ಪರಿಗಣಿಸಿದರೆ ತೀರದಲ್ಲಿ ಗಂಗಾಶಬ್ದವು ಬಂದರೂ ಸಹ ಗಂಗಾಪದಪ್ರವೃತ್ತಿನಿಮಿತ್ತವು ಬರುವುದಿಲ್ಲವೆಂದು ಹೇಗೆ ನಿರ್ಣಯವಾಗಿದೆಯೋ ಅದರಂತೆ ಅದಿತಿಶ್ರುತಿಯು ಪರಮಾತ್ಮನಲ್ಲಿ ಬಂದರೂ ಅದಿತಿತ್ವವೆಂಬ ಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಬರುವುದಿಲ್ಲವೆಂದು ಹಿಂದೆ ಸಮರ್ಥಿಸಿದರು.

ಈಗ ಅದಿತಿತ್ವವೆಂಬ ಲಿಂಗವನ್ನು ಜಾತಿರೂಪವೆಂದು ಪರಿಗಣಿಸಿ ಭಗವಂತನಲ್ಲಿ ಬರಲು ಸಾಧ್ಯವಿಲ್ಲವೆಂದು ಸಮರ್ಥಿಸುತ್ತಿದ್ದಾರೆ. ಈ ಪಕ್ಷದಲ್ಲಿ ಅಂತರಧಿಕರಣ ನ್ಯಾಯಕ್ಕೆ ಅದಿತಿಶ್ರುತಿಯು ವಿಷಯವಾಗಿದೆಯೆಂದು ಒಪ್ಪಲಾಗಿದೆ. ಅದಿತಿಶ್ರುತಿಯು ಪರಮಾತ್ಮನಲ್ಲಿ ಬರುವ ಮಾತ್ರದಿಂದ ಅದಿತಿತ್ವಲಿಂಗವು ಬರಬೇಕಾಗಿಲ್ಲ. ಏಕೆಂದರೆ 'ಅನಶ್ನನ್ನನ್ಯಃ' ಎಂಬ ಶ್ರುತಿಯು ಭಗವಂತನು ಏನನ್ನೂ ತಿನ್ನಲಾರನೆಂದು ಸ್ಪಷ್ಟವಾಗಿ ಹೇಳುತ್ತಿದೆ.

ಮುಂದಿನ ಅಧಿಕರಣದಲ್ಲಿ ಕರ್ಮಫಲಗಳನ್ನು ಭಗವಂತನು ತಿನ್ನುತ್ತಾನೆಂದು ಸಮರ್ಥಿಸುತ್ತಾರೆ. ಆದರಿಂದಲೇ ಈ ಅಧಿಕರಣದಲ್ಲಿ ಹೇಳುತ್ತಿರುವ ಸಕಲಪದಾರ್ಥಗಳನ್ನು ತಿನ್ನುತ್ತಾನೆಂದು ನಿರ್ಣಯವಾಗುತ್ತದೆ. ಕೋಲನ್ನೇ ತಿನ್ನುವವನು ಅಪೂಪವನ್ನು ತಿನ್ನಲು ಅಸಮರ್ಥನಾಗುತ್ತಾನೆಯೇ ? ಎಂದು ಪ್ರಶ್ನಿಸಬಾರದು. ಈ ಅಧಿಕರಣದ ಸಿದ್ಧಾಂತವನ್ನು ಅಪೇಕ್ಷಿಸಿ ಮುಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ವೈಯರ್ಥ್ಯವನ್ನು ಹೇಳಬಾರದು.

*ಶ್ರುತಿಲಿಂಗಗಳ ನಿರವಕಾಶತ್ವವು ನ್ಯಾಯವಿವರಣಕ್ಕೆ ಸಮ್ಮತ*

ಇಲ್ಲಿಯ ತನಕ ತತ್ತ್ವಪ್ರಕಾಶಿಕಾ ವಾಕ್ಯಕ್ಕೆ ಎರಡು ಬಗೆಯಲ್ಲಿ ವ್ಯಾಖ್ಯಾನಿಸಿ ಪ್ರಕೃತ ನ್ಯಾಯವಿವರಣಕ್ಕೆ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ. ಅದಿತಿಶ್ರುತಿ ಹಾಗೂ ಅದಿತಿತ್ವಲಿಂಗ ಎರಡೂ ಸಹ ನಿರವಕಾಶಗಳೇ

ಆಗಿವೆ. ಅದಿತಿಶ್ರುತಿಯಲ್ಲಿ ಯಾವುದೇ ವಿಷ್ಣುಲಿಂಗಗಳು ಇಲ್ಲದ ಕಾರಣ ದೇವಮಾತೆಯನ್ನೇ ಅದಿತಿಶಬ್ದವು ಪ್ರತಿಪಾದಿಸುತ್ತದೆ. ಆದ್ದರಿಂದ ಅದಿತಿಶ್ರುತಿಯು ನಿರವಕಾಶವಾಯಿತು. ಇದರಂತೆ ಅದಿತಿತ್ವವೆಂಬ ಲಿಂಗವೂ ಸಹ ನಿರವಕಾಶವಾಗಿದೆ. ಏಕೆಂದರೆ ಅದಿತಿತ್ವ ಎಂಬಲ್ಲಿರುವ ಅದಿತಿ ಎಂಬ ಪ್ರಾತಿಪದಿಕವು ಅದಿತಿದೇವಿಯನ್ನು ಪ್ರತಿಪಾದಿಸಿದ ಮೇಲೆ 'ತ್ವ' ಪ್ರತ್ಯಯವೂ ಸಹ ಅದಿತಿದೇವಿಯಲ್ಲಿರುವ ಧರ್ಮವನ್ನೇ ಪ್ರತಿಪಾದಿಸಬೇಕಲ್ಲವೇ? ಹೀಗೆ ಶ್ರುತಿ ಹಾಗೂ ಲಿಂಗಗಳೆರಡು ನಿರವಕಾಶಗಳಾಗುತ್ತವೆ. 'ಶ್ರುತಿರ್ಲಿಂಗಂಚ' ಎಂಬಲ್ಲಿರುವ ನ್ಯಾಯವಿವರಣದ 'ಚ' ಶಬ್ದವೂ ಸಹ ಅತ್ಯಂತ ಸ್ವರಸವಾಗುತ್ತದೆ.

*ವಿಷ್ಣುಲಿಂಗ ಹಾಗೂ ವಿಷ್ಣುಪ್ರಕರಣಗಳು ಸಾವಕಾಶವಾಗಿವೆ*

ಸರ್ವಾತ್ತೃತ್ವ ಹಾಗೂ ವಿಷ್ಣುಪ್ರಕರಣ ಎಂಬುದು ವಿಷ್ಣುವೇ ಅದಿತಿಶಬ್ದವಾಚ್ಯನಾಗಿದ್ದಾನೆನ್ನಲು ಪ್ರಮಾಣಗಳಾಗಿವೆಯೆಂದು ಹೇಳಬೇಕು. ಆದರೆ ಸರ್ವಾತ್ತೃತ್ವವೆಂಬ ವಿಷ್ಣುಲಿಂಗ್ನ ಅದಿತಿದೇವಿಯಲ್ಲಿ ಸಾವಕಾಶವಾಗಿದೆ. ಪ್ರಕರಣವು ನಿರವಕಾಶವಾದರೂ ಅಥವಾ ಸಾವಕಾಶವಾದರೂ ಅದಿತಿಯೇ ಅದಿತಿಶಬ್ದವಾಚ್ಯಳಾಗುತ್ತಾಳೆ.

ಸರ್ವಾತ್ತೃತ್ವವು ಏಕೆ ಸಾವಕಾಶವೆಂದರೆ ಸರ್ವಶಬ್ದದ ಅರ್ಥಕ್ಕೆ ಸಂಕೋಚ ಮಾಡುವುದು ಅನಿವಾರ್ಯ. ತನಗೆ ಯೋಗ್ಯವಾದ ಸಕಲ ಪದಾರ್ಥಗಳನ್ನು ಅದಿತಿ ದೇವಿ ತಿನ್ನುತ್ತಾಳೆನ್ನಬಹುದು. ಅಥವಾ ಸರ್ವಶಬ್ದದ ಅರ್ಥವನ್ನು ಸಂಕೋಚ ಮಾಡದಿದ್ದರೂ ಸಕಲ ಪದಾರ್ಥಗಳ ಅತ್ತೃತ್ವವನ್ನು ಅದಿತಿದೇವಿಯಲ್ಲಿ ಹೇಳಬಹುದು. ಇದರಿಂದ ಸರ್ವಸಂಹರ್ತೃತ್ವವೆಂಬ ವಿಷ್ಣುವಿನ ಲಕ್ಷಣವು ಅಸಂಭವದೋಷಗ್ರಸ್ತವಾಗಿದೆಯೆಂದು ತಿಳಿಯುತ್ತದೆ.

'ಅದ ಭಕ್ಷಣೇ' ಎಂಬ ಧಾತುವಿನಿಂದ 'ಅತ್ತಾ' ಎಂಬ ರೂಪವು ನಿಷ್ಪನ್ನವಾಗಿದೆ. ಇದರಿಂದ ಎಲ್ಲವನ್ನು ತಿನ್ನುತ್ತಾಳೆಂಬ ಅರ್ಥವನ್ನು ಹೇಳಬಹುದು ಹೊರತು, ಎಲ್ಲವನ್ನು ಸಂಹಾರ ಮಾಡುತ್ತಾಳೆಂಬುದನ್ನು ಹೇಗೆ ಸಂಹಾರ ಮಾಡುವುದು ಎಂದೇ ಅರ್ಥ. ಆದ್ದರಿಂದ ಅತ್ತೃತ್ವ ಹಾಗೂ ಸಂಹರ್ತೃತ್ವ ಎಂಬೆರಡು ಪದಗಳು ಪರ್ಯಾಯಶಬ್ದಗಳಾಗಿವೆ. ಅಥವಾ ಭಕ್ಷಣಾರ್ಥದಲ್ಲಿ ಅದ ಧಾತುವು ಪ್ರಸಿದ್ಧವಾದಂತೆ ಸಂಹಾರ ಎಂಬರ್ಥದಲ್ಲಿಯೂ ಅದ ಧಾತುವು ಪ್ರಸಿದ್ಧವಾಗಿದೆ.

ಸಮಗ್ರ ಪ್ರಕರಣವು ವಿಷ್ಣು ಪರವಾದ್ದರಿಂದ 'ತತ್ತದತ್ತುಮಧ್ರಿಯತ' ಎಂಬ ವಾಕ್ಯವು ವಿಷ್ಣುವನ್ನೇ ಹೇಳಬೇಕಲ್ಲವೇ? ಎಂಬ ಪ್ರಶ್ನೆಗೂ ಈಗ ಅವಕಾಶವಿಲ್ಲ. ಏಕೆಂದರೆ ಮಹಾಪ್ರಕರಣವು ವಿಷ್ಣುಪರವಾಗಿದ್ದರೂ 'ತತ್ತದತ್ತುಮಧ್ರಿಯತ' ಎಂಬುದು ಅವಾಂತರ ಪ್ರಕರಣವಾಗಿದೆ. ಈ ಅವಾಂತರ ಪ್ರಕರಣವು ಅದಿತಿದೇವಿಯನ್ನು ಪ್ರತಿಪಾದಿಸಲು ತೊಂದರೆ ಇಲ್ಲ. ಏಕೆಂದರೆ ಪ್ರಕರಣ ಪ್ರಮಾಣಕ್ಕಿಂತ ಶ್ರುತಿಲಿಂಗಗಳು ಬಲಿಷ್ಠವಾದ ಪ್ರಮಾಣಗಳಾಗಿವೆ. ಅಥವಾ ಈ ಬಲಿಷ್ಠವಾದ ಶ್ರುತಿಲಿಂಗಪ್ರಮಾಣಗಳಿಂದಲೇ ಸಂಪೂರ್ಣ ಮಹಾಪ್ರಕರಣವೂ ಸಹ ಅದಿತಿದೇವಿಯನ್ನೇ ಪ್ರತಿಪಾದಿಸುತ್ತದೆ.

ಈ ಎಲ್ಲಾ ಕಾರಣಗಳಿಂದ 'ತತ್ತದತ್ತುಮಧ್ರಿಯತ' ಎಂಬ ವಿಷಯವಾಕ್ಯದಿಂದ ಪ್ರತಿಪಾದ್ಯಳಾದವಳು ಅದಿತಿದೇವಿಯೇ ಹೊರತು ಮಹಾವಿಷ್ಣುವಲ್ಲ. ಇಲ್ಲಿಗೆ ಪೂರ್ವಪಕ್ಷವು ಸಮಾಪ್ತವಾಯಿತು.

*ಸರ್ವಾತ್ತೃತ್ವ ವಿಷ್ಣುವಿನಲ್ಲಿ ಮಾತ್ರವೆಂದು ಸಿದ್ಧಾಂತ*

ಸಿದ್ಧಾಂತವನ್ನು ಪ್ರಾರಂಭಿಸುತ್ತಿದ್ದಾರೆ - ಸಿದ್ಧಾಂತದ ಸಾರ ಹೀಗಿದೆ - ಸರ್ವಾತ್ತೃತ್ತ್ವವೆಂಬ ಲಿಂಗವು ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ಯುಕ್ತವಾಗುವುದಿಲ್ಲ. ಮತ್ತು ವಿಷ್ಣುವಿನಲ್ಲಿ ಅದಿತಿಶಬ್ದವು ಪ್ರಯುಕ್ತವಾಗಿದೆಯೆಂದು ಬೇರೊಂದು ಶ್ರುತಿಯಿಂದ ಸ್ಪಷ್ಟವಾಗುತ್ತದೆ.

ಬಾಧಕವಿಲ್ಲದೆ ಸರ್ವಶಬ್ದಕ್ಕೆ ಸಂಕೋಚವನ್ನು ಮಾಡಬಾರದು. ಪೂಷಾದಿದೃಷ್ಟಾಂತದಲ್ಲಿ ಬಾಧಕವಿದ್ದಂತೆ ಇಲ್ಲಿ ಬಾಧಕವಿಲ್ಲದ ಕಾರಣ ಮತ್ತೊಂದೆಡೆ ಅಪಕರ್ಷ ಮಾಡಬೇಕಾಗಿಲ್ಲ.

ಅವಾಂತರ ಪ್ರಕರಣವೆಂದು ಪೂರ್ವೋತ್ತರ ವಾಕ್ಯಗಳ ಪರಾಮರ್ಶದಿಂದ ನಿರ್ಣಯಿಸಬೇಕು. 'ಅಭಿಕ್ರಾಮಂ ಜುಹೋತಿ' ಎಂಬಲ್ಲಿ ಹಾಗೆ ಸಂದಂಶ ಇರುವುದರಿಂದ ಅವಾಂತರ ಪ್ರಕರಣವೆಂದು ಹೇಳಬಹುದು. ಆದರೆ ಪ್ರಕೃತದಲ್ಲಿ ಸಂದಂಶ ಇರುವುದಿಲ್ಲ.

*ವಿಷ್ಣುವಿನ ಸರ್ವಾತ್ತೃತ್ವಕ್ಕೆ ಅದಿತಿಶಬ್ದವೇ ಹೇತು*

'ಸಃ ಯದ್ಯದೇವಾSಸೃಜತ' ಎಂಬುವ ಮೊದಲು ವಿಷ್ಣುವನ್ನು ಸರ್ವತ್ತಾ ಎನ್ನಲಾಗಿದೆ. ಏಕೆ? ಎಂಬ ಪ್ರಶ್ನೆ ಬಂದರೆ 'ಸರ್ವಂ ವಾ ಅತ್ತಿ' ಎಂಬುದಾಗಿ ಅದಿತಿಶಬ್ದದ ನಿರ್ವಚನದ ಮೂಲಕವಾಗಿ ಹೇತುವನ್ನು ನಿರೂಪಿಸಲಾಗಿದೆ. ಒಂದು ವೇಳೆ ಹಿಂದಿನ ವಾಕ್ಯದಲ್ಲಿ ವಿಷ್ಣುವಿನಲ್ಲಿ ಅಥವಾ ಅದಿತಿದೇವಿಯಲ್ಲಿ ಆ ಅದಿತಿಶಬ್ದವನ್ನು ಪ್ರಯೋಗಿಸಿದ್ದರೆ ಅನುಶಾಸನದ ಆಕಾಂಕ್ಷೆ ಬರುತ್ತಿತ್ತು. ಆದರೆ ಮೊದಲು ಅದಿತಿಶಬ್ದವನ್ನು ಪ್ರಯೋಗಿಸದ ಕಾರಣ ಅನುಶಾಸನದ ಆಕಾಂಕ್ಷೆಯು ಬರುವುದಿಲ್ಲ.

ಮೊದಲನೆಯ ಸೂತ್ರದಲ್ಲಿ ಸರ್ವಾತ್ತೃತ್ವವೆಂಬ ಲಿಂಗವು ಹೇಳಲ್ಪಟ್ಟಿದೆ. ಎರಡನೆಯ ಸೂತ್ರದಲ್ಲಿ ಪ್ರಕರಣ ಪ್ರಮಾಣವು ಹೇಳಲ್ಪಟ್ಟಿದೆ. ಪ್ರಕರಣಕ್ಕಿಂತ ಲಿಂಗವು ಶ್ರೇಷ್ಠವಾದ್ದರಿಂದ ಸೂತ್ರಕ್ರಮವು ಸ್ಪಷ್ಟವಾಗಿಯೇ ಇದೆ.

*ಅದ್ವೈತಿಗಳ ಅಧಿಕರಣ ಶರೀರ*

ಶಾಂಕರಭಾಷ್ಯದಲ್ಲಿ ಹೀಗೆ ವ್ಯಾಖ್ಯಾನಿಸಿದ್ದಾರೆ -

ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ । ಮೃತ್ಯುರ್ಯಸ್ಯೋಪಸೇಚನಂ ॥ ಖ ಇತ್ಥಾ ವೇದ ಯತ್ರ ಸಃ ॥

ಎಂಬ ಕಾಠಕದಲ್ಲಿರುವ ವಾಕ್ಯವೇ ಈ ಅಧಿಕರಣದ ವಿಷಯ. ಈ ವಾಕ್ಯದಲ್ಲಿ ಬ್ರಾಹ್ಮಣ ಹಾಗೂ ಕ್ಷತ್ರಿಯರನ್ನು ಅನ್ನವೆಂದು ಯಮನನ್ನು ಉಪಸೇಚನವೆಂದು ಹೇಳಿ ಯಾರು ಇವರನ್ನು ತಿನ್ನುತ್ತಾರೋ ಅಂತಹ ವ್ಯಕ್ತಿಯನ್ನು ತಿಳಿದವರು ಯಾರೆಂಬುದನ್ನೂ ಹೇಳಲಾಗಿದೆ.

ಪೂರ್ವಪಕ್ಷ - ಕಾಠಕೋಪನಿಷತ್ತು ಯಮ ಹಾಗೂ ನಚಿಕೇತರ ಸಂವಾದ ರೂಪವಾಗಿದೆ. ಅಗ್ನಿ, ಜೀವ, ಬ್ರಹ್ಮ ಮೂವರ ಪ್ರಸ್ತಾಪ ಇದರಲ್ಲಿದೆ. 'ಅನಶ್ನನ್' ಎಂಬ ಶ್ರುತಿ ಪ್ರಮಾಣದಿಂದ ಬ್ರಹ್ಮನಿಗೆ ಭೋಗ ಇರುವುದಿಲ್ಲ. ಆದ್ದರಿಂದ ಉಳಿದ ಜೀವನಿಗೆ ಅಥವಾ ಅಗ್ನಿಗೆ ಭೋಕ್ತೃತ್ವವನ್ನು ಹೇಳಬೇಕು. ಸೂತ್ರದಲ್ಲಿರುವ 'ಅತ್ತಾ' ಎಂಬ ಪದವು ತಿನ್ನುತ್ತಾನೆಂಬರ್ಥವನ್ನು ಹೇಳುತ್ತದೆ ಹೊರತು ಸಂಹಾರ ಎಂಬ ಅರ್ಥವನ್ನು ಹೇಳುವುದಿಲ್ಲ. ತಿನ್ನುವಿಕೆಯು ಜೀವನಲ್ಲೇ ಬರುತ್ತದೆ.

ಸಿದ್ಧಾಂತ - ಜೀವನಾಗಲಿ ಅಗ್ನಿಯಾಗಲಿ ಬ್ರಾಹ್ಮಣ ಅಥವಾ ಕ್ಷತ್ರಿಯರ ಅನ್ನವನ್ನು ತಿನ್ನಲು ಸಾಧ್ಯವಿಲ್ಲ. ಅಂತಹ ಸಾಮರ್ಥ್ಯ ಜೀವನಲ್ಲಿ ಅಸಂಭಾವಿತ. ಆದ್ದರಿಂದ ಸೂತ್ರದಲ್ಲಿ 'ಅತ್ತಾ' ಎಂಬ ಪದಕ್ಕೆ ಸಂಹಾರ ಮಾಡುತ್ತಾನೆಂಬ ಅರ್ಥವನ್ನೇ ಹೇಳಬೇಕು. ತಿನ್ನುತ್ತಾನೆಂಬ ಅರ್ಥವನ್ನು ಹೇಳಬಾರದು. ಬ್ರಹ್ಮನು ಸಮಸ್ತ ಜಗತ್ತನ್ನು ಸಂಹಾರ ಮಾಡುತ್ತಾನಾದ್ದರಿಂದ ಈ ವಾಕ್ಯದಿಂದ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆ.

*ಅದ್ವೈತಮತ ನಿರಾಕರಣೆ*

ಶಾಂಕರಭಾಷ್ಯದಲ್ಲಿ ಅತ್ತೃತ್ವವು ಭೋಕ್ತೃತ್ವರೂಪವಾಗಿದೆ. ಬ್ರಹ್ಮನು ಭೋಕ್ತೃವಲ್ಲದ ಕಾರಣ ಅತ್ತೃವಲ್ಲ ಎಂದು ಪೂರ್ವಪಕ್ಷ ಮಾಡಿ ಸಂಹಾರಕತ್ವವನ್ನೇ ಅತ್ತೃತ್ವವೆನ್ನಬೇಕು. ಸಂಹಾರಕತ್ವವು ಬ್ರಹ್ಮನ ಧರ್ಮವೆಂದು ಸಿದ್ಧಾಂತ ಮಾಡಲಾಗಿದೆ. ಇದು ತಪ್ಪು. ವಿಚಾರ ಮಾಡಿದರೆ ಸಂಹಾರಕರ್ತೃತ್ವವನ್ನೇ ಶುದ್ಧ ಬ್ರಹ್ಮನಲ್ಲಿ ಹೇಳಲು ಸಾಧ್ಯವಿಲ್ಲ. ಮಾಯಾವಿಶಿಷ್ಟಬ್ರಹ್ಮನಲ್ಲಿ ಸಂಹಾರಕರ್ತೃತ್ವವನ್ನು ಹೇಳಬೇಕು. ಅವನಲ್ಲಿ ಭೋಕ್ತೃತ್ವವೂ ಸಹ ಇದ್ದೇ ಇದೆ. ''ಅನಶ್ನನ್'' ಎಂಬ ಶ್ರುತಿಯು ಶುದ್ಧಬ್ರಹ್ಮನಲ್ಲಿ ಭೋಕ್ತೃತ್ವವನ್ನು ನಿಷೇಧ ಮಾಡುತ್ತಿದೆ. ಹೀಗೆ ಹೇಳಲು ಬರುವುದರಿಂದ ಅತ್ತೃತ್ವವು ಭೋಕ್ತೃತ್ವರೂಪವಲ್ಲ. ಸಂಹಾರ ಕರ್ತೃತ್ವವೆಂದು ಸಿದ್ಧಾಂತ ಮಾಡುವುದು ಹೇಗೆ ಸರಿ?

ಮತ್ತು ಸೂತ್ರದಲ್ಲಿ ಹೇಳಲ್ಪಟ್ಟ ಪ್ರತಿಜ್ಞಾವಾಕ್ಯದಿಂದ ಅಥವಾ ಹೇತುವಾಕ್ಯದಿಂದ ಸೂತ್ರಕ್ಕೆ ಆನುಗುಣ್ಯವೂ ಬರುವುದಿಲ್ಲ. ಆದರೆ ನಾವು ಉಲ್ಲೇಖಿಸಿದ 'ಸರ್ವಂ ವಾ ಅತ್ತಿ' ಎಂಬ ವಿಷಯವಾಕ್ಯದಲ್ಲಿ 'ಅತ್ತಾ' ಎಂಬ ಪದವಿದೆ. ಮತ್ತು 'ಸರ್ವಂ' ಎಂಬ ಪದವಿದೆ. ಇವುಗಳಿಂದ ಸೂತ್ರದಲ್ಲಿರುವ ಪ್ರತಿಜ್ಞಾಭಾಗ ಹಾಗೂ ಹೇತು ವಾಕ್ಯಗಳಿಗೆ ನೇರವಾಗಿ ಆನುಗುಣ್ಯವನ್ನು ಹೇಳಬಹುದು.

ಅದ್ವೈತಿಗಳು 'ಪ್ರಕರಣಾಚ್ಚ' ಎಂಬ ಎರಡನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ - ಈ ಮಂತ್ರಕ್ಕಿಂತ ಕೆಲವು ಮಂತ್ರಗಳ ಹಿಂದೆ 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' ಎಂದು ಬ್ರಹ್ಮನ ಪ್ರಸ್ತಾಪವಿರುವುದರಿಂದ ಈ ಪ್ರಕರಣದಿಂದ ಬ್ರಹ್ಮನೇ 'ಅತ್ತಾ' ಎಂದು ನಿರ್ಧಾರವಾಗುತ್ತದೆ.

''ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್'' ಎಂಬ ವಾಕ್ಯದ ನಂತರ ''ನ ಹನ್ಯತೇ ಹನ್ಯಮಾನೇಽಪಿ'' ಎಂಬುದಾಗಿ ಜೀವನೂ ಸಹ ಪ್ರಸ್ತುತನಾಗಿದ್ದಾನೆ. ಆದ್ದರಿಂದ ಬ್ರಹ್ಮನೇ ಈ ಪ್ರಕರಣ ಪ್ರತಿಪಾದ್ಯನೆಂದು ಹೇಗೆ ನಿರ್ಣಯಿಸುತ್ತೀರಿ ?

ರಾಮಾನುಜರು ಈ ಎರಡು ಸೂತ್ರಗಳನ್ನು ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಿಲ್ಲ. ಗುಹಾಧಿಕರಣದಲ್ಲೇ ಸೇರಿಸುತ್ತಾರೆ. ಆದ್ದರಿಂದ ಗ್ರಂಥಕಾರರು ರಾಮಾನುಜ ಮತವನ್ನು ಮುಂದೆಯೇ ನಿರಾಕರಿಸುತ್ತಾರೆ.

*ಟೀಕೆಯ ಕಠಿಣಪದಾರ್ಥ*

'ಸಃ ಯದ್ಯದೇವಾಽಸೃಜತ' ಎಂಬ ಬೃಹದಾರಣ್ಯಕ ವಾಕ್ಯವು ಈ ಅಧಿಕರಣಕ್ಕೆ ವಿಷಯಕವಾಗಿದೆ. ಈ ವಾಕ್ಯದಿಂದ ಅದಿತಿದೇವಿಯು ಪ್ರತಿಪಾದ್ಯಳಾದರೆ 'ಸಃ' ಎಂಬ ಪುಲ್ಲಿಂಗ ಪ್ರಯೋಗವು ಹೇಗೆ ಕೂಡುತ್ತದೆ. 'ಸಾ' ಎಂದು ಪ್ರಯೋಗಿಸಬೇಕಲ್ಲವೇ? ಎಂದರೆ ಹೌದು. ಆದರೆ ಪುರುಷ ಸಾಮರ್ಥ್ಯವನ್ನು ಸ್ತ್ರೀಯಾದ ಅದಿತಿದೇವಿಯು ಪಡೆದಿರುವುದರಿಂದ ಅವಳಲ್ಲಿ ಪುಲ್ಲಿಂಗ ಪ್ರಯೋಗವು ಕೂಡುತ್ತದೆ. ಗೀತೆಯಲ್ಲಿಯೂ ಸಹ ಲಕ್ಷ್ಮಿಯಲ್ಲಿ ಕೂಟಸ್ಥಃ ಎಂಬ ಪುಲ್ಲಿಂಗ ಪ್ರಯೋಗವು ಕಾಣಿಸುತ್ತದೆ. ಆದ್ದರಿಂದ ಅದಿತಿಗೂ 'ಸಃ' ಎಂದು ಹೇಳಿದ್ದು ತಪ್ಪಲ್ಲ. ಹೀಗೆ ಶ್ರೀಮದಾಚಾರ್ಯರು ಭಾಷ್ಯದಲ್ಲಿ ಪ್ರಶ್ನಿಸಿಕೊಂಡು ಉತ್ತರಿಸಿದ್ದಾರೆ.

ತತ್ತ್ವಪ್ರಕಾಶಿಕೆ ಹಾಗೂ ಚಂದ್ರಿಕೆಯಲ್ಲಿ ಭಾಷ್ಯದಲ್ಲಿ ಮಾಡಿಕೊಂಡ ಪ್ರಶ್ನೆಯು ಸಮಂಜಸವೋ? ಅಲ್ಲವೋ ? ಎಂದು ವಿಮರ್ಶಿಸಿ ಆಚಾರ್ಯರ ಪ್ರಶ್ನೆಯನ್ನು ಸಮರ್ಥಿಸಿದ್ದಾರೆ. 'ಸಃ ಯದ್ಯದೇವ' ಎಂಬ ವಾಕ್ಯದ

ಹಿಂದೆ ಸಂವತ್ಸರನೆನಿಸಿದ ಚತುರ್ಮುಖನು ಪ್ರಸ್ತುತನಾಗಿದ್ದಾನೆ. ಅವನ ಪರಾಮರ್ಶವನ್ನೇ 'ಸಃ ' ಎಂಬುದರಿಂದ ಮಾಡಬೇಕು. ಹೀಗಿರುವಾಗ ಪುಲ್ಲಿಂಗಪ್ರಯೋಗ ಹೇಗೆ ? ಎಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲವೆಂಬ ಶಂಕೆ ಬರುತ್ತದೆ. ಆದರೆ ಮೃತ್ಯುವೆನಿಸಿದ ಅದಿತಿದೇವಿಯೇ ಹಿಂದೆ ಪ್ರಸಕ್ತಳಾಗಿದ್ದಾಳೆ. ಅವಳ ಪರಾಮರ್ಶವನ್ನೇ ಇಲ್ಲಿ 'ಸಃ' ಎಂಬ ಪದದಿಂದ ಮಾಡಬೇಕು. ಆದ್ದರಿಂದ ಆಚಾರ್ಯರು ಮಾಡಿಕೊಂಡ ಪ್ರಶ್ನೆ ಸಮಂಜಸವೇ ಆಗಿದೆ.

# ಗುಹಾಧಿಕರಣ

*ಅವಾಂತರ ಸಂಗತಿ ನಿರೂಪಣೆ*

ಗುಹಾಧಿಕರಣದಲ್ಲಿ ಕರ್ಮಫಲಭೋಕ್ತೃತ್ವವೆಂಬ ಲಿಂಗವನ್ನು ಸಮನ್ವಯ ಮಾಡುತ್ತಿದ್ದಾರೆ. ಅತ್ತೃತ್ವದಂತೆ ಇದೂ ಸಹ ಕ್ರಿಯಾರೂಪವೇ ಆಗಿದೆ. ಅಷ್ಟೇ ಅಲ್ಲದೆ ಅತ್ತೃತ್ವದ ವಿಶೇಷಧರ್ಮವೂ ಆಗಿದೆ. ಆದರೆ ಹಿಂದಿನ ಅಧಿಕರಣದಿಂದ ಈ ಲಿಂಗವು ನಿರ್ಣಯವಾಗುವುದಿಲ್ಲ. ಏಕೆಂದರೆ 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ದ್ವಿವಚನವು ಕೇಳಿಸುತ್ತಿದೆ. ಇಬ್ಬರು ವ್ಯಕ್ತಿಗಳು ಭೋಕ್ತೃಗಳಾದರೆ ಮಾತ್ರ ಈ ದ್ವಿವಚನವು ಉಪಪನ್ನವಾಗಲು ಸಾಧ್ಯವೆಂಬ ಆಕ್ಷೇಪ ಬರುತ್ತದೆ. ಇದರ ಪರಿಹಾರಕ್ಕಾಗಿ ಈ ಅಧಿಕರಣ ಹೊರಟಿದೆ.

ಹಿಂದಿನ ಅಧಿಕರಣದಲ್ಲಿ ಅದಿತಿಯೆಂಬ ಪ್ರಕೃತಿಶ್ರುತಿಯ ಬಲದಿಂದ ಪೂರ್ವಪಕ್ಷವು ಪ್ರಾಪ್ತವಾಗಿತ್ತು. ಈ ಅಧಿಕರಣದಲ್ಲಿ ದ್ವಿವಚನವೆಂಬ ಪ್ರತ್ಯಯಶ್ರುತಿಯ ಬಲದಿಂದ ಪೂರ್ವಪಕ್ಷವು ಪ್ರಾಪ್ತವಾಗುತ್ತಿದೆ. ಪ್ರಕೃತಿ ವಿಚಾರದ ಅನಂತರ ಪತ್ಯಯದ ವಿಚಾರವೂ ಸಂಗತವಾಗಿದೆಯೆಂದು ಅವಾಂತರಸಂಗತಿಯನ್ನು ಈ ಅಧಿಕರಣಕ್ಕೆ ತಿಳಿಯಬೇಕು. ಪ್ರತ್ಯುದಾಹರಣ ರೂಪಸಂಗತಿ ಹಾಗೂ ಆಕ್ಷೇಪಿಕೀಸಂಗತಿಗಳು ಮುಂದಿನ ವಿಷಯಭಾಗದಿಂದ ಸ್ವತಃ ಸ್ಪಷ್ಟವಾಗುತ್ತದೆ.

*ಸಂಶಯ ಪರಂಪರೆ*

ಒಂದು ವೇಳೆ 'ಅನಶ್ನನ್' ಇತ್ಯಾದಿ ಶ್ರುತಿಯು ಭೋಕ್ತೃತ್ವಸಾಮಾನ್ಯವನ್ನು ವಿಷ್ಣುವಿನಲ್ಲಿ ನಿಷೇಧಿಸುವುದಾದರೆ, ಪ್ರಾತಿಪದಿಕಾರ್ಥಭೋಕ್ತೃತ್ವ ಕೂಡುವುದಿಲ್ಲ. ಆದ್ದರಿಂದ 'ಪಿಬತ್' ಎಂಬ ಪ್ರಾತಿಪದಿಕಾರ್ಥ ರೂಪವಾದ ಬಾಧಕವಿರುವುದರಿಂದ ಬ್ರಹ್ಮಶಬ್ದಾದಿಗಳಿಗೆ ಮುಖ್ಯಾರ್ಥವನ್ನು ಹೇಳಲಾಗದು. ಆದ್ದರಿಂದ ಜೀವೇಶ್ವರರೇ ಕರ್ಮಫಲಭೋಕ್ತೃಗಳಾಗಿದ್ದಾರೆಂಬುದು ಪೂರ್ವಪಕ್ಷದ ಫಲ.

ಒಂದು 'ಅನಶ್ನನ್' ಇತ್ಯಾದಿ ಶ್ರುತಿಯು ಭೋಕ್ತೃತ್ವ ವಿಶೇಷವನ್ನು ನಿಷೇಧಿಸುವುದಾದರೆ ಆವಾಗ ಬ್ರಹ್ಮನಲ್ಲಿ ಶುಭಫಲಭೋಕ್ತೃತ್ವವು ಯುಕ್ತವಾಗುತ್ತದೆ. ಯಾವುದೇ ಬಾಧಕವಿಲ್ಲದ ಕಾರಣ ಬ್ರಹ್ಮಶಬ್ದಾದಿಗಳಿಗೆ ಮುಖ್ಯಾರ್ಥವನ್ನು ಹೇಳಬಹುದು. ಆದ್ದರಿಂದ 'ಪಿಬಂತೌ' ಎಂಬ ಶ್ರುತಿಯಿಂದ ಭಗವಂತನ ಎರಡು ರೂಪವಿಶೇಷಗಳೇ ಪ್ರತಿಪಾದ್ಯಗಳಾದ್ದರಿಂದ ಭಗವಂತನೇ ಕರ್ಮಫಲಭೋಕ್ತೃವಾಗುತ್ತಾನೆಂಬುದು ಸಿದ್ಧಾಂತದ ಫಲ.

*ಪ್ರಬಲವಾದ ಪೂರ್ವಪಕ್ಷ*

ಈ ಅಧಿಕರಣದ ಪೂರ್ವಪಕ್ಷ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಅತ್ತೃತ್ವವನ್ನು ಬ್ರಹ್ಮನ ಧರ್ಮವೆಂದು ಒಪ್ಪೋಣ. ಏಕೆಂದರೆ ಪ್ರಾತಿಪದಿಕಾರ್ಥವೆನಿಸಿದ ಸಂಹರ್ತೃತ್ವವಾಗಲಿ ಪ್ರತ್ಯಯಾರ್ಥವೆನಿಸಿದ ಏಕತ್ವವಾಗಲಿ ಬ್ರಹ್ಮನಲ್ಲಿ ಯುಕ್ತವಾಗುತ್ತದೆ. ಆದರೆ ಈ ಅಧಿಕರಣದಲ್ಲಿ ಪ್ರಾತಿಪದಿಕಾರ್ಥವೆನಿಸಿದ ಕರ್ಮಫಲಭೋಕ್ತೃತ್ವವಾಗಲಿ,

ಪ್ರತ್ಯಯಾರ್ಥವೆನಿಸಿದ ದ್ವಿತ್ವವಾಗಲಿ ಬ್ರಹ್ಮನಲ್ಲಿ ಕೂಡುವುದಿಲ್ಲ. ವಸ್ತುತಃ ಭಗವಂತನಲ್ಲಿ 'ದ್ವಿತ್ವ' 'ಅನೇಕತ್ವ' ಮೊದಲಾದ ಸಂಖ್ಯೆಗಳು ಅನುಪಪನ್ನವಾಗುವುದಿಲ್ಲ ಎಂಬ ವಿಚಾರವನ್ನು ಆನಂದಮಯಾಧಿಕರಣದಲ್ಲಿಯೇ ಹೇಳಿದ್ದಾಗಿದೆ. ಆದರೆ ನ್ಯಾಯವಿವರಣದಲ್ಲಿ 'ದ್ವಿತ್ವಾದಿ ಸಂಖ್ಯೆಗಳನ್ನು ಆನಂದಮಯಾಧಿಕರಣದಲ್ಲಿ ಸಮರ್ಥನೆ ಮಾಡದ ಕಾರಣ ಈ ಅಧಿಕರಣವು ಹೊರಟಿದೆ' ಎಂದು ಹೇಳಿದ್ದಾರೆ. ಆನಂದಮಯಾಧಿಕರಣದಲ್ಲಿ ಕೇವಲ ಅನ್ನಮಯಾದಿಶಬ್ದಗಳು ಭಿನ್ನಭಿನ್ನವಾದ್ದರಿಂದ ಬ್ರಹ್ಮನೂ ಸಹ ಭಿನ್ನನಾಗಬೇಕಲ್ಲವೇ ? ಎಂಬ ಪೂರ್ವಪಕ್ಷವನ್ನಷ್ಟೇ ನಿರಾಕರಿಸಲಾಗಿದೆ ಹೊರತು ಸಂಖ್ಯಾಭೇದದಿಂದ ಬ್ರಹ್ಮನ ಭೇದವನ್ನು ಆಶಂಕಿಸಿಲ್ಲ. ಪ್ರಕೃತ ಈ ಅಧಿಕರಣದಲ್ಲಿ ಸಂಖ್ಯಾಭೇದದಿಂದ ಬ್ರಹ್ಮನ ಭೇದವು ಆಕ್ಷಿಪ್ತವಾಗುತ್ತಿದೆ ಎಂದು ಪೂರ್ವಪಕ್ಷ ಮಾಡಿದ್ದು ಯುಕ್ತವಾಗಿದೆ.

*ದ್ವಿವಚನಶ್ರುತಿ ನಿರವಕಾಶವೆಂದು ಪೂರ್ವಪಕ್ಷ*

ಆನಂದಮಯಾಧಿಕರಣದಿಂದ ಗುಹಾಧಿಕರಣವು ಗತಾರ್ಥವಾಗುವುದಿಲ್ಲವೆಂದು ಮತ್ತೊಂದು ಬಗೆಯಲ್ಲಿಯೂ ತಿಳಿಯಬಹುದು - ಅನ್ನಮಯಾದಿ ಶಬ್ದಗಳೆಲ್ಲವು ಬ್ರಹ್ಮನ ಅವಯವಗಳನ್ನು ಪ್ರತಿಪಾದಿಸುತ್ತಿವೆ. ಆದ್ದರಿಂದ ಬ್ರಹ್ಮನನ್ನು ಅನ್ನಮಯಾದಿ ಶಬ್ದಗಳಿಂದ ಕರೆಯಲಾಗದೆಂಬ ಪೂರ್ವಪಕ್ಷವನ್ನು ಆನಂದಮಯಾಧಿಕರಣದಲ್ಲಿ ಪರಿಹರಿಸಲಾಗಿದೆ. ಆದರೆ ಈ ಅಧಿಕರಣದಲ್ಲಿ ಅನೇಕತ್ವ ಸಂಖ್ಯೆಯಿಂದ ಒಬ್ಬನೇ ಬ್ರಹ್ಮನು ಅನ್ನಮಯಾದಿಶಬ್ದಗಳಿಂದ ಪ್ರತಿಪಾದ್ಯನಾಗಲಾರನೆಂಬ ಆಕ್ಷೇಪವನ್ನು ಪರಿಹರಿಸಲಾಗಿದೆ. ಆದ್ದರಿಂದ ಈ ಅಧಿಕರಣದಲ್ಲಿ ದ್ವಿತ್ವ ಅನೇಕತ್ವ ಮೊದಲಾದ ಸಂಖ್ಯೆಗಳಿಂದ ಬ್ರಹ್ಮನು ಶ್ರುತಿಪ್ರತಿಪಾದ್ಯನಲ್ಲ ಎಂಬ ಪೂರ್ವಪಕ್ಷವು ನಿರವಕಾಶವಾಗಿದೆಯೆಂದು ಸಿದ್ಧವಾಯಿತು.

೧. 'ಪಿಬಂತೌ' ಎಂಬಲ್ಲಿರುವ ದ್ವಿವಚನವು ಶಬ್ದಸಾಧುತ್ವ ಮಾತ್ರದಿಂದ ನಿವಿಷ್ಟವಾಗಿದೆಯೆಂದು ಹೇಳಬೇಕು.

೨. ವಸ್ತುತಃ ಏಕವಚನಾಂತ ಶಬ್ದವಾಗಿದ್ದರೂ ಸಹ ಛಾಂದಸವಾದ್ದರಿಂದ ದ್ವಿವಚನವಾಗಿದೆ.

೩. ದ್ವಿತ್ವವನ್ನು ಬೋಧಿಸಿದರೂ ಸಹ ಉದ್ದೇಶದಲ್ಲಿ ವಿಶೇಷಣವಾಗಿದ್ದರಿಂದ ದ್ವಿತ್ವವನ್ನು ವಿವಕ್ಷಿಸಬೇಕಾಗಿಲ್ಲ.

೪. ಹಿಂದಿನ ಮುಂದಿನ ವಾಕ್ಯಗಳಲ್ಲಿ ಏಕವಚನಾಂತವಾದ ಪದಗಳೇ ಪ್ರಸಕ್ತವಾಗದ್ದರಿಂದ ಅವುಗಳಿಂದ ಸಂದಷ್ಟವಾದ 'ಪಿಂಬತೌ' ಎಂಬುದೂ ಸಹ ಏಕತ್ವವನ್ನೇ ತಿಳಿಸುತ್ತದೆ. ಹೊರತು ದ್ವಿವಚನವಿರುವುದರಿಂದ ದ್ವಿತ್ವವನ್ನು ತಿಳಿಸುವುದಿಲ್ಲ.

೫. ದ್ವಿವಚನಕ್ಕೆ ಪ್ರತಿರೂಪಕವಾದ ಅವ್ಯವಾಗಿದೆ. ಅಂದರೆ ದ್ವಿವಚನದಂತೆ ಕಾಣಿಸುತ್ತದೆ ಹೊರತು ದ್ವಿವಚನ ಪ್ರತ್ಯಯವಲ್ಲ.

ಈ ಐದು ಕಾರಣಗಳಿಂದ ದ್ವಿವಚನಶ್ರುತಿಯನ್ನು ಸಾವಕಾಶವೆನ್ನಬಹುದು. ಆದರೆ ಬಾಧಕವಿಲ್ಲದ ಕಾರಣ ಶಬ್ದಸಾಧುತ್ವಕ್ಕೋಸ್ಕರ ದ್ವಿವಚನ ಪ್ರತ್ಯಯವೆಂಬ ಮೊದಲನೆಯ ಪಕ್ಷವು ನಿರಾಕರಣವಾಗುತ್ತದೆ. ಮತ್ತು ಬಾಧಕವಿಲ್ಲದೇ ವಿಭಕ್ತಿವ್ಯತ್ಯಾಸವನ್ನು ಮಾಡಬಾರದು. ಆದ್ದರಿಂದ ಎರಡನೇ ಪಕ್ಷವು ನಿರಾಕೃತವಾಗುತ್ತದೆ. 'ಪಿಬಂತೌ' ಎಂಬುದನ್ನು ಉದ್ದೇಶವೆಂದೇ ಹೇಳಲಾಗದ ಕಾರಣ ಉದ್ದೇಶವಿಶೇಷಣವಾದ್ದರಿಂದ ದ್ವಿತ್ವವು ಅವಿವಕ್ಷಿತವೆಂಬ ಮೂರನೇ ಪಕ್ಷವು ನಿರಾಕೃತವಾಗುತ್ತದೆ. ಅತಿದೇಶದಿಂದ ಪ್ರಾಪ್ತವಾಗಿದ್ದರೆ ಮಾತ್ರ ಏಕತ್ವ ಸಂಖ್ಯೆಯನ್ನು ಊಹಿಸಬಹುದಿತ್ತು. ಆದರೆ ಇದೇ ಮೊದಲು ಶ್ರುತಿಯಲ್ಲಿ 'ಪಿಬಂತೌ' ಎಂದು ಪ್ರಸಕ್ತವಾಗುತ್ತಿರುವುದರಿಂದ ನಾಲ್ಕನೇ ಪಕ್ಷವು ನಿರಾಕೃತವಾಗುತ್ತದೆ. 'ಪಿಬಂತೌ' ಎಂಬ ಪದವು ಯೌಗಿಕವಾದ್ದರಿಂದ ದ್ವಿವಚನ ಪ್ರತಿರೂಪಕವಾದ ಅವ್ಯಯವೆಂದು ಹೇಳಲಾಗದ

ಕಾರಣ ಐದನೇ ಪಕ್ಷವು ನಿರಾಕೃತವಾಗುತ್ತದೆ. ಆದ್ದರಿಂದ 'ಋತಂ ಪಿಬಂತೌ' ಎಂಬ ಶ್ರುತಿಯು ಜೀವೇಶ್ವರರನ್ನೇ ಪ್ರತಿಪಾದಿಸುತ್ತದೆ. ಗುಹಾಪ್ರವಿಷ್ಟತ್ವ ಬ್ರಹ್ಮಶಬ್ದಾದಿಗಳು ಜೀವವಿಷಯದಲ್ಲಿ ಬಾಧಕವಾಗಿರುವುದಿಲ್ಲ.

*ಸಂದಂಶ ನ್ಯಾಯದಿಂದ ವಿಷ್ಣುವೇ ದ್ವಿವಚನಶ್ರುತಿ ಪ್ರತಿಪಾದ್ಯನೆಂದು ಸಿದ್ಧಾಂತ*

ಸಿದ್ಧಾಂತವನ್ನು ಮಾಡುತ್ತಿದ್ದಾರೆ. ಹೃದಯಗುಹಾವಿಷ್ಟತ್ವ, ಬ್ರಹ್ಮಶಬ್ದ, ಸೇತುತ್ವ, ಅಕ್ಷರತ್ವ, ಪರತ್ವ, ಅಭಯತ್ವ ಮೊದಲಾದ ಅನೇಕ ಲಿಂಗಗಳು ವಿಷ್ಣುವಿನಲ್ಲಿ ನಿರವಕಾಶವಾಗಿರುವುದರಿಂದ ವಿಷ್ಣುವೇ ದ್ವಿವಚನಶ್ರುತಿಯಿಂದ ಪ್ರತಿಪಾದ್ಯನಾಗುತ್ತಾನೆ.

ಜೀವ ಹಾಗೂ ಈಶ್ವರ ಇಬ್ಬರಲ್ಲಿಯು ಹೃದಯಗುಹಾನಿಹಿತತ್ವವನ್ನು ಹೇಳಬಹುದು. ಆದರೆ ಮಿಥಿಲಾ ಪಟ್ಟಣದಲ್ಲಿ ಹುಟ್ಟಿದ ರಾಜನಲ್ಲಿ ಮಾತ್ರ 'ಮೈಥಿಲಃ' ಎಂಬ ಪ್ರಯೋಗವಿರುತ್ತದೆ ಹೊರತು ಉಳಿದ ಸಾಮಾನ್ಯ ಪ್ರಜೆಗಳನ್ನು 'ಮೈಥಿಲಃ' ಎಂದು ಯಾರೂ ಸಹ ಹೇಳುವುದಿಲ್ಲ. ಅದರಂತೆ ಜೀವೇಶ್ವರರಿಬ್ಬರು ಹೃದಯದಲ್ಲಿದ್ದರೂ ಈಶ್ವರನನ್ನೇ ಹೃದಯಗುಹಾನಿಹಿತನೆಂದು ಹೇಳಬೇಕು.

ಮತ್ತು ಮುಂದಿನ ವಾಕ್ಯದಲ್ಲಿ ಬ್ರಹ್ಮನಲ್ಲಿ ಪರತ್ವವನ್ನು ವಿಶೇಷಣವನ್ನಾಗಿ ಹೇಳಲಾಗಿದೆ. 'ಏಷ ಸೇತುಃ' ಇತ್ಯಾದಿ ಶ್ರುತಿಗಳು ಸೇತುತ್ವವೇ ಮೊದಲಾದ ವಿಷ್ಣುವಿನ ಲಿಂಗಗಳನ್ನೇ ಹೇಳುತ್ತಿವೆ. ಆದ್ದರಿಂದ ವಿಷ್ಣುವೇ ದ್ವಿವಚನಶ್ರುತಿ ಪ್ರತಿಪಾದ್ಯನೆನ್ನಬೇಕು.

ಮತ್ತೊಂದು ಪ್ರಬಲ ಕಾರಣ - 'ಋತಂ ಪಿಬಂತೌ' ಎಂಬ ಶ್ರುತಿಯು ಯಾವ ಪ್ರಕರಣದಲ್ಲಿದೆಯೋ ಅದರ ಹಿಂದಿನ ಮುಂದಿನ ವಾಕ್ಯಗಳಲ್ಲಿ 'ಯಃ ಸೇತುಃ' 'ಯಸ್ಯ ಬ್ರಹ್ಮ ಕ್ಷತ್ರಂಚ' ಕೇವಲ ವಿಷ್ಣುವೊಬ್ಬನೇ ಪ್ರತಿಪಾದ್ಯನಾಗಿದ್ದಾನೆ. 'ಸಂದಂಶ' ನ್ಯಾಯದಿಂದ ಮಧ್ಯದಲ್ಲಿರುವ ಈ ದ್ವಿವಚನಶ್ರುತಿಯಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂದು ಸುಲಭವಾಗಿ ತಿಳಿಯುವ ವಿಚಾರ.

*ಭೋಕ್ತ್ಯ ಶ್ರೀಹರಿಯೇ ಹೊರತು ಜೀವನಲ್ಲ*

ಪೂರ್ವಪಕ್ಷವನ್ನು ಮಾಡುವಾಗ ಶ್ರೀಹರಿಯಲ್ಲಿ ಭೋಕ್ತೃತ್ವ ಇಲ್ಲವೆಂದು ಸಮರ್ಥಿಸಿದ್ದರು. ಆದರೆ ಅನೇಕ ಸ್ಮೃತಿ ಶ್ರುತಿಗಳು ಭಗವಂತನನ್ನು ಭೋಕ್ತ್ಯವೆಂದೇ ಪ್ರತಿಪಾದಿಸುತ್ತಿವೆ. ಅಷ್ಟೇ ಅಲ್ಲದೆ ಕಣ್ಣು, ಕಿವಿ ಮೊದಲಾದ ಎಲ್ಲ ಇಂದ್ರಿಯಗಳಿಂದಲೂ ಭಗವಂತನು ಸುಖವನ್ನು ಅನುಭವಿಸುತ್ತಾನೆಂದು ಶ್ರುತಿಗಳು ಪ್ರತಿಪಾದಿಸುತ್ತಿವೆ. ಸಾಕ್ಷಾತ್ ಶ್ರೀಕೃಷ್ಣನೇ ಭಗವದ್ಗೀತೆಯಲ್ಲಿ 'ಶ್ರೋತ್ರಂ ಚಕ್ಷುಃ ಸ್ಪರ್ಶನಂಚ' ಎಂಬ ಶ್ಲೋಕದಲ್ಲಿ ಎಲ್ಲಾ ಇಂದ್ರಿಯಗಳಿಂದ ತಾನು ಸುಖವನ್ನು ಅನುಭವಿಸುತ್ತೇನೆಂದು ಹೇಳಿಕೊಂಡಿದ್ದಾನೆ.

ಹಾಗಾದರೆ 'ಅನ್ನಶ್ನನ್ನನ್ಯಃ' ಎಂಬ ಶ್ರುತಿಯು ಭಗವಂತನು ಏನನ್ನೂ ತಿನ್ನಲಾರನೆಂದು ಹೇಳುತ್ತಿದೆಯಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಅನೇಕ ಶ್ರುತಿಸ್ಮೃತಿಗಳು ಸ್ಪಷ್ಟವಾಗಿ ಭೋಕ್ತೃತ್ವವನ್ನು ಪರಮಾತ್ಮನಲ್ಲಿ ಪ್ರತಿಪಾದಿಸುತ್ತಿರುವುದರಿಂದ 'ಅನಶ್ನನ್ನನ್ಯಃ' ಎಂಬ ಒಂದು ಶ್ರುತಿಗೆ ಗೌಣಾರ್ಥವನ್ನು ಮಾಡಬೇಕಾಗುತ್ತದೆ. ಅಂದರೆ ಶುಭಫಲಗಳನ್ನಷ್ಟೇ ಭಗವಂತನು ತಿನ್ನುತ್ತಾನೆ ಹೊರತು, ಅಶುಭ ಕರ್ಮಗಳನ್ನು ಎಂದೂ ಸಹ ತಿನ್ನಲಾರನು. ಅಶುಭಫಲವನ್ನು ತಿನ್ನದ ಕಾರಣ ಶ್ರುತಿಯು 'ಅನಶ್ನನ್' ಎಂದು ಹೇಳುತ್ತಿದೆ.

ಅಥವಾ ಪೂರ್ಣಾನಂದಸ್ವರೂಪಿಯಾದ ಭಗವಂತನು ಆಹಾರದಿಂದ ಉಪಜೀವನ ಮಾಡಲಾರ. ಆಹಾರವನ್ನು ತಿನ್ನುವುದರಿಂದ ಅವನಲ್ಲಿ ಆಧಿಕ್ಯವಾಗಲಿ ತಿನ್ನದಿರುವುದರಿಂದ ನ್ಯೂನತೆಯಾಗಲಿ ಉಂಟಾಗುವುದಿಲ್ಲ.

ಹೀಗೆ ವಿಷಯಪದಾರ್ಥಗಳ ಭೋಗದಲ್ಲಿ ರಾಗವಿಲ್ಲದ್ದರಿಂದ ಶ್ರುತಿಯು 'ಅನಶ್ನನ್' ಎಂದು ಹೇಳುತ್ತಿದೆ. ವಿಚಾರ ಮಾಡಿದರೆ 'ಋತಂ ಪಿಬಂತೌ' ಎಂಬ ಶ್ರುತಿಯು ಜೀವನ ಭೋಕ್ತೃತ್ವಕ್ಕೆ ಮಾರಕವಾಗಿದೆ. ಏಕೆಂದರೆ 'ಋತ' ಶಬ್ದಕ್ಕೆ ಪುಣ್ಯಫಲವೆಂದರ್ಥ. ಜೀವನು ಪಾಪದ ಫಲವನ್ನೂ ಸಹ ಉಣ್ಣುವುದರಿಂದ ಕೇವಲ ಪುಣ್ಯದ ಫಲವನ್ನು ತಿನ್ನಲು ಅವನಿಗೆ ಸಾಮರ್ಥ್ಯವಿಲ್ಲ. ಇಂತಹ ಜೀವನನ್ನು 'ಋತಂ ಪಿಬಂತೌ' ಎಂಬ ಶ್ರುತಿಯು ಪ್ರತಿಪಾದಿಸಲು ಹೇಗೆ ಸಾಧ್ಯ ? ಈ ಎಲ್ಲ ಕಾರಣಗಳಿಂದ 'ಋತಂ ಪಿಬಂತೌ' ಎಂಬ ಶ್ರುತಿಯಿಂದ ಪರಮಾತ್ಮನೇ ಪ್ರತಿಪಾದ್ಯನೆಂಬ ವಿಚಾರವು ಮನದಟ್ಟಾಗುತ್ತದೆ.

### *ದ್ವಿವಚನವೂ ಸಹ ಬಾಧಕವಲ್ಲ*

ಭೋಕ್ತೃತ್ವವು ಈಶ್ವರನಲ್ಲಿರುವುದರಿಂದ ಅಭೋಕ್ತೃತ್ವವು ಬಾಧಕವಾಗುವುದಿಲ್ಲವೆಂದು ಸಮರ್ಥಿಸಿದ್ದಾಯಿತು. ಅದರಂತೆ ದ್ವಿವಚನವೂ ಸಹ ಬಾಧಕವಾಗುವುದಿಲ್ಲ. ಏಕೆಂದರೆ ಪೂರ್ವಮೀಮಾಂಸೆಯಲ್ಲಿ ಅನೇಕ ಹೆಂಡಂದಿರಿರುವ ಯಾಗದಲ್ಲಿಯೂ 'ಪತ್ನೀಂ ಸನ್ನಹ್ಯ'' ಎಂಬುದಾಗಿ ಏಕವಚನದಲ್ಲಿಯೇ ಪ್ರಯೋಗಿಸಿರುವುದು ಕಂಡಿದೆ. ಮತ್ತು 'ಅದಿತಿಃ ಪಾಶಾನ್' ಎಂಬುದಾಗಿ ಒಂದೇ ಹಗ್ಗವಿರುವ ಯಾಗದಲ್ಲಿ ಬಹುವಚನ ಪ್ರಯೋಗ ಮಾಡುವುದು ಕಂಡಿದೆ. ಅದರಂತೆ ಒಬ್ಬನೇ ಈಶ್ವರನಲ್ಲಿ 'ಪಿಬಂತೌ' ಎಂಬುದಾಗಿ ದ್ವಿವಚನ ಪ್ರಯೋಗವನ್ನು ಮಾಡಬಹುದು.

### *ಪ್ರಾತಿಪದಿಕಾರ್ಥವಾದ ಸಂಖ್ಯೆಗೆ ಅನ್ವಯ ಮಾಡಬಹುದು*

'ದ್ವಯೋಃ ಯಜಮಾನಯೋಃ ಪ್ರತಿಪದಮ್ ಕುರ್ಯಾತ್' ಎಂಬುದು ಕರ್ಮಮೀಮಾಂಸೆಯ ಸೂತ್ರ. ಯಾವ ಜ್ಯೋತಿಷ್ಟೋಮಯಾಗದಲ್ಲಿ 'ಯುವಂ ಹಿ ಸ್ಥಃ ಸ್ವರ್ಪತಿ' ಎಂಬ ಮಂತ್ರವನ್ನು ಮೊದಲು ಉಚ್ಚರಿಸಬೇಕೆಂದು ಹೇಳುತ್ತಿದ್ದಾರೋ ಆ ಜ್ಯೋತಿಷ್ಟೋಮಯಾಗದಲ್ಲಿ ಇಬ್ಬರು ಯಜಮಾನರಿಗೆ ಅವಕಾಶವೇ ಇರುವುದಿಲ್ಲ. ಆದರೆ 'ದ್ವಯೋಃ ಯಜಮಾನಯೋಃ' ಎಂಬ ಇಬ್ಬರು ಯಜಮಾನರನ್ನು ಕರ್ತೃವನ್ನಾಗಿ ಸೂತ್ರವು ಹೇಳುತ್ತಿದೆ. ಆದ್ದರಿಂದ ಅನಿವಾರ್ಯವಾಗಿ ಮತ್ತೊಂದು ಯಾಗದಲ್ಲಿ ಇದರ ಸಾರ್ಥಕ್ಯವನ್ನು ಸಂಪಾದಿಸಬೇಕು. ಆದರೆ 'ಋತಂ ಪಿಬಂತೌ' ಎಂಬಲ್ಲಿ ಮತ್ತೊಂದೆಡೆ ದ್ವಿತ್ವದ ಅನ್ವಯ ಮಾಡುವ ಅವಶ್ಯಕತೆ ಇರುವುದಿಲ್ಲ. ಏಕೆಂದರೆ ಇಬ್ಬರು ಯಜಮಾನರು ಜ್ಯೋತಿಷ್ಟೋಮ ಯಾಗದಲ್ಲಿ ಇರಲು ಸಾಧ್ಯವಿಲ್ಲ. ಆದ್ದರಿಂದ 'ದ್ವಿತ್ವ' ಸಂಖ್ಯೆಗೆ ಅನ್ವಯ ಮಾಡಲು ಅಲ್ಲಿ ಅವಕಾಶವಿಲ್ಲ. ಆದರೆ 'ಋತಂ ಪಿಬಂತೌ' ಎಂಬಲ್ಲಿ ಬ್ರಹ್ಮನ ಎರಡು ರೂಪಗಳಲ್ಲಿ ಅನ್ವಯ ಮಾಡಬಹುದಾದ್ದರಿಂದ ದೋಷವಿಲ್ಲ.

### *ನಿರ್ಜ್ಞಾತ ವಿರುದ್ಧವಿಶೇಷಣತ್ವವೇ ಅವಿವಕ್ಷೆಗೆ ಪ್ರಯೋಜಕ*

ಪೂರ್ವಮೀಮಾಂಸೆಯಲ್ಲಿ 'ಪ್ರೋದ್ಗಾತೃಣಾಂ' ಎಂಬ ಶ್ರುತಿಯನ್ನು ವ್ಯಾಖ್ಯಾನಿಸುವಾಗ ಬಹುವಚನದ ಅರ್ಥವನ್ನು ಬಿಡಬಾರದೆಂದು ವಿವಕ್ಷಿಸಿ 'ಉದ್ಗಾತೃ' ಶಬ್ದಕ್ಕೆ ಹೋತೃ ಪ್ರಸ್ತೋತ್ರಾದಿಗಳಲ್ಲಿ ಲಕ್ಷಣಾ ಮಾಡುವುದು ಕಂಡಿದೆ. ಅದರಂತೆ 'ಋತಂ ಪಿಬಂತೌ' ಎಂಬಲ್ಲಿಯೂ ದ್ವಿವಚನದಿಂದ ತಿಳಿಯುವ ದ್ವಿತ್ವವನ್ನು ಕೂಡಿಸುವುದಕ್ಕಾಗಿ 'ಪಿಬತ್' ಪ್ರಾತಿಪದಿಕಕ್ಕೆ ಲಕ್ಷಣಾ ಮಾಡಬಹುದಲ್ಲವೇ ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ.

ಆದರೆ 'ಉದ್ಗಾತೃ' ಶಬ್ದವಿರುವ ಪ್ರಕರಣದಲ್ಲಿಯೇ ಪ್ರಸ್ತೋತ್ರಾದಿಗಳು ಪ್ರಸ್ತುತರಾದ್ದರಿಂದ ಅವರಲ್ಲಿ ಲಕ್ಷಣಾವನ್ನು ಮಾಡಬಹುದು. ಮತ್ತು 'ಉದ್ಗಾತೃ' ಶಬ್ದಕ್ಕೆ ಸಾಮಗಾನ ಮಾಡುವವರು ಎಂದರ್ಥ. ಪ್ರಸ್ತೋತ್ರಾದಿಗಳೂ

ಸಹ ಸಾಮವೇದವನ್ನು ಅಧ್ಯಯನ ಮಾಡಿರುವ ಪ್ರಯುಕ್ತ ಅವರಲ್ಲಿ ಲಕ್ಷಣಾ ಮಾಡಬಹುದು. ಆದರೆ 'ಪಿಬತ್' ಪ್ರಾತಿಪದಿಕಕ್ಕೆ ಜೀವನಲ್ಲಿ ಲಕ್ಷಣಾ ಮಾಡಲು ಸಾಧ್ಯವಿಲ್ಲ. ಏಕೆಂದರೆ ಬ್ರಹ್ಮಪ್ರಕರಣವಾಗಿರುವುದರಿಂದ ಜೀವನ ಪ್ರಸಕ್ತಿಯೇ ಇರುವುದಿಲ್ಲ. ಮತ್ತು ಲಕ್ಷಣಾ ಮಾಡಲು ಉಪಯೋಗಿಯಾದ ಅಸಾಧಾರಣವಾದ ಯಾವುದೇ ಧರ್ಮಗಳೂ ಸಹ ಜೀವನಲ್ಲಿ ಇರುವುದಿಲ್ಲ. ಈ ಕಾರಣದಿಂದ ಪೂರ್ವಮೀಮಾಂಸಾದೃಷ್ಟಾಂತವು ವಿಷಮವಾಗಿದೆ.

ಮತ್ತು ಪೂರ್ವಪಕ್ಷ ಮಾಡುವಾಗ ಉದ್ದೇಶವಿಶೇಷಣವು ಅವಿವಕ್ಷಿತವಾಗಿರುತ್ತದೆ. ವಿಧೇಯವಿಶೇಷಣವು ವಿವಕ್ಷಿತವಾಗಿರುತ್ತದೆಂದು ಹೇಳಿದ್ದರು. ಇದೂ ಸಹ ತಪ್ಪು. 'ಅಗ್ನೀನಾದಧೀತ' ಎಂಬಲ್ಲಿ ಉದ್ದೇಶವಿಶೇಷಣವನ್ನೂ ಸಹ ಪೂರ್ವಮೀಮಾಂಸಕರು ವಿವಕ್ಷಿಸಿದ್ದಾರೆ. 'ಸತ್ರಾದುದವಸಾಯ ಪೃಷ್ಠಶಮನೀಯೇನ ಯಜರೇನ್' ಎಂಬಲ್ಲಿ ಹೃದಯವಿಶೇಷಣವನ್ನು ಅವಿವಕ್ಷಿತವೆಂದಿದ್ದಾರೆ. ಆದ್ದರಿಂದ ನಿರ್ಜ್ಞಾತವಿರುದ್ಧವಿಶೇಷಣವಾಗಿದ್ದನ್ನೇ ಅವಿವಕ್ಷಿತವೆಂದು ಹೇಳಬೇಕು. ಅಂದರೆ ವಿರುದ್ಧವಾದ ಸಂಖ್ಯೆಯು ಮೊದಲೇ ತಿಳಿದಿದ್ದರೆ ಅವಿವಕ್ಷಿತವಾಗುತ್ತದೆಂದು ಅಭಿಪ್ರಾಯ. 'ಗುಹಾಂ ಪ್ರವಿಷ್ಟೌ' ಎಂಬಲ್ಲಿ ದ್ವಿತ್ವಸಂಖ್ಯೆಯು ತಿಳಿಯುವ ಮೊದಲೇ ಬ್ರಹ್ಮನಲ್ಲಿ ಏಕತ್ವ ಸಂಖ್ಯೆಯು ನಿರ್ಣೀತವಾಗಿದೆ. ಆದ್ದರಿಂದ 'ಗುಹಾಂ ಪ್ರವಿಷ್ಟೌ' ಎಂಬಲ್ಲಿ ದ್ವಿವಚನದಿಂದ ತಿಳಿಯುವ ದ್ವಿತ್ವಸಂಖ್ಯೆಯನ್ನು ವಿವಕ್ಷಿಸಬಾರದು.

*ಮೊದಲು ನಿರ್ಣೀತವಾದದ್ದನ್ನು ಎಂದೂ ಬಿಡಬಾರದು*

ಪೂರ್ವಮೀಮಾಂಸೆಯಲ್ಲಿ 'ಏಕಾದಶಪ್ರಯಾಜಂ ಯಜತೇ' ಎಂಬಲ್ಲಿ ಮೊದಲೇ ಪ್ರಾಪ್ತವಾದ ಪಂಚತ್ವ ಸಂಖ್ಯೆಯನ್ನು ಆವೃತ್ತಿ ಮಾಡಿಯೇ ಏಕಾದಶತ್ವ ಸಂಖ್ಯೆಯನ್ನು ಕೂಡಿಸಿದ್ದಾರೆ. ಅದರಂತೆ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬುದರಿಂದ ಮೊದಲೇ ನಿರ್ಣೀತವಾದ ಏಕತ್ವಸಂಖ್ಯೆಯನ್ನೇ 'ಋತಂ ಪಿಬಂತೌ' ಎಂಬಲ್ಲಿಯೂ ಬಿಡಬಾರದೆಂದು ತಿಳಿಯಬೇಕು.

*ಒಬ್ಬನೇ ಪರಮಾತ್ಮನಲ್ಲಿ ದ್ವಿತ್ವಾದಿ ಸಂಖ್ಯೆಗಳಿವೆ*

ಇಲ್ಲಿಯ ತನಕ ಮಾಡಿದ್ದೆಲ್ಲವೂ ಪ್ರೌಢಿವಾದ. ನಿಜವಾದ ಸಿದ್ಧಾಂತದ ಪ್ರಮೇಯವೇನೆಂದರೆ ಒಬ್ಬನೇ ಬ್ರಹ್ಮನಲ್ಲಿ ದ್ವಿತ್ವಾದಿ ಸಂಖ್ಯೆಗಳನ್ನು ಹೇಳಬಹುದು. ಸಂಬಂಧ ಭೇದ ಮೊದಲಾದವು ಅನೇಕ ಪದಾರ್ಥಗಳಲ್ಲಿರುವುದೆಂದು ಲೋಕಸಿದ್ಧವಾದ ವಿಚಾರ. ಆದರೆ 'ಪ್ರಮೇಯತ್ವಂ ಪ್ರಮೇಯಂ' 'ಆನಂದಂ ಬ್ರಹ್ಮಣಃ' ಇತ್ಯಾದಿ ಸ್ಥಳಗಳಲ್ಲಿ ತನ್ನಲ್ಲಿಯೇ ಇರುವುದು ಕಂಡಿದೆ. 'ಭೇದೋ ಭಿನ್ನಃ' ಎಂಬಲ್ಲಿ ಭೇದವು ತನ್ನಲ್ಲೇ ಇರುವುದು ಕಂಡಿದೆ. ಅದರಂತೆ ದ್ವಿತ್ವವಿದ್ದಲ್ಲಿ ಏಕತ್ವವು ವಿರುದ್ಧವೆಂಬುದು ಲೋಕಸಿದ್ಧವಿಚಾರ. ಆದರೆ ಸಂಬಂಧಾದಿಗಳಂತೆ ಏಕತ್ವವಿದ್ದಲ್ಲಿ ದ್ವಿತ್ವ ಏಕೆ ಇರಬಾರದು? ಒಬ್ಬನೇ ಬ್ರಹ್ಮನಲ್ಲಿ ಏಕತ್ವ, ದ್ವಿತ್ವ, ಬಹುತ್ವಾದಿ ಸಂಖ್ಯೆಗಳನ್ನು ಉಪಪಾದಿಸಲು ಏನೂ ಆತಂಕಗಳಿಲ್ಲವೆನ್ನಲು ಅನೇಕ ಶ್ರುತಿ ಸ್ಮೃತಿಗಳು ಆಧಾರವಾಗಿವೆ.

'ನೇಹ ನಾನಾ' ಎಂಬ ಶ್ರುತಿಯು ಗುಣಕರ್ಮಾದಿಗಳಿಂದ ಬ್ರಹ್ಮನಲ್ಲಿ ಭೇದವಿಲ್ಲವೆಂದು ಸಮರ್ಥಿಸುತ್ತಿದೆ, ಹೊರತು ಭೇದವನ್ನೇ ಇಲ್ಲವೆಂದು ಹೇಳುತ್ತಿಲ್ಲ. ಆದ್ದರಿಂದ 'ಅಯಂ ವೈ ಹರಯಃ' ಇತ್ಯಾದಿ ಶ್ರುತಿಗಳ ಆಧಾರದಂತೆ ಅನೇಕತ್ವ ಸಂಖ್ಯೆಯನ್ನು ಪರಮಾತ್ಮನಲ್ಲಿ ಹೇಳುವುದು ತಪ್ಪಲ್ಲ. ಏಕತ್ವ ಮತ್ತು ಅನೇಕತ್ವಗಳಿಗೆ ವಿರೋಧ ಬಂದರೆ ಭೇದಪ್ರತಿನಿಧಿಯಾಗಿರುವ ವಿಶೇಷವು ಅದನ್ನು ಪರಿಹರಿಸುತ್ತದೆ.

*ದೃಷ್ಟಾಂತಪುರಸ್ಸರವಾಗಿ ಬ್ರಹ್ಮನಲ್ಲಿ ದ್ವಿತ್ವ ಏಕತ್ವಗಳ ಸಮರ್ಥನೆ*

ಒಬ್ಬನೇ ಬ್ರಹ್ಮನಲ್ಲಿ ದ್ವಿತ್ವ ಬಹುತ್ವಾದಿಗಳನ್ನು ಹೇಳುವುದು ಅದ್ವೈತಿಗಳಿಗೂ ಅನಿವಾರ್ಯ. ಬ್ರಹ್ಮನಲ್ಲಿರುವ ಆನಂದವು ಸ್ಫುರಣವಾಗುತ್ತದೆಂದರೆ ಆನಂದಾತ್ಮಕ ಹಾಗೂ ಜ್ಞಾನಾತ್ಮಕತ್ವಗಳನ್ನು ಒಪ್ಪಿದಂತಾಯಿತು.

ಉಭಯಸ್ವರೂಪನಾದ ಬ್ರಹ್ಮನನ್ನು ಒಬ್ಬನೇ ಎಂದು ಹೇಳಿದಾಗ ಏಕತ್ವ ದ್ವಿತ್ವವನ್ನು ಅದ್ವೈತಿಗಳೂ ಸಹ ಒಪ್ಪಿದಂತಾಯಿತು. ಪೂರ್ವಮೀಮಾಂಸಕರೂ ಸಹ ಅಗ್ನಿಷೋಮರಲ್ಲಿ ಪ್ರಯೋಗಿಸಿದ ಏಕವಚನವನ್ನು ನಿರ್ವಹಿಸುವುದಕ್ಕಾಗಿ ದೇವತಾತ್ವ ಧರ್ಮದಿಂದ ಐಕ್ಯವನ್ನು ಹೇಳುತ್ತಾರೆ. ದ್ವಿವಚನವನ್ನು ನಿರ್ವಹಿಸುವುದಕ್ಕಾಗಿ ಅಧಿಷ್ಠಾನ ರೂಪದಿಂದ ದ್ವಿತ್ವವನ್ನು ಹೇಳುತ್ತಾರೆ. ಹೀಗೆ ದ್ವಿತ್ವ ಏಕತ್ವಗಳ ಸಮುಚ್ಚಯವು ಪೂರ್ವಮೀಮಾಂಸಕರಿಗೂ ಸಹ ಸಮ್ಮತವಾಗಿದೆ. ಅದರಂತೆ ಬ್ರಹ್ಮನಲ್ಲಿ ಸ್ವರೂಪತಃ ಐಕ್ಯವಿದ್ದರೂ ರೂಪವಿಶೇಷದಿಂದ ದ್ವಿತ್ವವನ್ನು ಹೇಳಬಹುದು. ಬ್ರಹ್ಮನಲ್ಲಿರುವ ಈ ದಿತ್ವೈಕತ್ವಗಳ ಸಮುಚ್ಚಯ ವಿಷಯದಲ್ಲಿ ''ಏಕಂ ರೂಪಂ ಬಹುಧಾ ಯಃ ಕರೋತಿ'' ಇತ್ಯಾದಿ ಶ್ರುತಿ ಸ್ಮೃತಿಗಳ ಆಧಾರವೂ ಇರುತ್ತದೆ.

*ನ ಸಂಖ್ಯೋಪಸಂಗ್ರಹಾಧಿಕರಣದಿಂದ ಪುನರುಕ್ತಿ ಬರುವುದಿಲ್ಲ*

ಈ ಅಧಿಕರಣದಲ್ಲಿ ಭಗವಂತನಲ್ಲಿ ಅನೇಕತ್ವಸಂಖ್ಯೆಯು ಅನುಪಪನ್ನವಾಗುತ್ತದೆಂಬ ಆಕ್ಷೇಪವನ್ನು ಪರಿಹರಿಸಲಾಗಿದೆ. ಆದರೆ ಚತುರ್ಥಪಾದದಲ್ಲಿರುವ 'ನ ಸಂಖ್ಯೋಪಸಂಗ್ರಹಾಧಿಕರಣ'ದಲ್ಲಿಯೂ ಸಹ ಅನೇಕತ್ವವು ಬರುವುದಿಲ್ಲವೆಂಬ ಅನುಪಪತ್ತಿಯನ್ನೇ ಪರಿಹರಿಸಲಾಗಿದೆ. ಆದ್ದರಿಂದ ಒಂದೇ ವಿಚಾರವನ್ನು ಎರಡು ಅಧಿಕರಣದಲ್ಲಿ ಹೇಳಿದಂತಾಗುವುದರಿಂದ ಪುನರುಕ್ತಿ ಬರುತ್ತದಲ್ಲವೆ ? ಎಂಬ ಪ್ರಶ್ನೆಯು ಸಹಜವಾಗಿ ಬರುತ್ತದೆ. ಆದರೆ ಈ ಪ್ರಶ್ನೆಗೆ ಗ್ರಂಥಕಾರರು ಅನೇಕ ಬಗೆಯಲ್ಲಿ ಸಮಾಧಾನವನ್ನು ನೀಡಿದ್ದಾರೆ. ನ ಸಂಖ್ಯೋಪಸಂಗ್ರಹಾಧಿಕರಣದಲ್ಲಿ ಆಧಾರಾಧೇಯಭಾವವು ಒಬ್ಬನೇ ಭಗವಂತನಲ್ಲಿ ಬರಲಾರದೆಂದು ಪೂರ್ವಪಕ್ಷ ಮಾಡಿದ್ದಾರೆ ಹೊರತು, ಅನೇಕತ್ವ ಸಂಖ್ಯೆಯು ಬರುವುದಿಲ್ಲವೆಂದು ಪೂರ್ವಪಕ್ಷ ಮಾಡಿರುವುದಿಲ್ಲ. ಆದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲವೆಂಬುದು ಮೊದಲನೆಯ ಸಮಾಧಾನ.

ಅಥವಾ ಅನೇಕತ್ವಸಂಖ್ಯೆಯ ಅನುಪಪತ್ತಿಯನ್ನೇ ನ ಸಂಖ್ಯೋಪಸಂಗ್ರಹಾಧಿಕರಣದಲ್ಲಿ ಪರಿಹರಿಸಿಕೊಳ್ಳುತ್ತಾರೆಂದು ಇಟ್ಟುಕೊಳ್ಳೋಣ, ಆವಾಗ ಈ ಗುಹಾಧಿಕರಣದಲ್ಲಿ ಕರ್ಮಬಂಧರಹಿತನಾದ ಭಗವಂತನಿಗೆ ಭೋಕ್ತೃತ್ವವನ್ನಷ್ಟೇ ಸಮರ್ಥಿಸಲಾಗಿದೆ ಎಂದು ವಿವಕ್ಷಿಸಬೇಕು. ಈ ಕಾರಣದಿಂದಲೂ ಪುನರುಕ್ತಿ ಬರುವುದಿಲ್ಲವೆಂಬುದು ಮತ್ತೊಂದು ಬಗೆಯ ಸಮಾಧಾನ.

*ವಿಷ್ಣುಪರವೆನ್ನಲು ಛಾಯಾತಪ ಶಬ್ದವೆನ್ನಲು ಬಾಧಕವಲ್ಲ*

ಹಿಂದೆ 'ಋತಂ ಪಿಬಂತೌ' ಎಂಬ ಶ್ರುತಿಯು ಪರಮಾತ್ಮಪರವೆನ್ನಲು ದ್ವಿವಚನಶ್ರುತಿಯು ಬಾಧಕವಾಗುವುದಿಲ್ಲವೆಂದು ಹೇಳಿದ್ದರು. ಈಗ ಛಾಯಾತಪಶಬ್ದಗಳೂ ಸಹ ಬಾಧಕವಲ್ಲವೆಂದು ಹೇಳುತ್ತಿದ್ದಾರೆ. ಹೃದಯಗುಹೆಯಲ್ಲಿ ನೆಲೆಸಿರುವ ಪರಮಾತ್ಮನು ಜ್ಞಾನಿಗಳಿಗೆ ಸುಖಪ್ರದನಾದ್ದರಿಂದ 'ಛಾಯಾ' ಎನಿಸಿದ್ದಾನೆ. ಅಜ್ಞಾನಿಗಳಿಗೆ ದುಃಖಪ್ರದನಾದ್ದರಿಂದ ಆತಪನೆನಿಸಿದ್ದಾನೆ.

ಸೂತ್ರದಲ್ಲಿ 'ಋತಂ ಪಿಬಂತೌ' ಎಂದು ಹೇಳಬಹುದಿತ್ತಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಗುಹಾಪ್ರವಿಷ್ಟತ್ವವೆಂಬ ಲಿಂಗವನ್ನು ಹೇಳುವುದಕ್ಕಾಗಿ 'ಗುಹಾಂ ಪ್ರವಿಷ್ಟೌ' ಎಂದೇ ಹೇಳಿದ್ದಾರೆ.

ಮೊದಲು 'ಋತಂ ಪಿಬಂತೌ' ಎಂಬ ವಾಕ್ಯವಿರುವುದರಿಂದ ಅದನ್ನು ವ್ಯಾಖ್ಯಾನಿಸುವ 'ಗುಹಾಂ ಪ್ರವಿಷ್ಟೌ' ಎಂಬ ಸೂತ್ರವನ್ನು ಮೊದಲು ಹೇಳಿದ್ದಾರೆ. 'ಯಸ್ಸೇತುಃ' ಎಂಬ ಶ್ರುತಿಯು ಅನಂತರ ಇರುವುದರಿಂದ

'ವಿಶೇಷಣಾಚ್ಚ' ಎಂಬ ಸೂತ್ರವನ್ನು ಅನಂತರ ಹೇಳಿದ್ದಾರೆ. ವಸ್ತುತಃ ಶ್ರುತಿಯೆಂಬ ಸಾಧಕಪ್ರಮಾಣವನ್ನು ಹೇಳುವ ಕಾರಣ 'ವಿಶೇಷಣಾಚ್ಚ' ಎಂಬ ಸೂತ್ರವು ಮೊದಲು ಬರಬೇಕು. ಆದರೆ ಆ ಸಾಧಕವು ವಿಷಯವಾಕ್ಯದಲ್ಲಿಲ್ಲದ ಕಾರಣ ವಿಷಯವಾಕ್ಯಕ್ಕೆ ಅನುಗುಣವಾಗಿಯೇ ಮಾಡಿದ ಸೂತ್ರದ ಕ್ರಮವು ಸ್ವರಸವಾಗಿದೆ.

*ಶಂಕರಭಾಷ್ಯದಲ್ಲಿ ಗುಹಾಧಿಕರಣ*

ಅದ್ವೈತಿಗಳು ಗುಹಾಧಿಕರಣವನ್ನು ಹೀಗೆ ರಚಿಸಿದ್ದಾರೆ -

ಪೂರ್ವಪಕ್ಷ - ಕಾಠಕೋಪನಿಷತ್ತಿನಲ್ಲಿ 'ಋತಂ ಪಿಬಂತೌ' ಎಂಬ ಶ್ರುತಿಯು ಕೇಳಿಸುತ್ತಿದೆ. ಈ ಶ್ರುತಿಯು ಜೀವ ಹಾಗೂ ಬುದ್ಧಿತತ್ವವನ್ನು ಪ್ರತಿಪಾದಿಸುತ್ತಿದೆಯೋ? ಅಥವಾ ಜೀವಬ್ರಹ್ಮರನ್ನು ಪ್ರತಿಪಾದಿಸುತ್ತಿದೆಯೋ ? ಎಂದು ಸಂಶಯ.

ಜೀವ ಹಾಗೂ ಬುದ್ಧಿತತ್ವಗಳೇ ಪ್ರತಿಪಾದ್ಯರೆಂದು ಪೂರ್ವಪಕ್ಷ. ಏಕೆಂದರೆ ಭೋಗವು ಜೀವನಿಗೆ ಮಾತ್ರವಿದ್ದರೂ ಸಹ ಛತ್ರಿನ್ಯಾಯದಿಂದ ಬುದ್ಧಿಯಲ್ಲೂ ಸಹ ಕರ್ತೃತ್ವವು ಪ್ರಾಪ್ತವಾಗುತ್ತದೆ. ವ್ಯಾಪ್ತನಾದ ಬ್ರಹ್ಮನನ್ನು ಸಂಕುಚಿತವಾದ ಹೃದಯಪ್ರದೇಶದಲ್ಲಿ ಇರಲು ಸಾಧ್ಯವಿರದ ಕಾರಣ 'ಗುಹಾಪ್ರವಿಷ್ಟೌ' ಎಂಬಲ್ಲಿರುವ ವಿಶೇಷಣವು ಬ್ರಹ್ಮನಲ್ಲಿ ಬರುವುದಿಲ್ಲ. ಮತ್ತು 'ಛಾಯಾತಪೌ' ಎಂಬಲ್ಲಿ ಹೇಳಲ್ಪಟ್ಟ ನೆರಳು ಹಾಗೂ ಬೆಳಕುಗಳು ಬುದ್ಧಿಜೀವರಲ್ಲಿ ಬರುತ್ತದೇ ಹೊರತು ಜೀವೇಶ್ವರರಲ್ಲಿ ಬರುವುದಿಲ್ಲ. ಆದ್ದರಿಂದ ಈ ಶ್ರುತಿಯಿಂದ ಪ್ರತಿಪಾದ್ಯರಾದವರು ಬುದ್ಧಿತತ್ವ ಹಾಗೂ ಜೀವರೆಂದೇ ಹೇಳಬೇಕು.

ಸಿದ್ಧಾಂತ - ಈ ಎತ್ತಿಗೆ ಸರಿಯಾದ ಜೊತೆಯನ್ನು ಹುಡುಕಬೇಕು ಎಂದು ಹೇಳಿದಾಗ, ಮತ್ತೊಂದು ಎತ್ತನ್ನು ಹುಡುಕಬೇಕೆಂದೇ ತಿಳಿಯುತ್ತಾರೆಯೇ ಹೊರತು ಕುದುರೆಯನ್ನು ಹುಡುಕಬೇಕೆಂದು ಯಾರೂ ತಿಳಿಯುವುದಿಲ್ಲ. ಅದರಂತೆ 'ಪಿಬಂತೌ' ಎಂಬಲ್ಲಿ ಒಬ್ಬನಂತೂ ಚೇತನನೆಂದು ನಿಶ್ಚಿತನಾಗಿದ್ದಾನೆ. ಅವನಿಗೆ ಸರಿಯಾದ ಮತ್ತೊಬ್ಬನೆಂದರೆ ಚೇತನನೇ ಆಗಬೇಕು. ಆದ್ದರಿಂದಲೇ ಸೂತ್ರಕಾರರು 'ಆತ್ಮಾನೌ' ಎಂದಿದ್ದಾರೆ. ಆತ್ಮನನ್ನು ಬಿಟ್ಟು ಅನಾತ್ಮವಾದ ಬುದ್ಧಿಯನ್ನು ವಿವಕ್ಷಿಸುವುದು ತಪ್ಪಾಗುತ್ತದೆ. ಇದರಂತೆ ವ್ಯಾಪ್ತನಾದ ಪರಮಾತ್ಮನು ಸರ್ವಗತನಾಗಿದ್ದರೂ ಸಹ ಹೃದಯಗುಹಾದಲ್ಲಿಯೂ ಇರುತ್ತಾನೆಂದು ಪ್ರಮಾಣಸಿದ್ಧವಾಗಿದೆ. ಅದರಂತೆ ಜೀವನು ಸಂಸಾರಿಯಾಗಿ ಪರಬ್ರಹ್ಮನು ಸಂಸಾರಿಯಾಗದ ಕಾರಣ ವಿರುದ್ಧಸ್ವಭಾವವನ್ನು ಹೊಂದಿದ್ದಾನೆ. ಆದ್ದರಿಂದಲೇ ಶ್ರುತಿಯು ಜೀವಬ್ರಹ್ಮರನ್ನು ಛಾಯಾತಪರೆಂದು ಕರೆದಿದೆ. ವಾಸ್ತವಿಕವಾಗಿ ಬ್ರಹ್ಮನು ಭೋಕ್ತೃವಾಗದಿದ್ದರೂ ಛತ್ರಿನ್ಯಾಯದಿಂದ ಜೀವನ ಜೊತೆಗೆ 'ಪಿಬಂತೌ' ಎಂಬ ವಿಶೇಷಣವನ್ನು ಹೊಂದಿಸಬೇಕು.

*ಅದ್ವೈತಿಗಳಿಗೆ ಮುಳ್ಳಾದ ದ್ವಿವಚನ*

ಅದ್ವೈತಮತದಲ್ಲಿ ಜಡವಾದ ಬುದ್ಧಿಯಲ್ಲಿರುವ ಕರ್ತೃತ್ವ ಭೋಕ್ತೃತ್ವಗಳನ್ನು ಚೇತನನಾದ ಜೀವನಲ್ಲಿ ಆರೋಪಿಸಲಾಗುತ್ತದೆ. ಸ್ಫಟಿಕದ ಸಮೀಪದಲ್ಲಿ ಕೆಂಪಾದ ದಾಸವಾಳ ಹೂವಿದ್ದರೆ ಅದರ ಕೆಂಪು ಬಣ್ಣವು ಬಿಳಿಯಾದ ಸ್ಫಟಿಕದಲ್ಲಿ ಆರೋಪಿಸಲಾಗುತ್ತದೆ. ಅದರಂತೆ ಬುದ್ಧಿಯಲ್ಲಿರುವ ಭೋಕ್ತೃತ್ವಾದಿಗಳು ಹತ್ತಿರದಲ್ಲಿರುವ ಜೀವನಲ್ಲಿ ಆರೋಪಿಸಲಾಗುತ್ತದೆ. ಇಂತಹ ಭೋಕ್ತೃತ್ವವನ್ನು ಜೀವನ ಧರ್ಮವೆಂದು ಪರಿಗಣಿಸಿ ಚೇತನನೆಂದು ಒಬ್ಬನನ್ನು ನಿರ್ಣಯಿಸುತ್ತೇವೆಂದು ಹೇಗೆ ಹೇಳುತ್ತೀರಿ? ಹಾಗೆ ನಿರ್ಣಯಿಸಿದ್ದಲ್ಲಿ ಒಬ್ಬ ಜೀವನ ಸಾರೂಪ್ಯದಿಂದ ಮತ್ತೊಬ್ಬನನ್ನೂ ಸಹ ಚೇತನನೆಂದು ನಿರ್ಣಯಿಸಬಹುದಿತ್ತು. ಆದರೆ ಆರೋಪಿತವಾದ ಭೋಕ್ತೃತ್ವವು ಇದ್ದ ಮಾತ್ರದಿಂದ ಅವನನ್ನು 'ಪಿಬಂತೌ' ಎಂದು ಹೇಳಬಹುದಾದರೆ ದೇಹದಲ್ಲಿಯೂ ಸಹ ಆರೋಪಿತವಾದ ಆತ್ಮತ್ವವಿರುವುದರಿಂದ 'ಆತ್ಮಾ

ದ್ರಷ್ಟವ್ಯಃ' ಎಂಬಲ್ಲಿಯೂ ಆತ್ಮ ಪದಕ್ಕೆ ದೇಹವೆಂಬರ್ಥವನ್ನು ಹೇಳಬೇಕಾದೀತು. ಆದರೆ ಯಾರೂ ಸಹ ಲೋಕದಲ್ಲಿ ದೇಹದಲ್ಲಿ ಆತ್ಮತ್ವವು ಆರೋಪಿತವಾಗಿದೆಯೆಂದು ದೇಹವನ್ನೇ ಆತ್ಮವೆಂದು ಹೇಳಲಾರರು.

ಮತ್ತು ಭೋಕ್ತೃತ್ವಾದಿಗಳು ಚಿದಚಿತ್‌ಸಂವಲನಧರ್ಮವಾದ್ದರಿಂದ ಬುದ್ಧಿ ಹಾಗೂ ಜೀವರಲ್ಲಿ ಸಮಾನವಾಗಿದೆಯೆಂದು ನೀವು ಹೇಳಬೇಕು. ಈ ಪಕ್ಷದಲ್ಲಿ ಬುದ್ಧಿಜೀವರಲ್ಲಿರುವ ಧರ್ಮಗಳನ್ನು ಪರಸ್ಪರವಾಗಿ ಆರೋಪಿಸುವುದು ಅಯುಕ್ತವಾಗುತ್ತದೆ. ಆದ್ದರಿಂದ ಭೋಕ್ತೃತ್ವವನ್ನು ಜೀವನಲ್ಲಿ ಹೇಳಲು ಸಾಧ್ಯವಿಲ್ಲ. ಬುದ್ಧಿಯಲ್ಲಿ ಮಾತ್ರ ಹೇಳಬೇಕು. ಬುದ್ಧಿಯೇ ಪ್ರಕೃತ್ಯರ್ಥವಾಗುತ್ತದೆ. ಆವಾಗ 'ಪಿಬಂತೌ' ಎಂಬಲ್ಲಿರುವ ದ್ವಿವಚನದಿಂದ ಬುದ್ಧಿಯ ಜೊತೆಗಿರುವ ಮತ್ತೊಂದು ವಸ್ತುವನ್ನು ಯಾವುದೆಂದು ನಿಶ್ಚಯಿಸಬೇಕು. ಎರಡನೆಯ ವಸ್ತು ಜೀವನಾಗದಿದ್ದಾಗ ಬ್ರಹ್ಮನೂ ಸಹ ಆಗುವುದಿಲ್ಲ. ಆದ್ದರಿಂದ ಬುದ್ಧಿಯಲ್ಲಿ ಕ್ರಿಯಾಶಕ್ತಿ ಮತ್ತು ಜ್ಞಾನಶಕ್ತಿಗಳು ಇರುವುದರಿಂದ ಇವೆರಡನ್ನೂ ವಿವಕ್ಷಿಸಿ ಪ್ರತ್ಯಯಾರ್ಥವೆನಿಸಿದ ದ್ವಿತ್ವವನ್ನು ಹೇಗಾದರೂ ಕೂಡಿಸಬೇಕು. ಆದ್ದರಿಂದ ಪ್ರಾಣಸಹಿತವಾದ ಬುದ್ಧಿಯೇ 'ಪಿಬಂತೌ' ಎಂಬ ಶ್ರುತಿಯಿಂದ ಪ್ರತಿಪಾದ್ಯವಾಗಿದೆಯೆಂದು ಸಿದ್ಧಾಂತ ಮಾಡುವುದೇ ಉಚಿತವಾಗಿದೆ.

ಒಂದೇ ಬುದ್ಧಿಯು ಪ್ರಾತಿಪದಿಕದಿಂದ ಪ್ರತಿಪಾದ್ಯವಾದಲ್ಲಿ ಪ್ರತ್ಯಯಾರ್ಥವಾದ ದ್ವಿತ್ವವು ಅಸ್ವರಸವಾಗುತ್ತದೆ. ಆದ್ದರಿಂದ ಪ್ರತ್ಯಯಾರ್ಥದ ಸ್ವಾರಸ್ಯವನ್ನು ನೀನು ಅಪೇಕ್ಷಿಸುವಿಯಾದರೆ ಹೀಗೂ ಸಿದ್ಧಾಂತ ಮಾಡಬಹುದು - ಆರೋಪಿತವಾದ ಭೋಕ್ತೃತ್ವದಿಂದ ಜೀವನು ಯುಕ್ತನಾಗಿದ್ದಾನೆ. ಇಂತಹ ಜೀವನಿಗೆ ಭೋಕ್ತೃತ್ವವಿರುವ ಬುದ್ಧಿಯು ಎರಡನೆಯ ಪದಾರ್ಥವಾಗಿದೆ. ಹೊರತು ಆರೋಪಿತವಾದ ಭೋಕ್ತೃತ್ವವು ಇಲ್ಲದ ಬ್ರಹ್ಮನು ಎರಡನೆಯ ಪದಾರ್ಥವಾಗಲಾರನು ಎಂದು.

'ಪಿಬಂತೌ' ಎಂಬ ಶ್ರುತಿಯಲ್ಲಿ ದ್ವಿತ್ವವು ಶಬ್ದದಿಂದ ಕೇಳಿಸುತ್ತಿದೆ. ಆದ್ದರಿಂದ ದ್ವಿತ್ವಕ್ಕೆ ಮುಖ್ಯಾರ್ಥವನ್ನೇ ಸ್ವೀಕರಿಸಬೇಕೆಂದರೆ ತಾತ್ವಿಕವಾದ ಭೇದವುಳ್ಳ ಎರಡೂ ವಸ್ತುಗಳನ್ನೇ ಸ್ವೀಕರಿಸಬೇಕು ಹೊರತು ಅತಾತ್ವಿಕವಾದ ಭೇದವುಳ್ಳ ಜೀವಬ್ರಹ್ಮರನ್ನು ಸ್ವೀಕರಿಸಲು ಸಾಧ್ಯವಿಲ್ಲ.

*ಅದ್ವೈತಿಗಳ ಸಿದ್ಧಾಂತ ಕೇವಲ ಶಬ್ದದ ಕಲಹ*

ಅದ್ವೈತಿಗಳು ಮಾಡಿದ ಸಿದ್ಧಾಂತದಲ್ಲಿ ಹುರುಳಿಲ್ಲ. ಈ 'ಎತ್ತಿಗೆ ಜೊತೆ ಹುಡಕಬೇಕು' ಎಂದು ಹೇಳಿದಾಗ ಮತ್ತೊಂದು ಎತ್ತು ಎಂದು ಅರ್ಥವಾಗುವಂತೆ ಜೀವನಿಗೆ ಸರಿಸಾಟಿಯಾದ ಮತ್ತೊಬ್ಬ ಚೇತನನೆಂದರೆ ಪರಬ್ರಹ್ಮನೇ ಆಗುತ್ತಾನೆಂದು ಅವರು ಸಿದ್ಧಾಂತ ಮಾಡಿದ್ದರು. ಆದರೆ ಈ ನಿಯಮವೇ ತಪ್ಪು. 'ಈ ಮುದಿ ಎತ್ತಿಗೆ ಸರಿಸಾಟಿಯಾದ ಬಲಿಷ್ಠವಾದ್ದನ್ನು ಹುಡುಕಬೇಕು' ಎಂದಾಗ ಯಾರೂ ಸಹ ಮತ್ತೊಂದು ಮುದಿ ಎತ್ತನ್ನು ಹುಡುಕುವುದಿಲ್ಲ ಹೊರತಾಗಿ, ಬಲಿಷ್ಠವಾದ ಎತ್ತನ್ನು ಹುಡುಕಬೇಕೆಂದು ತಿಳಿಯುತ್ತಾರೆ. ಅದರಂತೆ ಪ್ರಕೃತದಲ್ಲಿಯೂ 'ಋತಂ ಪಿಬಂತೌ' ಎಂಬಲ್ಲಿ ಗುಹಾಪ್ರವಿಷ್ಟತ್ವವು ಶಬ್ದದಿಂದ ಸ್ಪಷ್ಟವಾಗಿ ಕೇಳಿಸುತ್ತಿರುವಾಗ ಈ ಅರ್ಥವನ್ನು ಬಿಟ್ಟು ಆಕ್ಷೇಪಬಲದಿಂದ ತಿಳಿಯುವ ಚೇತನತ್ವದಿಂದ ಸಾಜಾತ್ಯವನ್ನು ವಿವಕ್ಷಿಸಬಾರದು.

ಮತ್ತು ಅದ್ವೈತಿಗಳು ಭೋಕ್ತೃತ್ವದಿಂದ ಚೇತನತ್ವವು ಅರ್ಥಾತ್ ಸಿದ್ಧವಾಗುತ್ತದೆಂದು ಹೇಳಿ ಚೇತನತ್ವ ಧರ್ಮದಿಂದ ಪರಮಾತ್ಮನನ್ನು ವಿವಕ್ಷಿಸುತ್ತಾರೆ. ಆದರೆ ಭೋಕ್ತೃತ್ವದಿಂದ ಚೇತನತ್ವವು ತಿಳಿಯುವಂತೆ ಪಾರತಂತ್ರ್ಯವೂ ಸಹ ಅರ್ಥಾತ್ ತಿಳಿಯುತ್ತದೆ. ಇಂತಹ ಪಾರತಂತ್ರ್ಯವೆಂಬ ಧರ್ಮದಿಂದ ಬುದ್ಧಿಯನ್ನೇಕೆ ವಿವಕ್ಷಿಸಬಾರದು?

ಬುದ್ಧಿಯು ಅಚೇತನವಾದ್ದರಿಂದ ಛಾಯಾ ಎನಿಸಿದೆ. ಜೀವನು ಚೇತನನಾದ್ದರಿಂದ ಆತಪನೆನಿಸಿದ್ದಾನೆ. ಆದ್ದರಿಂದ ಛಾಯಾತಪತ್ವದ ವಿರೋಧವೂ ಬರುವುದಿಲ್ಲ.

*ಪರಿಪೂರ್ಣಚಂದ್ರಿಕಾ*

ವಿಚಾರ ಮಾಡಿದರೆ ಅದ್ವೈತಿಗಳ ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳಲ್ಲಿ ಭೋಕ್ತೃನಾದವನು ಜೀವನೇ ಆಗಿದ್ದಾನೆ. ಬುದ್ಧಿ ಹಾಗೂ ಬ್ರಹ್ಮರಲ್ಲಿ ಛತ್ರಿನ್ಯಾಯದಿಂದ ಗೌಣವಾದ ಕರ್ತೃತ್ವವನ್ನು ಹೇಳಲಾಗಿದೆ. ಭೋಕ್ತೃತ್ವವು ಜಡವಾದ ಬುದ್ಧಿಗೂ ಇಲ್ಲ ಬ್ರಹ್ಮನಿಗೂ ಇಲ್ಲ. ಹೀಗೆ ಪ್ರಮೆಯಯದಲ್ಲಿ ಏನೂ ವ್ಯತ್ಯಾಸವಿಲ್ಲದಿದ್ದಾಗ ಇದರ ಬಗ್ಗೆ ಪೂರ್ವಪಕ್ಷ ಸಿದ್ಧಾಂತಗಳೆಂಬ ಚರ್ಚೆಯೇ ವ್ಯರ್ಥವಾಗಿದೆ.

*ದ್ವಿತೀಯ ಸೂತ್ರಾರ್ಥ ನಿರಾಕರಣೆ*

'ವಿಶೇಷಣಾಚ್ಚ ' ಎಂಬ ಎರಡನೆಯ ಸೂತ್ರಕ್ಕೆ ಮಾಡಿದ ಅದ್ವೈತಿಗಳ ಎರಡನೆಯ ವ್ಯಾಖ್ಯಾನವು ಅಯುಕ್ತವಾಗಿದೆ. 'ಆತ್ಮಾನಂ ರಥಿನಂ ವಿದ್ಧಿ'' ಎಂಬಲ್ಲಿ ಗಂತೃತ್ವದಿಂದ 'ಸೋಽಧ್ವನಃ ಪರಮಾಪ್ನೋತಿ' ಎಂಬಲ್ಲಿ ಗಮ್ಯತ್ವದಿಂದ ಜೀವ ಪರಮಾತ್ಮರು ವಿಶೇಷಣಭೂತರಾಗಿದ್ದಾರೆ. ಈ ಕಾರಣದಿಂದಲೂ 'ಪಿಬಂತೌ' ಎಂಬ ಶ್ರುತಿಯಿಂದ ಜೀವ ಪರಮಾತ್ಮರೇ ಪ್ರತಿಪಾದ್ಯರೆಂದು ತಿಳಿಯಬೇಕೆಂದು ಅವರ ವ್ಯಾಖ್ಯಾನ. ಆದರೆ ಜೀವ ಪರಮಾತ್ಮರು ವಿಶೇಷಣವಾಗಿರುವಂತೆ 'ಬುದ್ಧಿಂ ತು ಸಾರಥಿಂ ವಿಶೇಷಣಂ' ಎಂಬುದಾಗಿ ಸಾರಥಿಯಂತೆ ಬುದ್ಧಿಯೂ ಸಹ ವಿಶೇಷವಾಗಿದೆ. ಆದ್ದರಿಂದ ಬುದ್ಧಿತತ್ವ ಮತ್ತು ಜೀವರೇ 'ಪಿಬಂತೌ' ಎಂಬ ಶ್ರುತಿಯಿಂದ ಪ್ರತಿಪಾದ್ಯರೆಂದು ಏಕೆ ಹೇಳಬಾರದು?

ಮತ್ತು 'ಪಿಬಂತೌ' ಎಂಬ ಶ್ರುತಿಯನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುವ ಅದ್ವೈತಿಗಳು ಜೀವನಲ್ಲಿ ಜೀವಪರತ್ವವನ್ನು ಅಲ್ಲಗಳೆಯುವುದಿಲ್ಲ. ಅನ್ಯಪರತ್ವವನ್ನು ನಿರಾಕರಣ ಮಾಡಿ ಕೇವಲ ಬ್ರಹ್ಮಪರತ್ವವನ್ನು ಒಪ್ಪಿದಾಗ ಮಾತ್ರ ಪ್ರಥಮಾಧ್ಯಾಯದಲ್ಲಿ ಸಂಗತವಾಗಲು ಸಾಧ್ಯ. ಆದರೆ ಜೀವಪರತ್ವವನ್ನು ನಿರಾಕರಣ ಮಾಡದ ಕಾರಣ ಗುಹಾಧಿಕರಣಕ್ಕೆ ಪ್ರಥಮಾಧ್ಯಾಯದಿಂದ ಸಂಗತಿಯು ದೊರೆಯುವುದಿಲ್ಲ.

ಪ್ರತಿಯೊಂದು ಅಧಿಕರಣಗಳಲ್ಲಿಯೂ ಅದ್ವೈತಿಗಳು ಜೀವಬ್ರಹ್ಮರ ಭೇದವನ್ನೇ ಒಪ್ಪುವ ಪರಿಸ್ಥಿತಿ ಬರುತ್ತಿದೆ. ಈ ಅಧಿಕರಣದಲ್ಲಿಯೂ ಬಹ್ಮನಿಗೆ ಭೋಕ್ತೃತ್ವವಿಲ್ಲ. ಜೀವನಿಗೆ ಭೋಕ್ತೃತ್ವವಿದೆ ಎಂದಾಗ ಜೀವಬ್ರಹ್ಮರ ಭೇದವೇ ಸಿದ್ಧವಾಗುತ್ತದೆ.

*ರಾಮನುಜರಿಗೆ ನಾಲ್ಕು ಸೂತ್ರಗಳು ಸೇರಿ ಒಂದೇ ಅಧಿಕರಣ*

ಅದ್ವೈತಿಗಳಂತೆ ರಾಮಾನುಜರೂ ಸಹ 'ಗುಹಾಪ್ರವಿಷ್ಟೌ' ಇತ್ಯಾದಿ ಸೂತ್ರಗಳನ್ನು ವ್ಯಾಖ್ಯಾನಿಸುತ್ತಾರೆ. ಆದರೆ ಹಿಂದಿನ ಅಧಿಕರಣದ ಎರಡು ಸೂತ್ರಗಳು ಈ ಅಧಿಕರಣದ ಎರಡು ಸೂತ್ರಗಳು ಸೇರಿ ಒಂದೇ ಅಧಿಕರಣವೆಂದು ರಾಮಾನುಜರು ಹೇಳುವ ಹೊಸ ವಿಚಾರ.

ಮೊದಲೆರಡು ಸೂತ್ರಗಳಿಗೆ ಕಾಠಕದ ಪ್ರಥಮಾಧ್ಯಾಯದ ಎರಡನೆಯ ವಲ್ಲಿಯಲ್ಲಿರುವ ಇಪ್ಪತ್ತನಾಲ್ಕನೆಯ ''ಯಸ್ಯ ಬ್ರಹ್ಮ ಚ ಕ್ಷತ್ರಂ ಚ'' ಎಂಬ ಮಂತ್ರವು ವಿಷಯವಾಕ್ಯ. ಮುಂದಿನ 'ಗುಹಾಂಪ್ರವಿಷ್ಟೌ' ಇತ್ಯಾದಿ ಸೂತ್ರಗಳಿಗೆ ಅದೇ ಕಾಠಕದ ಪ್ರಥಮಾಧ್ಯಾಯದಲ್ಲಿರುವ ಮೂರನೆಯ ವಲ್ಲಿಯ 'ಋತಂ ಪಿಬಂತೌ' ಎಂಬುದು ವಿಷಯವಾಕ್ಯ. ಹೀಗೆ ವಿಷಯವಾಕ್ಯಗಳು ಭಿನ್ನಭಿನ್ನವಾದ್ದರಿಂದ ಅಧಿಕರಣಗಳೂ ಸಹ ಬೇರೆ ಬೇರೆಯಾಗುತ್ತವೆಂದು ಅದ್ವೈತಿಗಳು ಹೇಳುತ್ತಾರೆ.

ಆದರೆ ಇದು ತಪ್ಪು. ಈ ಎರಡೂ ಅಧಿಕರಣಗಳು ಒಂದರ ಮುಂದೆ ಮತ್ತೊಂದು ಇವೆ. ಈ ಎರಡು ವಿಷಯವಾಕ್ಯಗಳಲ್ಲಿ ಪರಸ್ಪರ ಉಪಜೀವ್ಯಜೀವಕಭಾವವೂ ಇದೆ. ಮತ್ತು ಬೇರೆ ಪಾದವೆಂಬ ವ್ಯವಧಾನವೂ ಇಲ್ಲ. ಆದ್ದರಿಂದ 'ಋತಂ ಪಿಬಂತೌ' ಎಂಬ ಮುಂದಿರುವ ವಾಕ್ಯವು ಬುದ್ಧಿತತ್ವ ಹಾಗೂ ಜೀವರನ್ನು ಪ್ರತಿಪಾದಿಸುವುದಾದರೆ ಅದರ ಹಿಂದಿನ ''ಯಸ್ಯ ಬ್ರಹ್ಮ ಚ ಕ್ಷತ್ರಂ ಚ'' ಎಂಬ ವಾಕ್ಯವೂ ಸಹ ಜೀವನನ್ನೇ ಪ್ರತಿಪಾದಿಸಬೇಕು. 'ಮಹಾತಂ ವಿಭುಮಾತ್ಮಾನಂ' ಎಂಬ ವಾಕ್ಯವು ಬ್ರಹ್ಮಪ್ರಕರಣವೆಂದು ಹೇಳಿದರೂ ಅದು ಭಗ್ನವಾಗುತ್ತದೆ. ಒಂದು ವೇಳೆ 'ಋತಂ ಪಿಬಂತೌ' ಎಂಬ ವಾಕ್ಯವು ಜೀವಬ್ರಹ್ಮರನ್ನು ವಿಷಯೀಕರಿಸುವುದಾದರೆ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯವೂ ಸಹ ಜೀವಬ್ರಹ್ಮರನ್ನೇ ವಿಷಯೀಕರಿಸುತ್ತದೆ.

ಹೀಗೆ ಹಿಂದಿನ ಶ್ರುತಿ ವಾಕ್ಯವು ಮುಂದಿನ ವಾಕ್ಯದ ಅರ್ಥವನ್ನು ಉಪಜೀವಿಸಿರುವುದರಿಂದ ಪರಸ್ಪರ ಉಪಜೀವ್ಯಉಪಜೀವಕಭಾವವು ಕಾಣಿಸುತ್ತದೆ. ಆದ್ದರಿಂದ ಈ ಎರಡೂ ವಿಷಯ ವಾಕ್ಯಗಳು ಒಂದೇ ಅಧಿಕರಣಕ್ಕೆ ಸಂಬಂಧಪಡಬೇಕೆಂದು ರಾಮಾನುಜರ ವಾದ.

*ರಾಮಾನುಜರ ವಿಷಯವಾಕ್ಯಗಳಿಗೆ ಉಪಜೀವ್ಯ ಉಪಜೀವಕ ಭಾವವಿಲ್ಲ*

ರಾಮಾನುಜರು ಅದ್ವೈತಿಗಳಂತೆ ಕಠೋಪನಿಷತ್ತಿನಲ್ಲಿರುವ ವಾಕ್ಯಗಳನ್ನೇ ನಾಲ್ಕೂ ಸೂತ್ರಗಳ ವಿಷಯವಾಕ್ಯವೆನ್ನುತ್ತಾರೆ. ಒಂದೇ ಪ್ರಕರಣದಲ್ಲಿರುವ ವಿಷಯವಾಕ್ಯದ ಸಮನ್ವಯಕ್ಕಾಗಿ ಎರಡು ಅಧಿಕರಣವು ಅನಾವಶ್ಯಕವೆಂಬ ದೋಷವು ಅದ್ವೈತಿಗಳಿಗೆ ಬರುತ್ತದೆ ಹೊರತು ನಮಗೆ ಬರುವುದಿಲ್ಲ. ಏಕೆಂದರೆ ಹಿಂದಿನ ಅಧಿಕರಣಕ್ಕೆ ಬೃಹದಾರಣ್ಯಕವು ವಿಷಯವಾಗಿದೆ. ಈ ಅಧಿಕರಣಕ್ಕೆ 'ಋತಂ ಪಿಬಂತೌ' ಎಂಬುದು ಕಾಠಕದ ವಿಷಯವಾಗಿದೆ ಎಂಬುದು ನಮ್ಮ ಸಿದ್ಧಾಂತ.

ಈ ಅಧಿಕರಣದಲ್ಲಿ ವಿಚಾರ ಮಾಡುವ 'ಋತಂ ಪಿಬಂತೌ' ಎಂಬ ವಾಕ್ಯವನ್ನು ಉಪಜೀವಿಸಿಕೊಂಡು ಹಿಂದಿನ ಅಧಿಕರಣದ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯವು ಬ್ರಹ್ಮಪರವಾಗುತ್ತದೆಂಬುದು ರಾಮಾನುಜರ ವಾದ. ಆದರೆ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವು 'ಋತಂ ಪಿಬಂತೌ' ಎಂಬ ವಾಕ್ಯಕ್ಕಿಂತ ಮೊದಲೇ ಪ್ರಸಕ್ತವಾಗಿರುವುದರಿಂದ 'ಮಹಾಂತಂ ವಿಭುಂ' ಇತ್ಯಾದಿ ಹಿಂದಿನ ವಾಕ್ಯದ ಬಲದಿಂದ ಬ್ರಹ್ಮಪರವೆಂದು ಮೊದಲೇ ನಿರ್ಣಯವಾಗಿದೆ. ಹೀಗಿರುವಾಗ ಮುಂದಿರುವ 'ಋತಂ ಪಿಬಂತೌ' ಎಂಬ ವಾಕ್ಯದ ಬಲದಿಂದ ಬ್ರಹ್ಮಪ್ರಕರಣವಾಗುವುದಿಲ್ಲವೆಂಬ ಶಂಕೆಯೇ ತಪ್ಪಾಗುತ್ತದೆ. ಸಾನ್ನಿಧ್ಯ ಪ್ರಮಾಣದಿಂದ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವು ಬ್ರಹ್ಮಪ್ರಕರಣಕ್ಕೆ ವಿಚ್ಛೇದವಾಗಬಹುದಲ್ಲವೇ ಎಂಬುದು ಅವರ ಆಕ್ಷೇಪ.

ಆದರೆ ಪರಮಪ್ರಮಾಣವೆಂದು ಅವರೇ ಒಪ್ಪಿಕೊಂಡಿರುವ ಪೂರ್ವಮೀಮಾಂಸೆಯಲ್ಲಿ ಸಾನ್ನಿಧ್ಯ ಪ್ರಮಾಣಕ್ಕಿಂತ ಪ್ರಕರಣ ಪ್ರಮಾಣವು ಬಲಿಷ್ಠವೆಂದು ನಿರ್ಣಯಿಸಲಾಗಿದೆ.

ಯಾವ ಕಾರಣದಿಂದ 'ಸಾಮಿಧೇನೀ' ಪ್ರಕರಣವು 'ನಿವಿನ್ನಾಮಕ' ಮಂತ್ರಗಳಿಂದ ವಿಚ್ಛೇದವಾಗುತ್ತದೋ? ಆ ಕಾರಣದಿಂದಲೇ ಪುನಃ 'ಕಾಮ್ಯಸಾಮಿಧೇನೀ' ಮಂತ್ರಗಳಿಂದ. 'ಉಪವೀಯತೇ' ಎಂಬ ಮಂತ್ರವು ಸಂಧಾನ ಹೊಂದಲು ಸಮರ್ಥವಾಗುವುದಿಲ್ಲ. ಹೀಗೆ ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದಂತೆ ಮೊದಲೇ ಪ್ರಾಪ್ತವಾದ ಬ್ರಹ್ಮಪ್ರಕರಣಕ್ಕೆ 'ಋತಂ ಪಿಬಂತೌ' ಎಂಬ ವಾಕ್ಯವು ವಿಚ್ಛೇದಕವಾಗುವುದಿಲ್ಲ. ಆದ್ದರಿಂದ 'ಋತಂ ಪಿಬಂತೌ'

ಎಂಬ ಶ್ರುತಿಯು 'ಯಸ್ಯ ಬ್ರಹ್ಮ ಚ' ಎಂಬ ಶ್ರುತಿಗೆ ಉಪಜೀವ್ಯವಾಗಿದೆಯೆಂದು ಯಾವುದೇ ಕಾರಣದಿಂದಲೂ ಹೇಳಲಾಗದು.

*ಒಂದೇ ಪ್ರಕರಣದಲ್ಲಿರುವಿಕೆಯು ಐಕಾಧಿಕರಣ್ಯಕ್ಕೆ ತಂತ್ರವಲ್ಲ*

ಇದೇ ಪಾದದಲ್ಲಿರುವ ಅದೃಶ್ಯತ್ವಾಧಿಕರಣದ ವಿಷಯವಾಕ್ಯವು ಮುಂದಿನ ಪಾದದಲ್ಲಿರುವ ದ್ಯುಭ್ವಾದ್ಯಧಿಕರಣದ ವಿಷಯವಾಕ್ಯವು 'ಮಾಂಡೋಕ್ಯೋಪನಿಷತ್' ಎಂಬ ಒಂದೇ ಪ್ರಕರಣದಲ್ಲಿದೆ. ಮತ್ತು ಆ ಎರಡು ವಿಷಯವಾಕ್ಯಗಳಿಗೆ ಪರಸ್ಪರ ಉಪಜೀವ್ಯಜೀವಕಭಾವವೂ ಸಹ ಇದೆ. ಆದರೂ ಸಹ ಸೂತ್ರಕಾರರು ಬೇರೆ ಬೇರೆ ಅಧಿಕರಣಗಳನ್ನಾಗಿ ಪರಿಗಣಿಸಿದ್ದಾರೆ. ಅದರಂತೆ ಪ್ರಕೃತದಲ್ಲಿಯೂ ವಿಷಯವಾಕ್ಯಗಳು ಒಂದೇ ಪ್ರಕರಣದಲ್ಲಿದ್ದರೂ ವಿಭಿನ್ನವಾಗಿರುವುದರಿಂದ ಅಧಿಕರಣಗಳೂ ಸಹ ಪ್ರತ್ಯೇಕವೇ ಆಗುತ್ತವೆ.

*ಒಂದು ವಾಕ್ಯವೇ ಅನೇಕ ಅಧಿಕರಣಗಳಿಗೆ ವಿಷಯವಾಗಬಹುದು*

ಒಂದೇ ಪ್ರಕರಣದಲ್ಲಿರುವ ವಿಷಯವಾಕ್ಯವನ್ನು ವಿಚಾರ ಮಾಡಿದರೆ ಅಥವಾ ಪರಸ್ಪರ ಆಯಾ ಎರಡು ವಾಕ್ಯಗಳಿಗೆ ಪರಸ್ಪರ ಉಪಜೀವ್ಯೋಪಜೀವಕಭಾವವಿದ್ದರೆ ಪಾದ ಅಥವಾ ಅಧಿಕರಣಗಳಿಂದ ತಡೆಯಿಲ್ಲದಿದ್ದರೆ ಅಧಿಕರಣ ಭೇದವನ್ನು ಮಾಡಬಾರದೆಂಬುದು ರಾಮಾನುಜರ ಸಮರ್ಥನೆ. ಇಲ್ಲಿಯ ತನಕ ಒಂದೇ ಪ್ರಕರಣದಲ್ಲಿರುವಿಕೆಯು ಅಧಿಕರಣ ಭೇದಕ್ಕೆ ವಿರೋಧವಲ್ಲವೆಂದು ಸಮರ್ಥಿಸಿದೆವು. ಈಗ ಪೂರ್ವಮೀಮಾಂಸೆಯ ದೃಷ್ಟಾಂತದಿಂದ ಒಂದೇ ವಾಕ್ಯವನ್ನು ಅನೇಕ ಅಧಿಕರಣದಲ್ಲಿ ವಿಚಾರ ಮಾಡುವುದೂ ಸಹ ತಪ್ಪಲ್ಲವೆಂದು ಸಮರ್ಥಿಸುತ್ತಿದ್ದಾರೆ.

ಔದುಂಬರಾಧಿಕರಣದಲ್ಲಿ 'ಔದುಂಬರೋ ಯೂಪೋ ಭವತಿ' ಎಂಬ ವಾಕ್ಯವನ್ನು ವಿಚಾರ ಮಾಡಿದಂತೆ 'ಯಸ್ಯ ಪರ್ಣಮಯಿ ಜೂಹೂರ್ಭವತಿ' ಎಂಬ ವಾಕ್ಯವನ್ನೂ ಸಹ ವಿಚಾರ ಮಾಡಿದ್ದಾರೆ. ಈ ಎರಡು ವಾಕ್ಯಗಳನ್ನೇ ಪುನಃ ಪರ್ಣಮಯ್ಯಧಿಕರಣದಲ್ಲಿಯೂ ವಿಚಾರ ಮಾಡುತ್ತಾರೆ. ಈ ವಾಕ್ಯಗಳಿಗೆ ಪರಸ್ಪರ ಉಪಜೀವ್ಯೋಪಜೀವಕಭಾವವಿದೆ. ಆದರೂ ಒಂದೇ ವಾಕ್ಯಗಳನ್ನು ವಿಚಾರ ಮಾಡಲು ಎರಡು ಅಧಿಕರಣಗಳು ಅನಿವಾರ್ಯವೆಂದು ಮೀಮಾಂಸಕರು ಒಪ್ಪಿದ್ದಾರೆ. ಹೀಗಿರುವಾಗ ಒಂದು ಪ್ರಕರಣದಲ್ಲಿರುವ ಬೇರೆ ಬೇರೆ ವಾಕ್ಯಗಳನ್ನು ವಿಚಾರ ಮಾಡಲು ಎರಡು ಅಧಿಕರಣಗಳು ಹೊರಡುವುದರಲ್ಲಿ ಏನೂ ತಪ್ಪಿಲ್ಲ.

ಆದ್ದರಿಂದಲೇ ನಮ್ಮ ಸಿದ್ಧಾಂತದಲ್ಲಿ ಅಂತಿಮಪ್ರಾಣಾಧಿಕರಣ ಹಾಗೂ ಸರ್ವಗತತ್ವಾಧಿ-ಕರಣವು ಒಂದೆ ಪ್ರಕರಣದಲ್ಲಿರುವ ಎರಡು ವಾಕ್ಯವನ್ನು ವಿಚಾರ ಮಾಡುತ್ತಿದ್ದರೂ ಅವುಗಳಿಗೆ ಪರಸ್ಪರ ಉಪಜೀವ್ಯೋಜೀವ್ಯಕಭಾವವಿದ್ದರೂ ಅಧಿಕರಣದ ಭೇದವು ತಪ್ಪಾಗುವುದಿಲ್ಲ. ಮುಂದೆಯೂ ಸಹ 'ಅನುಕೃತೇಃ' ಎಂಬ ಅಧಿಕರಣದಲ್ಲಿ ಮತ್ತು 'ಶಬ್ದಾದೇವ' ಎಂಬ ಅಧಿಕರಣದಲ್ಲಿ ಒಂದೇ ಪ್ರಕರಣದಲ್ಲಿರುವ ವಾಕ್ಯವನ್ನೇ ವಿಚಾರ ಮಾಡುವವರಿದ್ದೇವೆ.

*ಪೂರ್ವಮೀಮಾಂಸಾಶಾಸ್ತ್ರದಿಂದ ಪುನರುಕ್ತಿ*

''ಅತ್ತಾ ಚರಾಚರಗ್ರಹಣಾತ್'' ಎಂಬ ಸೂತ್ರಕ್ಕೆ ಸಾಧಾರಣಾಕಾರವಾದ ಗೌಣಾರ್ಥವನ್ನು ಬಿಟ್ಟು ಅಸಾಧಾರಣಾಕಾರವಾದ ಗೌಣಾರ್ಥವನ್ನು ಮಾಡಬೇಕೆನ್ನುತ್ತಾರೆ. ಈ ವಿಚಾರವನ್ನು ಪೂರ್ವಮೀಮಾಂಸಾ ಶಾಸ್ತ್ರದಲ್ಲಿ

ನಿರ್ಣಯ ಮಾಡಿದ್ದರಿಂದ ಇಲ್ಲಿ ನಿರ್ಣಯಿಸಬೇಕಾಗಿಲ್ಲ. 'ಪ್ರೋದ್ಗಾತ್ರೃಣಾಂ' ಎಂಬಲ್ಲಿ ಮತ್ತು 'ಮಾಸಮಗ್ನಿಹೋತ್ರಂ' ಎಂಬಲ್ಲಿ ಅಸಾಧಾರಣಾಕಾರವಾದ ಲಕ್ಷಣಾವನ್ನು ಮಾಡದೆ ಸಾಧಾರಾಣಕಾರವಾದ ಲಕ್ಷಣಾವನ್ನೇ ಮಾಡಬೇಕೆಂದು ಪ್ರೋದ್ಗಾತ್ರಧಿಕರಣದಲ್ಲಿ ಮತ್ತು ಮಾಸಾಗ್ನಿಹೋತ್ರಾಧಿಕರಣದಲ್ಲಿ ನಿರ್ಣಯಿಸಿದ್ದಾಗಿದೆ. ಪುನಃ ಇಲ್ಲಿ ಅದನ್ನೇ ಸಾಧಿಸಿದರೆ ಪುನರುಕ್ತಿ ಬರುತ್ತದೆ. ಪೂರ್ವಮೀಮಾಂಸಾಶಾಸ್ತ್ರವೂ ಸೇರಿ ಇಪ್ಪತ್ತು ಅಧ್ಯಾಯವು ಒಂದೇ ಶಾಸ್ತ್ರವೆಂದು ಹೇಳುವ ರಾಮಾನುಜರಿಗೆ ಮಾತ್ರ ಈ ದೋಷ.

# ಅಂತರಾಧಿಕರಣ

*ಅಕ್ಷಿವಾಕ್ಯವೇ ವಿಷಯ ಅಗ್ನಿಯೋ, ವಿಷ್ಣುವೋ ? ಎಂದು ಸಂಶಯ*

ಅಂತರಾಧಿಕರಣವು ಪ್ರಾರಂಭವಾಗುತ್ತಿದೆ. ಛಾಂದೋಗ್ಯದ ನಾಲ್ಕನೆಯ ಅಧ್ಯಾಯದಲ್ಲಿ ಉಪಕೋಸಲ ವಿದ್ಯೆಯು ಪ್ರಸಕ್ತವಾಗಿದೆ. ಆ ಸಂದರ್ಭದಲ್ಲಿ "ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ ಏತದಮೃತಮಭಯಮೇತದ್ ಬ್ರಹ್ಮ" ಎಂಬ ವಾಕ್ಯವು ಕೇಳಿಸುತ್ತಿದೆ. ಮೇಲ್ನೋಟಕ್ಕೆ ಅಗ್ನಿಯನ್ನು ಇದು ಪ್ರತಿಪಾದಿಸುವಂತೆ ಕಾಣಿಸುತ್ತಿದೆ. ಆದರೆ ವಿಷ್ಣುವೇ ಪ್ರತಿಪಾದ್ಯನೆಂಬುದು ಅಂತಿಮ ನಿರ್ಣಯ.

ಆದ್ದರಿಂದ ಒಂದುವೇಳೆ ವಿದ್ಯಾಭೇದವು ಅಯುಕ್ತವಾದರೆ ಆವಾಗ "ಕಂ ಬ್ರಹ್ಮ" ಎಂಬುದು ಅಧ್ಯಾತ್ಮವಿದ್ಯೆಯೆಂದು "ಯ ಏಷೋಂತರಾದಿತ್ಯೇ" ಎಂಬುದು ಅಸ್ಮದ್‌ವಿದ್ಯೆಯೆಂದು ಹೇಳಬೇಕಾಗುತ್ತದೆ. ಆವಾಗ ಆದಿತ್ಯಸ್ಥ ಪುರುಷನಲ್ಲಿ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದವು ಅಗ್ನಿಪರವಾಗುವುದರಿಂದ ಬಾಧಕವಶಾತ್ ಅಗ್ನಿಯಿಂದ ಅಭಿನ್ನನಾದ ಕಣ್ಣಿನಲ್ಲಿರುವವನಲ್ಲಿ ಕೇಳಿಸಲ್ಪಟ್ಟ ಅಮೃತತ್ವಾದಿಗಳನ್ನು ಗೌಣವೆನ್ನಬೇಕಾಗುತ್ತದೆ. ಹೀಗೆ ಅಗ್ನಿಶ್ರುತ್ಯಾದಿಗಳ ಬಲದಿಂದ ಅಗ್ನಿಯೇ ಚಕ್ಷುರಂತಸ್ಥನಾಗಿದ್ದಾನೆಂದು ಸಿದ್ಧವಾಗುತ್ತದೆ. ಇದು ಪೂರ್ವಪಕ್ಷದ ಫಲ.

ಒಂದು ವೇಳೆ ವಿದ್ಯಾಭೇದವು ಕೂಡುವುದಾದರೆ 'ಅಹಂ' ಶಬ್ದವು ಶಾಸ್ತ್ರದ ಪ್ರಕಾರ ಬ್ರಹ್ಮಪರವಾಗುತ್ತದೆ. ಆವಾಗ ಯಾವುದೇ ಬಾಧಕವಿಲ್ಲದ ಕಾರಣ ಅಮೃತತ್ವಾದಿಗಳು ಮುಖ್ಯವೇ ಆಗುತ್ತವೆ. ಇಂತಹ ಅಮೃತತ್ವಾದಿ ಲಿಂಗಗಳ ಬಲದಿಂದ ವಿಷ್ಣುವೇ ಶ್ರುತಿಪ್ರತಿಪಾದ್ಯನಾಗುತ್ತಾನೆಂಬುದು ಸಿದ್ಧಾಂತದ ಫಲ.

*ಅಕ್ಷಿ ಶಬ್ದವು ಅಭಿಮಾನಿಪರವೆಂದು ಪೂರ್ವಪಕ್ಷ*

'ಯ ಏಷಃ ಅಂತರಕ್ಷಿಣಿ' ಎಂಬ ಶ್ರುತಿಯಲ್ಲಿ ಚಕ್ಷುರಂತರ್ಗತನಾದವನು ಅಗ್ನಿದೇವತೆಯೆಂದು ಪೂರ್ವಪಕ್ಷ. ಏಕೆಂದರೆ ಅಗ್ನಿಯೇ ಸ್ವತಃ ತನ್ನನ್ನು ಆದಿತ್ಯದೇವತೆಯೆಂದು ಹೇಳಿಕೊಂಡಿದ್ದಾನೆ. ಚಕ್ಷುರಭಿಮಾನಿದೇವತೆ ಹಾಗೂ ಆದಿತ್ಯ ದೇವತೆ ಒಬ್ಬನೇ ಎಂದು 'ಆದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣಿ ಪ್ರಾವಿಶತ್' ಎಂಬ ಶ್ರುತಿಯಿಂದ ತಿಳಿಯುತ್ತದೆ.

'ಅಕ್ಷಿ' ಶಬ್ದವು ಮುಖ್ಯವಾಗಿ ಕಣ್ಣಿಗೆ ಅಭಿಮಾನಿಯಾದ ದೇವತೆಯನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತಿದೆ ಎಂದು ಅಭಿಮಾನ್ಯಧಿಕರಣದಿಂದ ನಿರ್ಣಯವಾಗಿದೆ. ಮತ್ತು 'ಯಶ್ಚಕ್ಷುಷಿ ತಿಷ್ಠನ್' ಎಂಬ ಮತ್ತೊಂದು ಶ್ರುತಿಯಲ್ಲಿ ಪ್ರತಿಪಾದ್ಯವಾದ 'ಚಕ್ಷುಸ್ಸೇ ಅಂತರಕ್ಷಿಣಿ ಪುರುಷಃ' ಎಂಬಲ್ಲಿರುವ ಅಕ್ಷಿಶಬ್ದದಿಂದ ವಿವಕ್ಷಿತವಾಗಿದೆ. ಆ ಶ್ರುತಿಯಲ್ಲಿ

ಹೇಳಲ್ಪಟ್ಟ 'ಚಕ್ಷುಷಃ ಯಂ ಚಕ್ಷುರ್ನವೇದ' ಎಂಬ ವಾಕ್ಯಶೇಷದಿಂದ ಚೇತನಪರವೆಂದು ಸಿದ್ಧವಾದ ಮೇಲೆ ಅಂತರಕ್ಷಿಣಿ ಎಂಬಲ್ಲಿರುವ ಅಕ್ಷಿಯೂ ಸಹ ಚೇತನಪರವೇ ಆಗಬೇಕು. ಈ ವಿಷಯದಲ್ಲಿ ಭಾಷ್ಯ ಹಾಗೂ ಸನ್ನ್ಯಾಯರತ್ನಾವಳಿಗಳ ಸಮ್ಮತಿಯೂ ಇದೆ.

### *ಅಕ್ಷಿಶಬ್ದವು ಜಡಪರವೂ ಆಗಬಹುದು*

ಅಥವಾ 'ಅಂತರಕ್ಷಿಣಿ ಪುರುಷಃ' ಎಂಬಲ್ಲಿರುವ ಅಕ್ಷಿ ಶಬ್ದವು ಜಡಪರವೆಂದು ಹೇಳಲು ಯಾವುದೇ ಶ್ರುತಿಯಿಲ್ಲ. ಪ್ರತ್ಯುತ ಸ್ಥಾನಾದಿಸೂತ್ರಗಳೆಲ್ಲವು ಸ್ವರಸವೇ ಆಗುತ್ತವೆ. 'ಯ ಏಷಃ ಆದಿತ್ಯೇ' ಎಂಬ ಮತ್ತೊಂದು ವಾಕ್ಯದ ಉಲ್ಲೇಖವು ಅನಾವಶ್ಯಕವಾಗುತ್ತದೆ.

ಆದಿತ್ಯಮಂಡಲ ಹಾಗೂ ಅಕ್ಷಿಗೋಲಕದಲ್ಲಿ ಒಬ್ಬನೇ ಚೇತನನಿರುವುದರಿಂದ 'ಏಕವಿಧತ್ವಾತ್' ಎಂಬ ಟೀಕೆಯು ಸ್ವಾರಸ್ಯವಾಗುತ್ತದೆ. ಆದ್ದರಿಂದ ಜಡಭೂತವಾದ ಅಧಿಷ್ಠಾನಗಳು ಭಿನ್ನವಾದ್ದರಿಂದ ಚೇತನರೂ ಸಹ ಭಿನ್ನರೇ ಆಗಬೇಕೆಂದು ಹೇಳಲಾಗದು.

### *'ಸೋಽಹಮಸ್ಮಿ' ಎಂಬುದು ಅಗ್ನಿಯದ್ದೇ ಉಪದೇಶ*

ವಸ್ತುತಃ 'ಸೋಽಹಮಸ್ಮಿ' ಎಂಬ ಉಪದೇಶವು ವಿಷ್ಣುವಿನದ್ದೆಂದು ಪ್ರಶ್ನಿಸಬಹುದು. ಆದರೆ ಹಿಂದಿನ ಮುಂದಿನ ಪ್ರಕರಣವನ್ನು ನೋಡಿದಾಗ ಅಗ್ನಿಯ ಉಪದೇಶವೆಂದೇ ಸ್ಪಷ್ಟವಾಗುತ್ತದೆ. ಏಕೆಂದರೆ 'ಅಗ್ನಿಂ ಪರಿಚಚಾರ' ಇತ್ಯಾದಿಯಾಗಿ ಅನೇಕ ಬಾರಿ ಅಗ್ನಿ ಶಬ್ದವು ಕೇಳಿಸುತ್ತಿದೆ. ಮತ್ತು ಬಹುವಚನಾಂತವಾಗಿ ನಿರ್ದಿಷ್ಟವಾಗಿವೆ. ಮತ್ತು 'ಗಾರ್ಹಪತ್ಯ' ಮೊದಲಾದ ಅಗ್ನಿಯ ವಿಶೇಷ ರೂಪಗಳನ್ನು ಉಲ್ಲೇಖಿಸಿದೆ. ಈ ಮೂರು ಕಾರಣಗಳಿಂದ ಅಗ್ನಿಯೇ ಪ್ರತಿಪಾದ್ಯನೆನ್ನಬೇಕು.

ಅಂತಿಮಪ್ರಾಣಾಧಿಕರಣದ 'ಶಾಸ್ತ್ರದೃಷ್ಟ್ಯಾ' ಎಂಬ ಸೂತ್ರದಲ್ಲಿರುವ ನ್ಯಾಯದಂತೆ 'ಅಹಂ' ಶಬ್ದವು ಅಂತರ್ಯಾಮಿಯಾದ ವಿಷ್ಣುವನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಸ್ವತಃ ಅಗ್ನಿಯು ತನ್ನನ್ನು ಉಪಾಸನೆ ಮಾಡುವವರನ್ನು ರಕ್ಷಿಸುತ್ತೇನೆಂದು ಹೇಳಿಕೊಂಡಿದ್ದಾನೆ. ಬ್ರಹ್ಮನನ್ನು ಉಪಾಸನೆ ಮಾಡಿದರೆ ಅಗ್ನಿಯನ್ನು ರಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ತನ್ನ ಉಪಾಸನೆಯನ್ನೇ ಅಗ್ನಿಯು ಹೇಳಿಕೊಂಡಿದ್ದಾನೆಂದು ಹೇಳಬೇಕು.

### *ಅಗ್ನಿಯೇ ಪ್ರತಿಪಾದ್ಯನೆನ್ನಲು ಅಭ್ಯಾಸ ಅರ್ಥವಾದ ಬಹುಶ್ರುತಿಪ್ರಮಾಣಗಳ ಆಧಾರ*

ಅಕ್ಷಿ ಶ್ರುತಿಯಿಂದ ಅಗ್ನಿಯೇ ಪ್ರತಿಪಾದ್ಯನೆನ್ನಲು ಅನೇಕ ಬಾರಿ ಕೇಳಿಸುವ ಅಗ್ನಿ ಶಬ್ದವೇ ಪ್ರಮಾಣವೆಂದು ಸಾಧಿಸಿದರೂ ಅಷ್ಟೇ ಅಲ್ಲ 'ಸೋಽಹಮಸ್ಮಿಸ ಏವಾಽಹಮಸ್ಮಿ' ಎಂಬಲ್ಲಿ ಅವಧಾರಣಸಹಿತವಾದ ಅಭ್ಯಾಸವೂ ಸಹ ಪ್ರಮಾಣವಾಗಿದೆ. ಸ್ವರಸಪ್ರತಿಪನ್ನವಾದ ಅರ್ಥವನ್ನಷ್ಟೇ ಅಭ್ಯಾಸವು ಸ್ಪಷ್ಟಪಡಿಸುತ್ತದೆ.

ಉದಾ :- 'ಗಂಗಾಯಾಂ ಮೀನಃ' ಎಂದು ಹೇಳಿದಾಗ ಗಂಗಾ ಶಬ್ದಕ್ಕೆ ತೀರವೆಂಬರ್ಥವನ್ನು ಭ್ರಾಂತಿಯಿಂದ ಒಬ್ಬನು ತಿಳಿಯುತ್ತಾನೆ. ಆ ಭ್ರಾಂತಿಯನ್ನು ನಿರಾಸ ಮಾಡುವುದಕ್ಕಾಗಿ ಆಪ್ತನಾದವನು 'ಗಂಗಾಯಾಂ ಮೀನಃ' ಎಂಬ ಪದವನ್ನು ಅನೇಕ ಬಾರಿ ಪ್ರಯೋಗಿಸುತ್ತಾನೆ. ಅಂದರೆ ತೀರದಲ್ಲಿ ಮೀನು ಇರುವುದಿಲ್ಲ. ಗಂಗಾಪ್ರವಾಹದಲ್ಲೇ ಮೀನು ಇರುತ್ತದೆಂದು ಗಂಗಾಶಬ್ದದ ಅಭ್ಯಾಸದಿಂದ ಸ್ಪಷ್ಟಪಡಿಸುತ್ತಾನೆ. ಇದರಿಂದ ಮೊದಲು ಪ್ರಯೋಗಿಸಲ್ಪಟ್ಟ ಗಂಗಾಶಬ್ದವು

ಸ್ವರಸವಾದ ಪ್ರವಾಹ ಎಂಬರ್ಥವನ್ನೇ ಹೇಳುತ್ತದೆಂದು ತಿಳಿಯಬೇಕು. ಆದರಂತೆ ಪ್ರಕೃತ ಅಗ್ನಿಯೂ ನಾನೇ ಆಗಿದ್ದೇನೆ ಎಂಬ ಮಾತನ್ನು ಅನೇಕ ಬಾರಿ ಪ್ರಯೋಗಿಸುತ್ತಿದ್ದಾನೆ. ಇದರಿಂದ ಉಪದೇಶಕನು ಹೊರತು ವಿಷ್ಣುವಲ್ಲವೆಂದು ನಿರ್ಣಯವಾಗುತ್ತದೆ.

ಮತ್ತು ಉಪನಿಷತ್ತಿನಲ್ಲಿ 'ಅಸ್ಮದ್‌ವಿದ್ಯಾ ಆತ್ಮವಿದ್ಯಾ' ಎಂಬುದಾಗಿ 'ಕಂ ಬ್ರಹ್ಮ' ಎಂಬ ಬ್ರಹ್ಮವಿದ್ಯೆಯೇ ಬೇರೆ ಆದಿತ್ಯನ ಅಂತರ್ಗತನಾದವನ ವಿದ್ಯೆಯೇ ಬೇರೆಯೆಂದು ಹೇಳಲಾಗಿದೆ. ಇದರಿಂದಲೂ ಸಹ ಅಗ್ನಿವಿದ್ಯೆಯನ್ನು ಬ್ರಹ್ಮವಿದ್ಯೆಯೆನ್ನಬಾರದೆಂದು ತಿಳಿಯುತ್ತದೆ.

### *ಪೂರ್ವಪಕ್ಷ ಟೀಕೆಯಲ್ಲಿರುವ ಗೊಂದಲಗಳ ಪರಿಹಾರ*

ಟೀಕೆಯ ಪೂರ್ವಪಕ್ಷದಲ್ಲಿ ಅಗ್ನಿಯನ್ನು ಅಕ್ಷಿಸ್ಥನೆಂದು ಹೇಳಿದರೆ 'ಸಮಾಖ್ಯಾಶ್ರುತಿ' ವಿರೋಧ ಬರುತ್ತದೆಂದು ಹೇಳಿದ್ದಾರೆ, ಇದೇನೂ ತಪ್ಪಲ್ಲ. ಪೂರ್ವಪಕ್ಷಿಯು ಆದಿತ್ಯನಲ್ಲಿರುವವನು ಅಗ್ನಿಯೇ ಆಗಿದ್ದಾನೆಂದು ಎಲ್ಲಿಯ ತನಕ ನಿರ್ಣಯಿಸುವುದಿಲ್ಲವೋ ಅಲ್ಲಿಯ ತನಕ 'ಸಮಾಖ್ಯಾಶ್ರುತಿಯು' ವಿಷ್ಣುಪರವೇ ಆಗಿರುತ್ತದೆ.

ಇದರಂತೆ 'ಅಹಂ' ಶಬ್ದದ ಪ್ರಯೋಗವನ್ನು ವಿಷ್ಣುವಿನಲ್ಲಿ ಔಪಚಾರಿಕವೆನ್ನಲಾಗಿದೆ. ಇದರ ಅಭಿಪ್ರಾಯವೇನೆಂದರೆ ಆದಿತ್ಯನಲ್ಲಿ ಅಂತರ್ಗತನಾದ ವಿಷ್ಣುವಿನ ವಿಷಯದಲ್ಲಿ ಅಗ್ನಿಯಿಂದ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದವು ಔಪಚಾರಿಕವಾಗಿದೆಯೆಂದು ಅಭಿಪ್ರಾಯ.

ಮತ್ತು ಅಕ್ಷಿಸ್ಥನಾದವನು ವಿಷ್ಣುವೆಂದು ಹೇಳಿದರೆ ಅಪೂರ್ವತ್ವವು ಬರುತ್ತದೆಂದು ಹೇಳಿದ್ದಾರೆ. ಇದೂ ಸಹ ತಪ್ಪಲ್ಲ. ಅಗ್ನಿಯಲ್ಲಿ ಕಣ್ಣಿಗೆ ಕಾಣಿಸದ ಪ್ರಯುಕ್ತ ಅಪೂರ್ವತ್ವವನ್ನು ಹೇಳಬಹುದು. ಆದರೆ ವಿಷ್ಣು ಅತ್ಯಂತ ಅಲೌಕಿಕನಾದ್ದರಿಂದ ಅಗ್ನಿಗಿಂತ ಅತಿಶಯವಾದ ಅಪೂರ್ವತ್ವವು ವಿಷ್ಣುವಿನಲ್ಲೇ ಇರುತ್ತದೆ. ಅಥವಾ ಹಗಲಿನ ಹೊತ್ತು ಅಗ್ನಿಯ ಪ್ರಭೆಯು ಕಾಣಿಸದ ಕಾರಣ ಆದಿತ್ಯನಲ್ಲಿ ಪ್ರವೇಶವಾಗಿರುತ್ತದೆಂದು ಅನುಮಾನದಿಂದ ಸಾಧಿಸಬಹುದು. ಈ ಕಾರಣದಿಂದಲೂ ಅಗ್ನಿಯಲ್ಲಿ ಅಪೂರ್ವತ್ವವನ್ನು ಹೇಳಲಾಗದು.

'ಅಪಹತೇ ಪಾಪಕೃತ್ಯಾಂ' ಎಂಬುದನ್ನು ಟೀಕೆಯಲ್ಲಿ ಅರ್ಥವಾದ ವಾಕ್ಯವೆಂದಿದ್ದಾರೆ. ಆದರೆ ಇದು ಫಲವಾಕ್ಯವೂ ಆಗಿದೆ. ಅರ್ಥವಾದತ್ವ ಫಲತ್ವ ಎರಡೂ ಇರುವುದರಿಂದ ಟೀಕೆಯಲ್ಲಿ ಅರ್ಥವಾದ ವಾಕ್ಯವೆಂದು ಪರಿಗಣಿಸಿದ್ದು ತಪ್ಪಲ್ಲ? ಅಥವಾ ಫಲವನ್ನು ಹೇಳುವ ವಾಕ್ಯದಲ್ಲಿ ಫಲತ್ವ ಹಾಗೂ ಅರ್ಥವಾದತ್ವಗಳೆರಡೂ ಇದ್ದೇ ಇರುತ್ತದೆಂದು ತಿಳಿಯಬಹುದು.

ಮತ್ತು ಅಮೃತತ್ವ ಅಭಯತ್ವಗಳನ್ನು ಅಗ್ನಿಯಲ್ಲಿ ಉಪಪಾದಿಸಿದ್ದೂ ಸಹ ತಪ್ಪಲ್ಲ. ತನಗಿಂತ ಅಧಮ ದೇವತೆಗಿಂತ ಹೆಚ್ಚು ಅಮೃತತ್ವ ಅಭಯತ್ವಗಳು ಅಗ್ನಿಯಲ್ಲಿ ಇರುತ್ತದೆ. ಅಥವಾ ಈ ಹಿಂದೆ ಉಪಪಾದಿಸಿದ ಅರ್ಥವಾದ ಸಹಿತವಾದ ಬಹುಶ್ರುತಿಗಳ ಬಲದಿಂದ ಮುಖ್ಯವಾದ ಅಮೃತತ್ವವನ್ನೇ ಅಗ್ನಿಯಲ್ಲಿ ಹೇಳಬಹುದು.

### *ಕಣ್ಣಿನಲ್ಲಿರುವವನು ವಿಷ್ಣುವೇ ಎಂದು ಸಿದ್ಧಾಂತ*

ಕಣ್ಣಿನಲ್ಲಿರುವವನು ಭಗವಂತನೇ ಹೊರತು ಅಗ್ನಿಯಲ್ಲ. ಪ್ರತಿಯೊಬ್ಬ ಪುರುಷರ ಎಡಗಣ್ಣಿನಲ್ಲಿ ಸ್ತ್ರೀಪ್ರೇರಕವಾದ ಭಗವಂತನ 'ವಾಮನಿ' ಎಂಬ ರೂಪವಿದೆ. ಬಲಗಣ್ಣಿನಲ್ಲಿ ಪುರುಷ ಪ್ರೇರಕವಾದ 'ಭಾಮನಿ' ಎಂಬ ರೂಪವಿದೆ. ಈ ರೂಪಗಳನ್ನು ಅಗ್ನಿ ಸ್ವರೂಪವೆಂದು ಹೇಳಲು ಸಾಧ್ಯವೇ ಇಲ್ಲ. ಹಾಗೇನಾದರೂ ಹೇಳಿದರೆ ಕಣ್ಣಿನ ಒಳಗಡೆ ಕುಳಿತಿರುವ ಅಗ್ನಿಯನ್ನು ಪ್ರೇರಣೆ ಮಾಡಲು ಅನೇಕ ಜೀವಿಗಳ ಪ್ರವಾಹವೇ ಹರಿಯಬೇಕಾಗುತ್ತದೆ.

ಅಗ್ನಿದೇವತೆಯು 'ಪರಿಹ್ಯೇನಂ ಮ್ರಿಯಂತೇ' ಎಂಬ ಶ್ರುತಿ ಹೇಳುವಂತೆ ಮರಣಶೀಲನಾಗಿದ್ದಾನೆ. 'ಭೀಷಾಸ್ಮಾತ್' ಎಂಬ ಶ್ರುತಿ ಹೇಳುವಂತೆ ಭಗವಂತನಿಗೆ ಹೆದರಿ ಪಲಾಯನ ಮಾಡುತ್ತಾನೆ. ಆದ್ದರಿಂದ ಅಮೃತತ್ವ ಅಭಯತ್ವಗಳೆಲ್ಲವೂ ಸಹ ವಿಷ್ಣುವಿನ ನಿರವಕಾಶಲಿಂಗಗಳೆಂದು ಸಾಬೀತಾಗುತ್ತದೆ.

'ಸೋಽಹಮಸ್ಮಿ' ಎಂದು ಉಪದೇಶಿಸಿದವನು ಅಂತರ್ಯಾಮಿಯೇ ಹೊರತು ಅಗ್ನಿಯಲ್ಲ. ಅಗ್ನಿ ಶಬ್ದದ ಅಭ್ಯಾಸವೂ ಸಹ ಅಗ್ನಿಗೆ ಪ್ರಚೋದಕವಲ್ಲ. ಹಿಂದಿನ ಮುಂದಿನ ವಾಕ್ಯಗಳೆಲ್ಲವೂ ವಿಷ್ಣುವನ್ನು ಬೆಂಬಲಿಸುತ್ತಿರುವಾಗ ಮಧ್ಯದಲ್ಲಿರುವ ಅಭ್ಯಾಸದ ಶಕ್ತಿ ಹೀನವಾಗುತ್ತದೆ.

'ಅಸ್ಮದ್ವಿದ್ಯೆ' 'ಆತ್ಮವಿದ್ಯೆ' ಎಂಬ ವಿದ್ಯಾಭೇದದಿಂದ ಅಗ್ನಿಯು ಶ್ರುತಿಪ್ರತಿಪಾದ್ಯನೆಂಬ ಪೂರ್ವಪಕ್ಷದಲ್ಲಿ ಹುರುಳಿಲ್ಲ. ಏಕೆಂದರೆ ಒಬ್ಬನೇ ಬ್ರಹ್ಮನನ್ನು ವಿಷಯೀಕರಿಸುವ ವಿದ್ಯೆಗಳು ಪ್ರಕಾರಭೇದದಿಂದ ಅನೇಕ ಹೆಸರನ್ನು ಪಡೆಯಬಹುದು. ಬ್ರಹ್ಮವಿಷಯಕವಾದ ದಹರವಿದ್ಯೆ, ಪ್ರಾಣವಿದ್ಯೆ, ವೈಶ್ವಾನರವಿದ್ಯೆಗಳೇ ಇದಕ್ಕೆ ಉದಾಹರಣೆ.

*ಪ್ರಥಮಸೂತ್ರದ ವಿನ್ಯಾಸದಲ್ಲಿ ಸ್ವಾರಸ್ಯ*

ಈ ಅಧಿಕರಣದಲ್ಲಿ ಒಟ್ಟು ಐದು ಸೂತ್ರಗಳಿವೆ. ಐದು ಸೂತ್ರಗಳ ಜೋಡಣೆಯು ಅತ್ಯಂತ ಸ್ವಾರಸ್ಯಮಯವಾಗಿದೆ. ಅದು ಹೀಗೆ - ಪ್ರಥಮ ಸೂತ್ರವು ವಿಷಯವಾಕ್ಯದಲ್ಲೇ ಇರುವ ಶ್ರುತಿಲಿಂಗಾದಿಗಳನ್ನು ಹೇಳುತ್ತಿರುವ ಕಾರಣ ಮೊದಲೇ ಉಲ್ಲೇಖಿಸಲು ಅರ್ಹವಾಗಿದೆ.

ಸೂತ್ರದಲ್ಲಿರುವ ಅಂತರ ಎಂಬ ಪದಕ್ಕೆ ಕೇವಲ ಅಂತರ್ಯಾಮಿ ಎಂದರ್ಥವಲ್ಲ. ಕಣ್ಣಿನ ಒಳಗಡೆ ಅಂತರ್ಯಾಮಿಯಾಗಿದ್ದು ರಮಿಸುತ್ತಾನೆಂದರ್ಥ. 'ಅಂತರ' ಎಂಬರಲ್ಲಿರುವ 'ಅಂತ' ಎಂಬ ಉಪಪದವು ಅಂತರ್ಯಾಮಿಯೆಂಬರ್ಥವನ್ನು ಹೇಳಿದರೆ 'ರ' ಎಂಬ ಧಾತು 'ರಮಣ' ಎಂಬರ್ಥವನ್ನು ಹೇಳುತ್ತಿದೆ. ಕೇವಲ ಅಂತರ್ಯಾಮಿಯೆಂಬರ್ಥವು ವಿವಕ್ಷಿತವಾಗಿದ್ದಲ್ಲಿ 'ಅಂತ' ಎಂಬ ಶಬ್ದವು ಸಾಕಾಗಿತ್ತು. ಈ ರಮಣ ಎಂಬರ್ಥವನ್ನು ಶ್ರುತಿಯಲ್ಲಿರುವ ಆತ್ಮಶಬ್ದವು 'ಆದೇಯಂ ಮಾತಿ' ಎಂಬ ವ್ಯುತ್ಪತ್ತಿಯಿಂದ ಸ್ಪಷ್ಟಪಡಿಸುತ್ತಿದೆ. ಆದ್ದರಿಂದ ಪ್ರಥಮಸೂತ್ರಕ್ಕೆ ಹೀಗರ್ಥ. ಕಣ್ಣಿನ ಒಳಗಡೆ ಅಂತರ್ಯಾಮಿಯಾಗಿ ರಮಿಸುವವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಅಮೃತತ್ವ, ಅಭಯತ್ವ ಮತ್ತು ಬ್ರಹ್ಮಶಬ್ದ ಆತ್ಮಶಬ್ದಗಳೆಂಬ ಲಿಂಗಗಳೆಂದು ಎಂದು.

*ಉಳಿದ ಸೂತ್ರಗಳ ಜೋಡಣೆಯೂ ಅತ್ಯಂತ ಸ್ವಾರಸ್ಯಮಯ*

ವಿಷಯವಾಕ್ಯಗಳಲ್ಲಿರುವ ಶ್ರುತಿಲಿಂಗಗಳನ್ನು ಪ್ರಮಾಣವನ್ನಾಗಿ ಹೇಳುತ್ತಿರುವುದರಿಂದ ''ಅಂತರ ಉಪಪತ್ತೇಃ'' ಎಂಬ ಸೂತ್ರವು ಮೊದಲು ನಿಮಿತ್ತವಾಗಿವೆ. ಮುಂದಿನ ವಾಕ್ಯದಲ್ಲಿರುವ ಸ್ಥಾನಶಕ್ತಿ ಹಾಗೂ ಸ್ವರೂಪಶಕ್ತಿಗಳೆಂಬ ಲಿಂಗಗಳನ್ನು ಪ್ರತಿಪಾದಿಸುತ್ತಿರುವುದರಿಂದ 'ಸ್ಥಾನಾದಿವ್ಯಪದೇಶಾಚ್ಚ' ಎಂಬ ಸೂತ್ರವು ಎರಡನೆಯ ಸ್ಥಾನವನ್ನು ಹೊಂದಿದೆ.

ಪ್ರಕರಣದ ಪ್ರಾರಂಭದಲ್ಲಿರುವ ಬ್ರಹ್ಮನ ಲಿಂಗವನ್ನು ಪ್ರತಿಪಾದಿಸುವ ಕಾರಣ 'ಸುಖವಿಶಿಷ್ಟಾಭಿಧಾನಾದೇವಚ' ಎಂಬ ಸೂತ್ರವು ಮೂರನೆಯ ಸ್ಥಾನವನ್ನು ಅಲಂಕರಿಸಿದೆ.

ಉಪಕ್ರಮದಿಂದ ಪ್ರಾಪ್ತವಾದ ಬ್ರಹ್ಮಪ್ರಕರಣಕ್ಕೆ ವಿದ್ಯಾಭೇದವು ವಿಚ್ಛೇದಕವಾದಾಗ ಅದನ್ನು ಪರಿಹರಿಸಲು ಉಪಸಂಹಾರದಲ್ಲಿರುವ ಲಿಂಗವನ್ನು ಉಲ್ಲೇಖಿಸುವ "ಶ್ರುತೋಪನಿಷತ್ಕಗತ್ಯಭಿಧಾನಾಚ್ಚ" ಎಂಬ ಸೂತ್ರವು ನಾಲ್ಕನೆಯ ಸ್ಥಾನವನ್ನು ಪಡೆದಿದೆ.

ಪರಪಕ್ಷದಲ್ಲಿ ಬಾಧಕಗಳನ್ನು ಸಾಧಿಸುವುದರಿಂದ 'ಅನವಸ್ಥಿತೇರಸಂಭವಾಚ್ಚ ನೇತರಃ' ಎಂಬ ಸೂತ್ರವು ಕೊನೆಯ ಸ್ಥಾನವನ್ನು ಅಲಂಕರಿಸಿದೆ. ಹೀಗೆ ಸೂತ್ರಕಾರರ ಸೂತ್ರದ ಜೋಡಣೆ ಅತ್ಯಂತ ಸ್ವಾರಸ್ಯಮಯವಾಗಿದೆ.

*ಅದ್ವೈತಿಗಳಿಗೆ ರಾಮಾನುಜರಿಗೆ ಪುನರುಕ್ತಿ ದೋಷ*

ಅದ್ವೈತ ಮತದ ಪ್ರಕಾರ ಮತ್ತು ರಾಮಾನುಜ ಮತದ ಪ್ರಕಾರ ಈ ಅಧಿಕರಣವು ಪುನರುಕ್ತವಾಗಿದೆ. ಏಕೆಂದರೆ ಪ್ರಥಮಾಧ್ಯಾಯದ ಮೊದಲನೆಯ ಪಾದದಲ್ಲಿರುವ ಅಂತಸ್ಥತ್ವಾಧಿಕರಣವನ್ನು ಇವರಿಬ್ಬರು ಅಂತರಧಿಕರಣವೆಂದೇ ಗುರುತಿಸುತ್ತಾರೆ. ಮತ್ತು ಇಲ್ಲಿಯಂತೆ ಅಲ್ಲಿಯೂ ಸಹ ಛಾಂದೋಗ್ಯದ ಪ್ರಥಮಾಧ್ಯಾಯದ ವಾಕ್ಯವನ್ನು ಬ್ರಹ್ಮಪರವೆಂದು ಸಿದ್ಧಾಂತ ಮಾಡುತ್ತಾರೆ. ಅಲ್ಲಿ 'ಅತ ಯ ಏಷೋ ಅಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬ ವಾಕ್ಯವನ್ನೇ ಬ್ರಹ್ಮಪರವೆಂದು ಸಿದ್ಧಾಂತ ಮಾಡಿದ ಮೇಲೆ ಪುನಃ ಇಲ್ಲಿ ಆಕ್ಷೇಪಕ್ಕೆ ಅವಕಾಶವೇ ಇರುವುದಿಲ್ಲ.

ಇನ್ನು ಭಾಮತಿಯಲ್ಲಿ ಅಕ್ಷಿಯಲ್ಲಿರುವ ಜೀವವಿಶೇಷನು ಆ ಅಧಿಕರಣದ ಪೂರ್ವಪಕ್ಷಕ್ಕೆ ವಿಷಯನಾಗಿದ್ದಾನೆ. ಈ ಅಧಿಕರಣದ ಪೂರ್ವಪಕ್ಷಕ್ಕೆ ಛಾಯಾಪುರುಷನು ವಿಷಯನಾಗಿದ್ದಾನೆ. ಈ ಅಧಿಕರಣದ ವಿಷಯವಾಕ್ಯದಲ್ಲಿ ದೃಶ್ಯತ್ವಾದಿಗಳು ಕೇಳಿಸುತ್ತಿರುವುದರಿಂದ ಜೀವವಿಶೇಷನಲ್ಲಿ ದೃಶ್ಯತ್ವಾದಿಗಳು ಅಸಂಭಾವಿತವಾಗಿವೆ. ಆದರೆ ಛಾಯಾಪುರುಷನು ಪ್ರತ್ಯಕ್ಷಸಿದ್ಧನಾದ್ದರಿಂದ ದೃಶ್ಯತ್ವಕ್ಕೆ ಆಧಾರನಾಗಿದ್ದಾನೆಂದು ಅಭ್ಯಧಿಕಾಶಂಕೆಯನ್ನು ತೋರಿಸಿದೆ.

ಭಾಮತಿಯ ಈ ಧೋರಣೆ ಸರಿಯಿಲ್ಲ. ಕೇವಲ ದೃಶ್ಯತ್ವವೆಂಬ ಒಂದು ಹೇತು ಇಲ್ಲದ ಕಾರಣ ಜೀವಪಕ್ಷವನ್ನು ಬಿಡುವುದಾದರೆ ಪುರುಷತ್ವ, ಅಮೃತತ್ವ, ಸಂಯದ್ವಾಮತ್ವವೇ ಮೊದಲಾದ ಅನೇಕ ಧರ್ಮಗಳಿಲ್ಲದ ಛಾಯಾಪುರುಷ ಪಕ್ಷವನ್ನು ಖಂಡಿತವಾಗಿಯೂ ಬಿಡಬೇಕು. ಛಾಯಾಪುರುಷನಲ್ಲಿ ಸ್ತೋತ್ರ ಮಾಡುವುದಕ್ಕಾಗಿ ಅಮೃತ ಅಭಯ ಮೊದಲಾದ ಶಬ್ದಗಳನ್ನು ಪ್ರಯೋಗಿಸಲಾಗಿದೆಯೆಂದು ಹೇಳುವುದಾದರೆ ಜೀವಪಕ್ಷದಲ್ಲಿಯೂ ಇದು ಸಮಾನ. ಆದ್ದರಿಂದ ಯಾವುದೇ ಪ್ರಕಾರದಲ್ಲಿಯೂ ಅಭ್ಯಧಿಕಾಶಂಕೆಯನ್ನು ತೋರಿಸಲು ಸಾಧ್ಯವಿಲ್ಲದ ಕಾರಣ ಪುನರುಕ್ತಿದೋಷವನ್ನು ತಪ್ಪಿಸಿಕೊಳ್ಳಲಾಗದು.

*ಅದ್ವೈತಿಗಳ ಸೂತ್ರಾರ್ಥ ನಿರಾಕರಣೆ*

ಅದ್ವೈತಿಗಳ ಸಿದ್ಧಾಂತರಚನೆಯೂ ಸರಿಯಿಲ್ಲ. ಅಕ್ಷಿಸ್ಥನಾದವನು ಕಾರ್ಯಬ್ರಹ್ಮನಾದ ಚತುರ್ಮುಖನೆಂದು ಹೇಳಿದರೆ ಅವನಲ್ಲಿ 'ಅಮೃತತ್ವ', 'ಅಭಯತ್ವ' ಮೊದಲಾದ ಧರ್ಮಗಳು ಬರುವುದಿಲ್ಲ. ಆಕಾರ್ಯಬ್ರಹ್ಮನಾದರೆ ಅವನ ಉಪಾಸನೆಯಿಂದ ಅರ್ಚಿರಾದಿಮಾರ್ಗಗಮನವನ್ನು ಹೇಳಿದ್ದು ಅಯುಕ್ತವಾಗುತ್ತದೆ. ಏಕೆಂದರೆ ಕಾರ್ಯಬ್ರಹ್ಮನನ್ನು ಉಪಾಸನೆ ಮಾಡುವವರು ಮಾತ್ರ ಅರ್ಚಿರಾದಿಮಾರ್ಗದಲ್ಲಿ ಹೋಗುತ್ತಾರೆ. ಇದರಂತೆ ಅದ್ವೈತಿಗಳ ಸೂತ್ರ ವ್ಯಾಖ್ಯಾನವೂ ಸಮಂಜಸವಲ್ಲ.

೧. ''ಅಂತರ ಉಪಪತ್ತೇಃ'' ಎಂಬಲ್ಲಿ 'ರ' ಶಬ್ದವು ವ್ಯರ್ಥವಾಗುತ್ತದೆ. 'ಅಮೃತತ್ವಾದಿ' ಉಪಪತ್ತಿಗಳು ಕಾರ್ಯಬ್ರಹ್ಮನಲ್ಲಾಗಲೀ ಅಕಾರ್ಯಬ್ರಹ್ಮನಲ್ಲಾಗಲೀ ಕೂಡುವುದಿಲ್ಲ.

೨. ''ಸ್ಥಾನಾದಿವ್ಯಪದೇಶಾಚ್ಚ'' ಎಲ್ಲೆಡೆ ವ್ಯಾಪ್ತನಾದ ಪರಬ್ರಹ್ಮನು ಅಲ್ಪಸ್ಥಾನದಲ್ಲಿದ್ದಾನೆಂದು ''ಅರ್ಭಕೌಕಸ್ತ್ವಾತ್'' ಎಂಬ ಸೂತ್ರದಿಂದಲೇ ಸಮರ್ಥಿಸಿದ್ದಾಗಿದೆ. ಅದೇ ವಿಷಯವನ್ನು ಪ್ರತಿಪಾದಿಸುವ ಈ ಸೂತ್ರಕ್ಕೆ ಸಾರ್ಥಕ್ಯವಿಲ್ಲ.

೩. ''ಸುಖವಿಶಿಷ್ಟಾಭಿಧಾನಾದೇವಚ'' ಸುಖವಿಶಿಷ್ಟ ಶಬ್ದಕ್ಕೆ ಸುಖ ಸಂಬಂಧವೆಂಬರ್ಥವನ್ನು ಹೇಳಿದರೆ ಜೀವನಲ್ಲಿ ಹೇತು ವ್ಯಭಿಚರಿತವಾಗುತ್ತದೆ. ಅಪರಿಚ್ಛಿನ್ನತ್ವವೆಂಬ ಶ್ರೇಷ್ಠಸುಖದ ಸಂಬಂಧವನ್ನು ವಿವಕ್ಷಿಸಿದರೆ ಸುಖಸ್ವರೂಪನಾದ ನಿಮ್ಮ ಬ್ರಹ್ಮನಲ್ಲಿ ಸುಖಸಂಬಂಧ ಬರುವುದಿಲ್ಲ. ವಿಶಿಷ್ಟಬ್ರಹ್ಮನಲ್ಲಿ ಸುಖಸಂಬಂಧವಿದ್ದರೂ ಸುಖವು ಅಪರಿಚ್ಛಿನ್ನವಾಗಿಲ್ಲ.

೪. ''ಶ್ರುತೋಪನಿಷತ್ಕಭಿಧಾನಾತ್''ಅರ್ಚಿರಾದಿ ಮಾರ್ಗವು ಬ್ರಹ್ಮನನ್ನು ಮಿಥ್ಯಾಭೂತವಾಗಿ ಯಾರು ಉಪಾಸನೆ ಮಾಡುತ್ತಾನೋ ಅಂತಹವನಿಗೆ ಮಾತ್ರ ದೊರೆಯುತ್ತದೆಂಬುದು ನಿಮ್ಮ ಸಿದ್ಧಾಂತ. ನಿಜವಾದ ಬ್ರಹ್ಮಜ್ಞಾನಿಗೆ ಈ ಯಾವ ಮಾರ್ಗಗಳೂ ಸಹ ದೊರೆಯುವುದಿಲ್ಲ. ಆದ್ದರಿಂದ ಅರ್ಚಿರಾದಿಮಾರ್ಗ ಗಮನಕ್ಕೆ ಪರಬ್ರಹ್ಮನು ವಿಷಯನಾಗಲು ಸಾಧ್ಯವಿಲ್ಲದ ಕಾರಣ ಅಕ್ಷಿಸ್ಥನು ಬ್ರಹ್ಮನಾಗುವುದಿಲ್ಲ. ಮತ್ತು 'ಶ್ರುತೋಪನಿಷತ್ಕಸ್ಯ' ಎಂದು ಪದವಿಭಾಗ ಮಾಡುವುದಾದರೆ ಸೂತ್ರದಲ್ಲಿರುವ 'ಕ' ಶಬ್ದವು ವ್ಯರ್ಥವಾಗುತ್ತದೆ. ಸೂತ್ರದಲ್ಲಿರುವ 'ಗತಿ' ಶಬ್ದಕ್ಕೆ 'ಮಾರ್ಗ' ಎಂಬರ್ಥವೂ ಅಸ್ವರಸವಾಗಿದೆ.

೫. ''ಅನವಸ್ಥಿತೇರಸಂಭವಾಚ್ಚ ನೇತರಃ'' ಅನವಸ್ಥಾಶಬ್ದಕ್ಕೆ ಅಪ್ರಮಾಣಿಕವಾದ ಅನಂತ ವ್ಯಕ್ತಿ ಕಲ್ಪನೆಯೆಂಬ ದೋಷವು ಅರ್ಥವೆಂದು ಎಲ್ಲರೂ ಒಪ್ಪಿದ್ದಾರೆ. ಇದನ್ನು ಬಿಟ್ಟು ಚಕ್ಷುರಿಂದ್ರಿಯದಲ್ಲಿ ಛಾಯಾಪುರುಷನು ಅವಸ್ಥಿತನಾಗಿಲ್ಲ ಎಂಬರ್ಥವನ್ನು ಹೇಳುವುದು ತಪ್ಪಾಗುತ್ತದೆ. ಮತ್ತು ಸದಾಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳುವುದು ತಪ್ಪು. ಅಷ್ಟೇ ಅಲ್ಲದೆ 'ಉಪಪತ್ತೇಃ' ಎಂಬ ಮೊದಲನೇ ಸೂತ್ರದಿಂದಲೇ ಛಾಯಾಪುರುಷಾದಿಗಳಲ್ಲಿ ಅಮೃತತ್ವಾದಿಗಳು ಇರುವುದಿಲ್ಲವೆಂದು ತಿಳಿಯಲು ಬರುವಾಗ ಪುನಃ ಅದೇ ವಿಚಾರಕ್ಕಾಗಿ ಕೊನೆಯ ಸೂತ್ರ ಹೊರಡುವುದು ವ್ಯರ್ಥ. ಈ ಎಲ್ಲಾ ಕಾರಣಗಳಿಂದ ಅದ್ವೈತಿಗಳ ಸೂತ್ರವ್ಯಾಖ್ಯಾನವು ಅಸಾಧುವಾಗಿದೆ.

ರಾಮಾನುಜರೂ ಸಹ ಅದ್ವೈತಮತದ ಸಿದ್ಧಾಂತಕ್ಕೆ ಜೋತುಬಿದ್ದಿದ್ದಾರೆ. ಅವರನ್ನು ಪ್ರತ್ಯೇಕವಾಗಿ ನಿರಾಕರಿಸಬೇಕಿಲ್ಲ. ಇನ್ನು ರಾಮಾನುಜರ ಮತದಲ್ಲಿ ಹೊಸವಿಚಾರವೆಂದರೆ 'ಅತ ಏವ ಚ ಸ ಬ್ರಹ್ಮ' ಎಂಬ ಪ್ರಕ್ಷಿಪ್ತವಾದ ಸೂತ್ರವನ್ನು ನಾಲ್ಕನೆಯ ಸೂತ್ರವೆಂದು ಪರಿಗಣಿಸುತ್ತಾರೆ. ಆದರೆ ಯಾವರೀತಿಯಾಗಿ ಈಕ್ಷತ್ಯಧಿಕರಣದಲ್ಲಿ 'ಪ್ರತಿಜ್ಞಾವಿರೋಧಾತ್' ಎಂಬ ಸೂತ್ರವನ್ನು ಪ್ರಕ್ಷಿಪ್ತವಾದ್ದರಿಂದ ಉಪೇಕ್ಷಿಸಲಾಗಿತ್ತೋ ಅದರಂತೆ ಇದನ್ನೂ ಸಹ ಉಪೇಕ್ಷಿಸಬೇಕು.

ಅದ್ವೈತಿಗಳು ಏನೇ ವ್ಯಾಖ್ಯಾನಿಸಿದರೂ ಎಲ್ಲಾ ಅಧಿಕರಣಗಳಂತೆ ಇಲ್ಲಿಯೂ ಸಹ ಜೀವಬ್ರಹ್ಮಭೇದವನ್ನೇ ಒಪ್ಪಿಕೊಂಡಂತಾಯಿತು. ಚಕ್ಷುರಿಂದ್ರಿಯದಲ್ಲಿ ಜೀವನು ನೆಲೆಸಿಲ್ಲ ಬ್ರಹ್ಮನು ನೆಲೆಸಿದ್ದಾನೆಂದು ಅವರು ಸಾಧಿಸಿದ ಮೇಲೆ ಪುನಃ ಜೀವಬ್ರಹ್ಮಭೇದವನ್ನು ಬಾಯಿಬಿಟ್ಟು ಹೇಳಬೇಕಾಗಿಲ್ಲ.

॥ ಶ್ರೀಕೃಷ್ಣಾರ್ಪಣಮಸ್ತು ॥

*ಪರಿಪೂರ್ಣಚಂದ್ರಿಕಾ*

# ವಿಷಯಾನುಕ್ರಮಣಿಕೆ

## ಸರ್ವಗತತ್ವಾಧಿಕರಣ

## ಭಾಷ್ಯ ತತ್ತ್ವಪ್ರಕಾಶಿಕಾ

ಯೌಗಿಕ ಶಬ್ದಗಳ ಸಮನ್ವಯಕ್ಕಾಗಿ ಲಿಂಗಪಾದ ೧
ನಾರಾಯಣನೇ ಸರ್ವಗತನು ೧೪
ಜೀವ ಅಥವಾ ಸೂರ್ಯರು ಸರ್ವಗತರಲ್ಲ ೩೩
ಕರ್ಮಕರ್ತೃಭಾವವಿದ್ದಲ್ಲಿ ಭೇದವಿರಲೇಬೇಕು ೩೯
ವಿಷ್ಣು ಒಬ್ಬನೇ ಬ್ರಹ್ಮನು ೪೪
ತನ್ನನ್ನು ಸರ್ವಗತನೆಂದು ಶ್ರೀಕೃಷ್ಣನೇ ಹೇಳಿಕೊಂಡಿದ್ದಾನೆ ೫೧
ವ್ಯಾಪ್ತನಾದ ವಿಷ್ಣು ಸಣ್ಣ ಹೃದಯದಲ್ಲೂ ಇದ್ದಾನೆ ೬೧
ಜೀವನ ಜೊತೆಗಿದ್ದರೂ ಸಮಾನ ಭೋಗವಿಲ್ಲ ೭೧

## ತಾತ್ಪರ್ಯಚಂದ್ರಿಕಾ

ನಾಮಾತ್ಮಕಶಬ್ದಗಳ ಸಮನ್ವಯಸಿದ್ಧಿಗಾಗಿ ಲಿಂಗಸಮನ್ವಯ ೮೧
ಸರ್ವಗತತ್ವದ ಬಗ್ಗೆ ಸಂಶಯ ಪರಂಪರೆ ೮೯
ಆದಿತ್ಯನೇ ಸರ್ವಗತನೆಂದು ಪೂರ್ವಪಕ್ಷ ೯೧

ಅಂತರಧಿಕರಣದಿಂದ ಪುನುರುಕ್ತಿ ದೋಷ ೯೮

ಜೀವನೆಂಬ ಪೂರ್ವಪಕ್ಷಕ್ಕೂ ಅವಕಾಶವಿಲ್ಲ ೧೦೩

ಅಗ್ನೀಷೋಮೀಯ ಪಶುತಾಧಿಕರಣಮ್

ಪಶುಚೋದನಾಯಾ ಅನಿಯಮೋऽವಿಶೇಷಾತ್ (೬-೮-೧೦) ೧೦೬

ಪೂರ್ವಪಕ್ಷ ಹುಟ್ಟುವುದರಿಂದ ಅಧಿಕರಣವು ಆರಂಭಣೀಯ ೧೧೦

ಅಂತರಾದ್ಯಧಿಕರಣಗಳಿಂದ ಪುನರುಕ್ತಿ ಇಲ್ಲ ೧೧೬

ಒಬ್ಬ ದೇವತೆಯ ಪರ್ಯಾಯಶಬ್ದಗಳ ಸಮನ್ವಯವನ್ನು

ಬೇರೆ ಬೇರೆ ಅಧಿಕರಣಗಳಲ್ಲಿ ಮಾಡಬಹುದು ೧೨೩

ಸರ್ವಗತತ್ವಾಧಿಕರಣವು ನಾಮಪಾದದಲ್ಲಿ ಸೇರದು ೧೨೭

ಸಕಲ ಜೀವರೇ ಸರ್ವಗತರೆಂದು ಪೂರ್ವಪಕ್ಷ ೧೩೩

ಜೀವನ ಪ್ರಾಪಕಲಿಂಗಗಳು ಆದಿತ್ಯನಲ್ಲಿಲ್ಲ ೧೩೮

ಅಲ್ಪದೇಶದಲ್ಲಿರುವವನು ಸರ್ವಗತನಾಗಲಾರ ೧೪೨

ಸರ್ವಗತನಾದವನು ಅಲ್ಪದೇಶದಲ್ಲಿರಲಾರ ೧೪೭

ಬಾಧಕಪರಿಹಾರದೊಂದಿಗೆ ಪೂರ್ವಪಕ್ಷದ ಉಪಸಂಹಾರ ೧೫೪

ವಿಷ್ಣುವೇ ಸರ್ವಗತನೆಂದು ಸಿದ್ಧಾಂತ ೧೬೧

ಉಳಿದೆರಡು ಪೂರ್ವಪಕ್ಷ ಯುಕ್ತಿಗಳು ಬ್ರಹ್ಮನಲ್ಲೇ ಇವೆ ೧೬೫

ಆದಿತ್ಯ ಹಾಗೂ ಜೀವರ ಲಿಂಗಗಳೆಲ್ಲವು ವಿಷ್ಣುವಿನಲ್ಲಿ ಸಾವಕಾಶವಾಗಿವೆ ೧೭೧

ಸ್ವಪಕ್ಷದಲ್ಲಿ ಸಾಧಕ ಪ್ರಮಾಣಗಳೂ ಸಹ ಇವೆ ೧೮೦

| | |
|---|---|
| ಅಣುಜೀವನು ಎಲ್ಲೆಡೆ ವ್ಯಾಪಿಸಲಾರ | ೧೮೮ |
| ಕರ್ಮಕರ್ತೃಗಳಿಗೆ ಭೇದವಿರುವುದರಿಂದಲೂ ವಿಷ್ಣುವೇ ಸರ್ವಗತನು | ೧೯೩ |
| ಸೂತ್ರಗಳ ಜೋಡಣೆಯಲ್ಲೂ ಸ್ವಾರಸ್ಯ | ೧೯೮ |
| 'ಶಬ್ದವಿಶೇಷಾತ್' ಮೊದಲಾದ ಸೂತ್ರಗಳ ವಿನ್ಯಾಸಕ್ರಮ | ೨೦೩ |
| ಲಿಂಗಪಾದದ ಏಳು ಅಧಿಕರಣಗಳ ಉಪಾಧಿಗಳು | ೨೦೭ |
| ಅದ್ವೈತಿಗಳ ಅಧಿಕರಣಶರೀರ | ೨೧೭ |
| ಅದ್ವೈತಮತ ವಿಮರ್ಶೆ | ೨೩೧ |
| ಅಧಿಷ್ಠಾನ ತತ್ತ್ವಜ್ಞಾನವಿದ್ದಾಗ ಆರೋಪವು ಅಸಂಭಾವಿತ | ೨೩೬ |
| ಅದ್ವೈತಿಗಳ ಸೂತ್ರವ್ಯಾಖ್ಯಾನ ನಿರಾಕರಣೆ | ೨೪೧ |
| ಐದನೆಯ ಸೂತ್ರಾರ್ಥವೂ ಅಯುಕ್ತ | ೨೪೬ |
| ರಾಮಾನುಜರ ಅಧಿಕರಣ ವಿಮರ್ಶೆ | ೨೫೧ |
| ರಾಮಾನುಜರ ಮತನಿರಾಕರಣೆ | ೨೫೭ |
| ರಾಮಾನುಜರ ಸೂತ್ರಾರ್ಥ ನಿರಾಕರಣೆ | ೨೬೬ |
| ಟೀಕೆಯ ಕಠಿಣಪದಾರ್ಥ | ೨೭೮ |
| ಸರ್ವಗತತ್ವಾಧಿಕರಣದ ಪರಿಶಿಷ್ಟಗ್ರಂಥಗಳು | (೨೮೫-೩೧೨) |

## ಅತ್ತೃತ್ವಾಧಿಕರಣ -
## ಭಾಷ್ಯ ತತ್ತ್ವಪ್ರಕಾಶಿಕಾ


ಸಕಲ ಸಂಹಾರಕನಾದ ವಿಷ್ಣುವೇ ಎಲ್ಲವನ್ನು ತಿನ್ನುತ್ತಾನೆ. ೩೧೪

ವಿಷ್ಣುಪ್ರಕರಣವಾದ್ದರಿಂದಲೂ ವಿಷ್ಣುವೇ ಸಂಹಾರಕ ೩೩೦


## ತಾತ್ಪರ್ಯಚಂದ್ರಿಕಾ


ಪ್ರತ್ಯುದಾಹರಣ ಸಂಗತಿಯ ಪ್ರದರ್ಶನ ೩೪೨

ಅದಿತಿಶ್ರುತಿ ಹಾಗೂ ಅದಿತಿತ್ವಲಿಂಗಗಳಿಂದ ಪೂರ್ವಪಕ್ಷ ೩೪೫

ಜಾತಿರೂಪವಾದ ಅದಿತಿತ್ವವು ಬಲಿಷ್ಠಲಿಂಗ ೩೫೨

ಶ್ರುತಿಲಿಂಗಗಳ ನಿರವಕಾಶತ್ವವು ನ್ಯಾಯವಿವರಣಕ್ಕೆ ಸಮ್ಮತ ೩೫೬

ವಿಷ್ಣುಲಿಂಗ ಹಾಗೂ ವಿಷ್ಣುಪ್ರಕರಣಗಳು ಸಾವಕಾಶವಾಗಿವೆ ೩೬೦

ಪೌಷ್ಣಂ ಪೇಷಣಂ ವಿಕೃತೌ ಪ್ರತೀಯೇತಾಚೋದನಾತ್ಪ್ರಕೃತೌ (೩-೩-೧೮) ೩೬೬

ಕರ್ತೃಗುಣೇ ತು ಕರ್ಮಾಸಮವಾಯಾದ್ವಾಕ್ಯಭೇದಸ್ಸ್ಯಾತ್ (೩-೧-೯) ೩೬೭

ಸರ್ವಾತ್ತೃತ್ವ ವಿಷ್ಣುವಿನಲ್ಲಿ ಮಾತ್ರವೆಂದು ಸಿದ್ಧಾಂತ ೩೭೧

ವಿಷ್ಣುವಿನ ಸರ್ವಾತ್ತೃತ್ವಕ್ಕೆ ಅದಿತಿಶಬ್ದವೇ ಹೇತು ೩೮೧

ಅದ್ವೈತಿಗಳ ಅಧಿಕರಣ ಶರೀರ ೩೮೭

ಅದ್ವೈತಮತ ನಿರಾಕರಣೆ ೩೯೨

ಟೀಕೆಯ ಕಠಿಣಪದಾರ್ಥ ೩೯೯

ಅತ್ತೃತ್ವಾಧಿಕರಣದ ಪರಿಶಿಷ್ಟಗ್ರಂಥಗಳು (೪೦೫-೪೧೬)

## ಗುಹಾಧಿಕರಣ –

### ಭಾಷ್ಯ ತತ್ತ್ವಪ್ರಕಾಶಿಕಾ


ಪರಮಾತ್ಮನ ಎರಡು ರೂಪಗಳೇ ಹೃದಯಗುಹೆಯಲ್ಲಿವೆ ೪೧೮

ಬ್ರಹ್ಮ ಮೊದಲಾದ ವಿಶೇಷಣಗಳೂ ಕೂಡ ಪೂರಕವಾಗಿವೆ ೪೪೪


### ತಾತ್ಪರ್ಯಚಂದ್ರಿಕಾ


ಅವಾಂತರ ಸಂಗತಿ ನಿರೂಪಣೆ ೪೬೨

ಸಂಶಯ ಪರಂಪರೆ ೪೬೭

ಪ್ರಬಲವಾದ ಪೂರ್ವಪಕ್ಷ ೪೭೪

ಪೃಥಕ್ತ್ವನಿವೇಶಾತ್ಸಂಖ್ಯಯಾ ಕರ್ಮಭೇದಃ ಸ್ಯಾತ್ (೨-೨-೭) ೪೭೬

ದ್ವಿವಚನಶ್ರುತಿ ನಿರವಕಾಶವೆಂದು ಪೂರ್ವಪಕ್ಷ ೪೮೧

ಪ್ರಯಾಜೇಽಪೀತಿ ಚೇತ್ (೯-೨-೨೦) ೪೯೧

ಸಂದಂಶ ನ್ಯಾಯದಿಂದ ವಿಷ್ಣುವೇ ದ್ವಿವಚನಶ್ರುತಿ ಪ್ರತಿಪಾದ್ಯನೆಂದು ಸಿದ್ಧಾಂತ ೪೯೮

ಭೋಕ್ತೃ ಶ್ರೀಹರಿಯೇ ಹೊರತು ಜೀವನಲ್ಲ ೫೦೩

ದ್ವಿವಚನವೂ ಸಹ ಬಾಧಕವಲ್ಲ ೫೧೫

'ಅಪೂರ್ವೇ ತ್ವವಿಕಾರೋಽಪ್ರದೇಶಾತ್ಪ್ರತೀಯತೇ' (೯-೩-೫) ೫೧೮

ವಿಪ್ರತಿಪತ್ತೌ ವಿಕಲ್ಪಃ ಸ್ಯಾದ್ಗುಣೇ ತ್ವನ್ಯಾಯ್ಯ ಕಲ್ಪನೈಕದೇಶತ್ವಾತ್ (೯-೩-೪) ೫೧೯

ಪ್ರಾತಿಪದಿಕಾರ್ಥವಾದ ಸಂಖ್ಯೆಗೆ ಅನ್ವಯ ಮಾಡಬಹುದು ೫೨೩

''ದ್ವಿತ್ವಬಹುತ್ವಯುಕ್ತಂ ವಾ ಚೋದನಾತ್ತಸ್ಯ'' (೩-೩-೧೪) ೫೨೫

'ಅರ್ಥಾಭಾವಾತ್ ನೈವಂ ಸ್ಯಾದ್ಗುಣಮಾತ್ರಮಿತರತ್' ೫೨೬

ನಿರ್ಜ್ಞಾತ ವಿರುದ್ಧವಿಶೇಷಣತ್ವವೇ ಅವಿವಕ್ಷೆಗೆ ಪ್ರಯೋಜಕ ೫೩೦

ತೇಷಾಂ ತು ವಚನಾದ್ ದ್ವಿಯಜ್ಞವತ್ ಸಹ ಪ್ರಯೋಗಸ್ಸ್ಯಾತ್ (೧೦-೨-೧೩) ೫೩೫

ಮೊದಲು ನಿರ್ಣೀತವಾದದ್ದನ್ನು ಎಂದೂ ಬಿಡಬಾರದು ೫೪೦

ವಿವೃದ್ಧಿಃ ಕರ್ಮಭೇದಾತ್ಪೃಷದಾಜ್ಯವತ್ತಸ್ಯ ತಸ್ಯೋಪದಿಶ್ಯತೇ (೫-೩-೧) ೫೪೧

ನೈಮಿತ್ತಿಕಂತೂತ್ತರೋತ್ತರತ್ವಮಾನಂತರ್ಯಾತ್ಪ್ರತೀಯೇತ (೯-೨-೪) ೫೪೪

ಒಬ್ಬನೇ ಪರಮಾತ್ಮನಲ್ಲಿ ದ್ವಿತ್ವಾದಿ ಸಂಖ್ಯೆಗಳಿವೆ ೫೪೬

ದೃಷ್ಟಾಂತಪುರಸ್ಸರವಾಗಿ ಬ್ರಹ್ಮನಲ್ಲಿ ದ್ವಿತ್ವ ಏಕತ್ವಗಳ ಸಮರ್ಥನೆ ೫೫೦

ಮೇಧಪತಿತ್ವಂ ಸ್ವಾಮಿದೇವತಸ್ಯ ಸಮವಾಯಾತ್ಸರ್ವತ್ರ ಚ ಪ್ರಯುಕ್ತತ್ವಾತ್ತಸ್ಯ
ಚಾನ್ಯಾಯ್ಯನಿಗದತ್ವಾತ್ ಸರ್ವತ್ರೈವಾವಿಕಾರಃ ಸ್ಯಾತ್ (೯-೩-೧೨) ೫೫೩

ನ ಸಂಖ್ಯೋಪಸಂಗ್ರಹಾಧಿಕರಣದಿಂದ ಪುನರುಕ್ತಿ ಬರುವುದಿಲ್ಲ ೫೫೮

ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ (೧-೪-೩) ೫೬೦

ವಿಷ್ಣುಪರವೆನ್ನಲು ಛಾಯಾತಪ ಶಬ್ದವೆನ್ನಲು ಬಾಧಕವಲ್ಲ ೫೬೩

ಶಂಕರಭಾಷ್ಯದಲ್ಲಿ ಗುಹಾಧಿಕರಣ ೫೭೧

ಅದ್ವೈತಿಗಳಿಗೆ ಮುಳ್ಳಾದ ದ್ವಿವಚನ ೫೭೫

ಅದ್ವೈತಿಗಳ ಸಿದ್ಧಾಂತ ಕೇವಲ ಶಬ್ದದ ಕಲಹ ೫೮೧

ದ್ವಿತೀಯ ಸೂತ್ರಾರ್ಥ ನಿರಾಕರಣೆ ೫೮೮

ರಾಮನುಜರಿಗೆ ನಾಲ್ಕು ಸೂತ್ರಗಳು ಸೇರಿ ಒಂದೇ ಅಧಿಕರಣ ೫೯೮

ರಾಮಾನುಜರ ವಿಷಯವಾಕ್ಯಗಳಿಗೆ ಉಪಜೀವ್ಯ ಉಪಜೀವಕಭಾವವಿಲ್ಲ ೬೦೮

ಸಂದಿಗ್ಧೇ ತು ವ್ಯವಾಯಾದ್ವಾಕ್ಯಭೇದಸ್ಯ (೬-೧-೧೧) ೬೧೨

ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಸಮವಾಯೇ
ಪರದೌರ್ಬಲ್ಯಮರ್ಥವಿಪ್ರಕರ್ಷಾತ್ (೩-೩-೧೧) ೬೧೫

ಒಂದೇ ಪ್ರಕರಣದಲ್ಲಿರುವಿಕೆಯು ಐಕಾಧಿಕರಣ್ಯಕ್ಕೆ ತಂತ್ರವಲ್ಲ ೬೧೮

ಒಂದು ವಾಕ್ಯವೇ ಅನೇಕ ಅಧಿಕರಣಗಳಿಗೆ ವಿಷಯವಾಗಬಹುದು ೬೨೨

ಪೂರ್ವಮೀಮಾಂಸಾಶಾಸ್ತ್ರದಿಂದ ಪುನರುಕ್ತಿ ೬೩೧

ಟೀಕೆಯ ಕಠಿಣಪದಾರ್ಥ ೬೩೪

ಗುಹಾಧಿಕರಣದ ಪರಿಶಿಷ್ಟಗ್ರಂಥಗಳು (೬೪೧-೬೫೬)

## ಅಂತರಾಧಿಕರಣ

## ಭಾಷ್ಯ ತತ್ತ್ವಪ್ರಕಾಶಿಕಾ

ಚಕ್ಷುರಿಂದ್ರಿಯದಲ್ಲಿರುವವನೂ ಸಹ ವಿಷ್ಣುವೇ ೬೫೮

ಸ್ಥಾನಶಕ್ತಿಯಿಂದಲೂ ವಿಷ್ಣುವೇ ಅಂತರನು ೬೮೯

ಬ್ರಹ್ಮಪ್ರಕರಣದಲ್ಲಿ ಅಗ್ನಿಯು ಪ್ರಸಕ್ತನಾಗಲಾರ ೬೮೯

ಬ್ರಹ್ಮಪ್ರಾಪ್ತಿವೆಂಬ ಪ್ರಯೋಜನವೂ ಸಹ ಆಧಾರವಾಗಿದೆ ೭೦೮

ಅಗ್ನಿಯು ಅಂತರನಾದಲ್ಲಿ ಬಾಧಕವಿದೆ ೭೨೧

# ತಾತ್ಪರ್ಯಚಂದ್ರಿಕಾ


| | |
|---|---|
| ಅಕ್ಷಿವಾಕ್ಯವೇ ವಿಷಯ, ಅಗ್ನಿಯೋ, ವಿಷ್ಣುವೋ ? ಎಂದು ಸಂಶಯ | ೭೩೪ |
| ಅಕ್ಷಿ ಶಬ್ದವು ಅಭಿಮಾನಿಪರವೆಂದು ಪೂರ್ವಪಕ್ಷ | ೭೪೮ |
| ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್ (೨-೧-೩) | ೭೫೨ |
| ಅಕ್ಷಿಶಬ್ದವು ಜಡಪರವೂ ಆಗಬಹುದು | ೭೫೫ |
| 'ಸೋऽಹಮಸ್ಮಿ' ಎಂಬುದು ಅಗ್ನಿಯದ್ದೇ ಉಪದೇಶ | ೭೫೯ |
| ಅಗ್ನಿಯೇ ಪ್ರತಿಪಾದ್ಯನೆನ್ನಲು ಅಭ್ಯಾಸ ಅರ್ಥವಾದ | |
| ಬಹುಶ್ರುತಿಪ್ರಮಾಣಗಳ ಆಧಾರ | ೭೬೪ |
| ಪೂರ್ವಪಕ್ಷ ಟೀಕೆಯಲ್ಲಿರುವ ಗೊಂದಲಗಳ ಪರಿಹಾರ | ೭೬೯ |
| ಕಣ್ಣಿನಲ್ಲಿರುವವನು ವಿಷ್ಣುವೇ ಎಂದು ಸಿದ್ಧಾಂತ | ೭೭೮ |
| ಪ್ರಥಮಸೂತ್ರದ ವಿನ್ಯಾಸದಲ್ಲಿ ಸ್ವಾರಸ್ಯ | ೭೮೬ |
| ಉಳಿದ ಸೂತ್ರಗಳ ಜೋಡಣೆಯೂ ಅತ್ಯಂತ ಸ್ವಾರಸ್ಯಮಯ | ೭೯೨ |
| ಅದ್ವೈತಿಗಳಿಗೆ  ರಾಮಾನುಜರಿಗೆ ಪುನರುಕ್ತಿ ದೋಷ | ೭೯೮ |
| ಅದ್ವೈತಿಗಳ ಸೂತ್ರಾರ್ಥ ನಿರಾಕರಣೆ | ೮೧೫ |
| ಟೀಕೆಯ ಕಠಿಣಪದಾರ್ಥ | ೮೪೦ |
| ಅಂತರಾಧಿಕರಣದ ಪರಿಶಿಷ್ಟಗ್ರಂಥಗಳು | (೮೫೧-೮೭೦) |


* * * * *

॥ ಶ್ರೀಗುರುಭ್ಯೋ ನಮಃ ॥

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

ಬ್ರಹ್ಮಮೀಮಾಂಸಾಶಾಸ್ತ್ರ

# ಸರ್ವಗತತ್ವಾಧಿಕರಣ

ಯೌಗಿಕ ಶಬ್ದಗಳ ಸಮನ್ವಯಕ್ಕಾಗಿ ಲಿಂಗಪಾದ

**ಸೂ – ॐ ॥ सर्वत्र प्रसिद्धोपदेशात् ॥ ॐ (१ - २-१)**

ಐತರೇಯ ಶ್ರುತಿಯಲ್ಲಿ ಪೃಥಿವ್ಯಾದಿಗಳಲ್ಲಿ ಯಾರು ಇರುತ್ತಾನೆಂದು ಹೇಳಲ್ಪಟ್ಟಿದ್ದಾನೋ ಅಂತಹವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಪ್ರಸಿದ್ಧವಾದ ಬ್ರಹ್ಮಶಬ್ದವಿರುವುದರಿಂದ.

***

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – तत्तु इति वर्तते । सर्वत्र पृथिव्यादिषु । उच्यमानं वस्तु तत्तु नाराणाख्यं ब्रह्मैव नतु अन्यत् । कुतः प्रसिद्धोपदेशात् ''एतमेव ब्रह्म'' इति (ऐ. आ. ३-२-३-१२.) सर्वगते वस्तुनि नारायणवाचित्वेन श्रुत्यादिप्रसिद्धब्रह्मशब्दश्रवणादित्यर्थः ।

''ತತ್ತು'' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಸರ್ವತ್ರ = ಪೃಥಿವ್ಯಾದಿಗಳಲ್ಲಿ ಇರುವವನೆಂದು ಹೇಳಲ್ಪಟ್ಟ ವಸ್ತು ತತ್ತು = ನಾರಾಯಣನೆಂಬ ಬ್ರಹ್ಮನೇ ಆಗಿದ್ದಾನೆ ಹೊರತು ಬೇರೆಯವರಲ್ಲ. ಏಕೆಂದರೆ ''ಪ್ರಸಿದ್ಧೋಪದೇಶಾತ್'' = ''ಏತಮೇವ ಬ್ರಹ್ಮ'' ಎಂಬ ಐತರೇಯ ಆರಣ್ಯಕದ ವಾಕ್ಯದಲ್ಲಿ ಸರ್ವಗತನಾದ ವಸ್ತು ನಾರಾಯಣನೇ ಆಗಿದ್ದಾನೆನ್ನಲು ನಾರಾಯಣನಲ್ಲಿಯೇ ಪ್ರಸಿದ್ಧವಾದ ಬ್ರಹ್ಮಶಬ್ದವನ್ನು ಹೇಳಿದ್ದರಿಂದ.

* * * *

## श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

**भाष्यम् – लिङ्गात्मकानां शब्दानां विष्णौ प्रवृत्तिं दर्शयत्यस्मिन् पादे प्राधान्येन ।**

ಅನುವಾದ - ಇದು ಲಿಂಗಪಾದ. ಇದರಲ್ಲಿ ಪ್ರಧಾನವಾಗಿ ಧರ್ಮವಿಶಿಷ್ಟವಾದ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಭಗವಂತನಲ್ಲಿ ಪ್ರತಿಪಾದಿಸಲಾಗಿದೆ.

ಪ್ರತಿಪದಾರ್ಥ – ನಾಮಪಾದವು ಮುಗಿಯಿತು; ಲಿಂಗಪಾದವು ಪ್ರಾರಂಭವಾಗುತ್ತಿದೆ. ಹಿಂದಿನ ಪಾದಕ್ಕಿಂತ ಈ ಪಾದಕ್ಕೆ ವೈಲಕ್ಷಣ್ಯವನ್ನು ತೋರಿಸುವ ಮೂಲಕ ಎರಡನೆಯ ಪಾದವು ಒಂದೇ ವಿಷಯವನ್ನು ಪ್ರತಿಪಾದಿಸುತ್ತಿದೆಯೆಂಬುದನ್ನು ತಿಳಿಸುವುದಕ್ಕಾಗಿಯೂ ಪಾದಪ್ರತಿಪಾದ್ಯವಾದ ಪ್ರಮೇಯವನ್ನು ಪ್ರದರ್ಶಿಸುತ್ತಿದ್ದಾರೆ -

ಅಸ್ಮಿನ್ ಪಾದೇ = ಈ ಲಿಂಗಪಾದದಲ್ಲಿ, ಪ್ರಾಧಾನ್ಯೇನ = ಮುಖ್ಯವಾಗಿ, ಲಿಂಗಾತ್ಮಕಾನಾಂ = ಧರ್ಮವಿಶಿಷ್ಟಧರ್ಮಿವಾಚಕಗಳಾದ, ಶಬ್ದಾನಾಂ = ಅನ್ಯತ್ರಪ್ರಸಿದ್ಧವಾದ ಶಬ್ದಗಳಿಗೆ, ವಿಷ್ಣೌ = ಬ್ರಹ್ಮನಲ್ಲಿ, ಪ್ರವೃತ್ತಿಂ = ಮುಖ್ಯವಾಚ್ಯತ್ವವನ್ನು, ದರ್ಶಯತಿ = ತೋರಿಸುತ್ತಿದ್ದಾರೆ.(१)

**भाष्यम् – 'ब्रह्म ततमम्' इति सर्वगतत्वमुक्तं विष्णोः । तच्च 'तस्यैतस्यासावादित्यो रसः'(ऐ.आ.३.२.३) इत्यादिनाऽऽदित्यस्य प्रतीयते ॥**

(१) **भाष्यदीपिका** – पूर्वोत्तरपादभेदस्य स्वस्मिन्नेकवाक्यतायाश्च सिद्धये एतत्पादप्रतिपाद्यं दर्शयति – लिङ्गेति ॥ लिङ्गमनुमापको धर्मः । स आत्मेवाऽऽत्मा प्रवृत्तिनिमित्तं येषां ते तथोक्ताः । 'निमित्तनिमित्तिनोरभेदोपचारात्' इति सुधोक्तेः । स्वरूपार्थो वा आत्मशब्दः । पूर्वयोजनायामात्मप्रतिपादके गौणी वृत्तिः । द्वितीयायां तु सामानाधिकरण्यमिति भेदः । स्वार्थे कः । तथा च व्याप्यधर्मद्वारा धर्मिबोधकानामापाततो यौगिकानामित्यर्थः । विष्णोरन्यत्रप्रसिद्धानामिति च संयोज्यम् । 'शब्दानामिति' एकप्रातिपदिकरूपाणामनेकपदसमभिव्याहाररूपाणां चेत्यर्थः । 'विष्णौ प्रवृत्तिं' प्रकर्षेण वृत्तिं महायोगविद्वद्रूढिभ्यां विष्णुपरत्वमिति यावत् । 'प्रदर्शयति' प्रकर्षेण साधयति सूत्रकार इत्यर्थः । वैश्वानराधिकरणे नामसमन्वयकरणादव्याप्तिनिरासाय प्राधान्येन इत्युक्तम् । तथा च तत्रापि नामसमन्वयमुखेन प्राधान्येन फलतो बहुलिङ्गसमन्वयस्यैव करणान्नाव्याप्तिरिति भावः ॥

ಅನುವಾದ - ಐತರೇಯೋಪನಿಷತ್ತಿನಲ್ಲಿ 'ಬ್ರಹ್ಮ ತತಮಮ್' ಎಂದು ಬ್ರಹ್ಮನು ವ್ಯಾಪ್ತನಾಗಿದ್ದಾನೆಂದು ಹೇಳಲಾಗಿದೆ. ಅದೇ ಪ್ರಕರಣದಲ್ಲಿ 'ತಸ್ಯೈತಸ್ಯಾಸಾವಾದಿತ್ಯೋ ರಸಃ' ಎಂದು ಸಂವತ್ಸರಕ್ಕೆ ಈ ಸೂರ್ಯನೇ ಅಧಿಪತಿಯೆಂಬುದಾಗಿ ಸೂರ್ಯನ ಉಲ್ಲೇಖವಿದೆ. ಆದ್ದರಿಂದ ಸರ್ವಗತನಾದವನು ಸೂರ್ಯನೇ ಹೊರತು ವಿಷ್ಣುವಲ್ಲ ಎಂದು ಪೂರ್ವಪಕ್ಷ.

ಪ್ರತಿಪದಾರ್ಥ - 'ಬ್ರಹ್ಮ ತತಮಮ್' ಇತಿ = ಬ್ರಹ್ಮನು ವ್ಯಾಪ್ತನಾಗಿದ್ದಾನೆಂದು ಹಿಂದಿನ ಅಧಿಕರಣದಲ್ಲಿ, ವಿಷ್ಣೋಃ = ವಿಷ್ಣುವಿಗೆ, ಸರ್ವಗತತ್ವಂ = ಸರ್ವಗತತ್ವವನ್ನು, ಉಕ್ತಂ = ಹೇಳಲಾಗಿದೆ, ತಚ್ಚ = ಆ ಸರ್ವಗತತ್ವವಾದರೂ ಮುಂದೆ ಐತರೇಯೋಪನಿಷತ್ತಿನಲ್ಲಿಯೇ, ತಸ್ಯ = ಹಿಂದೆ ಹೇಳಿದ ಪ್ರಾಣನಿಗಿಂತಲೂ, ಏತಸ್ಯ = ಹಿಂದೆ ಹೇಳಿದ ಚತುರ್ಮುಖನಿಗಿಂತಲೂ, ಅಸೌ = ಪ್ರಸಿದ್ಧನಾದ, ಆದಿತ್ಯಃ = ಸೂರ್ಯನು, ರಸಃ = ಶ್ರೇಷ್ಠನಾಗಿದ್ದಾನೆ. ಇತ್ಯಾದಿನಾ = ಇವೇ ಮೊದಲಾದ ಶ್ರುತಿವಾಕ್ಯಗಳಿಂದ, ಆದಿತ್ಯಸ್ಯ = ಆದಿತ್ಯನಿಗೆ, ಪ್ರತೀಯತೇ = ತೋರುತ್ತದೆ.(१)

---

(१) **भाष्यदीपिका** – यद्यपि पूर्वपादान्त्याधिकरणेनैतत्पादाद्यस्य नावान्तरसङ्गत्यपेक्षेति न सा प्रदर्शनीया । तथाऽपीह तस्याः सम्भवात् फलस्यावश्यवक्तव्यत्वाच्च सा प्रदर्श्यत इत्याशयेन पूर्वाधिकरणसङ्गतिं विषयादिकं च दर्शयति – **ब्रह्मेति** ।। इति वाक्ये विष्णोः निरवधिकसर्वगतत्वमुक्तमित्यर्थः । ततः किमित्यत आह – **तच्चेति** ।। तदित्यावर्तते, उक्तमिति च वर्तते । तथा च 'ब्रह्म ततमम्' (ऐ.आ. २.४.३) इति यत् ततमत्वमुक्तं प्राणाख्यविष्णोस्तत्तदेकदेशभूतं सर्वगतत्वान्तर्गतं सर्वप्राणिहृदयस्थत्वं तत्रैवैतरेयके 'एतं ह्येव बह्वृचा महत्युक्थे मीमांसन्त एतमग्रावध्वर्यव एतं महाव्रते छन्दोगाः एतमस्यामेतं दिव्येतं वायावेतमाकाश एतमप्सु एतमोषधीष्वेतं वनस्पतिष्वेतं चन्द्रमस्येतं नक्षत्रेष्वेतं सर्वेषु भूतेष्वेतमेव ब्रह्मेत्याचक्षते'(ऐ.आ-२-४-४) इत्यादौ एतमित्युत्तरवाक्येन उक्तमित्यर्थः । ततोऽपि किमित्यतः सयुक्तिकं पूर्वपक्षमाह – **तच्चेति** ।। चोऽवधारणे । आदिशब्देन 'स यश्चायमशरीरः प्रज्ञात्मा यश्चासावादित्य एकमेतदिति विद्यात् तस्मात् पुरुषं पुरुषं प्रत्यादित्यो भवति ... सूर्य आत्मा जगतस्तस्थुषश्च ... एतं सर्वेषु भूतेषु' (ऐ. ३-२-३.) इत्यादिवाक्यं गृह्यते । अत्र तस्येत्यादेरुपन्यासः एतमिति परामर्शनीयसमर्पकतयाऽऽवश्यकत्वात् पूर्वपक्षयुक्तिप्रदर्शनार्थं च कृतः । तथा च यत एतमित्युत्तरवाक्येनोक्तं सर्वप्राणिहृदयस्थत्वं तस्येत्यादिना पूर्ववाक्येन प्रकृतत्वात् तस्याऽदित्यस्यैव प्रतीयते, अतस्तस्यैव तत्पूर्वोक्तं ततमत्वमपि भवेत् । न विष्णोरिति योजना । अत्र पूर्वपक्षे ततमत्वं सङ्कुचितं सर्वभूतगतत्वरूपं विवक्षितम् । न चैवं सिद्धान्त्यभिमतनिरवधिक-सर्वगतत्वाक्षेपाप्राप्तिरिति वाच्यम् । पूर्वपक्षे 'एतमेव' इत्यवधारणेन विष्णोरन्यस्यैव सर्वभूतगतत्वाद् विष्णोर्भूतादन्यत्र सत्त्वेऽपि सर्वभूतगतत्वाप्राप्त्याऽऽक्षेपोपपत्तेः ।।

**भाष्यम् – अतोऽब्रवीत् -**

**सू – ॐ ॥ सर्वत्र प्रसिद्धोपदेशात् ॥ ॐ ॥ १ ॥**

ಅನುವಾದ - ಇದನ್ನು ನಿರಾಕರಿಸುವುದಕ್ಕಾಗಿ ಸರ್ವಗತನಾದವನು ವಿಷ್ಣುವೇ ಆಗಿದ್ದಾನೆನ್ನಲು ಬ್ರಹ್ಮಶಬ್ದವು ಅಧಾರವಾಗಿದೆ ಎಂಬುದಾಗಿ ಸೂತ್ರಕಾರರು ಹೇಳುತ್ತಿದ್ದಾರೆ.

ಪ್ರತಿಪದಾರ್ಥ – ಅತಃ = ಆ ಕಾರಣದಿಂದ ವಿಷ್ಣು ಸರ್ವಗತನೆಂದು ಹಿಂದಿನ ಅಂತಿಮಪ್ರಾಣಾಧಿಕರಣದಲ್ಲಿ ಹೇಳಿರುವುದು ಸರಿಯಲ್ಲ. ಇತಿ = ಈ

---

अनेन पूर्वोक्ततततमत्वान्तर्गतसर्वभूतगतत्वस्य विष्णोरन्यत्राऽक्षेपात् तेनास्याऽक्षेपिकी सङ्गतिः, विषयसंशयौ, विष्णोरन्यस्यैव सर्वप्राणिगतत्वमिति सयुक्तिकपूर्वपक्षश्च दर्शितो भवति ।

सिद्धान्ते श्रुत्यर्थस्तु – 'तस्य' प्रकृतस्य 'एतस्य' संवत्सरनामकस्य चतुर्मुखस्य सर्वादित्व ततमत्वनियामकत्वनिमित्तैरादित्यनामा प्रद्युम्नो रसः सारभूतः । स यश्चायं पुरुषदेहगतः प्राकृतदेहवर्जनादशरीरः 'प्रज्ञात्मा' ज्ञानरूपोऽनिरुद्धः । यश्चासावादित्ये स्थितः प्रद्युम्न एतत्स्थानद्वयगतं रूपमेकमिति विद्यात् । तस्मात् पुरुषादित्यगतानिरुद्ध-प्रद्युम्नयोरैक्यादादित्यः 'पुरुषं पुरुषं प्रति' प्रतिपुरुषं 'भवति' अभिमुखो भवति । प्रतिगृहं कूप इतिवत् सर्वपुरुषगतो भवतीति चेति । 'जगतः' जङ्गमस्य 'तस्थुषः' स्थावरस्य 'आत्मा' आदानादिकर्ता 'सूर्यः' सूरिप्राप्यो विष्णुर्दिवं पृथिवीमन्तरिक्षं च 'आऽप्राः' आ समन्तादपूरयदित्यर्थः । एतमित्यादीनां सप्तम्यन्तपदैः प्रत्येकं सम्बन्धः । तथा च 'बह्वृचाः' ऋग्वेदिनः 'एतं ह्येव' एतमेव पुरुषादित्यगतमेव हि विष्णुं 'महत्युक्थे' महदुक्थनामकबृहतीसहस्रे तद्देवताविषये तद्देवतामिति यावत् 'मीमांसन्ते' जानन्ति । 'अध्वर्यवः' यजुर्वेदिनः 'अग्नौ' चयनसाधनेष्टकादेवताविषये तद्देवतां मीमांसन्ते । 'छन्दोगाः' सामवेदिनः 'महाव्रते' तदाख्यस्तोत्रस्य देवतां स्तोत्रे मीमांसन्ते । 'अस्यां' पृथिव्यां एतं 'दिवि' अन्तरिक्षे वाय्वादौ चैवं एतमेव 'सर्वेषु भूतेषु' सर्वप्राणिष्वन्तर्व्याप्तमाचक्षते विद्वांस इत्यर्थः । सर्वेष्वित्येव पूर्तेः पुनर्भूतेष्वित्युक्तिरत्र भूतवृत्तित्वमात्रं प्रतिपाद्यतयाऽभिप्रेतमिति ज्ञापयितुम् । एतं सर्वभूतगतमेव विष्णुं गुणपूर्णत्वाद् व्याप्तत्वाच्च एतं मुख्यतो ब्रह्मेत्याचक्षते इति वाक्यशेषार्थः ॥ नस्थानाधिकरणटीकायां तु – सर्वेषु भूतेषु चक्षुरादिस्थानेषु एतमेकमेव ब्रह्म गुणपूर्णमाचक्षत इति व्याख्यातम् । पूर्वपक्षी तु तस्यैतस्य प्रकृतप्रसिद्धसंवत्सरस्यासौ प्रसिद्ध आदित्यः सूर्यो रसः सारभूतोऽधिपतिरित्यर्थं मन्यते ।

ಕಾರಣವಿರುವುದರಿಂದ, ಅತೋಽಬ್ರವೀತ್ = ಶಂಕೆಯನ್ನು ಪರಿಹರಿಸಲು ಸೂತ್ರಕಾರರು ಹೇಳುತ್ತಿದ್ದಾರೆ.(१)

ಓಂ ॥ ಸರ್ವತ್ರ ಪ್ರಸಿದ್ಧೋಪದೇಶಾತ್ ॥ ಓಂ ಎಂಬುದಾಗಿ.

**'स यश्चायमशरीरः प्रज्ञात्मा'** *(ऐ.आ. ३-२-४.)*

**इत्यादिना सर्वत्रोच्यमानो नारायण एव ।**

ಅನುವಾದ - ಐತರೇಯೋಪನಿಷತ್ತಿನಲ್ಲಿ 'ಸ ಯಶ್ಚಾಯಂ' ಮುಂತಾದ ವಾಕ್ಯಗಳಿಂದ ಸರ್ವಗತನೆಂದು ಪ್ರತಿಪಾದ್ಯನಾದವನು ನಾರಾಯಣನೇ ಆಗಿದ್ದಾನೆ ಹೊರತು ಸೂರ್ಯಾದಿಗಳಲ್ಲ.

ಪ್ರತಿಪದಾರ್ಥ - ಸಮನ್ವಯಸೂತ್ರದಿಂದ 'ತತ್ತು' ಎಂಬುದನ್ನು ಅನುವೃತ್ತಿ ಮಾಡಿಕೊಂಡು ಲಿಂಗವನ್ನು ವ್ಯತ್ಯಾಸಮಾಡಿ ಉಚ್ಯಮಾನಪದವನ್ನು ಅಧ್ಯಾಹಾರ ಮಾಡಿಕೊಂಡು ಸೂತ್ರದ ಅಭಿಪ್ರಾಯವನ್ನು 'ಸ ಯಶ್ಚಾಯಂ' ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ - ಯಃ = ಯಾವಾತನು ಐತರೇಯದಲ್ಲಿ ಪ್ರತಿಪಾದ್ಯನಾಗಿದ್ದಾನೋ, ಸ ಚ = ಅವನು, ಅಶರೀರಃ = ಪ್ರಾಕೃತ ಶರೀರ ರಹಿತನು. ಅಯಂ = ಅವನೇ, ಪ್ರಜ್ಞಾತ್ಮಾ = ಜ್ಞಾನಸ್ವರೂಪನು, ಇತ್ಯಾದಿನಾ = ಇವೇ ಮೊದಲಾದ ವಾಕ್ಯಗಳಿಂದ ಸರ್ವತ್ರ = ಎಲ್ಲಾಕಡೆಯೂ, ಉಚ್ಯಮಾನಃ = ವ್ಯಾಪ್ತನೆಂದು ಕರೆಸಿಕೊಳ್ಳುವವನು, ನಾರಾಯಣಃ ಏವ = ನಾರಾಯಣನೇ ಆಗಿದ್ದಾನೆ.(२)

---

(१) **भाष्यदीपिका** – अथ सिद्धान्तयत्सूत्रमवतारयति – **अत इति** ।। इति सङ्गतिसम्भवादाक्षेपसद्भावाच्च अतस्तत्परिहारायोत्तरमब्रवीद् बादरायण इत्यर्थः । तदेव सूत्रं पठति – **सर्वत्रेति**

(२) **भाष्यदीपिका** – अत्र समन्वयसूत्रात् तत्त्वित्यस्यानुवृत्तिं लिङ्गव्यत्ययम् 'उच्यमानम्' इत्यध्याहारं चाभिप्रेत्य प्रतिज्ञांशं व्याचष्टे – **स यश्चेति** ।। वाक्येनेति शेषः । यद्यपि 'तस्यैतस्यासौ' इत्यादिनेति वक्तव्यम् । पूर्ववाक्यत्वात् । तथाऽपि तस्य पूर्वपक्षयुक्ति-प्रदर्शनार्थत्वेनोपन्यस्तत्वात् तद् विहाय सिद्धान्तयुक्तिप्रदर्शकवाक्यज्ञापनाय 'स यश्चायमशरीरः प्रज्ञात्मा' इत्यादिनेत्येवोक्तम् । वस्तुतस्तु – न 'तस्यैतस्यासौ' इत्यस्येव 'स यश्च' इत्यस्य युक्तिप्रदर्शनमात्रतात्पर्येणोपन्यासः, नापि विषयमात्रप्रदर्शनतात्पर्येण । अपि तु पूर्वं विषयवाक्यस्यानुदाहृतत्वात् तदर्थतया तद्गतैतच्छब्दपरामर्शनीय-समर्पणार्थमनन्यसाधारणस्वतोऽशरीरत्वयुक्तिप्रदर्शनार्थं चेति ध्येयम् । 'सर्वत्र' सर्वप्राणि-हृदयेष्वन्तर्गततयोच्यमानो नारायण एवेति नारायणशब्दप्रयोगेन -

**भाष्यम् – 'तदेव ब्रह्म परमं कवीनाम्' (महाना. १-६.)**
**परमं यो महद्ब्रह्म' (महाभारते विष्णुसहस्रनामसु)**

ಅನುವಾದ - ಏಕೆಂದರೆ ಜ್ಞಾನಿಗಳ ದೃಷ್ಟಿಯಿಂದ ವಿಷ್ಣುವೇ ಪರಬ್ರಹ್ಮನಾಗಿದ್ದಾನೆ ಎಂಬುದಾಗಿ ಮತ್ತು ಸರ್ವೋತ್ತಮನಾದ ಪರಬ್ರಹ್ಮನಿದ್ದಾನೆ ಎಂಬುದಾಗಿ ಪ್ರಮಾಣಗಳಿವೆ.

ಪ್ರತಿಪದಾರ್ಥ - ನಾರಾಯಣೋಪನಿಷತ್ತಿನಲ್ಲಿ ಹೀಗೆ ಹೇಳಲಾಗಿದೆ - ಕವೀನಾಮ್ = ಜ್ಞಾನಿಗಳಿಗೆ, ತದೇವ = ವ್ಯಾಪ್ತವಾದ ವಸ್ತುವೇ, ಪರಮಂ ಬ್ರಹ್ಮ = ಪರಬ್ರಹ್ಮ ವಸ್ತುವಾಗಿದೆ. ಮತ್ತು ಮಹಾಭಾರತದಲ್ಲಿ, ಯಃ = ಯಾವುದು, ಪರಮಂ = ಪೂರ್ಣವಾಗಿದೆಯೋ, ತತ್ = ಆ ವಸ್ತುವೇ, ಮಹದ್ ಬ್ರಹ್ಮ = ಮಹಾಮಹಿಮೋಪೇತವಾದ ವಸ್ತುವಾಗಿದೆ ಎಂಬ ಮಾತಿದೆ.(१)

**भाष्यम् –**

**'वासुदेवात् परः को नु ब्रह्मशब्दोदितो भवेत् ।**
**स हि सर्वगुणैः पूर्णस्तदन्ये तूपचारतः ॥'**

**इति तस्मिन्नेव प्रसिद्धब्रह्मशब्दोपदेशात् ॥ १ ॥**

ಅನುವಾದ - ವಾಸುದೇವನನ್ನು ಬಿಟ್ಟು ಬೇರೆ ಯಾರೂ ಬ್ರಹ್ಮಪದ ವಾಚ್ಯರಲ್ಲ. ಆದ್ದರಿಂದ ಅವನೇ ಸಕಲ ಗುಣಗಳಿಂದ ಪೂರ್ಣನಾಗಿದ್ದಾನೆ; ಬೇರೆಯವರು ಅಮುಖ್ಯವಾಗಿ ಬ್ರಹ್ಮಶಬ್ದದಿಂದ ವಾಚ್ಯರಾಗುತ್ತಾರೆಂಬುದಾಗಿಯೂ ಪ್ರಮಾಣಗಳು ಇರುವುದರಿಂದ ಬ್ರಹ್ಮಶಬ್ದ ಪ್ರಯೋಗವು ನಾರಾಯಣನಲ್ಲಿಯೇ ಉಪಪನ್ನವಾಗುತ್ತದೆ.

ಪ್ರತಿಪದಾರ್ಥ - ಮತ್ತೊಂದು ಶ್ರುತಿಯಲ್ಲಿ ವಾಸುದೇವಾತ್ = ಎಲ್ಲೆಡೆ ವ್ಯಾಪಿಸಿರುವ ನಾರಾಯಣನಿಗಿಂತಲೂ, ಪರಃ = ಬೇರೆ, ಕೋ ನು = ಯಾರು ತಾನೆ, ಬ್ರಹ್ಮಶಬ್ದೋದಿತಃ = ಬ್ರಹ್ಮಶಬ್ದವಾಚ್ಯನು, ಭವೇತ್ = ಆದಾನು, ಸ ಹಿ = ಆ

---

'यच्च किञ्चिज्जगत्सर्वं दृश्यते श्रूयतेऽपि वा ।
अन्तर्बहिश्च तत्सर्वं व्याप्य नारायणः स्थितः ॥'

इति वाक्यमपि सङ्गृहीतं भवति । तेन च सूत्रे सङ्कुचितवृत्तिना सर्वत्रेत्यनेन सर्वभूतहृद्गतत्वस्यैवाभिप्रेतत्वेनान्यत्र बहिर्नेति प्राप्तशङ्कानिरस्ता भवति ॥

(१) भाष्यदीपिका – हेत्वंशं व्याचष्टे – तदेवेति ॥ व्याख्यातमेतज्जिज्ञासानये । ईश्वर-ब्रह्मणोरभेदबोधनार्थं प्रवृत्तस्य 'परमं यो महद्ब्रह्म परमं यः परायणम्' इति भारतवाक्यस्य यः परमं महद्ब्रह्म यः परमं परायणं तस्य लोकप्रधानस्य जगन्नाथस्य नाम्नामित्युत्तर-वाक्येनान्वयः ॥

ಸರ್ವಗತತ್ವಾಧಿಕರಣ (೧-೨-೧)

ಕಾರಣದಿಂದಲೇ, ನಾರಾಯಣನು ಸರ್ವಗುಣೈಃ = ಸಕಲ ಗುಣಗಳಿಂದ, ಪೂರ್ಣಃ = ತುಂಬಿದ್ದಾನೆ, ತದನ್ಯೇ = ಇತರ ಚತುರ್ಮುಖಾದಿ ಜೀವರುಗಳು, ಉಪಚಾರತಃ = ಅಮುಖ್ಯವಾಗಿಯೇ ಬ್ರಹ್ಮಶಬ್ದವಾಚ್ಯರು. ಇತಿ = ಹೀಗೆ ಹೇಳಿರುವುದರಿಂದಲೇ, ತಸ್ಮಿನ್ = ಆ ವಿಷ್ಣುವಿನಲ್ಲಿ, ಪ್ರಸಿದ್ಧಬ್ರಹ್ಮಶಬ್ದೋಪದೇಶಾತ್ = ಬ್ರಹ್ಮಶಬ್ದದ ಪ್ರಸಿದ್ಧಿಯನ್ನು ಹೇಳಿರುವುದರಿಂದಲೂ ಸರ್ವಗತನಲ್ಲಿ ಹೇಳಲ್ಪಟ್ಟ ಬ್ರಹ್ಮಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ. ಆದಿತ್ಯಾದಿಗಳು ಆಗುವುದಿಲ್ಲ.(೧)

## श्रीपद्मनाभतीर्थविरचितसत्तर्कदीपावळ्याम्ः
## सर्वगतत्वाधिकरणम्

### ॐ सर्वत्र प्रसिद्धोपदेशात् ॐ ।। १-२-१ ।।

**अभिहितोऽर्थान्तरप्रसिद्धानां नाम्नां पूर्वं समन्वयो विष्णौ । अधुना लिङ्गवाचिनां बाहुल्येनार्थान्तररूढानामपि केषाञ्चिद् वैश्वानरादिशब्दानां सङ्गतिविशेषात् समन्वयोऽस्मिन् पाद इत्याह – लिङ्गेति ।।**

(१) **भाष्यदीपिका** — वासुदेवादित्यपरा स्मृतिः ।। 'वासुदेवात्' कृष्णादन्यः को वा ब्रह्मशब्दमुख्यवाच्यो भवेत्, न कोऽपि । किन्तु स एव मुख्यवाच्यः । कुतः ? 'हि' यस्मात् 'सः' वासुदेवः सर्वगुणैः पूर्णस्तदन्ये त्वपूर्णाः तस्मात् । तर्हि 'ब्रह्माणि जीवाः सर्वेऽपि' इत्यादि कथमित्यत आह – तदन्य इति ।। वासुदेवादन्ये जीवाः 'उपचारतः' अमुख्यत एव ब्रह्मशब्दोदिताः, न तु मुख्यत इत्यर्थः – इतीति ।। वाक्येष्विति शेषः । अनेन सर्वत्रेत्यस्य हेतावप्यन्वयो दर्शितः । तथा च सर्वत्रोदाहृतवाक्येषु 'तस्मिन्नेव' विष्णावेव 'प्रसिद्धस्य' रूढत्वेनावगतस्य 'ब्रह्मशब्दस्योपदेशात्' सर्वगते वस्तुनि श्रवणादित्यर्थः । तस्मिन्नेवेत्यनेन श्रुतेर्निरवकाशत्वमुक्तं भवति ।।

अनेन 'स यश्चायमशरीरः प्रज्ञात्मा' (ऐ. आ. ३-२-३.) इत्यादिना 'सर्वेषु भूतेष्वेतमेव ब्रह्मेत्याचक्षते' (ऐ. आ. ३-२-३.) इति शाखाशेषेण सर्वत्र सर्वेषु भूतेष्वन्तर्गततयोच्यमानो नारायण एव न त्वादित्यादिः । कुतः ? 'एतमेव ब्रह्मेत्याचक्षते' इति सर्वभूतगते वस्तुनि नारायणैकनिष्ठत्वेन श्रुत्यादिप्रसिद्धब्रह्मशब्दोपदेशाच्छ्रुतेरिति सूत्रार्थ उक्तो भवति ।।

गताधिकरणेनास्याधिकरणस्य सङ्गतिं दर्शयन् पूर्वपक्षं दर्शयति – ब्रह्मेति ।। इदमाम्नायते – "एतं ह्येव बहुऋचा महत्युक्थे मीमांसन्त एतमग्नावध्वर्यव एतं महाव्रते च्छन्दोगा एतमस्यामेतं दिव्येतं वायावेतं विद्युति" इति ।

पृथिव्यादिसर्वगतत्वेन मीमांस्यमानः 'तस्यैतस्यासावादित्यो रसः' 'स यश्चायमशरीरः प्रज्ञात्मा' इत्युपक्रमवशादादित्यो भवेत् । अतश्च 'ब्रह्म ततमम्' इति यत् ततमत्वं विष्णोरुक्तं तदप्येकवाक्यवशादादित्यस्यैव युक्तमित्येतं पक्षं प्रतिक्षेप्तुं सूत्रमुपन्यस्य व्याचष्टे – सर्वत्रेत्यादिना ।।

ಹಿಂದಿನ ಪಾದದಲ್ಲಿ ಬೇರೆ ಅರ್ಥದಲ್ಲಿ ಪ್ರಸಿದ್ಧವಾದ ನಾಮಾತ್ಮಕ ಶಬ್ದಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಮಾಡಿದ್ದಾಯಿತು. ಈ ಪಾದದಲ್ಲಿ ಲಿಂಗವಾಚಿಯಾದ ಬೇರೆ ಅರ್ಥದಲ್ಲಿ ಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಬಹಳವಾಗಿ ಮಾಡುತ್ತಿದ್ದಾರೆ. ಆದರೆ ವಿಶೇಷ ಸಂಗತಿ ಯಿಂದ ಕೆಲವು ವೈಶ್ವಾನರ ಮೊದಲಾದ ನಾಮಾತಕ್ಮ ಶಬ್ದಗಳ ಸಮನ್ವಯವನ್ನು ಈ ಪಾದದಲ್ಲಿ ಮಾಡುತ್ತಿದ್ದಾರೆ. ಈ ವಿಷಯವನ್ನೆಲ್ಲಾ ಭಾಷ್ಯದಲ್ಲಿ "ಲಿಂಗಾತ್ಮಕಾನಾಮ್" ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಸಂಗತಿಯನ್ನು ತೋರಿಸುತ್ತಾ ಪೂರ್ವಪಕ್ಷವನ್ನು 'ಬ್ರಹ್ಮ' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ. ಈ ಅಧಿಕರಣದ ವಿಷಯವಾಕ್ಯ ಹೀಗಿದೆ "ಏತಮ್ ಹ್ಯೇವ ಬಹುಋಚಾ ಮಹತ್ಯುಕ್ಥೇ ಮೀಮಾಂಸಂತ ಏತಮಗ್ನಾವಧ್ವರ್ಯವ ಏತಂ ಮಹಾವ್ರತೇ ಚ್ಛಂದೋಗಾ ಏತಮಸ್ಯಾಮೇತಂ ದಿವ್ಯೇತಂ ವಾಯಾವೇತಂ ವಿದ್ಯುತಿ ॥" ಎಂದು.

ಪೃಥಿವಿ ಮೊದಲಾದ ಸಕಲ ಪದಾರ್ಥಗಳ ಒಳಗಡೆ ನೆಲೆಸಿರುವವನು ಯಾರೆಂದು ಜಿಜ್ಞಾಸೆ ಬರುತ್ತದೆ. ಆವಾಗ "ತಸ್ಯ ಏತಸ್ಯಾಸಾವಾದಿತ್ಯೋ ರಸಃ ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ" ಎಂಬ ಉಪಕ್ರಮದಲ್ಲಿ ಪ್ರಸಕ್ತವಾದ ಆದಿತ್ಯನೇ ಸರ್ವಗತನೆಂದು ತಿಳಿಯುತ್ತದೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ವಿಷ್ಣುವಿಗೆ ಹೇಳಲ್ಪಟ್ಟ "ತತಮತ್ವವು" ಏಕವಾಕ್ಯದ ಅಧೀನವಾಗಿ ಆದಿತ್ಯನಲ್ಲಿ ಬರುತ್ತದೆಂದು ಪೂರ್ವಪಕ್ಷ. ಇದನ್ನು ನಿರಾಕರಿಸುವುದಕ್ಕಾಗಿ ಭಾಷ್ಯಕಾರರು ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನಿಸುತ್ತಿದ್ದಾರೆ "ಸರ್ವತ್ರ" ಇತ್ಯಾದಿಯಾಗಿ.

सर्वेषु भूतेष्वेतमेव ब्रह्मेत्याचक्षत इति ब्रह्मशब्दाभिधेयत्वश्रवणादत्र सर्वगतत्वेनोच्यमानो विष्णुरेव नादित्यः । 'अशरीरः प्रज्ञात्मा' इत्युपक्रमाच्च । नचादित्ये ब्रह्मशब्दः शङ्कनीयः । 'तदेव ब्रह्म परमम्' 'यद्भक्त्या पुण्डरीकाक्षं

**स्तवैरर्चेन्नरः सदा ।' 'परमं यो महद् ब्रह्म' इत्यादिवाक्येषु विष्णोरेव प्रसिद्धत्वात् नादित्यस्य मुख्यतो ब्रह्मत्वं युज्यते ।।**

"ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ" ಎಂಬಲ್ಲಿ ಬ್ರಹ್ಮಶಬ್ದ ಕೇಳಿಸುತ್ತಿರುವುದರಿಂದ ಬ್ರಹ್ಮಶಬ್ದ ವಾಚ್ಯನಾದ ವಿಷ್ಣುವೇ ಸರ್ವಗತನಾಗುತ್ತಾನೆ. ಮತ್ತು "ಅಶರೀರಃ ಪ್ರಜ್ಞಾತ್ಮಾ" ಎಂಬ ಉಪಕ್ರಮವೂ ಸಹ ಈ ವಿಷಯದಲ್ಲಿ ಪ್ರಮಾಣವಾಗಿದೆ. ಆದಿತ್ಯನಲ್ಲಿ ಬ್ರಹ್ಮಶಬ್ದವನ್ನು ಕೂಡಿಸಬಹುದಲ್ಲವೆ ? ಎಂದು ಶಂಕಿಸಬಾರದು. "ತದೇವ ಬ್ರಹ್ಮ ಪರಮಂ" "ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈರರ್ಚೇನ್ನರಃ ಸದಾ" "ಪರಮಂ ಯೋ ಮಹದ್ ಬ್ರಹ್ಮ" ಇತ್ಯಾದಿ ವಾಕ್ಯಗಳಲ್ಲಿ ವಿಷ್ಣುವಿನಲ್ಲಿ ಬ್ರಹ್ಮಶಬ್ದದ ಪ್ರಯೋಗವು ಪ್ರಸಿದ್ಧವಾಗಿದೆ. ಆದ್ದರಿಂದ ಆದಿತ್ಯನು ಮುಖ್ಯವಾಗಿ ಬ್ರಹ್ಮಶಬ್ದ ಪ್ರತಿಪಾದ್ಯನಾಗಲಾರನು.

**तत्वप्रकाशिका – एतत्पादप्रतिपाद्यं दर्शयति – लिङ्गेति ।। लिङ्गात्मकानामिति धर्मविशिष्टधर्मिवाचिनामित्यर्थः । अन्यत्र प्रसिद्धानामिति संयोज्यम् । वैश्वानराधिकरणे नामसमन्वयसिद्धेः प्राधान्येनेत्युक्तम् । अत्र लोकतोऽन्यत्रप्रसिद्धा-दित्यश्रुतिसहपठितसर्वगतत्वलिङ्गात्मकशब्दस्य परब्रह्मणि समन्वय-प्रतिपादनादस्ति शास्त्रादिसङ्गतिः । श्रुत्यादिसङ्गतिं विषयसंशयौ च सूचयति – ब्रह्मेति ।।**

ಈ ಎರಡನೆಯ ಪಾದದಲ್ಲಿ ಪ್ರತಿಪಾದನೆ ಮಾಡುವ ವಿಷಯವನ್ನು 'ಲಿಂಗಾತ್ಮಕಾನಾಂ' ಎಂಬ ಗ್ರಂಥದಿಂದ ಹೇಳುತ್ತಿದ್ದಾರೆ. ಲಿಂಗಾತ್ಮಕಶಬ್ದವೆಂದರೆ 'ಧರ್ಮವಿಶಿಷ್ಟ ಧರ್ಮಿಯನ್ನು' ಹೇಳುವ ಎಂದರ್ಥ. 'ಲಿಂಗಾತ್ಮಕಾನಾಂ' ಎಂಬ ಪದದ ಜೊತೆಗೆ "ಅನ್ಯತ್ರಪ್ರಸಿದ್ಧವಾದ" ಎಂಬುದನ್ನು ಜೋಡಿಸಿಕೊಳ್ಳಬೇಕು.

ಈ ಪಾದದ ವೈಶ್ವಾನರಾಧಿಕರಣದಲ್ಲಿ ನಾಮಾತ್ಮಕಶಬ್ದವನ್ನು ಸಮನ್ವಯ ಮಾಡಿದ್ದರಿಂದ "ಪ್ರಾಧಾನ್ಯೇನ" ಎಂದು ಭಾಷ್ಯಕಾರರು ಹೇಳಿದ್ದಾರೆ.

ಈ ಅಧಿಕರಣದಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ಆದಿತ್ಯಶ್ರುತಿಯ ಜೊತೆಗೆ ಪಠಿತವಾದ ಸರ್ವಗತತ್ವವೆಂಬ ಲಿಂಗಾತ್ಮಕಶಬ್ದವನ್ನು ಪರಬ್ರಹ್ಮನಲ್ಲಿ ಸಮನ್ವಯ ಮಾಡಿದ್ದಾರೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿಗಳನ್ನು ತಿಳಿಯಬೇಕು. ಶ್ರುತಿಸಂಗತಿ ಮೊದಲಾದವುಗಳನ್ನು ಮತ್ತು ಸಂಶಯಗಳನ್ನು "ಬ್ರಹ್ಮ" ಇತ್ಯಾದಿ ಗ್ರಂಥದಿಂದ ಸೂಚಿಸುತ್ತಿದ್ದಾರೆ.

**भावदीपः – द्वित्रनयमात्रेण प्रवृत्तिं दर्शयतीत्यपि भाष्यार्थोपपत्त्या पादार्थत्वाप्रतीतेराह – एतत्पादेति ।।**

ಎರಡನೆಯ ಪಾದವು ಪ್ರಾರಂಭವಾಗುತ್ತಿದೆ. ಈ ಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಮಾಡುತ್ತಿದ್ದಾರೆ.

'ಲಿಂಗಾತ್ಮಕಾನಾಂ ಶಬ್ದನಾಂ' ಇತ್ಯಾದಿಯಾಗಿ ಭಾಷ್ಯವು ಪ್ರಾರಂಭವಾಗುತ್ತಿದೆ. ಭಾಷ್ಯದ ಈ ಮಾತನ್ನು ನೋಡಿದಾಗ ಸಂಪೂರ್ಣ ಪಾದವು ಲಿಂಗಾತ್ಮಕಶಬ್ದಗಳ ಸಮನ್ವಯಕ್ಕೋಸ್ಕರವೇ ಹೊರಟಿದೆಯೆಂದು ತಿಳಿಯುವುದಿಲ್ಲ. ಎರಡು ಅಥವಾ ಮೂರು ಅಧಿಕರಣಗಳಲ್ಲಿ ಲಿಂಗಾತ್ಮಕಶಬ್ದಗಳ ಸಮನ್ವಯ ಮಾಡಿದರೂ ಸಾಕು; ಈ ಪಾದವು ಲಿಂಗಪಾದವೆನಿಸುತ್ತದೆಂದು ಭಾಷ್ಯದ ಮಾತಿಗೆ ಅರ್ಥವನ್ನು ತಿಳಿಯಬಹುದು. ಆದರೆ ಇದು ನಿಜವಾದ ಅರ್ಥವಲ್ಲ. ಹಾಗಾದಲ್ಲಿ ಈ ಪಾದದಿಂದ ಪ್ರತಿಪಾದ್ಯವಾದ ಪ್ರಮೇಯವೇ ಯಾವುದೆಂದು ತಿಳಿಯುವುದಿಲ್ಲ. ಆದ್ದರಿಂದ ಭಾಷ್ಯದ ನಿಜಾರ್ಥವನ್ನು ತಿಳಿಸುವುದಕ್ಕಾಗಿ ಟೀಕೆಯಲ್ಲಿ 'ಏತತ್ಪಾದಪ್ರತಿಪಾದ್ಯಂ ದರ್ಶಯತಿ' ಎಂದು ಹೇಳಿದ್ದಾರೆ. ಅಂದರೆ ಸಂಪೂರ್ಣ ಪಾದಪ್ರಮೇಯವನ್ನೇ ಶ್ರೀಮದಾಚಾರ್ಯರು 'ಲಿಂಗಾತ್ಮಕಾನಾಂ' ಇತ್ಯಾದಿ ವಾಕ್ಯಗಳಿಂದ ಹೇಳಿದ್ದಾರೆ ಹೊರತು ಕೇವಲ ಎರಡು ಅಥವಾ ಮೂರು ಅಧಿಕರಣದ ಪ್ರಮೇಯವನ್ನು ಈ ವಾಕ್ಯದಿಂದ ಹೇಳಿಲ್ಲ.

**भावदीपः – शब्दादेवेत्यत्र वक्ष्यमाणदिशा असाधारणधर्मस्य लिङ्गत्वात्कथं तदात्मकत्वं शब्दानामित्यतो लिङ्गं धर्मः स आत्मेवात्मा प्रवृत्तिनिमित्तं येषां ते लिङ्गात्मकाः । स्वरूपार्थो वा आत्मशब्दो निमित्तनिमित्तनोरभेदोपचारादिति सुधोक्तदिशा समासं मत्वाऽर्थमाह – धर्मविशिष्टेति ।। यौगिकानामित्यर्थः ।**

ಪ್ರಶ್ನೆ - ಇದೇ ಅಧ್ಯಾಯದ ಮೂರನೆಯ ಪಾದದಲ್ಲಿ ಬರುವ ವಾಮನಾಧಿಕರಣದ 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರದಲ್ಲಿ ಲಿಂಗ ಎಂದರೆ ಅಸಾಧಾರಣ ಧರ್ಮ ಎಂದು ಹೇಳಿದ್ದಾರೆ. ಹೀಗಿರುವಾಗ ಪ್ರಕೃತ ಶಬ್ದವನ್ನೇ ಲಿಂಗಸ್ವರೂಪವೆಂದು ಹೇಗೆ ಹೇಳುತ್ತಿದ್ದೀರಿ?

ಉತ್ತರ - ಈ ಪ್ರಶ್ನೆಗೆ ಎರಡು ರೀತಿಯಾಗಿ ಉತ್ತರವನ್ನು ಹೇಳಬಹುದು -

೧) 'ಲಿಂಗಂ ಆತ್ಮಾ ಇವ ಆತ್ಮಾ ಯೇಷಾಂಸ್ತೇ ಲಿಂಗಾತ್ಮಕಾಃ ತೇಷಾಂ ಲಿಂಗಾತ್ಮಕಾನಾಂ' ಎಂದು ಸಮಾಸ ಮಾಡಿದ್ದಾರೆ. 'ಲಿಂಗ' ಶಬ್ದಕ್ಕೆ 'ಧರ್ಮ' ಎಂದರ್ಥ. 'ಆತ್ಮಾ' ಎಂದರೆ 'ಪ್ರವೃತ್ತಿನಿಮಿತ್ತ' ಎಂದರ್ಥ. ಅಂದರೆ ಹೇಗೆ ಶರೀರಪ್ರವೃತ್ತಿಗೆ ಆತ್ಮನು ನಿಮಿತ್ತನಾಗಿದ್ದಾನೋ, ಹಾಗೆ ಶಬ್ದದ ಪ್ರವೃತ್ತಿಗೆ ಧರ್ಮವು ನಿಮಿತ್ತವಾಗಿದೆಯೆಂದರ್ಥ.

೨) ಆತ್ಮಶಬ್ದಕ್ಕೆ ಸ್ವರೂಪ ಎಂದರ್ಥ. ನಿಮಿತ್ತಕ್ಕೂ ಮತ್ತು ನಿಮಿತ್ತಿಗೂ ಔಪಚಾರಿಕವಾಗಿ ಅಭೇದಪ್ರಯೋಗ ಮಾಡುವುದು ಕಂಡಿದೆ. ಈ ರೀತಿಯಾಗಿ ಸುಧೆಯಲ್ಲಿ ಹೇಳಿರುವಂತೆ ಎರಡು ಬಗೆಯ ಸಮಾಸವನ್ನು ತಿಳಿದು ಅರ್ಥವನ್ನು ಹೇಳುತ್ತಿದ್ದಾರೆ 'ಧರ್ಮವಿಶಿಷ್ಟ' ಇತ್ಯಾದಿಯಾಗಿ. 'ಧರ್ಮವಿಶಿಷ್ಟ' ಎಂದರೆ ಯೌಗಿಕಶಬ್ದಗಳೆಂದರ್ಥ.

## ಸರ್ವಗತತ್ವಾಧಿಕರಣ (೧-೨-೧)

**भावदीपः** – प्राचीनानामपि प्रागुक्तदिशा 'यच्छब्दा योगवृत्तयः' इत्यणुभाष्योक्त्या च यौगिकत्वात् तद्व्यावृत्त्यर्थम् आपाततोऽपीति योज्यम् । भाष्ये प्रवृत्तिमित्यस्य महायोगविद्वद्रूढिभ्यां प्रकृष्टवृत्तित्वमिति तत्त्वप्रदीपोक्तेरत्रानुक्तिः ।

ಪ್ರಶ್ನೆ - ಹಿಂದಿನ ಪಾದದಲ್ಲಿಯೂ ಸಹ ಆಕಾಶ, ಪ್ರಾಣ ಇವೇ ಮೊದಲಾದ ಶಬ್ದಗಳ ಸಮನ್ವಯವನ್ನೂ ಸಹ ಯೌಗಿಕವಾಗಿಯೇ ಮಾಡಲಾಗಿದೆ. ಅಲ್ಲದೆ ಅಣುಭಾಷ್ಯದಲ್ಲಿಯೂ ಸಹ 'ಯಚ್ಛಬ್ದಾಃ ಯೋಗವೃತ್ತಯಃ' ಎಂದು ಎಲ್ಲಾ ಶಬ್ದಗಳೂ ಸಹ ಯೌಗಿಕವಾಗಿವೆಯೆಂದು ಹೇಳಿದ್ದಾರೆ. ಹೀಗಿರುವಾಗ ಈ ಪಾದವನ್ನು ಪ್ರಥಮಪಾದಕ್ಕಿಂತ ಭಿನ್ನವೆಂದು ಹೇಗೆ ಪರಿಗಣಿಸುತ್ತೀರಿ ?

ಉತ್ತರ - ಈ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ ಟೀಕೆಯಲ್ಲಿ 'ಆಪಾತತೋ' ಎಂದು ಯೋಜನೆ ಮಾಡಬೇಕು. ಅಂದರೆ ಮೇಲ್ನೋಟಕ್ಕೆ ಯಾವ ಶಬ್ದಗಳು ರೂಢವೆನ್ನುತ್ತವೋ ಆ ಶಬ್ದಗಳು ನಾಮಾತ್ಮಕವೆನಿಸುತ್ತವೆ. ಮೇಲ್ನೋಟಕ್ಕೆ ಯಾವಶಬ್ದಗಳು ಲಿಂಗಶಬ್ದಗಳೆನಿಸುತ್ತವೆಯೋ ಆ ಶಬ್ದಗಳು ಲಿಂಗಾತ್ಮಕವೆನಿಸುತ್ತವೆ. ಈ ದೃಷ್ಟಿಯಿಂದಷ್ಟೇ ನಾಮಪಾದವೆಂಬ ಮತ್ತು ಲಿಂಗಪಾದವೆಂಬ ಭೇದವನ್ನು ಸೂತ್ರಕಾರರು ಪರಿಗಣಿಸಿದ್ದಾರೆ.

ಭಾಷ್ಯದಲ್ಲಿರುವ 'ಪ್ರವೃತ್ತಿಂ' ಎಂಬ ಪದಕ್ಕೆ ಟೀಕೆಯಲ್ಲಿ ವ್ಯಾಖ್ಯಾನ ಮಾಡಿಲ್ಲ. ಏಕೆಂದರೆ 'ಮಹಾಯೋಗ ವಿದ್ವದ್ರೂಢಿಭ್ಯಾಂ ಪ್ರಕೃಷ್ಟವೃತ್ತಿತ್ವಂ' ಎಂದು ತತ್ವಪ್ರದೀಪದಲ್ಲಿ ಸ್ವರಸವಾದ ಅರ್ಥವನ್ನು ಹೇಳಿದ್ದರಿಂದ.

**भावदीपः** – तृतीयादिसाङ्कर्यप्रसङ्गादाह – **अन्यत्रेति** ।। **नामसमन्वयेति** ।। 'विश्वजीवान्तरत्वाद्यैर्लिङ्गैः' इत्यणुभाष्ये सिद्धान्त्यभिमतयौगिकत्वाभिप्रायेण वैश्वानरशब्दस्य लिङ्गत्वोक्तावपि 'श्रुतिलिङ्गाधिका परा' इति विषययुक्तिमालायां लोकरूढ्या नामत्वोक्तेरिति भावः ।। **सर्वगतत्वलिङ्गेति** ।। सर्वप्राणिहृदयगुहास्थत्वरूपसर्वगतत्वलिङ्गेत्यर्थः । तस्य च स्वतः सूर्ये अप्रसिद्धेराह – **लोकतोऽन्यत्रप्रसिद्धेत्यादि** ।। अर्भकौकस्त्वादितत्प्रसिद्धोपदेशादिपूर्वोत्तरपक्ष-युक्तिसाहित्याल्लिङ्गमेव समन्वीयते न त्वादित्यनामेति भावः । एवमग्रेऽपि ।। **शास्त्रादीति** ।। पूर्वत्रेव सङ्गतित्रयोपपादकत्वं लोकत इत्यादिपदानां ध्येयम् । एवमग्रेऽपि ।

ಪ್ರಶ್ನೆ - ಮೂರನೆಯ ಮತ್ತು ನಾಲ್ಕನೆಯ ಪಾದಗಳಲ್ಲಿಯೂ ಸಹ ಲಿಂಗಾತ್ಮಕಶಬ್ದಗಳನ್ನು ಸಮನ್ವಯ ಮಾಡಿದ್ದರಿಂದ ಆ ಪಾದಗಳಿಂದ ಎರಡನೆಯ ಪಾದಕ್ಕೆ ಸಾಂಕರ್ಯದೋಷ ಬರುತ್ತದಲ್ಲವೇ?

ಉತ್ತರ - ಈ ಪ್ರಶ್ನೆಗೆ ಉತ್ತರಿಸಲು ಟೀಕೆಯಲ್ಲಿ 'ಅನ್ಯತ್ರಪ್ರಸಿದ್ಧಾನಾಂ' ಎಂದು ಹೇಳಿದ್ದಾರೆ. ಮೂರನೆಯ ಮತ್ತು ನಾಲ್ಕನೆಯ ಪಾದಗಳಲ್ಲಿ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯ ಮಾಡುತ್ತಿಲ್ಲವಾದ್ದರಿಂದ ಸಾಂಕರ್ಯದೋಷಕ್ಕೆ ಅವಕಾಶವಿಲ್ಲ.

किं वक्ष्यमाणपरामर्शक उत न, वक्ष्यमाणपरत्वेऽपि चक्षुर्मयत्वादिकं विष्णोर्न युक्तमुत युक्तमिति, तदर्थं मयट् किं प्रसिद्धचक्षुरादिकरणकत्वार्थः उत तत्स्वामित्वाद्यर्थः' इत्यादिरूपेणोह्येति भावः ।

ವಸ್ತುತಃ ಟೀಕೆಯಲ್ಲಿ 'ಏತಮ್ ಹ್ಯೇವ' ಎಂಬ ವಾಕ್ಯವನ್ನಷ್ಟೇ ಉಲ್ಲೇಖಿಸಿದ್ದಾರೆ. ಆದರೆ ಇಲ್ಲಿ ಗ್ರಂಥಕಾರರು 'ಸರ್ವೇಷು ಭೂತೇಷು' ಎಂಬ ವಾಕ್ಯವನ್ನು ಉಲ್ಲೇಖಿಸಿದ್ದಾರೆ. ಇದು ಹೇಗೆ ಸರಿ? ಎಂದರೆ ಟೀಕೆಯಲ್ಲಿ ಉಲ್ಲೇಖಿಸಿದ ವಾಕ್ಯದಿಂದ ಅರ್ಭಕೌಕಸ್ತ್ವವು (ಅಲ್ಪಸ್ಥಾನಸ್ಥಿತತ್ವವು) ಸ್ಪಷ್ಟವಾಗಿ ತಿಳಿಯುವುದಿಲ್ಲ. ಉಪಸಂಹಾರವಾಕ್ಯದಿಂದ ಇದು ಸ್ಪಷ್ಟವಾಗಿ ತಿಳಿಯುತ್ತದೆಂದು ಗ್ರಂಥಕಾರರು 'ಸರ್ವೇಷು ಭೂತೇಷು' ಎಂದೇ ಉಲ್ಲೇಖಿಸಿದ್ದಾರೆ. ಅಧಿಕರಣದ ವಿಷಯ ಮತ್ತು ಉಪಾಧಿಗಳನ್ನು 'ಏತದ್ಭಾವಾಭಿಧಂ ಲಿಂಗಮ್' ಇತ್ಯಾದಿ ಗ್ರಂಥದಿಂದ ಮುಂದೆ ಸ್ಪಷ್ಟಪಡಿಸುತ್ತಾರೆ.

'ಏತಮೇವ ಬ್ರಹ್ಮ' ಎಂಬಲ್ಲಿರುವ 'ಏತದ್' ಶಬ್ದವು ಹಿಂದೆ ಪ್ರಸಕ್ತವಾದದ್ದನ್ನು ಪರಾಮರ್ಶೆ ಮಾಡುತ್ತದೆಂದು ಸಹಜವಾಗಿ ತಿಳಿಯುತ್ತದೆ. ಆದ್ದರಿಂದ ಗ್ರಂಥಕಾರರು 'ಪೂರ್ವವಾಕ್ಯಮ್' ಎಂದು ಹೇಳಿದ್ದಾರೆ.

ಪೂರ್ವಪಕ್ಷದಲ್ಲಿ ಫಲಫಲಿಭಾವ - 'ಸರ್ವೇಷು ಭೂತೇಷು' ಎಂಬಲ್ಲಿರುವ ಭೂತಪದದ ಮಹಿಮೆಯಿಂದ ಬೇರೆಲ್ಲೂ ಇಲ್ಲದೆ ಕೇವಲ ಭೂತಪದಾರ್ಥಗಳಲ್ಲಿ ಇರುವಿಕೆಯೇ ಅಲೌಕಸ್ತ್ವ ಎಂದು ತಿಳಿಯುತ್ತದೆ. (ಅನ್ಯತ್ರಾನವಸ್ಥಿತತ್ವೇ ಸತಿ ಭೂತಮಾತ್ರಾವಸ್ಥಿತತ್ವರೂಪಾಲೌಕಸ್ತ್ವಂ) ಇದು ಅಯುಕ್ತವಾದರೆ ಬ್ರಹ್ಮಶಬ್ದಾದಿಗಳನ್ನು ಗೌಣವೆಂದು ಅವಶ್ಯ ಅಂಗೀಕರಿಸಬೇಕು. ಆವಾಗ ಬ್ರಹ್ಮಶಬ್ದದ ವಿರೋಧವಿಲ್ಲದ ಕಾರಣ ಹಿಂದಿನ ಶ್ರುತಿವಾಕ್ಯವು ಆದಿತ್ಯವಿಷಯಕವಾಗುತ್ತದೆ. ಆದ್ದರಿಂದ 'ಏತಮಸ್ಯಾಮ್' ಎಂಬಲ್ಲಿ 'ಏತದ್' ಶಬ್ದದಿಂದ ಆದಿತ್ಯನನ್ನೇ ಪರಾಮರ್ಶಿಸಬಹುದು. ಆವಾಗ ಆದಿತ್ಯನೇ ಸರ್ವಗತನಾಗುತ್ತಾನೆ.

ಸಿದ್ಧಾಂತದ ಫಲಫಲಿಭಾವ - ಒಂದು ವೇಳೆ ಹಿಂದೆ ಹೇಳಿದ ಅಲೌಕಸ್ತ್ವವು ಯುಕ್ತವಾದರೆ ಆವಾಗ ಬಾಧಕವಿಲ್ಲದ ಕಾರಣ ಬ್ರಹ್ಮಶಬ್ದಾದಿಗಳನ್ನು ಗೌಣವೆನ್ನಬೇಕಿಲ್ಲ. ಅದಕ್ಕೆ ವಿರುದ್ಧವಾಗಿ ಹಿಂದಿನ ವಾಕ್ಯವು ಆದಿತ್ಯನನ್ನು ವಿಷಯೀಕರಿಸುವುದಿಲ್ಲ. ಆದ್ದರಿಂದ ವಿಷ್ಣುವೇ ಸರ್ವಗತನಾಗುತ್ತಾನೆ. ಈ ಫಲಫಲಿಭಾವವು ಸ್ಪಷ್ಟವಾದ್ದರಿಂದ ಗ್ರಂಥಕಾರರು ಹೇಳಿಲ್ಲ.

ಗ್ರಂಥದಲ್ಲಿ ತೋರಿಸಿದ ಸಂಶಯ ಪರಂಪರೆಯು ಆದಿತ್ಯಕೋಟಿಯ ಪೂರ್ವಪಕ್ಷವನ್ನು ಅನುಸರಿಸಿ ಹೊರಟಿದೆ. ಜೀವಕೋಟಿಪೂರ್ವಪಕ್ಷಕ್ಕೆ ಅನುಸಾರಿಯಾದ ಸಂಶಯ ಪರಂಪರೆಯನ್ನು ಹೀಗೆ ತಿಳಿಯಬೇಕು. ೧) ಸರ್ವಗತತ್ವವು ಜೀವನ ಧರ್ಮವೋ, ವಿಷ್ಣುವಿನ ಧರ್ಮವೋ? ೨) ಇದಕ್ಕಾಗಿ 'ಏತಮ್' ಎಂಬಲ್ಲಿರುವ 'ಏತದ್' ಶಬ್ದವು, ಮುಂದೆ ಹೇಳುವ ವಿಷಯವನ್ನು ಪರಾಮರ್ಶಿಸುತ್ತದೋ ಇಲ್ಲವೋ ? ೩) ಹಿಂದೆ ಹೇಳುವುದನ್ನು ಪರಾಮರ್ಶಿಸುವುದಾದರೂ ಚಕ್ಷುರ್ಮಯತ್ವಾದಿಗಳು ವಿಷ್ಣುವಿನಲ್ಲಿ

ಕೂಡುವುದಿಲ್ಲವೋ, ಅಥವಾ ಕೂಡುತ್ತದೋ? ೪) ಇದಕ್ಕಾಗಿ ಮಯಟ್‌ಪ್ರತ್ಯಯವು ಪ್ರಸಿದ್ಧವಾದ ಚಕ್ಷುರ್ಮಯಾದಿರೂಪಗಳನ್ನು ಹೇಳುತ್ತದೋ? ಅಥವಾ ಆ ಇಂದ್ರಿಯಗಳ ಸ್ವಾಮಿತ್ವವನ್ನು ಹೇಳುತ್ತದೋ? ಇತ್ಯಾದಿಯಾಗಿ ಸಂಶಯಕೋಟಿಯನ್ನು ಊಹಿಸಿಕೊಳ್ಳಬೇಕು. ಆದಿತ್ಯಕೋಟಿಯ ಪೂರ್ವಪಕ್ಷವನ್ನು 'ಅಯಮ್' ಇತ್ಯಾದಿ ಗ್ರಂಥದಿಂದ ಆರಂಭಿಸುತ್ತಿದ್ದಾರೆ.




'ಸರ್ವೇಷು ಭೂತೇಷು' ಎಂಬಲ್ಲಿರುವ ಭೂತಪದದ ಮಹಿಮೆಯಿಂದ ಬೇರೆಲ್ಲೂ ಇಲ್ಲದೆ ಕೇವಲ ಭೂತಪದಾರ್ಥಗಳಲ್ಲಿ ಇರುವಿಕೆಯೇ ಅಲೌಕಿಕತ್ವ ಎಂದು ತಿಳಿಯುತ್ತದೆ. (ಅನ್ಯತ್ರಾನವಸ್ಥಿತತ್ವೇ ಸತಿ ಭೂತಮಾತ್ರಾವಸ್ಥಿತತ್ವರೂಪಾಲೌಕಿಕತ್ವಂ) ಇದು ಅಯುಕ್ತವಾದರೆ ಬ್ರಹ್ಮಶಬ್ದಾದಿಗಳನ್ನು ಗೌಣವೆಂದು ಅವಶ್ಯ ಅಂಗೀಕರಿಸಬೇಕು. ಆವಾಗ ಬ್ರಹ್ಮಶಬ್ದದ ವಿರೋಧವಿಲ್ಲದ ಕಾರಣ ಹಿಂದಿನ ಶ್ರುತಿವಾಕ್ಯವು ಆದಿತ್ಯವಿಷಯಕವಾಗುತ್ತದೆ. ಆದ್ದರಿಂದ 'ಏತಮಸ್ಯಾಮ್' ಎಂಬಲ್ಲಿ 'ಏತದ್' ಶಬ್ದದಿಂದ ಆದಿತ್ಯನನ್ನೇ ಪರಾಮರ್ಶಿಸಬಹುದು. ಆವಾಗ ಆದಿತ್ಯನೇ ಸರ್ವಗತನಾಗುತ್ತಾನೆಂಬುದು ಪೂರ್ವಪಕ್ಷದ ಗುರಿ.

ಒಂದು ವೇಳೆ ಹಿಂದೆ ಹೇಳಿದ ಅಲೌಕಿಕತ್ವವು ಯುಕ್ತವಾದರೆ ಆವಾಗ ಬಾಧಕವಿಲ್ಲದ ಕಾರಣ ಬ್ರಹ್ಮಶಬ್ದಾದಿಗಳನ್ನು ಗೌಣವೆನ್ನಬೇಕಿಲ್ಲ. ಅದಕ್ಕೆ ವಿರುದ್ಧವಾಗಿ ಹಿಂದಿನ ವಾಕ್ಯವು ಆದಿತ್ಯನನ್ನು ವಿಷಯೀಕರಿಸುವುದಿಲ್ಲ. ಆದ್ದರಿಂದ ವಿಷ್ಣುವೇ ಸರ್ವಗತನಾಗುತ್ತಾನೆಂಬುದು ಸಿದ್ಧಾಂತದ ಗುರಿ.





## ಆದಿತ್ಯನೇ ಸರ್ವಗತನೆಂದು ಪೂರ್ವಪಕ್ಷ

### तात्पर्यचन्द्रिका

**पूर्वपक्षस्तु – अयं सर्वगत आदित्यः, "तस्यैतस्यासावादित्यो रसः" इत्यादिना प्रकृतस्य आदित्यस्यैव 'एतं' इति परामर्शात् । ननु लोकतोऽन्यत्रप्रसिद्धस्यापि आदित्यशब्दस्य अन्तरधिकरणन्यायेन विष्णुवाचित्वात् कथं तेन तदन्यस्य प्राप्तिः । नच वाच्यं तत्र देवतावाचिनां समुद्रान्तस्थत्वादिलिङ्गात् विष्णुपरतोक्ता, अत्र तु न विष्णुलिङ्गमस्ति, नहि 'गङ्गायां घोषः' इत्यत्र गङ्गाशब्दस्तीरपर इति 'गङ्गायां मत्स्यः' इत्यत्रापि तथेति, तत्र प्रवृत्तिनिमित्तस्यानन्याधीनत्वादिना विष्णावेव तेषां मुख्यताया उक्तत्वात् । एतेन "आदित्यो रसः" "यश्चासावादित्यः" "आदित्यो भवति" इत्यादित्यश्रुतेर्बहुत्वात् अन्यप्राप्तिरिति निरस्तम् । विष्णौ मुख्यश्रुतिबाहुल्येन अन्यप्राप्त्ययोगात् । नच**

**तत्र तत्प्रकरणस्थानां सवित्रादिशब्दानामेव विष्णुवाचितोक्ता, नतु तत्पर्यायादित्यादि शब्दानामपीति युक्तम्, तथात्वे तत्प्रकरणेऽदितिशब्दस्याप्यभावेन उत्तराधिकरण-टीकायामदितिशब्दस्योक्तन्यायेन सावकाशत्वशङ्काऽनुपपत्तेः ।**

**देवतान्तरगास्सर्वे शब्दा वृत्तिनिमित्ततः ।**
**विष्णुमेव वदन्त्यद्धा तत्सङ्गादुपचारतः ॥**

**इत्यनुव्याख्यानस्थसर्वशब्दविरोधाच्च । तत्रेन्द्रशब्दपर्यायाणामश्रवणेन तत्समन्वयार्थमधिकरणान्तरारम्भापाताच्च । तत्र लिङ्गमात्रेण सवित्रादिशब्दानां विष्णुवाचित्वस्य तत्परत्वस्य वा सिद्धावत्र श्रुतिसहितलिङ्गेनाऽऽदित्यादिशब्दानां विष्णुवाचित्वस्य तत्परत्वस्य वा सुतरां सिद्धेश्च ।**

ಅನುವಾದ - ಪೂರ್ವಪಕ್ಷ ಹೀಗಿದೆ - ಶ್ರುತಿಯಲ್ಲಿ ಹೇಳಲ್ಪಟ್ಟ ಸರ್ವಗತನು ಆದಿತ್ಯನೇ ಆಗಿದ್ದಾನೆ. ಏಕೆಂದರೆ 'ತಸ್ಯೈತಸ್ಯಾಸಾವಾದಿತ್ಯೋ ರಸಃ' ಇತ್ಯಾದಿಯಾಗಿ ಪ್ರಕೃತನಾದ ಆದಿತ್ಯನನ್ನೇ 'ಏತಮ್' ಎಂದು ಪರಾಮರ್ಶೆ ಮಾಡಿದ್ದಾರೆ. ಲೋಕತಃಅನ್ಯತ್ರಪ್ರಸಿದ್ಧವಾದ ಆದಿತ್ಯಶಬ್ದವು ಅಂತರಧಿಕರಣದ ನ್ಯಾಯದಂತೆ ವಿಷ್ಣುವಾಚಿಯೆಂದು ಸಿದ್ಧವಾಗಿದೆ. ಹೀಗಿರುವಾಗ ಆದಿತ್ಯಶಬ್ದದ ಬಲದಿಂದ ಅನ್ಯನು ಸರ್ವಗತನೆಂದು ಇಲ್ಲಿ ಹೇಗೆ ಪೂರ್ವಪಕ್ಷ ಮಾಡುತ್ತೀರಿ? ಅಂತರಧಿಕರಣದಲ್ಲಿ ಸಮುದ್ರಾಂತಸ್ಥತ್ವ ಮೊದಲಾದ ವಿಷ್ಣುಲಿಂಗಗಳಿರುವುದರಿಂದ ದೇವತಾವಾಚಿಶಬ್ದಗಳಿಗೆ ವಿಷ್ಣುಪರತ್ವವನ್ನು ಹೇಳಲಾಗಿದೆ. ಆದರೆ ಈ ಅಧಿಕರಣದ ವಿಷಯವಾಕ್ಯದಲ್ಲಿ ಅಂತಹ ವಿಷ್ಣುಲಿಂಗಗಳೇನು ಕೇಳಿಸುತ್ತಿಲ್ಲ. 'ಗಂಗಾಯಾಂ ಘೋಷಃ' ಎಂಬಲ್ಲಿ ಗಂಗಾಶಬ್ದವು ತೀರಪರವಾದ ಮಾತ್ರದಿಂದ 'ಗಂಗಾಯಾಂ ಮತ್ಸ್ಯಃ' ಎಂಬಲ್ಲಿಯೂ ಗಂಗಾಪದವು ತೀರವನ್ನು ಹೇಳುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಅಂತರಧಿಕರಣದಲ್ಲಿ ಆಯಾ ಶಬ್ದಗಳ ಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಸ್ವತಂತ್ರವಾಗಿದೆ. ಮತ್ತು ನಿರವಧಿಕವಾಗಿದೆ. ಆದ್ದರಿಂದ ಎಲ್ಲಾ ಶಬ್ದಗಳು ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆಂದು ಹೇಳಿದ್ದಾಗಿದೆ. ಆದ್ದರಿಂದ ಈ ಅಧಿಕರಣದಲ್ಲಿ ಪೂರ್ವಪಕ್ಷ ಮಾಡಲು ಸಾಧ್ಯವಿಲ್ಲ.

ಹೀಗೆ ಹೇಳಿದ್ದರಿಂದ ಮತ್ತೊಂದು ಶಂಕೆ ನಿರಾಕೃತವಾಯಿತು - 'ಆದಿತ್ಯೋ ರಸಃ' 'ಯಶ್ಚಾಸಾವಾದಿತ್ಯಃ' 'ಆದಿತ್ಯೋ ಭವತಿ'' ಹೀಗೆ ಆದಿತ್ಯಶ್ರುತಿಗಳು ಬಹಳವಾಗಿರುವುದರಿಂದ ಸೂರ್ಯನು ಆದಿತ್ಯಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ಶಂಕಿಸಬಹುದು. ಆದರೆ ವಿಷ್ಣುವಿನಲ್ಲಿ ಶ್ರುತಿಗೆ ಮುಖ್ಯಾರ್ಥವಿರುವುದರಿಂದ ಸೂರ್ಯನು ಆದಿತ್ಯಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯನಾಗಲಾರ. ಆದ್ದರಿಂದ ಸೂರ್ಯನನ್ನು ಆದಿತ್ಯನೆಂದು ವಿವಕ್ಷಿಸಿ ಪೂರ್ವಪಕ್ಷ ಮಾಡಲು ಸಾಧ್ಯವಿಲ್ಲ.

ಕೂಡುವುದಿಲ್ಲವೋ, ಅಥವಾ ಕೂಡುತ್ತದೋ? ೪) ಇದಕ್ಕಾಗಿ ಮಯಟ್‌ಪ್ರತ್ಯಯವು ಪ್ರಸಿದ್ಧವಾದ ಚಕ್ಷುರ್ಮಯಾದಿರೂಪಗಳನ್ನು ಹೇಳುತ್ತದೋ? ಅಥವಾ ಆ ಇಂದ್ರಿಯಗಳ ಸ್ವಾಮಿತ್ವವನ್ನು ಹೇಳುತ್ತದೋ? ಇತ್ಯಾದಿಯಾಗಿ ಸಂಶಯಕೋಟಿಯನ್ನು ಊಹಿಸಿಕೊಳ್ಳಬೇಕು. ಆದಿತ್ಯಕೋಟಿಯ ಪೂರ್ವಪಕ್ಷವನ್ನು 'ಅಯಮ್' ಇತ್ಯಾದಿ ಗ್ರಂಥದಿಂದ ಆರಂಭಿಸುತ್ತಿದ್ದಾರೆ.




'ಸರ್ವೇಷು ಭೂತೇಷು' ಎಂಬಲ್ಲಿರುವ ಭೂತಪದದ ಮಹಿಮೆಯಿಂದ ಬೇರೆಲ್ಲೂ ಇಲ್ಲದೆ ಕೇವಲ ಭೂತಪದಾರ್ಥಗಳಲ್ಲಿ ಇರುವಿಕೆಯೇ ಅಲೌಕಸ್ತ್ವ ಎಂದು ತಿಳಿಯುತ್ತದೆ. (ಅನ್ಯತ್ರಾನವಸ್ಥಿತತ್ವೇ ಸತಿ ಭೂತಮಾತ್ರಾವಸ್ಥಿತತ್ವರೂಪಾಲೌಕಸ್ತ್ವಂ) ಇದು ಅಯುಕ್ತವಾದರೆ ಬ್ರಹ್ಮಶಬ್ದಾದಿಗಳನ್ನು ಗೌಣವೆಂದು ಅವಶ್ಯ ಅಂಗೀಕರಿಸಬೇಕು. ಆವಾಗ ಬ್ರಹ್ಮಶಬ್ದದ ವಿರೋಧವಿಲ್ಲದ ಕಾರಣ ಹಿಂದಿನ ಶ್ರುತಿವಾಕ್ಯವು ಆದಿತ್ಯವಿಷಯಕವಾಗುತ್ತದೆ. ಆದ್ದರಿಂದ 'ಏತಮಸ್ಯಾಮ್' ಎಂಬಲ್ಲಿ 'ಏತದ್' ಶಬ್ದದಿಂದ ಆದಿತ್ಯನನ್ನೇ ಪರಾಮರ್ಶಿಸಬಹುದು. ಆವಾಗ ಆದಿತ್ಯನೇ ಸರ್ವಗತನಾಗುತ್ತಾನೆಂಬುದು ಪೂರ್ವಪಕ್ಷದ ಗುರಿ.

ಒಂದು ವೇಳೆ ಹಿಂದೆ ಹೇಳಿದ ಅಲೌಕಸ್ತ್ವವು ಯುಕ್ತವಾದರೆ ಆವಾಗ ಬಾಧಕವಿಲ್ಲದ ಕಾರಣ ಬ್ರಹ್ಮಶಬ್ದಾದಿಗಳನ್ನು ಗೌಣವೆನ್ನಬೇಕಿಲ್ಲ. ಅದಕ್ಕೆ ವಿರುದ್ಧವಾಗಿ ಹಿಂದಿನ ವಾಕ್ಯವು ಆದಿತ್ಯನನ್ನು ವಿಷಯೀಕರಿಸುವುದಿಲ್ಲ. ಆದ್ದರಿಂದ ವಿಷ್ಣುವೇ ಸರ್ವಗತನಾಗುತ್ತಾನೆಂಬುದು ಸಿದ್ಧಾಂತದ ಗುರಿ.



• • • • •

ಆದಿತ್ಯನೇ ಸರ್ವಗತನೆಂದು ಪೂರ್ವಪಕ್ಷ

## तात्पर्यचन्द्रिका

**पूर्वपक्षस्तु – अयं सर्वगत आदित्यः, ''तस्यैतस्यासावादित्यो रसः'' इत्यादिना प्रकृतस्य आदित्यस्यैव 'एतं' इति परामर्शात् । ननु लोकतोऽन्यत्रप्रसिद्धस्यापि आदित्यशब्दस्य अन्तरधिकरणन्यायेन विष्णुवाचित्वात् कथं तेन तदन्यस्य प्राप्तिः । नच वाच्यं तत्र देवतावाचिनां समुद्रान्तस्थत्वादिलिङ्गात् विष्णुपरतोक्ता, अत्र तु न विष्णुलिङ्गमस्ति, नहि 'गङ्गायां घोषः' इत्यत्र गङ्गाशब्दस्तीरपर इति 'गङ्गायां मत्स्यः' इत्यत्रापि तथेति, तत्र प्रवृत्तिनिमित्तस्यानन्याधीनत्वादिना विष्णावेव तेषां मुख्यताया उक्तत्वात् । एतेन ''आदित्यो रसः'' ''यश्चासावादित्यः'' ''आदित्यो भवति'' इत्यादित्यश्रुतेर्बहुत्वात् अन्यप्राप्तिरिति निरस्तम् । विष्णौ मुख्यश्रुतिबाहुल्येन अन्यप्राप्त्ययोगात् । नच**

**तत्र तत्प्रकरणस्थानां सवित्रादिशब्दानामेव विष्णुवाचितोक्ता, नतु तत्पर्यायादित्यादि शब्दानामपीति युक्तम्, तथात्वे तत्प्रकरणेऽदितिशब्दस्याप्यभावेन उत्तराधिकरण-टीकायामदितिशब्दस्योक्तन्यायेन सावकाशत्वशङ्काऽनुपपत्तेः ।**

**देवतान्तरगास्सर्वे शब्दा वृत्तिनिमित्ततः ।**
**विष्णुमेव वदन्त्यद्धा तत्सङ्गादुपचारतः ॥**

**इत्यनुव्याख्यानस्थसर्वशब्दविरोधाच्च । तत्रेन्द्रशब्दपर्यायाणामश्रवणेन तत्समन्वयार्थमधिकरणान्तरारम्भापाताच्च । तत्र लिङ्गमात्रेण सवित्रादिशब्दानां विष्णुवाचित्वस्य तत्परत्वस्य वा सिद्धावत्र श्रुतिसहितलिङ्गेनाऽऽदित्यादिशब्दानां विष्णुवाचित्वस्य तत्परत्वस्य वा सुतरां सिद्धेश्च ।**

ಅನುವಾದ - ಪೂರ್ವಪಕ್ಷ ಹೀಗಿದೆ - ಶ್ರುತಿಯಲ್ಲಿ ಹೇಳಲ್ಪಟ್ಟ ಸರ್ವಗತನು ಆದಿತ್ಯನೇ ಆಗಿದ್ದಾನೆ. ಏಕೆಂದರೆ 'ತಸ್ಯೈತಸ್ಯಾಸಾವಾದಿತ್ಯೋ ರಸಃ' ಇತ್ಯಾದಿಯಾಗಿ ಪ್ರಕೃತನಾದ ಆದಿತ್ಯನನ್ನೇ 'ಏತಮ್' ಎಂದು ಪರಾಮರ್ಶೆ ಮಾಡಿದ್ದಾರೆ. ಲೋಕತಃಅನ್ಯತ್ರಪ್ರಸಿದ್ಧವಾದ ಆದಿತ್ಯಶಬ್ದವು ಅಂತರಧಿಕರಣದ ನ್ಯಾಯದಂತೆ ವಿಷ್ಣುವಾಚಿಯೆಂದು ಸಿದ್ಧವಾಗಿದೆ. ಹೀಗಿರುವಾಗ ಆದಿತ್ಯಶಬ್ದದ ಬಲದಿಂದ ಅನ್ಯನು ಸರ್ವಗತನೆಂದು ಇಲ್ಲಿ ಹೇಗೆ ಪೂರ್ವಪಕ್ಷ ಮಾಡುತ್ತೀರಿ? ಅಂತರಧಿಕರಣದಲ್ಲಿ ಸಮುದ್ರಾಂತಸ್ಥತ್ವ ಮೊದಲಾದ ವಿಷ್ಣುಲಿಂಗಗಳಿರುವುದರಿಂದ ದೇವತಾವಾಚಿಶಬ್ದಗಳಿಗೆ ವಿಷ್ಣುಪರತ್ವವನ್ನು ಹೇಳಲಾಗಿದೆ. ಆದರೆ ಈ ಅಧಿಕರಣದ ವಿಷಯವಾಕ್ಯದಲ್ಲಿ ಅಂತಹ ವಿಷ್ಣುಲಿಂಗಗಳೇನು ಕೇಳಿಸುತ್ತಿಲ್ಲ. 'ಗಂಗಾಯಾಂ ಘೋಷಃ' ಎಂಬಲ್ಲಿ ಗಂಗಾಶಬ್ದವು ತೀರಪರವಾದ ಮಾತ್ರದಿಂದ 'ಗಂಗಾಯಾಂ ಮತ್ಸ್ಯಃ' ಎಂಬಲ್ಲಿಯೂ ಗಂಗಾಪದವು ತೀರವನ್ನು ಹೇಳುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಅಂತರಧಿಕರಣದಲ್ಲಿ ಆಯಾ ಶಬ್ದಗಳ ಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಸ್ವತಂತ್ರವಾಗಿದೆ. ಮತ್ತು ನಿರವಧಿಕವಾಗಿದೆ. ಆದ್ದರಿಂದ ಎಲ್ಲಾ ಶಬ್ದಗಳು ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆಂದು ಹೇಳಿದ್ದಾಗಿದೆ. ಆದ್ದರಿಂದ ಈ ಅಧಿಕರಣದಲ್ಲಿ ಪೂರ್ವಪಕ್ಷ ಮಾಡಲು ಸಾಧ್ಯವಿಲ್ಲ.

ಹೀಗೆ ಹೇಳಿದ್ದರಿಂದ ಮತ್ತೊಂದು ಶಂಕೆ ನಿರಾಕೃತವಾಯಿತು - 'ಆದಿತ್ಯೋ ರಸಃ' 'ಯಶ್ಚಾಸಾವಾದಿತ್ಯಃ' 'ಆದಿತ್ಯೋ ಭವತಿ'' ಹೀಗೆ ಆದಿತ್ಯಶ್ರುತಿಗಳು ಬಹಳವಾಗಿರುವುದರಿಂದ ಸೂರ್ಯನು ಆದಿತ್ಯಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ಶಂಕಿಸಬಹುದು. ಆದರೆ ವಿಷ್ಣುವಿನಲ್ಲಿ ಶ್ರುತಿಗೆ ಮುಖ್ಯಾರ್ಥವಿರುವುದರಿಂದ ಸೂರ್ಯನು ಆದಿತ್ಯಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯನಾಗಲಾರ. ಆದ್ದರಿಂದ ಸೂರ್ಯನನ್ನು ಆದಿತ್ಯನೆಂದು ವಿವಕ್ಷಿಸಿ ಪೂರ್ವಪಕ್ಷ ಮಾಡಲು ಸಾಧ್ಯವಿಲ್ಲ.

ಸರ್ವಗತತ್ವಾಧಿಕರಣ (೧-೨-೧)

ಆಯಾ ಪ್ರಕರಣಗಳಲ್ಲಿರುವ ಸವಿತ್ರಾದಿಶಬ್ದಗಳಿಗಷ್ಟೇ ವಿಷ್ಣುವಾಚಿತ್ವವನ್ನು ಅಂತರಧಿಕರಣದಲ್ಲಿ ಸಮರ್ಥಿಸಿದ್ದಾರೆ; ಹೊರತು ಸವಿತ್ರಾದಿಶಬ್ದಗಳಿಗೆ ಪರ್ಯಾಯಶಬ್ದವೆನಿಸಿದ ಆದಿತ್ಯಾದಿಶಬ್ದಗಳನ್ನು ಅಲ್ಲಿ ಸಮನ್ವಯ ಮಾಡಿಲ್ಲವೆಂದು ಶಂಕಿಸಬಾರದು. ಹಾಗಾದಲ್ಲಿ ಮುಂದಿನ ಅಧಿಕರಣದಲ್ಲಿ ಅದಿತಿ ಶಬ್ದವನ್ನು ಸಾವಕಾಶವೆಂದು ಶಂಕಿಸಿದ್ದೇ ತಪ್ಪಾಗುತ್ತದೆ. ಏಕೆಂದರೆ ಅಂತರಧಿಕರಣದಲ್ಲಿ ಉಲ್ಲೇಖಿಸಿದ ಪ್ರಕರಣದಲ್ಲಿ ಅದಿತಿ ಶಬ್ದವು ಇರುವುದಿಲ್ಲ. ಸಮಾನನ್ಯಾಯದಿಂದಷ್ಟೇ ಅದಿತಿಶಬ್ದವನ್ನು ಅಂತರಧಿಕರಣದಲ್ಲಿ ಸಮನ್ವಯ ಮಾಡಬೇಕು. ಇಲ್ಲದಿದ್ದರೆ ಮುಂದಿನ ಅತ್ತ್ರತ್ವಾಧಿಕರಣದಲ್ಲಿ ಅದಿತಿ ಶಬ್ದವು ಅಂತರಧಿಕರಣನ್ಯಾಯದಂತೆ ಸಾವಕಾಶವಾಗಿದೆ ಎಂಬ ಶಂಕೆಯೇ ತಪ್ಪಾಗುತ್ತದೆ.

**ದೇವತಾಂತರಗಾಃ ಸರ್ವೇ ಶಬ್ದಾ ವೃತ್ತಿನಿಮಿತ್ತತಃ ।**
**ವಿಷ್ಣುಮೇವ ವದಂತ್ಯದ್ಧಾ ತತ್ಸಂಗಾದುಪಚಾರತಃ ॥**

ಅಂತರಧಿಕರಣದಲ್ಲಿ ಹೇಳಿದ ಸಕಲ ದೇವತಾವಾಚಕ ಶಬ್ದ ಪ್ರವೃತ್ತಿನಿಮಿತ್ತಗಳು ವಿಷ್ಣುವಿನಲ್ಲಿರುವುದರಿಂದ ವಿಷ್ಣುವನ್ನೇ ಹೇಳುತ್ತವೆ. ವಿಷ್ಣುವಿನ ಸಂಬಂಧದಿಂದ ಔಪಚಾರಿಕವಾಗಿ ಬೇರೆ ದೇವತೆಗಳನ್ನು ಹೇಳುತ್ತವೆ.

ದೇವತಾವಾಚಕವಾದ ಸಕಲಶಬ್ದಗಳಿಗೆ ವಿಷ್ಣುಪರತ್ವವನ್ನು ಒಪ್ಪದಿದ್ದರೆ ಅನುವ್ಯಾಖ್ಯಾನದಲ್ಲಿರುವ ಸರ್ವಶಬ್ದದ ವಿರೋಧ ಬರುತ್ತದೆ. ಮತ್ತು ಅಂತರಧಿಕರಣದ ಈ ವಾಕ್ಯದಲ್ಲಿ ಇಂದ್ರಾದಿ ಶಬ್ದಗಳ ಪರ್ಯಾಯಶಬ್ದಗಳು ಕೇಳಿಸದ ಕಾರಣ ಅವುಗಳ ಸಮನ್ವಯಕ್ಕಾಗಿ ಮತ್ತೊಂದು ಅಧಿಕರಣವು ಹೊರಡಬೇಕಾಗುತ್ತದೆ. ಅಷ್ಟೇ ಅಲ್ಲದೆ ಕೇವಲ ಲಿಂಗದ ಬಲದಿಂದ ಸವಿತ್ರಾದಿ ಶಬ್ದಗಳು ವಿಷ್ಣುವನ್ನು ಸಮರ್ಥಿಸುತ್ತವೆಂದು ಅಂತರಧಿಕರಣದಲ್ಲಿ ಸಿದ್ಧವಾಗಿದೆ. ಹೀಗಿರುವಾಗ ಶ್ರುತಿಸಹಿತವಾದ ಲಿಂಗಗಳಿಂದ ಆದಿತ್ಯಾದಿ ಶಬ್ದಗಳು ವಿಷ್ಣುವನ್ನು ಪ್ರತಿಪಾದಿಸುತ್ತವೆಂದು ಈ ಅಧಿಕರಣದಲ್ಲಿ ನಿಶ್ಚಯವಾಗಿ ಸಿದ್ಧವಾಗುತ್ತದೆ.

**प्रकाशः –**

आदित्यकोटिकपूर्वपक्षं तावदारभते – **अयमिति** । **प्रकृतस्येति** । प्रकृतश्चादित्य एव – "आदित्यो रसः यश्चासावादित्यः पुरुषं पुरुषं प्रत्यादित्यः" इत्यादित्यश्रुतिबाहुल्यात्, "सूर्य आत्मा जगतः" इति सौरमन्त्रोदाहरणाच्च ।

ವಿವರಣೆ - ಆದಿತ್ಯನೇ ಸರ್ವಗತನೆಂದು ಪೂರ್ವಪಕ್ಷ ಮಾಡುತ್ತಿದ್ದಾರೆ. 'ಅಯಂ' ಇತ್ಯಾದಿ ಗ್ರಂಥದಿಂದ. 'ಪ್ರಕೃತಸ್ಯ' ಎಂಬ ಗ್ರಂಥದಿಂದ ಆದಿತ್ಯನೇ ಪ್ರಕೃತನಾಗಿದ್ದಾನೆಂದು ಹೇಳಿದ್ದಾರೆ. ಅದು ಹೀಗೆ - 'ಆದಿತ್ಯೋ ರಸಃ ಯಶ್ಚಾಸಾವಾದಿತ್ಯಃ, ಪುರುಷಂ ಪುರುಷಂ ಪ್ರತ್ಯಾದಿತ್ಯಃ' ಎಂದು ಆದಿತ್ಯಶ್ರುತಿಯು ಅನೇಕಬಾರಿ ಕೇಳಿಸುತ್ತಿದೆ. ಮತ್ತು 'ಸೂರ್ಯ ಆತ್ಮಾ ಜಗತಃ' ಎಂಬ ಸೌರಮಂತ್ರವನ್ನು ಉದಾಹರಿಸಿದ್ದಾರೆ.

**प्रकाशः** – "एतं चन्द्रमसि" इत्युक्त्वा 'एतमादित्ये' 'इत्यनुक्तत्वलिङ्गाच्च' इति टीकोक्तेरिति भावः । न्यायविवरणटीकायां – "न चैतदन्तस्स्थत्वाधिकरणन्यायेन "उपासात्रैविध्यात्" इति वा परिहृतमिति वाच्यं, सम्भवति हीश्वरे कल्पनैषा । न चासावत्र सम्भवति, "सर्वेषु भूतेषु" इत्यल्पौकस्त्वश्रवणात्" इत्यादिनाऽऽक्षिप्य समाहितम् । तदयुक्तमिव, तत्रैवात्र लिङ्गाभावात्, आदित्यशब्दस्य प्राक् समन्वयानुक्तेश्च, टीकायां प्रापकबाहुल्योक्तेश्चेत्याशङ्क्य "टीकासु च यदस्पष्टं" इति प्रतिज्ञातत्वात्तद्वाक्यं विवरितुं पूर्वपक्षाक्षेपप्रकारमाह – नन्विति ।

ಮತ್ತು 'ಏತಂ ಚಂದ್ರಮಸಿ' ಎಂದು ಹೇಳಿ. 'ಏತಮಾದಿತ್ಯೇ' ಎಂಬ ಲಿಂಗವೂ ಹೇಳಲಾಗಿದೆ. ಹೀಗೆ ಟೀಕೆಯಲ್ಲಿ ಹೇಳಿದ್ದನ್ನು ಇಲ್ಲಿ ವ್ಯಾಖ್ಯಾನಿಸಿದ್ದಾರೆ. ನ್ಯಾಯವಿವರಣೆಯ ಟೀಕೆಯಲ್ಲಿ 'ನ ಚೈತದಂತಸ್ಸ್ಥತ್ವಾಧಿಕರಣನ್ಯಾಯೇನ "ಉಪಾಸಾತ್ರೈವಿಧ್ಯಾತ್" ಇತಿ ವಾ ಪರಿಹೃತಮಿತಿ ವಾಚ್ಯಂ, ಸಂಭವತಿ ಹೀಶ್ವರೇ ಕಲ್ಪನೈಷಾ । ನ ಚಾಸಾವತ್ರ ಸಂಭವತಿ, "ಸರ್ವೇಷು ಭೂತೇಷು" ಇತ್ಯಲ್ಪೌಕಸ್ತ್ವಶ್ರವಣಾತ್" "ಈ ಅಧಿಕರಣದಲ್ಲಿ ಮಾಡಿದ ಪೂರ್ವಪಕ್ಷವನ್ನು ಅಂತಸ್ಥತ್ವಾಧಿಕರಣನ್ಯಾಯದಂತೆ ಮೂರುವಿಧ ಉಪಾಸನೆಗಳಿಂದ ಪರಿಹರಿಸಲು ಸಾಧ್ಯವಿಲ್ಲ. ಈಶ್ವರನಲ್ಲಿ ಇದನ್ನು ಕಲ್ಪಿಸಬಹುದು. ಆದರೆ ಆದಿತ್ಯನಲ್ಲಿ ಕಲ್ಪಿಸಲು ಸಾಧ್ಯವಿಲ್ಲ. 'ಸರ್ವೇಷು ಭೂತೇಷು' ಎಂದು ಅಲ್ಪೌಕಸ್ತ್ವವನ್ನು ಹೇಳಿದ್ದರಿಂದ" ಹೀಗೆ ಆಕ್ಷೇಪಿಸಿ ಸಮಾಧಾನ ಹೇಳಿದ್ದಾರೆ. ಇದು ತಪ್ಪು. ಏಕೆಂದರೆ ಅಂತಸ್ಥತ್ವಾಧಿಕರಣದಿಂದ ಈ ಅಧಿಕರಣವು ಗತಾರ್ಥವಾಯಿತೆಂಬ ಶಂಕೆಯೇ ಕೂಡುವುದಿಲ್ಲ. ಏಕೆಂದರೆ ಅಂತಸ್ಥತ್ವಾಧಿಕರಣದಲ್ಲಿ ಆದಿತ್ಯಶಬ್ದವನ್ನು ಸಮನ್ವಯ ಮಾಡಿಲ್ಲ. ಮತ್ತು ಅಂತಸ್ಥತ್ವಾಧಿಕರಣದಲ್ಲಿ ಹೇಳಿದ ಲಿಂಗವೂ ಇಲ್ಲಿ ಕೇಳಿಸುತ್ತಿಲ್ಲ. ಮತ್ತು ಟೀಕೆಯಲ್ಲಿ ಸೂರ್ಯನಿಗೆ ಆದಿತ್ಯಶಬ್ದವಷ್ಟೇ ಅಲ್ಲದೆ ಅನೇಕ ಪ್ರಾಪಕಗಳನ್ನೂ ಹೇಳಿದ್ದಾರೆ. ಆದ್ದರಿಂದ ನ್ಯಾಯವಿವರಣಟೀಕೆಯಲ್ಲಿ ಮಾಡಿದ ಗತಾರ್ಥತ್ವವೆಂಬ ಶಂಕೆ ತಪ್ಪಲ್ಲವೇ? ಎಂಬ ಪ್ರಶ್ನೆಗೆ 'ನನು' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – पूर्वन्यायविषयत्वमाशङ्क्याह – **नच वाच्यमिति** । 'तथेति' इत्यनेनान्वयः । **विष्णुपरतेति** । नतु मुख्याताऽपीत्यर्थः । 'तत्र' अन्तरधिकरणे । आदिपदेनान्यगतं प्रति स्वातन्त्र्येणेति गृह्यते । श्रुतिबहुत्वमुज्जीवकमस्तु, किं लिङ्गेनेत्यतस्तट्टीकोक्तमादित्याश्रुतिबाहुल्यमपि नान्यप्रापकमित्याह – **एतेनेति** ।

'ಟೀಕಾಸು ಚ ಯದಸ್ಪಷ್ಟಮ್' ಎಂದು ಗ್ರಂಥಪ್ರಾರಂಭದಲ್ಲಿ ಪ್ರತಿಜ್ಞೆ ಮಾಡಿದಂತೆ ನ್ಯಾಯವಿವರಣ ಟೀಕೆಯು ಅಸ್ಪಷ್ಟವಾದ್ದರಿಂದ ಅದನ್ನು ವ್ಯಾಖ್ಯಾನಿಸುತ್ತಿದ್ದಾರೆ. ಹಿಂದೆ ಅಂತಸ್ಥತ್ವಾಧಿಕರಣದಲ್ಲಿ ವಿಷ್ಣುಲಿಂಗವಿರುವ ದೇವತಾವಾಚಕಪದಗಳಷ್ಟೇ ವಿಷ್ಣುವಿನಲ್ಲಿ ಸಮನ್ವಯ ಮಾಡಲಾಯಿತು. ಆದರೆ ಈ ಅಧಿಕರಣದ ವಿಷಯವಾಕ್ಯದಲ್ಲಿ ಅಂತಹ ವಿಷ್ಣುಲಿಂಗಗಳು ಕೇಳಿಸುತ್ತಿಲ್ಲ. ಪೂರ್ವನ್ಯಾಯವಿಷಯತ್ವವನ್ನು ಇಲ್ಲಿ ಹೇಳಲು ಸಾಧ್ಯವಿಲ್ಲವಲ್ಲ? ಎಂಬ ಪ್ರಶ್ನೆಗೆ 'ನಚ ವಾಚ್ಯಮ್' ಎಂದು ಉತ್ತರಿಸಿದ್ದಾರೆ. ಈ

ವಿಷಯವಾಕ್ಯದಲ್ಲಿ ವಿಷ್ಣುಲಿಂಗವು ಕೇಳಿಸದಿದ್ದರೂ ಆದಿತ್ಯಶಬ್ದವು ವಿಷ್ಣುವಿನಲ್ಲಿ ಮುಖ್ಯವಾದ್ದರಿಂದ ಗತಾರ್ಥತ್ವವು ಬಂದೇ ಬರುತ್ತದೆಂದು ಅಭಿಪ್ರಾಯ. 'ನಚ ವಾಚ್ಯಮ್' ಎಂಬುದಕ್ಕೆ 'ತಥೇತಿ' ಎಂಬಲ್ಲಿ ಅನ್ವಯ.

'ಅನನ್ಯಾಧೀನತ್ವಾದಿನಾ' ಎಂಬಲ್ಲಿರುವ ಆದಿಪದದಿಂದ ಅನ್ಯರನ್ನು ಕುರಿತು ಇರುವ ಸ್ವಾತಂತ್ರ್ಯವನ್ನು ವಿವಕ್ಷಿಸಬೇಕು. ಪೂರ್ವಪಕ್ಷಕ್ಕೆ ಉಜ್ಜೀವಕವಾಗಿ ಶ್ರುತಿಬಹುತ್ವವನ್ನು ಹೇಳಿದರೆ ಸಾಕು. ಲಿಂಗವನ್ನು ಹೇಳಬೇಕಾಗಿಲ್ಲ. ಆದ್ದರಿಂದ ಅರ್ಭಕೌಕಸ್ತ್ವವನ್ನು ನ್ಯಾಯವಿವರಣ ಟೀಕೆಯಲ್ಲಿ ಹೇಳುವ ಅವಶ್ಯಕತೆ ಇರಲಿಲ್ಲೆಂಬ ಪ್ರಶ್ನೆ ಬರುತ್ತದೆ. ಆದರೆ ಕೇವಲ ಶ್ರುತಿಬಾಹುಲ್ಯವು ಪೂರ್ವಪಕ್ಷಪ್ರಾಪಕವಲ್ಲವೆಂಬುದನ್ನು 'ಏತೇನ' ಎಂಬ ವಾಕ್ಯದಿಂದ ಹೇಳುತ್ತಾರೆ 'ಏತೇನ' ಎಂಬುದರ ಅರ್ಥವನ್ನು 'ವಿಷ್ಣೌ' ಎಂಬ ವಾಕ್ಯದಿಂದ ಹೇಳಿದ್ದಾರೆ.

**प्रकाशः** – एतच्छब्दार्थमेवाह – **विष्णाविति** । मन्दानां भ्रमं वारयति – **नचेति** । **टीकायामिति** । ''नच श्रुतिर्विष्णुविषया किं न स्यादुक्तन्यायात्'' इति वाक्येनेत्यर्थः । **उक्तन्यायेनेति** । अन्तरधिकरणन्यायेनेत्यर्थः । **अनुव्याख्यानेति** । तृतीयाध्यायतृतीयपादीयानुव्याख्यानस्थेत्यर्थः । सर्वे देवतान्तरगताः शब्दाः शब्दवृत्त्योर्योगरूढ्योर्निमित्तानां बहुलप्रयोगादीनां हरौ सत्त्वात् 'अद्धा' वचनवृत्त्यैव वदन्ति, अन्यत्र तत्सङ्गादुपचारतः प्रयोग इत्यर्थः । ननु तत्र सर्वशब्दस्य सङ्कोचः क्रियतामित्यत आह – **तत्रेति** । अन्तरधिकरणोदाहरण इत्यर्थः ।

ಅಂತಸ್ಥತ್ವಾಧಿಕರಣದಲ್ಲಿ ಆಯಾ ಪ್ರಕರಣಗಳಲ್ಲಿರುವ ಸವಿತ್ರಾದಿಶಬ್ದಗಳನ್ನಷ್ಟೇ ಸಮನ್ವಯ ಮಾಡಿದ್ದಾರೆ. ಹೊರತು ಅದರ ಪರ್ಯಾಯಶಬ್ದಗಳೆನಿಸಿದ ಆದಿತ್ಯಾದಿ ಶಬ್ದಗಳನ್ನು ಸಮನ್ವಯ ಮಾಡಿಲ್ಲವೆಂಬುದು ಮಂದರ ಶಂಕೆ. ಇದನ್ನು 'ನಚ' ಎಂಬ ಗ್ರಂಥದಿಂದ ಪರಿಹರಿಸಿದ್ದಾರೆ. 'ನಚ ಶ್ರುತಿರ್ವಿಷ್ಣುವಿಷಯಾ ಕಿಂ ನ ಸ್ಯಾದುಕ್ತನ್ಯಾಯಾತ್' ಎಂಬ ವಾಕ್ಯದಿಂದ ಮುಂದಿನ ಅತ್ತೃತ್ವಾಧಿಕರಣದಲ್ಲಿ ಅದಿತಿ ಶಬ್ದವನ್ನು ಸಾವಕಾಶವೆಂದು ಶಂಕಿಸಿದ್ದಾರೆ. ಅನುವ್ಯಾಖ್ಯಾನದ ಮೂರನೇ ಅಧ್ಯಾಯದ ಮೂರನೇ ಪಾದದಲ್ಲಿ ಎಲ್ಲಾ ದೇವತಾವಾಚಕಶಬ್ದವೃತ್ತಿಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದಾರೆ. ಯೋಗರೂಢಿಗಳಿಗೆ ನಿಮಿತ್ತವಾದ ಬಹಳ ಪ್ರಯೋಗವು ವಿಷ್ಣುವಿನಲ್ಲಿರುವುದರಿಂದ ವಿಷ್ಣುವಿನಲ್ಲಿ ವಚನವೃತ್ತಿಯನ್ನೇ ಹೇಳಬಹುದು. ಇತರ ದೇವತೆಗಳಲ್ಲಿ ವಿಷ್ಣುವಿನ ಸಂಪರ್ಕದಿಂದ ಔಪಚಾರಿಕಪ್ರಯೋಗವನ್ನು ಹೇಳಬೇಕು. ಅನುವ್ಯಾಖ್ಯಾನದಲ್ಲಿರುವ ಸರ್ವಶಬ್ದಕ್ಕೆ ಆಯಾ ಪ್ರಕರಣಗಳಲ್ಲಿರುವ ಸರ್ವಶಬ್ದಗಳೆಂಬರ್ಥದಲ್ಲಿ ಸಂಕೋಚ ಮಾಡೋಣವೆಂಬ ಪ್ರಶ್ನೆಗೆ 'ತತ್ರ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ.

**प्रकाशः** – ननु तत्र पर्यायाणामपि निरवकाशविष्णुलिङ्गोपेतानामेव समन्वयो नान्येषामित्याशङ्क्याह – **तत्रेति** । **श्रुतीति** । ब्रह्मश्रुतिसहिताश्रुतत्वादिलिङ्गेनेत्यर्थः ।

ಪರ್ಯಾಯಶಬ್ದಗಳಾಗಿದ್ದರೂ ನಿರವಕಾಶವಿಷ್ಣುಲಿಂಗಗಳಿದ್ದರೆ ಮಾತ್ರ ಆಯಾ ಶಬ್ದಗಳ ಸಮನ್ವಯವನ್ನು ಅಂತರಧಿಕರಣದಲ್ಲಿ ಮಾಡಲಾಗಿದೆ. ಹೊರತು ಬೇರೆ ಶಬ್ದಗಳನ್ನಲ್ಲವೆಂಬ ಶಂಕೆಗೆ 'ತತ್ರ ಲಿಂಗಮಾತ್ರೇಣ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. ಈ ಪ್ರಕರಣದಲ್ಲಿ ಕೇವಲ ಲಿಂಗವಷ್ಟೇ ಅಲ್ಲದೆ ಬ್ರಹ್ಮಶ್ರುತಿಸಹಿತವಾದ ಅಶ್ರುತತ್ವಾದಿಲಿಂಗಗಳು ಕೇಳಿಸುತ್ತಿರುವುದರಿಂದ ಸುತರಾಮ್ ವಿಷ್ಣುಪರತ್ವವು ಸಿದ್ಧವಾಗುತ್ತದೆ.

**गुरुराजीयम् – एतमितीति** ।। ''एतं ह्येव बह्वृचा'' इत्यादिनेत्यर्थः ।। किमत्रादित्यश्रुत्या पूर्वपक्षो बह्वित्यादिश्रुत्या वा सौरमन्त्रेण वा आदित्येऽनुक्तत्वलिङ्गेन वा चक्षुर्मयत्वादिना वा अर्भकौकस्त्वेन वा । नाद्य इत्याह – **नन्विति** ।। ननु लोकतोऽन्यत्रप्रसिद्धानां देवतावाचीन्द्रादिशब्दानां समुद्रान्तस्स्थितत्वादिलिङ्गै-र्विष्णुपरत्वे निर्णीते अन्यत्रप्रसिद्धस्याप्यादित्यशब्दस्य विष्णुवाचकत्वं स्यादित्या-शङ्क्याह – **न हीति** ।। अन्यथा ''गङ्गायां घोषः'' इत्यत्र गङ्गाशब्दार्थभूतप्रवाहस्य घोषाधिकरणत्वानुपपत्त्या तीरपरत्वे चान्यत्र ''गङ्गायां मत्स्यः'' इत्यत्रापि तीरपरत्वं स्यात् । ''गङ्गायां घोषः'' इत्यत्र मुख्यार्थानुपपत्तिरित्यादिवत् ''गङ्गायां मत्स्यः'' इत्यादौ तदभावाद्यदि न तीरपरत्वं तर्ह्यन्तः प्रविष्टमित्यादिवाक्ये समुद्रान्तस्थिततत्वादिलिङ्गैर्विष्णुपरत्वेप्यत्र 'स यश्चायम्' इत्यादौ तल्लिङ्गाभावान्न विष्णुपरत्वमिति सममित्यर्थः । तथेतीत्यत्रत्यस्येतिशब्दस्य इति नच वाच्यमिति पूर्वेण सम्बन्धः । द्वितीयं दूषयति – **एतेनेति** ।। एतेनेत्यनेन परामृष्टं हेतुं दर्शयति – **विष्णाविति** ।। विष्णौ मुख्या या श्रुतिस्तद्बाहुल्येनेत्यर्थः । अन्तिमाधिकरणस्य तत्प्रकरणस्थानां सवित्रादिशब्दानां विष्णुमात्रवाचित्वपरत्वे अनुव्याख्यान-विरोधश्चेत्याह – **देवतान्तरगा इति** ।। नन्वनुव्याख्याने सर्वशब्दोऽन्तरधिकरणन्याय विषयसर्वपर एव । नत्वसङ्कुचितसर्वपर इत्यतो न तद्विरोध इति पूर्वत्रारुच्या दोषान्तरमाह – **तत्रेति** । नच वासवादिशब्दानामन्तरधिकरणन्यायविषयत्वेनैव भगवत्परत्वसम्भवान्न तदर्थमधिकरणान्तरारम्भ इत्यरुच्याह – **तत्रलिङ्गेति** ।।




ಆದಿತ್ಯನೇ ಸರ್ವಗತನೆಂಬ ಪೂರ್ವಪಕ್ಷವನ್ನು ವಿವರವಾಗಿ ಮಾಡುತ್ತಿದ್ದಾರೆ.

'ತಸ್ಯೈತಸ್ಯಾಸಾವಾದಿತ್ಯೋ ರಸಃ' ಇತ್ಯಾದಿಯಾಗಿ ಪ್ರಕೃತನಾದ ಆದಿತ್ಯನನ್ನೇ 'ಏತಮ್' ಎಂದು ಪರಾಮರ್ಶಿಸಲಾಗಿದೆ. ಆದ್ದರಿಂದ ಆದಿತ್ಯನೇ ಸರ್ವಗತನಾಗಬೇಕು. ಅಂತರಧಿಕರಣದ ನ್ಯಾಯದಿಂದ ಈ

ಆದಿತ್ಯಶಬ್ದವೂ ಸಹ ವಿಷ್ಣುವಿನಲ್ಲಿ ಸಮನ್ವಯವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಬಲಿಷ್ಠವಾದ ವಿಷ್ಣುಲಿಂಗಗಳಿದ್ದರೆ ಮಾತ್ರ ವಿಷ್ಣುಪರತ್ವವನ್ನು ಅಲ್ಲಿ ಹೇಳಿದ್ದಾರೆ. ಆದರೆ ಪ್ರಕೃತ ಅಂತಹ ಲಿಂಗಗಳು ಕಾಣಸುತ್ತಿಲ್ಲ.

ಇಷ್ಟಾದರೂ ಪೂರ್ವಪಕ್ಷ ಹುಟ್ಟಲು ಸಾಧ್ಯವಿಲ್ಲವೆಂಬ ಆಕ್ಷೇಪ ಬಂದೇ ಬರುತ್ತದೆ. ದೇವತಾವಾಚಿಯಾದ ಎಲ್ಲಾ ಶಬ್ದಗಳನ್ನು ಸಮನ್ವಯ ಮಾಡಿದ ಮೇಲೆ ವಿಷ್ಣುಲಿಂಗಗಳು ಇರುವುದು ಅಥವಾ ಇಲ್ಲದಿರುವುದು ಕಾರಣವಾಗುವುದಿಲ್ಲ. ಸಮಾನನ್ಯಾಯದಿಂದ ಎಲ್ಲಾ ದೇವತಾವಾಚಕಶಬ್ದಗಳ ಸಮನ್ವಯವು ಸಿದ್ಧವಾಗುತ್ತದೆ.



ಅಂತರಧಿಕರಣದಿಂದ ಪುನರುಕ್ತಿ ದೋಷ

## तात्पर्यचन्द्रिका

एतेन "सूर्य आत्मा" इति सौरमन्त्रोदाहरणात्सूर्यप्राप्तिरिति निरस्तम् । उक्तन्यायेन मन्त्रस्थसूर्यादिशब्दस्यापि विष्णौ मुख्यत्वात् । नच "अन्तः" इत्यादौ चन्द्रादिकतिपयगतत्वादिकमुक्तं, अत्र तु सर्वगतत्वमुच्यत इति भेदः,

व्यधिकरणत्वात् । नहि प्रतिपाद्याभेदः शङ्कितः, किन्तु पूर्वपक्षानुदयः ।

नच "चन्द्रमस्येतं" इति सजातीये चन्द्रादावुक्त्वा आदित्ये अनुक्तत्वाल्लिङ्गात्तत्प्राप्तिः,

'सर्वेषु' इति सर्वशब्देन आदित्यस्यापि ग्रहणसम्भवेन सावकाशलिङ्गेन श्रुत्यादिबाधायोगात्; सन्ति चात्र 'एतमेव ब्रह्म' इति ब्रह्मशब्दाद्याः श्रुतयः, " स योऽतोऽश्रुतोऽगतोऽमतोऽदृष्टः" इत्यश्रुतत्वादिलिङ्गानि च, ब्रह्मशब्दस्य च विष्णौ मुख्यतायाः आनन्दमयाधिकरणे सिद्धत्वात् ज्योतिरधिकरणे च ज्योतिषो विष्णुत्वे अश्रुतत्वादेर्हेतूकृतत्वात्, अदृष्टत्वस्य च विष्णुधर्मतायाः "अदृश्यत्वादिगुणकः" इत्यत्र वक्ष्यमाणत्वात् ।

"स योऽतोऽश्रुतः" इत्यादिसन्निधाने च "अन्तरपुरुषः" इत्यन्तरत्वश्रवणात्तस्य चान्तर्याम्यधिकरणे विष्णुलिङ्गतायाः सेत्स्यमानत्वात् ।

ಪರಿಪೂರ್ಣಚಂದ್ರಿಕಾ

ಅನುವಾದ - 'ಸೂರ್ಯ ಆತ್ಮಾ' ಎಂದು ಐತರೇಯಮಂತ್ರದಲ್ಲಿ ಸೌರಮಂತ್ರವನ್ನು ಉದಾಹರಿಸಲಾಗಿದೆ. ಇದರಿಂದ ಸೂರ್ಯನೇ ಪ್ರತಿಪಾದ್ಯನಾಗುತ್ತಾನೆಂಬ ಆಕ್ಷೇಪವು ಈಗ ಪರಿಹಾರವಾಯಿತು. ಹಿಂದೆ ಹೇಳಿದ ನ್ಯಾಯದಂತೆ ಮಂತ್ರವಾಕ್ಯದಲ್ಲಿರುವ ಸೂರ್ಯ ಮೊದಲಾದ ಶಬ್ದಗಳೂ ಸಹ ವಿಷ್ಣುವಿನಲ್ಲಿ ಮುಖ್ಯವಾಗಿವೆ.

ಪ್ರಶ್ನೆ - ಅಂತರಧಿಕರಣದಲ್ಲಿ ಚಂದ್ರಾದಿ ಕೆಲವು ದೇವತೆಗಳಲ್ಲಷ್ಟೇ ವಿಷ್ಣು ಅಂತರ್ಯಾಮಿಯಾಗಿದ್ದಾನೆಂದು ಹೇಳಲಾಗಿದೆ. ಈ ಅಧಿಕರಣದಲ್ಲಿ ಸರ್ವಾಂತರ್ಯಾಮ್ಯತ್ವವನ್ನು ವಿಷ್ಣುವಿನಲ್ಲಿ ಸಮರ್ಥಿಸಲಾಗಿದೆ. ಹೀಗೆ ಎರಡು ಅಧಿಕರಣಗಳಿಗೆ ವೈಲಕ್ಷಣ್ಯವಿರುವುದರಿಂದ ಗತಾರ್ಥತ್ವದೋಷವು ಬರುವುದಿಲ್ಲ.

ಈ ಉತ್ತರವು ವ್ಯಧಿಕರಣವಾಗಿದೆ. ಏಕೆಂದರೆ ಎರಡು ಅಧಿಕರಣದ ಪ್ರತಿಪಾದ್ಯವಿಷಯವು ಒಂದೇ ಆಗಿದೆಯೆಂದು ನಾವು ಆಕ್ಷೇಪ ಮಾಡಿಯೇ ಇಲ್ಲ ಹೊರತು ಎಲ್ಲಾ ದೇವತಾವಾಚಕ ಪದಗಳು ವಿಷ್ಣುವಿನಲ್ಲಿ ಮುಖ್ಯವೆಂದು ಅಂತರಧಿಕರಣದಲ್ಲಿ ನಿರ್ಣಯವಾಗಿರುವಾಗ ಪುನಃ ಇಲ್ಲಿ ಅದೇ ಆದಿತ್ಯಾದಿಶಬ್ದಗಳನ್ನು ವಿಷ್ಣುಪರವಲ್ಲವೆಂದು ಪೂರ್ವಪಕ್ಷವನ್ನು ಮಾಡಲು ಬರುವುದಿಲ್ಲವೆಂದು ಆಕ್ಷೇಪಿಸುತ್ತಿದ್ದೇವೆ. ಹೀಗಿರುವಾಗ ಪ್ರತಿಪಾದ್ಯವಿಷಯವು ಭಿನ್ನವಾಗಿದೆಯೆಂಬ ನಿಮ್ಮ ಉತ್ತರವು ವ್ಯಧಿಕರಣವಾಗಿದೆ.

ಪ್ರಶ್ನೆ - ಆದಿತ್ಯನನ್ನು ಸರ್ವಗತನೆಂದು ಪೂರ್ವಪಕ್ಷ ಮಾಡಬಹುದು. 'ಚಂದ್ರಮಸ್ಯೇತಮ್' ಇತ್ಯಾದಿಯಾಗಿ ಸಜಾತಿಯರಾದ ಚಂದ್ರಾದಿಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿ ಆದಿತ್ಯಶಬ್ದವನ್ನು ಸಮನ್ವಯ ಮಾಡಿಲ್ಲ. ಹೀಗೆ ಅಂತರಧಿಕರಣದಲ್ಲಿ ಚಂದ್ರನನ್ನು ಹೇಳಿ ಆದಿತ್ಯನನ್ನು ಹೇಳದಿರುವಿಕೆ ಎಂಬ ಕಾರಣದಿಂದಲೇ ಪ್ರಕೃತ ಪೂರ್ವಪಕ್ಷವು ಉದಯವಾಗಬಹುದಲ್ಲವೇ?

ಉತ್ತರ - 'ಚಂದ್ರಮಸ್ಯೇತಮ್' ಇತ್ಯಾದಿ ಶ್ರುತಿಯಲ್ಲಿ 'ಸರ್ವೇಷು ಭೂತೇಷು' ಎಂಬುದಾಗಿ ಎಲ್ಲವನ್ನು ಸರ್ವಶಬ್ದದಿಂದ ಸಂಗ್ರಹಿಸಲಾಗಿದೆ. ಇಲ್ಲಿರುವ ಸರ್ವಶಬ್ದದಿಂದ ಆದಿತ್ಯನನ್ನೂ ಕೂಡ ಗ್ರಹಣ ಮಾಡಬಹುದು. ಆದ್ದರಿಂದ ಆದಿತ್ಯೇ ಅನುಕ್ತತ್ವವೆಂಬುದು ಸಾವಕಾಶಲಿಂಗ ಎನಿಸಿದೆ. ಈ ಸಾವಕಾಶಲಿಂಗದಿಂದ ಶ್ರುತಿಲಿಂಗ ಮೊದಲಾದವುಗಳನ್ನು ಸಾಧಿಸಲು ಸಾಧ್ಯವಿಲ್ಲ. 'ಏತಮೇವ ಬ್ರಹ್ಮ' ಇತ್ಯಾದಿಯಾಗಿ ಬ್ರಹ್ಮಶಬ್ದವಿರುವ ಶ್ರುತಿಗಳು ಆದಿತ್ಯನನ್ನೇ ವಿಷ್ಣುವೆನ್ನಲು ಪ್ರಮಾಣಗಳಾಗಿವೆ. ಮತ್ತು 'ಸ ಯೋಽತೋಽಶ್ರುತೋಽಗತೋಽಮತೋಽನತೋಽದೃಷ್ಟಃ' ಎಂದು ಅಶ್ರುತತ್ವಾದಿಲಿಂಗಗಳು ವಿಷ್ಣುವಿನಲ್ಲಿವೆ. ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಮುಖ್ಯವೆಂದು ಆನಂದಮಯಾಧಿಕರಣದಲ್ಲಿ ನಿರ್ಣಯಿಸಲಾಗಿದೆ. ಜ್ಯೋತಿರಧಿಕರಣದಲ್ಲಿಯೂ ಜ್ಯೋತಿಯನ್ನು ವಿಷ್ಣುವೆಂದು ಸಮರ್ಥಿಸಲು

ಅಶ್ರುತತ್ವಾದಿಗಳನ್ನು ಹೇತು ಮಾಡಿದ್ದಾರೆ. ಹೇತು ಮಾಡಬೇಕಾದರೆ ವಿಷ್ಣುಲಿಂಗವೆಂದು ಸಿದ್ಧವಾಗಿರಬೇಕು. ಮತ್ತು ಮುಂದೆ 'ಅದೃಶ್ಯತ್ವಾದಿಗುಣಕೋಧರ್ಮೋಕ್ತೇಃ' ಎಂಬ ಸೂತ್ರದಲ್ಲಿ ಅದೃಶ್ಯತ್ವಾದಿಗಳನ್ನು ವಿಷ್ಣುಧರ್ಮವೆಂದು ಸಾಧಿಸುತ್ತಾರೆ.

'ಸ ಯೋಽತೋಽಽಶ್ರುತಃ' ಎಂಬ ವಾಕ್ಯದ ಸನ್ನಿಧಾನದಲ್ಲಿ 'ಸರ್ವೇಷಾಮ್ ಭೂತಾನಾಮ್ ಅಂತರ ಪುರುಷಃ' ಎಂದು ಕೇಳಿಸುತ್ತದೆ. ಈ ಅಂತರತ್ವವನ್ನು ಅಂತರ್ಯಾಮ್ಯಧಿಕರಣದಲ್ಲಿ ವಿಷ್ಣುಲಿಂಗವೆಂದು ಸಾಧಿಸುತ್ತಾರೆ. ಆದ್ದರಿಂದ ಅನೇಕ ವಿಷ್ಣುಶ್ರುತಿಗಳು ಅನೇಕ ವಿಷ್ಣುಲಿಂಗಗಳು ಬಲಿಷ್ಠವಾಗಿರುವಾಗ ಒಂದೇ ಲಿಂಗದಿಂದ ಸೂರ್ಯನೇ ಸರ್ವಗತನೆಂಬ ಪೂರ್ವಪಕ್ಷ ಹುಟ್ಟಲು ಹೇಗೆ ಸಾಧ್ಯ ?

**प्रकाशः –**

टीकोक्तं सौरमन्त्रोदाहरणरूपं प्रापकान्तरमप्याक्षिपति – **एतेनेति** । आशयमबुध्वा भ्रान्तस्य चोद्यं परिहरति – **नचेति** । अत्र तु पृथिव्यादिसर्वगतत्वमतो न पौनरुक्त्यं प्रतिपाद्यभेदादिति भावः । **किन्त्विति** । **सर्वस्य** विष्णुप्रापकत्वेन आदित्यादिप्रापकाभावेन पूर्वपक्षानुदयश्चोद्यत इत्यर्थः ।

ವಿವರಣೆ - ಟೀಕೆಯಲ್ಲಿ ಪೂರ್ವಪಕ್ಷಪ್ರಾಪಕವಾಗಿ ಸೌರಮಂತ್ರವನ್ನು ಉದಾಹರಿಸಿದ್ದಾರೆ. ಅದನ್ನು ಪ್ರಕೃತ 'ಏತೇನ' ಎಂಬ ಗ್ರಂಥದಿಂದ ಆಕ್ಷೇಪಿಸುತ್ತಿದ್ದಾರೆ. ಪೂರ್ವಪಕ್ಷಿಗಳ ಅಭಿಪ್ರಾಯವನ್ನು ಅರ್ಥಮಾಡಿಕೊಳ್ಳದ ಭ್ರಾಂತನ ಕುಚೋದ್ಯವನ್ನು 'ನಚ' ಎಂಬ ಗ್ರಂಥದಿಂದ ಪರಿಹರಿಸುತ್ತಿದ್ದಾರೆ. ಈ ಅಧಿಕರಣದಲ್ಲಿ ಪೃಥಿವ್ಯಾದಿ ಸರ್ವಗತತ್ವವನ್ನು ಆದಿತ್ಯನಲ್ಲಿ ಆಕ್ಷೇಪಿಸುತ್ತಿರುವುದರಿಂದ ಪುನರುಕ್ತಿಗೆ ಅವಕಾಶವಿಲ್ಲ. ಏಕೆಂದರೆ ಎರಡೂ ಅಧಿಕರಣಗಳ ಪ್ರತಿಪಾದ್ಯವಿಷಯವು ಭಿನ್ನಭಿನ್ನವಾಗಿದೆ. 'ಕಿಂತು ಪೂರ್ವಪಕ್ಷಾನುದಯಃ' ಎಂಬ ವಾಕ್ಯಕ್ಕೆ ಹೀಗೆ ಅರ್ಥ - ಎಲ್ಲಾ ಶಬ್ದಗಳು ವಿಷ್ಣುವನ್ನೇ ಪ್ರತಿಪಾದಿಸುವುದರಿಂದ ಆದಿತ್ಯಾದಿಗಳನ್ನು ಪ್ರತಿಪಾದಿಸುವುದಿಲ್ಲ. ಆದ್ದರಿಂದ ಪೂರ್ವಪಕ್ಷವು ಹುಟ್ಟಲಾರದು.

**प्रकाशः** – टीकोक्तं प्रापकान्तरमप्याक्षिपति – **नचेति** । आदित्यादन्यश्चेत्य-सर्वगतोऽत्राभिमतस्तदा 'आदित्ये एतं' इत्यपि श्रूयेतेति भावः । **सावकाशेति** । अनुक्तत्वलिङ्गेनेत्यर्थः । आद्यपदेन "अन्तरपुरुषः" इति पुरुषशब्दादिर्ग्राह्यः श्रुत्यादीनां विष्णौ गतत्वमुपपादयति – **ब्रह्मशब्दस्येति** ।

ಟೀಕೆಯಲ್ಲಿ ಹೇಳಿದ ಮತ್ತೊಂದು ಪೂರ್ವಪಕ್ಷವನ್ನು 'ನಚ' ಎಂಬ ಗ್ರಂಥದಿಂದ ಆಕ್ಷೇಪಿಸುತ್ತಿದ್ದಾರೆ. ಆದಿತ್ಯನನ್ನು ಬಿಟ್ಟು ವಿಷ್ಣುವು ಸರ್ವಗತನಾಗುವುದಾದರೆ ಚಂದ್ರ, ನಕ್ಷತ್ರ ಮೊದಲಾದವರಲ್ಲಿ ವಿಷ್ಣುವು ಇದ್ದಾನೆಂದು ಹೇಳಿ 'ಆದಿತ್ಯೇ ಏತಮ್' ಆದಿತ್ಯನಲ್ಲಿಯೂ ವಿಷ್ಣು ಇದ್ದಾನೆಂದು ಹೇಳಬೇಕಿತ್ತು. ಆದರೆ

'ಚಂದ್ರಮಸ್ಯೇತಮ್' ಎಂಬಂತೆ 'ಆದಿತ್ಯೇ ಏತಮ್' ಎಂದು ಕೇಳಿಸುತ್ತಿಲ್ಲ. ಆದ್ದರಿಂದ ಆದಿತ್ಯನೇ ಸರ್ವಗತನಾಗುತ್ತಾನೆ. ಈ ಅನುಕ್ತತ್ವಲಿಂಗವು ಸಾವಕಾಶವಾಗಿದೆ. ಸಾವಕಾಶಲಿಂಗದಿಂದ ಆದಿತ್ಯನನ್ನು ಸರ್ವಗತನೆಂದು ಆಕ್ಷೇಪಿಸಲಾಗದು. 'ಬ್ರಹ್ಮಶಬ್ದಾದ್ಯಾಃ' ಎಂದು ಗ್ರಂಥಕಾರರು ಹೇಳಿದ್ದಾರೆ. ಇಲ್ಲಿರುವ ಆದ್ಯಪದದಿಂದ 'ಅಂತರ ಪುರುಷಃ' ಎಂಬಲ್ಲಿರುವ ಪುರುಷಶಬ್ದವನ್ನು ಇಟ್ಟುಕೊಳ್ಳಬೇಕು. ಶ್ರುತಿಲಿಂಗಗಳು ವಿಷ್ಣುವಿನಲ್ಲಿ ಮುಖ್ಯವೆಂದು 'ಬ್ರಹಶಬ್ದಸ್ಯ' ಎಂಬುದರಿಂದ ಸಮರ್ಥಿಸಿದ್ದಾರೆ.

**प्रकाशः – आनन्दमयाधिकरण इति ।** प्रागुक्ताशयोऽनुसन्धेयः । पुरुषशब्दस्य च गायत्र्यधिकरणे मुख्यत्वस्योक्तत्वादित्यपि ध्येयम् । लिङ्गानि च वैष्णवानीत्याह **– ज्योतिरधिकरण इति ।** "हृदय आहितं यत्" इत्यत्र ज्योतिरग्निर्विष्णुर्वेति विशये, प्रसिद्धेरग्निरिति प्राप्ते, कर्णादिविचरणाभिधानाद्विष्णुरेवेति चरणपदेन कर्णादिविचरणरूपाश्रुतत्वादेर्ज्योतिषो विष्णुत्वे हेतूकरणात् असिद्धस्य तत्त्वायोगात् तत्रैव मुख्यानीत्यर्थः ।

ಆನಂದಮಯಾಧಿಕರಣದಲ್ಲಿ ಹೇಳಿದ ಅಭಿಪ್ರಾಯವನ್ನು ಇಲ್ಲಿ ಅನುಸಂಧಾನ ಮಾಡಬೇಕೆಂದು 'ಆನಂದಮಯಾಧಿಕರಣೇ ಸಿದ್ಧತ್ವಾತ್' ಎಂದು ಹೇಳಿದ್ದಾರೆ. ಪುರುಷಶಬ್ದವು ಪರಮಾತ್ಮನಲ್ಲಿ ಮುಖ್ಯವಾಗಿದೆಯೆಂದು ಗಾಯತ್ರ್ಯಧಿಕರಣದಲ್ಲಿ ಸಮರ್ಥಿಸಲಾಗಿದೆ. ಲಿಂಗಗಳೂ ಸಹ ವಿಷ್ಣುಪರವೆಂದು ಜ್ಯೋತಿರಧಿಕರಣದಲ್ಲಿ ಸಮರ್ಥಿಸಲಾಗಿದೆ.

ಮಾತಿನ ಆಂತರ್ಯ ಹೀಗಿದೆ - 'ಜ್ಯೋತಿರಧಿಕರಣೇ' 'ಹೃದಯೇ ಆಹಿತಂ ಯತ್' ಎಂಬಲ್ಲಿ ಜ್ಯೋತಿಶಬ್ದವು ಅಗ್ನಿಪರವೊ? ಅಥವಾ ವಿಷ್ಣುಪರವೊ? ಎಂದು ಸಂಶಯ. ಲೋಕಪ್ರಸಿದ್ಧಿಬಲದಿಂದ ಅಗ್ನಿಯೆಂದು ಪೂರ್ವಪಕ್ಷ. ಕರ್ಣಾದೀನಾಂ ವಿಚರಣಾಭಿಧಾನಲಿಂಗದಿಂದ ವಿಷ್ಣುವೇ ಜ್ಯೋತಿಯೆಂದು ಸಿದ್ಧಾಂತ. ಕರ್ಣಾದಿವಿಚರಣವೆಂಬ ಅಶ್ರುತತ್ವವನ್ನು ಸೂತ್ರದಲ್ಲಿ ಹೇತು ಮಾಡಿದ್ದರಿಂದಲೇ ಅಸಿದ್ಧವಲ್ಲವೆಂದು ತಿಳಿಯುತ್ತದೆ.

**प्रकाशः –** "अदृश्यत्वादिगुणको धर्मोक्तेः" इत्यत्र "यत्तदद्रेश्यमग्राह्यमगोत्रमवर्णमचक्षुश्श्रोत्रं" इत्यादावदृश्यत्वादिगुणको विष्णुरन्यो वेति विशये, "अक्षरात्परतःपरः" इति परावधित्वेनोक्ताक्षरशब्देन "यया तदक्षरमधिगम्यते" इति अक्षरसामानाधिकरण्यादन्य इति प्राप्ते, "अथ परा यया तदक्षरं" इति परविद्याविषयत्वोक्तेरदृश्यत्वादिगुणकमक्षरं विष्णुरेवेति वक्ष्यमाणत्वादित्यर्थः ।

'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ' ಎಂಬಲ್ಲಿ ''ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಶ್ಶ್ರೋತ್ರಮ್'' ಎಂಬುದು ವಿಷಯವಾಕ್ಯ. ಇಲ್ಲಿ ಕೇಳಿಸುತ್ತಿರುವ ಅದೃಶ್ಯತ್ವಾದಿಗುಣವುಳ್ಳವನು

ವಿಷ್ಣುವೋ? ಅಥವಾ ಬೇರೆಯವನೋ? ಎಂದು ಸಂಶಯ. 'ಅಕ್ಷರಾತ್ಪರತಃ ಪರಃ' ಎಂಬಲ್ಲಿ ಪರಕ್ಕೆ ಅಕ್ಷರವನ್ನು ಅವಧಿ ಎನ್ನಲಾಗಿದೆ. ಈ ಅಕ್ಷರವೇ 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂಬಲ್ಲಿ ಅದೃಶ್ಯತ್ವಾದಿಗುಣಕನಿಗೆ ಸಮಾನಾಧಿಕರಣವಾಗಿ ಹೇಳಲಾಗಿದೆ. ಆದ್ದರಿಂದ ಅದೃಶ್ಯತ್ವಾದಿಗುಣವುಳ್ಳವನು ವಿಷ್ಣುವಲ್ಲವೆಂದು ಪೂರ್ವಪಕ್ಷ. 'ಅಥ ಪರಾ ಯಯಾ ತದಕ್ಷರಮ್' ಎಂಬಲ್ಲಿ ಯಾವುದು ಅಕ್ಷರನ ತಿಳುವಳಿಕೆಗೆ ಕಾರಣವಾಗಿದೆಯೋ? ಅದನ್ನು ಪರವಿದ್ಯಾ ಎನ್ನಲಾಗಿದೆ. ಈ ಪರವಿದ್ಯಾವಿಷಯತ್ವವನ್ನು ಅಕ್ಷರನಿಗೆ ಹೇಳಲಾಯಿತು. ಪರವಿದ್ಯಾವಿಷಯನು ವಿಷ್ಣುವೇ ಆಗಿರುವುದರಿಂದ ಅದೃಶ್ಯತ್ವಾದಿಗುಣವುಳ್ಳವನು ವಿಷ್ಣುವೇ ಆಗುತ್ತಾನೆಂದು ಸಿದ್ಧಾಂತ.

**प्रकाशः** – ''अन्तर्याम्यधिदैवादिषु'' इत्यत्र ''यः पृथिव्यां तिष्ठन् पृथिव्या अन्तरो यं पृथवी न वेद'' इत्यादौ पृथिव्यादिगतत्वेन श्रुतः किं विष्णुरन्यो वेति संशये, पृथिव्यादिशरीरत्वस्याशरीरे विष्णावयोगादन्य इति प्राप्ते, पृथिव्याद्यविदित्वादन्तरत्वादिधर्मोपदेशाद्विष्णुरेवेत्यन्तरत्वस्य विष्णुलिङ्गतायास्साधयिष्यमाणत्वादित्यर्थः ।

ಅಂತರ್ಯಾಮ್ಯಧಿಕರಣದ 'ಅಂತರ್ಯಾಮ್ಯಧಿದೈವಾದಿಷು' ಎಂಬ ಸೂತ್ರದಲ್ಲಿ 'ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನ ವೇದ' ಎಂಬುದು ವಿಷಯವಾಕ್ಯ. ಇಲ್ಲಿ ಪೃಥಿವೀಗತತ್ವೇನ ಕೇಳಿಸುತ್ತಿರುವವನು ವಿಷ್ಣುವೋ ಅಥವಾ ಬೇರೆಯವನೋ? ಎಂದು ಸಂದೇಹ. ಅಶರೀರಿಯಾದ ವಿಷ್ಣುವಿಗೆ ಪೃಥಿವ್ಯಾದಿಗಳು ಶರೀರವಾಗುವುದಿಲ್ಲ. ಶ್ರುತಿಯಲ್ಲಿ ಪೃಥಿವೀಯನ್ನು ಶರೀರವೆಂದು ಹೇಳಿದ್ದರಿಂದ ವಿಷ್ಣು ಪೃಥಿವ್ಯಾದಿಗಳ ಗತಿ ಆಗುವುದಿಲ್ಲವೆಂದು ಪೂರ್ವಪಕ್ಷ. ಪೃಥಿವ್ಯಾದಿಗಳಿಂದ (ಅಭಿಮಾನಿದೇವತೆಗಳಿಂದ) ಸಂಪೂರ್ಣ ತಿಳಿಯಲಾರನೆಂದು ಶ್ರುತಿ ಹೇಳಿದೆ. ಮತ್ತು ಅಂತರತ್ವಾದಿಧರ್ಮಗಳನ್ನು ಹೇಳಿದ್ದರಿಂದ ವಿಷ್ಣುವೇ ಪೃಥ್ವೀಗತನಾಗುತ್ತಾನೆ. ನಿಯಮ್ಯವಾದ್ದರಿಂದ ಪೃಥಿವ್ಯಾದಿಗಳನ್ನು ಭಗವಂತನ ಶರೀರವೆಂದು ಹೇಳಬಹುದು. ಇಷ್ಟು ಸಿದ್ಧಾಂತ.

**गुरुराजीयम्** – तृतीयं पक्षमनूद्य दूषयति – **एतेनेति** ।। **उक्तन्यायेनेति** ।। अन्तरधिकरणन्यायेनेत्यर्थः ।

चतुर्थं प्रत्याह – **नचेति** ।। **सावकाशलिङ्गेनेति** ।। आदित्येऽनुक्तत्वलिङ्गेनेत्यर्थः । अत्र लिङ्गस्य सावकाशत्वं नाम सन्दिग्धत्वं विवक्षितमिति बोध्यम् । अत एवादित्यस्यापीत्यपिशब्दः ।

ननु मास्तु सावकाशलिङ्गेन श्रुत्यादिबाधः । प्रकृते तु श्रुत्यादिकमेव नास्तीत्यत आह – **सन्ति चेति** ।। नन्वादित्येऽनुक्तत्वलिङ्गस्यैव ब्रह्मश्रुत्यादेरपि

सावकाशत्वात्कथं ब्रह्मश्रुत्यादिनापि तद्बाध इत्यतस्तस्या निरवकाशत्वमुपपादयति – ब्रह्मशब्दस्य चेति ।।



ಅಂತರಧಿಕರಣದಿಂದ ಈ ಅಧಿಕರಣ ಪುನರುಕ್ತವಾಗಿದೆ. ದೇವತಾವಾಚಿಯಾದ ಸಕಲಶಬ್ದಗಳ ಸಮನ್ವಯದಿಂದ ಆದಿತ್ಯಶಬ್ದದ ಸಮನ್ವಯವೂ ಸಹ ಸಿದ್ಧವಾಗುತ್ತದೆಂದು ಹಿಂದೆ ಆಕ್ಷೇಪಿಸಿದ್ದಾಯಿತು. ಈಗ ಅಂತರಧಿಕರಣದಲ್ಲಿ ಚಂದ್ರಾದಿ ದೇವತೆಗಳ ಅಂತರ್ಯಾಮಿಯಾಗಿದ್ದಾನೆಂದು ಹೇಳಿದ್ದರಿಂದಲೇ ಈ ಅಧಿಕರಣದಲ್ಲಿ ಸಮನ್ವಯ ಮಾಡಲ್ಪಡುವ ಸರ್ವಗತತ್ವವೂ ಸಿದ್ಧವಾಗುತ್ತದೆ. ವಸ್ತುತಃ ಅಂತರಧಿಕರಣದಲ್ಲಿ ಆದಿತ್ಯನಲ್ಲಿದ್ದಾನೆಂದು ಹೇಳದಿರಬಹುದು. ಅದಕ್ಕೋಸ್ಕರ ಈ ಅಧಿಕರಣ ಹೊರಡಬೇಕಾಗಿಲ್ಲ. 'ಸರ್ವೇಷು ಭೂತೇಷು' ಎಂಬಲ್ಲಿರುವ ಸರ್ವಶಬ್ದದಿಂದಲೇ ಆದಿತ್ಯನನ್ನೂ ವಿವಕ್ಷಿಸಬಹುದು. ಆದ್ದರಿಂದ 'ಆದಿತ್ಯೇ ಅನುಕ್ತತ್ವ' ಎಂಬ ಲಿಂಗವು ಸಾವಕಾಶವಾಗಿದೆ.

ಮತ್ತು ವಿಷ್ಣು ಸಕಲರ ಅಂತರ್ಯಾಮಿಯಾಗಿದ್ದಾನೆನ್ನಲು ಅನೇಕ ಬಲಿಷ್ಠವಾದ ಶ್ರುತಿಲಿಂಗಗಳು ಆಧಾರವಾಗಿವೆ. ಪ್ರಕೃತ ಈ ಅಧಿಕರಣದಲ್ಲಿ ಕೇವಲ ಒಂದೇ ಆದಿತ್ಯಲಿಂಗದಿಂದ ಸೂರ್ಯನನ್ನೂ ಅಂತರ್ಯಾಮಿ ಎನ್ನಲಾಗದು. ಹೀಗಿರುವಾಗ ಈ ಅಧಿಕರಣ ಹೊರಟಿದ್ದು ವ್ಯರ್ಥವಲ್ಲವೇ?





## ಜೀವನೆಂಬ ಪೂರ್ವಪಕ್ಷಕ್ಕೂ ಅವಕಾಶವಿಲ್ಲ

### तात्पर्यचन्द्रिका

**नच चक्षुर्मयत्वादिना सर्वजीवानां प्राप्तिः, तस्यापि आनन्दमयाधिकरणन्यायेन प्राचुर्यार्थतया, पादान्त्यप्राणाधिकरणन्यायेन शतसंवत्सरत्वादेरिव अन्तर्यामिविषतया वा सम्भवात् । पशुशब्दस्य तद्विशेषच्छाग इव, आदित्यश्रुत्या चक्षुर्मयत्वादिजीवलिङ्गानां तद्विशेषादित्ये पर्यवसानेन सर्वजीवप्रापकाभावाच ।**

**नच अर्भकौकस्त्वलिङ्गादन्यस्य प्राप्तिः, तस्यापि विष्णुधर्मतायाः "अन्तस्तद्धर्मोपदेशात्" इत्यत्र "उपासात्रैविध्यात्" इत्यत्र च उक्तत्वात् । "हृद्यपेक्षया" इत्यादौ वक्ष्यमाणत्वाच ।**

**वक्ष्यमाणसिद्धान्तन्यायाच्छादनेन पूर्वपक्षकरणे च तन्न्यायेनैवैतत्सिद्धान्त-फलसिद्ध्या एतस्य वैयर्थ्यात् । "सर्वेषु भूतेषु" इत्यनेन सर्वगतत्वस्यैवोक्ततया अर्भकौकस्त्वाभावाच्च ।**

**अन्यथा अत्रोक्तः सर्वगतो न विष्णुश्चेत्, पूर्वोक्तोऽपि सर्वगतो न विष्णुः स्यात् इत्याक्षेपायोगात् ।**

ಅನುವಾದ - ಚಕ್ಷುರ್ಮಯತ್ವಾದಿಲಿಂಗಗಳಿರುವುದರಿಂದ ಸಕಲಜೀವರು ಸರ್ವಗತರಾಗಿದ್ದಾರೆಂದು ಹೇಳಬಾರದು. ಆನಂದಮಯಾಧಿಕರಣದ ನ್ಯಾಯದಂತೆ ಮಯಟ್‌ಪ್ರತ್ಯಯಕ್ಕೆ ಪ್ರಾಚುರ್ಯ ಎಂದರ್ಥ. ಪೂರ್ಣಜ್ಞಾನವುಳ್ಳವನಾದ್ದರಿಂದ ಭಗವಂತನು ಚಕ್ಷುರ್ಮಯ ಎನಿಸುತ್ತಾನೆ. ಅಥವಾ ಪಾದಾಂತ್ಯಪ್ರಾಣಾಧಿಕರಣದ ನ್ಯಾಯದಂತೆ ಜೀವಾಂತರ್ಯಾಮಿರೂಪದಿಂದ ಭಗವಂತನು ಈ ಶರೀರದಲ್ಲಿರುತ್ತಾನೆ. ಆದ್ದರಿಂದ ಶತಸಂವತ್ಸರತ್ವಾದಿಗಳು ಅಂತರ್ಯಾಮಿವಿವಕ್ಷೆಯಿಂದ ವಿಷ್ಣುವಿನಲ್ಲಿ ಬರುತ್ತವೆಂದು ಹೇಗೆ ಸಮರ್ಥಿಸಿದ್ದಾರೋ, ಅದರಂತೆ ಚಕ್ಷುರ್ಮಯತ್ವಾದಿಗಳನ್ನೂ ಕೂಡ ಅಂತರ್ಯಾಮಿವಿವಕ್ಷೆಯಿಂದ ಕೂಡಿಸಬಹುದು. (ಚಕ್ಷುರ್ಮಯನಾದ ಜೀವನ ಅಂತರ್ಯಾಮಿಯಾದ್ದರಿಂದ ಪರಮಾತ್ಮನು ಚಕ್ಷುರ್ಮಯನೆನಿಸಿದ್ದಾನೆ.)

ವಸ್ತುತಃ ಇಲ್ಲಿ ಸರ್ವಜೀವರು ಸರ್ವಗತರೆಂಬ ಪೂರ್ವಪಕ್ಷವೇ ಬರುವುದಿಲ್ಲ. ಆದಿತ್ಯಶ್ರುತಿಯ ಬಲದಿಂದ ಆದಿತ್ಯನನ್ನು ಪೂರ್ವಪಕ್ಷ ಮಾಡಬಹುದು. ಉದಾಹರಣೆ - 'ಪಶುನಾ ಯಜೇತ' ಎಂಬಲ್ಲಿ ಪಶು ಶಬ್ದದಿಂದ ಯಾವ ಪಶುವನ್ನು ಇಟ್ಟುಕೊಳ್ಳಬೇಕೆಂದು ತಿಳಿಯುವುದಿಲ್ಲ. ಮುಂದಿನ ವಾಕ್ಯವನ್ನು ನೋಡಿದಾಗ ಛಾಗಪಶುವನ್ನು ಪ್ರಶಂಸಿಸಲಾಗಿದೆ. ಅದರ ಬಲದಿಂದ ಪಶುಶಬ್ದಕ್ಕೆ ಮೇಕೆಯೆಂದು ಅರ್ಥೈಸಬೇಕು. ಅದರಂತೆ ಇಲ್ಲಿ ಆದಿತ್ಯಶ್ರುತಿಯಿಂದ ಚಕ್ಷುರ್ಮಯತ್ವಾದಿಲಿಂಗಗಳನ್ನು ಆದಿತ್ಯನೆಂಬ ವಿಶೇಷ ಜೀವನಲ್ಲಿ ಪರ್ಯವಸಾನ ಮಾಡಬೇಕು. ಆದ್ದರಿಂದ ಸಕಲಜೀವಪ್ರಾಪಕವಾದ ಲಿಂಗವಿಲ್ಲದ ಕಾರಣ ಪೂರ್ವಪಕ್ಷವೇ ಹುಟ್ಟುವುದಿಲ್ಲ.

ಅಲ್ಪಸ್ಥಾನಸ್ಥಿತತ್ವವೆಂಬ ಲಿಂಗದಿಂದ ಆದಿತ್ಯಾದಿಜೀವರೇ ಸರ್ವಗತರಾಗುತ್ತಾರೆ. ವಿಷ್ಣುವಲ್ಲವೆಂದು ಶಂಕಿಸಬಾರದು. ಅಲ್ಪಸ್ಥಾನಸ್ಥಿತತ್ವವನ್ನು ವಿಷ್ಣುವಿನ ಧರ್ಮವೆಂದು 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಿ ಮತ್ತು 'ಉಪಾಸಾತ್ರೈವಿಧ್ಯಾತ್' ಎಂಬ ಸೂತ್ರದಲ್ಲಿಯೂ ಸಮರ್ಥಿಸಿದ್ದೇವೆ. ಮತ್ತು 'ಹೃದ್ಯಪೇಕ್ಷಯಾ' ಎಂದು ವ್ಯಾಪ್ತನಾದ ನಾರಾಯಣನಿಗೆ ಅಂಗುಷ್ಠಪರಿಮಾಣವನ್ನು ಮುಂದೆ ಸಮರ್ಥಿಸುತ್ತಾರೆ. ಆದ್ದರಿಂದ ಅರ್ಭಕೌಕಸ್ತ್ವಲಿಂಗವನ್ನು ವಿಷ್ಣುವಿನಲ್ಲಿ ಈ ಹಿಂದೆ ಸಮರ್ಥಿಸಿದ್ದಾರೆ. ಮುಂದೆಯೂ ಸಮರ್ಥಿಸುತ್ತಾರೆ.

ಮುಂದೆ ಹೇಳುವ ಸಿದ್ಧಾಂತನ್ಯಾಯವನ್ನು ಮುಚ್ಚಿಟ್ಟು ಇಲ್ಲಿ ಪೂರ್ವಪಕ್ಷ ಮಾಡಿದರೆ ಆ ಅಧಿಕರಣದ ನ್ಯಾಯದಿಂದಲೇ ಈ ಅಧಿಕರಣದ ಸಿದ್ಧಾಂತನ್ಯಾಯವು ಸಿದ್ಧವಾಗುತ್ತದೆ. ಆದ್ದರಿಂದಲೇ ಈ ಅಧಿಕರಣಕ್ಕೆ ವೈಯರ್ಥ್ಯ ಬರುತ್ತದೆ. ಮತ್ತು 'ಸರ್ವೇಷು ಭೂತೇಷು' ಎಂಬ ವಾಕ್ಯದಿಂದ ಸರ್ವಗತತ್ವವು ಹೇಳಲ್ಪಟ್ಟಿರುವಾಗ ಅರ್ಭಕೌಕಸ್ತ್ವವನ್ನು ಹೇಳಲು ಸಾಧ್ಯವಿಲ್ಲ. ಈ ಸರ್ವಗತನು ಅಲ್ಪಸ್ಥಾನಸ್ಥಿತನಾದ್ದರಿಂದ ಸರ್ವಗತನು ವಿಷ್ಣುವಲ್ಲವೆಂದು ಹೇಳಿದರೆ ಪ್ರಾಣಾಧಿಕರಣದಲ್ಲಿ ಹೇಳಿದ ಐತರೇಯ ಪ್ರಾಣನೂ ವಿಷ್ಣುವಾಗಲಾರ ಎಂದು ಆಕ್ಷೇಪಿಸಲು ಸಾಧ್ಯವಿಲ್ಲ.

**प्रकाशः –**

एवमादित्यकोटिकपूर्वपक्षमाक्षिप्य जीवकोटिकमप्याक्षिपति – **नचेति** । परमतदूषणप्रस्तावे सुधायामुक्तं "मनोमयत्वादीनां आनन्दमयाधिकरणन्यायेन सावकाशत्वात्" इति वाक्यं हृदि कृत्वाऽऽह – **प्राचुर्येति** । पूर्वज्ञानत्वादिरूपार्थ तयेत्यर्थः । चक्षुःकरणकसम्बन्धमेव मयडर्थमाश्रित्याह – **पादान्त्येति** ।

ವಿವರಣೆ - ಇಲ್ಲಿಯ ತನಕ ಆದಿತ್ಯಕೋಟಿಕಪೂರ್ವಪಕ್ಷವನ್ನು ಮಾಡಿದ್ದಾಯಿತು. ಪ್ರಕೃತ ಜೀವಕೋಟಿಕ ಪೂರ್ವಪಕ್ಷವನ್ನು 'ನಚ' ಎಂಬ ಗ್ರಂಥದಿಂದ ಆಕ್ಷೇಪ ಮಾಡುತ್ತಿದ್ದಾರೆ. ನ್ಯಾಯಸುಧೆಯಲ್ಲಿ ಪರಮತವನ್ನು ಸೂಚಿಸುವಾಗ "ಮನೋಮಯತ್ವಾದೀನಾಂ ಆನಂದಮಯಾಧಿಕರಣನ್ಯಾಯೇನ ಸಾವಕಾಶತ್ವಾತ್" (ಆನಂದಮಯಾಧಿಕರಣದಿಂದ ಮನೋಮಯತ್ವಾದಿಗಳು ಸಾವಕಾಶಗಳಾಗಿವೆ) ಎಂದು ಹೇಳಿದ್ದಾರೆ. ಈ ವಾಕ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು ಪ್ರಕೃತ ಗ್ರಂಥಕಾರರು ಪ್ರಾಚುರ್ಯವೆಂದು ಹೇಳುತ್ತಿದ್ದಾರೆ. ಆನಂದಮಯಾಧಿಕರಣದಲ್ಲಿ ಚಕ್ಷುರ್ಮಯಶಬ್ದಕ್ಕೆ ಪೂರ್ಣಜ್ಞಾನವುಳ್ಳವನೆಂಬರ್ಥವನ್ನು ಹೇಳಿದ್ದಾರೆ. ಮಯಟ್‌ಪ್ರತ್ಯಯಕ್ಕೆ ಪ್ರಾಚುರ್ಯವೆಂಬರ್ಥವನ್ನು ಒಪ್ಪದೆ ಚಕ್ಷುರಿಂದ್ರಿಯದ ಸಂಬಂಧವೆಂಬರ್ಥವನ್ನು ಆಶ್ರಯಿಸಿ ಭಗವತ್‌ಪರತ್ವವನ್ನು 'ಪಾದಾಂತ್ಯ' ಎಂಬುದರಿಂದ ಸಮರ್ಥಿಸುತ್ತಿದ್ದಾರೆ.

**प्रकाशः – पशुशब्दस्येति** । षष्ठे "पशुचोदनायामनियमोऽविशेषात्" इत्यन्तिमाधिकरणे "अग्नीषोमीयं पशुमालभेत" इत्यत्र किं यः कश्चित्पशुरालब्धव्यः उत च्छाग एवेति संशये, "छागस्य वपाया मेदसोऽनुब्रूहि" इति मन्त्रस्य चोदितार्थप्रकाशनार्थतया पारतन्त्र्याद्भिन्नवाक्यतया, "तेजो वै घृतं" इति घृतार्थवादवैलक्षण्याच्च मन्त्रगतच्छागशब्दस्य पशुमात्रे यौगिकत्वेन वा पाक्षिकानुवादत्वेन वोपपत्तेः पशुशब्दाविशेषकत्वादालम्भनचोदनायाः सामान्यपर्यवसानसम्भवेन यः कश्चन पशुरिति प्राप्ते, चोदनाप्रतिपन्नस्य सामान्यस्य

प्रतिव्यक्तिसमाप्त्या च्छागेप्यवैकल्याद्रूढिप्राबल्येन योगासम्भवान्नित्याम्नातस्य पाक्षिकत्वायोगाच्च च्छाग एवालब्धव्य इति सिद्धान्तितम् । अत्र यथा पशुशब्दस्य तद्विशेषे छागे पर्यवसानं, तद्वदित्यर्थः ।

ಅಗ್ನೀಷೋಮೀಯ ಪಶುತಾಧಿಕರಣಮ್

ಪಶುಚೋದನಾಯಾ ಅನಿಯಮೋऽವಿಶೇಷಾತ್ (೬-೮-೧೦)[१]

'ಅಗ್ನೀಷೋಮೀಯಂ ಪಶುಮಾಲಭೇತ' ಈ ವಾಕ್ಯವು ಅಗ್ನಿಷ್ಟೋಮಯಾಗದಲ್ಲಿ ಪಶುವಿನ ಆಲಂಬನವನ್ನು ಹೇಳುತ್ತಿದೆ. ಯಾವುದಾದರೂ ಪಶುವನ್ನು ಆಲಂಬನ ಮಾಡಬಹುದೋ? ಅಥವಾ ಛಾಗ (ಮೇಕೆ) ಪಶುವನ್ನೇ ಆಲಂಬನ ಮಾಡಬೇಕೋ? ಎಂದು ಸಂಶಯ.

ಪೂರ್ವಪಕ್ಷ - 'ಅಗ್ನೀಷೋಮೀಯಂ ಪಶುಮಾಲಭೇತ' ಎಂಬಲ್ಲಿ ಸಾಮಾನ್ಯವಾಗಿ ಪಶುಶಬ್ದವನ್ನು

(१) भाट्टसङ्ग्रहः –

**अथ दशमं छागस्यैवाग्नीषोमीयपशुताधिकरणम् (सूत्राणि ३०-४२)**

**पशुचोदनायामनियमोऽविशेषात् ॥३०॥**

**(छागो वा मन्त्रवर्णात् ॥३१॥ न चोदनाविरोधात् ॥३२॥ आर्षेयवदिति चेत् ॥३३॥ न तत्र ह्यचोदितत्वात् ॥३४॥ नियमो वैकार्थ्यं ह्यर्थभेदाद्भेदः पृथक्त्वेनाभिधानात् ॥३५॥ अनियमो वाऽर्थान्तरत्वादन्यत्वं व्यतिरेकशब्दभेदाभ्याम् ॥३६॥ रूपाल्लिङ्गाच्च ॥३७॥ छागे न कर्माख्यारूपलिङ्गाभ्याम् ॥३८ ॥ रूपान्यत्वान्न जातिशब्दः स्यात् ॥३९॥ विकारो नौत्पत्तिकत्वात् ॥४०॥ स नैमितिकः पशोर्गुणस्याचोदितत्वात् ॥४१॥ जातेर्वा तत्प्राय-वचनार्थवत्त्वाभ्याम् ॥४२॥)**

पूर्वन्यायेनात्र शङ्कनात्सङ्गतिः । ज्योतिष्टोमे ''अग्नीषोमीयं पशुमालभेत'' इति श्रुतः पशुर्यः कश्चिदालभ्यः, उत छाग इति सन्देहे, प्रधानविधिवाक्ये विशेषाश्रवणात्पशुसामान्यमेवावगम्यते । तथा च प्रधानक्रतुविरोधाद्भक्षस्य पाक्षिकत्ववदिहापि प्रधानभूतविधिवाक्यविरोधात् ''छागस्य वपायाः'' इति मन्त्रस्य प्रधानाविरोधाय पाक्षिकानुवादत्वसम्भवाद्यः कश्चित्पशुरालब्धव्य इति प्राप्तम् । तदुक्तम् पशुचोदनायामित्यादि । व्यक्तोऽर्थः । न चात्राक्ताधिकरणन्यायः । विधिस्तुत्योरेकवाक्यत्वात्स्तुतितः पूर्वमपर्यवसितोऽञ्जनविधिरर्थवादगतघृतविषय एव पर्यवस्यति । मन्त्रपशुचोदनयोस्तु वाक्यभेदाद्विधिवाक्यं पशुसामान्य एव पर्यवस्यतीति वैषम्यमादित्याहुः । सिद्धान्तस्तु, पशुविधाववगतसामान्यस्य प्रतिव्यक्ति समाप्यत्वेन छागेप्यविकलत्वान्मन्त्रस्य प्रकरणपाठेन नित्यत्वावगमान्मन्त्रवर्णोक्तछाग एव पशुरालभ्यत इति । तदाह सूत्रकारः । च्छागो वा मन्त्रवर्णादिति ।

इति दशमं छागस्यैवाग्नीषोमीयपशुतादिकरणम् (सूत्राणि ३०-४२)

ಪರಿಪೂರ್ಣಚಂದ್ರಿಕಾ

ಹೇಳಿದ್ದರಿಂದ ಛಾಗಪಶುವನ್ನೇ ತೆಗೆದುಕೊಳ್ಳಬೇಕಿಲ್ಲ. ಯಾವುದಾದರೂ ಪಶುವನ್ನು ಆಲಂಬನ ಮಾಡಬಹುದು. 'ಛಾಗಸ್ಯ ವಪಾಯಾಃ ಮೇದಸೋಽನುಬ್ರೂಹಿ' ಈ ಮಂತ್ರದಲ್ಲಿ ಛಾಗಪಶುವನ್ನು ಹೇಳಿದ್ದರಿಂದ 'ಅಗ್ನೀಷೋಮೀಯಂ' ಎಂಬಲ್ಲಿರುವ ಪಶುಶಬ್ದದಿಂದ ಛಾಗಪಶುವನ್ನೇ ತೆಗೆದುಕೊಳ್ಳಬೇಕಲ್ಲವೇ? ಉದಾಹರಣೆ - ನೆನೆದಿರುವ ಸಕ್ಕರೆಯನ್ನು ತೆಗೆದುಕೊಳ್ಳಬೇಕು ಎಂದು ಹೇಳಿದಾಗ ಸಕ್ಕರೆಯು ಯಾವುದರಲ್ಲಿ ನೆನೆದಿರಬೇಕು ಎಂಬ ಪ್ರಶ್ನೆ ಬರುತ್ತದೆ. ಆವಾಗ 'ತೇಜೋ ವೈ ಘೃತಮ್' ಎಂಬ ಮುಂದಿನ ಅರ್ಥವಾದವಾಕ್ಯದಿಂದ ತುಪ್ಪದಲ್ಲಿ ನೆನೆದಿರಬೇಕೆಂದು ತಿಳಿಯುತ್ತದೆ. ಅದರಂತೆ 'ಛಾಗಸ್ಯ ವಪಾಯಾಃ' ಎಂಬ ಮಂತ್ರದಿಂದ ಪಶುಶಬ್ದಕ್ಕೆ ಛಾಗಪಶುವೆಂದು ಅರ್ಥೈಸಬಹುದು. ಆದ್ದರಿಂದ ಯಾವುದಾದರೂ ಪಶುವನ್ನು ತೆಗೆದುಕೊಳ್ಳಲು ಹೇಗೆ ಸಾಧ್ಯ? ಎಂದು ಪ್ರಶ್ನಿಸಬಾರದು. 'ತೇಜೋ ವೈ ಘೃತಮ್' ಎಂಬ ಅರ್ಥವಾದಮಂತ್ರಕ್ಕೂ 'ಛಾಗಸ್ಯ ವಪಾಯಾಃ' ಎಂಬ ಮಂತ್ರಕ್ಕೂ ಬಹಳಷ್ಟು ವ್ಯತ್ಯಾಸವಿದೆ. ಮಂತ್ರವು ಚೋದಿತವಾದ ಅರ್ಥವನ್ನಷ್ಟೇ ಪ್ರಕಾಶನ ಮಾಡುತ್ತದೆ. 'ಪಶುಮಾಲಭೇತ' ಎಂಬ ಮಂತ್ರವು ಸಾಮಾನ್ಯವಾಗಿ ಪಶುವೆಂದಷ್ಟೇ ಹೇಳಿದ್ದರಿಂದ ಮೊದಲು ಛಾಗವು ವಿಧಾನ ಮಾಡಲ್ಪಡದ ಕಾರಣ 'ಛಾಗಸ್ಯ ವಪಾಯಾಃ' ಎಂಬ ಮಂತ್ರಕ್ಕೆ ಚೋದಿತಾರ್ಥವನ್ನು ಪ್ರಕಾಶನ ಮಾಡುವ ಸಾಮರ್ಥ್ಯವಿಲ್ಲ. ಮತ್ತು 'ಅಗ್ನೀಷೋಮೀಯಂ ಪಶುಮಾಲಭೇತ' ಎಂಬುದು ಬ್ರಾಹ್ಮಣವಾಕ್ಯ. 'ಛಾಗಸ್ಯ ವಪಾಯಾಃ' ಎಂಬುದು ಮಂತ್ರವಾಕ್ಯ. ಹೀಗೆ ಎರಡೂ ಭಿನ್ನಪ್ರಕರಣದಲ್ಲಿರುವ ವಾಕ್ಯಗಳಾದ್ದರಿಂದ ಪಶುಶಬ್ದದಿಂದ ಛಾಗಪಶುವನ್ನು ವಿವಕ್ಷಿಸಲಾಗದು. ಆದರೆ 'ಅಕ್ತಾಃ ಶರ್ಕರಾಃ' ಎಂಬ ವಾಕ್ಯ ಮತ್ತು 'ತೇಜೋ ವೈ ಘೃತಮ್' ಎಂಬ ವಾಕ್ಯ ಒಂದೇ ಪ್ರಕರಣದಲ್ಲಿರುವುದರಿಂದ ಏಕವಾಕ್ಯತ್ವವನ್ನು ಹೊಂದಿವೆ. ಹೀಗೆ ನೀವು ನೀಡಿದ ದೃಷ್ಟಾಂತವು ವಿಷಮವಾಗಿದೆ. ಅಥವಾ ಮಂತ್ರದಲ್ಲಿರುವ ಛಾಗಶಬ್ದವು ಪಶುಸಾಮಾನ್ಯದಲ್ಲಿ ಯೌಗಿಕವಾಗಿದೆ. ಅಥವಾ ಎಲ್ಲಾ ಪಶುಗಳ ಆಲಂಬನವು ಪ್ರಾಪ್ತವಾದಾಗ ಛಾಗಪಶುವಿನ ಆಲಂಬನವು ಪ್ರಾಪ್ತವಾಗಿದೆ. ಪಾಕ್ಷಿಕವಾಗಿ ಪ್ರಾಪ್ತವಾದ ಛಾಗಪಶುವನ್ನು 'ಛಾಗಸ್ಯ ವಪಾಯಾಃ' ಎಂಬ ಮಂತ್ರವು ಅನುವಾದ ಮಾಡುತ್ತದೆ. ಆದ್ದರಿಂದ 'ಪಶುಮಾಲಭೇತ' ಎಂಬಲ್ಲಿರುವ ಪಶುಶಬ್ದದ ಅರ್ಥವಿವರಣೆಗಾಗಿ 'ಛಾಗಸ್ಯ' ಎಂಬ ಮಂತ್ರವು ಹೊರಟಿಲ್ಲ. 'ಅಗ್ನೀಷೋಮೀಯಂ ಪಶುಮಾಲಭೇತ' ಎಂಬ ಚೋದನವಾಕ್ಯವು ಯಾವುದಾದರೊಂದು ಪಶುವಿನ ಆಲಂಬನವನ್ನು ಹೇಳುತ್ತಿದೆಂಬರ್ಥವು ಸಿದ್ಧವಾಗುತ್ತದೆ.

ಸಿದ್ಧಾಂತ - 'ಅಗ್ನೀಷೋಮೀಯಂ ಪಶುಮಾಲಭೇತ' ಎಂಬ ಚೋದನಾವಾಕ್ಯದಲ್ಲಿರುವ 'ಪಶು' ಎಂಬ ಸಾಮಾನ್ಯಶಬ್ದವನ್ನು ಯಾವುದೇ ವಿಶೇಷಪ್ರಾಣಿಯಲ್ಲಿ ಪರ್ಯವಸಾನ ಮಾಡಬಹುದು. ಆವಾಗ ಛಾಗಪಶುವು ಚೋದಿತವೇ ಆಯಿತು. ಒಂದು ವೇಳೆ ಅಶ್ವಾದಿಶಬ್ದಗಳನ್ನು ಹೇಳಿದಲ್ಲಿ ಛಾಗಪಶುವು ಅಚೋದಿತವೆಂದು ಹೇಳಬಹುದಿತ್ತು. ಹೀಗೆ ಚೋದಿತವಾದ ಛಾಗವೆಂಬರ್ಥವನ್ನು ಪ್ರಕಾಶನ ಮಾಡುವ ಸಾಮರ್ಥ್ಯ 'ಛಾಗಸ್ಯ' ಎಂಬ ಮಂತ್ರಕ್ಕೆ ಇದ್ದೇ ಇರುತ್ತದೆ. ಇನ್ನು 'ಛಾಗಸ್ಯ' ಎಂಬ ಮಂತ್ರದಲ್ಲಿರುವ ಛಾಗಶಬ್ದಕ್ಕೆ ಪಶುಸಾಮಾನ್ಯವೆಂಬ ಯೌಗಿಕಾರ್ಥವನ್ನು ಹೇಳಬಹುದೆಂಬ ಪೂರ್ವಪಕ್ಷಿಗಳ ವಾದವು ಸರಿಯಿಲ್ಲ. ಛಾಗಶಬ್ದದಿಂದ ಮೇಕೆಯು ಮೊದಲು ಬುದ್ಧಿಯಲ್ಲಿ ಬರುವುದರಿಂದ ಇದನ್ನು ಬಿಟ್ಟು ಪಶುಸಾಮಾನ್ಯವೆಂಬರ್ಥವನ್ನು ಹೇಳುವುದರಲ್ಲಿ ಹುರುಳಿಲ್ಲ. ಮತ್ತು ಪಾಕ್ಷಿಕ ಅನುವಾದವೆನ್ನಲು ವಿಕಲ್ಪಸೂಚಕಪದಗಳು 'ಛಾಗಸ್ಯ' ಎಂಬ ಮಂತ್ರದಲ್ಲಿ

ಕಾಣಿಸುತ್ತಿಲ್ಲ. ಆದ್ದರಿಂದ ಚೋದಿತಾರ್ಥಪ್ರಕಾಶಿತವಾದ 'ಛಾಗಸ್ಯ ವಪಾಯಾಃ' ಎಂಬ ಮಂತ್ರದ ಬಲದಿಂದ 'ಪಶುಮಾಲಭೇತ' ಎಂಬ ವಾಕ್ಯದಲ್ಲಿರುವ ಪಶುಶಬ್ದಕ್ಕೆ ಛಾಗಪಶುವೆಂದೇ ಅರ್ಥೈಸಬೇಕು.

ಈ ಮೀಮಾಂಸಾಧಿಕರಣದಲ್ಲಿ ಪಶುಶಬ್ದವು ಛಾಗಪಶುವನ್ನೇ ಹೇಗೆ ಹೇಳುತ್ತದೋ, ಅದರಂತೆ ಚಕ್ಷುರ್ಮಯತ್ವಾದಿಲಿಂಗಗಳು ಜೀವಸಾಮಾನ್ಯಪ್ರಾಪಕವಾಗಿದ್ದರೂ ಆದಿತ್ಯಶ್ರುತಿಯ ಬಲದಿಂದ ಆದಿತ್ಯನೆಂಬ ಜೀವವಿಶೇಷವನ್ನು ಹೇಳಬಹುದು.

**प्रकाशः** – टीकोक्तं प्रापकान्तरमपि पराचष्टे – **नचेति । अन्तरिति ।** अन्तस्स्थत्वस्यापि ''निहितं गुहासु'' इति गुहास्थत्वरूपतयाऽर्भकौकस्त्वरूपत्वादिति भावः । **उपासेति ।** ''सीमानं विदार्यैतया द्वारा प्रापद्यत'' इति हृदयस्थत्वोक्तेरिति भावः ।

ಇಲ್ಲಿಯ ತನಕ ಆದಿತ್ಯಶ್ರುತಿ, ಆದಿತ್ಯಶ್ರುತಿಬಾಹುಲ್ಯ, ಸೌರಮಂತ್ರೋದಾಹರಣೆ, ಚಕ್ಷುರ್ಮಯತ್ವಾದಿಗಳು, ಇವುಗಳಲ್ಲಿ ಯಾವುದೊಂದೂ ಸಹ ಪೂರ್ವಪಕ್ಷಪ್ರಾಪಕವಲ್ಲವೆಂದು ನಿರಾಕರಿಸಿದರು. ಈಗ ಅರ್ಭಕೌಕಸ್ತ್ವ ಎಂಬ ಧರ್ಮವೂ ಸಹ ಪೂರ್ವಪಕ್ಷಪ್ರಾಪವಲ್ಲವೆಂದು 'ನಚ' ಎಂಬ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. ಅಂತಸ್ಥತ್ವಾಧಿಕರಣದಲ್ಲಿ 'ನಿಹಿತಮ್ ಗುಹಾಸು' ಎಂಬ ಅಂತಸ್ಥತ್ವವನ್ನು ಹೇಳಿದ್ದಾರೆ. ಅಂದರೆ ಸರ್ವಭೂತಗುಹಾಸ್ಥತ್ವ ಎಂದು ಅರ್ಥ. ಇದೇ ಅರ್ಭಕೌಕಸ್ತ್ವವೆನಿಸಿದೆ. ಆದ್ದರಿಂದ ಅರ್ಭಕೌಕಸ್ತ್ವಲಿಂಗವನ್ನು ಅಂತಸ್ಥತ್ವಾಧಿಕರಣದಲ್ಲಿ ನಿರಾಕರಿಸಿದ ಮೇಲೆ ಪುನಃ ಇಲ್ಲಿ ಅದೇ ಧರ್ಮದಿಂದ ಪೂರ್ವಪಕ್ಷ ಮಾಡಲು ಸಾಧ್ಯವಿಲ್ಲ. ಈ ವಿಷಯವನ್ನು 'ಅಂತಸ್ಥಧ್ರ್ಮ' ಎಂಬ ಶಬ್ದದಿಂದ ಹೇಳಿದ್ದಾರೆ. 'ಉಪಾಸಾತ್ರೈವಿಧ್ಯಾತ್' ಎಂಬಲ್ಲಿಯೂ ಅರ್ಭಕೌಕಸ್ತ್ವವನ್ನು ಹೇಳಿದ್ದಾರೆ. 'ಸೀಮಾನಾಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತೇ' ಎಂಬಲ್ಲಿ ಅಂತರುಪಾಸನಾ ಬಹಿರುಪಾಸನಾ ಮತ್ತು ವ್ಯಾಪ್ತ್ಯೋಪಾಸನಾವನ್ನು ಹೇಳಲಾಗಿದೆ. ಇವುಗಳಲ್ಲಿ ಅಂತರುಪಾಸನಾವನ್ನು ಹೇಳಬೇಕಾದರೆ ಹೃದಯಸ್ಥತ್ವವನ್ನು ಹೇಳಿದ್ದಾರೆ. ಇದರಿಂದ ಅರ್ಭಕೌಕಸ್ತ್ವವನ್ನು ಹೇಳಿದಂತಾಗುತ್ತದೆ.

**प्रकाशः** – एतेन 'उपासात्रैविध्यादिति च' इति न्यायविवरणटीका-वाक्यमन्यथाऽपि व्याख्यातं ध्येयम् । **हृदीति ।** तृतीयपादे ''हृद्यपेक्षया तु मनुष्याधिकारत्वात्'' इति गुणसूत्रेण ''अङ्गुष्ठमात्रः पुरुषो मध्य आत्मनि तिष्ठति'' इत्यत्राङ्गुष्ठमात्रपरिमितहृदयावकाशस्थत्वोक्तेरिति भावः । ''शब्दादिभ्योऽन्तः प्रतिष्ठानात्'' इत्यादिरादिपदार्थः । ननु वक्ष्यमाणाज्ञानेन पूर्वपक्षोऽस्त्वित्यत आह – **वक्ष्यमाणेति ।** 'आच्छादनेन' अनाविष्करणेन, तदाविष्कृत्य तद्वैलक्षण्यादिक-मनुक्त्वेत्यर्थः ।

**यद्वा – 'आच्छादनेन' अनुपमर्देनेत्यर्थः ।**

ಹೀಗೆ ಹೇಳಿದ್ದರಿಂದ 'ಉಪಾಸಾತ್ರೈವಿಧ್ಯಾತ್' ಎಂಬ ನ್ಯಾಯವಿವರಣ ಟೀಕೆಗೆ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನಿಸಿದಂತಾಯಿತು. ಈಗ ಹೇಳಿದಂತೆ ಅರ್ಭಕೌಕಸ್ತ್ವವನ್ನು ಕೂಡಿಸಲು ಉಪಾಸಾತ್ರೈವಿಧ್ಯವು ಉಪಯೋಗವಾಗಿದೆ. ಮತ್ತು ಹಿಂದೆ ಹೇಳಿದಂತೆ ಚಕ್ಷುರ್ಮಯತ್ವಾದಿಜೀವಲಿಂಗಗಳನ್ನು ಪರಮಾತ್ಮನಲ್ಲಿ ಕೂಡಿಸಲು ಉಪಾಸಾತ್ರೈವಿಧ್ಯವು ಉಪಯೋಗವಾಗಿದೆ.

'ಹೃದ್ಯಪೇಕ್ಷಯಾ' ಎಂಬ ವಾಕ್ಯಕ್ಕೆ ಹೀಗೆ ಅರ್ಥ - ತೃತೀಯಪಾದದಲ್ಲಿ ಬರುವ ವಾಮನಾಧಿಕರಣದ ಗುಣಸೂತ್ರ 'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್' ಈ ಸೂತ್ರದಲ್ಲಿ 'ಅಂಗುಷ್ಠಮಾತ್ರಃ ಪುರುಷೋ ಮಧ್ಯೇ ಆತ್ಮನಿ ತಿಷ್ಠತಿ' ಎಂಬಲ್ಲಿ ಅಂಗುಷ್ಠಮಾತ್ರಪರಿಮಿತವಾದ ಹೃದಯಾಕಾಶಸ್ಥತ್ವವನ್ನು ಹೇಳಲಾಗಿದೆ. 'ಇತ್ಯಾದೌ' ಎಂಬಲ್ಲಿರುವ ಆದಿಪದದಿಂದ 'ಶಬ್ದಾದಿಭ್ಯೋಽಂತಃ ಪ್ರತಿಷ್ಠಾನಾತ್' ಎಂಬ ಸೂತ್ರವನ್ನು ತೆಗೆದುಕೊಳ್ಳಬೇಕು. ಈ ಸೂತ್ರದಲ್ಲಿ 'ಅಂತಃಪ್ರತಿಷ್ಠಾನ' ಶಬ್ದದಿಂದ ಹೃದಯಾಕಾಶಸ್ಥತ್ವವನ್ನು ಆಶಂಕಿಸಿ ಉತ್ತರ ನೀಡಿದ್ದಾರೆ.

ಮುಂದೆ ಹೇಳುವ ಹೃದಯಕಾಶಸ್ಥಿತತ್ವವು ಮೊದಲು ತಿಳಿಯದ ಕಾರಣ ಈ ಅಧಿಕರಣದ ಪೂರ್ವಪಕ್ಷವು ಹೊರಡಬಹುದಲ್ಲವೇ? ಎಂಬ ಪ್ರಶ್ನೆಗೆ 'ವಕ್ಷ್ಯಮಾಣನ್ಯಾಯ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ. 'ಆಚ್ಛಾದನೇನ' ಎಂಬ ಪದಕ್ಕೆ 'ಆವಿಷ್ಕಾರ ಮಾಡದೇ' ಎಂದರ್ಥ. ಅಂದರೆ ಹೃದ್ಯಪೇಕ್ಷಗಳನ್ನು ತೋರಿಸಿ ಅದರಿಂದ ವೈಷಮ್ಯವನ್ನು ತೋರಿಸದೆ ಮಾಡುವ ಪೂರ್ವಪಕ್ಷವೆಂದರ್ಥ. ಅಥವಾ ಮುಂದೆ ಹೇಳುವ ಪೂರ್ವಪಕ್ಷವನ್ನು ನಿರಾಕರಣ ಮಾಡದೆ ಎಂದೂ ಅರ್ಥೈಸಬಹುದು.

**प्रकाशः – अर्भकौकस्त्वमुपेत्य न तत् पूर्वपक्षप्रापकमित्युक्तं, इदानीं तदेव नास्तीत्याह – सर्वेष्विति । अन्यथेति ।** भाष्ये ''स इदं ब्रह्म ततममपश्यत्'' इति पूर्वोक्तसर्वगतत्वमन्यस्येत्याक्षिप्तम् । तत्र स्यात्, अर्भकौकस्त्वस्यान्यगतत्वे प्रागुक्तसर्वगतत्वस्य विष्णुधर्मत्वाविरोधादित्यर्थः ।

ಇಲ್ಲಿಯ ತನಕ ಅರ್ಭಕೌಕಸ್ತ್ವವನ್ನು ಅಂಗೀಕರಿಸಿ ಪೂರ್ವಪಕ್ಷಪ್ರಾಪಕ ಅಲ್ಲವೆಂದು ತೋರಿಸಿದ್ದಾಯಿತು. ಈಗ ಅರ್ಭಕೌಕಸ್ತ್ವವು ಇಲ್ಲಿ ಇಲ್ಲವೇ ಇಲ್ಲ ಎಂದು 'ಸರ್ವೇಷು' ಎಂಬ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. 'ಅನ್ಯಥಾ' ಎಂಬ ಗ್ರಂಥಕ್ಕೆ ಹೀಗರ್ಥ - 'ಸ ಇದಮ್ ಬ್ರಹ್ಮ ತತಮಪಶ್ಯತ್' ಎಂದು ಭಾಷ್ಯದಲ್ಲಿ ಪ್ರಾಣನಿಗೆ ಹೇಳಿದ ಸರ್ವಗತತ್ವವು ವಿಷ್ಣುವಿನಲ್ಲಿಯೂ ಇಲ್ಲವೆಂದು ಆಕ್ಷೇಪಿಸಿದ್ದಾರೆ. ಇದು ತಪ್ಪಾದೀತು. ಇಲ್ಲಿ ಅರ್ಭಕೌಕಸ್ತ್ವವು ಅನ್ಯಗತವಾದರೆ ಹಿಂದೆ ಹೇಳಿದ ಸರ್ವಗತತ್ವವು ವಿಷ್ಣು ಧರ್ಮವೆನಿಸಲು ವಿರೋಧವಿಲ್ಲ.

**गुरुराजीयम् – नच चक्षुर्मयत्वादिनेति ।।** नन्वानन्दमयोक्तस्य कोह्येवान्यादिति प्राचुर्यार्थे हेतुव्यपदेशस्य तत्प्रायपाठस्य चात्राभावेन

तन्न्यायाविषयत्वात् कथं तन्न्यायेन प्राचुर्यार्थतया चक्षुर्मयत्वादेर्ब्रह्मणि सावकाशत्वमित्यरुच्याह – पादान्तयेति ।। अन्यथेति ।। सर्वेषु भूतेष्वित्यत्राल्पस्थानस्थितत्वरूपार्भकौकस्त्वोक्तावित्यर्थः ।




ಆದಿತ್ಯನೇ ಸರ್ವಗತನೆಂಬ ಪೂರ್ವಪಕ್ಷ ಹುಟ್ಟಲು ಹೇಗೆ ಸಾಧ್ಯವಿಲ್ಲವೋ? ಅದರಂತೆ ಜೀವನು ಸರ್ವಗತನೆಂಬ ಪೂರ್ವಪಕ್ಷವೂ ಹುಟ್ಟುವುದಿಲ್ಲ. ಆನಂದಮಯಾಧಿಕರಣದ ನ್ಯಾಯದಂತೆ ವಿಶೇಷಜ್ಞಾನ ಹೊಂದಿರುವ ಕಾರಣ ಭಗವಂತನೇ ಚಕ್ಷುರ್ಮಯನಾಗುತ್ತಾನೆ. ಅಥವಾ ಆದಿತ್ಯಶ್ರುತಿಯ ಬಲದಿಂದ ಚಕ್ಷುರ್ಮಯತ್ವಾದಿಲಿಂಗಗಳನ್ನು ಆದಿತ್ಯಪರವೆನ್ನಬಹುದು. ಹೀಗೆ ಜೀವಪ್ರಾಪಕವಾದ ಲಿಂಗವಿಲ್ಲದ ಕಾರಣ ಪೂರ್ವಪಕ್ಷ ಹುಟ್ಟುವುದಿಲ್ಲ. ಈ ಕಾರಣದಿಂದಲೂ ಈ ಅಧಿಕರಣಕ್ಕೆ ಸಾರ್ಥಕ್ಯವಿಲ್ಲ.





### ಪೂರ್ವಪಕ್ಷ ಹುಟ್ಟುವುದರಿಂದ ಅಧಿಕರಣವು ಆರಂಭಣೀಯ

## तात्पर्यचन्द्रिका

मैवम्, ''संवत्सर एव प्रध्वंसयन् तस्यैतस्यासावादित्यो रसः'' इति संवत्सराधिपतित्वरूपसंवत्सरसारत्वलिङ्गात्,

''यश्चासावादित्यः'' इति प्रसिद्धार्थयच्छब्दोपबन्धात्,

''तस्मात्पुरुषं पुरुषं प्रत्यादित्यो भवति'' इति सर्वपुरुषाभिमुख्यलिङ्गाच्चादित्यशब्दस्य प्रसिद्धादित्यपरत्वात् ।

अत एव भाष्यटीकयोरादित्यशब्दस्य प्रसिद्धपरत्वं लिङ्गाधीनमिति दर्शयितुं ''तस्यैतस्यासावादित्यो रसः'' इत्यादिलिङ्गप्रतिपादकांशोऽप्युपात्तः ।

उक्तं ह्यनुव्याख्याने –

पुनश्च प्रापकाद्धेतोस्तत्राधिकरणान्तरम् ।

इति ।

ಪರಿಪೂರ್ಣಚಂದ್ರಿಕಾ

**न चैवं सत्यावश्यकत्वाल्लिङ्गैरेव पूर्वपक्षः, लिङ्गसाहचर्यादेव च सर्वगतत्वस्यान्यत्रप्रसिद्धत्वं चोच्यताम्, किं तदुपजीविश्रुत्युपन्यासेनेति वाच्यम्, उक्तलिङ्गानामादित्यविशेषणतयैव प्रतीत्य सर्वगतविशेषणत्वाप्रतीतेः साक्षात्तैः पूर्वपक्षाद्यसम्भवात् ।**

**तदेतदभिप्रेत्योक्तं न्यायविवरणे – ''बहवो ह्यत्रादित्यशब्दाः क्षित्यादिषूक्त्वाऽऽदित्येऽनुक्तिरित्यादिलिङ्गञ्च'' इति ।**

ಅನುವಾದ - ಇದು ತಪ್ಪು. ''ಸಂವತ್ಸರ ಏವ ಪ್ರಧ್ವಂಸಯನ್ ತಸ್ಸೈತಸ್ಯಾಸಾವಾದಿತ್ಯೋ ರಸಃ'' ಎಂಬಲ್ಲಿ 'ಸಂವತ್ಸರಾಧಿಪತಿತ್ವ' ಎಂಬ ಸಂವತ್ಸರಸಾರತ್ವಲಿಂಗವು ಕೇಳಿಸುತ್ತಿದೆ. ''ಯಶ್ಚಾಸಾವಾದಿತ್ಯಃ'' ಎಂಬಲ್ಲಿ ಪ್ರಸಿದ್ಧಾರ್ಥವನ್ನು ತಿಳಿಸುವ 'ಯತ್' ಶಬ್ದವು ಕೇಳಿಸುತ್ತಿದೆ. ''ತಸ್ಮಾತ್ಪುರುಷಂ ಪುರುಷಂ ಪ್ರತ್ಯಾದಿತ್ಯೋ ಭವತಿ'' ಎಂಬಲ್ಲಿ ಪ್ರತಿಯೊಬ್ಬ ಪುರುಷರ ಆಭಿಮುಖ್ಯವೆಂಬ ಲಿಂಗವು ಕೇಳಿಸುತ್ತಿದೆ. ಆದ್ದರಿಂದ ಶ್ರುತಿಯಲ್ಲಿರುವ ಆದಿತ್ಯ ಶಬ್ದವು ಪ್ರಸಿದ್ಧನಾದ ಆದಿತ್ಯನನ್ನೇ ಪ್ರತಿಪಾದಿಸುತ್ತದೆ. ಆದ್ದರಿಂದಲೇ ಭಾಷ್ಯ ಹಾಗೂ ಟೀಕೆಗಳಲ್ಲಿ ಆದಿತ್ಯಶಬ್ದಕ್ಕೆ ಪ್ರಸಿದ್ಧಪರತ್ವವನ್ನೇ ಹೇಳಬೇಕು. ಈ ಪ್ರಸಿದ್ಧಪರತ್ವವು ಲಿಂಗಾಧೀನವಾಗಿದೆ ಎಂಬುದನ್ನು ತೋರಿಸುವುದಕ್ಕಾಗಿಯೇ ''ತಸ್ಸೈತಸ್ಯಾಸಾವಾದಿತ್ಯೋ ರಸಃ'' ಇತ್ಯಾದಿಯಾದ ಲಿಂಗಪ್ರತಿಪಾದಕ ಅಂಶವನ್ನೂ ಸಹ ಉಲ್ಲೇಖಿಸಿದ್ದಾರೆ. ಇದನ್ನೇ ಅನುವ್ಯಾಖ್ಯಾನದಲ್ಲಿ ''ಪುನಶ್ಚ ಪ್ರಾಪಕಾದ್ಧೇತೋಸ್ತತ್ರಾಧಿಕರಣಾಂತರಂ'' (ಲಿಂಗಬಾಹುಲ್ಯವಿರುವ ಪ್ರಯುಕ್ತ ಆದಿತ್ಯ ಶಬ್ದವು ಪ್ರಸಿದ್ಧನಾದ ಸೂರ್ಯನನ್ನೇ ಹೇಳುತ್ತದೆಂಬ ಆಕ್ಷೇಪ ಪರಿಹಾರಕ್ಕಾಗಿ ಮತ್ತೊಂದು ಅಧಿಕರಣವು ಹೊರಡುತ್ತಿದೆ.) ಎಂಬುದಾಗಿ ಹೇಳಿದ್ದಾರೆ.

ಆದಿತ್ಯ ಶ್ರುತಿಯನ್ನು ಪುಷ್ಟೀಕರಿಸುವುದಕ್ಕಾಗಿ ಲಿಂಗವನ್ನು ಆಶ್ರಯಿಸುತ್ತಿದ್ದೀರಿ. ಹಾಗಾದರೆ ಇಂತಹ ಲಿಂಗಗಳಿಂದಲೇ ಪೂರ್ವಪಕ್ಷವನ್ನು ನೇರವಾಗಿ ಮಾಡಬಹುದು. ಮತ್ತು ಲಿಂಗಸಾಹಚರ್ಯದಿಂದಲೇ ಸರ್ವಗತತ್ವಕ್ಕೆ ಅನ್ಯತ್ರಪ್ರಸಿದ್ಧತ್ವವನ್ನೂ ಸಹ ಹೇಳಬಹುದಿತ್ತು. ಹೊರತಾಗಿ ಲಿಂಗವನ್ನು ಉಪಜೀವಿಸಿದ ಶ್ರುತಿಯನ್ನು ಏಕೆ ಉಪನ್ಯಾಸ ಮಾಡಬೇಕು?

ಹೀಗೆ ಶಂಕಿಸಬಾರದು. ಏಕೆಂದರೆ ಇದುವರೆಗೂ ನಿರೂಪಿಸಿದ ಲಿಂಗಗಳೆಲ್ಲವೂ ಆದಿತ್ಯನಲ್ಲೇ ವಿಶೇಷಣವಾಗಿ ಕೇಳಿಸುತ್ತಿವೆ; ಹೊರತು ಸರ್ವಗತನಲ್ಲಿ ವಿಶೇಷಣವಾಗಿ ಕಾಣಿಸುತ್ತಿಲ್ಲ. ಆದ್ದರಿಂದ ನೇರವಾಗಿ ಲಿಂಗಗಳಿಂದಲೇ ಪೂರ್ವಪಕ್ಷ ಮಾಡಲು ಸಾಧ್ಯವಿಲ್ಲ.

ಈ ಅಭಿಪ್ರಾಯದಿಂದಲೇ ನ್ಯಾಯವಿವರಣೆಯಲ್ಲಿ 'ಬಹವೋ ಹ್ಯತ್ರಾದಿತ್ಯಶಬ್ದಾಃ । ಕ್ಷಿತ್ಯಾದಿಷೂಕ್ತ್ಯಾಽಽದಿತ್ಯೇಽನುಕ್ತಿರಿತ್ಯಾದಿಲಿಂಗಂಚ'' (ಶ್ರುತಿಯಲ್ಲಿ ಅನೇಕ ಆದಿತ್ಯ ಶಬ್ದಗಳಿಗವೆ. ಮತ್ತು ಕ್ಷಿತ್ಯಾದಿಗಳಲ್ಲಿ ಹೇಳಿ ಆದಿತ್ಯನಲ್ಲಿ ಹೇಳಲ್ಪಡದಿರುವಿಕೆ ಇತ್ಯಾದಿ ಲಿಂಗಗಳೂ ಸಹ ಕೇಳಿಸುತ್ತಿವೆ.)

**प्रकाशः –**

एवमुक्तरीत्या आदित्यश्रुतेस्सावकाशत्वेऽपि ''ज्योतिः'' इत्यत्र निरवकाश-प्रकरणेन ज्योतिश्श्रुतेरिव निरवकाशादित्यलिङ्गवशेनादित्यश्रुते-र्निरवकाशत्वेन वा,

पूर्वं विष्णौ समन्वयेऽपि मुख्यत्वस्यानुक्त्या सावकाशत्वस्यैवाभावेन स्वतो निरवकाशत्वेन वा,

तन्न्यायाविषयत्वेन तत्रास्यां समन्वयस्यैवाभावेन वा त्रेधा श्रुतेर्निरवकाशत्वेन तया पूर्वपक्षोदयो युज्यत इति भावेनाह – संवत्सर एवेति ।

''महापुरुष इति यमवोचाम, संवत्सर एव प्रध्वंसयन्नन्यानि भूतानि ऐक्याभावयन्नन्यानि तस्यैतस्यासावादित्यो रसः स यश्चायमशरीरः प्रज्ञात्मा यश्चासावादित्य एकमेतदिति विद्यात् तस्मात्पुरुषं पुरुषं प्रत्यादित्यो भवति । तदप्येतदृषिणोक्तं -

चित्रं देवानामुदगादनीकं चक्षुर्मित्रस्य वरुणस्याग्नेः ।
आप्रा द्यावापृथिवी अन्तरिक्षं सूर्य आत्मा जगतस्तस्थुषश्च ॥''

इत्यत्र 'तस्यैतस्य' इति संवत्सरं परामृश्य रसपदेन तदधिष्ठातृत्वोक्तेस्तस्य च रथवेगेन संवत्सरकर्तरि सूर्य एव प्रसिद्धेः,

यच्छब्दस्य प्रसिद्धार्थकत्वात्सूर्यस्यैवादित्यत्वेन लोकप्रसिद्धत्वात्,

सर्वपुरुषाभिमुख्यस्य सूर्य एव प्रत्यक्षत्वेन विष्णावदर्शनाल्लिङ्गत्रयेण श्रुतेरुज्जीवनादित्यर्थः । एतेन लिङ्गबाहुल्यकथनेन ''बहुलिङ्गसहितश्रुतेरपि सावकाशायाः निरवकाशश्रुत्यादीनामेव बलवत्त्वं'' इति न्यायविवरणगतबहुशब्दार्थो विवृतः ।

ವಿವರಣೆ - ಇದುವರೆಗೂ ಆದಿತ್ಯ ಶ್ರುತಿಯನ್ನು ವಿಷ್ಣುವಿನಲ್ಲಿಯೂ ಸಮನ್ವಯ ಮಾಡಬಹುದ್ದಾದ್ದರಿಂದ ಸಾವಕಾಶವೆಂದು ಹೇಳಿದರು. ಆದರೆ ಜ್ಯೋತಿರಧಿಕರಣದಲ್ಲಿ ನಿರವಕಾಶವಾದ ಪ್ರಕರಣದ ಬಲದಿಂದ ಜ್ಯೋತಿಶ್ರುತಿಯೂ ಸಹ ನಿರವಕಾಶವೆಂದು ಸಮರ್ಥಿಸಿದಂತೆ ಪ್ರಕೃತ ನಿರವಕಾಶವಾದ ಆದಿತ್ಯನ ಲಿಂಗದಿಂದ ಆದಿತ್ಯಶ್ರುತಿಯೂ ಸಹ ನಿರವಕಾಶತ್ವವನ್ನು ಹೇಳಬಹುದು.

ಅಥವಾ ಹಿಂದಿನ ಅಂತರಧಿಕರಣದಲ್ಲಿ ಆದಿತ್ಯ ಮೊದಲಾದ ದೇವತಾವಾಚಕ ಪದಗಳ ಸಮನ್ವಯವನ್ನು ಮಾಡಿದ್ದರೂ ಮುಖ್ಯತ್ವವನ್ನು ವಿಷ್ಣುವಿನಲ್ಲಿ ಹೇಳಿರುವುದಿಲ್ಲ. ಆದ್ದರಿಂದ ಆದಿತ್ಯ ಶ್ರುತಿಯು ಸಾವಕಾಶವೆಂದು ಶಂಕಿಸಲಾಗದ ಕಾರಣ ಸ್ವತಃ ನಿರವಕಾಶವೆಂದಂತಾಯಿತು.

ಅಥವಾ ಅಂತರಧಿಕರಣದ ನ್ಯಾಯಕ್ಕೆ ಈ ಆದಿತ್ಯಶ್ರುತಿಯು ವಿಷಯವೇ ಆಗುವುದಿಲ್ಲ. ಆದ್ದರಿಂದ ಈ ಶ್ರುತಿಯ ಸಮನ್ವಯವು ಅಂತರಧಿಕರಣದಿಂದ ಗತಾರ್ಥವಾಗುವುದಿಲ್ಲ.

ಹೀಗೆ ಮೂರು ಬಗೆಯಲ್ಲಿ ಆದಿತ್ಯಶ್ರುತಿಗೆ ನಿರವಕಾಶತ್ವವನ್ನು ಹೇಳಬಹುದಾದ್ದರಿಂದ ಆದಿತ್ಯಶ್ರುತಿಯಿಂದ ಹುಟ್ಟುವ ಪೂರ್ವಪಕ್ಷವು ಯುಕ್ತವೇ ಆಗಿದೆ. ಈ ಅಭಿಪ್ರಾಯದಿಂದ ''ಸಂವತ್ಸರ ಏವ'' ಇತ್ಯಾದಿ ಗ್ರಂಥವೂ ಹೊರಟಿದೆ.

''ಮಹಾಪುರುಷ ಇತಿ ಯಮವೋಚಾಮ, ಸಂವತ್ಸರ ಏವ ಪ್ರಧ್ವಂಸಯನ್ನನ್ಯಾನಿ ಭೂತಾನಿ ಐಕ್ಯಾಭಾವಯನ್ನನ್ಯಾನಿ ತಸ್ಯೈತಸ್ಯಾಸಾವಾದಿತ್ಯೋ ರಸಃ ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ಯಶ್ಚಾಸಾವಾದಿತ್ಯ ಏಕಮೇತದಿತಿ ವಿದ್ಯಾತ್ ತಸ್ಮಾತ್ಪುರುಷಂ ಪುರುಷಂ ಪ್ರತ್ಯಾದಿತ್ಯೋ ಭವತಿ । ತದಪ್ಯೇತದೃಷಿಣೋಕ್ತಂ -

ಚಿತ್ರಂ ದೇವನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।
ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥''

ಎಂಬ ವಿಷಯದಲ್ಲಿ 'ತಸ್ಯೈತಸ್ಯ' ಎಂಬುದಾಗಿ ಸಂವತ್ಸರವನ್ನು ಪರಾಮರ್ಶಿಸಿ ರಸಪದದಿಂದ ಆ ಸಂವತ್ಸರಕ್ಕೆ ನಿಯಾಮಕನಾಗಿದ್ದಾನೆಂದು ಹೇಳಲಾಗಿದೆ. ಈ ಧರ್ಮವು ರಥವೇಗದಿಂದ ಸಂಚರಿಸುವ ಸಂವತ್ಸರಕರ್ತೃವಾದ ಸೂರ್ಯನಲ್ಲಿಯೇ ಪ್ರಸಿದ್ಧವಾಗಿದೆ.

ಮತ್ತು 'ಯತ್' ಶಬ್ದವು ಎಲ್ಲೆಡೆ ಪ್ರಸಿದ್ಧಾರ್ಥವನ್ನೇ ಹೇಳುತ್ತದೆ. ಆದಿತ್ಯ ಶಬ್ದಕ್ಕೆ ಸೂರ್ಯನೆಂಬರ್ಥವು ಲೋಕದಲ್ಲಿ ಪ್ರಸಿದ್ಧವಾಗಿದೆ.

ಮತ್ತು 'ಸರ್ವಪುರುಷಾಭಿಮುಖ್ಯ' ಎಂಬ ಧರ್ಮವೂ ಸಹ ಸೂರ್ಯನಲ್ಲಿಯೇ ಪ್ರತ್ಯಕ್ಷವಾಗಿ ಗೋಚರಿಸುತ್ತಿದೆ. (ಪ್ರತಿಯೊಬ್ಬ ಪುರುಷನಿಗೂ ಸೂರ್ಯನು ಅಭಿಮುಖನಾಗಿದ್ದಾನೆಂದೇ ಅನಿಸುತ್ತದೆ.) ಹೊರತಾಗಿ ವಿಷ್ಣುವಿನಲ್ಲಿ ಈ ಧರ್ಮವು ಕಾಣಸುತ್ತಿಲ್ಲ.

ಹೀಗೆ 'ಸಂವತ್ಸರ ಅಧಿಷ್ಠಾತೃತ್ವ', 'ಯಚ್ಛಬ್ದಸ್ಯ ಲೋಕೇ ಪ್ರಸಿದ್ಧತ್ವ', 'ಸರ್ವಪುರುಷಾಭಿಮುಖ್ಯ' ಎಂಬ ಮೂರು ಲಿಂಗಗಳು ಆದಿತ್ಯಶ್ರುತಿಯನ್ನು ಉಪೋದ್ಬಲಿಸುತ್ತವೆ.

ಹೀಗೆ ಲಿಂಗಬಾಹುಲ್ಯವನ್ನು ಹೇಳಿದ್ದರಿಂದ ''ಬಹುಲಿಂಗಸಹಿತಶ್ರುತೇರಪಿ ಸಾವಕಾಶಾಯಾಃ ನಿರವಕಾಶಶ್ರುತ್ಯಾದೀನಾಮೇವ ಬಲವತ್ತ್ವಂ'' ''ಆದಿತ್ಯಶ್ರುತಿಯೂ ಬಹುಲಿಂಗಗಳಿಂದ ಸಹಿತವಾಗಿದ್ದರೂ

ಸಾವಕಾಶವೇ ಆಗಿದೆ. ನಿರವಕಾಶವಾದ ವಿಷ್ಣುಶ್ರುತಿಗಳೇ ಬಲಿಷ್ಠವಾಗಿವೆ.'' ಎಂಬ ನ್ಯಾಯವಿವರಣದಲ್ಲಿರುವ 'ಬಹು' ಎಂಬ ಪದವನ್ನು ವ್ಯಾಖ್ಯಾನಿಸಿದಂತಾಯಿತು.

**प्रकाशः – अत एवेति** । लिङ्गैःश्रुत्युज्जीवनस्याभिप्रेतत्वादेवेत्यर्थः । अन्यथा श्रुतिबाहुल्यमात्र प्रदर्शनपरत्वे ''असावादित्यः'' इत्येतावदेवोदाह्रीयेतेत्यर्थः ॥

**उक्तं हीति** ॥ आनन्दमयादिकरणे । 'तत्र' पूर्वाधिकरणव्युत्पादितन्यायविषयेऽप्यर्थे यदधिकरणान्तरमारभ्यते, तत्पूर्वन्यायाच्छादकाधिकाशङ्कालक्षणात्पुनरधिकरणान्तरारम्भ-प्रापकाद्धेतोर्युक्त इत्यर्थः ।

ननु टीकारीत्या सर्वगतत्वस्यान्यत्रप्रसिद्धये श्रुत्यनुसरणमित्यत आह – **लिङ्गेति । तदेतदिति** । लिङ्गैः श्रुतिमुज्जीव्य तया पूर्वपक्ष इत्येतदित्यर्थः ।

एतेन भाष्यन्यायविवरणयोरेकविषयत्वं विवृतम्, ''आदित्यो भवितुमर्हति, तदीयश्रुतिलिङ्गानामत्र दर्शनात्'' इति न्यायविवरणटीका च विवृता ।

यद्यप्यत्र आदित्यशब्द एक एव, तथाऽप्यावृत्तिबहुत्वाद्वाऽऽदित्य-प्रतिपादाकादित्यसूर्यमित्रादिशब्दानां सत्त्वाद्वा 'बहवः' इत्युक्तम् ।

यद्यप्यत्र 'शब्दाः' इत्यन्तमेवोदाहार्यं, शिष्टं तु पूर्वपक्षे प्रापकान्तरत्वादुदाहृतम्। आदिपदेन चक्षुर्मयत्वादिकं जीवलिङ्गं ग्राह्यम् ।

यद्वा – आदिपदेन संवत्सरसारत्वादिप्रागुक्तलिङ्गग्रहः । तेन तदंशोऽपि प्रकृतोपयोग्येवेति भावः ।

ಗ್ರಂಥದಲ್ಲಿರುವ 'ಅತ ಏವ' ಎಂಬ ಪದಕ್ಕೆ ಲಿಂಗಗಳಿಂದ ಶ್ರುತಿಯ ಉಜ್ಜೀನವು ಅಭಿಪ್ರೇತವಾದ್ದರಿಂದಲೇ ಎಂದರ್ಥ. ಹೀಗೆ ಅಭಿಪ್ರಾಯವಿಲ್ಲದಿದ್ದಲ್ಲಿ ಕೇವಲ ಶ್ರುತಿಬಾಹುಲ್ಯವನ್ನಷ್ಟೇ ತೋರಿಸುವುದಾದಲ್ಲಿ, 'ಅಸಾವಾದಿತ್ಯಃ' ಎಂದಷ್ಟೇ ಶ್ರುತಿಯನ್ನು ಉದಾಹರಿಸಿದ್ದರೆ ಸಾಕಾಗುತ್ತಿತ್ತು ಎಂದರ್ಥ.

'ಉಕ್ತಂ ಹಿ' ಎಂದರೆ ಆನಂದಮಯಾಧಿಕರಣದಲ್ಲಿ ಹೇಳಿದ್ದಾರೆ ಎಂದರ್ಥ. 'ತತ್ರ' ಎಂದರೆ ಹಿಂದಿನ ಅಧಿಕರಣದ ಸಿದ್ಧಾಂತದ ನ್ಯಾಯಕ್ಕೆ ವಿಷಯವಾದರೂ ಸಹ ಎಂದರ್ಥ. ಎಲ್ಲಿ ಅಧಿಕರಣಾಂತರವು ಹೊರಡುತ್ತದೋ ಅಲ್ಲಿ ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯವನ್ನು ಮುಚ್ಚುವ ಅಭ್ಯಧಿಕಾಶಂಕೆಯನ್ನು ಮಾಡಿ ಅಧಿಕರಣಾಂತರಕ್ಕೆ ಪೂರಕವಾದ ಪೂರ್ವಪಕ್ಷಯುಕ್ತಿಯನ್ನು ಹೇಳಬೇಕು ಎಂದರ್ಥ.

ಗ್ರಂಥದಲ್ಲಿ ಲಿಂಗಗಳಿಂದಲೇ ನೇರವಾಗಿ ಪೂರ್ವಪಕ್ಷ ಮಾಡಬಹುದಲ್ಲವೇ? ಎಂದು ಪ್ರಶ್ನಿಸಿದ್ದಾರೆ. ಆದರೆ ಟೀಕೆಯಲ್ಲಿ ಹೇಳಿದ ಪ್ರಕಾರ ಸರ್ವಗತತ್ವವು ಅನ್ಯತ್ರಪ್ರಸಿದ್ಧವಾಗುವುದಕ್ಕಾಗಿ ಶ್ರುತಿಯನ್ನು

ಅನುಸರಿಸಲೇಬೇಕು. ಹೀಗಿರುವಾಗ ಕೇವಲ ಲಿಂಗದಿಂದಲೇ ಹೇಗೆ ಪೂರ್ವಪಕ್ಷ ಮಾಡುತ್ತೀರಿ ? ಎಂಬ ಪ್ರಶ್ನೆಗೆ ಗ್ರಂಥದಲ್ಲಿ "ಲಿಂಗೈರೇವ" ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

'ತದೇತತ್' ಎಂಬ ಮಾತಿಗೆ ಲಿಂಗಗಳಿಂದ ಶ್ರುತಿಯನ್ನು ಉಜ್ಜೀವನಗೊಳಿಸಿ ಅಂತಹ ಶ್ರುತಿಯಿಂದ ಪೂರ್ವಪಕ್ಷ ಮಾಡುವುದು ಎಂದರ್ಥ. ಹೀಗೆ ಹೇಳಿದ್ದರಿಂದ ಭಾಷ್ಯ ಹಾಗೂ ನ್ಯಾಯವಿವರಣಗಳಿಗೆ ಒಂದೇ ಅಭಿಪ್ರಾಯವೆಂದಂತಾಯಿತು. ಮತ್ತು "ಆದಿತ್ಯೋ ಭವಿತುಮರ್ಹತಿ ತದೀಯಶ್ರುತಿಲಿಂಗಾನಾಮತ್ರ ದರ್ಶನಾತ್" ಎಂಬ ನ್ಯಾಯವಿವರಣೆಯ ಟೀಕೆಯನ್ನೂ ಸಹ ವಿವರಿಸಿದಂತಾಯಿತು.

ವಸ್ತುತಃ ಇಲ್ಲಿ 'ಆದಿತ್ಯ' ಎಂಬ ಒಂದೇ ಶಬ್ದವು ಕೇಳಿಸುತ್ತಿದೆ. ಹೀಗಿರುವಾಗ ನ್ಯಾಯವಿವರಣದಲ್ಲಿ 'ಬಹವಃ' ಎಂದು ಹೇಗೆ ಹೇಳಿದರು? ಎಂದರೆ ಒಂದೇ ಆದಿತ್ಯಶಬ್ದವು ಅನೇಕ ಬಾರಿ ಕೇಳಿಸುತ್ತಿದೆಯೆಂದು ತಿಳಿಯಬಹುದು. ಅಥವಾ ಆದಿತ್ಯನನ್ನು ಪ್ರತಿಪಾದಿಸುವ 'ಆದಿತ್ಯ, ಸೂರ್ಯ, ಮಿತ್ರ ಮೊದಲಾದ ಶಬ್ದಗಳು ವಿಷಯವಾಕ್ಯದಲ್ಲಿರುವುದರಿಂದಲೂ ಸಹ 'ಬಹವಃ' ಎಂದು ಹೇಳಿದ್ದಾರೆ.

ವಸ್ತುತಃ ನ್ಯಾಯವಿವರಣದಲ್ಲಿ 'ಶಬ್ದಾಃ' ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು. ಆದರೂ ಸಹ ಪೂರ್ವಪಕ್ಷಕ್ಕೆ ಮತ್ತೊಂದು ಯುಕ್ತಿಯನ್ನು ತಿಳಿಸುವುದಕ್ಕಾಗಿ 'ಕ್ಷಿತ್ಯಾದಿಷು' ಇತ್ಯಾದಿ ಮಾತುಗಳನ್ನು ಹೇಳಿದ್ದಾರೆ. 'ಆದಿತ್ಯಾದಿ' ಎಂಬಲ್ಲಿರುವ ಆದಿಪದದಿಂದ ಜೀವಲಿಂಗವೆನಿಸಿದ ಚಕ್ಷುರ್ಮಯತ್ವಾದಿಗಳನ್ನು ವಿವಕ್ಷಿಸಬೇಕು.

ಅಥವಾ 'ಆದಿ' ಪದದಿಂದ 'ಸಂವತ್ಸರಸಾರತ್ವ' ಮೊದಲಾದ ಹಿಂದಿನ ಲಿಂಗಗಳನ್ನು ವಿವಕ್ಷಿಸಬೇಕು. ಅದಕ್ಕೋಸ್ಕರ ಉಳಿದ ಅಂಶಗಳನ್ನು ಹೇಳಿದ್ದೂ ಸಹ ಪ್ರಕೃತಕ್ಕೆ ಉಪಯೋಗಿಯೇ ಆಗಿದೆ.

**गुरुराजीयम्** – तत्रादित्यश्रुतिमात्रेणैव पूर्वःपक्ष इत्यभिप्रेत्यादित्यशब्दस्य ब्रह्मपरत्वमन्तरधिकरणन्यायेनेति शङ्कां परिहरन्नेव प्रसिद्धादित्यपरत्वमुपपादयति – **मैवमित्यादिना** ।।

ननु संवत्सरसारत्वमपि शतसंवत्सरत्वादिवदन्तर्यामिणि सावकाशं नादित्यश्रुतेः प्रसिद्धादित्यपरत्वं सम्पादयितुमलमित्यत आह – **यश्चासावादित्य इति** ।। **प्रसिद्धार्थयच्छब्दोपसम्बन्धादिति** ।। **यच्छब्दोहि प्रसिद्ध्यर्थः** । **प्रसिद्धिर्हि लोकतः** । **स चादित्य एवेति** प्रसिद्ध्यर्थकयच्छब्दसमभिव्याहारादादित्यशब्दः प्रसिद्धादित्यपर इत्यर्थः ।

ननु च यच्छब्दोपबन्धोपि सयश्चायं पुरुषे यश्चासावादित्य इत्यादि प्रसिद्धे ब्रह्मण्यपि सम्भवतीति कथमेतदनुसारेणादित्यश्रुतेः प्रसिद्धपरत्वमित्यरुचेराह – **तस्मादिति** ।। ब्रह्मण एवादित्यत्वे तस्यैव पुरुषाभिमुख्यमभ्युपेयम् । नच

तत्सम्भवः । तस्य पुरुषाभिमुख्यताया असम्भवादिति भावः ।। अत एवेति ।। लिङ्गोपोद्बलितादित्यश्रुतेः प्रसिद्धादित्यपरत्वस्य भाष्यटीकयोरभिप्रेतत्वादेवेत्यर्थः ।। तदेतदभिप्रेत्योक्तं न्यायविवरण इति ।। आदित्यशब्दस्य लिङ्गाधीनमन्यपरत्वं लिङ्गैरेव पूर्वपक्षासम्भवं चाभिप्रेत्येत्यर्थः ।




ಇಲ್ಲಿಯ ತನಕ ಮಾಡಿದ ಆಕ್ಷೇಪದಲ್ಲಿ ಹುರುಳಿಲ್ಲ.

ಆದಿತ್ಯನು ಸರ್ವಗತನೆಂಬ ಪೂರ್ವಪಕ್ಷ ಹುಟ್ಟಲು ಅನೇಕ ಲಿಂಗಗಳಿವೆ. 'ಸವಂತ್ಸರಾಧಿಪತಿತ್ವ', 'ಪ್ರತಿಪುರುಷಾಭಿಮುಖ್ಯ', 'ಯಚ್ಛಬ್ದಸ್ಯ ಲೋಕೇ ಪ್ರಸಿದ್ಧತ್ವ' ಮೊದಲಾದ ಲಿಂಗಗಳು ಸೂರ್ಯನಲ್ಲಿ ಮಾತ್ರ ಪ್ರಸಿದ್ಧವಾಗಿವೆ. ಇವುಗಳಿಂದ ಆದಿತ್ಯಶ್ರುತಿಯು ಉಪೋದ್ಬಲಿತವಾಗುತ್ತದೆ.

• • • • •

## ಅಂತರಾದ್ಯಧಿಕರಣಗಳಿಂದ ಪುನರುಕ್ತಿ ಇಲ್ಲ

**तात्पर्यचन्द्रिका**

**यद्वा – अन्तराद्यधिकरणेष्विन्द्रादिशब्दानां तैस्तैर्लिङ्गैर्विष्णुपरतैव व्युत्पादिता, नतु तत्र मुख्यता ।**

**तस्मान्मुख्यार्थता विष्णोरिति कृत्वा हृदि प्रभुः ।**
**समन्वयं साधयति ......................... ।।**

**इत्यनुव्याख्याने मुख्यत्वोक्तिः, आकाशादिपदप्रवृत्तिनिमित्तस्य भगवदधीनत्वोक्तिश्च, स्थितायां त्रिपाद्यां प्रवृत्ते "तदधीनत्वात्" इत्यत्र सर्वशब्दानां भगवति मुख्यताया वक्ष्यमाणत्वात्तदभिप्राया । अत एव 'हृदि कृत्वा' इत्युक्तम् ।**

**ईक्षत्यधिकरणे वाच्यत्वोक्तिरपि तदुपयोगितया । टीकायां प्रत्यधिकरणं तत्तच्छब्दवाच्यत्वोक्तिरपि तदभिप्राया । तत्तच्छब्दप्रवृत्तिनिमित्तगुणलाभस्य**

**वक्ष्यमाणसापेक्षत्वेऽपि तत्तत्प्रकरणस्थगुणमात्रलाभः, पूर्वाधिकरणाक्षेपः, समाधानं च तत्तदधिकरणमात्रसाध्यम् । एवं चादित्यादिशब्दानां विष्णौ मुख्यताया अनुक्तत्वात्तैः पूर्वपक्षोदय इति न्यायविवरणाभिप्रायः ।**

ಅನುವಾದ - ಅಥವಾ ಅಂತರಾದ್ಯಧಿಕರಣಗಳಲ್ಲಿ ಆಯಾ ಲಿಂಗಗಳಿಂದ ವಿಷ್ಣುಪರತ್ವವನ್ನಷ್ಟೇ ಸಮರ್ಥಿಸಿದ್ದಾರೆ ಹೊರತಾಗಿ, ಇಂದ್ರಾದಿ ಶಬ್ದಗಳ ಮುಖ್ಯಪ್ರತಿಪಾದ್ಯತ್ವವನ್ನು ವಿಷ್ಣುವಿನಲ್ಲಿ ಸಮರ್ಥಿಸಿಲ್ಲ.

ತಸ್ಮಾನ್ಮುಖ್ಯಾರ್ಥತಾ ವಿಷ್ಣೋರಿತಿ ಕೃತ್ವಾ ಹೃದಿ ಪ್ರಭುಃ ।
ಸಮನ್ವಯಂ ಸಾಧಯತಿ ...... ॥

ಎಂಬ ಅನುವ್ಯಾಖ್ಯಾನದಲ್ಲಿ ಮುಖ್ಯತ್ವವನ್ನು ಹೇಳಿದ್ದು, ಮತ್ತು ಆಕಾಶಾದಿಪ್ರವೃತ್ತಿನಿಮಿತ್ತಕ್ಕೆ ಭಗವದಧೀನತ್ವವನ್ನು ಹೇಳಿದ್ದು, ಮೂರುಪಾದಗಳು ಮುಗಿದಮೇಲೆ ''ತದಧೀನತ್ವಾತ್'' ಎಂಬ ಸೂತ್ರದಲ್ಲಿ ನಿರೂಪಿಸುವ ಸಕಲಶಬ್ದಗಳಿಗೆ ಭಗವತ್ಪರತ್ವವನ್ನು ಸಮರ್ಥಿಸುವುದಕ್ಕಾಗಿ, ಅಂದರೆ ನಾಲ್ಕನೇ ಪಾದದಲ್ಲಿ ಬರುವ ''ತದಧೀನತ್ವಾತ್'' ಎಂಬ ಸೂತ್ರದ ಅಭಿಪ್ರಾಯವನ್ನಿಟ್ಟುಕೊಂಡು ಇಲ್ಲಿ ಮುಖ್ಯತ್ವವನ್ನು ಹೇಳಿದ್ದಾರೆ. ಆದ್ದರಿಂದಲೇ 'ಹೃದಿ ಕೃತ್ವಾ' ಎಂಬ ಪ್ರಯೋಗವನ್ನು ಕಾಣಬಹುದು.

ಈಕ್ಷತ್ಯಧಿಕರಣದಲ್ಲಿ ಭಗವಂತನಿಗೆ ಶಬ್ದವಾಚ್ಯತ್ವವನ್ನು ಹೇಳಿದ್ದೂ ಸಹ ಮುಂದಿನ ''ತದಧೀನತ್ವಾತ್'' ಎಂಬ ನ್ಯಾಯಕ್ಕೆ ಉಪಯೋಗವಾಗುವುದಕ್ಕೆ ಮಾತ್ರ ತಿಳಿಯಬೇಕು. ಮತ್ತು ಟೀಕೆಯ ಪ್ರತಿಯೊಂದು ಅಧಿಕರಣಗಳಲ್ಲಿಯೂ ಆಯಾ ಶಬ್ದಗಳ ವಾಚ್ಯತ್ವವನ್ನು ಹೇಳಿದ್ದು ಮುಂದಿನ ನ್ಯಾಯಕ್ಕೆ ಪೂರಕವಾಗಿ ಹೊರತು ಈಗಾಗಲೇ ನಿರ್ಣಯವಾಗಿದೆ ಎಂಬ ಅಭಿಪ್ರಾಯದಿಂದಲ್ಲ.

ಆಯಾ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಗುಣಗಳು ಲಾಭವಾಗಬೇಕೆಂದರೆ ವಕ್ಷ್ಯಮಾಣನ್ಯಾಯದ ಅಪೇಕ್ಷೆಯಿರುತ್ತದೆ. ಆದರೆ ಆಯಾ ಪ್ರಕರಣದಲ್ಲಿರುವ ಗುಣಗಳಷ್ಟೇ ತಿಳಿಯಬೇಕೆಂದರೆ ಹಿಂದಿನ ಅಧಿಕರಣದ ಮೇಲೆ ಬರುವ ಆಕ್ಷೇಪವನ್ನು ನಿರಾಕರಿಸಿದರೆ ಸಾಕು. ಆದ್ದರಿಂದ ಪೂರ್ವಾಧಿಕರಣದ ಆಕ್ಷೇಪ ಹಾಗೂ ಸಮಾಧಾನ ಮಾಡುವುದು ಆಯಾ ಅಧಿಕರಣಗಳಿಂದಷ್ಟೇ ಸಾಧ್ಯವಾಗುತ್ತದೆ. ಈ ಪ್ರಯೋಜನವು 'ತದಧೀನತ್ವ' ಸೂತ್ರದಿಂದ ದೊರೆಯುವುದಿಲ್ಲ. ಆದ್ದರಿಂದ ಆದಿತ್ಯಾದಿಶಬ್ದಗಳಿಗೆ ವಿಷ್ಣುವಿನಲ್ಲಿ ಮುಖ್ಯಪ್ರತಿಪಾದ್ಯತ್ವವನ್ನು ಅಂಗೀಕರಿಸದ ಕಾರಣ ಪೂರ್ವಪಕ್ಷವು ಹುಟ್ಟಬಹುದೆಂದು ನ್ಯಾಯವಿವರಣದ ಅಭಿಪ್ರಾಯ.

ಸರ್ವಗತತ್ವಾಧಿಕರಣ (೧-೨-೧)

**प्रकाशः –**

**न्यायविवरणे लिङ्गेन श्रुत्युज्जीवनं न स्पष्टं, प्रत्युत श्रुतीनामेव लिङ्गसमकक्षतया प्राबल्यं प्रतीयते । अतस्तत्स्वारस्यानुरोधेन भाष्यादौ लिङ्गांशोक्तेर्भावं विवक्षुः पक्षद्वयमाह –**

**यद्वेत्यादिना । विष्णुपरतैवेति ।। तस्या अपि समन्वयरूपत्वात् । इह तु तत्परत्वं नास्ति, तल्लिङ्गाभावादिति भावः ।**

ವಿವರಣೆ - ನ್ಯಾಯವಿವರಣದಲ್ಲಿ ಲಿಂಗದಿಂದ ಶ್ರುತಿಯು ಉಜ್ಜೀವನವಾಗುತ್ತದೆಂಬ ವಿಚಾರವು ಸ್ಪಷ್ಟವಾಗಿ ತಿಳಿಯುವುದಿಲ್ಲ. ಹೊರತಾಗಿ ಲಿಂಗಗಳಿಗೆ ಸಮಾನವಾದ ಬಲವನ್ನೇ ಶ್ರುತಿಗೆ ಹೇಳಿದಂತೆ ಕಾಣಿಸುತ್ತದೆಂದು ನ್ಯಾಯವಿವರಣದ ಮಾತಿನ ಸ್ವಾರಸ್ಯವನ್ನು ತಿಳಿಸಬೇಕು. ಮತ್ತು ಭಾಷ್ಯ ಟೀಕೆ ಮೊದಲಾದೆಡೆ ವಿಷಯವಾಕ್ಯದಲ್ಲಿ ಲಿಂಗವನ್ನು ತಿಳಿಸುವ ಅಂಶವನ್ನು ತಿಳಿಸಿದ್ದೂ ಸಹ ಅತ್ಯಂತ ಅರ್ಥಪೂರ್ಣವಾಗಿದೆಯೆಂದು ತೋರಿಸುವುದಕ್ಕಾಗಿ 'ಯದ್ವಾ' ಇತ್ಯಾದಿಯಾಗಿ ಎರಡು ಪಕ್ಷಗಳನ್ನು ಹೇಳುತ್ತಿದ್ದಾರೆ.

ಇಲ್ಲಿ 'ವಿಷ್ಣುಪರತೈವ' ಎಂಬ ಗ್ರಂಥಕ್ಕೆ ಹೀಗರ್ಥ - ಇಂದ್ರಾದಿ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲು ವಿಷ್ಣುಲಿಂಗಗಳು ಅಲ್ಲಿ ಕೇಳಿಸುತ್ತಿವೆ. ಆದ್ದರಿಂದ ವಿಷ್ಣು ಇಂದ್ರಾದಿಪದಗಳಿಂದ ಪ್ರತಿಪಾದ್ಯನಾಗುತ್ತಾನೆ. ಆದರೆ ಇಲ್ಲಿ ವಿಷ್ಣುಲಿಂಗಗಳಿಲ್ಲದ ಕಾರಣ ಆದಿತ್ಯಾದಿಶಬ್ದಗಳಿಂದ ವಿಷ್ಣು ಪ್ರತಿಪಾದ್ಯನಾಗುವುದಿಲ್ಲವೆಂದು ತಿಳಿಯಬೇಕು.

**प्रकाशः –** नन्वेवमानन्दमयाधिकरणान्ते,

अतो नारायणो देवो निश्शेषगुणवाचकैः ।
गुणिसामान्यवचनैरपि मुख्यतयोदितः ।।
अध्यात्मगैश्च प्राणाद्यैस्तथैव ह्यधिभूतगैः ।
अन्नादिशब्दैर्भगवानेको मुख्यतयोदितः ।।

इत्युपक्रम्य,

शब्दप्रवृत्तिहेतूनां तस्मिन् मुख्यसमन्वयात् ।
अन्यार्थेष्वल्पता हेतोस्तन्निमित्तत्वतस्तथा ।।

इत्यादिना भगवति विद्वद्रूढिमहायोगावभिधाय, ''तस्मात्'' इति श्लोके 'तस्मात्' महायोगविद्वद्रूढिसत्त्वात्सर्वशब्दमुख्यार्थता विष्णोरुपपन्नेति 'मुख्यत्वोक्तो-

स्तन्निमित्तत्वतः' इत्यादिनाऽन्यगतप्रवृत्तिनिमित्तस्य भगवदधीनत्वोक्तेश्च, ईक्षत्यधिकरणे वक्ष्यमाणसमन्वयोपयोगितया वाच्यत्वोक्तेश्च टीकायां "तस्मादशेषाधिदैवगतशब्दवाच्यो हरिः" इत्यादिना सर्वत्र तत्तच्छब्दवाच्यत्वोपसंहारात्तद्विरोध इत्यतः, सर्वस्य गतिमाह – तस्मादिति ॥

ಇಂದ್ರಾದಿಶಬ್ದಗಳಿಂದ ಭಗವಂತನು ಮುಖ್ಯವಾಗಿ ವಾಚ್ಯನಾಗಿದ್ದಾನೆಂದು ಇದುವರೆಗೂ ಹೇಳಿಯೇ ಇಲ್ಲವೆಂದು ಹೇಳಿದಿರಿ. ಹಾಗಾದರೆ ಆನಂದಮಯಾಧಿಕರಣದ ಕೊನೆಯಲ್ಲಿ ಹೇಳಿದ ಈ ಮಾತುಗಳು ಅಸಂಗತವಾಗುತ್ತವಲ್ಲವೇ? ಆನಂದಯಮಯಾಧಿಕರಣದ ಮಾತು ಹೀಗಿದೆ -

ಅತೋ ನಾರಾಯಣೋ ದೇವೋ ನಿಶ್ಶೇಷಗುಣವಾಚಕೈಃ।
ಗುಣಸಾಮಾನ್ಯವಚನೈರಪಿ ಮುಖ್ಯತಯೋದಿತಃ॥

ಅಧ್ಯಾತ್ಮಗೈಶ್ಚ ಪ್ರಾಣಾದ್ಯೈಸ್ತಥೈವ ಹ್ಯಧಿಭೂತಗೈಃ।
ಅನ್ನಾದಿಶಬ್ದೈರ್ಭಗವಾನೇಕೋ ಮುಖ್ಯತಯೋದಿತಃ॥

ಶಬ್ದಪ್ರವೃತ್ತಿಹೇತೂನಾಂ ತಸ್ಮಿನ್ ಮುಖ್ಯಸಮನ್ವಯಾತ್।
ಅನ್ಯಾರ್ಥೇಷ್ವಲ್ಪತಾ ಹೇತೋಸ್ತನ್ನಿಮಿತ್ತತ್ವತಸ್ತಥಾ॥

ಆದ್ದರಿಂದ ಕ್ರೀಡಾದಿಗುಣವಿಶಿಷ್ಟನಾದ ನಾರಾಯಣನು ಸಕಲಗುಣವಾಚಕಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಅಷ್ಟೇ ಅಲ್ಲದೇ ಗುಣಸಾಮಾನ್ಯವಾಚಕವಾದ ಶಬ್ದಗಳಿಂದಲೂ ಮುಖ್ಯವಾಗಿಯೇ ಪ್ರತಿಪಾದ್ಯನಾಗಿದ್ದಾನೆ. ಪ್ರಾಣ ಮೊದಲಾದ ಅಧ್ಯಾತ್ಮಶಬ್ದಗಳಿಂದ ಅನ್ನ ಮೊದಲಾದ ಆಧಿಭೌತಿಕಶಬ್ದಗಳಿಂದ ಮುಖ್ಯವಾಗಿ ಭಗವಂತನೇ ಪ್ರತಿಪಾದ್ಯನು. ಏಕೆಂದರೆ ಆಯಾ ಶಬ್ದಗಳ ಪ್ರವೃತ್ತಿನಿಮಿತ್ತವು ಭಗವಂತನಲ್ಲಿಯೇ ಮುಖ್ಯವಾಗಿರುತ್ತವೆ. ಉಳಿದ ಪದಾರ್ಥಗಳಲ್ಲಿ ಪ್ರವೃತ್ತಿನಿಮಿತ್ತಗಳು ಅಲ್ಪವಾಗಿರುವುದರಿಂದ ಅಮುಖ್ಯವಾಗಿ ಪ್ರತಿಪಾದಿತವಾಗಿವೆ. ಮತ್ತು ಭಗವದಧೀನವಾಗಿವೆ. ಇತ್ಯಾದಿಯಾಗಿ ಭಗವಂತನಲ್ಲಿ ವಿದ್ವದ್ರೂಢಿ ಹಾಗೂ ಮಹಾಯೋಗಗಳನ್ನು ಹೇಳಿ 'ತಸ್ಮಾದ್' ಇತ್ಯಾದಿ ಶ್ಲೋಕದಿಂದ ಮಹಾಯೋಗ ಹಾಗೂ ವಿದ್ವದ್ರೂಢಿಗಳಿರುವುದರಿಂದ ಸಕಲ ಶಬ್ದಗಳ ಮುಖ್ಯಾರ್ಥನು ವಿಷ್ಣುವೇ ಆಗಿದ್ದಾನೆಂದು ಮುಖ್ಯತ್ವವನ್ನೇ ಹೇಳಿದ್ದಾರೆ. ಅಷ್ಟೇ ಅಲ್ಲದೆ ಉಳಿದ ಪದಾರ್ಥಗಳಲ್ಲಿರುವ ಪ್ರವೃತ್ತಿನಿಮಿತ್ತಗಳಿಗೆ ಅಸ್ವಾತಂತ್ರ್ಯವನ್ನು ಹೇಳಿದ್ದಾರೆ. ಮತ್ತು ಈಕ್ಷತ್ಯಧಿಕರಣದಲ್ಲಿ ಮುಂದಿನ ಅಧಿಕರಣಗಳಲ್ಲಿ ಮಾಡುವ ಸಮನ್ವಯಕ್ಕೆ ಉಪಯೋಗಿಯಾಗಿ ವಾಚ್ಯತ್ವವನ್ನೂ ಸಹ ಹೇಳಿದ್ದಾರೆ. ಟೀಕೆಯಲ್ಲಿಯೂ 'ತಸ್ಮಾದಶೇಷಾಧಿದೈವಗತಶಬ್ದವಾಚ್ಯೋ ಹರಿಃ' ಆದ್ದರಿಂದ ಎಲ್ಲಾ ಆಧಿದೈವಿಕ ಶಬ್ದಗಳಿಂದ ಭಗವಂತನೇ ವಾಚ್ಯನಾಗಿದ್ದಾನೆಂದು ತಿಳಿಸಿದ್ದಾರೆ. ಮತ್ತು ಪ್ರತಿಯೊಂದು ಅಧಿಕರಣಗಳಲ್ಲಿಯೂ ಆಯಾ ಶಬ್ದಗಳ ವಾಚ್ಯತ್ವವನ್ನು ಪರಮಾತ್ಮನಲ್ಲಿ ಉಪಸಂಹಾರ ಮಾಡಿದ್ದಾರೆ. ಈಗ ತದಧೀನತ್ವ ಸೂತ್ರದಲ್ಲಿಯೇ ಈ ಎಲ್ಲಾ ವಿಷಯಗಳು ನಿರ್ಣಯವಾಗುತ್ತವೆಂದು ಹೇಳುವುದಾದರೆ, ಈ ಎಲ್ಲಾ ವಿಧ ಮಾತುಗಳ ವಿರೋಧ ಬರುತ್ತದಲ್ಲವೇ? ಎಂಬ ಶಂಕೆಯನ್ನು

ಪರಿಹರಿಸುವುದಕ್ಕಾಗಿ ಮತ್ತು ಈ ಎಲ್ಲಾ ಮಾತುಗಳ ನಿಜವಾದ ಅಭಿಪ್ರಾಯವನ್ನು ಸ್ಪಷ್ಟಪಡಿಸುವುದಕ್ಕಾಗಿ 'ತಸ್ಮಾತ್' ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः – उक्तिश्चेति** ।। 'अनुव्याख्याने' इत्यन्वेति । 'तदभिप्राया' इत्यन्वयः। पादत्रये नानावाक्यगतभगवल्लिङ्गैस्तत्तद्वाक्यगताधिदैविकादिसर्वशब्दानां भगवत्परत्वे' सर्वस्य तदधीनत्वे च निर्णीते सति, किं तेषां तत्परत्वं ऐन्द्र्या गार्हपत्यपरत्वस्येवामुख्यवृत्त्योत मुख्यवृत्त्येति, तथा त्रिपाद्यां तत्तच्छब्दप्रवृत्तिहेतोरीशाधीनत्वोक्तेः किं फलमिति च शङ्कायाः पादत्रयानन्तरमेवोदयात्तच्छङ्कानिवृत्त्यर्थं त्रिपाद्यनन्तरं प्रवृत्ते ''तदधीनत्वात्'' इत्यव्यक्तनयगुणसूत्रे स्वातन्त्र्यस्य शब्दवृत्तौ मुख्यनिमित्तत्वात्सर्वस्वतन्त्रे भगवति अव्यक्तादिशब्दोपलक्षितसर्वशब्दमुख्यवृत्तिरिति वक्ष्यमाणत्वात्तदभिप्रायेणात्र मुख्यत्वाद्युक्तित्यर्थः । 'तदुपयोगितया' वक्ष्यमाणमुख्यत्वोपयोगितया । अन्यथा ब्रह्मण एव वाच्यत्वे शब्दानां तत्र मुख्यत्वोक्तिरसङ्गता स्यादिति भावः ।

ननु शब्दप्रवृत्तिनिमित्तस्य गुणस्याव्यक्तनयेनैव लब्धत्वात्किं पूर्वतनैरधिकरणैरित्यत आह – **तत्तच्छब्दप्रवृत्तीति** । अवयवशक्तिलभ्यपरमैश्वर्यादिमत्त्वरूपगुणलाभस्येत्यर्थः । ननु तत्र त्रिपाद्यं सिद्धं स्वातन्त्र्यं शब्दप्रवृत्तौ निमित्तं भवति नवेति विशये, नेति प्राप्ते, भवतीति सिद्धान्तयिष्यते, नतु तत्तच्छब्दप्रवृत्तिनिमित्तमपि भगवद्गतमिति । तथा च कथमेवमुक्तिरिति चेत् सत्यं, ''सूक्ष्मं तु तदर्हत्वात्'' इत्यनेनोपलक्षणतयाऽशेषशब्दप्रवृत्तिहेतूनामपि ईशगतत्वव्युत्पादनमस्तीत्याशयात् । **यद्वा** – 'तत्तच्छब्दप्रवृत्तिनिमित्तगुणलाभस्य' इत्यस्य स्वातन्त्र्यरूपगुणलाभस्येत्येवार्थः । स्वातन्त्र्यमपि ''तदधीनत्वात्'' इत्यत्रैव वक्ष्यतीति भावः ।

ಅನುವ್ಯಾಖ್ಯಾನದಲ್ಲಿ 'ಉಕ್ತಿಃ' ಎಂಬುದನ್ನು ಅನ್ವಯ ಮಾಡಬೇಕು. ಒಟ್ಟು ಅಭಿಪ್ರಾಯ - ಮೂರು ಪಾದಗಳಲ್ಲಿ ಅನೇಕ ಶ್ರುತಿವಾಕ್ಯಗಳಲ್ಲಿರುವ ಭಗವಂತನ ಲಿಂಗಗಳಿಂದ ಆಯಾ ಶ್ರುತಿಗಳಲ್ಲಿರುವ ಆಧಿದೈವಿಕ, ಆಧಿಭೌತಿಕ ಮೊದಲಾದ ಸಕಲಶಬ್ದಗಳ ಸಮನ್ವಯವನ್ನು ಭಗವಂತನಲ್ಲೇ ಮಾಡಲಾಗಿದೆ. ಮತ್ತು ಸಕಲ ಪದಾರ್ಥಗಳು ಅವನ ಅಧೀನವೆಂದು ನಿರ್ಣಯಿಸಲಾಗಿದೆ. ಹೀಗೆ ನಿರ್ಣಯವಾದ ಮೇಲೆ ಆ ಎಲ್ಲ ಶಬ್ದಗಳು 'ಐಂದ್ರೀ' ಶಬ್ದವು 'ಗಾರ್ಹಪತ್ಯ' ಎಂಬರ್ಥದಲ್ಲಿ ಅಮುಖ್ಯವಾಗಿರುವಂತೆ ಅಮುಖ್ಯ ಪ್ರತಿಪಾದಕವಾಗುತ್ತವೋ, ಅಥವಾ ಮುಖ್ಯಪ್ರತಿಪಾದಕವಾಗುತ್ತವೋ? ಎಂಬ ಸಂಶಯ ಬರುತ್ತದೆ. ಮತ್ತು

ಮೂರು ಪಾದಗಳಲ್ಲಿ ಆಯಾ ಶಬ್ದಗಳ ಪ್ರವೃತ್ತಿನಿಮಿತ್ತಕ್ಕೆ ಈಶಾಧೀನತ್ವವನ್ನು ಹೇಳಿದ್ದರಿಂದ ಏನು ಪ್ರಯೋಜನ ? ಎಂಬ ಶಂಕೆಯೂ ಬರುತ್ತದೆ. ಈ ಬಗೆಯ ಸಂಶಯವು ಮೂರು ಪಾದಗಳನ್ನು ಚಿಂತನೆ ಮಾಡಿದ ಮೇಲಷ್ಟೇ ಬರುತ್ತದೆ. ಆವಾಗ ಅದರ ಪರಿಹಾರಕ್ಕಾಗಿ ಮೂರು ಪಾದಗಳ ಅನಂತರ 'ತದಧೀನತ್ವಾತ್' ಎಂಬ ಸೂತ್ರವು ಹೊರಟಿದೆ. ಈ ಸೂತ್ರವು ಅವ್ಯಕ್ತಾಧಿಕರಣದ ಗುಣಸೂತ್ರವೆನಿಸಿದೆ. ಇದರಲ್ಲಿ ಸ್ವಾತಂತ್ರ್ಯವು ಶಬ್ದಗಳ ಪ್ರವೃತ್ತಿಗೆ ಮುಖ್ಯಕಾರಣವಾಗಿದೆಯೆಂದು ಸಮರ್ಥಿಸಲಾಗಿದೆ. ಮತ್ತು ಸರ್ವಸ್ವತಂತ್ರನಾದ ಭಗವಂತನಲ್ಲಿ ಅವ್ಯಕ್ತ ಶಬ್ದದಿಂದ ಉಪಲಕ್ಷಿತವಾದ ಸಕಲ ಶಬ್ದಗಳ ಮುಖ್ಯವಾದ ಸಮನ್ವಯವನ್ನು ಹೇಳುತ್ತಿದೆ. ಈ ಅಭಿಪ್ರಾಯದಿಂದ ಆನಂದಮಯಾಧಿಕರಣ ಮೊದಲಾದೆಡೆ ಅಮುಖ್ಯತ್ವಾದಿಗಳನ್ನು ಹೇಳಿದ್ದಾರೆ. ಅಂದರೆ ನಾಲ್ಕನೇ ಪಾದದಲ್ಲಿ ಹೇಳುವ ವಿಚಾರಕ್ಕೆ ಉಪಯೋಗಿಯಾಗಿ ಈ ವಿಚಾರಗಳು ಅಲ್ಲಲ್ಲಿ ಹೇಳಲ್ಪಟ್ಟಿವೆ.

ಹೀಗೆ ಹೇಳದಿದ್ದರೆ ಬ್ರಹ್ಮನು ಅವಾಚ್ಯನೆಂದಾಗಿ ಶಬ್ದಗಳ ಮುಖ್ಯಪ್ರತಿಪಾದ್ಯತ್ವವನ್ನೇ ಸಮರ್ಥಿಸಲು ಸಾಧ್ಯವಾಗದಿರಬೇಕಾದೀತು.

ಹಾಗಾದರೆ ಶಬ್ದಪ್ರವೃತ್ತಿನಿಮಿತ್ತವಾದ ಗುಣಗಳೆಲ್ಲವೂ ಅವ್ಯಕ್ತಾಧಿಕರಣದಿಂದಲೇ ಸಿದ್ಧವಾಗುವಾಗ ಉಳಿದ ಅಧಿಕರಣಗಳೆಲ್ಲವೂ ವ್ಯರ್ಥವಲ್ಲವೇ ? ಎಂಬ ಪ್ರಶ್ನೆಗೆ 'ತತ್ತಚ್ಛಬ್ದಪ್ರವೃತ್ತಿ' ಇತ್ಯಾದಿವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಂದರೆ ಅವಯವಶಕ್ತಿಯಿಂದ ದೊರೆಯುವ ಪರಮೈಶ್ವರ್ಯವೆಂಬ ಗುಣಲಾಭಕ್ಕಾಗಿ ಎಂದರ್ಥ.

ಮೂರು ಪಾದಗಳಲ್ಲಿ ಸ್ವಾತಂತ್ರ್ಯವೆಂಬುದು ಶಬ್ದಪ್ರವೃತ್ತಿನಿಮಿತ್ತವೆಂದು ಸಿದ್ಧವಾಗಿದೆಯೋ ಇಲ್ಲವೋ? ಎಂಬ ಸಂಶಯವು ಬಂದರೆ ಸ್ವಾತಂತ್ರ್ಯವು ಶಬ್ದಪ್ರವೃತ್ತಿನಿಮಿತ್ತವಾಗಿದೆಯೆಂದು ಅವ್ಯಕ್ತಾಧಿಕರಣದಲ್ಲಿ ಸಿದ್ಧಾಂತ ಮಾಡುತ್ತಾರೆ. ಹೊರತು ಆಯಾ ಶಬ್ದಗಳ ಪ್ರವೃತ್ತಿನಿಮಿತ್ತವು ಅಥವಾ ಭಗವಂತನಲ್ಲಿವೆಯೆಂದು ಸಿದ್ಧಾಂತ ಮಾಡಿರುವುದಿಲ್ಲ. ಹೀಗಿರುವಾಗ ನಿಮ್ಮ ಈ ಮಾತು ಹೇಗೆ ಸರಿಹೊಂದುತ್ತದೆ?

ಹೌದು, ಆದರೆ 'ಸೂಕ್ಷ್ಮಂ ತು ತದರ್ಹತ್ವಾತ್' ಎಂಬ ಸೂತ್ರದಲ್ಲಿ ಉಪಲಕ್ಷಣಯಾ ಸಕಲಶಬ್ದಗಳ ಪ್ರವೃತ್ತಿನಿಮಿತ್ತವನ್ನೂ ಸಹ ಈಶಗತವೆಂದು ಸಮರ್ಥಿಸಿದ್ದಾರೆ.

ಅಥವಾ 'ತತ್ತಚ್ಛಬ್ದಪ್ರವೃತ್ತಿನಿಮಿತ್ತಗುಣಲಾಭಸ್ಯ' ಎಂಬುದಕ್ಕೆ ಸ್ವಾತಂತ್ರ್ಯವೆಂಬ ಗುಣಲಾಭಕ್ಕಾಗಿ ಎಂದೇ ಅರ್ಥ. ಸ್ವಾತಂತ್ರ್ಯವಾದರೂ ಸಹ 'ತದಧೀನಾತ್ವತ್' ಎಂಬ ಸೂತ್ರದಲ್ಲಿಯೇ ಪ್ರವೃತ್ತಿನಿಮಿತ್ತವೆಂದು ಸಮರ್ಥಿಸುತ್ತಾರೆಂದು ತಿಳಿಯಬೇಕು.

**गुरुराजीयम्** – एवमधिकाशङ्कापक्षे पूर्वपक्षोदयं किञ्चिदुद्घाट्य प्रागुक्तयथा-भाष्यपूर्वपक्षसिद्धान्तमवलम्ब्याह – **यद्वेति** ।।

अथवा ननु तथापि किं श्रुतिमात्रेण पूर्वः पक्ष उत लिङ्गैर्वा । नाद्यः । अन्तरधिकरणन्यायेन श्रुतिमात्रस्य भगवत्परत्वेन पूर्वपक्षासाधकत्वस्योक्तत्वात् । लिङ्गानामप्यन्तर्यामिणि सावकाशत्वान्न द्वितीयोपीत्यरुच्या पक्षान्तरमाह – **यद्वेति** ।।

ननु यद्यन्तराद्यधिकरणेष्विन्द्रादिशब्दानां भगवति मुख्यत्वं नाभिप्रेतं तर्ह्यनुव्याख्यानविरोधस्स्यात् । तत्रेन्द्रादिशब्दानां भगवति मुख्यत्वस्याभिधानादित्यत आह – **तस्मादिति** ।। अत्रैवानुव्याख्यानीयं ज्ञापकमाह – **अत एवेति** ।। अन्यथा हृदीत्यस्य वैयर्थ्यं स्यादित्यर्थः ।

ननु समन्वयसूत्रे सर्वेषां शब्दानां मुख्यवृत्त्या भगवत्परत्व उक्ते अवाच्यत्वात्कथं तत्र शब्दानां मुख्यत्वमित्याशङ्का ईक्षतेरित्यनेन वाच्यत्वोपपादनेन परिहृतेति शब्दानां मुख्यार्थत्वमेवाभ्युपेयम् । अन्यथा ईक्षत्यधिकरणे वाच्यत्वोपपादनमयुक्तं स्यादित्यत आह – **ईक्षत्यधिकरण इति** ।। तदुपयोगितया तदधीनत्वादित्यत्रोच्यमानमुख्यतोपयोगितयेत्यर्थः ।

ननु तथापि प्रत्यधिकरणं टीकायामाकाशशब्दवाच्यत्वसमर्थनादित्युपक्रमे तस्मादाकाशोपलक्षितसकलशब्दवाच्यमित्युपसंहारटीकायां च वाच्यत्वोक्तेः का गतिरित्यत आह – **टीकायामिति** ।। उक्त एवाभिप्रायः ।

नन्वेवं तदधीनत्वादित्यधिकरणसिद्धान्तेनैव सकलपूर्वपक्षाणां निराससम्भवेनाधिकरणान्तरस्य वैयर्थ्यमित्यत आह – **तत्तदिति** ।।




ಆಯಾ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಗುಣಗಳು ಲಾಭವಾಗಬೇಕೆಂದರೆ ವಕ್ಷ್ಯಮಾಣನ್ಯಾಯದ ಅಪೇಕ್ಷೆಯಿರುತ್ತದೆ. ಆದರೆ ಆಯಾ ಪ್ರಕರಣದಲ್ಲಿರುವ ಗುಣಗಳಷ್ಟೇ ತಿಳಿಯಬೇಕೆಂದರೆ ಹಿಂದಿನ ಅಧಿಕರಣದ ಮೇಲೆ ಬರುವ ಆಕ್ಷೇಪವನ್ನು ನಿರಾಕರಿಸಿದರೆ ಸಾಕು. ಆದ್ದರಿಂದ ಪೂರ್ವಾಧಿಕರಣದ ಆಕ್ಷೇಪ ಹಾಗೂ ಸಮಾಧಾನ ಮಾಡುವುದು ಆಯಾ ಅಧಿಕರಣಗಳಿಂದಷ್ಟೇ ಸಾಧ್ಯವಾಗುತ್ತದೆ. ಈ ಪ್ರಯೋಜನವು 'ತದಧೀನತ್ವ' ಸೂತ್ರದಿಂದ ದೊರೆಯುವುದಿಲ್ಲ. ಆದ್ದರಿಂದ ಆದಿತ್ಯಾದಿಶಬ್ದಗಳಿಗೆ ವಿಷ್ಣುವಿನಲ್ಲಿ ಮುಖ್ಯಪ್ರತಿಪಾದ್ಯತ್ವವನ್ನು ಅಂಗೀಕರಿಸದ ಕಾರಣ ಪೂರ್ವಪಕ್ಷವು ಹುಟ್ಟಬಹುದು

## ಒಬ್ಬ ದೇವತೆಯ ಪರ್ಯಾಯಶಬ್ದಗಳ ಸಮನ್ವಯವನ್ನು ಬೇರೆ ಬೇರೆ ಅಧಿಕರಣಗಳಲ್ಲಿ ಮಾಡಬಹುದು

### तात्पर्यचन्द्रिका

**अत एवात्र टीकादावादित्यशब्दस्य न विष्णुपरता, तल्लिङ्गाभावात्, प्रत्युत आदित्यलिङ्गसद्भावादिति दर्शयितुं तल्लिङ्गप्रतिपादकांशोऽप्युपात्तः । एवं चोत्तरत्रापि अ(आ)दित्यादिशब्दैः पूर्वत्रापि प्राणादिशब्दैः पूर्वपक्षोदयस्सुलभः । अन्यथा अन्यश्रुतीनामन्यलिङ्गानां च तदधीनत्वन्यायेन ब्रह्मणि मुख्यत्वस्य सिद्धत्वेनान्यश्रुत्याद्याश्रयणेन पूर्वपक्षः क्वापि नोदीयात् ।**

**यद्वा ''अन्तः'' इत्यत्रेन्द्रादिशब्दानां विष्णौ मुख्यत्वोक्तिरस्तु, तथाऽप्यादित्यशब्दो नान्तरधिकरणविषयवाक्ये श्रुतः, नापि तन्न्यायविषयः, अत्रेव तत्र निरवकाशलिङ्गभावात् ।**

**अत एव टीकादौ तदविषयतां दर्शयितुं देवतालिङ्गप्रतिपादकांशोऽप्युदाहृतः । पर्यायाणामपि तदधिकरणन्यायविषयाणामेव तेन समन्वयसिद्धिः, नतु तदविषयाणम् । उत्तराधिकरणटीकाऽप्यदितिसजातीयेन्द्रादि शब्दसमन्वयस्योक्तत्वाभिप्राया । अनुव्याख्याने सर्वशब्दोऽपि न्यायविषयसर्वपरः । तत्राधिदैविकत्वाद्युपाध्युक्तिरपि अधिकरणान्तरविषयाधिभौतिकादिव्यावृत्त्यर्था, नतु सर्वाधिदैविकसङ्ग्रहार्था । तस्माद्युक्तः पूर्वपक्षः ।**

ಅನುವಾದ - ಆದ್ದರಿಂದಲೇ ಈ ಅಧಿಕರಣದ ಟೀಕೆ ಭಾಷ್ಯ ಮೊದಲಾದವುಗಳಲ್ಲಿ ಆದಿತ್ಯ ಶಬ್ದಕ್ಕೆ ವಿಷ್ಣುಪರತ್ವವನ್ನು ಹೇಳಿರುವುದಿಲ್ಲ. ಏಕೆಂದರೆ ವಿಷ್ಣುಲಿಂಗವೇ ಇರುವುದಿಲ್ಲ. ಹೊರತಾಗಿ ಆದಿತ್ಯಪ್ರಾಪಕವಾದ ಲಿಂಗವೇ ಇರುತ್ತದೆಂಬುದನ್ನು ತಿಳಿಸುವುದಕ್ಕಾಗಿ ಆದಿತ್ಯಲಿಂಗಪ್ರತಿಪಾದಕವಾದ ಅಂಶವನ್ನೂ ಸಹ ಹೇಳಿದ್ದಾರೆ. ಹೀಗೆ ವಿವಕ್ಷಿಸಿದ್ದರಿಂದ ಮುಂದಿನ ಅತ್ತೃತ್ವಾಧಿಕರಣದಲ್ಲಿಯೂ ಅದಿತಿಶಬ್ದಗಳಿಂದ ಮತ್ತು ಹಿಂದಿನ ಪ್ರಾಣಾಧಿಕರಣದಲ್ಲಿ ಪ್ರಾಣಾದಿಶಬ್ದಗಳಿಂದ ಪೂರ್ವಪಕ್ಷದ ಉದಯವು ಸುಲಭವಾಗುತ್ತದೆ. ಇಲ್ಲದಿದ್ದಲ್ಲಿ ಶ್ರುತಿಗಳು ಹಾಗೂ ಅನ್ಯಲಿಂಗಗಳು ತದಧೀನತ್ವನ್ಯಾಯದಂತೆ ಬ್ರಹ್ಮನಲ್ಲಿ ಮುಖ್ಯವಾಗಿವೆಯೆಂದು ಈಗಾಗಲೇ ನಿರ್ಣಯವಾಗಿರುವುದರಿಂದ ಅನ್ಯಪ್ರಾಪಕಶ್ರುತ್ಯಾದಿಗಳನ್ನು ಆಶ್ರಯಿಸಿದ ಪೂರ್ವಪಕ್ಷ ಯಾವುದೇ ಅಧಿಕರಣದಲ್ಲಿಯೂ ಉದಯವಾಗದಿರಬೇಕಾದೀತು.

### ಸರ್ವಗತತ್ವಾಧಿಕರಣ (೧-೨-೧)

ಅಥವಾ ಹಿಂದಿನ ಅಂತರಧಿಕರಣದಲ್ಲಿ ಇಂದ್ರಾದಿಶಬ್ದಗಳು ವಿಷ್ಣುವಿನಲ್ಲೇ ಮುಖ್ಯವಾಗಿವೆಯೆಂದು ನಿರ್ಣಯಿಸಲಾಗಿದೆಯೆಂಬ ವಿಚಾರವನ್ನು ಒಪ್ಪಿಕೊಳ್ಳೋಣ. ಆದರೂ ಸಹ ಆದಿತ್ಯಾದಿಶಬ್ದವು ಅಂತರಧಿಕರಣದ ವಿಷಯವಾಕ್ಯದಲ್ಲಿ ಕೇಳಿಸುತ್ತಿಲ್ಲ. ಮತ್ತು ಅಂತರಧಿಕರಣದ ನ್ಯಾಯಕ್ಕೆ ವಿಷಯವೂ ಆಗಿಲ್ಲ. ಈ ಅಧಿಕರಣದಲ್ಲಿ ನಿರವಕಾಶವಾದ ಆದಿತ್ಯಾದಿ ದೇವತಾಲಿಂಗಗಳಿದ್ದಂತೆ ಅಂತರಧಿಕರಣದ ವಿಷಯವಾಕ್ಯದಲ್ಲಿ ಅಂತಹ ದೇವತಾಲಿಂಗಗಳೂ ಸಹ ಇರುವುದಿಲ್ಲ. ಆದ್ದರಿಂದಲೇ ಟೀಕೆಯಲ್ಲಿ ಆದಿತ್ಯಾದಿ ಶಬ್ದಗಳು 'ಅಂತರಧಿಕರಣದ ನ್ಯಾಯಕ್ಕೆ ವಿಷಯವಾಗಿಲ್ಲವೆಂಬುದನ್ನು ತೋರಿಸುವುದಕ್ಕಾಗಿಯೇ ದೇವತಾಲಿಂಗಪ್ರತಿಪಾದಕವಾದ ಅಂಶವನ್ನೂ ಸಹ ಉದಾಹರಿಸಿದ್ದಾರೆ.

ವಸ್ತುತಃ ಒಬ್ಬ ದೇವತೆಯನ್ನೇ ಹೇಳುವ ಪರ್ಯಾಯ ಶಬ್ದಗಳ ಸಮನ್ವಯವನ್ನು ಬೇರೆ ಬೇರೆ ಅಧಿಕರಣಗಳಲ್ಲಿ ಮಾಡುತ್ತಿದ್ದಾರೆ. ಇದೇನು ತಪ್ಪಲ್ಲ ? ಏಕೆಂದರೆ ಪರ್ಯಾಯ ಶಬ್ದವಾಗಿದ್ದರೂ ಸಹ ಆಯಾ ಅಧಿಕರಣದ ನ್ಯಾಯಕ್ಕೆ ವಿಷಯವಾದದ್ದನ್ನು ಮಾತ್ರ ಆಯಾ ಅಧಿಕರಣದಲ್ಲಿ ಸಮನ್ವಯ ಮಾಡುತ್ತಾರೆ. ಹೊರತು ಆಯಾ ಅಧಿಕರಣದ ನ್ಯಾಯಕ್ಕೆ ವಿಷಯವಾಗದ ಶಬ್ದಸಮನ್ವಯವನ್ನು ಮಾಡುವುದಿಲ್ಲ.

ಹಾಗಾದರೆ ಮುಂದಿನ ಅತ್ತ್ರತ್ವಾಧಿಕರಣದ ಟೀಕೆಯಲ್ಲಿ "ದೇವತಾವಾಚಕ ಪದಗಳನ್ನು ಸಮನ್ವಯ ಮಾಡಿದ್ದಾಗಿದೆಯಲ್ಲವೇ ?" ಎಂದು ಪ್ರಶ್ನಿಸಿದ್ದಾರೆ. ಇದು ಹೇಗೆ ಕೂಡುತ್ತದೆ ? ಎಂಬ ಗೊಂದಲಕ್ಕೆ ಅವಕಾಶವಿಲ್ಲ. ಏಕೆಂದರೆ ಅದಿತಿ ಶಬ್ದಕ್ಕೆ ಸಜಾತೀಯವಾದ ಇಂದ್ರಾದಿಶಬ್ದಗಳ ಸಮನ್ವಯವೂ ಸಿದ್ಧವಾಗಿದೆ ಎಂಬ ಅಭಿಪ್ರಾಯದಿಂದಷ್ಟೇ ಟೀಕೆಯ ಮಾತು ಹೊರಟಿದೆ. ಅನುವ್ಯಾಖ್ಯಾನದಲ್ಲಿಯೂ ಸಹ ಸರ್ವಶಬ್ದದಿಂದ ಸಕಲ ದೇವತಾವಾಚಕ ಪದಗಳ ಸಮನ್ವಯಗಳನ್ನು ನಿರ್ಣಯಿಸಲಾಗಿದೆ ಎಂದು ತಿಳಿಯಬಾರದು. ಆಯಾ ಅಧಿಕರಣದ ನ್ಯಾಯಕ್ಕೆ ವಿಷಯವಾದ ಸಕಲಶಬ್ದಗಳ ಸಮನ್ವಯಗಳಷ್ಟೇ ನಿರ್ಣಯವಾಗಿದೆ ಎಂದರ್ಥವೇ ಹೊರತು. ಅಧಿಕರಣ ನ್ಯಾಯಕ್ಕೆ ವಿಷಯವಾಗದ ಶಬ್ದ ಸಮನ್ವಯವೂ ನಿರ್ಣಯವಾಗಿದೆ ಎಂದರ್ಥವಲ್ಲ.

ಹಾಗಾದರೆ ಅಂತರಧಿಕರಣದಲ್ಲಿ ಆಧಿದೈವಿಕತ್ವವೆಂಬ ಉಪಾಧಿಯನ್ನು ಹೇಳುವ ಮೂಲಕ ಸಕಲದೇವತಾವಾಚಕ ಪದಗಳ ಸಮನ್ವಯವನ್ನು ಮಾಡಿದ್ದಾರಲ್ಲವೇ ? ಎಂದು ಪ್ರಶ್ನಿಸಬಾರದು. ಆಧಿದೈವಿಕತ್ವ ಎಂಬ ಉಪಾಧಿಯನ್ನು ಹೇಳಿದ್ದು ಕೇವಲ ಆಧಿಭೌತಿಕಾದಿ ಶಬ್ದಗಳ ಸಮನ್ವಯವನ್ನು ಮಾಡುತ್ತಿಲ್ಲವೆಂಬ ವ್ಯಾವೃತ್ತಿಜ್ಞಾನಕ್ಕಾಗಿ ಮಾತ್ರ ಹೊರತು ಆಧಿದೈವಿಕವಾದ ಎಲ್ಲಾ ಶಬ್ದಗಳ ಸಂಗ್ರಹಕ್ಕಾಗಿ ಅಲ್ಲ. ಹಾಗಾಗಿ ಇಲ್ಲಿ ಸಮನ್ವಯ ಮಾಡುತ್ತಿರುವ ಆದಿತ್ಯಾದಿ ಶಬ್ದಗಳೂ ಅಂತರಧಿಕರಣದ ನ್ಯಾಯದಿಂದ ಗತಾರ್ಥವಾಗುವುದಿಲ್ಲ. ಆದ್ದರಿಂದ ಪೂರ್ವಪಕ್ಷವು ಯುಕ್ತವೇ ಆಗಿದೆ.

ಪರಿಪೂರ್ಣಚಂದ್ರಿಕಾ

**प्रकाशः –**

नन्वेवं भाष्यादौ "तस्यैतस्यासौ" इति लिङ्गभागोक्तिः किमर्थेत्यतः तदाशयमाह – **अत एवेति** । तन्न्यायाविषयत्वमेवाह – **अत्रेवेति** । नन्वेवमुत्तराधिकरण-टीकायामदितिश्रुतेः सावकाशत्वोक्तिरयुक्ता, तस्या अपि तद्विषयवाक्ये अश्रुतत्वात् । तन्न्यायाविषयत्वाच्च । अत एव 'अदितित्वलिङ्गात्' इति वक्ष्यतीत्यत आह – **उत्तरेति** । नन्वेवं "देवतान्तरगाः सर्वे" इत्युक्तिविरोध इत्यत आह – **अनुव्याख्यान इति** । नन्वेवं सङ्कोचे "देवतान्तरगाः" इत्यधिदैविकशब्दत्वं "अध्यात्मगैश्च प्राणाद्यैः" इत्यध्यात्मशब्दत्वमित्याद्युपाध्युक्तिरयुक्ता, सर्वसङ्ग्रहार्थत्वात्तस्य इत्यत आह – **तत्रेति** ।

ವಿವರಣೆ - ಹಾಗಾದರೆ ಭಾಷ್ಯ ಟೀಕೆ ಮೊದಲಾದವುಗಳಲ್ಲಿ "ತಸ್ಯೈತಸ್ಯಾಸೌ" ಎಂಬ ಲಿಂಗ ಭಾಗವನ್ನು ಏಕೆ ಹೇಳಿದ್ದಾರೆ ? ಎಂಬ ಪ್ರಶ್ನೆಗೆ ಉತ್ತರಿಸುವವರಾಗಿ ಭಾಷ್ಯಟೀಕೆಗಳ ಅಭಿಪ್ರಾಯವನ್ನು 'ಅತ ಏವ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಅಂತರಧಿಕರಣದ ನ್ಯಾಯಕ್ಕೆ ಆದಿತ್ಯಾದಿ ಶಬ್ದಗಳು ವಿಷಯವಾಗುವುದಿಲ್ಲವೆಂಬುದನ್ನು 'ಅತ್ರೇವ' ಎಂಬ ವಾಕ್ಯದಿಂದ ನಿರೂಪಿಸಿದ್ದಾರೆ.

ಪ್ರಶ್ನೆ - ಮುಂದಿನ ಅತ್ತೃತ್ವಾಧಿಕರಣದ ಟೀಕೆಯಲ್ಲಿ ಅದಿತಿಶ್ರುತಿಗೆ ಸಾವಕಾಶತ್ವವನ್ನು ಹೇಳಿದ್ದು ತಪ್ಪಲ್ಲವೇ? ಏಕೆಂದರೆ ಅದಿತಿಶಬ್ದವು ವಿಷಯವಾಕ್ಯದಲ್ಲಿ ಕೇಳಿಸುತ್ತಲೇ ಇಲ್ಲ. ಮತ್ತು ಆ ಅಧಿಕರಣದ ನ್ಯಾಯಕ್ಕೆ ವಿಷಯವೂ ಆಗಿಲ್ಲ ಆದ್ದರಿಂದಲೇ 'ಅದಿತಿತ್ವಲಿಂಗಾತ್' ಎಂದು ಹೇಳುತ್ತಾರಲ್ಲವೇ ?

ಉತ್ತರ - ಈ ಪ್ರಶ್ನೆಗೆ 'ಉತ್ತರಾಧಿಕರಣ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಅದಿತಿ' ಶಬ್ದವು ಈಗಾಗಲೇ ಸಮನ್ವಯವಾಗಿದೆ ಎಂಬ ಅಭಿಪ್ರಾಯವನ್ನು ಅತ್ತೃತ್ವಾಧಿಕರಣದ ಟೀಕಾಮಾತಿಗೆ ತಿಳಿಯಬಾರದು ಹೊರತಾಗಿ 'ಅದಿತಿ' ಶಬ್ದದಂತಿರುವ ಇಂದ್ರಾದಿ ಶಬ್ದಗಳ ಸಮನ್ವಯವಷ್ಟೇ ನಿರ್ಣಯವಾಗಿದೆಯೆಂದು ತಿಳಿಯಬೇಕು.

ಪ್ರಶ್ನೆ - "ದೇವತಾಂತರಗಾಃ ಸರ್ವೇ" ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಸಕಲದೇವತಾವಾಚಕಪದಗಳು ಅಂತರಧಿಕರಣದಲ್ಲಿ ಸಮನ್ವಯವಾಗಿವೆ ಎಂದು ಹೇಳಿದ್ದಾರಲ್ಲವೇ ?

ಉತ್ತರ - ಈ ಪ್ರಶ್ನೆಗೆ 'ಅನುವ್ಯಾಖ್ಯಾನೇ' ಎಂಬ ಮಾತಿನಿಂದ ಉತ್ತರಿಸುತ್ತಿದ್ದಾರೆ. ಸರ್ವಶಬ್ದಕ್ಕೆ ಅಂತರಧಿಕರಣದ ನ್ಯಾಯಕ್ಕೆ ವಿಷಯವಾಗುವ ದೇವತಾಪದಗಳನ್ನಷ್ಟೇ ವಿವಕ್ಷಿಸಿ ಸಂಕೋಚ ಮಾಡಬೇಕು.

ಪ್ರಶ್ನೆ - ಅನುವ್ಯಾಖ್ಯಾನದ ಮಾತಿಗೆ ಸಂಕೋಚ ಮಾಡುವುದಾದರೆ "ದೇವತಾಂತರಗಾಃ" ಎಂಬುದಾಗಿ ಆಧಿದೈವಿಕಶಬ್ದತ್ವವನ್ನು ಉಪಾಧಿಯನ್ನಾಗಿ ಹೇಳಿದ್ದು ಮತ್ತು "ಅಧ್ಯಾತ್ಮಗೈಶ್ಚ ಪ್ರಾಣಾದ್ಯೈಃ" ಎಂಬುದಾಗಿ ಅಧ್ಯಾತ್ಮಶಬ್ದತ್ವವನ್ನು ಉಪಾಧಿಯನ್ನಾಗಿ ಹೇಳಿದ್ದು ಅಯುಕ್ತವಾಗುತ್ತದೆ. ಸಕಲದೇವತಾವಾಚಕ ಪದಸಮನ್ವಯಕ್ಕೋಸ್ಕರವೇ ಉಪಾಧಿಯನ್ನು ಹೇಳಿದ್ದಾರೆಂದು ಇದರಿಂದ ತಿಳಿಯುತ್ತಲ್ಲವೇ ?

ಉತ್ತರ - ಈ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ 'ತತ್ರ' ಇತ್ಯಾದಿ ವಾಕ್ಯವು ಹೊರಟಿದೆ. ಅಂದರೆ ಅಂತರಧಿಕರಣದ ನ್ಯಾಯಕ್ಕೆ ವಿಷಯವಾಗುವ ಸಕಲದೇವತಾವಾಚಕ ಪದಸಮನ್ವಯವನ್ನಷ್ಟೇ ಆಧಿದೈವಿಕತ್ವ ಎಂಬ ಉಪಾಧಿಯಿಂದ ಸಂಗ್ರಹಿಸಬೇಕೇ ಹೊರತು ಆ ಅಧಿಕರಣದ ನ್ಯಾಯಕ್ಕೆ ವಿಷಯವಾಗದ ಸಕಲದೇವತಾವಾಚಕ ಪದಗಳನ್ನು ಸಂಗ್ರಹಿಸಬಾರದು.

**गुरुराजीयम् –** . नन्वेवं श्रुतिमात्रेण टीकायां लिङ्गप्रतिपादकांशोदाहरणमयुक्तं स्यादित्यत आह – **अत एवेति ।।**

नन्वेवमनुव्याख्याने तत्राभ्यधिकाशङ्कोक्तिरयुक्ता । सुधायां च नन्वेवमपि तु पूर्वन्यायेन गतार्थं नाधिकरणारम्भं प्रयोजयतीत्युक्तत्वात्तद्विरोधश्च । आकाशाधिकरणे तदधीनत्वादित्यत्र सर्वस्येश्वराधीनतामङ्गीकृत्य तस्याः प्रवृत्तिनिमित्तत्वं नेति प्राप्तेऽस्तीति सिद्धान्त इत्येवं प्रतिपाद्यते । नतु मुख्यत्वमित्युक्तत्वेन तद्विरोधश्चेत्यरुच्या पक्षान्तरमाह – **यद्वेति ।।**

ननु तत्र कथं निरवकाशदेवतालिङ्गाभावः । 'सप्त युञ्जन्ति रथमेकचक्रं' इति निरवकाशलिङ्गानां तत्रापि सद्भावादिति चेन्न ।

क्वचिन्निरवकाशलिङ्गसद्भावेप्यसार्वत्रिकत्वान्न तस्य विवक्षा । नहि तत्र स एवान्तस्थ इत्येक एव पूर्वपक्ष । किं त्वनेके । नच सर्वत्रापि लिङ्गं निरवकाशं यच्चास्ति निरवकाशं लिङ्गं तदप्येतदधिकरणन्यायेनैव सावकाशं भविष्यतीति तत्र न विवक्षितम् । किन्तु श्रुतिमात्रेण पूर्वपक्षे लिङ्गेन सिद्धान्तः । अत्र तु श्रुतिलिङ्गाभ्यां पूर्वपक्षिते निरवकाशश्रुतिलिङ्गाभ्यां सिद्धान्तोऽतो युक्तो न्यायभेदः । नन्वन्तरधिकरणन्यायेन सवितृशब्दस्य भगवत्परत्वे निर्णीते तत्पर्यायत्वादादित्यशब्दस्यापि भगत्वपरत्वमावश्यकमित्यत आह – **पर्यायाणामिति ।।** नन्वेवमन्तस्स्थप्रकरणेप्यदितिशब्दस्याप्यभावेनोत्तराधिकरणटीकायामदितिशब्दस्यान्तरधिकरणन्यायेन सावकाशत्वशङ्कानुपपत्तिरित्यत आह – **उत्तराधिकरणटीकापीति ।।** आदित्यशब्दस्योत्तराधिकरणन्यायेन भगवत्परत्वाभावे देवतान्तरगा इत्यनुव्याख्यानविरोध इत्यत आह – **अनुव्याख्यान इति ।।** नन्वेवमन्तरधिकरणटीकायामधिदैवगतसर्वशब्द समन्वयः प्रतिपाद्यत इत्युपाध्युक्तेः कागतिरित्यत आह – **तत्रेति ।।**

ಪರಿಪೂರ್ಣಚಂದ್ರಿಕಾ



ಅಥವಾ ಹಿಂದಿನ ಅಂತರಧಿಕರಣದಲ್ಲಿ ಇಂದ್ರಾದಿಶಬ್ದಗಳು ವಿಷ್ಣುವಿನಲ್ಲೇ ಮುಖ್ಯವಾಗಿವೆಯೆಂದು ನಿರ್ಣಯಿಸಲಾಗಿದೆಯೆಂಬ ವಿಚಾರವನ್ನು ಒಪ್ಪಿಕೊಳ್ಳೋಣ. ಆದರೂ ಸಹ ಆದಿತ್ಯಾದಿಶಬ್ದವು ಅಂತರಧಿಕರಣದ ವಿಷಯವಾಕ್ಯದಲ್ಲಿ ಕೇಳಿಸುತ್ತಿಲ್ಲ. ಮತ್ತು ಅಂತರಧಿಕರಣದ ನ್ಯಾಯಕ್ಕೆ ವಿಷಯವೂ ಆಗಿಲ್ಲ. ಈ ಅಧಿಕರಣದಲ್ಲಿ ನಿರವಕಾಶವಾದ ಆದಿತ್ಯಾದಿ ದೇವತಾಲಿಂಗಗಳಿದ್ದಂತೆ ಅಂತರಧಿಕರಣದ ವಿಷಯವಾಕ್ಯದಲ್ಲಿ ಅಂತಹ ದೇವತಾಲಿಂಗಗಳೂ ಸಹ ಇರುವುದಿಲ್ಲ. ಆದ್ದರಿಂದಲೇ ಟೀಕೆಯಲ್ಲಿ ಆದಿತ್ಯಾದಿ ಶಬ್ದಗಳು ಅಂತರಧಿಕರಣದ ನ್ಯಾಯಕ್ಕೆ ವಿಷಯವಾಗಿಲ್ಲವೆಂಬುದನ್ನು ತೋರಿಸುವುದಕ್ಕಾಗಿಯೇ ದೇವತಾಲಿಂಗಪ್ರತಿಪಾದಕವಾದ ಅಂಶವನ್ನೂ ಸಹ ಉದಾಹರಿಸಿದ್ದಾರೆ.

ವಸ್ತುತಃ ಒಬ್ಬ ದೇವತೆಯನ್ನೇ ಹೇಳುವ ಪರ್ಯಾಯ ಶಬ್ದಗಳ ಸಮನ್ವಯವನ್ನು ಬೇರೆ ಬೇರೆ ಅಧಿಕರಣಗಳಲ್ಲಿ ಮಾಡುತ್ತಿದ್ದಾರೆ. ಇದೇನು ತಪ್ಪಲ್ಲ ? ಏಕೆಂದರೆ ಪರ್ಯಾಯ ಶಬ್ದವಾಗಿದ್ದರೂ ಸಹ ಆಯಾ ಅಧಿಕರಣದ ನ್ಯಾಯಕ್ಕೆ ವಿಷಯವಾದದ್ದನ್ನು ಮಾತ್ರ ಆಯಾ ಅಧಿಕರಣದಲ್ಲಿ ಸಮನ್ವಯ ಮಾಡುತ್ತಾರೆ. ಹೊರತು ಆಯಾ ಅಧಿಕರಣದ ನ್ಯಾಯಕ್ಕೆ ವಿಷಯವಾಗದ ಶಬ್ದಸಮನ್ವಯವನ್ನು ಮಾಡುವುದಿಲ್ಲ.





## ಸರ್ವಗತತ್ವಾಧಿಕರಣವು ನಾಮಪಾದದಲ್ಲಿ ಸೇರದು

### तात्पर्यचन्द्रिका

**न चैवं यत्सम्बन्धात्सर्वगतत्वस्यान्यत्रप्रसिद्धता, तन्नामसमन्वय एवोच्यतामिति वाच्यम्,**

**अन्तर्यामित्वादेर्लिङ्गस्य पृथिवीशरीरत्वादिलिङ्गसम्बन्धादेव अन्यत्रप्रसिद्धत्वात्तत् समन्वयार्थं पादान्तरे कार्ये, तत्सङ्गत्यर्थमत्रापि लिङ्गस्यैव समन्वेतव्यत्वात् ।**

**नच यत्र लिङ्गं नामसम्बन्धादन्यत्रप्रसिद्धम्, तदधिकरणं नामसमन्वयपरं आद्यपादस्थं चास्त्विति वाच्यम्,**

**तथात्वे आदित्यादिशब्दप्रवृत्तिनिमित्तगुणस्यान्तरधिकरणेनैव लब्धतया साक्षादपूर्वगुणालाभात् । अर्भकौकस्त्वादिपूर्वपक्षमूलयुक्तेः प्रसिद्धोपदेशादिसिद्धान्त-युक्तेश्च सर्वगतवाक्य इव आदित्यवाक्येऽसत्त्वाच ।**

**नामपादे नामसमन्वये हेतुतयोक्तलिङ्गसमन्वयस्यैव इह आकाङ्क्षितत्वाच । तस्मादादित्यश्रुतितः सूर्यप्राप्तिर्युक्ता ।**

**सौरमन्त्रोदाहरणाच्च तत्प्राप्तिः, मन्त्रे "चक्षुर्मित्रस्य" इति चक्षुष्ट्वस्य श्रवणात्तस्य च "आदित्यश्चक्षुर्भूत्वा" इत्यादित्यश्रुत्याऽऽदित्यलिङ्गत्वात् । उक्तादित्यश्रुत्युपोद्बलिताद्विशिष्याऽऽदित्येऽनुक्तत्वलिङ्गाच्च तत्प्राप्तिः ।**

ಅನುವಾದ - ಶಂಕೆ - 'ಆದಿತ್ಯ' ಎಂಬ ನಾಮಬಲದಿಂದ ಸರ್ವಗತತ್ವಕ್ಕೆ ಅನ್ಯತ್ರಪ್ರಸಿದ್ಧತ್ವವನ್ನು ಸಮರ್ಥಿಸುತ್ತಿದ್ದೀರಿ. ಹಾಗಾದರೆ ನಾಮಸಮನ್ವಯವನ್ನೇ ಈ ಅಧಿಕರಣದಲ್ಲಿ ನೇರವಾಗಿ ಮಾಡಬಹುದಲ್ಲವೇ?

ಸಮಾಧಾನ - ಇದು ತಪ್ಪು. ಅಂತರ್ಯಾಮಿತ್ವ ಮೊದಲಾದ ಲಿಂಗಗಳೆಂತು ಪೃಥ್ವೀಶರೀರ ಮೊದಲಾದ ಲಿಂಗಗಳ ಅಧೀನವಾಗಿದೆ. ಅನ್ಯತ್ರಪ್ರಸಿದ್ಧವೆನಿಸಿದೆ. ಇದಕ್ಕೋಸ್ಕರ ಲಿಂಗಪಾದವೆಂತು ಹೊರಡಲೇ ಬೇಕು. ಈ ಅಂತರ್ಯಾಮ್ಯಧಿಕರಣದ ಸಂಗತಿಗೋಸ್ಕರ ಇಲ್ಲಿಯೂ ಸಹ ಸರ್ವಗತತ್ವ ಎಂಬ ಲಿಂಗವನ್ನೇ ಸಮನ್ವಯ ಮಾಡುವುದು ಸೂಕ್ತವಾಗಿದೆ.

ಶಂಕೆ - ಹಾಗಾದರೆ ಎಲ್ಲಿ ಲಿಂಗವು ನಾಮಸಮನ್ವಯದ ಅಧೀನವಾಗಿ ಅನ್ಯತ್ರಪ್ರಸಿದ್ಧವಾಗಿದೆಯೋ ಆ ಅಧಿಕರಣವು ನಾಮಸಮನ್ವಯಪರವಾಗಲಿ; ಮತ್ತು ಪ್ರಥಮ ಪಾದದಲ್ಲಿಯೇ ಅಂತರ್ಭೂತವಾಗಲಿ. ಆದ್ದರಿಂದ ಅಂತರ್ಯಾಮ್ಯಧಿಕರಣವು ಎರಡನೇ ಪಾದದಲ್ಲಿರಲಿ. ಈ ಅಧಿಕರಣವು ಪ್ರಥಮಪಾದದಲ್ಲಿ ಸೇರಲಿ?

ಸಮಾಧಾನ - ಹಾಗೇ ಪ್ರಥಮಪಾದದಲ್ಲಿ ಸೇರಿಸುವುದಾದರೆ 'ಆದಿತ್ಯ' ಮೊದಲಾದ ಶಬ್ದಪ್ರವೃತ್ತಿ ಮೊದಲಾದ ಗುಣಗಳೆಲ್ಲವೂ ಅಂತರಧಿಕರಣದ ನ್ಯಾಯದಿಂದಲೇ ತಿಳಿದಿರುವಾಗ ಪುನಃ ಈ ಅಧಿಕರಣದಲ್ಲಿ ಹೊಸದಾದ ಗುಣವನ್ನು ಹೇಳಿದಂತಾಗುವುದಿಲ್ಲ. ಮತ್ತು ಪೂರ್ವಪಕ್ಷಕ್ಕೆ ಮೂಲಭೂತವಾದ 'ಅರ್ಭಕೌಕಸ್ತ್ವ' ಮೊದಲಾದ ಯುಕ್ತಿಗಳಾಗಲೀ, ಸಿದ್ಧಾಂತಕ್ಕೆ ಮೂಲಭೂತವಾದ 'ಪ್ರಸಿದ್ಧೋಪದೇಶ' ಮೊದಲಾದ ಯುಕ್ತಿಗಳಾಗಲೀ ಸರ್ವಗತ ವಾಕ್ಯದಲ್ಲಿರುವಂತೆ ಆದಿತ್ಯವಾಕ್ಯದಲ್ಲಿ ಇರುವುದೇ ಇಲ್ಲ. ಈ ಕಾರಣಕ್ಕಾಗಿಯೂ ಸರ್ವಗತತ್ವ ಲಿಂಗದಿಂದ ಕೂಡಿರುವ ವಾಕ್ಯವನ್ನೇ ಸಮನ್ವಯ ಮಾಡಬೇಕಾಗಿದೆ.

ಪರಿಪೂರ್ಣಚಂದ್ರಿಕಾ

ಮತ್ತು ನಾಮಪಾದದಲ್ಲಿ ನಾಮಸಮನ್ವಯ ಮಾಡಲು ಹೇತುವಾಗಿ ಹೇಳಲ್ಪಟ್ಟ ಲಿಂಗಸಮನ್ವಯದ ಆಕಾಂಕ್ಷೆಯೂ ಬರುತ್ತದೆ. ಅದರ ಪರಿಹಾರಕ್ಕಾಗಿ ಲಿಂಗಸಮನ್ವಯವನ್ನೇ ಮಾಡಬೇಕು. ಆದ್ದರಿಂದ ಆದಿತ್ಯಶ್ರುತಿಯಿಂದ ಸೂರ್ಯನ ಬಗ್ಗೆ ಮಾಡುವ ವಿಚಾರವು ಸಮಂಜಸವೇ ಆಗಿದೆ.

ಸೂರ್ಯಪ್ರತಿಪಾದಕವಾದ ಮಂತ್ರವನ್ನು ಉದಾಹರಿಸಿದ್ದರಿಂದಲೂ ಸೂರ್ಯನೇ ಶ್ರುತಿಪ್ರತಿಪಾದ್ಯನಾಗುತ್ತಾನೆ. ಏಕೆಂದರೆ ಮಂತ್ರದಲ್ಲಿ "ಚಕ್ಷುರ್ಮಿತ್ರಸ್ಯ" ಇತ್ಯಾದಿಯಾಗಿ 'ಚಕ್ಷುಷ್ಟ್ವ' ಎಂಬ ಧರ್ಮವು ಕೇಳಿಸುತ್ತಿದೆ. "ಆದಿತ್ಯಶ್ಚಕ್ಷುರ್ಭೂತ್ವಾ" ಎಂಬ ಶ್ರುತಿಯಿಂದ ಆದಿತ್ಯನದ್ದೇ ಎಂದು ನಿರ್ಣಯವಾಗಿದೆ.

ಮತ್ತು ಹಿಂದೆ ಹೇಳಿದ ಆದಿತ್ಯಶ್ರುತಿಯಿಂದ ಉಪೋದ್ಬಲಿತವಾದ ವಿಶೇಷವಾಗಿ ಆದಿತ್ಯನಲ್ಲಿರುವ 'ಅನುಕ್ತತ್ವ' ಎಂಬ ಲಿಂಗದಿಂದಲೂ ಸಹ ಸೂರ್ಯನೇ ಪ್ರತಿಪಾದ್ಯನಾಗುತ್ತಾನೆ.

### ಕಠಿಣಪದಾರ್ಥ

ಯತ್ಸಂಬಂಧಾತ್ = ನಾಮಸಂಬಂಧದಿಂದ, ತತ್ಸಮನ್ವಯಾತ್ = ಅಂತರ್ಯಾಮಿತ್ವ ಎಂಬ ಲಿಂಗದ ಸಮನ್ವಯಕ್ಕೋಸ್ಕರ, ತತ್ಸಂಗತ್ಯರ್ಥಂ = ಅಂತರ್ಯಾಮಿಧಿಕರಣದ ಸಂಗತಿಗಾಗಿ, ಅತ್ರಾಪಿ = ಸರ್ವಗತತ್ವಾಧಿಕರಣದಲ್ಲಿಯು, ತಥಾತ್ವೇ = ಆದಿತ್ಯಶ್ರುತಿಯನ್ನು ಸಮನ್ವಯ ಮಾಡುವುದಾದರೆ, ಅಪೂರ್ವಗುಣಾಲಾಭಾತ್ = ಹೊಸದಾದ ಸಿದ್ಧಾಂತ ಯುಕ್ತಿಯನ್ನು ಹೇಳಿದಂತಾಗುವುದಿಲ್ಲ. ಹೇತುತಯೋಕ್ತಲಿಂಗಸಮನ್ವಯಸ್ಯ = ಕಾರಣವನ್ನಾಗಿ ನಿರೂಪಿಸಿದ ಸಂವತ್ಸರ ಸಾರತ್ವ ಮೊದಲಾದ ಲಿಂಗಗಳ ಸಮನ್ವಯಕ್ಕೆ.

**प्रकाशः** – ननूक्तरीत्या आदित्यश्रुतेर्निरवकाशत्वे तस्या एव समन्वय उच्यतां, तस्यास्स्वत एवान्यत्रप्रसिद्धत्वात्, किं तत्साहित्येन अन्यत्रप्रसिद्धलिङ्गसमन्वयेन । नचााऽद्यपक्षे श्रुतेरप्यन्यसाहित्येनैव अन्यत्रप्रसिद्धिर्नतु स्वत इति वाच्यं, उत्तरपक्षद्वये तदभावात् । आद्येऽपि श्रुतेर्लिङ्गसाहित्येनैवान्यत्रप्रसिद्धता, सर्वगतत्वस्य तु आदित्यश्रुतिसाहित्येनापीति विलम्बितत्वमिति भावेनाऽऽशङ्क्य निरस्यति – **न चैवमिति** ।

किं सर्वत्रैवं सम्भवेन लिङ्गसमन्वयार्थम्पादान्तरमेव मास्त्विति आशयः, उत पादान्तरारम्भेऽप्यस्योक्तरीत्याश्रयणेन पूर्वत्रैव निवेशः स्यादिति । आद्य आह – **अन्तर्यामित्वेति** । **अत्रापीति** । ननु वैश्वानराधिकरणस्येव फलतः सा भविष्यति । नच पाचकत्वाद्यनेकलिङ्गसमन्वयार्थमेकनामसमन्वयस्तत्रोच्यत इति वाच्यं, इहापि

संवत्सरसारत्वाद्यनेकलिङ्गसमन्वयार्थत्वसम्भवादिति चेत्, सत्यं, साक्षात्सङ्गतिसम्भवे फलतस्तदुक्त्ययोगात्, नामसमन्वयस्य वक्ष्यमाणदोषग्रस्तत्वाच्चेति तात्पर्यात् ।

द्वितीयमाशङ्क्य निराह – **नचेति** । **अन्तरिति** । तत्र सर्वदेवतावाचिपदप्रवृत्तिनिमित्तस्येशगतत्वस्यान्यगतस्य भगवदधीनत्वस्य च साधानादिति भावः । एतच्चाऽऽद्यपक्षानुरोधेनोक्तमिति ध्येयम् । अग्रिमपक्षद्वये आदित्यादिशब्दप्रवृत्तिनिमित्तगुणलाभस्य "अन्तः" इत्यत्राभावद्युक्त्यन्तरमाह – **अर्भकौकस्त्वादीति** । **हेतुतयोक्तेति** । उक्तलिङ्गजातीयेत्यर्थः । आक्षिप्तं पूर्वोक्तं प्रापकान्तरं च साधयति – **सौरेति** । नच सूर्यादिशब्दः सावकाश इत्युक्तमिति वाच्यं, चक्षुष्ट्वलिङ्गेन तदुज्जीवनादित्याह – **मन्त्रइति** । "आदित्यश्चक्षुर्भूत्वाऽक्षिणी प्राविशत्" इति तस्यामेव श्रुतौ चक्षुष्टोक्तेरित्यर्थः ।

प्रागाक्षिप्तं टीकोक्तं प्रापकान्तरमपि समर्थयते – **उक्तेति** । यद्यपि "सर्वेषु भूतेषु" इति सामान्येन भूतपदेनाऽऽदित्यस्यापि ग्रहणात्तद्गतत्वोक्तिरस्ति, तथाऽपि "चन्द्रमस्येतं" इतिवत् "आदित्य एतं" इति विशिष्यानुक्तत्वलिङ्गात्तत्प्राप्तिः । अन्यथा तथोक्तिः स्यादेव, अनुक्तौ कारणाभावादित्यर्थः । अत एव टीकायां – " –'एतमादित्ये' इत्युक्तिस्स्यात्" इत्युक्तम् ।

**ವಿವರಣೆ - ಶಂಕೆ** - ಇಲ್ಲಿಯ ತನಕ ನಿರೂಪಿಸಿದಂತೆ ನಿರವಕಾಶವಾದ ಆದಿತ್ಯಶ್ರುತಿಯ ಬಲದಿಂದ ಸರ್ವಗತತ್ವವು ಉಜ್ಜೀವನವಾಗುತ್ತಿದೆ. ಹಾಗಾದರೆ ಆದಿತ್ಯಶ್ರುತಿಯನ್ನೇ ಈ ಅಧಿಕರಣದಲ್ಲಿ ನೇರವಾಗಿ ಸಮನ್ವಯ ಮಾಡಲು ಬರುವಾಗ ಆದಿತ್ಯಶ್ರುತಿಯಿಂದ ಸರ್ವಗತತ್ವಲಿಂಗವನ್ನು ಉಜ್ಜೀವನಗೊಳಿಸಿ ಅಂತಹ ಸರ್ವಗತತ್ವ ಲಿಂಗವನ್ನು ಸಮನ್ವಯ ಮಾಡುವುದು ಗೌರವವಾಗಿದೆ. ಆದಿತ್ಯ ಶ್ರುತಿಯು ಸ್ವತಃ ಅನ್ಯತ್ರಪ್ರಸಿದ್ಧವಾಗಿದ್ದರಿಂದ ನೇರವಾಗಿ ಅದರ ಸಮನ್ವಯವನ್ನು ಮಾಡಿದಾಗ ಲಾಭವಾಗಿದೆ. ಆದ್ದರಿಂದ ಆದಿತ್ಯಶ್ರುತಿಯಿಂದ ಕೂಡಿರುವಂತಹ ಅನ್ಯತ್ರಪ್ರಸಿದ್ಧವಾದ ಲಿಂಗಸಮನ್ವಯವನ್ನು ಏಕೆ ಮಾಡಬೇಕು ?

**ಸಮಾಧಾನ** - ಹಿಂದೆ ಗ್ರಂಥಕಾರರು ಮೂರು ಪಕ್ಷಗಳನ್ನು ಹೇಳಿದ್ದರು - ೧. ಅನೇಕ ಲಿಂಗಗಳಿಂದ ಆದಿತ್ಯಶ್ರುತಿಯು ಬಲಿಷ್ಠವಾಗುತ್ತದೆ. ೨. ಅಂತರಧಿಕರಣದಲ್ಲಿ ಆದಿತ್ಯ ಮೊದಲಾದ ಶಬ್ದಗಳನ್ನು ಮುಖ್ಯವಾಗಿ ಸಮನ್ವಯವನ್ನೇ ಮಾಡಿರುವುದಿಲ್ಲ. ೩. ಅಂತರಧಿಕರಣದ ನ್ಯಾಯಕ್ಕೆ ವಿಷಯವೇ ಆಗಿರುವುದಿಲ್ಲ ಎಂದು. ಈ ಮೂರು ಪಕ್ಷಗಳಲ್ಲಿ ಮೊದಲನೇ ಪಕ್ಷವನ್ನು ವಿವಕ್ಷಿಸಿದಾಗ ಶ್ರುತಿಯೂ ಸಹ ಲಿಂಗಗಳ ಬಲದಿಂದಲೇ

ಅನ್ಯತ್ರಪ್ರಸಿದ್ಧವೆನಿಸುತ್ತದೆ ಹೊರತು, ಸ್ವತಃ ಅನ್ಯತ್ರಪ್ರಸಿದ್ಧವಾಗುವುದಿಲ್ಲ. ಆದ್ದರಿಂದ ಪ್ರಕೃತ ಶ್ರುತಿಯಿಂದ ಲಿಂಗವು ಬಲಿಷ್ಠವಾಗುತ್ತಿದೆ ಎಂದು ಹೇಗೆ ಹೇಳುತ್ತಿದ್ದೀರಿ ? ಎಂದು ಪ್ರಶ್ನಿಸಬಾರದು.

ಗ್ರಂಥಕಾರರೇ ಹೇಳಿದ ಉಳಿದೆರಡು ಪಕ್ಷಗಳಲ್ಲಿ ನಾವು ಮಾಡುತ್ತಿರುವ ಶಂಕೆಯು ಸಮಂಜಸವಾಗುತ್ತದೆ. ಏಕೆಂದರೆ ಆ ಎರಡು ಪಕ್ಷಗಳಲ್ಲಿ ಲಿಂಗಗಳ ಬಲದಿಂದ ಶ್ರುತಿಗೆ ಅನ್ಯತ್ರಪ್ರಸಿದ್ಧತ್ವವನ್ನು ಹೇಳಿರುವುದಿಲ್ಲ. ಅಥವಾ ಮೊದಲನೇ ಪಕ್ಷದಲ್ಲಿಯೂ ಸಹ ಶ್ರುತಿಗೆ ಲಿಂಗಸಾಹಿತ್ಯದಿಂದಲೇ ಅನ್ಯತ್ರಪ್ರಸಿದ್ಧತ್ವವು ಬರುತ್ತದೆ. ಆದರೆ ಸರ್ವಗತತ್ವಕ್ಕೆ ಆದಿತ್ಯಶ್ರುತಿಯ ಸಾಹಚರ್ಯದಿಂದ ಎಂದು ವಿಲಂಬವಾಗುತ್ತದೆ. ಈ ಎಲ್ಲಾ ವಿಷಯಗಳನ್ನೂ 'ನಚೈವಂ' ಇತ್ಯಾದಿ ವಾಕ್ಯಗಳಿಂದ ಸಮರ್ಥಿಸುತ್ತಿದ್ದಾರೆ.

ಶಂಕೆ – ನಿಮ್ಮ ಆಕ್ಷೇಪದ ಅಭಿಪ್ರಾಯವೇನು. ಎಲ್ಲಾ ಅಧಿಕರಣಗಳಲ್ಲಿಯೂ ನಾಮಸಮನ್ವಯವನ್ನೇ ಮಾಡಿದರೆ ಸಾಕು. ಲಿಂಗಸಮನ್ವಯವೇ ಬೇಡವೋ ? ಅಥವಾ ಲಿಂಗಸಮನ್ವಯಕ್ಕೋಸ್ಕರ ಲಿಂಗಪಾದವೇ ಇರಲಿ. ಆದರೆ ಸರ್ವಗತತ್ವಾಧಿಕರಣವು ಮಾತ್ರ ನಾಮಪಾದದಲ್ಲಿ ಸೇರಲಿ ಎಂದೋ?

ಸಮಾಧಾನ – ಮೊದಲನೇ ಪಕ್ಷಕ್ಕೆ 'ಅಂತರ್ಯಾಮಿತ್ವ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ಅಂದರೆ ಎಲ್ಲಾ ಅಧಿಕರಣಗಳಲ್ಲಿಯೂ ನಾಮಸಮನ್ವಯದ ಅಪೇಕ್ಷೆಯು ಲಿಂಗಸಮನ್ವಯಕ್ಕೆ ಇರುವುದಿಲ್ಲ. ಆದ್ದರಿಂದ ಲಿಂಗಪಾದವು ಹೊರಡಲೇಬೇಕಾಗುತ್ತದೆ.

ಶಂಕೆ – ಯಾವ ರೀತಿಯಾಗಿ ವೈಶ್ವಾನರಾಧಿಕರಣದಲ್ಲಿ ನಾಮಸಮನ್ವಯವನ್ನೇ ಮಾಡಿದರೂ ಫಲತಃ ಲಿಂಗಸಮನ್ವಯವೂ ಸಿದ್ಧವಾಗುತ್ತದೆಯೋ, ಅದರಂತೆ ಈ ಅಧಿಕರಣದಲ್ಲಿಯೂ ನಾಮಸಮನ್ವಯವನ್ನೇ ಮಾಡಿರಿ. ಫಲತಃ ಅನೇಕ ಲಿಂಗಗಳ ಸಮನ್ವಯವು ಸಿದ್ಧವಾಗುತ್ತದೆ. ಇನ್ನು ವಾಚಕತ್ವ ಮೊದಲಾದ ಅನೇಕ ಲಿಂಗಗಳ ಸಮನ್ವಯಕ್ಕೋಸ್ಕರ 'ವೈಶ್ವಾನರ' ಎಂಬ ಒಂದು ನಾಮದ ಸಮನ್ವಯವನ್ನು ಅಲ್ಲಿ ಮಾಡುತ್ತಿದ್ದೇವೆ. ಆದ್ದರಿಂದ ವೈಶ್ವಾನರಾಧಿಕರಣದಂತೆ ಇಲ್ಲಿ ಹೇಳಲಾಗದು ಎಂದು ಪ್ರಶ್ನಿಸಬಾರದು. ಏಕೆಂದರೆ ಇಲ್ಲಿಯೂ ಸಹ ಆದಿತ್ಯವೆಂಬ ಒಂದು ನಾಮವನ್ನು ಸಮನ್ವಯ ಮಾಡಿದಾಗ 'ಸಂವತ್ಸರಸಾರತ್ವ' ಮೊದಲಾದ ಅನೇಕ ಲಿಂಗಗಳ ಸಮನ್ವಯವು ಸಿದ್ಧವಾಗುತ್ತವೆ. ಆದ್ದರಿಂದ ವೈಶ್ವಾನರಾಧಿಕರಣದಂತೆ ಇಲ್ಲಿಯೂ ನಾಮಸಮನ್ವಯವನ್ನೇ ಮಾಡಿರಿ.

ಸಮಾಧಾನ – ನೇರವಾಗಿ ಲಿಂಗಸಮನ್ವಯವನ್ನು ಮಾಡುವ ಮೂಲಕವೇ ಈ ಅಧಿಕರಣಕ್ಕೆ ಸಂಗತಿಯನ್ನು ಹೇಳಲು ಬರುವಾಗ ನಾಮಸಮನ್ವಯವನ್ನು ಮಾಡಿ ಫಲತಃ ಸಿದ್ಧವಾಗುವ ಲಿಂಗಸಮನ್ವಯದಿಂದ ಸಂಗತಿ ಹೇಳುವುದು ಸ್ವರಸವಲ್ಲ. ಅಷ್ಟೇ ಅಲ್ಲದೇ ಈ ಅಧಿಕರಣದಲ್ಲಿ ನಾಮಸಮನ್ವಯವನ್ನು ನೇರವಾಗಿ ಮಾಡಲು ಸಾಧ್ಯವೇ ಇಲ್ಲ. ಹಾಗೆ ನಾಮಸಮನ್ವಯ ಮಾಡಿದಾಗ ಬರುವ ದೋಷವನ್ನು ಈ ಮುಂದೆ ಹೇಳುವವರಿದ್ದೇವೆ.

ಎರಡನೇ ಪಕ್ಷವನ್ನು ಆಶಂಕಿಸಿ 'ನಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಂದರೆ ಸರ್ವಗತತ್ವಾಧಿಕರಣವನ್ನು ನಾಮಪಾದದಲ್ಲಿ ಸೇರಿಸಲಾಗದು. ನಾಮಪಾದದಲ್ಲಿ ಸೇರಿಸುವುದಾದರೆ ಆದಿತ್ಯಶ್ರುತಿಯನ್ನೇ ಸಮನ್ವಯ ಮಾಡಬೇಕು. ಹೊರತು ಸರ್ವಗತತ್ವಲಿಂಗವನ್ನು ಸಮನ್ವಯ

ಮಾಡಲಾಗದು. ಆದರೆ ಆದಿತ್ಯ ಮೊದಲಾದ ದೇವತಾವಾಚಕ ಶ್ರುತಿಗಳೆಲ್ಲವೂ ಅಂತರಧಿಕರಣದಲ್ಲಿಯೇ ಸಮನ್ವಯ ಮಾಡಿದ್ದಾಗಿದೆ. ಸಕಲದೇವತಾವಾಚಕವಾದ ಪ್ರವೃತ್ತಿನಿಮಿತ್ತಗಳೆಲ್ಲವು ಈಶಗತವಾಗಿವೆ. ಮತ್ತು ಬೇರೆಯವರಲ್ಲಿದ್ದರೂ ಆ ಪ್ರವೃತ್ತಿನಿಮಿತ್ತಗಳು ಈಶಾಧೀನವಾಗಿವೆಯೆಂದು ಅಂತರಧಿಕರಣದಲ್ಲಿ ಸಮರ್ಥಿಸಿದ್ದಾರೆ.

ಈ ವಿಚಾರವು ಗ್ರಂಥಕಾರರು ಹಿಂದೆ ಹೇಳಿದ ಮೂರುವಿಧಪಕ್ಷಗಳಲ್ಲಿ ಮೊದಲನೇ ಪಕ್ಷಕ್ಕೇ ಮಾತ್ರ ಸಂಬಂಧಪಟ್ಟಿವೆ. ಉಳಿದರೆಡು ಪಕ್ಷಗಳಲ್ಲಿ ಆದಿತ್ಯ ಮೊದಲಾದ ಶಬ್ದಪ್ರವೃತಿನಿಮಿತ್ತವಾದ ಗುಣಗಳ ಲಾಭವು ಅಂತರಧಿಕರಣದಿಂದ ದೊರೆಯುವುದಿಲ್ಲ. ಅದಕ್ಕೋಸ್ಕರ ಮತ್ತೊಂದು ಯುಕ್ತಿಯನ್ನು 'ಅರ್ಭಕೌಕಸ್ತ್ವಾದಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಟೀಕೆಯಲ್ಲಿ ಆಕ್ಷೇಪಿಸಿದ ಮತ್ತೊಂದು ಪೂರ್ವಪಕ್ಷವನ್ನು 'ಸೌರ' ಇತ್ಯಾದಿ ವಾಕ್ಯಗಳಿಂದ ಸಾಧಿಸುತ್ತಿದ್ದಾರೆ. ಸೂರ್ಯಾದಿ ಶಬ್ದಗಳು ವಿಷ್ಣುವಿನಲ್ಲಿ ಸಾವಕಾಶವಾಗಿರುವಾಗ 'ಸೌರ' ಮಂತ್ರವು ಹೇಗೆ ಪ್ರಮಾಣವಾಗುತ್ತದೆ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಚಕ್ಷುಷ್ಟ್ವ' ಎಂಬ ಲಿಂಗದಿಂದ 'ಸೌರ' ಮಂತ್ರವು ಉಪೋದ್ಬಲಿತವಾಗುತ್ತದೆ. ಈ ವಿಚಾರವನ್ನು 'ಮಂತ್ರ' ಇತ್ಯಾದಿ ವಾಕ್ಯದಿಂಧ ಪ್ರತಿಪಾದಿಸುತ್ತಿದ್ದಾರೆ. ''ಆದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣೀ ಪ್ರಾವಿಶತ್'' ಎಂಬುದಾಗಿ ಅದೇ ಶ್ರುತಿಯಲ್ಲಿ 'ಚಕ್ಷುಷ್ಟ್ವ' ಲಿಂಗವು ಕೇಳಿಸುತ್ತಿದೆ.

ಟೀಕೆಯಲ್ಲಿ ಹಿಂದೆ ಮಾಡಿದ ಮತ್ತೊಂದು ಆಕ್ಷೇಪವನ್ನು 'ಉಕ್ತ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ವಸ್ತುತಸ್ತು 'ಸರ್ವೇಷು ಭೂತೇಷು' ಎಂಬಲ್ಲಿರುವ ಸಾಮಾನ್ಯವಾಚಕವಾದ 'ಭೂತ' ಎಂಬ ಪದದಿಂದಲೇ ಆದಿತ್ಯನನ್ನೂ ಸಹ ಸಂಗ್ರಹಿಸಬಹುದು. ಆದ್ದರಿಂದ ಪರಮಾತ್ಮನು ಉಳಿದ ಪದಾರ್ಥಗಳಲ್ಲಿರುವಂತೆ ಆದಿತ್ಯನಲ್ಲಿಯೂ ಇದ್ದಾನೆನ್ನಬಹುದು. ಆದರೆ 'ಚಂದ್ರಮಸ್ಯೇತಂ' ಎಂಬಲ್ಲಿ ಯಾವರೀತಿಯಾಗಿ ವಿಶೇಷವಾಗಿ 'ಚಂದ್ರ' ಎಂಬ ಪದದಿಂದಲೇ ಚಂದ್ರನನ್ನು ಹೇಳಿದ್ದಾರೋ, ಅದರಂತೆ ಆದಿತ್ಯವೆಂಬ ಪದದಿಂದ ಆದಿತ್ಯನನ್ನು ಗ್ರಹಣ ಮಾಡಿರುವುದಿಲ್ಲ. ಆದ್ದರಿಂದ ಆದಿತ್ಯನಲ್ಲಿ ಭಗವಂತನಿದ್ದಾನೆಂದು ಹೇಳಲು ಸಾಧ್ಯವಿಲ್ಲ. ಹೊರತಾಗಿ ಆದಿತ್ಯನೇ ಎಲ್ಲೆಡೆ ಇದ್ದಾನೆಂದು ಹೇಳಬಹುದು. ಹೀಗೆ 'ಅನುಕ್ತತ್ವ' ಎಂಬ ಲಿಂಗದಿಂದ ಆದಿತ್ಯನೇ ಸರ್ವಗತನೆಂದು ತಿಳಿಯುತ್ತದೆ. ಆದ್ದರಿಂದಲೇ ಟೀಕೆಯಲ್ಲಿ ''ಏತಮಾದಿತ್ಯೇ ಇತ್ಯುಕ್ತಿಃ ಸ್ಯಾತ್'' ಎಂಬ ಮಾತು ಹೊರಟಿರುತ್ತದೆ.

**गुरुराजीयम् – नन्वादित्यश्रुतेर्भगवत्परत्वे तन्निष्ठत्वेन श्रुतस्य सर्वगस्यापि भगवत्परत्वसिद्धिः स्यादेवेत्यत – उक्तं साक्षादिति ।**

**अस्तु वा सौरमन्त्रोदाहरणात्सूर्यप्राप्तिरित्याह – सौरेति । ननु सर्वेष्विति सर्वशब्देनादित्यस्यापि ग्रहणसम्भवात्कथं सावकाशेनानुक्तत्वलिङ्गेन निर्णयः स्यादित्यत आह – उक्तादित्येति ।।**

ಪರಿಪೂರ್ಣಚಂದ್ರಿಕಾ



ಸರ್ವಗತತ್ವಾಧಿಕರಣವನ್ನು ನಾಮಪಾದದಲ್ಲಿ ಸೇರಿಸಬಹುದು. ಅಥವಾ ಲಿಂಗಪಾದದಲ್ಲಿ ಸೇರಿದರೂ ನಾಮಸಮನ್ವಯವನ್ನೇ. ಮಾಡಬಹುದೆಂದು ಪ್ರಶ್ನಿಸುತ್ತಿದ್ದಾರೆ. ಏಕೆಂದರೆ ಆದಿತ್ಯಶ್ರುತಿಯ ಬೆಂಬಲದಿಂದಷ್ಟೇ ಸರ್ವಗತತ್ವವನ್ನು ಅನ್ಯತ್ರಪ್ರಸಿದ್ಧವೆನ್ನಬೇಕು. ಹೀಗಿರುವಾಗ ಆದಿತ್ಯವೆಂಬ ಶ್ರುತಿಸಮನ್ವಯವನ್ನೇ ಮಾಡುವುದು ಹೆಚ್ಚು ಸ್ವರಸ. ಮತ್ತು ವೈಶ್ವಾನರಾಧಿಕರಣದಲ್ಲಿ ಒಂದು ನಾಮದ ಸಮನ್ವಯದಿಂದ ಅನೇಕ ಲಿಂಗಗಳನ್ನು ಸಮನ್ವಯ ಮಾಡಿದಂತೆ ಇಲ್ಲಿಯೂ 'ಸಂವತ್ಸರಸಾರತ್ವ' ಮೊದಲಾದ ಅನೇಕ ಲಿಂಗಗಳ ಸಮನ್ವಯವು ಒಂದೇ ಆದಿತ್ಯಶಬ್ದದ ಸಮನ್ವಯದಿಂದ ಸಿದ್ಧವಾಗುತ್ತದೆ. ಆದ್ದರಿಂದ ಸರ್ವಗತತ್ವಲಿಂಗದ ಸಮನ್ವಯಕ್ಕೋಸ್ಕರ ಈ ಅಧಿಕರಣವು ಹೊರಟಿದೆ ಎಂದು ಹೇಗೆ ಹೇಳುತ್ತೀರಿ ?

ಈ ಪ್ರಶ್ನೆಗೆ ಗ್ರಂಥಕಾರರು ಹಲವು ಮುಖಗಳಲ್ಲಿ ಉತ್ತರಿಸಿದ್ದಾರೆ. ಲಿಂಗಪಾದದಲ್ಲಿರುವ ಎಲ್ಲಾ ಅಧಿಕರಣಗಳಲ್ಲಿಯೂ ಹೀಗೆಯೇ ಪ್ರಶ್ನಿಸುತ್ತಿರೋ? ಅಥವಾ ಈ ಅಧಿಕರಣದಲ್ಲಿ ಮಾತ್ರ ನಾಮಸಮನ್ವಯ ಮಾಡಬಹುದೆಂದು ಪ್ರಶ್ನಿಸುತ್ತಿರೋ? ಎಲ್ಲಾ ಅಧಿಕರಣಗಳಲ್ಲಿಯೂ ನಾಮಸಮನ್ವಯವನ್ನೇ ಮಾಡಿರಿ? ಎಂದು ಪ್ರಶ್ನಿಸಲಾಗದು. ಏಕೆಂದರೆ ಅಂತರ್ಯಾಮ್ಯಧಿಕರಣದಲ್ಲಿ ನಾಮಾತ್ಮಕ ಶಬ್ದಗಳ ಪ್ರಸಕ್ತಿಯೇ ಇರುವುದಿಲ್ಲ. ಕೇವಲ ಲಿಂಗಗಳ ಬೆಂಬಲದಿಂದಷ್ಟೇ ಅಂತರ್ಯಾಮಿತ್ವ ಮೊದಲಾದ ಲಿಂಗಗಳಿಗೆ ಅನ್ಯತ್ರಪ್ರಸಿದ್ಧತ್ವವನ್ನು ಸಮರ್ಥಿಸಲಾಗಿದೆ. ಈ ಅಂತರ್ಯಾಮ್ಯಧಿಕರಣಕ್ಕೋಸ್ಕರವಂತು ಲಿಂಗಪಾದವು ಹೊರಡಲೇಬೇಕು. ಇನ್ನು ಸರ್ವಗತತ್ವಾಧಿಕರಣಕ್ಕೆ ಮಾತ್ರ ಈ ಪಾದದಲ್ಲಿ ಸಂಗತಿಯಿಲ್ಲವೆನ್ನಬೇಕು. ಆದರೆ ಅಂತರಧಿಕರಣದಿಂದ ಆದಿತ್ಯಶ್ರುತಿಯ ಸಮನ್ವಯವು ಸಿದ್ಧವಾಗಿರುವಾಗ ಪುನಃ ಈ ಅಧಿಕರಣಕ್ಕೆ ಸಂಗತಿಯಿರುವುದಿಲ್ಲ. ಮತ್ತು ಪೂರ್ವಪಕ್ಷ ಪ್ರಾಪಕವಾದ ಅಥವಾ ಸಿದ್ಧಾಂತಪ್ರಾಪಕವಾದ ಯುಕ್ತಿಗಳೆಲ್ಲವೂ ದೊರೆಯವುದು ಸರ್ವಗತತ್ವವೆಂಬ ಲಿಂಗವನ್ನು ಸಮನ್ವಯ ಮಾಡಲು ಹೊರಟಾಗ ಮಾತ್ರ. ಈ ಎಲ್ಲಾ ಯುಕ್ತಿಗಳನ್ನು ಆಲೋಚಿಸಿದಾಗ ವೈಶ್ವಾನರಾಧಿಕರಣದಂತೆ ಸರ್ವಗತತ್ವಾಧಿಕರಣವನ್ನು ವಿವಕ್ಷಿಸಲು ಸಾಧ್ಯವಿಲ್ಲ.





## ಸಕಲ ಜೀವರೇ ಸರ್ವಗತರೆಂದು ಪೂರ್ವಪಕ್ಷ

### तात्पर्यचन्द्रिका

**चक्षुर्मयत्वादिलिङ्गाच्च सर्वजीवानां प्राप्तिः, आनन्दमयोक्तस्य "को ह्येवान्यात्" इति प्राचुर्यार्थे हेतुव्यपदेशस्य तत्प्रायपाठस्य च अत्राभावेन तन्न्यायाविषयत्वात् ।**

ಸರ್ವಗತತ್ವಾಧಿಕರಣ (೧-೨-೧)

**ज्ञानकरणतया प्रसिद्धचक्षुरादिसम्बन्धस्यैव नित्यज्ञानेऽनन्तर्यामिण्यसम्भवेन तत्प्राचुर्यस्य सुतरामसम्भवाच्च ।**

**चक्षुश्शब्दस्य विष्णुपरत्वे च मयटो वैयर्थ्यम् ।**

ಅನುವಾದ - ಚಕ್ಷುರ್ಮಯತ್ವಾದಿಲಿಂಗಗಳು ಕೇಳಿಸುತ್ತಿರುವುದರಿಂದ, ಸಕಲಜೀವರು ಸರ್ವಗತರಾಗಬಹುದು. ಆನಂದಮಯ ಎಂಬಲ್ಲಿರುವ 'ಮಯಟ್' ಪ್ರತ್ಯಯಕ್ಕೆ 'ಕೋ ಹ್ಯೇವಾನ್ಯಾತ್' ಇತ್ಯಾದಿಯಾಗಿ ಪ್ರಾಚುರ್ಯವೆಂಬ ಎಂಬರ್ಥವನ್ನು ಹೇಳಲಾಗಿದೆ. ಈ ಅರ್ಥವನ್ನೇ ಸ್ವೀಕರಿಸಲು ಜಗಚ್ಚೇಷ್ಟಕತ್ವ ಮೊದಲಾದ ಲಿಂಗಗಳನ್ನು ಅಲ್ಲಿ ಹೇಳಿದ್ದಾರೆ. ಉಳಿದ ಮನೋಮಯಾದಿ ಶಬ್ದಗಳಲ್ಲಿರುವ 'ಮಯಟ್' ಪ್ರತ್ಯಯಕ್ಕೆ ಪ್ರಾಚುರ್ಯವೆಂಬರ್ಥವನ್ನು ಸ್ವೀಕರಿಸಲು ಪ್ರಾಯಪಾಠವನ್ನು ಪ್ರಮಾಣವನ್ನಾಗಿ ನಿರೂಪಿಸಿದ್ದಾರೆ. ಅದರಂತೆ ಪ್ರಕೃತ ಚಕ್ಷುರ್ಮಯವೆಂಬಲ್ಲಿ 'ಮಯಟ್' ಪ್ರತ್ಯಯಕ್ಕೆ ಪ್ರಾಚುರ್ಯವೆಂಬರ್ಥವನ್ನು ಹೇಳಲು ಅಂತಹ ಹೇತುವಾಗಲಿ ಪ್ರಾಯಪಾಠವಾಗಲಿ ಇರುವುದಿಲ್ಲ. ಆದ್ದರಿಂದ ಆನಂದಮಯಾಧಿಕರಣದ ನ್ಯಾಯಕ್ಕೆ ಇದು ವಿಷಯವಾಗುವುದಿಲ್ಲ.

ಮತ್ತು ಇಲ್ಲಿರುವ 'ಚಕ್ಷುರ್ಮಯ' ಶಬ್ದದಿಂದ ಭಗವಂತನನ್ನು ಸ್ವೀಕರಿಸಲು ಸಾಧ್ಯವೂ ಇಲ್ಲ. ಏಕೆಂದರೆ 'ಚಕ್ಷುಃ' ಎಂಬ ಪದವು ಜ್ಞಾನಕರಣವಾದ ಇಂದ್ರಿಯದಲ್ಲಿ ಪ್ರಸಿದ್ಧವಾಗಿದೆ. ಅಂದರೆ ಯಾರಿಗೆ ಜ್ಞಾನವು ಹುಟ್ಟುತ್ತದೋ, ಅಂತಹವನಲ್ಲಿ ಮಾತ್ರ ಚಕ್ಷುರ್ಮಯತ್ವವನ್ನು ಹೇಳಬಹುದು. ನಿತ್ಯಜ್ಞಾನಿಯಾದ ಭಗವಂತನಿಗೆ ಇಂತಹ ಚಕ್ಷುರಿಂದ್ರಿಯದ ಸಂಬಂಧವನ್ನಾದರೂ ಹೇಳಲು ಹೇಗೆ ಸಾಧ್ಯ? ಮತ್ತು ಅಂತರ್ಯಾಮಿಯಾದ ಭಗವಂತನಲ್ಲಿ ಬಾಹ್ಯಶರೀರದಲ್ಲಿರುವ ಚಕ್ಷುರಿಂದ್ರಿಯದ ಸಂಬಂಧವನ್ನು ಹೇಳಲಾಗದು. ಹೀಗೆ ಚಕ್ಷುರಿಂದ್ರಿಯದ ಸಂಬಂಧವನ್ನೇ ಹೇಳಲು ಸಾಧ್ಯವಿಲ್ಲದಿದ್ದಾಗ ಅದರ ಪ್ರಾಚುರ್ಯವನ್ನಂತು ಸುತರಾಂ ಹೇಳಲು ಸಾಧ್ಯವಿಲ್ಲ.

ಶ್ರುತಿಯಲ್ಲಿರುವ 'ಚಕ್ಷುಃ' ಎಂಬ ಶಬ್ದವು ವಿಷ್ಣುಪರವೆಂದು ಹೇಳಿದಾಗ 'ಮಯಟ್' ಪ್ರತ್ಯಯವು ವ್ಯರ್ಥವಾಗುತ್ತದೆ.

ಕಠಿಣಪದಾರ್ಥ

ಹೇತುವ್ಯಪದೇಶಸ್ಯ = ಜಗಶ್ಚೇಷ್ಟಕತ್ವವೆಂಬ ಹೇತುವಿನ ಹೇಳುವಿಕೆ. ತತ್ಪ್ರಾಯಪಾಠಸ್ಯ = ಆನಂದಮಯ ಶಬ್ದದ ಪ್ರಾಯಪಾಠವು, ಅತ್ರ = ಚಕ್ಷುರ್ಮಯನಿಗೆ, ನಿತ್ಯಜ್ಞಾನೇ - ಹೇತುಗರ್ಭವಿಶೇಷಣ, ತತ್ಪ್ರಾಚುರ್ಯಸ್ಯ = ಚಕ್ಷುರಿಂದ್ರಿಯದ ಪ್ರಾಚುರ್ಯವು.

**प्रकाशः** – एवमादित्यकोटिकपूर्वपक्षं टीकोक्तं समर्थ्येदानीं न्यायविवरणगताऽऽदिपदोपात्तजीवलिङ्गेन ''सर्वजीवानां चैतत्सर्वगतत्वं'' इति टीकोक्तजीवकोटिकपूर्वपक्षं च समर्थयते – चक्षुर्मयत्यादि इति ।

ಪರಿಪೂರ್ಣಚಂದ್ರಿಕಾ

''चक्षुर्मयः श्रोत्रमयश्छन्दोमयो मनोमयो वाङ्मय आत्मा'' इति वाक्ये श्रुतानि टीकोक्तान्यादिपदार्थः । ननूक्तमत्र मयटः प्राचुर्यार्थत्वेन पूर्णज्ञानत्वादिना तदुपपत्तेरित्यतः तद्वैषम्यमाह – **आनन्दमयेति** ।

**ವಿವರಣೆ** - ಇಲ್ಲಿಯ ತನಕ ಆದಿತ್ಯಕೋಟಿಕ ಪೂರ್ವಪಕ್ಷವನ್ನು ಟೀಕೆಯ ಪ್ರಕಾರ ಸಮರ್ಥಿಸಿದ್ದಾಯಿತು. ಪ್ರಕೃತ ನ್ಯಾಯವಿವರಣದಲ್ಲಿರುವ ಆದಿಪದದಿಂದ ತಿಳಿಯುವ ಜೀವನ ಲಿಂಗವನ್ನು ತೋರಿಸುತ್ತಾ 'ಸರ್ವಜೀವಾನಾಂ ಚೈತತ್ಸರ್ವಗತತ್ವಂ' ಎಂಬ ಟೀಕೆಯಲ್ಲಿ ಹೇಳಿದ ಜೀವಕೋಟಿಕಪೂರ್ವಪಕ್ಷವನ್ನು 'ಚಕ್ಷುರ್ಮಯತ್ವಾದಿ' ಇತ್ಯಾದಿಯಾಗಿ ಸಮರ್ಥಿಸುತ್ತಿದ್ದಾರೆ. ''ಚಕ್ಷುರ್ಮಯಃಶ್ರೋತ್ರಮಯ-ಶ್ಛಂದೋಮಯೋ ಮನೋಮಯೋ ವಾಙ್ಮಯ ಆತ್ಮಾ'' ಎಂಬ ವಾಕ್ಯದಲ್ಲಿ ಕೇಳಿಸುತ್ತಿರುವ ಮನೋಮಯತ್ವಾದಿಗಳು ಆದಿಪದದ ಅರ್ಥವಾಗಿದೆ.

'ಮಯಟ್' ಪ್ರತ್ಯಯಕ್ಕೆ ಪ್ರಾಚುರ್ಯವೆಂಬರ್ಥವನ್ನು ಅಂಗೀಕರಿಸಿ ಮನೋಮಯನೆಂದರೆ ಪೂರ್ಣಜ್ಞಾನವೆಂಬ ಅರ್ಥವನ್ನು ಆನಂದಮಯಾಧಿಕರಣದಲ್ಲಿ ಹೇಳಿದೆಯಲ್ಲವೇ? ಎಂಬ ಪ್ರಶ್ನೆಗೆ ಚಕ್ಷುರ್ಮಯಶಬ್ದಕ್ಕೂ ಮನೋಮಯಾದಿ ಶಬ್ದಗಳಿಗೂ ವೈಲಕ್ಷಣ್ಯವಿದೆಯೆಂದು 'ಆನಂದಮಯ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – यदेष आकाशनाम विष्णुः पूर्णानन्दो न स्यात्, तर्ह्ययं न जगच्चेष्टयेत्, प्रवृत्तिहेतूनां चतुर्णां मध्ये दुःखोद्रेकरागद्वेषशून्यस्य सुखोद्रेकैकनिबन्धनत्वात्प्रवृत्तेः। यद्ययं न चेष्टयेत्तर्हि चेष्टयेन्न कोऽपीति पूर्णानन्दत्वसाधकजगच्चेष्टकत्वरूपहेतुव्यपदेशस्य भावेन तत्र प्राचुर्यार्थत्वेऽपीह तदभावेन तन्न्यायाविषयत्वादित्यर्थः । अत एव ''हेतुव्यपदेशात्'' इति सूत्रं प्राचुर्यार्थत्वेऽपि योजितमिति भावः ।

ಒಂದು ವೇಳೆ ಆಕಾಶನೆಂಬ ವಿಷ್ಣುವು ಪೂರ್ಣಾನಂದನಾಗದಿದ್ದಲ್ಲಿ ಜಗತ್ತನ್ನು ಪ್ರೇರಣೆ ಮಾಡಲಾರನು. ಏಕೆಂದರೆ ನಾಲ್ಕುವಿಧ ಪ್ರವೃತ್ತಿಹೇತುಗಳಲ್ಲಿ ರಾಗದ್ವೇಷವಿಲ್ಲದ ಭಗವಂತನಿಗೆ ದುಃಖೋದ್ರೇಕದಿಂದ ಪ್ರವೃತ್ತಿಯು ಉಂಟಾಗದು. ಆದ್ದರಿಂದ ಸುಖೋದ್ರೇಕದಿಂದಲೇ ಪ್ರವೃತ್ತಿಯನ್ನು ಹೇಳಬೇಕು. ಒಂದು ವೇಳೆ ಇವನು ಪ್ರವೃತ್ತಿಯನ್ನು ಮಾಡಿಸದಿದ್ದರೆ ಯಾರೂ ಸಹ ಪ್ರವೃತ್ತರೇ ಆಗಲಾರರು ಎಂಬ ಪೂರ್ಣಾನಂದತ್ವಕ್ಕೆ ಸಾಧಕವಾದ ಜಗಚ್ಚೇಷ್ಟಕತ್ವವೆಂಬ ಹೇತುವನ್ನು ಆನಂದಮಯಾಧಿಕರಣದಲ್ಲಿ ಹೇಳಿದ್ದಾರೆ. ಈ ಕಾರಣದಿಂದಲೇ 'ಮಯಟ್' ಪ್ರತ್ಯಯಕ್ಕೆ ಪ್ರಾಚುರ್ಯವೆಂಬರ್ಥವನ್ನು ಅಂಗೀಕರಿಸಬೇಕು. ಆದರೆ ಪ್ರಕೃತ ಅಂತಹ ಹೇತುಗಳು ಯಾವುದೂ ಕಾಣಿಸದ ಕಾರಣ ಆನಂದಮಯಾಧಿಕರಣದ ನ್ಯಾಯಕ್ಕೆ ಚಕ್ಷುರ್ಮಯತ್ವವು ವಿಷಯವಾಗುವುದಿಲ್ಲ. ಆದ್ದರಿಂದ ಇಲ್ಲಿರುವ 'ಮಯಟ್' ಪ್ರತ್ಯಯಕ್ಕೂ ಸಹ ಪ್ರಾಚುರ್ಯವೆಂಬರ್ಥವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದಲೇ 'ಹೇತುವ್ಯಪದೇಶಾತ್' ಎಂಬ ಸೂತ್ರವನ್ನು ಪ್ರಾಚುರ್ಯಾರ್ಥದಲ್ಲಿ

ಯೋಜನೆ ಮಾಡಲಾಗಿದೆಯೆಂದು ತಿಳಿಯಬೇಕು.

**प्रकाशः** – नन्वानन्दमये हेतुव्यपदेशोऽपि विज्ञानमयमनोमयादौ तदभावेऽपि प्राचुर्यार्थत्वं स्वीकृतमित्यत आह – **तत्प्रायेति** । आनन्दमयप्रायपाठस्यैवेत्यर्थः ।

जीवेऽपि विकारार्थत्वायोगादकामेनाप्युपेयं प्राचुर्यार्थत्वमित्यत आह – **ज्ञानेति** ।

ಆನಂದಮಯನಲ್ಲಿ ಜಗಚ್ಚೇಷ್ಟಕತ್ವವೆಂಬ ಹೇತುವಿನ ವ್ಯಪದೇಶವಿದ್ದರೂ ವಿಜ್ಞಾನಮಯ, ಮನೋಮಯಗಳಲ್ಲಿ ಜಗಚ್ಚೇಷ್ಟಕತ್ವ ಎಂಬ ಹೇತುಗಳು ಕಾಣಸುತ್ತಿಲ್ಲವಲ್ಲ? ಎಂದು ಶಂಕಿಸಬಾರದು. ಏಕೆಂದರೆ ಪ್ರಾಯಪಾಠದ ಬಲದಿಂದ 'ಮಯಟ್' ಪ್ರತ್ಯಯಕ್ಕೆ ಪ್ರಾಚುರ್ಯವೆಂಬರ್ಥವನ್ನು ಅಂಗೀಕರಿಸಬೇಕಾಗುತ್ತದೆ. ಅಂತಹ ಪ್ರಾಯಪಾಠವನ್ನು ಇಲ್ಲಿ ಹೇಳಬಹುದಲ್ಲವೇ ? ಎಂಬ ಪ್ರಶ್ನೆಗೆ 'ತತ್ಪ್ರಾಯಪಾಠಸ್ಯ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಆನಂದಮಯ ಶಬ್ದದ ಪ್ರಾಯಪಾಠವೆಂದರ್ಥ.

ಜೀವನಲ್ಲಿ ಕೇಳಿಸುತ್ತಿರುವ ಚಕ್ಷುರ್ಮಯ ಎಂಬಲ್ಲಿರುವ ಮಯಟ್‌ಪ್ರತ್ಯಯಕ್ಕೂ ಸಹ ವಿಕಾರವೆಂಬರ್ಥವನ್ನು ಹೇಳಲಾಗದು. ಆದ್ದರಿಂದ ಇಷ್ಟವಿಲ್ಲದಿದ್ದರೂ ಪ್ರಾಚುರ್ಯವೆಂಬರ್ಥವನ್ನೇ ಹೇಳಬೇಕಲ್ಲವೇ? ಎಂಬ ಪ್ರಶ್ನೆಗೆ 'ಜ್ಞಾನಕರಣತಯಾ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**प्रकाशः** – यद्वा – प्राचुर्यार्थत्वेऽप्यनुपपत्तिमाह – **ज्ञानेति** । ज्ञानकरणत्वेन प्रसिद्धं यच्चक्षुरादि तत्सम्बन्धस्यैवासम्भवेन तद्बाहुल्यरूपप्राचुर्यस्य सुतरामयोगादित्यर्थः ।

प्रसिद्धपदेन चक्षुःपदस्याप्रसिद्धार्थस्वीकारे प्रसिद्धिबाध इति सूचितम् । ''ज्योतिराद्यधिष्ठानं तु तदामननात्'' इत्यत्र द्वितीये चक्षुरादिकरणानामीश्वर-प्रयोज्यत्वेन तदीयत्वमुच्यते, नतु जीवस्यैव ज्ञानजनकतया तत्सम्बन्ध इति भावेनोक्तं – **सम्बन्धस्यैवेति** ।

तत्र हेतुः – **नित्यज्ञाने इति** । एतेनन्तर्यामिविषयतयोपपन्नमिति प्रत्युक्तं, तस्यापि नित्यज्ञानत्वादिति ।

ननु न ज्ञानकरणमिह चक्षुः, किन्तु ''चक्षुषश्चक्षुः'' इत्यादाविव विष्णुरेवेत्यत आह – **चक्षुश्शब्दस्येति** ।

ಅಥವಾ ಪ್ರಾಚುರ್ಯವೆಂಬರ್ಥವನ್ನು ಅಂಗೀಕರಿಸಿದರೂ ಅನುಪಪತ್ತಿ ಬರುತ್ತದೆಂದು ಜ್ಞಾನಕರಣತಯಾ ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಚಕ್ಷುರಾದಿ ಇಂದ್ರಿಯಗಳು ಜ್ಞಾನಕ್ಕೆ ಕರಣವಾಗಿದೆಯೆಂದು ಪ್ರಸಿದ್ಧವಾಗಿದೆ.

ಇಂತಹ ಚಕ್ಷುರಾದಿ ಇಂದ್ರಿಯಗಳ ಸಂಬಂಧವನ್ನು ಅಂತರ್ಯಾಮಿಯಲ್ಲಿ ಹೇಳಲು ಸಾಧ್ಯವಾಗದಿದ್ದಾಗ ಅವುಗಳ ಪ್ರಾಚುರ್ಯವನ್ನಂತು ಸುತರಾಂ ಹೇಳಲು ಸಾಧ್ಯವಿಲ್ಲ ಎಂದರ್ಥ.

'ಪ್ರಸಿದ್ಧ' ಎಂಬ ಪದದಿಂದ 'ಚಕ್ಷುಃ' ಎಂಬ ಪದಕ್ಕೆ ಅಪ್ರಸಿದ್ಧಾರ್ಥವನ್ನು ಸ್ವೀಕರಿಸಿದರೆ ಪ್ರಸಿದ್ಧಿಬಾಧದೋಷ ಬರುತ್ತದೆಂದು ಸೂಚಿಸಿದ್ದಾರೆ. ''ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್'' ಎಂಬ ಎರಡನೇ ಅಧ್ಯಾಯದ ಸೂತ್ರದಲ್ಲಿ ಚಕ್ಷುರಾದಿ ಇಂದ್ರಿಯಗಳು ಈಶ್ವರನಿಂದ ನಿಯಮ್ಯವಾಗಿವೆಯೆಂದು ಹೇಳುತ್ತಾರೆ ಹೊರತಾಗಿ ಜೀವನಂತೆ ಜ್ಞಾನಜನಕವಾದ ಸಂಬಂಧವನ್ನು ಪರಮಾತ್ಮನಿಗೆ ಹೇಳುವುದಿಲ್ಲವೆಂಬ ಅಭಿಪ್ರಾಯದಿಂದ 'ಸಂಬಂಧಸ್ಸ್ಯೈವ' ಎಂಬ ಮಾತು ಹೊರಟಿದೆ.

ಈ ವಿಷಯದಲ್ಲಿ 'ನಿತ್ಯಜ್ಞಾನೇ' ಎಂಬುದು ಹೇತುವಾಗಿದೆ. ಹೀಗೆ ಹೇಳಿದ್ದರಿಂದ ಅಂತರ್ಯಾಮಿಯಾದ್ದರಿಂದ ಪರಮಾತ್ಮನಿಗೆ ಚಕ್ಷುರ್ಮಯತ್ವವನ್ನು ಹೇಳಬಹುದೆಂಬ ಶಂಕೆಯನ್ನು ಪರಿಹರಿಸಿದಂತಾಯಿತು. ಏಕೆಂದರೆ ಪರಮಾತ್ಮನು ನಿತ್ಯಜ್ಞಾನಿಯಾಗಿದ್ದಾನೆ.

ಈ ಶ್ರುತಿಯಲ್ಲಿ ಪ್ರಸಕ್ತವಾಗಿರುವ 'ಚಕ್ಷುಃ' ಶಬ್ದವು ಜ್ಞಾನಕರಣವಾದ ಇಂದ್ರಿಯವನ್ನು ಹೇಳುತ್ತಿಲ್ಲ ಹೊರತಾಗಿ 'ಚಕ್ಷುಷಶ್ಚಕ್ಷುಃ' ಎಂಬ ಮಾತಿನಂತೆ ವಿಷ್ಣುವನ್ನೇ ಪ್ರತಿಪಾದಿಸುತ್ತದಲ್ಲವೇ? ಎಂಬ ಪ್ರಶ್ನೆಗೆ 'ಚಕ್ಷುಶ್ಶಬ್ದಸ್ಯ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – ननु सुधायां चक्षुर्मयत्वादेस्सावकाशत्वमाशङ्क्य ''हेत्वन्तरेण पूर्वपक्षे सत्यभ्युच्चयमात्रत्वेन तेषामुपन्यासः'' इति, टीकायां च ''नच तल्लिङ्गमन्तर्यामिविषयं, तस्यापरिच्छिन्नत्वेनाल्पौकस्त्वायोगात्'' इति चक्षुर्मयत्वादेस्सावकाशत्वमुपेत्य सौत्राल्पोकस्त्वमेव मूलयुक्तित्वेनोक्तम् ।

न्यायविवरणटीकायां च तथैवोक्तम् । तथा च तद्विरुध्यत इति चेन्न,

अभ्युपेत्यवादेन तथोक्तावपीह वास्तवाशयेन निरवकाशत्वोक्तेः । अत एवाग्रे टीका ''चक्षुर्मयत्वाद्ययोगाच्च'' इति । वक्ष्यति चैतदक्षरार्थोक्तिप्रस्तावे ।

ಆಕ್ಷೇಪ - ನ್ಯಾಯಸುಧೆಯಲ್ಲಿ 'ಚಕ್ಷುರ್ಮಯತ್ವ' ಮೊದಲಾದವುಗಳನ್ನು ಸಾವಕಾಶವೆಂದು ಆಶಂಕಿಸಿ ''ಹೇತ್ವಂತರೇಣ ಪೂರ್ವಪಕ್ಷೇ ಸತ್ಯಭ್ಯುಚ್ಚಯಮಾತ್ರತ್ವೇನ ತೇಷಾಮುಪನ್ಯಾಸಃ'' ''ಮತ್ತೊಂದು ಹೇತುವಿನಿಂದ ಪೂರ್ವಪಕ್ಷ ಮಾಡಿದಾಗ ಹೊಸದಾದ ಯುಕ್ತಿಗಳನ್ನು ಹೇಳಿದ್ದಾರೆ.'' ಎಂಬುದಾಗಿ ನಿರೂಪಿಸಿರುತ್ತಾರೆ. ಟೀಕೆಯಲ್ಲಿಯೂ ಸಹ ''ನಚ ತಲ್ಲಿಂಗಂ ಅಂತರ್ಯಾಮಿವಿಷಯಮ್, ತಸ್ಯಾಪರಿಚ್ಛಿನ್ನ-ತ್ವೇನಾಲ್ಪೌಕಸ್ತ್ವಾಯೋಗಾತ್'' ಚಕ್ಷುರ್ಮಯತ್ವ ಎಂಬ ಲಿಂಗವು ಅಂತರ್ಯಾಮಿಯಲ್ಲಿ ಬರುವುದಿಲ್ಲ. ಹಾಗಾದರೆ ಸರ್ವಗತನಲ್ಲಿ ಅಲ್ಪೌಕಸ್ತ್ವವನ್ನು ಹೇಳುವ ಪ್ರಸಂಗ ಬರುತ್ತದೆಂಬುದಾಗಿ ಚಕ್ಷುರ್ಮಯತ್ವಾದಿ-ಲಿಂಗಗಳಿಗೆ ಸಾವಕಾಶತ್ವವನ್ನು ಅಂಗೀಕರಿಸಿದ್ದಾರೆ. ಇದಕ್ಕೆ ಸೂತ್ರದಲ್ಲಿರುವ ಅಲ್ಪೌಕಸ್ತ್ವವನ್ನೇ ಮೂಲ ಯುಕ್ತಿಯನ್ನಾಗಿ ಹೇಳಿದ್ದಾರೆ.

ನ್ಯಾಯವಿವರಣದ ಟೀಕೆಯಲ್ಲಿಯೂ ಸಹ ಹೀಗೆಯೇ ಹೇಳಿದ್ದಾರೆ. ಆದರೆ ನೀವು ಚಕ್ಷುರ್ಮಯತ್ವವೆಂಬ ಲಿಂಗವನ್ನು ಜೀವನಲ್ಲಿ ನಿರವಕಾಶವೆನ್ನುತ್ತಿದ್ದೀರಿ. ನಿಮ್ಮ ಮಾತಿಗೆ ನ್ಯಾಯಸುಧಾ ಮೊದಲಾದ ಗ್ರಂಥಗಳ ವಿರೋಧ ಬರುತ್ತದಲ್ಲವೇ ?

ಸಮಾಧಾನ - ಇದು ತಪ್ಪು. ಅಂಗೀಕಾರವಾದ ಮಾಡಿ ಹಾಗೆ ಹೇಳಿದ್ದಾರೆ. ವಾಸ್ತವಾಭಿಪ್ರಾಯದಿಂದ ಇಲ್ಲಿ ನಿರವಕಾಶತ್ವವನ್ನು ಹೇಳಲಾಗಿದೆ. ಆದ್ದರಿಂದಲೇ ಮುಂದೆ ಟೀಕೆಯಲ್ಲಿ "ಚಕ್ಷುರ್ಮಯತ್ವಾದ್ಯಯೋಗಾಚ್ಚ" ಎಂಬುದಾಗಿ ಟೀಕಾಕ್ಷರಾರ್ಥವನ್ನು ನಿರೂಪಿಸುವ ಸಂದರ್ಭದಲ್ಲಿ ಹೇಳಿದ್ದಾರೆ.

**गुरुराजीयम्** – ननु कथं चक्षुमर्यत्वादिलिङ्गाज्जीवप्राप्तिः । आनन्दमयाधिकरणन्यायेन प्राचुर्यार्थतया चक्षुर्मयत्वादेर्ब्रह्मणि सावकाशत्वादित्यत आह – **आनन्दमयोक्तस्येति** ।। ननु तथापि पादान्त्यप्राणाधिकरणन्यायेनान्तर्यामि-विषयतया चक्षुर्मयत्वं भगवति सावकाशमित्यत आह – **ज्ञानकरणतयेति** ।।




ಇಲ್ಲಿಯ ತನಕ ಆದಿತ್ಯಪ್ರಾಪಕವಾದ ಪೂರ್ವಪಕ್ಷ ಲಿಂಗಗಳನ್ನು ನಿರೂಪಿಸಿದರು. ಈಗ ಜೀವಪ್ರಾಪಕವಾದ ಪೂರ್ವಪಕ್ಷಲಿಂಗಗಳನ್ನು ಹೇಳುತ್ತಿದ್ದಾರೆ. 'ಚಕ್ಷುರ್ಮಯತ್ವ' ಎಂಬುದು ಜೀವನೇ ಸರ್ವಗತನೆನ್ನಲು ಲಿಂಗವಾಗಿದೆ. ಒಂದುವೇಳೆ 'ಚಕ್ಷುರ್ಮಯ' ಎಂಬಲ್ಲಿರುವ ಮಯಟ್ ಪ್ರತ್ಯಯಕ್ಕೆ 'ಪ್ರಾಚುರ್ಯ' ಎಂಬರ್ಥವನ್ನು ಹೇಳಿದರೆ ಮಾತ್ರ ಪರಮಾತ್ಮನೇ ಚಕ್ಷುರ್ಮಯನೆನ್ನಬಹುದು. ಆದರೆ ಅನೇಕ ಬಾಧಕಗಳಿರುವುದರಿಂದ ಇಲ್ಲಿರುವ 'ಮಯಟ್' ಪ್ರತ್ಯಯಕ್ಕೆ 'ಪ್ರಾಚುರ್ಯ' ಎಂಬರ್ಥವನ್ನು ಹೇಳಲು ಸಾಧ್ಯವಿಲ್ಲ. ಹೊರತಾಗಿ 'ವಿಕಾರ' ಎಂಬರ್ಥವನ್ನೇ ಹೇಳಬೇಕು. ಆವಾಗ ಜೀವನೇ ಚಕ್ಷುರ್ಮಯನಾಗುತ್ತಾನೆ. ಈ ಕಾರಣದಿಂದ ಜೀವನನ್ನೇ ಸರ್ವಗತನೆನ್ನಬೇಕು.





ಜೀವನ ಪ್ರಾಪಕಲಿಂಗಗಳು ಆದಿತ್ಯನಲ್ಲಿಲ್ಲ

## तात्पर्यचन्द्रिका

**नच चक्षुर्मयत्वादीनां आदित्ये पर्यवसानम्, "चत्वारः पुरुषा इति बाध्वः" इति बाध्वचिह्नितोपक्रमस्य "इति ह स्माह बाध्वः" इति बाध्वचिह्नितोपसंहारस्यैव च वाक्यस्यैकत्वात्तन्मध्यस्थादित्यशब्दस्य सूर्यपरत्वेऽपि तदुपरितने "एतं ह्येव बह्वृचाः" इत्यादौ "सर्वेषु भूतेष्वेतं" इत्यन्ते च वाक्ये बहुकृत्वः श्रुतस्य एतच्छब्दस्य "अथैष ज्योतिः" इत्यादाविव वक्ष्यमाणजीवरूपचक्षुर्मयादिपरत्वात्,**

ಅನುವಾದ - ಚಕ್ಷುರ್ಮಯತ್ವಾದಿಗಳನ್ನು ಆದಿತ್ಯನಲ್ಲಿ ಪರ್ಯವಸಾನ ಮಾಡಬಹುದಲ್ಲವೇ ? ಎಂದು ಪ್ರಶ್ನಿಸಬಾರದು. ಏಕೆಂದರೆ "ಚತ್ವಾರಃ ಪುರುಷಾ ಇತಿ ಬಾಧ್ವಃ" ಎಂಬುದಾಗಿ 'ಬಾಧ್ವ' ಎಂಬ ಶಬ್ದದಿಂದ ಚಿಹ್ನಿತವಾದ ಉಪಕ್ರಮ ಹಾಗೂ "ಇತಿ ಹ ಸ್ಮಾಹ ಬಾಧ್ವಃ" ಎಂಬ ಬಾಧ್ವಚಿಹ್ನದಿಂದ ಕೂಡಿರುವ ಉಪಸಂಹಾರವು ಶ್ರುತಿವಾಕ್ಯದಲ್ಲಿರುವುದರಿಂದ ಒಂದೇ ವಿಷಯವನ್ನು ಶ್ರುತಿಯು ಪ್ರತಿಪಾದಿಸಬೇಕು.

ವಸ್ತುತಃ ಇದೇ ಶ್ರುತಿವಾಕ್ಯದ ಮಧ್ಯದಲ್ಲಿ ಆದಿತ್ಯ ಶಬ್ದವಿರುವುದರಿಂದ ಸೂರ್ಯಪರವೆನ್ನಬಹುದು. ಆದರೆ ಅದರ ಮುಂದಿನ ವಾಕ್ಯದಲ್ಲಿ "ಏತಂ ಹ್ಯೇವ ಬಹ್ವೃಚಾಃ" ಇತ್ಯಾದಿಯಾಗಿ ಪ್ರಾರಂಭವಾಗುವ 'ಸರ್ವೇಷು ಭೂತೇಷ್ವೇತಂ' ಎಂಬುದಾಗಿ ಪರ್ಯವಸಾನಗೊಳ್ಳುವ ವಾಕ್ಯದಲ್ಲಿ ಅನೇಕ ಬಾರಿ 'ಏತತ್' ಎಂಬ ಶಬ್ದವು ಕೇಳಿಸುತ್ತಿದೆ. ಯಾವರೀತಿಯಾಗಿ 'ಅಥೈಷ ಜ್ಯೋತಿಃ' ಎಂಬಲ್ಲಿ 'ಏತತ್' ಶಬ್ದವು ಮುಂದೆ ಪ್ರಸಕ್ತವಾಗುವುದನ್ನು ಪರಾಮರ್ಶಿಸುತ್ತದೋ ಅದೇ ರೀತಿಯಾಗಿ ಇಲ್ಲಿರುವ 'ಏತತ್' ಶಬ್ದವೂ ಸಹ ಮುಂದೆ ಪ್ರಸಕ್ತನಾಗುವ ಜೀವನೆಂಬ ಚಕ್ಷುರ್ಮಯನನ್ನೇ ಪರಾಮರ್ಶಿಸುತ್ತದೆ.

### ಕಠಿಣ ಪದಾರ್ಥ

ಬಾಧ್ವಃ = ವಾಯು, ಬಾಧ್ವಚಿಹ್ನೋತೋಪಕ್ರಮಸ್ಯ = ಬಾಧ್ವ ಎಂಬ ಚಿಹ್ನೆಯಿಂದ ಕೂಡಿರುವ ಉಪಕ್ರಮವುಳ್ಳ ವಾಕ್ಯದಲ್ಲಿ, ಬಹ್ವೃಚಃ = ಅನೇಕ ಋಕ್‌ಗಳಿಂದ ಕೂಡಿರುವ ವಾಕ್ಯ.

**प्रकाशः – प्रागुक्तं विशेषे पर्यवसानं निराह – नचेति ।**

**'बाध्वः'** वायुः । **"चत्वारः पुरुषा इत्याह"** इत्युपक्रम्य, शरीरपुरुषः छन्दःपुरुषो, वेदपुरुषः, महापुरुष इति पुरुषचतुष्टयं निर्दिश्य, क्रमेण तेषां प्रज्ञात्माकारब्रह्मादित्याख्यरसानुक्त्वाऽन्ते **"इति ह स्माह बाध्वः"** इत्युपसंहारादेकवाक्यत्वम् ।

**"बाध्वचिह्नित"** इति बहुव्रीहिः, वाक्यस्य विशेषणम् । **'बह्वृचा इत्यादौ'** इत्याद्यपि बहुव्रीहिरेव,

भाषितपुंस्कत्वात् । "तृतीयादिषु भाषितपुंस्कं पुंवद्गालवस्य" इति पुंवद्भावः । 'तदुपरितने वाक्ये, इति आदौ अन्ते, चकारात् मध्ये च बहुकृत्वः श्रुतस्य' इति वा वाक्यं व्याख्येयम् ।

ವಿವರಣೆ - ಸೂರ್ಯನಲ್ಲಿ ಚಕ್ಷುರ್ಮಯತ್ವವನ್ನು ಪರ್ಯವಸಾನ ಮಾಡಲಾಗದೆಂದು 'ನಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

'ಬಾಧ್ವಃ' ಎಂದರೆ 'ವಾಯು' ಎಂದರ್ಥ. ''ಚತ್ವಾರಃ ಪುರುಷಾ ಇತ್ಯಾಹ'' ಎಂದು ಪ್ರಾರಂಭವಾಗಿ ಶರೀರಪುರುಷನನ್ನು ಪ್ರಜ್ಞಾತ್ಮನೆಂದು ಛಂದಃಪುರುಷನನ್ನು ಅಕಾರನೆಂದು ವೇದಪುರುಷನನ್ನು ಬ್ರಹ್ಮನೆಂದು ಮಹಾಪುರುಷನನ್ನು ಆದಿತ್ಯನೆಂದು ಇವರುಗಳನ್ನು ಶ್ರೇಷ್ಠ ಎಂಬುದಾಗಿ ಕೊನೆಯಲ್ಲಿ 'ಇತಿ ಹ ಸ್ಮಾಹ ಬಾಧ್ವಃ'' ಎಂಬುದಾಗಿ ಉಪಸಂಹಾರ ಮಾಡಲಾಗಿದೆ. ಹೀಗೆ 'ಬಾಧ್ವಃ' ಎಂದು ಪ್ರಾರಂಭವಾಗಿ 'ಬಾಧ್ವಃ' ಎಂದೇ ಮುಕ್ತಾಯವಾಗಿರುವುದರಿಂದ ಒಬ್ಬನನ್ನೇ ಸಮಗ್ರ ವಾಕ್ಯವು ಪ್ರತಿಪಾದಿಸುತ್ತದೆಂದಂತಾಯಿತು.

'ಬಾಧ್ವಚಿಹ್ನಿತೋಪಕ್ರಮಸ್ಯ' ಎಂಬ ಪದಕ್ಕೆ 'ಬಾಧ್ವಚಿಹ್ನಿತಃ ಉಪಕ್ರಮಃ ಯಚ್ಚ ತತ್ ಬಾಧ್ವಚಿಹ್ನಿತೋಪಕ್ರಮಂ ತಸ್ಯ ಬಾಧ್ವಚಿಹ್ನಿತೋಪಕ್ರಮಸ್ಯ' ಎಂಬುದಾಗಿ ಬಹುವ್ರೀಹಿಸಮಾಸ ಮಾಡಬೇಕು. ಇದರಂತೆ 'ಬಾಧ್ವಚಿಹ್ನಿತೋಪಸಂಹಾರಸ್ಯ' ಎಂಬ ಪದಕ್ಕೂ ಸಹ 'ಬಾಧ್ವಚಿಹ್ನಿತಃ ಉಪಸಂಹಾರಃ ಯಚ್ಚ ತತ್ ಬಾಧ್ವಚಿಹ್ನೋತೋಪಸಂಹಾರಂ, ತಸ್ಯ ಬಾಧ್ವಚಿಹ್ನಿತೋಪಸಂಹಾರಸ್ಯ' ಎಂಬುದಾಗಿ ಬಹುವ್ರೀಹಿಸಮಾಸವನ್ನೇ ಮಾಡಬೇಕು. ವಾಕ್ಯದಲ್ಲಿ ಇವೆರಡಕ್ಕೂ ಇದನ್ನು ವಿಶೇಷಣವನ್ನಾಗಿ ತಿಳಿಯಬೇಕು. 'ಬಹ್ವಲಿಬಾ' ಎಂಬ ಪದಕ್ಕೂ ಸಹ ಹೀಗೆ ಬಹುವ್ರೀಹಿಸಮಾಸವನ್ನು ಮಾಡಬೇಕು.

ಪ್ರಶ್ನೆ - ಗ್ರಂಥದಲ್ಲಿ 'ಇತ್ಯಾದೌ' ಎಂಬ ಪದವನ್ನು ಬಳಸಿದ್ದಾರೆ. ಹೇಗೆ ಸರಿ ? ಏಕೆಂದರೆ ವಾಕ್ಯದಲ್ಲಿ ವಿಶೇಷಣವನ್ನಾಗಿ ಹೇಳಿದಾಗ 'ಇತಿ ಆದಿ ಯಸ್ಯ ತತ್ ಇತ್ಯಾದಿ ತಸ್ಮಿನ್ ಇತ್ಯಾದಿನಿ' ಎಂದೇ ಹೇಳಬೇಕು. ವಾಕ್ಯಶಬ್ದವು ನಪುಂಸಕಲಿಂಗದಲ್ಲಿರುವುದರಿಂದ ಅದರಲ್ಲಿ ವಿಶೇಷಣವಾಗಿರುವ ಆದಿಶಬ್ದವನ್ನೂ ಸಹ ನಪುಂಸಕಲಿಂಗದಲ್ಲಿಯೇ ಹೇಳಬೇಕು. ಆವಾಗ 'ಇತ್ಯಾದಿನಿ' ಎಂದೇ ಆಗುತ್ತದೆ. ಹೊರತು 'ಇತ್ಯಾದೌ' ಎಂಬ ಪುಲ್ಲಿಂಗ ಪ್ರಯೋಗವು ತಪ್ಪಾಗುತ್ತದಲ್ಲವೆ ?

ಉತ್ತರ - ಎರಡು ಬಗೆಯಲ್ಲಿ ಇದಕ್ಕೆ ಉತ್ತರಿಸಬಹುದು. ''ತೃತೀಯಾದಿಷು ಭಾಷಿತಪುಂಸ್ಕಂ ಪುಂವದ್ಗಾಲವಸ್ಯ'' ಎಂಬ ಸೂತ್ರದಲ್ಲಿ ತೃತೀಯಾದಿ ವಿಭಕ್ತಿಗಳಲ್ಲಿ ಆದಿ ಪದಕ್ಕೆ ಪುಂವದ್ಭಾವನ್ನು ಹೇಳಿದ್ದಾರೆ. (ಶುಚಿ ಶಬ್ದದಂತೆ) ಆದ್ದರಿಂದ ನಪುಂಸಕಲಿಂಗವೇ ಆಗಿದ್ದರೂ ತೃತೀಯಾದಿ ವಿಭಕ್ತಿಗಳಲ್ಲಿ ಪುಲ್ಲಿಂಗದ ರೂಪಗಳೂ ಇರುವುದರಿಂದ 'ಇತ್ಯಾದೌ' ಎಂದು ಪ್ರಯೋಗಿಸಬಹುದು. ಆದ್ದರಿಂದ ವಾಕ್ಯೇ ಎಂಬುವುದರಿಂದ 'ಆದೌ' ಎಂಬುದು ವಿಶೇಷಣವಾಗುತ್ತದೆ.

ಅಥವಾ 'ಆದೌ' ಎಂಬುದನ್ನು ವಾಕ್ಯೇ ಎಂಬಲ್ಲಿ ವಿಶೇಷಣ ಮಾಡುವುದೇ ಬೇಡ. ವಾಕ್ಯೇ ಎಂಬುದನ್ನು ತದುಪರಿತನೇ ಎಂಬಲ್ಲಿ ಅನ್ವಯ ಮಾಡಿ 'ಇತ್ಯಾದೌ ಅಂತೇ ಚ' ಎಂಬಲ್ಲಿ ಬಹುಕೃತ್ವಃ ಶ್ರುತಸ್ಯ ಎಂಬುದನ್ನು ಇಟ್ಟುಕೊಳ್ಳಬೇಕು. ಹೀಗೆ ಅನ್ವಯದಲ್ಲಿ ವ್ಯತ್ಯಾಸ ಮಾಡಿದಾಗ ವಾಕ್ಯದ ಆದಿಯಲ್ಲಿ ಮತ್ತು ಕೊನೆಯಲ್ಲಿ ಅನೇಕ ಬಾರಿ ಕೇಳಿಸುತ್ತಿರುವ ಎಂದು ಹೇಳಿದಂತಾಗುತ್ತದೆ. ಈ ಪಕ್ಷದಲ್ಲಿ 'ಆದೌ' ಎಂಬ ಪದವು ವಿಶೇಷಣವಾಗುವುದೇ ಇಲ್ಲ. ಆದ್ದರಿಂದ ಪುಲ್ಲಿಂಗದ ಪ್ರಯೋಗವು ಹೇಗೆ ಎಂಬ ಪ್ರಶ್ನೆಗೆ ಅವಕಾಶವೇ ಇಲ್ಲ.

**ಪ್ರಕಾಶಃ – अथैष इति ।** संज्ञाधिकरणमुक्तमानन्दमयाधिकरणे तत्र यथैतच्छब्दस्य ''एतेन सहस्रदक्षिणेन यजेत'' इति वक्ष्यमाणयागपरत्वं नतु प्रकृतज्योतिष्टोमपरत्वं, तद्वदित्यर्थः ।

ಪರಿಪೂರ್ಣಚಂದ್ರಿಕಾ

नन्‌ संज्ञाभेदात्तत्र तथात्वमुपेतमिति चेदिहापि वाक्यभेदात्तथाऽस्त्विति भावः ।

ಪೂರ್ವಮೀಮಾಂಸೆಯ 'ಅಥೈಷ ಜ್ಯೋತಿಃ' ಎಂಬ ಸಂಜ್ಞಾಧಿಕರಣವನ್ನು ಆನಂದಮಯಾಧಿಕರಣದಲ್ಲಿ ವಿವರಿಸಲಾಗಿದೆ. ಈ ಅಧಿಕರಣದಲ್ಲಿ ಸಂಜ್ಞಾಭೇದದಿಂದ ಕರ್ಮಭೇದವನ್ನು ನಿರೂಪಿಸಿದ್ದಾರೆ. ಮತ್ತು 'ಏಷಃ' ಎಂಬ 'ಏತತ್' ಶಬ್ದವು "ಏತೇ ಸಹಸ್ರದಕ್ಷಿಣೇನ ಯಜೇತ' ಎಂಬುದಾಗಿ ಮುಂದೆ ಪ್ರಸಕ್ತವಾಗುವ ಯಾಗವನ್ನು ಮೊದಲೇ ಪರಾಮರ್ಶಿಸುತ್ತಿದೆ ಹೊರತು, ಹಿಂದೆ ಪ್ರಸಕ್ತವಾದ ಜ್ಯೋತಿಷ್ಟೋಮವನ್ನು ಪರಾಮರ್ಶಿಸುತ್ತಿಲ್ಲ. ಅದರಂತೆ ಪ್ರಕೃತ 'ಬಾಧ್ವ' ಶ್ರುತಿಯಲ್ಲಿರುವ 'ಏತತ್' ಶಬ್ದವೂ ಸಹ ಮುಂದೆ ಪ್ರಸಕ್ತವಾಗುವ ಜೀವನೆಂಬ ಚಕ್ಷುರ್ಮಯನನ್ನೇ ಪರಾಮರ್ಶಿಸುತ್ತದೆ.

ಪ್ರಶ್ನೆ - ಪೂರ್ವಮೀಮಾಂಸಾಧಿಕರಣದಲ್ಲಿ ಸಂಜ್ಞಾಭೇದದಿಂದ ಕರ್ಮಭೇದವನ್ನು ಹೇಳುತ್ತಿರುವುದರಿಂದ ಮುಂದೆ ಹೇಳುವುದನ್ನು ಪರಾಮರ್ಶಿಸುವುದು ತಪ್ಪಲ್ಲ. ಆದರೆ ಇಲ್ಲಿ ಹಾಗೇ ಹೇಳದ ಕಾರಣ ಮುಂದೆ ಹೇಳುವುದನ್ನು ಹೇಗೆ ಪರಾಮರ್ಶಿಸುತ್ತೀರಿ?

ಉತ್ತರ - ಇಲ್ಲಿಯೂ ಸಹ ವಾಕ್ಯಭೇದವಿರುವುದರಿಂದ ಮುಂದೆ ಹೇಳುವುದನ್ನು ಪರಾಮರ್ಶಿಸಬಹುದು. ಪೂರ್ವಮೀಮಾಂಸೆಯಲ್ಲಿ ಕರ್ಮಭೇದವು ವಿವಕ್ಷಿತವಾಗಿದೆ. ಇಲ್ಲಿ ವಾಕ್ಯಭೇದವು ವಿವಕ್ಷಿತವಾಗಿದೆ.

**गुरुराजीयम्** – पशुशब्दस्य तद्विशेषच्छागवादादित्यश्रुत्या चक्षुर्मयत्वादिजीवलिङ्गानां जीवविशेषादित्य एव पर्यवसानेन सर्वजीवप्रापकाभावात्कथं सर्वजीवानां प्राप्तिरित्याशङ्क्ते – **नचेति** ।। ननु सर्वेषु भूतेष्वित्यनेन सर्वगतत्वस्यैवोक्तत्वेनार्भकौकस्त्वानुक्तेः कथमर्भकौकस्त्वेन सर्वजीवप्राप्तिरित्यत आह – **सर्वेष्विति** ।।




ಚಕ್ಷುರ್ಮಯತ್ವ ಎಂಬ ಲಿಂಗದಿಂದ ಜೀವನನ್ನು ಸರ್ವಗತನೆಂದು ಪೂರ್ವಪಕ್ಷ ಮಾಡಲಾಗಿದೆ. ಈ ಚಕ್ಷುರ್ಮಯತ್ವವು ಜೀವನಲ್ಲಿಯೇ ಪರ್ಯವಸಾನವಾಗುತ್ತದೆ ಹೊರತು ಆದಿತ್ಯನಲ್ಲಲ್ಲ. ಏಕೆಂದರೆ ಉಪಕ್ರಮ ಹಾಗೂ ಉಪಸಂಹಾರದಲ್ಲಿ ಒಂದೇ ವಿಷಯವು ಪ್ರಸಕ್ತವಾಗಿರುವುದರಿಂದ ಒಬ್ಬನನ್ನೇ ಹೇಳಬೇಕು. ಆದ್ದರಿಂದ ಆದಿತ್ಯನೇ ಪ್ರತಿಪಾದ್ಯನೆಂಬ ಶಂಕೆಯು ಸಹಜವಾಗಿ ಬರುತ್ತದೆ. ಆದರೆ ಪ್ರಾರಂಭದಿಂದ ಕೊನೆಯತನಕ ಅನೇಕ ಬಾರಿ 'ಏತತ್' ಎಂಬ ಪದವು ಕೇಳಿಸುತ್ತಿದೆ. ಈ ಪದವು ಮುಂದೆ ಪ್ರಸಕ್ತನಾಗುವ ಜೀವನನ್ನೇ ಪರಾಮರ್ಶಿಸುತ್ತದೆ. ಆದ್ದರಿಂದ ಚಕ್ಷುರ್ಮಯತ್ವವು ಜೀವಪ್ರಾಪಕವೇ ಹೊರತು ಆದಿತ್ಯ ಪ್ರಾಪಕವಲ್ಲ.

• • • • •

ಸರ್ವಗತತ್ವಾಧಿಕರಣ (೧-೨-೧)

ಅಲ್ಪದೇಶದಲ್ಲಿರುವವನು ಸರ್ವಗತನಾಗಲಾರ

**तात्पर्यचन्द्रिका**

**अर्भकौकस्त्वाच्च न विष्णोः सर्वगतता । ''अन्तः'' इत्यत्र ''अन्तरः'' इत्यत्र ''अन्तर्यामि'' इत्यत्र च सर्वगतत्वाल्पौकस्त्वयोरविरोधो नोक्तः,**

**तत्प्रकरणे सर्वगतत्वस्याभावेन विरोधशङ्कया अनुदयात्, उदये वा तत्रत्यन्तयायेनैव परिहार्यत्वात् ।**

**''उपासात्रैविध्यात्'' इत्यत्र तु अन्तस्स्थत्वाद्युक्तेः प्रयोजनमात्रमुक्तम्, न त्वविरोधः । ''हृद्यपेक्षया'' इत्यत्र तु तयोरत्राविरोधे उक्तेऽपि ''अङ्गुष्ठमात्रः पुरुषः'' इत्यत्र मात्रशब्दस्य अवधारणार्थत्वात्सर्वगतस्य सावधारणमङ्गुष्ठपरिमाणत्वमयुक्तमिति शङ्किते, मूर्तिविशेषे व्यक्त्यात्मना सावधारणमपि तद्युक्तमिति समाधास्यते ।**

**''सर्वेषु भूतेषु'' इत्यत्र च अल्पौकस्त्वमुच्यते, भूतादन्यत्राभावप्रतीतेः । अन्यथा भूतपदवैयर्थ्यात् । सिद्धान्तिना ''सर्वभूताशयः स्थितः'' इति स्मृतिसमाख्यया सर्वजीवहृदयस्थत्वस्यैव वक्तव्यत्वाच्च ।**

**पूर्वाधिकरणाक्षेपस्त्वित्थम् – तस्य सर्वभूतगतस्यैव सिद्धान्तिना सर्वगतत्वाङ्गीकारात्तदभावे तदभाव इति । यद्वा ''एतमेव'' इत्यवधारणेन विष्णोरन्यस्यैव सर्वभूतगतत्वात् विष्णोर्भूतादन्यत्र सत्त्वेऽपि सर्वगतत्वायोग इति ।**

ಅನುವಾದ - ವಿಷ್ಣುವು ಅಲ್ಪದೇಶಸ್ಥನಾದ್ದರಿಂದಲೂ ಸರ್ವಗತನಾಗಲಾರ. ಅಲ್ಪದೇಶದಲ್ಲಿರುವಿಕೆಗೂ, ಸರ್ವದೇಶದಲ್ಲಿರುವಿಕೆಗೂ ಪರಸ್ಪರ ವಿರೋಧವಿದೆ.

'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಾಗಲೀ 'ಅಂತರ ಉಪಪತ್ತೇಃ' ಎಂಬ ಸೂತ್ರದಲ್ಲಾಗಲೀ, ಅಂತರ್ಯಾಮ್ಯಧಿಕರಣದಲ್ಲಾಗಲೀ, ಅಲ್ಪದೇಶಸ್ಥಿತತ್ವವನ್ನು ವಿಷ್ಣುವಿಗೆ ಹೇಳಿದ್ದಾರೆ ಹೊರತು ಸರ್ವಗತತ್ವಕ್ಕೂ ಅಲ್ಪದೇಶಸ್ಥಿತತ್ವಕ್ಕೂ ಇರುವಂತಹ ವಿರೋಧವನ್ನು ಪರಿಹರಿಸಿಲ್ಲ. ಏಕೆಂದರೆ ಅಲ್ಪದೇಶಸ್ಥಿತತ್ವವನ್ನು ಹೇಳುವ ಪ್ರಕರಣದಲ್ಲಿ ಸರ್ವಗತತ್ವವು ಕೇಳಿಸುತ್ತಿಲ್ಲ. ಆದ್ದರಿಂದ ವಿರೋಧಶಂಕೆಯೇ ಹುಟ್ಟದ ಕಾರಣ ಅದರ ಪರಿಹಾರವನ್ನೂ ಸಹ ಅಲ್ಲಿ ಮಾಡಿರುವುದಿಲ್ಲ. ಒಂದು

ವೇಳೆ ಹಾಗೇನಾದರೂ ವಿರೋಧಶಂಕೆಯು ಹುಟ್ಟುವುದಾದಲ್ಲಿ ಈ ಅಧಿಕರಣದ ನ್ಯಾಯದಿಂದಲೇ ಆ ವಿರೋಧವನ್ನು ಪರಿಹರಿಸಬೇಕು.

ಇದರಂತೆ 'ಉಪಾಸಾತ್ರೈವಿಧ್ಯಾತ್' ಎಂಬ ಸೂತ್ರದಲ್ಲಿ 'ಅಂತಸ್ಥತ್ವ' ಎಂಬ ವಚನಕ್ಕೆ ಪ್ರಯೋಜನವನ್ನಷ್ಟೇ ಹೇಳಿದ್ದಾರೆ ಹೊರತು ವಿರೋಧವನ್ನು ಪರಿಗಣಿಸಿಲ್ಲ. ವಸ್ತುತಸ್ತು 'ಹೃದ್ಯಪೇಕ್ಷಯಾ' ಎಂಬ ಸೂತ್ರದಲ್ಲಿ ವಿರೋಧವನ್ನೇನೋ ಪರಿಹರಿಸಿದ್ದಾರೆ. ಆದರೆ ವಿರೋಧಪರಿಹಾರದ ಮಾರ್ಗವೇ ಬೇರೆ ಬಗೆಯಲ್ಲಿದೆ. "ಅಂಗುಷ್ಠಮಾತ್ರಃ ಪುರುಷಃ" ಎಂಬಲ್ಲಿ ಮಾತ್ರಶಬ್ದಕ್ಕೆ ಅವಧಾರಣ ಎಂದರ್ಥ. ಅಂದರೆ ಅಲ್ಪದೇಶದಲ್ಲಿ ಮಾತ್ರ ಇರುತ್ತಾನೆಂದು 'ಮಾತ್ರ' ಪದದಿಂದ ತಿಳಿಯುತ್ತಿದೆ. ಸರ್ವಗತನಾದ ಬ್ರಹ್ಮನಲ್ಲಿ ಕೇವಲ ಅಂಗುಷ್ಠ ಪರಿಮಾಣವನ್ನು ಹೇಳುವುದು ತಪ್ಪಲ್ಲವೇ? ಎಂಬ ಶಂಕೆ ಪ್ರಾಪ್ತವಾದರೆ ಹೃದಯದಲ್ಲಿರುವ ಮೂರ್ತಿವಿಶೇಷವು ವ್ಯಕ್ತ್ಯಾತ್ಮನಾ ಅಂಗುಷ್ಠ ಪರಿಮಾಣದಲ್ಲಿರುತ್ತದೆ. ಆದ್ದರಿಂದ ಮಾತ್ರಪದದಿಂದ ಅವಧಾರಣವು ಯುಕ್ತವೇ ಆಗಿದೆಯೆಂದು ಸಮಾಧಾನವನ್ನು ನೀಡಿದ್ದಾರೆ; ಹೊರತಾಗಿ ಸರ್ವಗತತ್ವಕ್ಕೂ ಅಲ್ಪದೇಶಸ್ಥಿತ್ವಕ್ಕೂ ಬರುವಂತಹ ವಿರೋಧವನ್ನು ಪರಿಹರಿಸಿಲ್ಲ. ಅವಧಾರಣಾರ್ಥವನ್ನು ಮಾತ್ರ ನಿರ್ಣಯಿಸಿದ್ದಾರೆ.

ಶ್ರುತಿಯಲ್ಲಿರುವ 'ಸರ್ವೇಷು ಭೂತೇಷು' ಎಂಬುದರಿಂದಲೂ ಅಲ್ಪದೇಶಸ್ಥಿತತ್ವವನ್ನು ಹೇಳಲಾಗಿದೆ. ಏಕೆಂದರೆ ಭೂತಪದಾರ್ಥಗಳನ್ನು ಬಿಟ್ಟು ಬೇರೆಡೆ ಇಲ್ಲವೆಂದು ಹೇಳಿದ್ದರಿಂದ. ಇಲ್ಲದಿದ್ದರೆ, ಭೂತಪದವೇ ವ್ಯರ್ಥವಾಗುತ್ತದೆ. ಸಿದ್ಧಾಂತಿಯೂ ಸಹ "ಸರ್ವಭೂತಾಶಯಸ್ಥಿತಃ" ಎಂಬ ಶ್ರುತಿ ಸಮಾಖ್ಯಾಪ್ರಮಾಣದಿಂದ ಸರ್ವಜೀವಹೃದಯಸ್ಥತ್ವವನ್ನೇ ಹೇಳಬೇಕು ಹೊರತು ಸರ್ವಗತನೆಂದು ಹೇಳಬೇಕಾಗಿಲ್ಲ.

ಹಿಂದಿನ ಅಧಿಕರಣದ ಆಕ್ಷೇಪವಾದರೂ ಹೀಗಿದೆ - ಸರ್ವಭೂತಗತನಾದ್ದರಿಂದಲೇ ವಿಷ್ಣು ಸರ್ವಗತನಾಗಿದ್ದಾನೆಂದು ಅಂಗೀಕರಿಸಲಾಗಿದೆ. ಸರ್ವಗತತ್ವ ಇಲ್ಲದಿದ್ದಲ್ಲಿ ಸರ್ವಭೂತಗತತ್ವವನ್ನೂ ಸಹ ಒಪ್ಪಲು ಸಾಧ್ಯವಿಲ್ಲ.

ಅಥವಾ 'ಏತಮೇವ' ಎಂಬಲ್ಲಿ ಅವಧಾರಣ ಮಾಡಿದ್ದರಿಂದ ವಿಷ್ಣುವಿಗಿಂತ ಅನ್ಯರಾದ ಆದಿತ್ಯಾದಿಗಳೇ ಸರ್ವಭೂತಗತರಾಗಿದ್ದಾರೆ. ವಿಷ್ಣುವು ಭೂತಪದಾರ್ಥಗಳಿಗಿಂತ ಬೇರೆಡೆ ಇದ್ದರೂ ಸರ್ವಗತನಾಗಲಾರ ಎಂಬುದನ್ನು ತಿಳಿಯಬೇಕು.

### ಕಠಿಣ ಪದಾರ್ಥ

ಅರ್ಭಕೌಕಸ್ತ್ವಾಚ್ಚ = ಅಲ್ಪದೇಶದಲ್ಲಿರುವವನಾದ್ದರಿಂದ, ನೋಕ್ತಃ = ಮೂರು ಅಧಿಕರಣಗಳಲ್ಲಿಯೂ ವಿರೋಧಪರಿಹಾರವನ್ನು ಹೇಳಿಲ್ಲ. ತತ್ಪ್ರಕರಣೇ = ಅಲ್ಪದೇಶಸ್ಥಿತತ್ವವನ್ನು ಹೇಳುವ ಪ್ರಕರಣದಲ್ಲಿ, ಉದಯೇ ವಾ = ವಿರೋಧಶಂಕೆಯು ಹುಟ್ಟಿದರೂ ಸಹ, ತದ್ಯುಕ್ತಂ = ಅಂಗುಷ್ಠಪರಿಮಾಣತ್ವವು ಯುಕ್ತವಾಗುತ್ತದೆ.

ಸರ್ವಗತತ್ವಾಧಿಕರಣ (೧-೨-೧)

ತಯೋಃ = ಸರ್ವಗತತ್ವ ಹಾಗೂ ಅಲ್ಪದೇಶಸ್ಥಿತತ್ವಗಳಿಗೆ, ಅಲೌಕಸ್ತ್ವಂ = ಸ್ವಲ್ಪದೇಶದಲ್ಲಿರುವಿಕೆ. ತದಭಾವೇ = ಸರ್ವಭೂತಗಳಲ್ಲಿಲ್ಲದಿದ್ದರೆ. ತದಭಾವಃ = ಸರ್ವಗತತ್ವ ಕೂಡುವುದಿಲ್ಲ.

**प्रकाशः** – 'अर्भकौकस्त्वात्' इति सौत्रं प्रापकान्तरमप्याह – **अर्भकेति** । "सर्वेषु भूतेषु" इति श्रुतावित्यर्थः । 'सर्वगतता' द्युपृथिव्यादिसर्वगततेत्यर्थः । ननूक्तमात्राल्पौकस्त्वं तत्र तत्र समर्थितमिति, तत्राह – **अन्तरित्यत्रेति** । "पुरुष एवेदं सर्वं" इत्यादिना सर्वगतत्वधर्मस्तत्राप्यस्तीत्यत आह – **उदये वेति** । अत एव सङ्क्षेपभाष्ये "अन्तरः खवत्" इति अन्तर्नये 'व्योमवत्' इत्युक्त्याऽत्रत्य-न्यायेनैवाविरोध उक्तः । **अन्तस्स्थत्वादीति** । बहिष्ठत्वसर्वगतत्वोक्तेरित्यादिपदार्थः ।

ವಿವರಣೆ - ಸೂತ್ರದಲ್ಲಿ 'ಅರ್ಭಕೌಕಸ್ತ್ವಾತ್' ಎಂದು ತಿಳಿಯುವ ಮತ್ತೊಂದು ಪೂರ್ವಪಕ್ಷ ಪ್ರಾಪಕವನ್ನು 'ಅರ್ಭಕೌಕಸ್ತ್ವಾತ್' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. 'ಸರ್ವೇಷು ಭೂತೇಷು' ಎಂಬುದನ್ನು ಶ್ರುತಿ ಎಂಬುದಾಗಿ ತಿಳಿಯಬೇಕು. ಸರ್ವಗತ ಎಂದರೆ ಅಂತರಿಕ್ಷ ಪೃಥಿವೀ ಮೊದಲಾದೆಡೆ ಎಂದರ್ಥ. ಅಲ್ಪೌಕಸ್ತ್ವವನ್ನು ಅಲ್ಲಲ್ಲಿ ಸಮರ್ಥಿಸಿದ್ದಾಗಿದೆಯಲ್ಲವೇ? ಎಂಬ ಪ್ರಶ್ನೆಗೆ "ಅಂತರಿತ್ಯತ್ರ" ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಅಲ್ಪದೇಶಸ್ಥಿತತ್ವವನ್ನು ಹೇಳಿದ ಸ್ಥಳದಲ್ಲಿಯೇ 'ಪುರುಷ ಏವೇದಂ ಸರ್ವಂ' ಇತ್ಯಾದಿಯಾಗಿ ಸರ್ವಗತತ್ವ ಧರ್ಮವು ಕೇಳಿಸುತ್ತಿದೆಯಲ್ಲವೇ ? ಎಂಬ ಪ್ರಶ್ನೆಗೆ 'ಉದಯೇ ವಾ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಆದ್ದರಿಂದ ಅಣುಭಾಷ್ಯದ 'ಅಂತರಃ ಖವತ್' ಎಂಬ ಅಂತರಧಿಕರಣದಲ್ಲಿ 'ಖವತ್' ಎಂಬುದಾಗಿ ಆಕಾಶದ ದೃಷ್ಟಾಂತವನ್ನು ನೀಡುವ ಮೂಲಕ ಈ ಅಧಿಕರಣದ ನ್ಯಾಯದಿಂದಲೇ ವಿರೋಧವನ್ನು ಪರಿಹರಿಸಲಾಗಿದೆ. ('ಅಂತರಃ ಖವತ್' ಎಂಬ ಅಣುಭಾಷ್ಯವು 'ಅಂತರಃ' ಎಂಬುದಾಗಿ ಅಂತರಧಿಕರಣದ ವಿಷಯವನ್ನು 'ಖವತ್' ಎಂಬ ಆಕಾಶಾಧಿಕರಣದ ಪ್ರಮೇಯವನ್ನು ನಿರೂಪಿಸುತ್ತಿದೆ. ಇದೇ ಮಾತಿಗೆ ಮತ್ತೊಂದು ಬಗೆಯ ಅರ್ಥ ಖವತ್ = ಆಕಾಶದಂತೆ, ಅಂತಃ = ಅಂತಸ್ಥಿತನಾಗಿದ್ದಾನೆಂಬ ತತ್ವಮಂಜರಿಯ ಎರಡು ಬಗೆಯ ವ್ಯಾಖ್ಯಾನವನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.)

'ಅಂತಸ್ಥತ್ವಾದಿ' ಎಂಬಲ್ಲಿರುವ ಆದಿಪದದಿಂದ ಬಹಿಷ್ಠತ್ವ ಮತ್ತು ಸರ್ವಗತತ್ವಗಳ ವಚನಗಳನ್ನು ವಿವಕ್ಷಿಸಬೇಕು.

**प्रकाशः** – इह तु तयोर्विरोधात्सर्वगतस्य हरेरल्पौकस्त्वं न युक्तमिति प्राप्ते, 'व्योमवत्' इत्यंशेन समावेशस्समर्थित इति भावः । 'तयोः' सर्वगतत्वाल्पौकस्त्वयोः । **व्यक्त्यात्मनेति** । सर्वगतत्वस्य शक्त्यात्मनाऽवस्थानेऽल्पौकस्त्वमात्रस्य व्यक्ततया तदभिप्रायेणाङ्गुष्ठमात्रत्वोक्तिरिति वक्ष्यत इत्यर्थः । तथा चाधिकाशङ्कया तस्योत्थितिरित्यर्थः ।

ಪರಿಪೂರ್ಣಚಂದ್ರಿಕಾ

ಅಲ್ಪದೇಶಸ್ಥಿತತ್ವ ಮತ್ತು ಸರ್ವಗತತ್ವಗಳಿಗೆ ವಿರೋಧವಿರುವುದರಿಂದ ಸರ್ವಗತನಾದ ಶ್ರೀಹರಿಗೆ ಅಲ್ಪದೇಶಸ್ಥಿತತ್ವವು ಅಯುಕ್ತವಾಗುತ್ತದಲ್ಲವೆ? ಎಂಬ ಶಂಕೆಗೆ 'ವ್ಯೋಮವತ್' ಎಂಬಂಶದಿಂದ ಉತ್ತರಿಸಲಾಗಿದೆ ಎಂದು ತಿಳಿಯಬೇಕು. ವ್ಯಕ್ತ್ಯಾತ್ಮನಾ ಎಂಬುದಕ್ಕೆ ಹೀಗರ್ಥ - ಸರ್ವಗತನಾದ ಭಗವಂತನು ಶಕ್ತ್ಯಾತ್ಮನಾ ಎಲ್ಲೆಡೆ ಇದ್ದರೂ ವ್ಯಕ್ತ್ಯಾತ್ಮನಾ ಅಂಗುಷ್ಠಪರಿಮಾಣದಲ್ಲಿ ಇರುತ್ತಾನೆ. ಈ ಅಭಿಪ್ರಾಯದಿಂದ ಅಂಗುಷ್ಠಮಾತ್ರ ಎಂದು ಹೇಳಲಾಗಿದೆ. ಆದ್ದರಿಂದ ಅಧಿಕಾಶಂಕೆಯ ಪರಿಹಾರಕ್ಕಾಗಿ 'ಹೃದ್ಯಪೇಕ್ಷಯಾ' ಎಂಬ ಸೂತ್ರವು ಹೊರಟಿದೆ.

**प्रकाशः** – ननु हृदि विद्यमानावकाशस्याङ्गुष्ठमात्रत्वेन तदपेक्षया तन्मात्रत्वोक्तिरुपचारेणेति सूत्रे भाष्यादौ च प्रतीयते । सत्यं, पक्षान्तरमुपेत्यैवैतत्। अत एव तत्र टीकायां ''भगवन्मूर्तिविशेषस्य व्यक्त्या तन्मात्रपरिमाणत्वात्'' इत्युक्तमिति भावः । सूत्रमपि हृदि व्यक्तरूपापेक्षयेति व्याख्येयम् ।

ಪ್ರಶ್ನೆ - ಸೂತ್ರ, ಭಾಷ್ಯ ಹಾಗೂ ಟೀಕೆಗಳಲ್ಲಿ 'ತದಪೇಕ್ಷಯಾ' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸಿದ್ದಾರೆ. ಹೃದಯದಲ್ಲಿರುವ ಅವಕಾಶವು ಅಂಗುಷ್ಠಪರಿಮಾಣದಲ್ಲಿರುವುದರಿಂದ ಇದನ್ನು ವಿವಕ್ಷಿಸಿ ಮಾತ್ರಪದವನ್ನು ಬಳಸಿದ್ದಾರೆಂದು, ಅಂದರೆ ಹೃದಯದಲ್ಲಿರುವ ದೇಶವು ಅಂಗುಷ್ಠಪರಿಮಾಣದಲ್ಲಿರುವುದರಿಂದ ಅಲ್ಲಿರುವ ಭಗವಂತನೂ ಸಹ ಅಂಗುಷ್ಠಪರಿಮಾಣದಲ್ಲಿದ್ದಾನೆಂದು ಔಪಚಾರಿಕವಾಗಿ ಪ್ರಯೋಗಿಸಲಾಗಿದೆ. ಆದರೆ ನೀವು ಭಗವಂತನ ಮೂರ್ತಿಯನ್ನೇ ಅಂಗುಷ್ಠಪರಿಮಾಣವೆಂದು ವ್ಯಾಖ್ಯಾನಿಸುತ್ತಿದ್ದೀರಿ. ಇದು ತಪ್ಪಲ್ಲವೇ ?

ಉತ್ತರ - ಹೌದು, ಇದು ಸೂತ್ರಕ್ಕೆ ಮತ್ತೊಂದು ಬಗೆಯ ವ್ಯಾಖ್ಯಾನವೇ ಆಗಿದೆ. ಆದ್ದರಿಂದಲೇ ಟೀಕೆಯಲ್ಲಿ 'ಭಗವನ್‌ಮೂರ್ತಿವಿಶೇಷಸ್ಯ ವ್ಯಕ್ತ್ಯಾ ತನ್ಮಾತ್ರಪರಿಮಾಣತ್ವಾತ್' ಭಗವಂತನ ಮೂರ್ತಿವಿಶೇಷವು ವ್ಯಕ್ತ್ಯಾತ್ಮನಾ ಹೃದಯಪರಿಮಾಣದಷ್ಟು ಇದೆ ಎಂದು ಹೇಳಿದ್ದಾರೆ. ಸೂತ್ರವನ್ನೂ ಸಹ 'ಹೃದಿ ವ್ಯಕ್ತರೂಪಾಪೇಕ್ಷಯಾ' ಎಂದೇ ವ್ಯಾಖ್ಯಾನಿಸಬೇಕು. ಆದ್ದರಿಂದ ಹೃದಯದಲ್ಲಿರುವ ಭಗವಂತನ ಮೂರ್ತಿಯು ವ್ಯಕ್ತ್ಯಾತ್ಮನಾ ಅಂಗುಷ್ಠಪರಿಮಾಣದಲ್ಲಿದೆ ಎಂಬುದು ಒಂದು ಬಗೆಯ ಅರ್ಥ. ಹೃದಯಾಕಾಶವು ಅಂಗುಷ್ಠಪರಿಮಾಣದಲ್ಲಿರುವುದರಿಂದ ಇಲ್ಲಿರುವ ಭಗವಂತನ ಮೂರ್ತಿಯು ವ್ಯಕ್ತ್ಯಾತ್ಮನಾ ಅಂಗುಷ್ಠಪರಿಮಾಣದಲ್ಲಿದೆ ಎಂಬುದು ಮತ್ತೊಂದು ಬಗೆಯ ಅರ್ಥ.

**प्रकाशः** – ननूक्तमर्भकौकस्त्वमेवात्र न श्रूयते, अन्यथा पूर्वाक्षेपायोगादिति, तत्राह – **सर्वेष्विति** ।

नन्ववधारणाभावात्कथमेतदित्यतो भूतपदोपादानादेव, अन्यथा 'सर्वेषु' इत्येव ब्रूयादिति भावेनाह – **अन्यथेति** । **सिद्धान्तिनेति** ।

अत एव दहराधिकरणे ''अल्पश्रुतेरिति चेत्तदुक्तम्'' इत्यत्राल्पस्थान-माशङ्क्योक्तपरिहारस्मारणं, क्रियते,

अत्र तत्त्वप्रदीपे च 'सर्वजीवहृदयसुषिराणामल्पत्वात्' इत्युक्तमिति भावः ।

ಶ್ರುತಿಯಲ್ಲಿ ಅರ್ಭಕೌಕಸ್ತ್ವವೇ ಕೇಳಿಸುತ್ತಿಲ್ಲ. ಹಾಗೆ ಕೇಳಿಸದಿದ್ದರೆ ಪೂರ್ವಾಕ್ಷೇಪವು ಹೇಗೆ ಕೂಡುತ್ತದೆ? ಎಂಬ ಪ್ರಶ್ನೆಗೆ 'ಸರ್ವೇಷು' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಶ್ರುತಿಯಲ್ಲಿ ಅವಧಾರಣೆ ಇಲ್ಲದಿರುವುದರಿಂದ ಅಲ್ಪದೇಶದಲ್ಲಿ ಮಾತ್ರ ವಿಷ್ಣು ಇರುತ್ತಾನೆಂದು ಹೇಗೆ ಹೇಳುತ್ತೀರಿ ? ಎಂದರೆ ಭೂತಪದದಿಂದಲೇ ಅವಧಾರಣೆ ತಿಳಿಯುತ್ತದೆ. ಇಲ್ಲದಿದ್ದರೆ 'ಸರ್ವೇಷು' ಎಂದಷ್ಟೇ ಹೇಳಬೇಕಿತ್ತು. ಈ ಅಭಿಪ್ರಾಯದಿಂದಲೇ 'ಅನ್ಯತ್ರ' ಎಂಬ ಮಾತು ಹೊರಟಿದೆ. 'ಸಿದ್ಧಾಂತಿನಾ' ಎಂಬ ವಾಕ್ಯದಿಂದ ಸರ್ವಭೂತಗಳಲ್ಲಿ ನೆಲೆಸಿದರೆ ಮಾತ್ರ ಸರ್ವಗತನಾಗುತ್ತಾನೆಂದು ಹೇಳಿದ್ದಾರೆ.

ಆದ್ದರಿಂದಲೇ ದಹರಾಧಿಕರಣದಲ್ಲಿ 'ಅಲ್ಪಶ್ರುತೇರಿತಿ ಚೇತ್ತದುಕ್ತಂ'' ಎಂಬುದಾಗಿ ಅಲ್ಪಸ್ಥಾನವನ್ನು ಆಶಂಕಿಸಿ ಹಿಂದೆ ಹೇಳಿದ ಪರಿಹಾರವನ್ನು ಸ್ಮರಿಸಿಕೊಳ್ಳಬೇಕೆನ್ನುತ್ತಾರೆ. ಅಲ್ಲಿ ಸ್ಮರಿಸಿಕೊಳ್ಳಬೇಕೆಂದರೆ ಈ ಅಧಿಕರಣದಲ್ಲಿ ವಿಷಯವು ಪ್ರಸಕ್ತವಾಗಿರಬೇಕಲ್ಲವೇ ?

ಮತ್ತು ಈ ಅಧಿಕರಣದ ತತ್ತ್ವಪ್ರದೀಪದಲ್ಲಿಯೂ 'ಸರ್ವಜೀವಹೃದಯಸುಷಿರಾಣಾಮಲ್ಪತ್ವಾತ್' ಸಕಲಜೀವರ ಹೃದಯಾಕಾಶವು ಅಲ್ಪವಾಗಿರುವುದರಿಂದ ಎಂದು ಹೇಳಿದ್ದಾರೆ.

**प्रकाशः** – नन्वेवमल्पौकस्त्वस्यान्यगतत्वे विष्णोः प्रागुक्तसर्वगतत्वस्याक्षेपो भाष्यादावयुक्त इत्यतस्तत्साधयति – **पूर्वेति** ।

सत्यं, न साक्षादाक्षेपः, अवधारणद्वारा तु सेत्स्यतीति भावः । **विष्णोः सर्वगतत्वायोग इति** । 'किन्त्वादित्यस्य वा सर्वजीवानां वा ''ततमं'' इत्युक्त-सर्वगतत्वमेकप्रकरणत्वात्' इति वाक्यशेषः । तेन ''आदित्यनिष्ठत्वात्'' इत्यग्रेतनोक्तिर्युक्तेति बोध्यम् । एतेन ''तद्यदि विष्णोरन्यस्य स्यात्'' इति टीका विवृता ध्येया ।

ಒಂದು ವೇಳೆ ಅಲ್ಪೌಕಸ್ತ್ವವನ್ನು ಬೇರೆಯವನಲ್ಲಿ ಹೇಳಿದರೆ ವಿಷ್ಣುವಿಗೆ ಸರ್ವಗತತ್ವವೇ ಇಲ್ಲವೆಂಬ ಆಕ್ಷೇಪವನ್ನೂ ಸಹ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಭಾಷ್ಯದಲ್ಲಿ ಹೇಳಿದ ಸರ್ವಗತತ್ವದ ಆಕ್ಷೇಪವನ್ನು 'ಪೂರ್ವಾಧಿಕರಣಾಕ್ಷೇಪಸ್ತು' ಎಂಬ ವಾಕ್ಯದಿಂದ ಪರಿಹರಿಸುತ್ತಿದ್ದಾರೆ.

ಹೌದು, ನೇರವಾಗಿ ಆಕ್ಷೇಪಿಸಲಾಗದು. ಆದ್ದರಿಂದ ಅವಧಾರಣದ ಮೂಲಕ ಆಕ್ಷೇಪ ಸುಲಭವಾಗುತ್ತದೆಂದು ತಿಳಿಯಬೇಕು. 'ಸರ್ವಗತತ್ವಾಯೋಗಃ' ಎಂಬುದಕ್ಕೆ ಹೀಗರ್ಥ - ವಿಷ್ಣುವಿಗಂತು

ಸರ್ವಗತತ್ವವನ್ನು ಹೇಳಲಾಗದು. ಆದ್ದರಿಂದ ಆದಿತ್ಯನಿಗೋ ಅಥವಾ ಸಕಲಜೀವರಿಗೋ ಸರ್ವಗತತ್ವವನ್ನು ಹೇಳಬೇಕು ಎಂದು. 'ಒಂದೇ ಪ್ರಕರಣವಾದ್ದರಿಂದ' ಎಂಬುದಾಗಿ ಶೇಷಪೂರಣ ಮಾಡಬೇಕು. ಆದ್ದರಿಂದ ಆದಿತ್ಯನಲ್ಲಿ ಹೇಳಿದ ಸರ್ವಗತತ್ವವೂ ಯುಕ್ತವೇ ಆಗಿದೆ.

ಈ ಬಗೆಯಲ್ಲಿ ವ್ಯಾಖ್ಯಾನಿಸಿದ್ದರಿಂದ "ತದ್ಯದಿ ವಿಷ್ಣೋರನ್ಯಸ್ಯ ಸ್ಯಾತ್" ಇತ್ಯಾದಿ ಟೀಕೆಯನ್ನು ವ್ಯಾಖ್ಯಾನಿಸಿದಂತಾಯಿತು.




ಆದಿತ್ಯ ಅಥವಾ ಜೀವನು ಸರ್ವಗತನಾಗಬಹುದೇ ಹೊರತು ವಿಷ್ಣು ಸರ್ವಗತನಾಗಲು ಸಾಧ್ಯವಿಲ್ಲ. ಅಂತರಧಿಕರಣದಲ್ಲಿ, ಅಂತರ್ಯಾಮ್ಯಧಿಕರಣದಲ್ಲಿ ಮತ್ತು 'ಉಪಾಸಾತ್ರೈವಿಧ್ಯಾತ್' ಇತ್ಯಾದಿ ಸೂತ್ರಗಳಲ್ಲಿ ಭಗವಂತನನ್ನು ಹೃದಯಾಕಾಶದಲ್ಲಿರುವವನೆಂದು ಬಣ್ಣಿಸಲಾಗಿದೆ. ಹೃದಯಾಕಾಶವು ಅಂಗುಷ್ಠಪರಿಮಾಣದಲ್ಲಿರುವುದರಿಂದ ಅಲ್ಲಿರುವ ಭಗವಂತನೂ ಸಹ ಅಂಗುಷ್ಠಪರಿಮಾಣವುಳ್ಳವನೇ ಆಗುತ್ತಾನೆ. ಇಷ್ಟು ಸಣ್ಣರೂಪವುಳ್ಳ ಭಗವಂತನು ಎಲ್ಲೆಡೆ ವ್ಯಾಪಿಸಿರಲು ಹೇಗೆ ಸಾಧ್ಯ ? "ಸರ್ವಭೂತಾಶಯಃ ಸ್ಥಿತಃ" ಎಂಬ ಶ್ರುತಿಯ ಆಧಾರದಿಂದಲೂ ಈ ವಿಷಯವು ಮತ್ತಷ್ಟು ದೃಢವಾಗುತ್ತದೆ.

ಒಂದು ವೇಳೆ ಅಲ್ಪದೇಶದಲ್ಲಿರುವವನು ಸರ್ವಗತನೂ ಆಗಬಹುದೆಂದು ಎಲ್ಲಾದರೂ ಸಮರ್ಥಿಸಿದ್ದರೆ ಭಗವಂತನನ್ನು ಸರ್ವಗತನೆನ್ನಬಹುದಿತ್ತು. ಆದರೆ ಎಲ್ಲಿಯೂ ಸಹ ಈ ವಿರೋಧವನ್ನು ಪರಿಹರಿಸಿಯೇ ಇಲ್ಲ. ಆದ್ದರಿಂದ ಭಗವಂತನನ್ನು ಹೃದಯದಲ್ಲಿದ್ದಾನೆಂದು ಹೇಳಿ ಆದಿತ್ಯಾದಿಗಳನ್ನು ಎಲ್ಲೆಡೆ ಇದ್ದಾರೆಂದು ಹೇಳುವುದೇ ಸ್ವರಸವೆಂದು ಪೂರ್ವಪಕ್ಷದ ಆಶಯ.



• • • • •

## ಸರ್ವಗತನಾದವನು ಅಲ್ಪದೇಶದಲ್ಲಿರಲಾರ

### तात्पर्यचन्द्रिका

**नचार्भकौकस्त्वमन्तर्यामिण्यपि युक्तम्, "एष म आत्माऽन्तर्हृदये ज्यायान् पृथिव्याः" इत्यादिश्रुत्या तस्यापि सर्वगतत्वेन तद्विरुद्धाल्पौकस्त्वायोगात् ।**

**नच पूर्वपक्षे "ब्रह्म ततमम्" इत्युक्तस्य सर्वगतत्वस्याप्यादित्यनिष्ठत्वात्तस्याप्यल्पौकस्त्वायोग इति वाच्यम्,**

**आदित्यश्रुत्याद्यनुसारेण ततमत्वस्य सङ्कोचनात् । नच ब्रह्मणि तथा, ब्रह्मत्वव्याघातात् ।**

ಅನುವಾದ - ಅಂತರ್ಯಾಮಿಯಲ್ಲಿಯೂ ಸಹ ಅರ್ಭಕೌಕಸ್ತ್ವವು ಕೂಡುವುದಿಲ್ಲ. ಏಕೆಂದರೆ "ಏಷ ಮ ಆತ್ಮಾಽಂತರ್ಹೃದಯೇ ಜ್ಯಾಯಾನ್ ಪೃಥಿವ್ಯಾಃ" ಇತ್ಯಾದಿ ಶ್ರುತಿಯಿಂದ ಅಂತರ್ಯಾಮಿಯೂ ಸಹ ಸರ್ವಗತನೆಂದು ತಿಳಿಯುತ್ತದೆ. ಹೀಗಿರುವಾಗ ಸರ್ವಗತತ್ವಕ್ಕೆ ವಿರುದ್ಧವಾದ ಅಲ್ಪೌಕಸ್ತ್ವವನ್ನು ಅಂತರ್ಯಾಮಿಯಲ್ಲಿ ಹೇಳಲು ಸಾಧ್ಯವಿಲ್ಲ.

ಹಾಗಾದರೆ ಪೂರ್ವಪಕ್ಷದಲ್ಲಿ 'ಬ್ರಹ್ಮತತಮಂ' ಎಂಬುದಾಗಿ ಹೇಳಲ್ಪಟ್ಟ ಸರ್ವಗತತ್ವವನ್ನು ಆದಿತ್ಯನಲ್ಲಿ ಸಮರ್ಥಿಸಿದ್ದರಿಂದ ಆದಿತ್ಯನಿಗೂ ಅಲ್ಪೌಕಸ್ತ್ವವನ್ನು ಹೇಳಲು ಸಾಧ್ಯವಿಲ್ಲವಲ್ಲವೆ ?

ಹೀಗೆ ಹೇಳಬಾರದು. ಆದಿತ್ಯಶ್ರುತಿ ಸಂವತ್ಸರಸಾರತ್ವ ಮೊದಲಾದ ಲಿಂಗಗಳ ಬಲದಿಂದ ಸೂರ್ಯನಲ್ಲಿರುವ ಸರ್ವಗತತ್ವವನ್ನು ಸಂಕೋಚ ಮಾಡಬಹುದು. (ಕೇವಲ ಪ್ರಾಣಿಗಳ ಹೃದಯದಲ್ಲಿದ್ದಾನೆನ್ನಬಹುದು.) ಆದರೆ ಬ್ರಹ್ಮನಲ್ಲಿರುವ ಸರ್ವಗತತ್ವವನ್ನು ಸಂಕೋಚಗೊಳಿಸಲು ಸಾಧ್ಯವಿಲ್ಲ. ಹಾಗಾದರೆ ಬ್ರಹ್ಮ ಎಂಬ ಶಬ್ದದಿಂದಲೇ ವ್ಯಾಹತಿ ಬರುತ್ತದೆ.

ಕಠಿಣಪದಾರ್ಥ

ತಸ್ಯಾಪಿ = ಅಂತರ್ಯಾಮಿಯೂ ಸಹ, ತದ್ವಿರುದ್ಧ = ಸರ್ವಗತತ್ವಕ್ಕೆ ವಿರುದ್ಧವಾದ,
ತತಮಂ = ವ್ಯಾಪ್ತನಾದ, ತಥಾ = ಗೌಣಾರ್ಥವನ್ನು.

**प्रकाशः** – ननु सर्वभूतगतस्यान्यत्वे "स योऽतोऽश्रुतोऽगतः" इत्यश्रुतत्वादिकमपि तस्यैवेति प्रागुक्तकर्णादिविदूरत्वमपि तस्यैवेति ज्योतिस्सूत्रमप्याक्षेप्तुं शक्यते ।

नच सन्निहिताक्षेपं विना व्यवहिताक्षेपो न युक्त इति वाच्यं, उत्तरनयाभाष्यादौ जन्मादिसूत्राक्षेपस्य दर्शयिष्यमाणत्वात् । पूर्वपादान्त्यनयेन सङ्गत्यावश्यकत्व-निर्बन्धाभावाच्च ।

एवञ्चाश्रुतत्वादिविष्णुलिङ्गश्रवणाद्विष्णुरेवात्रोच्यत इति प्रागुक्तशङ्काऽपि नोदेष्यति, आक्षेपश्च ऋजुर्भवतीति चेन्न,

सूत्रोपात्ताल्पौकस्त्वमुखेनैवाऽऽक्षेपस्योचितत्वात्, श्रुतिसङ्गतिप्रदर्शनार्थत्वात्,

साक्षात्समन्वीयमानलिङ्गमुखेनाऽऽक्षेपसम्भवे व्यवहिताश्रुतत्वादिमुखेनाऽऽक्षेपा-योगाच्चेति तात्पर्यात् ।

ವಿವರಣೆ - ಆಕ್ಷೇಪ - ಸರ್ವಭೂತನಲ್ಲಿರುವನು ಬೇರೆಯವನಾದರೆ "ಸ ಯೋಽತೋಽ-ಶ್ರುತೋಽಗತಃ" ಎಂಬಲ್ಲಿ ಕೇಳಿಸುತ್ತಿರುವ ಅಶ್ರುತತ್ವಾದಿ ಧರ್ಮಗಳೂ ಸಹ ಅವನಲ್ಲಿಯೇ ಬರುತ್ತವೆ.

ಅಷ್ಟೇ ಅಲ್ಲದೆ ಜ್ಯೋತಿರಧಿಕರಣದಲ್ಲಿ ಹೇಳಲ್ಪಟ್ಟ ಕರ್ಣಾದಿವಿದೂರತ್ವವೂ ಸಹ ಅವನಲ್ಲಿಯೇ ಹೇಳಬೇಕು. ಆದ್ದರಿಂದ ಆದಿತ್ಯನು ಸರ್ವಗತನಾದ್ದರಿಂದ ಜ್ಯೋತಿರಧಿಕರಣದಲ್ಲಿ ಸಮರ್ಥಿಸಲ್ಪಟ್ಟ ಕರ್ಣಾದಿವಿದೂರನೂ ಸಹ ಆದಿತ್ಯನೇ ಆಗುತ್ತಾನೆ. ಹೀಗೆ ಜ್ಯೋತಿರಧಿಕರಣವನ್ನು ಆಕ್ಷೇಪಿಸಬಹುದು. ಆದ್ದರಿಂದ ಈ ಅಧಿಕರಣಕ್ಕೆ ಜ್ಯೋತಿರಧಿಕರಣದಿಂದಲೇ ಸಂಗತಿಯನ್ನು ಹೇಳಬಹುದಲ್ಲವೇ?

ಹತ್ತಿರದಲ್ಲಿರುವ ಅಂತಿಮಪ್ರಾಣಾಧಿಕರಣದಿಂದಲೇ ಸಂಗತಿಯನ್ನು ತೋರಿಸಲು ಬರುವಾಗ ದೂರದಲ್ಲಿರುವ ಜ್ಯೋತಿರಧಿಕರಣದಲ್ಲಿರುವ ಸಂಗತಿಯನ್ನು ತೋರಿಸುವುದು ತಪ್ಪಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಮುಂದಿನ ಅಧಿಕರಣದ ಭಾಷ್ಯ ಟೀಕೆ ಮೊದಲಾದೆಡೆ ಜನ್ಮಾದಿ ಸೂತ್ರದಿಂದಲೇ ಸಂಗತಿಯನ್ನು ತೋರಿಸುತ್ತಾರೆ. ಮತ್ತು ಈ ಅಧಿಕರಣವು ಬೇರೆ ಪಾದದಲ್ಲಿದೆ; ಅಂತಿಮಪ್ರಾಣಾಧಿಕರಣವು ಹಿಂದಿನ ಪಾದದಲ್ಲಿದೆ. ಆದ್ದರಿಂದ ಹಿಂದಿನ ಪಾದದಲ್ಲಿರುವ ಅಂತಿಮಪ್ರಾಣಾಧಿಕರಣದಿಂದ ಸಂಗತಿಯನ್ನು ತೋರಿಸಲೇಬೇಕೆಂಬ ನಿರ್ಬಂಧವಿರುವುದಿಲ್ಲ. ಆದ್ದರಿಂದಲೇ ಅಶ್ರುತತ್ವಾದಿ ವಿಷ್ಣುಲಿಂಗಗಳು ಈ ಶ್ರುತಿಯಲ್ಲಿ ಕೇಳಿಸುತ್ತಿರುವುದರಿಂದ ವಿಷ್ಣುವೇ ಇಲ್ಲಿ ಪ್ರತಿಪಾದ್ಯನಾಗಿದ್ದಾನೆಂಬ ಹಿಂದಿನ ಶಂಕೆಯೂ ಸಹ ಹುಟ್ಟುವುದಿಲ್ಲ. ಹೀಗೆ ಹೇಳಿದಾಗ ಆಕ್ಷೇಪವೂ ಸಹ ಸುಲಭವಾಗುತ್ತದೆ.

ಸಮಾಧಾನ - ಇದು ತಪ್ಪು. ಏಕೆಂದರೆ ಸೂತ್ರದಲ್ಲಿ ಹೇಳಲ್ಪಟ್ಟ ಅಲೌಕಿಕತ್ವದಿಂದಲೇ ಆಕ್ಷೇಪ ಮಾಡಲು ಬರುವಾಗ ಸೂತ್ರದಲ್ಲಿ ಹೇಳದ ಕರ್ಣಾದಿವಿದೂರತ್ವದಿಂದ ಆಕ್ಷೇಪ ಮಾಡುವುದು ಉಚಿತವಲ್ಲ. ಹೀಗೆ ಅಲೌಕಿಕತ್ವಮುಖದಿಂದ ಆಕ್ಷೇಪ ಮಾಡಿದಾಗ ಶ್ರುತಿಸಂಗತಿಯನ್ನೂ ಸಹ ತೋರಿಸಿದಂತಾಗುತ್ತದೆ.

ಮತ್ತು ಸಮನ್ವಯ ಮಾಡುವ ಲಿಂಗದಿಂದಲೇ ನೇರವಾಗಿ ಆಕ್ಷೇಪ ಮಾಡಲು ಬರುವಾಗ ವ್ಯವಹಿತವಾದ ಅಶ್ರುತತ್ವಾದಿಗಳ ಮೂಲಕವಾಗಿ ಆಕ್ಷೇಪ ಮಾಡುವುದು ಅಯುಕ್ತವಾಗಿದೆಯೆಂದು ತಾತ್ಪರ್ಯ.

**प्रकाशः** – यद्वा – अत्रेव तत्र निरवाकशादित्यादिलिङ्गाभावाद्विष्णौ मुख्यस्याश्रुतत्वादेरादित्ये गौणतास्वीकारेण तदाक्षेपे हेत्वभावात्सन्निहितमेवाक्षिप्तम्। अत एवाग्रे – ''ज्योतिः, अदृश्यत्वादि'' इत्यादिना तदाक्षेपप्रकारासम्भवं वक्ष्यति ।

ಅಥವಾ ಸರ್ವಗತತ್ವ ಪ್ರತಿಪಾದಕವಾದ ಶ್ರುತಿಯಲ್ಲಿ ನಿರವಕಾಶವಾದ ಆದಿತ್ಯಾದಿ ಲಿಂಗಗಳಿರುವಂತೆ ಕರ್ಣಾದಿವಿದೂರತ್ವ ಪ್ರಾಪಕವಾದ ಶ್ರುತಿಯಲ್ಲಿ ಅಂತಹ ನಿರವಕಾಶವಾದ ಲಿಂಗಗಳಿರುವುದಿಲ್ಲ. ಆದ್ದರಿಂದ ವಿಷ್ಣುವಿನಲ್ಲಿ ಮುಖ್ಯವಾಗಿರುವ ಅಶ್ರುತತ್ವಾದಿಗಳನ್ನು ಆದಿತ್ಯನಲ್ಲಿ ಗೌಣವಾಗಿ ಸ್ವೀಕರಿಸಿ ಆಕ್ಷೇಪ ಮಾಡಲು ಕಾರಣವಿಲ್ಲ. ಹೀಗೆ ವಿಚಾರ ಮಾಡಿದಾಗ ಸನ್ನಿಹಿತವಾದ ಸರ್ವಗತತ್ವವನ್ನು ಆಕ್ಷೇಪಿಸುವುದೇ ಸುಲಭ. ಆದ್ದರಿಂದಲೇ ಮುಂದೆ ''ಜ್ಯೋತಿಃ ಅದೃಶ್ಯತ್ವಾದಿ'' ಇತ್ಯಾದಿಯಾಗಿ ಅದೃಶ್ಯತ್ವಾದಿ ಧರ್ಮಗಳಿಂದ ಆಕ್ಷೇಪ ಮಾಡಲು ಬರುವುದಿಲ್ಲವೆಂದು ಸಮರ್ಥಿಸುತ್ತಾರೆ.

ಸರ್ವಗತತ್ವಾಧಿಕರಣ (೧-೨-೧)

**प्रकाशः** – ननु पूर्वपक्षे हृदयनिहितत्वरूपार्भकौकस्त्वस्य क्वाप्यन्यत्र विष्णावसम्मततया निरवकाशेन तेन विचरणरूपाश्रुतत्वादेर्गौणत्वाश्रयणेन ज्योतिरादिसूत्रमप्याक्षेप्यं स्यात् । अत एवाग्रेतनं 'बाधकाभावात्' इत्येतदसदिति चेन्न, तत्राश्रुतत्वादीनामनेकेषां बाधादप्येकस्य हृदयस्थत्वस्य कथञ्चिद्विष्णौ गौणतया वर्णनीयत्वात् । अश्रुतत्वामतत्वादिरूपविष्णुधर्मसन्दष्टत्वाच्च ।

अक्षराधिकरणटीकायां वक्ष्यमाणरीत्या तत्र प्रधानश्रुतविचाररूपाश्रुतत्वादेर्गौणत्ववर्णनायोगाच्च ।

अत्र त्वादित्यप्रापकाणां बहुत्वेन तत्सध्रीचीनस्यार्भकौकस्त्वस्य मुख्यत्वसम्भवे त्यागायोगाच्चरमश्रुताश्रुतत्वादेर्गौणत्वसम्भवात् 'बाधकाभावात्' इत्येतदप्येतदभिप्रायं नेयम् ।

ಆಕ್ಷೇಪ - ಜ್ಯೋತಿರಧಿಕರಣದಿಂದ ಆಕ್ಷೇಪ ಮಾಡುವುದೇ ಸುಲಭ. ಪೂರ್ವಪಕ್ಷ ಸಂದರ್ಭದಲ್ಲಿ ಹೃದಯನಿಹಿತತ್ವವೆಂಬ ಅಲ್ಪಸ್ಥಾನಸ್ಥಿತತ್ವವು ಯಾವುದೇ ವಿಷಯವಾಕ್ಯದಲ್ಲಿಯೂ ವಿಷ್ಣುವಿನಲ್ಲಿ ಒಪ್ಪಲಾಗದು. ಜ್ಯೋತಿರಧಿಕರಣದಲ್ಲಾಗಲಿ, ಅಂತರಧಿಕರಣದಲ್ಲಾಗಲೀ ಹೃದಯನಿಹಿತತ್ವವೆಂಬ ಧರ್ಮವನ್ನು ವಿಷ್ಣುವಿನಲ್ಲಿ ಒಪ್ಪಲಾಗದೆಂದು ಪೂರ್ವಪಕ್ಷಿಯು ಹೇಳುತ್ತಿದ್ದಾನೆ. ಆದ್ದರಿಂದ ಈ ಅಧಿಕರಣದಲ್ಲಿ ಅಶ್ರುತತ್ವಾದಿಗಳು ಆದಿತ್ಯನಲ್ಲಿ ಬರುತ್ತವೆ. ಆದರೆ ಕರ್ಣಾದಿವಿದೂರತ್ವಾದಿಗಳು ಬಾಧಕವಿಲ್ಲದ್ದರಿಂದ ವಿಷ್ಣುವಿನಲ್ಲಿ ಬರಬಹುದೆಂದು ಹೇಳಲು ಸಾಧ್ಯವೇ ಇಲ್ಲ. ಏಕೆಂದರೆ ಅಲ್ಪಸ್ಥಾನಸ್ಥಿತತ್ವವನ್ನು ಎಲ್ಲಿಯೇ ಹೇಳಿದ್ದರೂ ಅದು ವಿಷ್ಣುವಿನಲ್ಲಿ ಬರುವುದಿಲ್ಲ. ಆದ್ದರಿಂದ ಅಲ್ಪಸ್ಥಾನಸ್ಥಿತತ್ವ ಎಂಬ ಲಿಂಗವು ನಿರವಕಾಶವಾಯಿತು. ಇಂತಹ ನಿರವಕಾಶಲಿಂಗದಿಂದ ವಿಚರಣವೆಂಬ ಅಶ್ರುತತ್ವಾದಿಗಳಿಗೆ ಗೌಣತ್ವವನ್ನು ಆಶ್ರಯಿಸುವ ಮೂಲಕ ಜ್ಯೋತಿರಧಿಕರಣವನ್ನು ಆಕ್ಷೇಪಿಸಬಹುದಿತ್ತು. ಆದ್ದರಿಂದಲೇ ಮುಂದೆ ಗ್ರಂಥಕಾರರು ಹೇಳುವ 'ಬಾಧಕಾಭಾವಾತ್' ಎಂಬ ಮಾತು ತಪ್ಪಾಗುತ್ತದೆ. ಆದ್ದರಿಂದ ಹೃದಯನಿಹಿತತ್ವವೆಂಬ ಬಾಧಕದಿಂದಲೇ ಕರ್ಣಾದಿವಿದೂರತ್ವವನ್ನೂ ಸಹ ಆದಿತ್ಯನಲ್ಲಿ ಹೇಳಬಹುದು. ಆದ್ದರಿಂದ ಜ್ಯೋತಿರಧಿಕರಣವನ್ನು ಆಕ್ಷೇಪಿಸಬಹುದಲ್ಲವೇ ?

ಸಮಾಧಾನ - ಎರಡು ಅಧಿಕರಣಗಳಿಗೂ ಬಹಳ ವ್ಯತ್ಯಾಸವಿದೆ. ಹಿಂದಿನ ಜ್ಯೋತಿರಧಿಕರಣದಲ್ಲಿ ಹೃದಯನಿಹಿತತ್ವವೆಂಬ ಒಂದು ಧರ್ಮವನ್ನು ಇಟ್ಟುಕೊಂಡು, ಕರ್ಣಾದಿವಿದೂರತ್ವ ಮೊದಲಾದ ಅನೇಕ ಧರ್ಮಗಳಿಗೆ ಗೌಣಾರ್ಥವನ್ನು ಹೇಳುವುದಕ್ಕಿಂತ ಕರ್ಣಾದಿವಿದೂರತ್ವವೇ ಮೊದಲಾದ ಅನೇಕ ಧರ್ಮಗಳಿಂದ ಹೃದಯನಿಹಿತತ್ವವೆಂಬ ಒಂದು ಧರ್ಮಕ್ಕೆ ಗೌಣಾರ್ಥವನ್ನು ಹೇಳುವುದು ಅತ್ಯಂತ ಸೂಕ್ತ. ಏಕೆಂದರೆ ಅನೇಕ ಧರ್ಮಗಳನ್ನು ಬಾಧಿಸುವುದಕ್ಕಿಂತ ಒಂದು ಧರ್ಮವನ್ನು ಬಾಧಿಸುವುದು ನ್ಯಾಯವಾಗಿದೆ.

ಮತ್ತು ಹೃದಯನಿಹಿತತ್ವ ಧರ್ಮವನ್ನು ಹೇಳುವ ಹಿಂದಿನ ಮುಂದಿನ ವಾಕ್ಯದಲ್ಲಿ ಅಶ್ರುತತ್ವ, ಅಮೃತತ್ವ ಮೊದಲಾದ ವಿಷ್ಣುವಿನ ಧರ್ಮಗಳೇ ಹೆಚ್ಚಾಗಿ ಕೇಳಿಸುತ್ತಿವೆ.

ಮುಂದೆ ಅಕ್ಷರಾಧಿಕರಣದ ಟೀಕೆಯಲ್ಲಿ ಹೇಳುವಂತೆ ಪ್ರಧಾನವಾಗಿ ಕೇಳಿಸುತ್ತಿರುವ ಅಶ್ರುತತ್ವಾದಿಗಳಿಗೆ ಗೌಣಾರ್ಥವನ್ನು ಮಾಡಬಾರದು ಹೊರತಾಗಿ ಅಪ್ರಧಾನವಾಗಿ ಕೇಳಿಸುತ್ತಿರುವ ಹೃದಯನಿಹಿತತ್ವವನ್ನೇ ಗೌಣವನ್ನಾಗಿ ವ್ಯಾಖ್ಯಾನಿಸಬೇಕು.

ಆದರೆ ಈ ಅಧಿಕರಣದಲ್ಲಿ ಆದಿತ್ಯಪ್ರಾಪಕವಾದ ಶ್ರುತಿ ಹಾಗೂ ಲಿಂಗಗಳು ಬಹಳವಾಗಿ ಕೇಳಿಸುತ್ತಿವೆ. ಇವುಗಳ ಜೊತೆಗೆ ಕೂಡಿರುವಂತಹ ಅರ್ಭಕೌಕಸ್ತ್ವಕ್ಕೆ ಮುಖ್ಯತ್ವವನ್ನು ಹೇಳಲು ಬರುವಾಗ ಅನಂತರ ಕೇಳಿಸುತ್ತಿರುವ ಅಶ್ರುತತ್ವಾದಿಗಳಿಗೆ ಗೌಣತ್ವವನ್ನೇ ಹೇಳಬೇಕಾಗುತ್ತದೆ. ಆದ್ದರಿಂದ ವಿಷ್ಣುವಿನ ಧರ್ಮಗಳೆನಿಸಿದ ಅಶ್ರುತತ್ವಾದಿಗಳಿಗೆ ಆದಿತ್ಯಾದಿಗಳಲ್ಲಿ ಗೌಣಾರ್ಥವನ್ನೇ ಮಾಡಬೇಕಾಗುತ್ತದೆ. ಹೀಗೆ ಜ್ಯೋತಿರಧಿಕರಣಕ್ಕೂ ಈ ಅಧಿಕರಣಕ್ಕೂ ಈ ರೀತಿಯಾದ ವ್ಯತ್ಯಾಸವಿದೆ. ಆದ್ದರಿಂದ ಜ್ಯೋತಿರಧಿಕರಣದಲ್ಲಿ ಬಾಧಕವಿಲ್ಲ. ಈ ಅಧಿಕರಣದಲ್ಲಿ ಬಾಧಕವಿದೆಯೆಂಬ ಗ್ರಂಥಕಾರರ ಮಾತನ್ನು ಈ ಅಭಿಪ್ರಾಯದಲ್ಲಿಯೇ ಕೂಡಿಸಬೇಕು. (ರಾಯರು ತೋರಿಸಿದ ಆಳವಾದ ಈ ವಿಚಾರವನ್ನು ಸಜ್ಜನರು ಗಮನಿಸಬೇಕು.)

**प्रकाशः – केचित्तु – ''सर्वेषु भूतेषु'' इत्यत्र हृदयस्थत्वाश्रवणान्न तदाक्षेप इत्याहुः ।**

**तत्पक्षे ''उपासात्रैविध्यात्'' इत्यादिनाऽगतत्वशङ्कासमाधानादिकं कथमिति चिन्त्यम् ।**

ನಮಲ್ಲೇ ಕೆಲವು ವಿದ್ವಾಂಸರು ಹೀಗೆ ಹೇಳುತ್ತಾರೆ - ''ಸರ್ವೇಷು ಭೂತೇಷು'' ಎಂಬಲ್ಲಿ ಹೃದಯದಲ್ಲಿರುವಿಕೆ ಎಂಬ ಧರ್ಮವೇ ಕೇಳಿಸುತ್ತಿಲ್ಲ. ಕೇವಲ ಸಕಲ ಭೂತಗಳ ಒಳಗಿದ್ದಾನೆಂದಷ್ಟೇ ಕೇಳಿಸುತ್ತಿದೆ. ಆದ್ದರಿಂದ ಜ್ಯೋತಿರಧಿಕರಣದಲ್ಲಿ ಹೇಳಿರುವಂತಹ ಹೃದಯನಿಹಿತತ್ವವನ್ನು ಈ ಅಧಿಕರಣದಲ್ಲಿ ಆಕ್ಷೇಪಿಸಲು ಸಾಧ್ಯವಿಲ್ಲ ಎನ್ನುತ್ತಾರೆ.

ಇವರ ವಿಚಾರವೂ ತಪ್ಪು, 'ಉಪಾಸಾತ್ರೈವಿಧ್ಯಾತ್' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಅಂತರುಪಾಸನಾವನ್ನು ಗತತಾರ್ಥತ್ವಶಂಕೆಯಿಂದ ಅದಕ್ಕೆ ಸಮಾಧಾನವನ್ನು ಈ ಅಧಿಕರಣದಲ್ಲಿ ಹೇಳುತ್ತಿದ್ದಾರೆ. ಇವರು ಹೇಳುವಂತೆ ಹೃದಯನಿಹಿತತ್ವವನ್ನು ಇಲ್ಲಿ ಹೇಳದಿದ್ದರೆ ಗತಾರ್ಥತ್ವ ಶಂಕೆಯನ್ನೇ ಮಾಡಿದ್ದು ತಪ್ಪಾಗುತ್ತದೆ. ಆದ್ದರಿಂದ ಭೂತಗಳ ಒಳಗಿದ್ದಾನೆ ಎಂಬ ಮಾತಿಗೆ ಸಕಲ ಭೂತಗಳ ಹೃದಯಲ್ಲಿದ್ದಾನೆಂದೇ ಅರ್ಥ.

**प्रकाशः – लिङ्गं पूर्वन्यायेन सावकाशमित्याशङ्क्य निराह – नचेति । इत्यादि श्रुत्येति । एतेन ''तस्यापरिच्छिन्नत्वेन ''सर्वेषु भूतेषु'' इत्युक्ताल्पौकस्त्वायोगात्'' इति टीकोपपादिता ।**

ननु "एष म आत्माऽन्त र्हृदयेऽणीयान्व्रीहेर्वा यवाद्वा" इत्यणीयस्त्वमपि श्रुयत इति चेन्न, द्वयोर्विरोधेनाणीयस्त्वस्य जीवधर्मत्वादिना कथञ्चिन्नेयत्वात् इति भावेनोक्तं – **तद्विरुद्धाल्पौकस्त्वायोगादिति** ।

**आदित्यनिष्ठत्वादिति** । एतच्च प्रागेव विवृतमस्माभिः । ननु ब्रह्मणोऽपि सर्वगतत्वं सङ्कोच्यात्र प्रतिपाद्यत्वमुपेयतामित्यत आह – **नचेति** ।।

ಅರ್ಭಕೌಕಸ್ತ್ವವೆಂಬ ಲಿಂಗವು ಹಿಂದೆ ಹೇಳಿದ ನ್ಯಾಯದಂತೆ ಸಾವಕಾಶವಲ್ಲವೇ? ಎಂದು ಆಶಂಕಿಸಿ 'ನಚ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. 'ಇತ್ಯಾದಿ ಶ್ರುತ್ಯಾ' ಎಂಬ ಮಾತುಗಳಿಂದ "ತಸ್ಯಾಪರಿಚ್ಛಿನ್ನತ್ವೇನ "ಸರ್ವೇಷು ಭೂತೇಷು" ಇತ್ಯುಕ್ತಾಲ್ಪೌಕಸ್ತ್ವಾಯೋಗಾತ್" ಎಂಬ ಟೀಕೆಯನ್ನು ವ್ಯಾಖ್ಯಾನಿಸಿದಂತಾಯಿತು.

ಪ್ರಶ್ನೆ - ಗ್ರಂಥದಲ್ಲಿ ಹೇಳಿದ 'ಜ್ಯಾಯಾನ್ ಪೃಥಿವ್ಯಾ' ಎಂಬ ಶ್ರುತಿಯಿಂದ ಅಂತರ್ಯಾಮಿಗೆ ಸರ್ವಗತತ್ವವನ್ನು ಹೇಳಲಾಗಿದೆ. ಆದರೆ ಅದೇ ಶ್ರುತಿಯ ಮುಂದಿನ ವಾಕ್ಯದಲ್ಲಿ "ಏಷ ಮ ಆತ್ಮಾಽಂತ-ರ್ಹೃದಯೇಽಣೀಯಾನ್ವ್ರೀಹೇರ್ವಾ ಯವಾದ್ವಾ" ಎಂಬುದಾಗಿ ಅಲ್ಪಸ್ಥಾನಸ್ಥಿತತ್ವವು ಕೇಳಿಸುತ್ತಿದೆಯಲ್ಲವೇ?

ಉತ್ತರ - ಇದು ತಪ್ಪು. ಎರಡೂ ಶ್ರುತಿವಾಕ್ಯಗಳಿಗೆ ಪರಸ್ಪರ ವಿರೋಧ ಬರುವುದರಿಂದ ಸರ್ವಗತತ್ವವನ್ನು ಅಂತರ್ಯಾಮಿಯಲ್ಲಿ ಹೇಳಿ ಅಣೀಯಸ್ತ್ವವನ್ನು ಜೀವಧರ್ಮವೆಂದು ಗೌಣ ಮಾಡಬೇಕು. ಈ ಅಭಿಪ್ರಾಯದಿಂದ ಗ್ರಂಥಕಾರರು 'ತದ್ವಿರುದ್ಧಾಲ್ಪೌಕಸ್ತ್ವಾಯೋಗಾತ್' ಎಂದು ಹೇಳಿದ್ದಾರೆ.

ಗ್ರಂಥದಲ್ಲಿ 'ಆದಿತ್ಯನಿಷ್ಠತ್ವಾತ್' ಎಂದಿದೆ. ಆದಿತ್ಯನಲ್ಲಿ ಸರ್ವಗತತ್ವವು ಹೇಗೆ ಬರುತ್ತದೆಂಬುದನ್ನು ಈ ಹಿಂದೆಯೇ ಉಪಪಾದಿಸಿದ್ದಾಗಿದೆ. ಬ್ರಹ್ಮನಲ್ಲಿಯೂ ಸಹ ಸರ್ವಗತತ್ವವನ್ನು ಸಂಕೋಚ ಮಾಡಿ ಈ ಶ್ರುತಿಯಿಂದ ಪ್ರತಿಪಾದ್ಯನೆಂದು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ನಚ ಬ್ರಹ್ಮಣಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – एतेन, ननु यथा पूर्वपक्षे किञ्चिदादित्यवाक्यं किञ्चिज्जीववाक्यमित्युभय-प्रापकसत्त्वाद्वाक्यभेद आश्रीयते, तथा पूर्वप्रकरणं पूर्वोक्तरीत्याऽनेकश्रुति-लिङ्गोपेतत्वेन ब्रह्मपरं, "चत्वारः पुरुषाः" इत्यादित्वन्यपरमस्तु, अत्रोक्तबाधका-नामर्भकौकस्त्वादित्यश्रुत्यादीनां तत्राभावादिति निरस्तम् । "ब्रह्म ततमं" इति पूर्ववाक्यमसङ्कुचितसर्वगतत्वपरं चेत्, "भूतेष्वेतमेव" इत्यवधारणविरोधेन न ब्रह्म प्रतिपादयितुमलम्, सङ्कुचितत्परं चेत्तस्य ब्रह्मत्वव्याघातेन न तत्प्रतिपादयितुं शक्तमित्युभयथा तस्य ब्रह्मपरत्वायोगात्,

ಆಕ್ಷೇಪ - ಇಲ್ಲಿಯ ತನಕ ಆದಿತ್ಯಕೋಟಿಕ ಪೂರ್ವಪಕ್ಷವನ್ನು ಮತ್ತು ಜೀವಕೋಟಿಕಪೂರ್ವಪಕ್ಷವನ್ನು ಮಾಡಿದರು. ಜೀವಕೋಟಿಕ ಪೂರ್ವಪಕ್ಷವನ್ನು ಮಾಡುವಾಗ ವಾಕ್ಯಭೇದವನ್ನು ಆಶ್ರಯಿಸಿದ್ದರು. ಸಂವತ್ಸರಸಾರತ್ವ ಮೊದಲಾದ ಆದಿತ್ಯನ ಲಿಂಗಗಳು ಯಾವ ಶ್ರುತಿವಾಕ್ಯಗಳಲ್ಲಿ ಕೇಳಿಸುತ್ತಿವೆಯೋ, ಅವೆಲ್ಲವೂ ಆದಿತ್ಯನನ್ನೇ ಪ್ರತಿಪಾದಿಸಲಿ. ಆದರೆ 'ಏತಂ ಹ್ಯೇವಾ ಬಹ್ವೃಚಾಃ' ಎಂಬ ವಾಕ್ಯದಿಂದ ಪ್ರಾರಂಭಿಸಿ ಮುಂದಿನ ವಾಕ್ಯಗಳೆಲ್ಲವೂ ಜೀವಪರವಾಗುತ್ತವೆ. ಹೀಗೆ ಉಭಯಪ್ರಾಪಕಗಳಿರುವುದರಿಂದ ವಾಕ್ಯಭೇದವನ್ನು ಆಶ್ರಯಿಸಲಾಗಿದೆ. ಅದರಂತೆ ಐತರೇಯೋಪನಿಷತ್ತಿನ ಪ್ರಾರಂಭದಲ್ಲಿ ಬರುವ "ಬ್ರಹ್ಮ ತತಮಂ" ಇತ್ಯಾದಿ ಪ್ರಕರಣದ ಅನೇಕ ಭಾಗದಲ್ಲಿ ವಿಷ್ಣುಶ್ರುತಿ ಹಾಗೂ ವಿಷ್ಣುಲಿಂಗಗಳಿಂದ ಕೂಡಿರುವುದರಿಂದ ಬ್ರಹ್ಮಪರವಾಗಲಿ; "ಚತ್ವಾರಃ ಪುರುಷಾಃ" ಎಂದು ಪ್ರಾರಂಭವಾಗುವ ಮುಂದಿನ ಪ್ರಕರಣವೆಲ್ಲವೂ ಜೀವಪರವೋ ಆದಿತ್ಯಪರವೋ ಆಗಲಿ. ಆದ್ದರಿಂದ 'ಬ್ರಹ್ಮ ತತಮಂ' ಎಂದು ಪ್ರಸಕ್ತವಾಗುವ ಪ್ರಕರಣದಲ್ಲಿ ಇಲ್ಲಿ ಹೇಳಲ್ಪಟ್ಟ ಯಾವುದೇ ಬಾಧಕಗಳು ಇರುವುದಿಲ್ಲ. ಆದಿತ್ಯಶ್ರುತಿಗಳಾಗಲೀ, ಅರ್ಭಕೌಕಸ್ತ್ವವಾಗಲೀ ಅಲ್ಲಿ ಇರುವುದಿಲ್ಲ. ಆದ್ದರಿಂದ ಹಿಂದಿನ ಅಧಿಕರಣವನ್ನು ಹೇಗೆ ಆಕ್ಷೇಪಿಸುತ್ತೀರಿ ?

ಸಮಾಧಾನ - ಪೂರ್ವಪ್ರಕರಣವನ್ನು ಬ್ರಹ್ಮಪರವೆಂದೇ ಹೇಳಲು ಸಾಧ್ಯವಿಲ್ಲ. ಏಕೆಂದರೆ ಬ್ರಹ್ಮನಲ್ಲಿ ತತಮತ್ವವನ್ನು (ಸರ್ವಗತತ್ವವನ್ನು) ಅಸಂಕುಚಿತವಾಗಿ ಹೇಳುತ್ತೀರೋ ? ಅಥವಾ ಸಂಕುಚಿತವಾಗಿ ಹೇಳುತ್ತೀರೋ ? ಅಸಂಕುಚಿತವಾದ ವ್ಯಾಪ್ತಿಯನ್ನು ಹೇಳುವುದಾದರೆ 'ಏತಮೇವ' ಎಂಬ ಅವಧಾರಣದ ವಿರೋಧ ಬರುತ್ತದೆ. ಏಕೆಂದರೆ ಮುಂದಿನ ಪ್ರಕರಣದಲ್ಲಿ 'ಏತಮೇವ' ಎಂಬುದನ್ನು ಆದಿತ್ಯಪರವೆಂದು ನೀವೇ ಹೇಳುತ್ತೀರಿ. ಈ ವಾಕ್ಯದಲ್ಲಿ ಆದಿತ್ಯನೊಬ್ಬನೇ ಸರ್ವಗತನೆಂದು ನಿರ್ಣಯವಾದ ಮೇಲೆ ಪುನಃ ಇಲ್ಲಿ ಬ್ರಹ್ಮನನ್ನು ಸರ್ವಗತನೆಂದು ಹೇಳಿದರೆ ವಿರೋಧ ಬರುತ್ತದೆ. ಇನ್ನು ಸಂಕುಚಿತವಾದ ವ್ಯಾಪ್ತಿಯನ್ನು ಬ್ರಹ್ಮನಲ್ಲಿ ಹೇಳಬೇಕು. ಹಾಗೆ ಸಂಕೋಚ ಮಾಡಿದರೆ ಬ್ರಹ್ಮತ್ವದಿಂದಲೇ ವ್ಯಾಹತಿ ಬರುತ್ತದೆ. ಬ್ರಹ್ಮನೆಂದರೆ ಎಲ್ಲೆಡೆ ಇದ್ದಾನೆಂದರ್ಥ. ಪುನಃ ಪ್ರಥಮಂ ಎಂಬ ಪದದಿಂದ ಕೆಲವೆಡೆ ಮಾತ್ರ ಇದ್ದಾನೆಂದು ಹೇಳಿದರೆ ವ್ಯಾಹತಿ ದೋಷ ಬರುತ್ತದೆ. ಆದ್ದರಿಂದ ಎರಡು ಬಗೆಯಿಂದ ಚಿಂತನೆ ಮಾಡಿದರೂ ಪೂರ್ವಪ್ರಕರಣವನ್ನು ಬ್ರಹ್ಮಪರವೆಂದು ಹೇಳಲಾಗದು.

**प्रकाशः** – प्रकृतवाक्यभेद इव पूर्वोत्तरप्रकरणभेदे ज्ञापकाभावात्, अत्राऽऽदित्यश्रुत्याद्यनुसारेण ब्रह्मशब्दाश्रुतत्वादिलिङ्गानामन्यथात्वमिव पूर्वत्राप्यन्यथयितुं शक्यत्वे सर्वत्राऽऽदित्यपरत्वे पूर्वपक्षिणं प्रति प्रबलबाधकाभावात् । अत एव टीकायां ''एकप्रकरणत्वात्'' इत्युक्तमिति ।

ಪೂರ್ವಪಕ್ಷದಲ್ಲಿ ಯಾವರೀತಿಯಾಗಿ ಕೆಲವು ವಾಕ್ಯಗಳನ್ನು ಆದಿತ್ಯಪ್ರತಿಪಾದಕವೆಂದು, ಇನ್ನು ಕೆಲವು ವಾಕ್ಯಗಳನ್ನು ಜೀವಪ್ರತಿಪಾದಕವೆಂದು ಒಪ್ಪಿ ವಾಕ್ಯಭೇದವನ್ನು ಹೇಳುತ್ತಾರೋ, ಅದರಂತೆ ಪ್ರಕೃತ ಐತರೇಯೋಪನಿಷತ್ತಿನ ಹಿಂದಿನ ಮುಂದಿನ ಪ್ರಕರಣಗಳಲ್ಲಿ ವಾಕ್ಯಭೇದವನ್ನು ಒಪ್ಪಲು ಕಾರಣವಿಲ್ಲ. ಅಂದರೆ ಹಿಂದಿನ ಪ್ರಕರಣವು ಬ್ರಹ್ಮನನ್ನೇ ಪ್ರತಿಪಾದಿಸುತ್ತದೆನ್ನಲು ಮುಂದಿನ ಪ್ರಕರಣವು ಆದಿತ್ಯನನ್ನೇ

ಪ್ರತಿಪಾದಿಸುತ್ತಿದೆನ್ನಲು ಆಧಾರವಿಲ್ಲ. ಆದ್ದರಿಂದ ಮುಂದಿನ ಪ್ರಕರಣದಲ್ಲಿರುವ ಆದಿತ್ಯಶ್ರುತಿಗೆ ಅನುಸಾರಿಯಾಗಿ ಬ್ರಹ್ಮಶಬ್ದ ಅಶ್ರುತತ್ವ ಮೊದಲಾದ ಲಿಂಗಗಳನ್ನು ಹೇಗೆ ಗೌಣವಾಗಿ ವ್ಯಾಖ್ಯಾನಿಸಲಾಗುತ್ತದೋ, ಅದರಂತೆ ಹಿಂದಿನ ಪ್ರಕರಣದಲ್ಲಿರುವ ಬ್ರಹ್ಮನ ಲಿಂಗಗಳನ್ನೂ ಸಹ ಆದಿತ್ಯಪರವಾಗಿ ವ್ಯಾಖ್ಯಾನಿಸಬಹುದು. ಒಟ್ಟಾರೆ ಸಂಪೂರ್ಣ ಐತರೇಯದಲ್ಲಿ ಬರುವ ಪ್ರಕರಣವು ಆದಿತ್ಯಪರವೆಂದು ಹೇಳಿದಾಗ ಪೂರ್ವಪಕ್ಷಿಯನ್ನು ಕುರಿತು ಯಾವುದೇ ಪ್ರಬಲವಾದ ಬಾಧಕವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದಲೇ ಟೀಕೆಯಲ್ಲಿ "ಏಕಪ್ರಕರಣತ್ವಾತ್" ಎಂದು ಹೇಳಿದ್ದಾರೆ.

**गुरुराजीयम्** – ननु यदि सर्वेषु भूतेष्वित्यत्राल्पौकस्त्वमुच्येत तर्ह्यत्रोक्तसर्वगतो न विष्णुश्चेत्पूर्वोक्तोऽपि न सर्वगतो विष्णुः स्यादित्याक्षेपायोगात्पूर्वाधिकरणाक्षेपानुपपत्तिरित्यत आह – **पूर्वाधिकरणाक्षेपस्त्विति** ।।




ಅಂತರ್ಯಾಮಿಯಲ್ಲಿಯೂ ಸಹ ಅಲ್ಪಸ್ಥಾನಸ್ಥಿತತ್ವವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ "ಹೃದಯೇ ಜ್ಯಾಯಾನ್ ಪೃಥಿವ್ಯಾಃ" ಎಂಬ ಶ್ರುತಿಯು ಹೃದಯದಲ್ಲಿರುವ ಅಂತರ್ಯಾಮಿಗೆ ಸರ್ವಗತತ್ವವನ್ನೇ ಹೇಳುತ್ತಿದೆ. ಸರ್ವಗತನಲ್ಲಿ ಅಲ್ಪದೇಶಸ್ಥಿತತ್ವವನ್ನು ಹೇಳಲಾಗದೆಂದು ವಾದ ಮಾಡಿದರೆ ಆದಿತ್ಯನಲ್ಲಿಯೂ ಅಲ್ಪದೇಶಸ್ಥಿತತ್ವವನ್ನು ಹೇಳಲು ಸಾಧ್ಯವಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಆದಿತ್ಯಶ್ರುತಿಗೆ ಅನುಸಾರಿಯಾಗಿ ಆದಿತ್ಯನಲ್ಲಿರುವ ಸರ್ವಗತತ್ವವನ್ನು ಸಂಕೋಚ ಮಾಡಬೇಕಾಗುತ್ತದೆ. ಆದಿತ್ಯನಲ್ಲಿ ಸಂಕುಚಿತವಾದ ಅರ್ಥವನ್ನು ಹೇಳಿದಂತೆ ಬ್ರಹ್ಮನಲ್ಲಿ ಹೇಳಲಾಗದೆಂಬುದನ್ನು ಮಾತ್ರ ಗಮನಿಸಬೇಕು.



## ಬಾಧಕಪರಿಹಾರದೊಂದಿಗೆ ಪೂರ್ವಪಕ್ಷದ ಉಪಸಂಹಾರ

**तात्पर्यचन्द्रिका**

**ब्रह्मशब्दस्य च विष्णौ मुख्यत्वेऽप्यल्पौकस्त्वादिलिङ्गादिहामुख्यार्थत्वात्,**

**ज्योतिरदृश्यत्वाद्यधिकरणयोश्च बाधकाभावान्मुख्यस्याश्रुतत्वादेर्विष्णुधर्मत्वेऽपि प्रकृते अर्भकौकस्त्वादिबाधकेन अमुख्यस्य तस्य जीवेऽप्युपपत्तेः । "अन्तर्यामि" इत्यत्र च इह विष्णुलिङ्गत्वेन निश्चितस्यान्तरत्वस्य "यः पृथिव्या अन्तरः" इति श्रवणादन्तर्यामी विष्णुरिति वक्ष्यते, न त्वेतत्सिद्धान्तात्प्राक् तत्रान्तरत्वादीनां विष्णुधर्मत्वनिश्चयः । अत एव तत्र भाष्यकारो वक्ष्यति "स हि "सर्वेषां**

भूतानामन्तरपुरुषः'' इत्यादिना अन्तरः'' इति । अन्तराधिकरणे तु चक्षुरन्तस्स्थत्वं विष्णोरिति वक्ष्यते । न चेह तच्छ्रूयते, किन्त्वन्तरशब्दमात्रमित्याद्यूह्यम् । तस्माद्युक्तः पूर्वपक्षोदयः ।।

ಅನುವಾದ - ಆದಿತ್ಯಾದಿಗಳು ಸರ್ವಗತರಾಗಿದ್ದಾರೆನ್ನಲು ಬ್ರಹ್ಮಶಬ್ದ ಬಾಧಕವಾಗುವುದಿಲ್ಲ. ವಸ್ತುತಃ ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಮುಖ್ಯಾರ್ಥವಾಗಿರಬಹುದು. ಆದರೆ ಆದಿತ್ಯನ ವಿಷಯದಲ್ಲಿ 'ಅಲೌಕಿಕತ್ವ' ಮೊದಲಾದ ಲಿಂಗಗಳ ಬಲದಿಂದ ಅಮುಖ್ಯಾರ್ಥವೇ ಆಗಿರುತ್ತದೆ.

ಇದರಂತೆ ಜ್ಯೋತಿರಧಿಕರಣ ಹಾಗೂ ಅದೃಶ್ಯತ್ವಾಧಿಕರಣಗಳಲ್ಲಿ ಬಾಧಕವನ್ನು ಹೇಳದ ಕಾರಣ ಅದೃಶ್ಯತ್ವ, ಅಶ್ರುತತ್ವ ಮೊದಲಾದ ಧರ್ಮಗಳನ್ನು ವಿಷ್ಣುವಿನಲ್ಲಿ ಮುಖ್ಯವಾಗಿಯೇ ಹೇಳಬಹುದು. ಆದರೆ ಪ್ರಕೃತ ಆದಿತ್ಯ ಮತ್ತು ಜೀವನಲ್ಲಿ ಅಲೌಕಿಕತ್ವ ಮೊದಲಾದ ಬಾಧಕಗಳಿರುವುದರಿಂದ ಈ ಅದೃಶ್ಯತ್ವಾದಿಗಳನ್ನು ಅಮುಖ್ಯವೆಂದು ಹೇಳಬಹುದು.

ಅಂತರ್ಯಾಮ್ಯಧಿಕರಣದಲ್ಲಿ ಅಂತರತ್ವವು ವಿಷ್ಣುವಿನ ಲಿಂಗವೆಂದು ಹೇಳಿದ್ದಾರಲ್ಲವೆ? ಎಂದರೆ ಈ ಅಧಿಕರಣದಲ್ಲಿ ನಿರ್ಣಯವಾದ ಮೇಲೆ "ಯಃ ಪೃಥಿವ್ಯಾ ಅಂತರಃ" ಎಂಬಲ್ಲಿ ಕೇಳಿಸುತ್ತಿರುವ ಅಂತರತ್ವವನ್ನು ವಿಷ್ಣುವಿನ ಧರ್ಮವೆಂದು ಅಲ್ಲಿ ಹೇಳಿದ್ದಾರೆ. ಆದ್ದರಿಂದ ಅಲ್ಲಿರುವ ಅಂತರತ್ವವನ್ನು ಈ ಅಧಿಕರಣದ ಸಿದ್ಧಾಂತದ ಮೊದಲು ಪೂರ್ವಪಕ್ಷದ ಸಂದರ್ಭದಲ್ಲಿ ಅಂತರತ್ವವನ್ನು ವಿಷ್ಣುವಿನ ಧರ್ಮವೆಂದು ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದಲೇ ಮುಂದೆ ಭಾಷ್ಯಕಾರರು "ಸಹಿ ಸರ್ವೇಷಾಂ ಭೂತಾನಾಮಂತರಪುರುಷಃ" ಎಂಬುದಾಗಿ ಹೇಳುತ್ತಾರೆ. 'ಅಂತರಃ' ಎಂಬುದಾಗಿ ಅಂತರಧಿಕರಣದಲ್ಲಂತೂ ವಿಷ್ಣುವನ್ನು ಚಕ್ಷುರಂತಸ್ಥನೆಂದು ಹೇಳಿದ್ದಾರೆ. ಆದರೆ ಈ ಅಧಿಕರಣದಲ್ಲಿ ಆ ಮಾತು ಕೇಳಿಸುತ್ತಿಲ್ಲ. ಹೊರತಾಗಿ ಕೇವಲ 'ಅಂತರ' ಎಂಬ ಶಬ್ದವಷ್ಟೇ ಕೇಳಿಸುತ್ತಿದೆ. ಇವೇ ಮೊದಲಾದ ಹಲವು ಪೂರ್ವಪಕ್ಷವನ್ನು ಸ್ವತಃ ಶಿಷ್ಯಂದಿರೇ ಊಹಿಸಿಕೊಳ್ಳಬೇಕು. ಆದ್ದರಿಂದ ಪೂರ್ವಪಕ್ಷವು ಉದಯವಾಯಿತು.

प्रकाशः —

नन्वत्र ब्रह्मशब्दादयोऽपि ब्रह्मत्वसाधकाः सन्तीत्युक्तमित्यत्राह — ब्रह्मशब्दस्य चेति । एतेन ''ब्रह्मशब्दस्य जीवेऽपि सम्भवात्'' इति टीका विवृता । अश्रुतत्वादेर्गतिमाह — ज्योतिरिति । एतेन न तदाक्षेप इति सूचितम् ।

**ವಿವರಣೆ** - ಇಲ್ಲಿಯ ತನಕ ಆದಿತ್ಯಶ್ರುತಿಯು ಪ್ರಸಿದ್ಧನಾದ ಸೂರ್ಯನನ್ನೇ ಪ್ರತಿಪಾದಿಸುತ್ತದೆನ್ನಲು ಅನೇಕ ಸಾಧಕಗಳನ್ನು ಹೇಳಿದರು. ಪ್ರಕೃತ ಬಾಧಕಗಳನ್ನು ಪರಿಹರಿಸುತ್ತಿದ್ದಾರೆ.

ಆದಿತ್ಯಪ್ರಕರಣದಲ್ಲಿಯೂ ಬ್ರಹತ್ತ್ವಪ್ರತಿಪಾದಕವಾದ ಬ್ರಹ್ಮಶಬ್ದವೇ ಮೊದಲಾದವುಗಳು ಕಾಣಿಸುತ್ತಿವೆಯಲ್ಲವೇ? ಎಂಬ ಪ್ರಶ್ನೆಗೆ "ಬ್ರಹ್ಮಶಬ್ದಸ್ಯ ಚ" ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಹೀಗೆ ಹೇಳಿದ್ದರಿಂದ "ಬ್ರಹ್ಮಶಬ್ದಸ್ಯ ಜೀವೇಽಪಿ ಸಂಭವಾತ್" ಎಂಬ ಟೀಕೆಯನ್ನು ವ್ಯಾಖ್ಯಾನಿಸಿದಂತಾಯಿತು. ಅಶ್ರುತತ್ವ ಮೊದಲಾದವುಗಳು ಆದಿತ್ಯನು ಪ್ರತಿಪಾದ್ಯನೆನ್ನಲು ಬಾಧಕವಾಗಿವೆಯಲ್ಲವೇ? ಎಂಬ ಪ್ರಶ್ನೆಗೆ 'ಜ್ಯೋತಿಃ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಈ ವಾಕ್ಯದಿಂದ ಜ್ಯೋತಿರಧಿಕರಣವನ್ನು ಆಕ್ಷೇಪಿಸಲಾಗದೆಂದೂ ಸಹ ಸೂಚಿಸಿದಂತಾಯಿತು.

**प्रकाशः** – **बाधकाभावादिति** । उक्ताभिप्रायमेतत् । यदप्यन्तरत्वं विष्णुलिङ्गमिति, तत्राह – **अन्तर्यामीति** ।

ननु ''अन्तर उपपत्तेः'' इत्यत्रान्तरत्वं विष्णुलिङ्गतया सिद्धमित्यत आह – **अन्तरेति** । तत्र ''य एषोऽन्तरक्षिणि पुरुषः'' इति चक्षुरन्तस्स्थत्वं श्रूयते, न त्विह तथेत्यर्थः ।

'ಬಾಧಕಾಭಾವಾತ್' ಎಂಬ ವಾಕ್ಯದ ಅಭಿಪ್ರಾಯವನ್ನು ಈ ಹಿಂದೆಯೇ ನಿರೂಪಿಸಿದ್ದಾಗಿದೆ. ಅಂತರತ್ವವೆಂಬ ವಿಷ್ಣುಲಿಂಗವು ಬಾಧಕವೆಂಬ ಪ್ರಶ್ನೆಗೆ 'ಅಂತರ್ಯಾಮಿ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

ಅಂತರ್ಯಾಮ್ಯಧಿಕರಣವು ಬೇಡ, ಆದರೆ "ಅಂತರ ಉಪಪತ್ತೇಃ" ಎಂಬ ಅಧಿಕರಣದಲ್ಲಿ ಅಂತರತ್ವವನ್ನು ವಿಷ್ಣುಲಿಂಗವೆಂದು ಹೇಳಿದ್ದಾರಲ್ಲವೇ? ಎಂಬ ಪ್ರಶ್ನೆಗೆ 'ಅಂತರ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಅಂತರಧಿಕರಣದಲ್ಲಿ "ಯ ಏಷೋಽಂತರಕ್ಷಿಣಿ ಪುರುಷಃ" ಎಂದು ಚಕ್ಷುರಂತಸ್ಥತ್ವವು ಕೇಳಿಸುತ್ತಿದೆ ಹೊರತು ಹೃದಯನಿಹಿತತ್ವ ಕೇಳಿಸುತ್ತಿಲ್ಲವೆಂದು ತಿಳಿಯಬೇಕು.

**प्रकाशः** – नन्वथापि ''अन्योऽन्तर आत्माऽऽनन्दमयः'' इत्यत्रान्तरत्वस्य विष्णुर्धमत्वं सिद्धमिति चेन्न, तत्र देहदेहिभावेनान्तस्स्थत्वमुच्यते,

बहिष्ठो देहवद्विष्णुरन्तस्स्थो देहिवत्स्मृतः ।

इति तद्भाष्योक्तेः । न चेह तथा श्रूयते, किन्तु सर्वजीवान्तरत्वम् ।

उक्तञ्च –

अन्तस्स्थस्सर्वजीवानां पूर्णत्वात्पुरुषाभिधः ।

इति ऐतरेयभाष्ये ।

ಪ್ರಶ್ನೆ - ಅಂತರ್ಯಾಮ್ಯಧಿಕರಣದಲ್ಲಾಗಲೀ, ಅಂತರಧಿಕರಣದಲ್ಲಾಗಲೀ, ಅಂತರತ್ವವು ವಿಷ್ಣುಲಿಂಗವೆಂದು ಸಿದ್ಧವಾಗದಿರಬಹುದು. ಆದರೆ ಆನಂದಮಯಾಧಿಕರಣದಲ್ಲಿರುವ ಪ್ರಸಕ್ತವಾಗುವ 'ಅನ್ಯೋಽಂತರ ಆತ್ಮಾಽಽನಂದಮಯಃ' ಎಂಬಲ್ಲಿ ಅಂತರತ್ವವು ವಿಷ್ಣುಧರ್ಮವೆಂದು ನಿಶ್ಚಯವಾಗಿದೆಯಲ್ಲವೇ?

ಉತ್ತರ - ಆನಂದಮಯಾಧಿಕರಣದಲ್ಲಿ ಹೇಳಿರುವ ಅಂತರತ್ವವೇ ಬೇರೆ, ಇಲ್ಲಿ ಹೇಳುತ್ತಿರುವ ಅಂತರತ್ವವೇ ಬೇರೆ. ದೇಹದೇಹಿಭಾವದಿಂದ ಅಂತರತ್ವವು ಆನಂದಮಯಾಧಿಕರಣದಲ್ಲಿ ಹೇಳಲ್ಪಟ್ಟಿದೆ. ಏಕೆಂದರೆ

ಬಹಿಷ್ಠೋ ದೇಹವದ್ವಿಷ್ಣುರಂತಸ್ಥೋ ದೇಹಿವತ್ಸ್ಮೃತಃ।

ಹೊರಗಿರುವ ಭಗವದ್ರೂಪವು ದೇಹದಂತಿದೆ. ಒಳಗಿರುವ ಭಗವದ್ರೂಪವು ದೇಹಿಯಂತಿದೆಯೆಂದು ಅದೇ ಅಧಿಕರಣದ ಭಾಷ್ಯದಲ್ಲಿ ಹೇಳಿದ್ದಾರೆ. ಆದರೆ ಈ ಅಧಿಕರಣದಲ್ಲಿ ಹಾಗೆ ಕೇಳಿಸುತ್ತಿಲ್ಲ ಹೊರತಾಗಿ ಸಕಲ ಜೀವರ ಅಂತರ್ಯಾಮಿಯಾಗಿದ್ದಾನೆಂಬ ಅಭಿಪ್ರಾಯದಿಂದ ಅಂತರತ್ವವನ್ನು ಹೇಳುತ್ತಿದ್ದಾರೆ. ಏಕೆಂದರೆ

ಅಂತಸ್ಥಸ್ಸರ್ವಜೀವಾನಾಂ ಪೂರ್ಣತ್ವಾತ್ಪುರುಷಾಭಿಧಃ।

ಎಂಬುದಾಗಿ ಐತರೇಯಭಾಷ್ಯದಲ್ಲಿ ಹೇಳಿದ್ದಾರೆ.

**प्रकाशः** – नन्वेवमपि "अन्यभावव्यावृत्तेः" इति सूत्रेऽक्षरनयेऽणुत्वमहत्त्वयोरविरोधो वक्ष्यते, अणुत्वमहत्त्वे एवाल्पौकस्त्वसर्वगतत्वे । अत एव वैशेषिकाधिकरणे–

महतोऽल्पत्वमपि हि व्योमवत्प्राह वेदवित् ।
यद्यल्पदेशसंस्थानं न सर्वत्रापि नो भवेत् ।।

इत्यादिना "व्योमवच्च" इति सूत्रांशं मनसि निधाय व्योमदृष्टान्तेनात्रोक्तमल्पौकस्त्वरूपमणुत्वं विष्णावपपादितम् । नच तत्र प्राकृतस्थौल्यादिराहित्यमेवोक्तं,

अस्थूलानणुरूपोऽसावैश्वर्यात्पुरुषोत्तमः ।

इति भाष्योक्तेः ।

अन्यवस्तुस्वभावानां स्थौल्यादीनामपाकृतिम् ।
नारायणे श्रुतिर्वक्ति.................. ।।

इत्यनुव्याख्यानोक्तेरिति वाच्यं, "अन्यभाव" इति सूत्रोक्तस्थौल्याद्यभावप्रतिपादनेऽपि सौत्रचशब्दने स्थौल्यादिविरुद्धाणुत्वादेरपि

समुचिततयाऽणुत्वादेरपि तत्रैवोक्तेः । अत एवानुव्याख्याने –

अतो विरुद्धवद्भातमपि व्याख्याय तत्त्वतः ।
योजनीयं हरौ वाक्यं विरुद्धैर्लक्षणैर्युतम् ॥

इत्यणुत्वादिकमप्युक्तम् । भाष्येऽपि "अस्थूलोऽनणुरमध्यमो मध्यमो व्यापकोऽव्यापकः" इति श्रुतौ मध्यमादिपदेन तत्सूचनाच्च ।

नचात्राविरुद्धत्वेनोक्तस्यैवाणुत्वादेस्तत्र हेतूकरणं, नतु तत्र व्युत्पाद्यतया । अत एव चशब्दने तस्योपादानमिति युक्तं,

"इहाणुत्वमहत्त्वयोर्भावयोर्विरोधपरिहारः" इत्याद्यक्षराधिकरणचन्द्रिकाविरोधात्। एवञ्चाग्रे हेतूकरणेन ब्रह्मलिङ्गतया निर्णीतस्याल्पौकस्त्वस्य न समन्वयेतायोग्यत्वं, नापि तेन पूर्वपक्षोदयः । पूर्वपक्षे वा अश्रुतत्वादेर्गौणत्ववर्णनं चायुक्तमिति चेत् ।

ಆಕ್ಷೇಪ - ಈ ಅಧಿಕರಣದಲ್ಲಿ 'ಅಣುತ್ವ' ಹಾಗೂ 'ಮಹತ್ವ'ಗಳಿಗೆ ವಿರೋಧವನ್ನು ಹೇಳುತ್ತಿದ್ದಾರೆ. ಆದರೆ ಅಕ್ಷರಾಧಿಕರಣದಲ್ಲಿ ಬರುವ 'ಅನ್ಯಭಾವವ್ಯಾವೃತ್ತೇಃ' ಎಂಬ ಸೂತ್ರದಲ್ಲೂ ಇದನ್ನೇ ಹೇಳಿರುವುದರಿಂದ ಅಕ್ಷರಾಧಿಕರಣದಿಂದ ಈ ಅಧಿಕರಣಕ್ಕೆ ಗತಾರ್ಥತ್ವ ದೋಷವು ಬರುತ್ತದೆ.

ಅಣುತ್ವ ಅಲ್ಪೌಕಸ್ತ್ವ ಮಹತ್ವವೆಂದರೆ ಸರ್ವಗತತ್ವವೆಂದರ್ಥ. ಅಲ್ಪೌಕಸ್ತ್ವವನ್ನೇ ಸರ್ವಗತತ್ವವೆಂದು ಹೇಗೆ ಹೇಳುತ್ತೀರಿ ? ಎಂದರೆ ಶ್ರೀಮದಾಚಾರ್ಯರೇ ವೈಶೇಷಿಕಾಧಿಕರಣದಲ್ಲಿ ಹೀಗೆ ಹೇಳಿದ್ದಾರೆ -

ಮಹತೋಽಲ್ಪತ್ವಮಪಿ ಹಿ ವ್ಯೋಮವತ್ ಪ್ರಾಹ ವೇದವಿತ್ ।
ಯದ್ಯಲ್ಪದೇಶಸಂಸ್ಥಾನಂ ನ ಸರ್ವತ್ರಾಪಿ ಸೋ಼ ಭವೇತ್ ॥

ಮಹತ್ವ ಇರುವ ಸ್ಥಳದಲ್ಲಿಯೇ ಅಣುತ್ವ ಇರುತ್ತದೆನ್ನಲು ಆಕಾಶ ದೃಷ್ಟಾಂತವನ್ನು ನೀಡಿದ್ದಾರೆ. 'ವ್ಯೋಮವತ್' ಎಂಬ ಸೂತ್ರವನ್ನೇ ಮನಸ್ಸಿನಲ್ಲಿಟ್ಟುಕೊಂಡು ಇಲ್ಲಿ ಹೇಳುತ್ತಿರುವ ಅಲ್ಪೌಕೌಕಸ್ತ್ವ ಅಂದರೆ ಅಣುತ್ವವನ್ನೇ ವಿಷ್ಣುವಿನಲ್ಲಿ ಉಪಪಾದಿಸಿದ್ದಾರೆ. ಇದರಿಂದ ಅಲ್ಪೌಕಸ್ತ್ವವೇ ಅಣುತ್ವವೆಂದು ನಿರ್ಣಯವಾಗುತ್ತದೆ.

ಅಲ್ಲಿ ಕೇವಲ ಪ್ರಾಕೃತಸ್ಥೌಲ್ಯವಿಲ್ಲವೆಂದಷ್ಟೇ ಹೇಳಿದ್ದಾರೆ ಹೊರತು ಅಣುತ್ವವನ್ನಾಗಲೀ ಮಹತ್ವವನ್ನಾಗಲೀ ವಿಧಿಸಿರುವುದಿಲ್ಲ. ಏಕೆಂದರೆ "ಅಸ್ಥೂಲಾಽನಣುರೂಪೋಽಸಾವೈಶ್ವರ್ಯಾತ್ಪುರುಷೋತ್ತಮಃ" ಎಂಬ ಭಾಷ್ಯದ ಮಾತು ಮತ್ತು "ಅನ್ಯವಸ್ತುಸ್ವಭಾವಾನಾಂ ಸ್ಥೌಲ್ಯಾದೀನಾಮಪಾಕೃತಿಮ್ । ನಾರಾಯಣೇ ಶ್ರುತಿರ್ವಕ್ತಿ......॥" ಎಂಬ ಅನುವ್ಯಾಖ್ಯಾನದ ಮಾತು ಈ ವಿಷಯದಲ್ಲಿ ಆಧಾರವಾಗಿದೆ.

ಹೀಗೆ ಹೇಳಬಾರದು - ಏಕೆಂದರೆ 'ಅನ್ಯಭಾವ' ಎಂಬ ಸೂತ್ರದಲ್ಲಿ ಸೌಲ್ಭ್ಯಾದಿಗಳಿಲ್ಲವೆಂದು ಹೇಳಿದ್ದರೂ, ಸೂತ್ರದಲ್ಲಿರುವ 'ಚ' ಶಬ್ದದಿಂದ ಸೌಲ್ಭ್ಯಾದಿಗಳಿಗೆ ವಿರುದ್ಧವಾದ ಅಣುತ್ವಾದಿಗಳನ್ನು ಸಮುಚ್ಚಯ ಮಾಡಿದ್ದಾರೆ. ಇದರಿಂದ ಅಣುತ್ವಾದಿಗಳನ್ನೂ ಸಹ ವಿಧಿಸಿದಂತಾಗುತ್ತದೆ. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ

ಅತೋ ವಿರುದ್ಧವದ್ಭಾತಮಪಿ ವ್ಯಾಖ್ಯಾಯ ತತ್ತ್ವತಃ।
ಯೋಜನೀಯಂ ಹರೌ ವಾಕ್ಯಂ ವಿರುದ್ಧೈರ್ಲಕ್ಷಣೈರ್ಯುತಮ್ ॥

ಎಂಬುದಾಗಿ ಅಣುತ್ವಾದಿಗಳನ್ನು ಹೇಳಿದ್ದಾರೆ. 'ಭಾಷ್ಯದಲ್ಲಿ "ಅಸ್ಥೂಲೋಽನಣುರಮಧ್ಯಮೋ ಮಧ್ಯಮೋ ವ್ಯಾಪಕೋಽವ್ಯಾಪಕಃ" ಎಂಬ ಶ್ರುತಿಯಲ್ಲಿ 'ಮಧ್ಯಮ' ಮೊದಲಾದ ಪದಗಳಿಂದ ಅಣುತ್ವಾದಿಗಳನ್ನು ಸೂಚಿಸಿದ್ದಾರೆ.

ಈ ಅಧಿಕರಣದಲ್ಲಿ ಅಣುತ್ವ ಮತ್ತು ಮಹತ್ತ್ವಗಳಿಗೆ ವಿರೋಧವಿಲ್ಲವೆಂದು ಉಪಪಾದಿಸಿ ಮುಂದಿರುವ ಅಕ್ಷರಾಧಿಕರಣದಲ್ಲಿ ಇದನ್ನು ಹೇತುವನ್ನಾಗಿ ಮಾಡಲಾಗಿದೆ, ಹೊರತು ಅಲ್ಲಿ ಈ ಅಣುತ್ವ ಮಹತ್ತ್ವಗಳನ್ನು ಉಪಪಾದಿಸುತ್ತಿಲ್ಲ. ಆದ್ದರಿಂದಲೇ 'ಚ' ಶಬ್ದದಿಂದ ಅಣುತ್ವ ಮಹತ್ವವನ್ನು ವ್ಯಾಖ್ಯಾನಿಸಿದ್ದಾರಲ್ಲವೇ?

ಇದು ಅಯುಕ್ತ. ಏಕೆಂದರೆ 'ಇಹಾಣುತ್ವಮಹತ್ತ್ವಯೋರ್ಭಾವಯೋರ್ವಿರೋಧಪರಿಹಾರಃ" ಎಂಬ ಅಕ್ಷರಾಧಿಕರಣದ ಚಂದ್ರಿಕಾಗ್ರಂಥದ ಅಕ್ಷರಾಧಿಕರಣದಲ್ಲಿಯೇ ಅಣುತ್ವ ಮಹತ್ತ್ವಗಳ ವಿರೋಧಗಳನ್ನು ಪರಿಹರಿಸಲಾಗಿದೆ ಎಂದಿದ್ದಾರೆ. ಇದರ ವಿರೋಧವು ಬರುತ್ತದೆ. ಆದ್ದರಿಂದ ಮುಂದೆ ಯಾವುದನ್ನು ಹೇತುವನ್ನಾಗಿ ಮಾಡುತ್ತಾರೋ ಆವಾಗ ಅದು ಬ್ರಹ್ಮಲಿಂಗವೆಂದು ನಿರ್ಣಯವಾಗಿರಬೇಕು. ಅಂತಹ ಅಲೌಕಸ್ತ್ವವನ್ನು ಇಲ್ಲಿ ಸಮನ್ವಯ ಮಾಡಲು ಯೋಗ್ಯವಲ್ಲ. ಮತ್ತು ಇಂತಹ ಅಲೌಕಸ್ತ್ವದಿಂದ ದೃಢವಾದ ಪೂರ್ವಪಕ್ಷವನ್ನು ಹೇಗೆ ಮಾಡುತ್ತೀರಿ ? ಇಂತಹ ಅಲೌಕಸ್ತ್ವದಿಂದ ಅಶ್ರುತತ್ವಾದಿಗಳನ್ನು ಗೌಣವೆಂದು ಹೇಗೆ ವರ್ಣಿಸುತ್ತೀರಿ?

**प्रकाशः** – मैवं, अल्पौकस्त्वसर्वगतत्वयोरणुत्वमहत्त्वाविनाभूततयाऽन्यत्वात् । तथा च तयोरेवात्राविरोध उच्यते, न त्वणुत्महत्वयोः । अत एव सुधायां वैशेषिकनये "अल्पाल्पतरदेशावस्थानेऽल्पाल्पतरपरिमाणमवर्जनीयम्" इत्युक्तं, नतु तदेवैतदिति।

नन्वनयोरविरोधोक्तौ तदाक्षेप्ययोरणुत्वमहत्त्वयोरपि स सिद्ध इति न तयोः पुनर्विरोधशङ्कोदेतीति चेन्न, अत्रैतद्वाराऽविरोधेऽपि साक्षादविरोधानुक्तेः ।

तयार्विरोधे प्राकृतत्वं तन्त्रं, ब्रह्म तु प्राकृतपदार्थव्यावृत्तमिति समाध्युक्तचर्थत्वेन पुनर्विरोध शङ्कोत्थानोपपत्तेरित्याद्यभिप्रेत्योक्तं – **इत्याद्युक्तमिति** ।

ಇದು ತಪ್ಪು. ಅಲೌಕಸ್ತ್ವ ಹಾಗೂ ಅಣುತ್ವ, ಸರ್ವಗತತ್ವ ಹಾಗೂ ಮಹತ್ತ್ವಗಳು ಒಂದೇ ಆಗಿದ್ದರೆ ನಿಮ್ಮ ಆಕ್ಷೇಪವು ಸಮಂಜಸವಾಗುತ್ತಿತ್ತು. ಆದರೆ ಅಲೌಕಸ್ತ್ವ ಹಾಗೂ ಸರ್ವಗತತ್ವಗಳು ಅಣುತ್ವ ಹಾಗೂ

ಮಹತ್ತ್ವಗಳ ಜೊತೆ ಇರುತ್ತವೆ. ಯಾವ ಪದಾರ್ಥವು ಜೊತೆಯಲ್ಲಿರುತ್ತವೋ ಅದು ಆ ಪದಾರ್ಥಕ್ಕಿಂತ ಭಿನ್ನವಾಗಿರಬೇಕು. ಆದ್ದರಿಂದ ಅಲೌಕಿಕತ್ವ ಹಾಗೂ ಸರ್ವಗತತ್ವಗಳ ವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸಲಾಗಿದೆ. ಅಣುತ್ವ ಹಾಗೂ ಮಹತ್ತ್ವಗಳ ವಿರೋಧವನ್ನು ಅಕ್ಷರಾಧಿಕರಣದಲ್ಲೇ ಮಾಡಲಾಗಿದೆ. ಆದ್ದರಿಂದಲೇ ಸುಧೆಯ ವೈಶೇಷಿಧಿಕರಣದಲ್ಲಿ "ಅಲ್ಪಾಲ್ಪತರದೇಶಾವಸ್ಥಾನೇಽಲ್ಪಾಲ್ಪತರಪರಿಮಾಣಮ-ವರ್ಜನೀಯಂ'' ಎಂದು ಹೇಳಿದ್ದಾರೆ ಹೊರತು ಎರಡಕ್ಕೂ ಐಕ್ಯವನ್ನು ಹೇಳಿರುವುದಿಲ್ಲ.

ಹೀಗೆ ಇವೆರಡು ಅಲೌಕಿಕತ್ವ, ಸರ್ವಗತತ್ವ ಧರ್ಮಗಳಿಗೆ ಅವಿರೋಧವನ್ನು ಹೇಳುವುದಾದರೆ ಇದರಿಂದ ಆಕ್ಷೇಪ್ಯವಾಗುವ ಅಣುತ್ವ ಮಹತ್ತ್ವಗಳಿಗೂ ಸಹ ವಿರೋಧವನ್ನು ಪರಿಹರಿಸಿದಂತಾಗುತ್ತದೆ. ಪುನಃ ಅಕ್ಷರಾಧಿಕರಣದಲ್ಲಿ ಅಣುತ್ವ ಮಹತ್ತ್ವಗಳ ವಿರೋಧವನ್ನು ಏಕೆ ಪರಿಹರಿಸಬೇಕು ? ಎಂದು ಪ್ರಶ್ನಿಸಬಾರದು. ಪರಂಪರೆಯ ವಿರೋಧವನ್ನು ಪರಿಹರಿಸಿದರೂ ನೇರವಾಗಿ ವಿರೋಧವನ್ನು ಪರಿಹರಿಸದಂತಾಗದ ಕಾರಣ ಅಕ್ಷರಾಧಿಕರಣದ ವಿರೋಧಪರಿಹಾರವು ತಪ್ಪಾಗುವುದಿಲ್ಲ.

ಅಣುತ್ವ ಹಾಗೂ ಮಹತ್ತ್ವಗಳಿಗೆ ವಿರೋಧ ಬರುವುದಕ್ಕೆ ಪ್ರಾಕೃತತ್ವವೇ ಕಾರಣವಾಗಿದೆ. ಆದರೆ ಬ್ರಹ್ಮನು ಪ್ರಾಕೃತಪದಾರ್ಥಗಳಿಂದ ವ್ಯಾವೃತ್ತನಾಗಿದ್ದಾನೆ. ಈ ಬಗೆಯ ಇನ್ನೊಂದು ಸಮಾಧಾನವನ್ನು ಹೇಳುವುದಕ್ಕಾಗಿ ಅಕ್ಷರಾಧಿಕರಣದಲ್ಲಿ ಅಣುತ್ವ ಹಾಗೂ ಮಹತ್ತ್ವಗಳಿಗೆ ವಿರೋಧವನ್ನು ಆಶಂಕಿಸಿ ಸಮಾಧಾನವನ್ನು ಹೇಳಿದ್ದಾರೆ. ಆದ್ದರಿಂದ ಅಕ್ಷರಾಧಿಕರಣದಿಂದ ಸರ್ವಗತತ್ವಾಧಿಕರಣದ ವಿರೋಧ ಪರಿಹಾರಕ್ಕೆ ಗತಾರ್ಥತ್ವ ಶಂಕೆಯು ಬರುವುದಿಲ್ಲ. ಹೀಗೆಯೇ ಇನ್ನು ಅನೇಕ ಯುಕ್ತಿಗಳಿಂದ ವಿರೋಧಪರಿಹಾರದ ಮಾರ್ಗವನ್ನು ಶಿಷ್ಯಂದಿರು ಸ್ವತಃ ಊಹಿಸಿಕೊಳ್ಳಬೇಕು.

**गुरुराजीयम् – एवमादित्यश्रुतेः प्रसिद्धादित्यपरत्वं साधकैरुपपाद्य तत्र बाधकं परिहरति – ब्रह्मशब्दस्य चेत्यादि ॥**




ಆದಿತ್ಯನೇ ಸರ್ವಗತನೆನ್ನಲು ಅನೇಕ ಸಾಧಕಯುಕ್ತಿಗಳನ್ನು ಪೂರ್ವಪಕ್ಷಕಾರರು ಮಂಡಿಸಿ ಈಗ ಬಾಧಕವನ್ನು ಪರಿಹರಿಸಿಕೊಳ್ಳುತ್ತಿದ್ದಾರೆ. ಯಾವ ಶ್ರುತಿಭಾಗದಲ್ಲಿ ಸರ್ವಗತತ್ವವು ಕೇಳಿಸುತ್ತಿದೆಯೋ ಅಲ್ಲಿ ಬ್ರಹ್ಮಶಬ್ದವೇ ಮೊದಲಾದ ವಿಷ್ಣುಲಿಂಗಗಳೂ ಸಹ ಇವೆ. ಇದರ ಬಲದಿಂದ ವಿಷ್ಣುವೇ ಸರ್ವಗತನಾಗುತ್ತಾನೆಂಬುದು ಪೂರ್ವಪಕ್ಷಕಾರರಿಗಿರುವ ದೊಡ್ಡ ಸವಾಲು ? ಅರ್ಭಕೌಕಸ್ತ್ವ ಎಂಬ ಧರ್ಮವೂ ಸಹ ಅದೇ ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ಸೂರ್ಯನೇ ಸರ್ವಗತನಾಗಬೇಕು. ಅರ್ಭಕೌಕಸ್ತ್ವ ಎಂಬ ಪ್ರಬಲವಾದ ಒಂದೇ ಯುಕ್ತಿಯಿಂದ ಬ್ರಹ್ಮನ ಲಿಂಗಗಳೆಲ್ಲವನ್ನೂ ಬಾಧಿಸಬೇಕು. ಅರ್ಭಕೌಕಸ್ತ್ವ ಲಿಂಗವನ್ನು ವಿಷ್ಣುವಿನಲ್ಲಿ ಹೇಳಲು ಸಾಧ್ಯವೂ ಇಲ್ಲ. ಆದ್ದರಿಂದ ಸೂರ್ಯ ಅಥವಾ ಸಕಲ ಜೀವರು ಸರ್ವಗತರಾಗುತ್ತಾರೆಂಬ ಪೂರ್ವಪಕ್ಷವು ಉದಯವಾಗುತ್ತದೆ.

## ವಿಷ್ಣುವೇ ಸರ್ವಗತನೆಂದು ಸಿದ್ಧಾಂತ

**तात्पर्यचन्द्रिका**

**सिद्धान्तस्तु –**

**''संवत्सरो वै प्रजापतिः'' ''तत्र सवंत्सरं नाम ब्रह्माणम्'' इत्यादिश्रुतिस्मृतिषु उत्तराधिकरणभाष्ये वक्ष्यमाणरीत्या संवत्सरशब्दस्य चतुर्मुखे प्रसिद्धत्वात्, श्रौतप्रसिद्धेश्च बलवत्त्वात् पूर्ववाक्ये च ''महापुरुष इति यमवोचाम संवत्सर एव'' इति संवत्सरे महापुरुषपदप्रयोगाच्च संवत्सरशब्दस्य चतुर्मुखपरत्वात्, तस्मादुत्तमत्वरूपस्य च तत्सारत्वस्य विष्णावेव सम्भवात्,**

ಅನುವಾದ – ಸಂವತ್ಸರ ಸಾರತ್ವವು ಆದಿತ್ಯಲಿಂಗವಲ್ಲ ಹೊರತು ವಿಷ್ಣುಲಿಂಗವೇ ಆಗಿದೆ. ಏಕೆಂದರೆ ಸಂವತ್ಸರ ಶಬ್ದವು ಒಂದು ವರ್ಷವೆಂಬ ಕಾಲವಾಚಕವೇ ಅಲ್ಲ, ಹೊರತಾಗಿ ಚತುರ್ಮುಖ-ವಾಚಕವಾಗಿದೆ -

''ಸಂವತ್ಸರೋ ವೈ ಪ್ರಜಾಪತಿಃ'' ''ತತ್ರ ಸಂವತ್ಸರಂ ನಾಮ ಬ್ರಹ್ಮಾಣಮ್'' ಇದೇ ಶ್ರುತಿಗಳಲ್ಲಿ ಹಾಗೂ ಸ್ಮೃತಿಗಳಲ್ಲಿ ಚತುರ್ಮುಖನನ್ನೇ ಸಂವತ್ಸರನೆಂದು ಕರೆಯಲಾಗಿದೆ. ಮತ್ತು ಮುಂದಿನ ಅಧಿಕರಣದ ಭಾಷ್ಯದಲ್ಲಿಯೂ ಹೇಳುವಂತೆ ಚತುರ್ಮುಖನಲ್ಲಿಯೇ ಸಂವತ್ಸರ ಶಬ್ದವು ಪ್ರಸಿದ್ಧವಾಗಿದೆ. ಲೌಕಿಕಪ್ರಸಿದ್ಧಿಯು ಕಾಲದಲ್ಲಿರಬಹುದು ಶ್ರುತಿಪ್ರಸಿದ್ಧಿಯು ಲೌಕಿಕ ಪ್ರಸಿದ್ಧಿಗಿಂತ ಬಲಿಷ್ಠವಾದ್ದರಿಂದ ಚತುರ್ಮುಖನೇ ಸಂವತ್ಸರನೆಂದು ತಿಳಿಯಬೇಕು.

ಮತ್ತು ಐತರೇಯೋಪನಿಷತ್ತಿನ ಹಿಂದಿನ ವಾಕ್ಯದಲ್ಲಿಯೇ 'ಮಹಾಪುರುಷ ಇತಿ ಯಮವೋಚಾಮ ಸಂವತ್ಸರ ಏವ'' ಎಂಬುದಾಗಿ ಸಂವತ್ಸರದಲ್ಲಿ 'ಮಹಾಪುರುಷ' ಎಂಬ ಪದವನ್ನು ಪ್ರಯೋಗಿಸಲಾಗಿದೆ. ಕಾಲವಾಚಕವೆಂದು ಹೇಳಿದರೆ ಕಾಲವನ್ನು ಮಹಾಪುರುಷವೆಂದು ಹೇಗೆ ಹೇಳಲು ಸಾಧ್ಯ ? ಆದ್ದರಿಂದ ಸಂವತ್ಸರ ಶಬ್ದವು ಚತುರ್ಮುಖಪರವೆಂದೇ ಹೇಳಬೇಕು.

ಆದ್ದರಿಂದ ''ಸಂವತ್ಸರಸಾರ'' ಎಂಬ ಪದಕ್ಕೆ ಸಂವತ್ಸರನೆನೆಸಿದ ಚತುರ್ಮುಖಬ್ರಹ್ಮನಿಗಿಂತ ವಿಷ್ಣು ಶ್ರೇಷ್ಠವಾಗಿದ್ದಾನೆಂದು ಅರ್ಥ. ಸಾರ ಎಂಬ ಪದಕ್ಕೆ ಉತ್ತಮ ಎಂಬರ್ಥವು ಪ್ರಸಿದ್ಧವೇ ಆಗಿದೆ. ಚತುರ್ಮುಖಬ್ರಹ್ಮನಿಗಿಂತ ಉತ್ತಮತ್ವವು ವಿಷ್ಣುನಲ್ಲಿ ಬರುತ್ತದೆ ಹೊರತು ಆದಿತ್ಯನಲ್ಲಿ ಬರುವುದಿಲ್ಲ.

**प्रकाशः –**

अत्र पृथिव्यादिसर्वगतस्य विष्णुत्वे ब्रह्मशब्दोऽश्रुतत्वादिलिङ्गं च हेतूकृतम् । तच्चादित्यादिप्रापकवशादमुख्यार्थमिति न विष्णुप्रापकमिति यदुक्तं पूर्वपक्षिणा, तत्राऽऽदित्यप्रापकत्वेनोक्तानां भगवत्येव युक्तत्वेन आदित्यप्रापकत्वायोगात् तद्बाधाभावेन ब्रह्मशब्दादेरमुख्यार्थत्वायोगान्मुख्यब्रह्मशब्दादिना सर्वगतो विष्णुरेवेति भावेन सिद्धान्तयति – **सिद्धान्तस्त्विति** ।

तत्र यदुक्तं संवत्सरसारत्वादिलिङ्गैः श्रुतेः प्रसिद्धादित्यपरत्वमिति, तत्राऽऽद्यं लिङ्गं तावन्नेत्याह – **संवत्सर इति विष्णावेव सम्भवादित्यन्तेन** । अत्र पञ्चम्यन्तप्रधानहेतूनां 'बाधकभावेन' इति वक्ष्यमाणसाध्येनान्वयः । संवत्सरशब्दस्य विरिञ्चिपरत्वे श्रौतस्मार्तप्रसिद्धिं महापुरुषपदप्रयोगं च साधकद्वयमाह – **संवत्सरो वा इत्यादिना** ।

ವಿವರಣೆ - ಪೃಥಿವಿಯೇ ಮೊದಲಾದ ಸಕಲಪದಾರ್ಥಗಳಲ್ಲಿ ವಿಷ್ಣು ವ್ಯಾಪ್ತನಾಗಿದ್ದಾನೆಂದು ತಿಳಿಸಲು ಬ್ರಹ್ಮಶಬ್ದ ಹಾಗೂ ಅಶ್ರುತತ್ವ ಮೊದಲಾದ ಲಿಂಗಗಳೇ ಸಿದ್ಧಾಂತದಲ್ಲಿ ಹೇತುಗಳಾಗಿವೆ. ಆದರೆ ಇಂತಹ ಸಿದ್ಧಾಂತಪ್ರಾಪಕಹೇತುವನ್ನು ಆದಿತ್ಯಪ್ರಾಪಕಹೇತುವಿನಿಂದ ಪೂರ್ವಪಕ್ಷಿಯು ಗೌಣಾರ್ಥ ಮಾಡಿದ್ದಾನೆ. ಅಮುಖ್ಯಾರ್ಥ ಮಾಡಿದಾಗ ಬ್ರಹ್ಮಶಬ್ದಾದಿ ಸಿದ್ಧಾಂತ ಹೇತುಗಳು ವಿಷ್ಣುಪ್ರಾಪಕಗಳೇ ಆಗುವುದಿಲ್ಲ. ಈ ಕಾರಣಕ್ಕಾಗಿ ಹಿಂದೆ ಪೂರ್ವಪಕ್ಷಿಯು ನಿರೂಪಿಸಿದ ಆದಿತ್ಯಪ್ರಾಪಕಲಿಂಗಗಳೆಲ್ಲವನ್ನು ಭಗವಂತನಲ್ಲಿಯೇ ಸಮರ್ಥಿಸಬೇಕು. ಆದಿತ್ಯನಲ್ಲಿ ಹೇಳಲ್ಪಟ್ಟ ಲಿಂಗಗಳೆಲ್ಲವು ಆದಿತ್ಯನಲ್ಲಿಲ್ಲದೆ ವಿಷ್ಣುವಿನಲ್ಲಿಯೇ ಇರುವುದರಿಂದ ಇಂತಹ ಲಿಂಗಗಳಿಂದ ಬ್ರಹ್ಮಶಬ್ದವೇ ಮೊದಲಾದ ಸಿದ್ಧಾಂತಲಿಂಗಗಳನ್ನು ಬಾಧಿಸಲು ಸಾಧ್ಯವಿಲ್ಲ. ಆದ್ದರಿಂದಲೇ ಆದಿತ್ಯನಲ್ಲಿ ಗೌಣಾರ್ಥವನ್ನಾಗಿ ಸ್ವೀಕರಿಸಲು ಸಾಧ್ಯವಿಲ್ಲ. ಆದ್ದರಿಂದ ಸೂತ್ರಕಾರರು ಹೇಳಿದ ಬ್ರಹ್ಮಶಬ್ದವೇ ಮೊದಲಾದ ಲಿಂಗಗಳು ನಿರವಕಾಶವಾಗಿ ಬಲಿಷ್ಠವಾಗಿವೆ. ಈ ಲಿಂಗಗಳಿಂದ ವಿಷ್ಣುವೇ ಸರ್ವಗತನೆಂದು ಸಿದ್ಧಾಂತ ಮಾಡಬಹುದೆಂಬ ಅಭಿಪ್ರಾಯದಿಂದ 'ಸಿದ್ಧಾಂತಸ್ತು' ಇತ್ಯಾದಿ ವಾಕ್ಯಗಳು ಹೊರಟಿವೆ. ಆದ್ದರಿಂದ ಪ್ರಕೃತ ಗ್ರಂಥಕಾರರು ಸೂತ್ರದಲ್ಲಿ ನಿರೂಪಿಸಿದ ಸಿದ್ಧಾಂತಲಿಂಗಗಳನ್ನು ಸಮರ್ಥನೆ ಮಾಡದೆ ಆದಿತ್ಯಪ್ರಾಪಕಲಿಂಗಗಳನ್ನು ವಿಷ್ಣುವಿನಲ್ಲಿ ಸಮರ್ಥಿಸುವುದು ಸೂತ್ರಕ್ಕೆ ಅನನುಗುಣವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ಅವಕಾಶವಿಲ್ಲ.

ಪೂರ್ವಪಕ್ಷ ಮಾಡುವ ಸಂದರ್ಭದಲ್ಲಿ ಪ್ರಬಲವಾದ ಮೂರು ಪೂರ್ವಪಕ್ಷ ಲಿಂಗಗಳನ್ನು ಸಮರ್ಥಿಸಿದ್ದರು. ಅವುಗಳಲ್ಲಿ ಸಂವತ್ಸರಸಾರತ್ವವೆಂಬ ಮೊದಲನೆಯ ಲಿಂಗವು ಆದಿತ್ಯಪ್ರಾಪಕವಲ್ಲವೆಂಬುದಾಗಿ 'ಸಂವತ್ಸರ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದಾರೆ. ''ವಿಷ್ಣಾವೇವ ಸಂಭವಾತ್'' ಎಂಬ ವಾಕ್ಯದ ತನಕ ಈ ವಿಚಾರವು ನಿರೂಪಿತವಾಗಿದೆ.

ಪರಿಪೂರ್ಣಚಂದ್ರಿಕಾ

ಗ್ರಂಥಕಾರರು ಪಂಚಮ್ಯಂತವಾದ ಪ್ರಧಾನ ಹೇತುಗಳನ್ನು ಅನೇಕ ಹೇಳಿದ್ದಾರೆ. ಇವುಗಳಿಗೆಲ್ಲ ಮುಂದೆ ಬರುವ 'ಬಾಧಕಭಾವೇನ' ಎಂಬಲ್ಲಿ ಅನ್ವಯ ಮಾಡಬೇಕು. 'ಸಂವತ್ಸರ' ಶಬ್ದವು ಚತುರ್ಮುಖಪರವಾಗಿದೆ ಎಂಬ ವಿಷಯದಲ್ಲಿ ಶ್ರುತಿಪ್ರಸಿದ್ಧಿ ಹಾಗೂ ಸ್ಮೃತಿಪ್ರಸಿದ್ಧಿಯನ್ನು ತೋರಿಸುತ್ತಾ 'ಮಹಾಪುರುಷ' ಎಂಬ ಪದಪ್ರಯೋಗವನ್ನೂ ಸಹ ತೋರಿಸುತ್ತಾ ಎರಡು ಸಾಧಕಗಳನ್ನು 'ಸಂವತ್ಸರೋ ವಾ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – आदिपदेन ''प्रजापतिः प्रजाः सृष्ट्वा व्यस्रंसत संवत्सरो ब्रह्मा विश्वः कतमः स्वयम्भूः प्रजापतिस्संवत्सरः'' इत्यादिश्रुतिः,

ततस्संवत्सरो नाम ब्रह्मा समभवत्प्रभोः ।

इत्यादिस्मृतिश्च गृह्यते ।

ननु ब्रह्मणि श्रौतप्रसिद्धिरिव, कालविशेषे लोकप्रसिद्धिरप्यस्तीति चेन्न, ''शास्त्रस्था वा तन्निमित्तत्वात्'' इति यववराहाधिकरणन्यायने श्रौतप्रसिद्धेरेवान्तरङ्गत्वेनाविप्लुतत्वेन च शास्त्रे ग्राह्यत्वेनाज्ञप्रसिद्धितो बलवत्त्वादित्याह – **श्रौतेति** ।

ಗ್ರಂಥದಲ್ಲಿರುವ ಆದಿಪದದಿಂದ "ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ ವ್ಯಸ್ರಂಸತ ಸಂವತ್ಸರೋ ಬ್ರಹ್ಮಾ ವಿಶ್ವಃ ಕತಮಃ ಸ್ವಯಂಭೂಃ, ಪ್ರಜಾಪತಿಸ್ಸಂವತ್ಸರಃ" ಇತ್ಯಾದಿ ಶ್ರುತಿಯನ್ನು ಮತ್ತು "ಶತಸ್ಸವಂತ್ಸರೋ ನಾಮ" ಇತ್ಯಾದಿ ಸ್ಮೃತಿಯನ್ನೂ ಸಹ ಸ್ವೀಕರಿಸಬೇಕು.

ಚತುರ್ಮುಖಬ್ರಹ್ಮನಲ್ಲಿ ಸಂವತ್ಸರಶಬ್ದಕ್ಕೆ ಶ್ರುತಿಪ್ರಸಿದ್ಧಿಯಿರುವಂತೆ ಕಾಲವಿಶೇಷದಲ್ಲಿ ಲೋಕಪ್ರಸಿದ್ಧಿಯಿದೆ ಅಲ್ಲವೇ? ಎಂಬ ಶಂಕೆಗೆ ಅವಕಾಶವಿಲ್ಲ. ಏಕೆಂದರೆ "ಶಾಸ್ತ್ರಸ್ಥಾ ವಾ ತನ್ನಿಮಿತ್ತತ್ವಾತ್" ಎಂಬ ಯವವರಾಹಾಧಿಕರಣದ ನ್ಯಾಯದಂತೆ ಲೋಕಪ್ರಸಿದ್ಧಿಗಿಂತ ಶ್ರೌತಪ್ರಸಿದ್ಧಿಯೇ ಅಂತರಂಗವಾಗಿದೆ. ಮತ್ತು ಅವಿಪ್ಲುತವಾಗಿರುತ್ತದೆ. ಅಂದರೆ ಲೌಕಿಕಪ್ರಸಿದ್ಧಿಯು ಕೆಲವೊಮ್ಮೆ ತಪ್ಪಾಗಬಹುದು, ಆದರೆ ಶ್ರೌತಪ್ರಸಿದ್ಧಿಯು ಎಂದೂ ತಪ್ಪಾಗುವುದಿಲ್ಲ. ನಿಯಮೇನ ಯಥಾರ್ಥವೇ ಆಗಿರುತ್ತದೆ. ಆದ್ದರಿಂದ ಅಜ್ಞಪ್ರಸಿದ್ಧಿಗಿಂತ ಶ್ರೌತಪ್ರಸಿದ್ಧಿಯು ಬಲಿಷ್ಠವಾದ್ದರಿಂದ 'ಶ್ರೌತ' ಇತ್ಯಾದಿ ವಾಕ್ಯವು ಹೊರಟಿವೆ.

**प्रकाशः** – कालपरत्वे महापुरुषपदायोगात्,

संवत्सराभिमानी तु ब्रह्मैव हि महापुमान् ।।

इति स्मृतिसिद्धत्वात् । **तस्मादिति** । ''ब्रह्मा देवानां प्रथमस्सम्बभूव'' इत्यादिना सर्वदेवोत्तमत्वेनोक्तचतुर्मखसारत्वं विष्णावेवेत्यर्थः ।

'ಸಂವತ್ಸರ' ಶಬ್ದವು ಕಾಲಪರವಾದರೆ ಐತರೇಯದಲ್ಲೇ ಹೇಳಿರುವ ಮಹಾಪುರುಷವೆಂಬ ಪದವು ತಪ್ಪಾಗುತ್ತದೆ. ಏಕೆಂದರೆ

ಸಂವತ್ಸರಾಭಿಮಾನೀ ತು ಬ್ರಹ್ಮೈವ ಹಿ ಮಹಾಪುಮಾನ್ ॥

ಎಂಬ ಶ್ರುತಿಯಂತೆ 'ಮಹಾಪುರುಷ' ಪದವು ಚತುರ್ಮುಖನಲ್ಲಿಯೇ ಪ್ರಸಿದ್ಧವಾಗಿದೆ.

'ತಸ್ಮಾತ್' ಎಂದು ಗ್ರಂಥದಲ್ಲಿದೆ. ಇಂತಹ ಚತುರ್ಮುಖನಿಗಿಂತ ಉತ್ತಮತ್ವವು ಪರಮಾತ್ಮನಲ್ಲಿಯೇ ಬರುತ್ತದೆಂದು ಅಭಿಪ್ರಾಯ. ಏಕೆಂದರೆ

''ಬ್ರಹ್ಮಾ ದೇವಾನಾಂ ಪ್ರಥಮಸ್ಸಂಬಭೂವ''

ಇತ್ಯಾದಿಯಾಗಿ ಸಕಲದೇವತೆಗಳಿಗಿಂತ ಉತ್ತಮನೆಂದು ಹೇಳಲ್ಪಟ್ಟ ಚತುರ್ಮುಖನಿಗಿಂತ ಉತ್ತಮತ್ವವು ವಿಷ್ಣುವಿನಲ್ಲಿಯೇ ಬರುತ್ತದೆ.

**गुरुराजीयम्** – अभ्यधिकाशङ्काविघटनक्रममालम्ब्य सौत्रक्रमोल्लङ्घनेन सिद्धान्तमाह – **सिद्धान्तस्त्विति** ।। आदित्यश्रुतेः प्रसिद्धादित्यपरत्वं उपोद्धलकत्वेनोक्तसंवत्सराधिपतित्वरूपं लिङ्गं ब्रह्मणि सावकाशयति – **संवत्सर इति** ।।




ಸಿದ್ಧಾಂತವು ಪ್ರಾರಂಭವಾಗುತ್ತಿದೆ. ಸೂತ್ರಕಾರರು ಹೇಳಿದ ಸಿದ್ಧಾಂತಲಿಂಗಗಳನ್ನು ಸಮರ್ಥಿಸುವುದಕ್ಕಿಂತ ಮೊದಲು ಪೂರ್ವಪಕ್ಷಪ್ರಾಪಕಲಿಂಗಗಳನ್ನು ವಿಷ್ಣುವಿನಲ್ಲಿ ಸಮರ್ಥಿಸುತ್ತಾರೆ.

ಪೂರ್ವಪಕ್ಷ ಮಾಡುವಾಗ ಆದಿತ್ಯನೇ ಸರ್ವಗತನೆನ್ನಲು ಸಂವತ್ಸರಸಾರತ್ವ, ಆದಿತ್ಯನಲ್ಲಿ ಪ್ರಸಿದ್ಧವಾದ ಯಚ್ಛಬ್ದೋಪಬಂಧ ಹಾಗೂ ಸರ್ವಪುರುಷಾಭಿಮುಖ್ಯ ಎಂಬುದಾಗಿ ಮೂರು ಹೇತುಗಳನ್ನು ಹೇಳಿದ್ದರು. ಇವುಗಳಲ್ಲಿ ಸಂವತ್ಸರಸಾರತ್ವವು ಆದಿತ್ಯನಲ್ಲಿ ಬರುವುದಿಲ್ಲ ಹೊರತಾಗಿ ವಿಷ್ಣುವಿನಲ್ಲಿಯೇ ಬರುತ್ತದೆಂದು ಇಲ್ಲಿ ಸಮರ್ಥಿಸುತ್ತಿದ್ದಾರೆ.

೩೬೦ ದಿವಸಗಳೆಂಬ ಒಂದು ವರ್ಷವು ಸಂವತ್ಸರಶಬ್ದದ ಅರ್ಥವಲ್ಲ, ಹೊರತಾಗಿ ಚತುರ್ಮುಖಬ್ರಹ್ಮನೆಂದು ಅರ್ಥ. 'ಸಂವತ್ಸರನಾಮ ಬ್ರಹ್ಮಾಣಂ'' ಇತ್ಯಾದಿಯಾಗಿ ಸ್ಮೃತಿಶ್ರುತಿಗಳೆಲ್ಲವು ಚತುರ್ಮುಖಬ್ರಹ್ಮನನ್ನೇ ಸಂವತ್ಸರ ಎನ್ನುತ್ತಿವೆ. ಐತರೇಯೋಪನಿಷತ್ತಿನಲ್ಲಿಯೂ ಸಹ ಮಹಾಪುರುಷ ಎಂಬುದಾಗಿ ಚತುರ್ಮುಖನನ್ನೇ ಸಂವತ್ಸರನೆಂದು ಹೇಳಿರುವುದು ಕಾಣಿಸುತ್ತಿದೆ. ಆದ್ದರಿಂದ ಸಂವತ್ಸರ ಸಾರನೆಂದರೆ ಸಂವತ್ಸರ ಎನಿಸಿದ ಚತುರ್ಮುಖನಿಗಿಂತ ಪರಮಾತ್ಮನು ಉತ್ತಮನಾಗಿದ್ದಾನೆಂದು ತಿಳಿಯಬೇಕು.



## ಉಳಿದೆರಡು ಪೂರ್ವಪಕ್ಷ ಯುಕ್ತಿಗಳು ಬ್ರಹ್ಮನಲ್ಲೇ ಇವೆ

**तात्पर्यचन्द्रिका**

**यच्छब्दोपबन्धस्य "स यश्चायं पुरुषे यश्चासावादित्ये" इत्यादाविव श्रुत्यादिप्रसिद्धे ब्रह्मण्यपि सम्भवात्,**

**"आदित्यो ज्योतिरादित्यः" इत्यादौ च ब्रह्मण्यप्यादित्यशब्दस्य प्रसिद्धेः,**

**"पुरुषं पुरुषं प्रत्यादित्यो भवति" इत्यनेन च 'प्रतिगृहं कूपः' इत्यनेनेव सर्वपुरुषगतत्वस्यैवोक्तत्वेन तदाभिमुख्योक्त्यभावात्, भावे वा आदित्यमण्डलस्यैव पुरुषाभिमुख्यदर्शनात् अदर्शनेऽपि देवतायास्तदङ्गीकारे च ईश्वरेऽपि तत्सम्भवात् ।**

ಅನುವಾದ - 'ಯಚ್ಛಬ್ದ' ಪ್ರಯೋಗವೂ ಸಹ ಶ್ರುತ್ಯಾದಿ ಪ್ರಸಿದ್ಧನಾದ ಬ್ರಹ್ಮನಲ್ಲಿಯೇ ಕೂಡುತ್ತದೆ. ಶ್ರೌತಪ್ರಯೋಗವನ್ನನುಸರಿಸಿ ಯಚ್ಛಬ್ದಪ್ರಯೋಗವನ್ನು ಕೂಡಿಸುವುದು 'ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ' ಎಂಬಲ್ಲಿ ಕಂಡಿದೆ. (ಪುರುಷೇ = ಅಧಮೇ ಜೀವನಲ್ಲಿ, ಆದಿತ್ಯೇ = ಉತ್ತಮಜೀವನಲ್ಲಿ ಯಾವ ಭಗವದ್ರೂಪವಿದೆಯೋ ಆ ರೂಪಗಳಲ್ಲಿ ತಾರತಮ್ಯವಿಲ್ಲ.) ಈ ಶ್ರುತಿಯಲ್ಲಿರುವ 'ತತ್' ಮತ್ತು 'ಯತ್' ಪದಗಳಿಂದ ಬ್ರಹ್ಮನನ್ನೇ ಸ್ವೀಕರಿಸಲಾಗಿದೆ. ವಸ್ತುತಃ ಪರಮಾತ್ಮನು ಅಪ್ರಸಿದ್ಧನಾಗಿದ್ದರೂ ಶ್ರುತ್ಯಾದಿಪ್ರಸಿದ್ಧನಾದ್ದರಿಂದ ಇಲ್ಲಿ 'ಯತ್' ಶಬ್ದದಿಂದ ಪರಮಾತ್ಮನನ್ನೇ ಸ್ವೀಕರಿಸಲಾಗಿದೆ. ಅದರಂತೆ ಪ್ರಕೃತದಲ್ಲಿಯೂ ಶ್ರುತಿಪ್ರಸಿದ್ಧನಾದ ಬ್ರಹ್ಮನನ್ನೇ 'ಯತ್' ಶಬ್ದದಿಂದ ವಿವಕ್ಷಿಸಬಹುದು.

ಆದಿತ್ಯಶಬ್ದವಂತೂ ವಿಷ್ಣುವಿನಲ್ಲಿಯೇ ಪ್ರಸಿದ್ಧವಾಗಿದೆ. 'ಆದಿತ್ಯೋ ಜ್ಯೋತಿರಾದಿತ್ಯಃ ಸ ವಿಷ್ಣುರ್ಗತಿಸತ್ತಮಃ' ಎಂಬ ವಿಷ್ಣುಸಹಸ್ರನಾಮದ ಆಧಾರದಿಂದ ಇದು ಸ್ಪಷ್ಟವಾಗುತ್ತದೆ.

ಪ್ರತಿಪುರುಷಾಭಿಮುಖ್ಯವೆಂಬ ಮೂರನೆಯ ಲಿಂಗವೂ ಸಹ ವಿಷ್ಣುವಿನಲ್ಲಿಯೇ ಬರುತ್ತದೆ. ಅದು ಹೀಗೆ - 'ಪುರುಷಂ ಪುರುಷಂ ಪ್ರತ್ಯಾದಿತ್ಯೋ ಭವತಿ'' ಎಂಬ ವಾಕ್ಯದಿಂದ ಸಕಲ ಪುರುಷರ ಆಭಿಮುಖ್ಯ ಹೇಳಲ್ಪಟ್ಟಿಲ್ಲ, ಹೊರತಾಗಿ ''ಪ್ರತಿಗೃಹಂ ಕೂಪಃ'' ಎಂಬ ಮಾತಿನಿಂದ ಸಕಲ ಪುರುಷರ ಮನೆಯಲ್ಲಿ ಕೂಪವಿದೆಯೆಂದು ಹೇಳಿದಂತೆ ಸಕಲಪುರುಷರಲ್ಲಿ ಭಗವಂತನು ಇದ್ದಾನೆಂದಷ್ಟೇ ಅರ್ಥ.

ಒಂದು ವೇಳೆ ಆಭಿಮುಖ್ಯವೆಂಬರ್ಥವನ್ನೇ ಹೇಳುವುದಾದರೆ ಆದಿತ್ಯಮಂಡಲಕ್ಕಷ್ಟೇ ಸಕಲಪುರುಷರ ಆಭಿಮುಖ್ಯವನ್ನು ಹೇಳಬೇಕು. ಸೂರ್ಯಮಂಡಲದಲ್ಲಿರುವ ಸೂರ್ಯನು ಕಾಣಿಸದಿದ್ದರೂ ಆಭಿಮುಖ್ಯವನ್ನು ಸೂರ್ಯನಿಗೇ ಹೇಳುವುದಾದರೆ ಈಶ್ವರನಿಗೂ ಸಹ ಅಂತಹ

ಆಭಿಮುಖ್ಯವನ್ನು ಹೇಳಬಹುದು. ಏಕೆಂದರೆ ಸೂರ್ಯಮಂಡಲದಲ್ಲಿ ಸೂರ್ಯನು ಹೇಗೆ ಇದ್ದಾನೋ ಅದರಂತೆ ನಾರಾಯಣನೂ ಸಹ ಇರುತ್ತಾನೆ.

**ಕಠಿಣಪದಾರ್ಥ**

ಯಚ್ಛಬ್ದೋಪಬಂಧಸ್ಯ = ಯತ್ ಶಬ್ದಾರ್ಥ ಗ್ರಹಣವೆಂಬ ಲಿಂಗಕ್ಕೆ, ಪ್ರಸಿದ್ಧೇಃ = ವಿಷ್ಣುಸಹಸ್ರನಾಮದಲ್ಲಿ ಪ್ರಸಿದ್ಧವಾಗಿದೆ. ಪ್ರತಿಗೃಹಂ = ಗೃಹೇ ಗೃಹೇ ಇತಿ ಪ್ರತಿಗೃಹಂ ಎಂದು ವಿಗ್ರಹ. ಪ್ರತಿಯೊಂದು ಮನೆಗಳಲ್ಲಿ ಎಂದರ್ಥ. ಭಾವೇವಾ = ಆಭಿಮುಖ್ಯವೆಂಬರ್ಥವನ್ನು ಒಪ್ಪಿದರೂ ಸಹ. ತದಂಗೀಕಾರೇ = ಸೂರ್ಯನಿಗೆ ಆಭಿಮುಖ್ಯವನ್ನು ಅಂಗೀಕರಿಸಿದರೆ.

**प्रकाशः – यच्छब्दोपबन्धरूपलिङ्गं चान्यथयति – यच्छब्देति ।** 'पुरुषे' जीवे । 'आदित्ये' देवातायां च । तत्र लोकप्रसिद्धस्य कस्यचिदभावेऽपि श्रुत्यादिसिद्धस्य हरेरेव ग्रहणं, तद्वदित्यर्थः ।

**ವಿವರಣೆ** - 'ಯಚ್ಛಬ್ದೋಪಬಂಧ' ಎಂಬ ಎರಡನೇ ಪೂರ್ವಪಕ್ಷವನ್ನು ವಿಷ್ಣುವಿನಲ್ಲಿ ಸಮರ್ಥಿಸುವುದಕ್ಕಾಗಿ 'ಯಚ್ಛಬ್ದ' ಇತ್ಯಾದಿ ವಾಕ್ಯವು ಹೊರಟಿದೆ. 'ಪುರುಷೇ'' ಎಂದರೆ ಜೀವನಲ್ಲಿ ಎಂದರ್ಥ. 'ಆದಿತ್ಯೇ'' ಎಂದರೆ ದೇವತೆಯಲ್ಲಿ ಎಂದರ್ಥ. 'ಸ ಯಚ್ಚಾಯಂ' ಎಂಬ ಶ್ರುತಿಯಲ್ಲಿ ಲೋಕಪ್ರಸಿದ್ಧನಾದ ಯಾರೊಬ್ಬನನ್ನೂ ವಿವಕ್ಷಿಸದೆ ಶ್ರುತ್ಯಾದಿಪ್ರಸಿದ್ಧನಾದ ಶ್ರೀಹರಿಯನ್ನೇ ಹೇಗೆ ವಿವಕ್ಷಿಸಿದ್ದಾರೋ ಅದರಂತೆ ಎಂದು ತಿಳಿಯಬೇಕು.

**प्रकाशः – ननु** तत्र ''य आत्मनि तिष्ठन्, य आदित्ये तिष्ठन्'' इत्यादौ पुरुषादित्यान्तस्स्थः प्रसिद्धः । प्रकृते कथमादित्यत्वेन हरिः प्रसिद्धः ? इत्यत आह **– आदित्य इति ।**

आदित्यो ज्योतिरादित्यः स विष्णुर्गतिसत्तमः ।

इति सहस्रनामसु विष्णौ प्रयोगादित्यर्थः ।

'ಯಚ್ಛಬ್ದ' ಪ್ರಯೋಗವನ್ನು ವಿಷ್ಣುವಿನಲ್ಲಿ ಹೇಳಲಾಗದು. ಏಕೆಂದರೆ ''ಯ ಆತ್ಮನಿ ತಿಷ್ಠನ್, ಯ ಆದಿತ್ಯೇ ತಿಷ್ಠನ್'' ಎಂಬಲ್ಲಿ ಪುರುಷ ಹಾಗೂ ಆದಿತ್ಯರಲ್ಲಿ ಅಂತಸ್ಥನಾಗಿ ಶ್ರೀಹರಿಯು ಪ್ರಸಿದ್ಧನಾದ್ದರಿಂದ 'ಸ ಯಶ್ಚಾಯಂ' ಎಂಬ ಶ್ರುತಿಯಲ್ಲಿ ವಿಷ್ಣುವನ್ನೇ ವಿವಕ್ಷಿಸಬಹುದು. ಆದರೆ ಪ್ರಕೃತ 'ಯಶ್ಚಾಸಾವಾದಿತ್ಯೇ' ಎಂಬಲ್ಲಿ ಶ್ರೀಹರಿಯು ಆದಿತ್ಯನೆಂದು ಪ್ರಸಿದ್ಧನಾಗಿಲ್ಲ. ಆದ್ದರಿಂದ 'ಸಯಚ್ಚಾಯಂ' ಎಂಬ ದೃಷ್ಟಾಂತ ವಾಕ್ಯದಲ್ಲಿ 'ಯತ್' ಶಬ್ದದಿಂದ ಶ್ರೀಹರಿಯನ್ನು ವಿವಕ್ಷಿಸಬಹುದು. ಆದರೆ 'ಯಶ್ಚಾಸಾವಾದಿತ್ಯೇ' ಎಂಬ ದಾರ್ಷ್ಟಾಂತಿಕದಲ್ಲಿ ಶ್ರೀಹರಿಯನ್ನು ವಿವಕ್ಷಿಸಲು ಸಾಧ್ಯವಿಲ್ಲವಲ್ಲವೇ? ಈ ಪ್ರಶ್ನೆಗೆ 'ಆದಿತ್ಯಃ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಆದಿತ್ಯೋ ಜ್ಯೋತಿರಾದಿತ್ಯಃ ಸ ವಿಷ್ಣುರ್ಗತಿಸತ್ತಮಃ' ಎಂಬುದಾಗಿ

ವಿಷ್ಣುಸಹಸ್ರನಾಮದಲ್ಲಿ ಆದಿತ್ಯಶಬ್ದವನ್ನು ವಿಷ್ಣುವಿನಲ್ಲಿ ಪ್ರಯೋಗಿಸಿದ್ದಾರೆ. ಈ ಸ್ಮೃತಿಯ ಆಧಾರದಿಂದ 'ಯಶ್ಚಾಸಾವಾದಿತ್ಯೇ' ಎಂಬಲ್ಲಿ 'ಯತ್' ಶಬ್ದದಿಂದ ವಿಷ್ಣುವನ್ನೇ ವಿವಕ್ಷಿಸಬೇಕು.

**प्रकाशः** – नन्वनादौ वेदे कथं सादिपौरुषेयग्रन्थप्रसिद्ध्युपबन्ध इति चेत्, स्मृतिमूलश्रुतिप्रसिद्धौ तात्पर्यात् । स्मृतेस्सादित्वेऽपि तदर्थस्यानादित्वाच्च । उक्तञ्च विष्णुतत्त्वनिर्णये –

पुराणानि तदर्थानि सर्गे सर्गेन्यथैव तु ।
क्रियन्तेऽतस्त्वनित्यानि तदर्था पूर्वसर्गवत् ॥

इति ।

ಪ್ರಶ್ನೆ - ಅಪೌರುಷೇಯವಾದ ವೇದದಲ್ಲಿರುವ 'ಯತ್' ಶಬ್ದದ ಅರ್ಥವನ್ನು ಪೌರುಷೇಯವಾದ ವಿಷ್ಣುಸಹಸ್ರನಾಮದ ಪ್ರಸಿದ್ಧಿಯಿಂದ ಹೇಗೆ ನಿರ್ಣಯಿಸುತ್ತೀರಿ ?

ಉತ್ತರ - ಪ್ರತಿಯೊಂದು ಸ್ಮೃತಿಗಳೂ ಸಹ ಶ್ರುತಿಮೂಲವಾಗಿರುತ್ತವೆ. ಪ್ರಕೃತ ವಿಷ್ಣುಸಹಸ್ರನಾಮವೂ ಸಹ ಯಾವುದೋ ಒಂದು ಶ್ರುತಿಮೂಲವಾಗಿರುತ್ತದೆ. ಮೂಲಭೂತವಾದ ಆ ಶ್ರುತಿಯಲ್ಲಿ ಆದಿತ್ಯನೆಂದು ವಿಷ್ಣುವು ಪ್ರಸಿದ್ಧನಾಗಿರುತ್ತಾನೆ. ಈ ವಿವಕ್ಷೆಯಿಂದ ವಿಷ್ಣುಸಹಸ್ರನಾಮವನ್ನು ಆಧರಿಸಲಾಗಿದೆ.

ಅಥವಾ ಸ್ಮೃತಿಯು ಸಾದಿಯಾಗಿದ್ದರೂ ಪ್ರತಿಯೊಂದು ಸ್ಮೃತಿಗಳ ಅರ್ಥವು ಅನಾದಿಯೇ ಆಗಿರುತ್ತದೆ. ಇದನ್ನೇ ವಿಷ್ಣುತತ್ತ್ವ ನಿರ್ಣಯದಲ್ಲಿ ಹೀಗೆ ಹೇಳಿದ್ದಾರೆ -

ಪುರಾಣಾನಿ ತದರ್ಥಾನಿ ಸರ್ಗೇ ಸರ್ಗೇಽನ್ಯಥೈವ ತು ।
ಕ್ರಿಯಂತೇಽತಸ್ತ್ವನಿತ್ಯಾನಿ ತದರ್ಥಾಃ ಪೂರ್ವಸರ್ಗವತ್ ॥

ಎಂಬುದಾಗಿ ಪ್ರತಿಯೊಂದು ಕಲ್ಪಗಳಲ್ಲಿಯೂ ಪುರಾಣಗಳ ಆನುಪೂರ್ವಿಯನ್ನು ಭಗವಂತನು ವ್ಯತ್ಯಾಸ ಮಾಡುತ್ತಾನೆ. ಆದರೆ ಅರ್ಥವು ಮಾತ್ರ ಒಂದೇ ಆಗಿರುತ್ತದೆ ಎಂದು ಹೇಳಿದ್ದಾರೆ. ಆದ್ದರಿಂದ ಪುರಾಣಗಳ ಅರ್ಥವು ಅನಾದಿಯಾದ್ದರಿಂದ ವಿಷ್ಣುಸಹಸ್ರನಾಮದ ಪ್ರಸಿದ್ಧಿಯನ್ನು ವಿವಕ್ಷಿಸಬಹುದು.

**प्रकाशः** – यदप्युक्तं सर्वपुरुषाभिमुख्यं सूर्यलिङ्गमिति, तन्नेत्याह – **पुरुषं पुरुषमिति** । सर्वपुरुषगतत्वं च

अन्तर्बहिश्च तत्सर्वं व्याप्य नारायणस्स्थितः ।

इत्यादिश्रुत्या "अल्पौकस्त्वस्य च" इत्यादिना वक्ष्यमाणरीत्या च युज्यत इति भावः ।

ಸರ್ವಗತತ್ವಾಧಿಕರಣ (೧-೨-೧)

ಸರ್ವಪುರುಷಾಭಿಮುಖ್ಯವೆಂಬ ಮೂರನೆಯ ಸೂರ್ಯಲಿಂಗವನ್ನು ವಿಷ್ಣುವಿನಲ್ಲಿ ಸಮರ್ಥಿಸುತ್ತಿದ್ದಾರೆ. 'ಪುರುಷಂ ಪುರುಷಂ' ಇತ್ಯಾದಿಯಾಗಿ. ಶ್ರೀಹರಿಯು ಸಕಲಪುರುಷಗತನಾಗಿದ್ದಾನೆಂದು 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃಸ್ಥಿತಃ' ಎಂಬ ಶ್ರುತಿಯಿಂದ ಮತ್ತು ಮುಂದೆ ಹೇಳುವ ''ಅಲೌಕಸ್ತ್ವಸ್ಯ ಚ'' ಎಂಬುದರಿಂದ ಯುಕ್ತವಾಗುತ್ತದೆಂದು ತಿಳಿಯಬೇಕು.

**प्रकाशः –**

प्रतिपूरुषमेतस्मात् स्थितो वै विष्णुनामकः ।
आदित्यादिषु च स्थित्वा द्योतकोऽसौ प्रतिप्रति ।

इति तद्भाष्यं हृदि कृत्वाऽऽह – **भावे वेति** ।

आभिमुख्योक्तिभावेऽपि तस्य त्वमन्मतेऽप्यादित्यदेवताया अतीन्द्रियत्वेन तत्रादर्शनात्, मण्डलस्याऽऽभिमुख्यदर्शनात् तद्द्वारा तत्रस्थदेवतायामङ्गीकारे तन्निष्ठभगवतोऽपि तद्द्वारा स्यादेवेत्यर्थः ।

एवं लिङ्गानामपाकरणेन तन्मूलकश्रुतिप्रसिद्धिरप्यपाकृतेति न तत्र यतितव्यमिति भाव ।

ಸರ್ವಪುರುಷಾಭಿಮುಖ್ಯವನ್ನು ಹೇಳಿಯೇ ಇಲ್ಲವೆಂದು ಶಂಕಿಸಬಾರದು. ಏಕೆಂದರೆ ಶ್ರೀಮದಾಚಾರ್ಯರೇ ಐತರೇಯ ಭಾಷ್ಯದಲ್ಲಿ ಎರಡು ಬಗೆಯಲ್ಲಿ ಸರ್ವಪುರುಷಾಭಿಮುಖ್ಯವನ್ನು ವಿಷ್ಣುವಿನಲ್ಲಿ ಸಮರ್ಥಿಸಿದ್ದಾರೆ -

ಪ್ರತಿಪೂರುಷಮೇತಸ್ಮಾತ್ ಸ್ಥಿತೋ ವೈ ವಿಷ್ಣುನಾಮಕಃ।
ಆದಿತ್ಯಾದಿಷು ಚ ಸ್ಥಿತ್ವಾ ದ್ಯೋತಕೋಽಸೌ ಪ್ರತಿಪ್ರತಿ।

ಪ್ರತಿಯೊಬ್ಬ ಪುರುಷನಲ್ಲಿಯೂ ನಿಂತಿರುವ ವಿಷ್ಣುವೇ ನಿಯಾಮಕನಾಗಿದ್ದಾನೆ. ಆದಿತ್ಯಾದಿಗಳಲ್ಲಿ ನಿಂತು ಪ್ರತಿಯೊಂದಕ್ಕೆ ದ್ಯೋತಕನಾಗಿದ್ದಾನೆ ಎಂಬ ಈ ಶ್ಲೋಕದಲ್ಲಿ ಪೂರ್ವಾರ್ಧದಿಂದ ಸಕಲಪುರುಷಗತತ್ವವನ್ನು ಹೇಳಿದ್ದಾರೆ. ಉತ್ತರಾರ್ಧದಲ್ಲಿ ಆದಿತ್ಯಾದಿಗಳಲ್ಲಿ ಅಭಿಮುಖನಾಗಿ ನಿಂತು ದ್ಯೋತಕನಾಗಿದ್ದಾನೆಂದು ಹೇಳಿದ್ದಾರೆ. ಆದ್ದರಿಂದ ಆಭಿಮುಖ್ಯವನ್ನು ಹೇಳಲಾಗದೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ ''ಭಾವೇ ವಾ'' ಎಂಬುದರಿಂದ ಉತ್ತರಿಸುತ್ತಿದ್ದಾರೆ.

ಆಭಿಮುಖ್ಯವನ್ನು ಹೇಳಿದರೂ ಸಹ ಪೂರ್ವಪಕ್ಷಕಾರರಿಗೆ ಆದಿತ್ಯದೇವತೆಯು ಅತೀಂದ್ರಿಯನಾಗಿದ್ದರಿಂದ ಆದಿತ್ಯನಲ್ಲಿ ನೇರವಾಗಿ ಆಭಿಮುಖ್ಯವನ್ನು ಹೇಳಲಾಗದು. ಹೊರತಾಗಿ ಸೂರ್ಯಮಂಡಲವು ಅಭಿಮುಖವಾಗಿದೆಯೆಂದು ಹೇಳಿ ಅದರ ಮೂಲಕ ಒಳಗಿರುವ ಸೂರ್ಯದೇವತೆಯು ಅಭಿಮುಖನಾಗಿದ್ದಾನೆಂದು ಒಪ್ಪಬೇಕು. ಹಾಗಾದರೆ ಆ ಸೂರ್ಯಮಂಡಲದಲ್ಲಿರುವ ಸೂರ್ಯನಾರಾಯಣನೂ ಸಹ ಸೂರ್ಯಮಂಡಲದ ಮೂಲಕವಾಗಿ ಅಭಿಮುಖನಾಗುತ್ತಾನೆ.

ಹೀಗೆ ಪೂರ್ವಪಕ್ಷಕಾರರು ನಿರೂಪಿಸಿದ ಮೂರು ವಿಧಗಳನ್ನು ನಿರಾಕರಿಸಿದ್ದರಿಂದ ಈ ಲಿಂಗ ಮೂಲಕವಾದ ಆದಿತ್ಯಶ್ರುತಿಪ್ರಸಿದ್ಧಿಯನ್ನೂ ಸಹ ಸುಲಭವಾಗಿ ನಿರಾಕರಿಸಿದಂತಾಯಿತು. ಆದ್ದರಿಂದ ಆದಿತ್ಯಶ್ರುತಿಯ ನಿರಾಕರಣೆಗೆ ಪ್ರತ್ಯೇಕವಾಗಿ ಪ್ರಯತ್ನಿಸಬೇಕಾಗಿಲ್ಲ.

**प्रकाशः** – नन्वस्त्वेवमाद्यकल्पे श्रुतेर्लिङ्गैरेवोज्जीवनोक्तेषामन्यथासिद्धौ श्रुतेरप्यन्तनर्यन्यायेनान्यथासिद्धिः । उत्तरकल्पद्वये तु कथं, स्वत एव तत्र श्रुतेः निरवकाशतोक्तेरिति चेन्न, इत्थं, वक्ष्यमाणदिश ब्रह्मश्रुत्यादेर्मुख्यतया विष्णु-साधकत्वेनान्तरधिकरणन्यायविषयतयाऽऽदित्यश्रुतेर्विष्णुपरत्वं वा तत्र मुख्यत्वं वा सेत्स्यतीति ।

ಪ್ರಶ್ನೆ - ಮೂರು ಬಗೆಯ ಪೂರ್ವಪಕ್ಷಲಿಂಗಗಳಲ್ಲಿ ಮೊದಲನೆಯ ಕಲ್ಪದಲ್ಲಿ ಶ್ರುತಿಯು ಲಿಂಗಗಳಿಂದ ಉಪೋದ್ಬಲಿತವಾದ್ದರಿಂದ ಲಿಂಗಗಳು ವಿಷ್ಣುವಿನಲ್ಲಿ ಅನ್ಯಥಾಸಿದ್ಧವಾದಾಗ ಶ್ರುತಿಗಳೂ ಸಹ ಅಂತರಧಿಕರಣದ ನ್ಯಾಯದಂತೆ ಅನ್ಯಥಾಸಿದ್ಧವಾಗುತ್ತದೆ. ಆದರೆ ಉಳಿದೆರಡು ಕಲ್ಪಗಳಲ್ಲಿ ಶ್ರುತಿಗಳು ಲಿಂಗಗಳಿಂದ ಉಪೋದ್ಬಲಿತವಾಗಿರುವುದಿಲ್ಲ. ಸ್ವತಃ ನಿರವಕಾಶವಾಗಿವೆ. ಹೀಗಿರುವಾಗ ಲಿಂಗಗಳ ನಿರಾಕರಣೆಯಿಂದಲೇ ಆದಿತ್ಯಶ್ರುತಿಗಳ ನಿರಾಕರಣೆಯೂ ಸುಲಭವಾಯಿತೆಂದು ಹೇಳಿದ್ದು ಹೇಗೆ ಸರಿ?

ಉತ್ತರ - ಅಂತರಧಿಕರಣದಲ್ಲಿ ನಿರವಕಾಶವಾದ ವಿಷ್ಣುಲಿಂಗಗಳಿದ್ದರೆ, ದೇವತಾವಾಚಕ ಪದಗಳೆಲ್ಲವೂ ವಿಷ್ಣುವಿನಲ್ಲಿ ಸಮನ್ವಯವಾಗುತ್ತವೆಂದು ಹೇಳಿದ್ದಾರೆ. ಮುಂದೆ ಬ್ರಹ್ಮಶಬ್ದ ಮೊದಲಾದವುಗಳು ಪರಮಾತ್ಮನಲ್ಲಿ ಮುಖ್ಯವೆಂದು ಸಮರ್ಥಿಸುತ್ತೇವೆ. ಆದ್ದರಿಂದ ಎರಡು ಹಾಗೂ ಮೂರನೆಯ ಪಕ್ಷಗಳಲ್ಲಿಯೂ ಬ್ರಹ್ಮಶಬ್ದ ಮೊದಲಾದವು ನಿರವಕಾಶವಿಷ್ಣುಲಿಂಗಗಳೆಂದು ಹೇಳಬಹುದಾದ್ದರಿಂದ ಆದಿತ್ಯಶ್ರುತಿಯನ್ನು ವಿಷ್ಣುಪರವೆನ್ನಬಹುದು. ಅಥವಾ ಆದಿತ್ಯಶ್ರುತಿಯು ವಿಷ್ಣುವಿನಲ್ಲಿ ಮುಖ್ಯವೆನ್ನಬಹುದು.

**प्रकाशः** – ननु चैवं ब्रह्मश्रुत्यादेरत्र मुख्यत्वे तद्बलादादित्यश्रुतिर्विष्णुपरा, सिद्धे च तस्याः विष्णुपरत्वे बाधकाभावेन ब्रह्मशब्दादेर्मुख्यत्वमित्यन्योन्याश्रयः । न चार्भकौकस्त्वमेव बाधकं, न श्रुतिरित्यस्ति विशेषः, श्रुतेरप्यस्मिन् पक्षे निरवकाशत्वोक्तेरिति चेन्न, "आदित्यो ज्योतिरादित्यः" इत्यादिप्रयोगादादित्यशब्दस्य विष्णाववकाशेन सावकाशत्वस्य ब्रह्मशब्दमुख्यत्वानधीनत्वात् । एतेन तदावृत्तिर्बाधिकेत्यपि निरस्तम् । **सावकाशत्वादेवेति** ।

यद्वा – ब्रह्मश्रुत्यादेवरुपसंहारस्थत्वेन बलवत्तयाऽऽदित्यश्रुतेर्विष्णुपरत्वम् । वक्ष्यति चैतत् "उपक्रमस्थादित्यश्रुतेः" इत्यादि ।

ಪ್ರಶ್ನೆ - ಹೀಗೆ ಹೇಳಿದರೆ ಅನ್ಯೋನ್ಯಾಶ್ರಯ ಬರುತ್ತದೆ. ಏಕೆಂದರೆ ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಮುಖ್ಯವೆಂದು ನಿರ್ಣಯವಾದ ಮೇಲೆ ಅಂತರಧಿಕರಣ ನ್ಯಾಯಕ್ಕೆ ವಿಷಯವಾಗುವುದರಿಂದ ಬ್ರಹ್ಮಶಬ್ದದ ಬಲದಿಂದ ಆದಿತ್ಯಶ್ರುತಿಯು ವಿಷ್ಣುಪರವೆಂದು ನಿರ್ಣಯವಾಗುತ್ತದೆ. ಆದಿತ್ಯ ಶ್ರುತಿಯು ವಿಷ್ಣುಪರವೆಂದು ನಿರ್ಣಯವಾದ ಮೇಲೆ ಬಾಧಕವಿಲ್ಲದ ಕಾರಣ ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗಿದೆಯೆಂದು ನಿರ್ಣಯವಾಗುತ್ತದೆ. ಹೀಗೆ ಬ್ರಹ್ಮಶಬ್ದದ ಮುಖ್ಯತ್ವವು ಆದಿತ್ಯಶ್ರುತಿಯ ವಿಷ್ಣುಪರತ್ವವು ಒಂದನ್ನೊಂದು ಆಶ್ರಯಿಸಿರುವುದರಿಂದ ಅನ್ಯೋನ್ಯಾಶ್ರಯ ಬರುತ್ತದಲ್ಲವೆ?

ಉತ್ತರ - ಇದು ತಪ್ಪು. ಏಕೆಂದರೆ ಆದಿತ್ಯಶ್ರುತಿಯು ಬಾಧಕವೇ ಆಗಿಲ್ಲ, ಹೊರತಾಗಿ ಅರ್ಭಕೌಕಸ್ತ್ವವು ಬಾಧಕವೇ ಆಗಿದೆ. ಆದ್ದರಿಂದ ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಮುಖ್ಯವೆಂದು ನಿರ್ಣಯಿಸಲು ಬಾಧಕಾಭಾವವು ಕಾರಣವಾಗಿಲ್ಲ.

ಪ್ರಶ್ನೆ - ಅರ್ಭಕೌಕಸ್ತ್ವವೇ ಬಾಧಕವಾಗಿದೆ. ಅಥವಾ ಶ್ರುತಿಯಿಲ್ಲವೆಂದು ಏಕೆ ನಿರ್ಣಯಿಸುತ್ತೀರಿ? ಆದಿತ್ಯಶ್ರುತಿಯನ್ನು ನಿರವಕಾಶವೆಂದು ಈ ಹಿಂದೆಯೇ ಹೇಳಿದ್ದಾರಲ್ಲವೇ? ಆದ್ದರಿಂದ ಆದಿತ್ಯಶ್ರುತಿಯು ಎಲ್ಲಿಯತನಕ ಸಾವಕಾಶವಾಗುವುದಿಲ್ಲವೋ ಅಲ್ಲಿಯ ತನಕ ಬ್ರಹ್ಮಶಬ್ದವನ್ನು ವಿಷ್ಣುವಿನಲ್ಲಿ ಮುಖ್ಯವಾಗಿ ಹೇಳಲಾಗದಲ್ಲವೇ?

ಉತ್ತರ - ಇದು ತಪ್ಪು. 'ಆದಿತ್ಯೋ ಜ್ಯೋತಿರಾದಿತ್ಯಃ' ಎಂಬ ಶ್ರುತಿಪ್ರಸಿದ್ಧಿಯಿಂದಷ್ಟೇ ಆದಿತ್ಯ ಶಬ್ದವು ವಿಷ್ಣುವಿನಲ್ಲಿ ಸಾವಕಾಶವೆನ್ನುತ್ತೇವೆ ಹೊರತು, ಸಾವಕಾಶತ್ವವು ಬ್ರಹ್ಮಶಬ್ದದ ಮುಖ್ಯತ್ವಕ್ಕೆ ಅಧೀನವಾಗಿರುವುದಿಲ್ಲ. ಆದ್ದರಿಂದ ಬ್ರಹ್ಮಶಬ್ದವು ಮುಖ್ಯವಾದರೆ ಮಾತ್ರ ಆದಿತ್ಯಶಬ್ದವು ಸಾವಕಾಶವಾಗುತ್ತೆಂಬುದನ್ನು ನಾವು ಒಪ್ಪಿರುವುದಿಲ್ಲ. ಹೀಗೆ ಹೇಳಿದ್ದರಿಂದ ''ತದಾವೃತ್ತಿಃ ಬಾಧಿಕಾ'' ಎಂಬುದನ್ನು ನಿರಾಕರಿಸಿದಂತಾಯಿತು. ಏಕೆಂದರೆ ಆದಿತ್ಯಶ್ರುತಿಯು ಸಾವಕಾಶವಾಗಿರುವುದರಿಂದ.

ಅಥವಾ ಬ್ರಹ್ಮಶ್ರುತಿ ಮೊದಲಾದವು ಉಪಸಂಹಾರದಲ್ಲಿರುವುದರಿಂದ ಬಲಿಷ್ಠವಾಗಿವೆ. ಇದನ್ನು ವಿವಕ್ಷಿಸಿ ಆದಿತ್ಯಶ್ರುತಿಯು ವಿಷ್ಣುಪರವೆನ್ನಬಹುದು. ಇದನ್ನು ''ಉಪಕ್ರಮಸ್ಥಾದಿತ್ಯಶ್ರುತಿಃ'' ಎಂಬುದಾಗಿ ಮುಂದೆ ಹೇಳುತ್ತಾರೆ.

**गुरुराजीयम् –** यच्छब्दोपबन्धोप्यादित्यश्रुतेर्न प्रसिद्धादित्यपरत्वसम्पादनायां क्षम इत्याह – **यच्छब्देति** ।। तृतीयं लिङ्गं सावकाशयति – **पुरुषं पुरुषमिति** ।। प्रतिशब्द एवाभिमुख्यवाचक इति भावेनाह – **भावेवेति** ।। नन्वादित्यमण्डलस्य पुरुषाभिमुखत्वात्तच्छरीरकस्यादित्यस्य पुरुषाभिमुख्यमुपपन्नमित्यतः तर्ह्यादित्य-शरीरकस्य ब्रह्मण एव पुरुषाभिमुख्यं सम्भवतीति न ब्रह्मपक्षे तस्य बाधकतेत्याह **– अदर्शनेऽपीति** ।।

ಪರಿಪೂರ್ಣಚಂದ್ರಿಕಾ




'ಯಚ್ಛಬ್ದೋಪಬಂಧ' 'ಸರ್ವಪುರುಷಾಭಿಮುಖ್ಯ' ಎಂಬೆರಡು ಪೂರ್ವಪಕ್ಷಯುಕ್ತಿಗಳೂ ಸಹ ವಿಷ್ಣುವಿನಲ್ಲಿಯೇ ಬರುತ್ತವೆ. ಶ್ರುತಿಪ್ರಸಿದ್ಧವಾದ ವಿಷ್ಣುವನ್ನು 'ಯಶ್ಚಾಸಾವಾದಿತ್ಯೇ' ಎಂಬಲ್ಲಿರುವ 'ಯತ್' ಶಬ್ದದಿಂದ ಗ್ರಹಣ ಮಾಡಬಹುದು. ಆದಿತ್ಯಶಬ್ದವೂ ಸಹ 'ಆದಿತ್ಯೋ ಜ್ಯೋತಿರಾದಿತ್ಯಃ' ಎಂಬ ವಿಷ್ಣುಸಹಸ್ರನಾಮ ಹೇಳುವಂತೆ ವಿಷ್ಣುವಿನಲ್ಲಿಯೇ ಪ್ರಸಿದ್ಧವಾಗಿದೆ.

ಸಕಲಪುರುಷಾಭಿಮುಖ್ಯವೆಂಬ ಲಿಂಗವು ವಿಷ್ಣುವಿನಲ್ಲಿಯೇ ಮುಖ್ಯವಾಗಿವೆ. ವಿಚಾರ ಮಾಡಿದರೆ ಪ್ರತಿಯೊಬ್ಬ ಪುರುಷನಿಗೆ ಅಭಿಮುಖವಾದದ್ದು ಸೂರ್ಯಮಂಡಲವೇ ಹೊರತು ಸೂರ್ಯನಲ್ಲ. ಆದರೂ ಸೂರ್ಯಮಂಡಲದ ಮೂಲಕವಾಗಿ ಸೂರ್ಯನೇ ಅಭಿಮುಖನೆಂದು ಪೂರ್ವಪಕ್ಷಕಾರರು ಹೇಳುವುದಾದರೆ ಅಲ್ಲಿಯೇ ಇರುವ ಸೂರ್ಯನಾರಾಯಣನನ್ನು ಅಭಿಮುಖನೆಂದು ಏಕೆ ಹೇಳಬಾರದು.



• • • • •

## ಆದಿತ್ಯ ಹಾಗೂ ಜೀವರ ಲಿಂಗಗಳೆಲ್ಲವು ವಿಷ್ಣುವಿನಲ್ಲಿ ಸಾವಕಾಶವಾಗಿವೆ

### तात्पर्यचन्द्रिका

**सौरमन्त्रे च ''सूर्य आत्मा जगतस्तस्थुषश्च'' इति ब्रह्मलिङ्गसद्भावात्, मन्त्रस्थस्य च ''चक्षुर्मित्रस्य वरुणस्याग्नेः'' इति चक्षुश्शब्दस्य ''चक्षुर्देवानाम्'' इति श्रुत्या ब्रह्मण्येव सम्भवात्,**

**पूर्णदर्शनशक्तित्वादिरूपस्य वा चक्षुरादिस्वामित्वरूपस्य वा चक्षुर्मयत्वादेः ''सर्वेन्द्रियमयो विष्णुः'' इत्यादिभाष्योक्तस्मृत्या विष्णौ सम्भवात्, जीवेऽपि चक्षुरादिविकारत्वस्यासम्भवात् ।**

**एतच्छब्दस्य च ''अथैष ज्योतिः'' इत्यादौ अथ शब्दादेरिव अत्र प्रकरणविच्छेदकस्याभावेन पूर्वोक्ताशरीरप्रज्ञात्मपरत्वात् । वक्ष्यमाणस्यापि च अश्रुतत्वादिगुणैर्विष्णुत्वेन तत्परत्वेऽप्यनिष्टाभावात् ।**

**अल्पौकस्त्वस्य च 'व्योमवत्' इति सौत्रपदसूचितेन –**

**एकत्राप्यनवस्थाने सर्वत्रावस्थितिः कथम् ।**
**एकत्रैव तु संस्थानं नैवात्र प्रतिपाद्यते ।।**

ಸರ್ವಗತತ್ವಾಧಿಕರಣ (೧-೨-೧)

**इति न्यायेन सर्वगतेऽपि सम्भवात्, अनुव्याख्याने च –**

**स्थितस्य ह्यल्पदेशेषु सर्वगत्वं भवेद्ध्रुवम् ।**
**एकत्राप्यनवस्थस्य कुत एवाखिलस्थता ॥**

**इत्युक्तत्वात्,**

ಅನುವಾದ - ಸೂರ್ಯಪ್ರತಿಪಾದಕ ಮಂತ್ರದಲ್ಲಿಯೂ ಸಹ ''ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ'' ಸ್ಥಾವರ ಜಂಗಮಾತ್ಮಕವಾದ ಪ್ರಪಂಚಕ್ಕೆ ನಿಯಾಮಕನಾಗಿದ್ದಾನೆಂಬ ಬ್ರಹ್ಮಲಿಂಗವೇ ಕೇಳಿಸುತ್ತಿವೆ. ಅದೇ ಮಂತ್ರದಲ್ಲಿರುವ ''ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ'' ಎಂಬ ಚಕ್ಷುಃಶಬ್ದವು ''ಚಕ್ಷುರ್ದೇವಾನಾಮ್'' ಶಬ್ದವೂ ಸಹ ಬ್ರಹ್ಮನಲ್ಲಿಯೇ ಕೂಡುತ್ತವೆ. ಆದಿತ್ಯನಲ್ಲಿ ಕೂಡುವುದಿಲ್ಲ.

ಚಕ್ಷುರ್ಮಯತ್ವವೆಂಬ ಜೀವನ ಲಿಂಗವೂ ಸಹ ಬ್ರಹ್ಮನಲ್ಲಿಯೇ ಯುಕ್ತವಾಗುತ್ತದೆ. ಚಕ್ಷುರ್ಮಯತ್ವ ಶಬ್ದಕ್ಕೆ ಎಲ್ಲವನ್ನು ನೋಡುವಿಕೆಯೆಂಬ ಶಕ್ತಿಯುಳ್ಳವನು ಎಂಬರ್ಥವನ್ನು ಹೇಳಬಹುದು. ಸಕಲ ಚಕ್ಷುರಾದಿಲಿಂಗಗಳಿಗೆ ಸ್ವಾಮಿಯಾಗಿದ್ದಾನೆಂಬರ್ಥವನ್ನು ಹೇಳಬಹುದು. ಈ ಎರಡು ಅರ್ಥಗಳೂ ಸಹ ''ಸರ್ವೇಂದ್ರಿಯಮಯೋ ವಿಷ್ಣುಃ'' ಇತ್ಯಾದಿಯಾಗಿ ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯಂತೆ ವಿಷ್ಣುವಿನಲ್ಲೇ ಉಪಪನ್ನವಾಗುತ್ತವೆ ಹೊರತು ಜೀವನು ಚಕ್ಷುರ್ಮಯನೆಂದು ಹೇಳಲು ಸಾಧ್ಯವಿಲ್ಲ. ಚಕ್ಷುರಾದಿವಿಕಾರತ್ವವನ್ನು ಹೇಳಿದರೂ ಜೀವನಲ್ಲಿ ಉಪಪನ್ನವಾಗುವುದಿಲ್ಲ.

ಶ್ರುತಿಯಲ್ಲಿರುವ ಏತಚ್ಛಬ್ದವೂ ಸಹ ವಿಷ್ಣುವನ್ನೇ ಹೇಳುತ್ತದೆ. ಏಕೆಂದರೆ 'ಅಥೈಷ ಜ್ಯೋತಿಃ' ಎಂಬಲ್ಲಿರುವ 'ಅಥ' ಶಬ್ದವು ಹೇಗೆ ಪ್ರಕರಣವಿಚ್ಛೇದಕವಾಗಿದೆಯೋ ಅದರಂತೆ ಇಲ್ಲಿ ಪ್ರಕರಣ ವಿಚ್ಛೇದಕವಾದ 'ಅಥ' ಮೊದಲಾದ ಶಬ್ದಗಳಿರುವುದಿಲ್ಲ. ಆದ್ದರಿಂದ ಹಿಂದೆ ಪ್ರಸಕ್ತನಾದ ಅಶರೀರನಾದ ಪ್ರಜ್ಞಾತ್ಮನೆನಿಸಿದ ವಿಷ್ಣುಪರತ್ವವನ್ನೇ ಹೇಳಬೇಕು. ಮುಂದೆ ಹೇಳುವುದನ್ನೂ 'ಏತತ್' ಶಬ್ದವು ಪರಾಮರ್ಶಿಸುತ್ತದೆಂದು ಒಪ್ಪಿದರೂ ಸಹ ಆತಂಕವಿಲ್ಲ. ಏಕೆಂದರೆ ಅಶ್ರುತತ್ವಾದಿಗುಣಗಳುಳ್ಳ ವಿಷ್ಣುವೇ ಮುಂದೆಯೂ ಪ್ರಸಕ್ತನಾಗಿದ್ದಾನೆ. ಅವನನ್ನು 'ಏತತ್' ಶಬ್ದದಿಂದ ಪರಾಮರ್ಶಿಸಬಹುದು.

ಅಲೌಕಿಕತ್ವಲಿಂಗವೂ ಸಹ ಸರ್ವಗತನಾದ ವಿಷ್ಣುವಿನಲ್ಲಿ ಬರುತ್ತದೆ. 'ವ್ಯೋಮವತ್' ಎಂಬ ಸೂತ್ರಪದದಿಂದ ಈ ವಿಷಯವನ್ನು ಸೂಚಿಸಿದ್ದಾರೆ. ಆದ್ದರಿಂದ

ಏಕತ್ರಾಪ್ಯನವಸ್ಥಾನೇ ಸರ್ವತ್ರಾವಸ್ಥಿತಿಃ ಕಥಮ್ ।
ಏಕತ್ರೈವ ತು ಸಂಸ್ಥಾನಂ ನೈವಾತ್ರ ಪ್ರತಿಪಾದ್ಯತೇ ॥
ಪರಿಪೂರ್ಣಚಂದ್ರಿಕಾ

ಒಂದು ಸ್ಥಳದಲ್ಲಿ ಇಲ್ಲದಿರುವವನು ಎಲ್ಲಾ ಸ್ಥಳದಲ್ಲಿಯೂ ಇರಲು ಹೇಗೆ ಸಾಧ್ಯ? ಆದರೆ ಒಂದೇ ಸ್ಥಳದಲ್ಲಿ ಇದ್ದಾನೆಂದು ಇಲ್ಲಿ ಪ್ರತಿಪಾದಿಸುತ್ತಿಲ್ಲ.

ಈ ನ್ಯಾಯದಂತೆ ಸರ್ವಗತನಾಗಬೇಕಾದರೆ ಅಲ್ಪದೇಶದಲ್ಲಿ ಅವನು ಇರಲೇಬೇಕು. ಈ ವಿಷಯವನ್ನು ಅನುವ್ಯಾಖ್ಯಾನದಲ್ಲಿಯೂ ಹೇಳಿದ್ದಾರೆ -

ಸ್ಥಿತಸ್ಯ ಹ್ಯಲ್ಪದೇಶೇಷು ಸರ್ವಗತ್ವಂ ಭವೇದ್‌ಧ್ರುವಮ್ ।
ಏಕತ್ರಾಪ್ಯನವಸ್ಥಸ್ಯ ಕುತ ಏವಾಖಿಲಸ್ಥತಾ ॥

ಅಲ್ಪದೇಶದಲ್ಲಿ ಇರುವ ವಿಷ್ಣುವು ನಿಶ್ಚಯವಾಗಿ ಸರ್ವಗತನಾಗುತ್ತಾನೆ. ಅಲ್ಪದೇಶದಲ್ಲಿಯೂ ಇಲ್ಲದವನು ಸರ್ವಗತನಾಗಲು ಹೇಗೆ ಸಾಧ್ಯ?

ಕಠಿಣ ಪದಾರ್ಥ

ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ = ಸ್ಥಾವರ ಜಂಗಮಾತ್ಮಕವಾದ ಪ್ರಪಂಚಕ್ಕೆ ಸೂರ್ಯನು ನಿಯಾಮಕನಾಗಿದ್ದಾನೆ, ಶ್ರುತ್ಯಾ = ಯಜ್ ಶಾಖೆಯಲ್ಲಿರುವ ಶ್ರುತಿಯಿಂದ, ಪೂರ್ಣದರ್ಶನಶಕ್ತ್ಯಾದಿರೂಪಸ್ಯ = ಎಲ್ಲವನ್ನು ನೋಡುವಿಕೆಯೆಂಬ ಶಕ್ತಿಯಿರುವಿಕೆಯು, ಅಭಾವೇನ = ಅಥ ಮೊದಲಾದ ಪದಗಳಿಲ್ಲದ್ದರಿಂದ.

**प्रकाशः** – एवमादित्यश्रुत्युज्जीवकलिङ्गानामन्यथासिद्धिमुक्त्वेदानीं, यदपि मन्त्रे चक्षुष्ट्वलिङ्गात्सूर्यशब्दादित्यप्रापक इत्युक्तं, तदयुक्तं, अन्तरधिकरणन्याय-विषयताऽत्रत्यसूर्यशब्दस्य विष्णुपरत्वादिति भावेन निरवकाशविष्णुलिङ्गं वदन्नन्यलिङ्गस्यान्यथासिद्धिमाह – **सौरमन्त्रे चेति ।**

ವಿವರಣೆ - ಇಲ್ಲಿಯ ತನಕ ಆದಿತ್ಯಶ್ರುತಿಯನ್ನು ಉಪೋದ್ಬಲಿಸುವ ಮೂರು ಬಗೆಯ ಲಿಂಗಗಳನ್ನು ವಿಷ್ಣುವಿನಲ್ಲಿ ಸಮರ್ಥಿಸಿದ್ದಾಯಿತು. ಈಗ ಮಂತ್ರದಲ್ಲಿರುವ ಚಕ್ಷುಷ್ಟ್ವಲಿಂಗದಿಂದ ಸೂರ್ಯಶಬ್ದವು ಆದಿತ್ಯನನ್ನೇ ಪ್ರತಿಪಾದಿಸುತ್ತದೆಂಬ ಪೂರ್ವಪಕ್ಷವನ್ನು ನಿರಾಕರಿಸುತ್ತಿದ್ದಾರೆ. ಅಂತರಧಿಕರಣದ ನ್ಯಾಯಕ್ಕೆ ವಿಷಯವಾದ್ದರಿಂದ ಸೂರ್ಯಶಬ್ದವು ವಿಷ್ಣುವನ್ನೇ ಪ್ರತಿಪಾದಿಸುತ್ತದೆಂಬ ಅಭಿಪ್ರಾಯದಿಂದ ನಿರವಕಾಶವಾದ ವಿಷ್ಣುಲಿಂಗವನ್ನು ಹೇಳುವವರಾಗಿ ಸೂರ್ಯಲಿಂಗಗಳನ್ನೆಲ್ಲಾ ವಿಷ್ಣುವಿನಲ್ಲಿಯೇ ಸಮರ್ಥಿಸುತ್ತಿದ್ದಾರೆ 'ಸೌರಮಂತ್ರೇಚ' ಇತ್ಯಾದಿ ವಾಕ್ಯದಿಂದ.

**प्रकाशः** –

आदानात्सर्ववस्तूनामत्तृत्वात्प्रलयेऽपि च ।
आत्मेत्युक्तस्स भगवान् जगतस्स्थावरस्य च ॥
ಸರ್ವಗತತ್ವಾಧಿಕರಣ (೧-೨-೧)

इत्युक्तदिशा सर्वनियामकत्वरूपविष्णुलिङ्गादित्यर्थः । ''चक्षुर्देवानामुत मर्त्यानां'' इति यजुश्शाखास्थश्रुत्येत्यर्थः ।

''सर्वनामाभिधेयश्च'' इत्यनेनैव ''आदित्यशब्दस्येश्वरवाचित्वं चोक्तं भवति'' इति टीका उपलक्षणमिति भावः ।

ಆದಾನಾತ್‌ಸರ್ವವಸ್ತೂನಾಮತ್ತೃತ್ವಾತ್ತ್ವಲಯೇಽಪಿ ಚ ।
ಆತ್ಮೇತ್ಯುಕ್ತಸ್ಸ ಭಗವಾನ್ ಜಗತಸ್ಸ್ಥಾವರಸ್ಯ ಚ ॥

ಸಕಲವಸ್ತುಗಳಿಗೆ ನಿಯಾಮಕನಾದ್ದರಿಂದ ಮತ್ತು ಪ್ರಲಯಕಾಲದಲ್ಲಿ ಎಲ್ಲವನ್ನು ತಿನ್ನುವವನಾದ್ದರಿಂದ ಸಕಲಸ್ಥಾವರಜಂಗಮಾತ್ಮಕವಾದ ಪ್ರಪಂಚಕ್ಕೆ ಭಗವಂತನು ನಿಯಾಮಕನಾಗಿದ್ದಾನೆಂಬ ಮಾತಿನಂತೆ ಸರ್ವನಿಯಾಮಕತ್ವವು ವಿಷ್ಣುವಿನ ಲಿಂಗವಾಗಿದೆ ಎಂದರ್ಥ. ''ಚಕ್ಷುರ್ದೇವಾನಾಮುತ ಮರ್ತ್ಯಾನಾಂ'' ಎಂಬುದಾಗಿ ಯಜುಃಶಾಖಾದಲ್ಲಿರುವ ಶ್ರುತಿಯಿಂದ ಎಂದು ತಿಳಿಯಬೇಕು.

ಹೀಗೆ ಹೇಳಿದ್ದರಿಂದ ''ಸರ್ವನಾಮಾಭಿಧೇಯಶ್ಚ'' ಇತ್ಯನೇನೈವ ''ಆದಿತ್ಯಶಬ್ದಸ್ಯೇಶ್ವರವಾಚಿತ್ವಂ ಚೋಕ್ತಂ ಭವತಿ'' ಎಂಬ ಟೀಕೆಯು ಉಪಲಕ್ಷಣವೆಂದು ವ್ಯಾಖ್ಯಾನಿಸಿದಂತಾಯಿತು.

**प्रकाशः –** यदप्युक्तं चन्द्रादावुक्त्वाऽऽदित्येऽनुक्तत्वमप्यादित्यलिङ्गमिति, तत्त्वग्रे निरसिष्यत इति भावेन चक्षुश्शब्दस्य विष्णावुक्ततया तत्सङ्गतत्वेन चक्षुर्मयत्वादि-जीवप्रापकाण्यपि सावकाशयति – **पूर्णेति** ।

ವಸ್ತುತಸ್ತು ಚಂದ್ರಾದಿಗಳಲ್ಲಿ ಹೇಳಿ ಆದಿತ್ಯನಲ್ಲಿ ಹೇಳದಿರುವಿಕೆಯೆಂಬ ಆದಿತ್ಯ ಲಿಂಗವನ್ನು ನಿರಾಕರಿಸಬೇಕಿತ್ತು. ಆದರೆ ಈ ಲಿಂಗವನ್ನು ಮುಂದೆ ನಿರಾಕರಿಸುತ್ತಾರೆ. ಈಗ ಚಕ್ಷು ಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾಗಿದ್ದಾನೆಂದು ಹೇಳಿದಾಗ ಜೀವಪ್ರಾಪಕವಾದ ಚಕ್ಷುಮರ್ಯತ್ವ ಲಿಂಗವನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡುವುದು ಸಂಗತವಾಗಿದೆಯೆಂಬ ಅಭಿಪ್ರಾಯದಿಂದ 'ಪೂರ್ಣ' ಇತ್ಯಾದಿ ವಾಕ್ಯದಲ್ಲಿ ಜೀವಪ್ರಾಪಕಲಿಂಗಗಳನ್ನು ನಿರಾಕರಿಸುತ್ತಿದ್ದಾರೆ.

**प्रकाशः –**

पूर्णदर्शनशक्तित्वाच्चक्षुर्मय इतीरितः ।
तादृक्श्रवणशक्तित्वात्तथा श्रोत्रमयस्स्मृतः ॥

इत्यैतरेयभाष्यदिशा मयटः प्राचुर्यार्थत्वेनायमाद्योऽर्थः । ''इन्द्रियस्वामित्वेन'' इति टीकोपलक्षणमिति भावः ।

ಪರಿಪೂರ್ಣಚಂದ್ರಿಕಾ

द्वितीयस्त्वेतद्भाष्यदिशेति व्यक्तम् । 'स्मृत्या' इत्युक्त्याऽयमेवार्थः स्मार्तत्वादत्र ग्राह्यो नतु प्रसिद्धकरणसम्बन्ध इति सूचितम् ।

ಪೂರ್ಣದರ್ಶನಶಕ್ತಿತ್ವಾಚ್ಚಕ್ಷುರ್ಮಯ ಇತೀರಿತಃ।
ತಾದೃಕ್ಶ್ರವಣಶಕ್ತಿತ್ವಾತ್ತಥಾ ಶ್ರೋತ್ರಮಯಸ್ಸ್ಮೃತಃ॥

ಸಕಲವನ್ನು ನೋಡುವ ಶಕ್ತಿಯುಳ್ಳವನಾದ್ದರಿಂದ ಚಕ್ಷುರ್ಮಯನೆನಿಸಿದ್ದಾನೆ. ಸಕಲವನ್ನು ಕೇಳುವ ಶಕ್ತಿಯುಳ್ಳವನಾದ್ದರಿಂದಲೇ ಶ್ರೋತ್ರಮಯನೆನಿಸಿದ್ದಾನೆಂಬ ಐತರೇಯ ಭಾಷ್ಯದ ಪ್ರಕಾರ ಚಕ್ಷುರ್ಮಯ ಎಂಬಲ್ಲಿರುವ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯ ಎಂಬರ್ಥವು ಸಿದ್ಧವಾಗಿದೆ. ಈ ಅರ್ಥವನ್ನು ವಿವಕ್ಷಿಸಿ ಗ್ರಂಥಕಾರರು 'ಪೂರ್ಣದರ್ಶನಶಕ್ತಿತ್ವಾದಿರೂಪಸ್ಯ' ಎಂಬ ಮೊದಲನೆಯ ಅರ್ಥವನ್ನು ಹೇಳಿದ್ದಾರೆ.

ಮತ್ತು 'ಇಂದ್ರಿಯಸ್ವಾಮಿತ್ವೇನ' ಎಂಬ ಟೀಕೆಯು ಉಪಲಕ್ಷಣವಾಗಿದೆಯೆಂದು ಇದರಿಂದ ತಿಳಿಯಬೇಕು. 'ಚಕ್ಷುರಾದಿಸ್ವಾಮಿತ್ವರೂಪಸ್ಯ' ಎಂಬ ಎರಡನೆಯ ಅರ್ಥವನ್ನು ಈ ಅಧಿಕರಣದ ಭಾಷ್ಯದ ಪ್ರಕಾರ ತಿಳಿಯಬೇಕು. ಗ್ರಂಥದಲ್ಲಿ 'ಸ್ಮೃತ್ಯಾ' ಎಂದು ಹೇಳಿದ್ದರಿಂದ ಈ ಅರ್ಥವು ಸ್ಮೃತಿಸಿದ್ಧವಾದ್ದರಿಂದ ಸ್ವೀಕರಿಸಬೇಕು ಹೊರತು ಪ್ರಸಿದ್ಧವಾದ ಇಂದ್ರಿಯಸಂಬಂಧವೆಂಬರ್ಥವನ್ನು ಇಲ್ಲಿರುವ ಚಕ್ಷುರ್ಮಯಶಬ್ದದಿಂದ ಸ್ವೀಕರಿಸಬಾರದೆಂದು ಸೂಚಿಸಿದ್ದಾರೆ.

**प्रकाशः** – यदपि जीवपक्षे एतच्छब्दः "अथैषज्योतिः" इत्यादाविव वक्ष्यमाणपर इति तत्राह – **एतच्छब्दस्येति** ।

"अथैष ज्योतिः" इत्यादौ ज्योतिष्टोमप्रकरणविच्छेदकस्याथशब्दस्य श्रवणात्तत्र तथात्वेऽपि प्रकृते तथा प्रकरणभेदकं न किञ्चिदस्तीत्यर्थः ।

ಹಿಂದೆ ಪೂರ್ವಪಕ್ಷ ಮಾಡುವಾಗ ಜೀವಪಕ್ಷದಲ್ಲಿ "ಏತಚ್ಛಬ್ದವು ಅಥೈಷ ಜ್ಯೋತಿಃ" ಇತ್ಯಾದಿ ದೃಷ್ಟಾಂತದಂತೆ ಮುಂದೆ ಹೇಳುವುದನ್ನು ಪರಾಮರ್ಶಿಸುತ್ತದೆಂದು ಹೇಳಿದ್ದರು. ಇದೂ ಸಹ ತಪ್ಪೆಂದು 'ಏತಚ್ಛಬ್ದಸ್ಯ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

'ಅಥೈಷ ಜ್ಯೋತಿಃ' ಇತ್ಯಾದಿ ಸ್ಥಳದಲ್ಲಿ ಜ್ಯೋತಿಷ್ಟೋಮಪದಕ್ಕೆ ವಿಚ್ಛೇದಕವಾದ 'ಅಥ' ಶಬ್ದವು ಕೇಳಿಸುತ್ತಿದೆ. ಆದ್ದರಿಂದ ಮುಂದೆ ಹೇಳುವುದನ್ನು ಅಲ್ಲಿ ಪರಾಮರ್ಶಿಸಬಹುದು. ಆದರೆ ಪ್ರಕೃತದಲ್ಲಿರುವ 'ಏತತ್' ಶಬ್ದವು ಮುಂದೆ ಹೇಳುವುದನ್ನು ಪರಾಮರ್ಶಿಸಲು ಅಂತಹ ಪ್ರಕರಣವಿಚ್ಛೇದಕವಾದ ಯಾವುದೇ ಪದಗಳಿರುವುದಿಲ್ಲ.

**प्रकाशः** – ननूक्तमत्र बाध्वचिह्नितोपक्रमोपसंहाराभ्यां भिन्नवाक्यत्वं तस्यावगतमिति । तथा च कथं न प्रकरणविच्छेद इति चेत्, मैवं, "एतामनुविधं संहितां सन्धीयमानां मन्य इति ह स्माह बाध्वः" इत्यनिरुद्धादिचतुर्मूर्त्यात्मकस्य

**विष्णोस्संहितादेवतात्वरूपावान्तरप्रमेये तात्पर्यज्ञापनाय तदुपक्रमादेरुपपत्तेः, अविच्छेदकत्वात् पुनस्तस्यैव परामर्शेन गुणान्तरविधिसम्भवादिति तात्पर्यात् ।**

ಪ್ರಶ್ನೆ - ಹಿಂದೆ ಪೂರ್ವಪಕ್ಷ ಮಾಡುವಾಗ 'ಬಾಧ್ವ' ಚಿಹ್ನೆಯಿಂದ ಕೂಡಿರುವ ಉಪಕ್ರಮ ಹಾಗೂ ಉಪಸಂಹಾರಗಳಿಂದ ಭಿನ್ನವಾಕ್ಯವೆಂದು ತಿಳಿಯುತ್ತದೆ. ಇದೇ ಪ್ರಕರಣಕ್ಕೆ ವಿಚ್ಛೇದಕವಾಗಿದೆ. ಹೀಗಿರುವಾಗ ಪ್ರಕರಣವಿಚ್ಛೇದಕವಾದದ್ದು ಯಾವುದೂ ಇಲ್ಲವೆಂದು ಹೇಗೆ ಹೇಳಿದಿರಿ ?

ಉತ್ತರ - ಬಾಧ್ವ ಚಿಹ್ನೆಯಿಂದ ಕೂಡಿರುವ ಉಪಕ್ರಮೋಪಸಂಹಾರಗಳು ಪ್ರಕರಣಕ್ಕೆ ವಿಚ್ಛೇದಕವಾಗಿಲ್ಲ ಹೊರತಾಗಿ "ಏತಾಮನುವಿಧಂ ಸಂಹಿತಾಂ ಸಂಧೀಯಮಾನಾಂ ಮನ್ಯ ಇತಿ ಹ ಸ್ಮಾಹ ಬಾಧ್ವಃ" ಇತ್ಯಾದಿಯಾಗಿ ಅನಿರುದ್ಧವೇ ಮೊದಲಾದ ಭಗವಂತನ ನಾಲ್ಕು ರೂಪಗಳಿಗೆ ಸಂಹಿತಾದೇವತ್ವವನ್ನು ತಿಳಿಸಬೇಕಾಗಿದೆ. ಈ ಅವಾಂತರ ಪ್ರಮೇಯವನ್ನು ತಿಳಿಸುವುದಕ್ಕಾಗಿಯೇ ಶ್ರುತಿಗೆ ತಾತ್ಪರ್ಯವಿದೆ. ಇದನ್ನು ತಿಳಿಸುವುದಕ್ಕಾಗಿ ಉಪಕ್ರಮಾದಿಗಳು ಹೊರಟಿವೆ.

**प्रकाशः – पूर्वोक्तेति ।** "स यश्चायमशरीरः प्रज्ञात्मा, यश्चासावादित्य एकमेतदिति विद्यात्" इत्यशरीरप्रज्ञात्मन आदित्यानाम्नश्चैकत्वादिति । 'आदित्यपरत्वात्' इत्यनुक्त्वा 'अशरीर' इत्युक्तिर्विष्णुपक्षेऽशरीरत्वयुक्तिसूचनार्था । एतेन "स यश्चायमशरीरः" इत्यादिटीका विवृता ।

"ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ, ಯಶ್ಚಾಸಾವಾದಿತ್ಯ ಏಕಮೇತದಿತಿ ವಿದ್ಯಾತ್" ಎಂಬಂತೆ ಅಶರೀರ ಪ್ರಜ್ಞಾತ್ಮನಿಗೆ ಹಾಗೂ ಆದಿತ್ಯನಿಗೆ ಐಕ್ಯವಿದೆ. ವಸ್ತುತಃ ಗ್ರಂಥದಲ್ಲಿ 'ಆದಿತ್ಯಪರತ್ವಾತ್' ಎಂದೇ ಹೇಳಬಹುದಿತ್ತು. ಆದರೆ ಅಶರೀರ ಎಂದು ಹೇಳಿದ್ದು ವಿಷ್ಣುಪಕ್ಷದಲ್ಲಿ ಅಶರೀರತ್ವಯುಕ್ತಿಯನ್ನು ಸೂಚಿಸುವುದಕ್ಕಾಗಿ ಎಂದು ತಿಳಿಯಬೇಕು. ಇದರಿಂದ "ಸ ಯಶ್ಚಾಯಮಿತ್ಯಾದಿನಾ" ಇತ್ಯಾದಿ ಟೀಕೆಯನ್ನು ವ್ಯಾಖ್ಯಾನಿಸಿದಂತಾಯಿತು.

**प्रकाशः –** उपक्रमादिवशाद्भिन्नवाक्यत्वमुपेत्याप्याह – **वक्ष्यमाणेति ।** प्रकृतपरत्वं च टीकाद्युक्तसमर्थनार्थमिति भावः । **अनिष्टेति ।** जीवलिङ्गानां सावकाशितत्वादिति भावः ।

ಉಪಕ್ರಮಾದಿಗಳಿಗೆ ಅನುಸಾರಿಯಾಗಿ ಭಿನ್ನವಾಕ್ಯತ್ವವನ್ನು ಒಪ್ಪೋಣ. ಆದರೂ ಸಹ ನಮಗೆ ಅನಿಷ್ಟವಿಲ್ಲವೆಂದು 'ವಕ್ಷ್ಯಮಾಣಸ್ಯಾಪಿ' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಪ್ರಕೃತಪರತ್ವವನ್ನು ಇಲ್ಲಿ ಹೇಳಿದ್ದು ಟೀಕೆಯನ್ನು ಸಮರ್ಥಿಸುವುದಕ್ಕಾಗಿ ಎಂದು ತಿಳಿಯಬೇಕು. 'ಅನಿಷ್ಟಾಭಾವಾತ್' ಎಂದು ಗ್ರಂಥಕಾರರು ಹೇಳಿದ್ದಾರೆ. ಜೀವಲಿಂಗಗಳನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಿದ್ದರಿಂದ ವಕ್ಷ್ಯಮಾಣಪರವೆಂದು ಅರ್ಥೈಸಿದರು. ನಮಗೆ ಅನಿಷ್ಟವಿಲ್ಲವೆಂದು ಇದರ ಅಭಿಪ್ರಾಯ.

**प्रकाशः** – यदप्युक्तमर्भकौकस्त्वाच्च न विष्णोरत्रोक्तसर्वगततेति, तदपि न बाधकमिति भावेनाह – **अल्पेति** । 'सूचितेन न्यायेन' इत्यन्वयः । तमेव न्यायं स्वयं सङ्गृह्याह – **एकत्रेति** ।

**अर्भकौकस्त्वं नाम अल्पदेशेऽवस्थितत्वं, न त्वल्पदेश एवावस्थानवत्त्वम् । तच्च सर्वगतस्य विष्णोराकाशवदेव युज्यते, अल्पदेशे अविद्यमानस्य सर्वगतत्वायोगात्,**

**यत्र नास्ति पदन्यासः कस्तं विषयमाप्नुयात् ।**

**इति न्यायादित्यर्थः ।**

**एकत्रैवेति । भूतेष्वेव' इत्यश्रवणात् । तथा श्रवणे हि तन्नोपपद्येते, न चैवमित्यर्थः ।**

ಹಿಂದೆ ಪೂರ್ವಪಕ್ಷ ಮಾಡುವಾಗ ವಿಷ್ಣು ಅಲ್ಪದೇಶನಾದ್ದರಿಂದ ಸರ್ವಗತನಾಗಲಾರನೆಂದು ಆಕ್ಷೇಪಿಸಲಾಗಿತ್ತು. ಇದೂ ಸಹ ತಪ್ಪು. ಅಲ್ಪದೇಶದಲ್ಲಿರುವಿಕೆಯು ಸರ್ವಗತತ್ವಕ್ಕೆ ಬಾಧಕವೇ ಅಲ್ಲವೆಂದು 'ಅಲ್ಪೌಕಸ್ತ್ವ' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. 'ಸೂಚಿತೇನ' ಎಂಬುದಕ್ಕೆ 'ನ್ಯಾಯೇನ' ಎಂಬುದರಲ್ಲಿ ಅನ್ವಯ. ಇದೇ ನ್ಯಾಯವನ್ನು ಸ್ವತಃ ಗ್ರಂಥಕಾರರೇ 'ಏಕತ್ರಾಪಿ' ಎಂಬ ಶ್ಲೋಕದಿಂದ ಸಂಗ್ರಹಿಸಿದ್ದಾರೆ.

ಅರ್ಭಕೌಕಸ್ತ್ವವೆಂದರೆ ಅಲ್ಪದೇಶದಲ್ಲಿದ್ದಾನೆಂದಷ್ಟೇ ಅರ್ಥ ಹೊರತು ಅಲ್ಪದೇಶದಲ್ಲಿ ಮಾತ್ರ ಇದ್ದಾನೆಂದು ಎಂದರ್ಥವಲ್ಲ. ಈ ಅರ್ಥವು ಸರ್ವಗತನಾದ ವಿಷ್ಣುವಿನಲ್ಲಿ ಆಕಾಶದ ದೃಷ್ಟಾಂತದಂತೆ ಯುಕ್ತವೇ ಆಗುತ್ತವೆ. ಅಲ್ಪದೇಶದಲ್ಲಿ ಯಾರು ಇರುವುದಿಲ್ಲವೋ ಅವನು ಸರ್ವಗತನೂ ಆಗಲಾರ ಎಂಬ ವ್ಯಾಪ್ತಿಯನ್ನು ಇಲ್ಲಿ ತಿಳಿಯಬೇಕು. "ಯತ್ರ ನಾಸ್ತಿ ಪದನ್ಯಾಸಃ ಕಸ್ತಂ ವಿಷಯಮಾಪ್ನುಯಾತ್" ಯಾರು ಒಂದು ಹೆಜ್ಜೆಯನ್ನು ಇಡಲು ಬಯಸಲಾರನೋ ಅವನು ಗುರಿಯನ್ನು ಹೇಗೆ ತಾನೆ ತಲುಪುತ್ತಾನೆ ? ಎಂಬ ನ್ಯಾಯದಂತೆ ಅಲ್ಪದೇಶದಲ್ಲಿದ್ದರೆ ಮಾತ್ರ ಸರ್ವಗತನಾಗಲು ಸಾಧ್ಯನೆಂದು ತಿಳಿಯಬೇಕು.

'ಏಕತ್ರೇವ' ಎಂಬಲ್ಲಿರುವ ಏವಕಾರದಿಂದ ಸೂತ್ರದಲ್ಲಿ ಏವಕಾರವು ಕೇಳಿಸುತ್ತಿಲ್ಲವೆಂದು ಹೇಳುತ್ತಿದ್ದಾರೆ. ಒಂದು ವೇಳೆ ಹಾಗೆ ಏವಕಾರವನ್ನು ಹೇಳಿದರೆ ಅದು ಕೂಡುವುದಿಲ್ಲವೆಂದು ತಿಳಿಯಬೇಕು.

**प्रकाशः** – उक्तन्यायस्य भाष्यादावस्फुटत्वादाह – **अनुव्याख्यान** इति । द्वितीये वैशेषिकनये,

महतोऽल्पत्वमपि हि व्योमवत्प्राह वेदवित् ।
यद्यल्पदेशसंस्थानं न सर्वत्राऽपि नो भवेत् ।

ಸರ್ವಗತತ್ವಾಧಿಕರಣ (೧-೨-೧)

स्थितस्य हि ..................... ।

इत्यादिनाऽस्य न्यायस्य विवृतत्वादित्यर्थ ।

**यथा खल्वेकैकं वर्णमुच्चारयत एव सर्ववेदोच्चारणं न त्वेकमप्यनुच्चारयतः, तथाऽल्पदेशेषु स्थितस्यैव सर्वगतत्वं भवेदित्यर्थः । एतेनात्र टीकादावेतदविवृतौ बीजमुद्भावितम् ।**

ಇಲ್ಲಿ ಹೇಳಿರುವ ನ್ಯಾಯಗಳು ಭಾಷ್ಯಾದಿಗಳಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಅನುವ್ಯಾಖ್ಯಾನೇ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಎರಡನೇ ಅಧ್ಯಾಯದ ವೈಶೇಷಿಕಾಧಿರಣದಲ್ಲಿ ಈ ವಿಷಯವು ಹೇಳಲ್ಪಟ್ಟಿದೆ -

ಮಹತೋಽಲ್ಪತ್ವಮಪಿ ಹಿ ವ್ಯೋಮವತ್ಪ್ರಾಹ ವೇದವಿತ್ ।
ಯದ್ಯಲ್ಪದೇಶಸಂಸ್ಥಾನಂ ನ ಸರ್ವತ್ರಾಽಪಿ ನೋ ಭವೇತ್ ।
ಸ್ಥಿತಸ್ಯ ಹಿ ..................... ।

ಮಹಾಪದಾರ್ಥವು ಅಲ್ಪವು ಆಗಿರುತ್ತದೆಂದು ಆಕಾಶದ ದೃಷ್ಟಾಂತದಿಂದ ಸರ್ವಜ್ಞರಾದ ಸೂತ್ರಕಾರರು ಹೇಳಿದ್ದಾರೆ. ಒಂದುವೇಳೆ ಅಲ್ಪದೇಶದಲ್ಲಿ ಇಲ್ಲದಿದ್ದರೆ ಸರ್ವದೇಶದಲ್ಲಿಯೂ ಇರಲು ಸಾಧ್ಯವಿಲ್ಲ. ಈ ರೀತಿಯಾಗಿ ನ್ಯಾಯವನ್ನು ವಿವರಿಸಿದ್ದಾರೆ.

ಯಾವ ರೀತಿಯಾಗಿ ಒಂದೊಂದು ವರ್ಣವನ್ನು ಉಚ್ಚರಿಸಿದರೆ ಮಾತ್ರ ಸಕಲವೇದದ ಉಚ್ಚಾರಣೆಯು ಸಾಧ್ಯವಾಗುತ್ತದೆ. ಒಂದು ವರ್ಣವನ್ನು ಉಚ್ಚಾರ ಮಾಡದಿದ್ದರೆ ಸಮಸ್ತ ವೇದವನ್ನು ಉಚ್ಚರಿಸಲು ಹೇಗೆ ಸಾಧ್ಯ? ಎಂಬ ದೃಷ್ಟಾಂತವು ಕಂಡಿದೆಯೋ ಅದರಂತೆ ಅಲ್ಪದೇಶದಲ್ಲಿ ಇದ್ದರೆ ಮಾತ್ರ ಸರ್ವಗತನಾಗಲು ಸಾಧ್ಯವೆಂದು ತಿಳಿಯಬೇಕು. ಹೀಗೆ ಅನುವ್ಯಾಖ್ಯಾನದಲ್ಲಿ ಸರ್ವಗತತ್ವವನ್ನು ವಿವರಿಸಿದ್ದರಿಂದ ಪ್ರಕೃತ ಟೀಕೆ ಹಾಗೂ ಭಾಷ್ಯಗಳಲ್ಲಿ ಇದರ ಬಗ್ಗೆ ವಿವರಿಸಿಲ್ಲ. ವೈಶೇಷಿಕಾಧಿಕರಣದಲ್ಲಿ ಮಾಡಿದ ವಿವರಣೆಯೇ ಇಲ್ಲಿ ವಿವರಣೆ ಮಾಡದದ್ದಕ್ಕೆ ಕಾರಣವಾಗಿದೆಯೆಂದು ತಿಳಿಸಿದಂತಾಯಿತು.

**गुरुराजीयम् – यदुक्तं ज्ञानकरणतया प्रसिद्धचक्षुरादिसम्बन्धस्य नित्यज्ञानेऽन्तर्यामिण्यसम्भवेन तत्प्राचुर्यं सुतरां न सम्भवतीति तत्पराचष्टे – पूर्णदर्शनेत्यादिना ।।**

ननु चक्षुर्मयत्वं न पूर्णदर्शनशक्तित्वादिरूपम् । येन ब्रह्मणोऽपि तत् स्यात् । किं नाम चक्षुर्विकारत्वमेव । तच्च निर्विकारे ब्रह्मण्यनुपपन्नमेवेत्यतः तर्हि जीवस्यापि निर्विकारत्वेन चक्षुर्विकारत्वरूपचक्षुर्मयत्वासम्भवात्कथं चक्षुर्मयत्वेन जीवप्राप्तिरित्याह – **जीवेऽपीति ।।**

यदुक्तमथैषज्योतिरित्यादेरिव 'एतं ह्येव बह्वृचा' इत्यादेरपि वक्ष्यमाण-चक्षुर्मयजीवपरत्वमिति तदेतद्दृष्टान्तदार्ष्टान्तिकयोर्वैषम्येण परिहरति – **एतच्छब्दस्येति** ॥

ननु सर्वत्राप्यथशब्द एव प्रकरणविच्छेदक इति न नियमः । तथासति एष तु वा अतिवदतीत्यत्र प्रकरणविच्छेदकस्याथशब्दस्याभावात्प्रकरणविच्छेदो न स्यात् । किं तर्ह्यथैषज्योतिरित्यादावथशब्दादेरिवेह प्रकरणेपि चत्वारः पुरुषा इति बाध्व इति बाध्वचिह्नितोपक्रमस्य इति ह्स्माह बाध्व इति बाध्वचिह्नितोपसंहारवाक्यैक-वाक्यत्वमेव प्रकरणविच्छेदकमित्यत आह – **वक्ष्यमाणस्यापीति** ॥ आदित्येऽनुक्त-लिङ्गमप्यन्यथासिद्धमित्याह – **सर्वपदेनेति** ॥ सर्वपदेन तद्ग्रहणे बाधिकाया आदित्यस्य सर्वगतताया अभावादित्यर्थः ।




ಆದಿತ್ಯಲಿಂಗಗಳು ವಿಷ್ಣುವಿನಲ್ಲಿಯೇ ಇವೆಯೆಂದು ಸಮರ್ಥಿಸಿದ್ದಾಯಿತು. ಪ್ರಕೃತ ಆದಿತ್ಯಲಿಂಗಗಳ ಬಲದಿಂದ ಸೂರ್ಯ ಮೊದಲಾದ ಶಬ್ದಗಳು ಆದಿತ್ಯನನ್ನೇ ಪ್ರತಿಪಾದಿಸುತ್ತವೆಂಬುದನ್ನು ನಿರಾಕರಿಸುತ್ತಿದ್ದಾರೆ. ಯಾವ ಮಂತ್ರವು ಸೂರ್ಯನನ್ನು ಪ್ರತಿಪಾದಿಸುತ್ತದೆಂದು ನೀವು ಹೇಳುತ್ತಿದ್ದೀರೋ ಅದೇ ಮಂತ್ರದಲ್ಲಿ ವಿಷ್ಣುವಿನ ಅಸಾಧಾರಣ ಲಿಂಗವೆನಿಸಿದ ಸಕಲಜಗನ್ನಿಯಾಮಕತ್ವವು ಕೇಳಿಸುತ್ತಿದೆ. ಆದ್ದರಿಂದ ಸೂರ್ಯಮಂತ್ರವು ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತಿದೆ. ಸಕಲ ದೇವತೆಗಳಿಗೆ ಕಣ್ಣನಂತಿರುವ ವಿಷ್ಣುವೇ 'ಚಕ್ಷುಃ' ಎನಿಸುತ್ತಾನೆ.

ಎಲ್ಲವನ್ನು ನೋಡುವ ಶಕ್ತಿಯುಳ್ಳವನಾದ್ದರಿಂದ ಅಥವಾ ಚಕ್ಷುರಾದಿ ಸಮಸ್ತ ಇಂದ್ರಿಯಗಳಿಗೆ ಸ್ವಾಮಿಯಾದ್ದರಿಂದ ವಿಷ್ಣುವೇ ಚಕ್ಷುರ್ಮಯನಾಗಬೇಕು. ಜೀವನಲ್ಲಿ ಇಂತಹ ಚಕ್ಷುರ್ಮಯತ್ವವು ಬರಲು ಸಾಧ್ಯವಿಲ್ಲ.

ಸರ್ವಗತನಾದ ವಿಷ್ಣುವಿನಲ್ಲಿ ಅಲ್ಪದೇಶಸ್ಥಿತತ್ವವನ್ನು ಹೇಳುವುದು ವಿರುದ್ಧವೆಂದು ಹಿಂದೆ ಆಕ್ಷೇಪಿಸಲಾಗಿತ್ತು. ಇದೂ ಸಹ ತಪ್ಪು. ಒಂದು ವೇಳೆ ಸೂತ್ರಕಾರರು ಅಲ್ಪದೇಶದಲ್ಲಿ ಮಾತ್ರ ಇದ್ದಾನೆಂದು ಹೇಳಿದ್ದರೆ ನಿಮ್ಮ ಮಾತು ಸರಿಯಾಗುತ್ತಿತ್ತು. ಸರ್ವದೇಶದಲ್ಲಿರಬೇಕಾದರೆ ಅಲ್ಪದೇಶದಲ್ಲಿ ಇರಲೇಬೇಕು. ಅಲ್ಪದೇಶದಲ್ಲಿಯೇ ಇರದವನು ಸಕಲದೇಶದಲ್ಲಿ ಇರಲು ಹೇಗೆ ಸಮರ್ಥನಾಗುತ್ತಾನೆ ? ನೂರು ರೂಪಾಯಿಗಳು ಇರಬೇಕಾದರೆ ಹತ್ತು ರೂಪಾಯಿ ಇರಲೇಬೇಕಲ್ಲವೇ? ಆದ್ದರಿಂದ ಭಗವಂತನು ಅಲ್ಪದೇಶವೆನಿಸಿದ ಹೃದಯದಲ್ಲೂ ಇದ್ದಾನೆ. ವಿಶಾಲವಾದ ಜಗತ್ತಿನಲ್ಲಿಯೂ ವ್ಯಾಪಿಸಿದ್ದಾನೆ. ಯಾವುದೇ ವಿರೋಧಕ್ಕೆ ಇಲ್ಲಿ ಅವಕಾಶವಿಲ್ಲ.



• • • • •

ಸರ್ವಗತತ್ವಾಧಿಕರಣ (೧-೨-೧)

स्थितस्य हि ..................... ।

इत्यादिनाऽस्य न्यायस्य विवृतत्वादित्यर्थ ।

**यथा खल्वेकैकं वर्णमुच्चारयत एव सर्ववेदोच्चारणं न त्वेकमप्यनुच्चारयतः, तथाऽल्पदेशेषु स्थितस्यैव सर्वगतत्वं भवेदित्यर्थः । एतेनात्र टीकादावेतदविवृतौ बीजमुद्भावितम् ।**

ಇಲ್ಲಿ ಹೇಳಿರುವ ನ್ಯಾಯಗಳು ಭಾಷ್ಯಾದಿಗಳಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಅನುವ್ಯಾಖ್ಯಾನೇ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಎರಡನೇ ಅಧ್ಯಾಯದ ವೈಶೇಷಿಕಾಧಿರಣದಲ್ಲಿ ಈ ವಿಷಯವು ಹೇಳಲ್ಪಟ್ಟಿದೆ -

ಮಹತೋಽಲ್ಪತ್ವಮಪಿ ಹಿ ವ್ಯೋಮವತ್ಪ್ರಾಹ ವೇದವಿತ್ ।
ಯದ್ಯಲ್ಪದೇಶಸಂಸ್ಥಾನಂ ನ ಸರ್ವತ್ರಾऽಪಿ ನೋ ಭವೇತ್ ।
ಸ್ಥಿತಸ್ಯ ಹಿ ..................... ।

ಮಹಾಪದಾರ್ಥವು ಅಲ್ಪವು ಆಗಿರುತ್ತದೆಂದು ಆಕಾಶದ ದೃಷ್ಟಾಂತದಿಂದ ಸರ್ವಜ್ಞರಾದ ಸೂತ್ರಕಾರರು ಹೇಳಿದ್ದಾರೆ. ಒಂದುವೇಳೆ ಅಲ್ಪದೇಶದಲ್ಲಿ ಇಲ್ಲದ್ದಿದರೆ ಸರ್ವದೇಶದಲ್ಲಿಯೂ ಇರಲು ಸಾಧ್ಯವಿಲ್ಲ. ಈ ರೀತಿಯಾಗಿ ನ್ಯಾಯವನ್ನು ವಿವರಿಸಿದ್ದಾರೆ.

ಯಾವ ರೀತಿಯಾಗಿ ಒಂದೊಂದು ವರ್ಣವನ್ನು ಉಚ್ಚರಿಸಿದರೆ ಮಾತ್ರ ಸಕಲವೇದದ ಉಚ್ಚಾರಣೆಯು ಸಾಧ್ಯವಾಗುತ್ತದೆ. ಒಂದು ವರ್ಣವನ್ನು ಉಚ್ಚಾರ ಮಾಡದಿದ್ದರೆ ಸಮಸ್ತ ವೇದವನ್ನು ಉಚ್ಚರಿಸಲು ಹೇಗೆ ಸಾಧ್ಯ? ಎಂಬ ದೃಷ್ಟಾಂತವು ಕಂಡಿದೆಯೋ ಅದರಂತೆ ಅಲ್ಪದೇಶದಲ್ಲಿ ಇದ್ದರೆ ಮಾತ್ರ ಸರ್ವಗತನಾಗಲು ಸಾಧ್ಯವೆಂದು ತಿಳಿಯಬೇಕು. ಹೀಗೆ ಅನುವ್ಯಾಖ್ಯಾನದಲ್ಲಿ ಸರ್ವಗತತ್ವವನ್ನು ವಿವರಿಸಿದ್ದರಿಂದ ಪ್ರಕೃತ ಟೀಕೆ ಹಾಗೂ ಭಾಷ್ಯಗಳಲ್ಲಿ ಇದರ ಬಗ್ಗೆ ವಿವರಿಸಿಲ್ಲ. ವೈಶೇಷಿಕಾಧಿಕರಣದಲ್ಲಿ ಮಾಡಿದ ವಿವರಣೆಯೇ ಇಲ್ಲಿ ವಿವರಣೆ ಮಾಡದ್ದಕ್ಕೆ ಕಾರಣವಾಗಿದೆಯೆಂದು ತಿಳಿಸಿದಂತಾಯಿತು.

**गुरुराजीयम्** – यदुक्तं ज्ञानकरणतया प्रसिद्धचक्षुरादिसम्बन्धस्य नित्यज्ञानेऽन्तर्यामिण्यसम्भवेन तत्प्राचुर्यं सुतरां न सम्भवतीति तत्पराचष्टे – **पूर्णदर्शनेत्यादिना** ।।

ननु चक्षुर्मयत्वं न पूर्णदर्शनशक्तित्वादिरूपम् । येन ब्रह्मणोऽपि तत् स्यात् । किं नाम चक्षुर्विकारत्वमेव । तच्च निर्विकारे ब्रह्मण्यनुपपन्नमेवेत्यतः तर्हि जीवस्यापि निर्विकारत्वेन चक्षुर्विकारत्वरूपचक्षुर्मयत्वासम्भवात्कथं चक्षुर्मयत्वेन जीवप्राप्तिरित्याह – **जीवेऽपीति** ।।

ಪರಿಪೂರ್ಣಚಂದ್ರಿಕಾ

यदुक्तमथैषज्योतिरित्यादेरिव 'एतं ह्येव बह्वृचा' इत्यादेरपि वक्ष्यमाण-चक्षुर्मयजीवपरत्वमिति तदेतद्दृष्टान्तदार्ष्टान्तिकयोर्वैषम्येण परिहरति – **एतच्छब्दस्येति** ॥

ननु सर्वत्राप्यथशब्द एव प्रकरणविच्छेदक इति न नियमः । तथासति एष तु वा अतिवदतीत्यत्र प्रकरणविच्छेदकस्याथशब्दस्याभावात्प्रकरणविच्छेदो न स्यात् । किं तर्ह्यथैषज्योतिरित्यादावथशब्दादेरिवेह प्रकरणेपि चत्वारः पुरुषा इति बाध्व इति बाध्वचिह्नितोपक्रमस्य इति ह्स्माह बाध्व इति बाध्वचिह्नितोपसंहारवाक्यैक-वाक्यत्वमेव प्रकरणविच्छेदकमित्यत आह – **वक्ष्यमाणस्यापीति** ॥ आदित्येऽनुक्त-लिङ्गमप्यन्यथासिद्धमित्याह – **सर्वपदेनेति** ॥ सर्वपदेन तद्ग्रहणे बाधिकाया आदित्यस्य सर्वगतताया अभावादित्यर्थः ।




ಆದಿತ್ಯಲಿಂಗಗಳು ವಿಷ್ಣುವಿನಲ್ಲಿಯೇ ಇವೆಯೆಂದು ಸಮರ್ಥಿಸಿದ್ದಾಯಿತು. ಪ್ರಕೃತ ಆದಿತ್ಯಲಿಂಗಗಳ ಬಲದಿಂದ ಸೂರ್ಯ ಮೊದಲಾದ ಶಬ್ದಗಳು ಆದಿತ್ಯನನ್ನೇ ಪ್ರತಿಪಾದಿಸುತ್ತವೆಂಬುದನ್ನು ನಿರಾಕರಿಸುತ್ತಿದ್ದಾರೆ. ಯಾವ ಮಂತ್ರವು ಸೂರ್ಯನನ್ನು ಪ್ರತಿಪಾದಿಸುತ್ತದೆಂದು ನೀವು ಹೇಳುತ್ತಿದ್ದೀರೋ ಅದೇ ಮಂತ್ರದಲ್ಲಿ ವಿಷ್ಣುವಿನ ಅಸಾಧಾರಣ ಲಿಂಗವೆನಿಸಿದ ಸಕಲಜಗನ್ನಿಯಾಮಕತ್ವವು ಕೇಳಿಸುತ್ತಿದೆ. ಆದ್ದರಿಂದ ಸೂರ್ಯಮಂತ್ರವು ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತಿದೆ. ಸಕಲ ದೇವತೆಗಳಿಗೆ ಕಣ್ಣಿನಂತಿರುವ ವಿಷ್ಣುವೇ 'ಚಕ್ಷುಃ' ಎನಿಸುತ್ತಾನೆ.

ಎಲ್ಲವನ್ನು ನೋಡುವ ಶಕ್ತಿಯುಳ್ಳವನಾದ್ದರಿಂದ ಅಥವಾ ಚಕ್ಷುರಾದಿ ಸಮಸ್ತ ಇಂದ್ರಿಯಗಳಿಗೆ ಸ್ವಾಮಿಯಾದ್ದರಿಂದ ವಿಷ್ಣುವೇ ಚಕ್ಷುರ್ಮಯನಾಗಬೇಕು. ಜೀವನಲ್ಲಿ ಇಂತಹ ಚಕ್ಷುರ್ಮಯತ್ವವು ಬರಲು ಸಾಧ್ಯವಿಲ್ಲ.

ಸರ್ವಗತನಾದ ವಿಷ್ಣುವಿನಲ್ಲಿ ಅಲ್ಪದೇಶಸ್ಥಿತತ್ವವನ್ನು ಹೇಳುವುದು ವಿರುದ್ಧವೆಂದು ಹಿಂದೆ ಆಕ್ಷೇಪಿಸಲಾಗಿತ್ತು. ಇದೂ ಸಹ ತಪ್ಪು. ಒಂದು ವೇಳೆ ಸೂತ್ರಕಾರರು ಅಲ್ಪದೇಶದಲ್ಲಿ ಮಾತ್ರ ಇದ್ದಾನೆಂದು ಹೇಳಿದ್ದರೆ ನಿಮ್ಮ ಮಾತು ಸರಿಯಾಗುತ್ತಿತ್ತು. ಸರ್ವದೇಶದಲ್ಲಿರಬೇಕಾದರೆ ಅಲ್ಪದೇಶದಲ್ಲಿ ಇರಲೇಬೇಕು. ಅಲ್ಪದೇಶದಲ್ಲಿಯೇ ಇರದವನು ಸಕಲದೇಶದಲ್ಲಿ ಇರಲು ಹೇಗೆ ಸಮರ್ಥನಾಗುತ್ತಾನೆ ? ನೂರು ರೂಪಾಯಿಗಳು ಇರಬೇಕಾದರೆ ಹತ್ತು ರೂಪಾಯಿ ಇರಲೇಬೇಕಲ್ಲವೇ? ಆದ್ದರಿಂದ ಭಗವಂತನು ಅಲ್ಪದೇಶವೆನಿಸಿದ ಹೃದಯದಲ್ಲೂ ಇದ್ದಾನೆ. ವಿಶಾಲವಾದ ಜಗತ್ತಿನಲ್ಲಿಯೂ ವ್ಯಾಪಿಸಿದ್ದಾನೆ. ಯಾವುದೇ ವಿರೋಧಕ್ಕೆ ಇಲ್ಲಿ ಅವಕಾಶವಿಲ್ಲ.



• • • • •

ಸರ್ವಗತತ್ವಾಧಿಕರಣ (೧-೨-೧)

ಸ್ವಪಕ್ಷದಲ್ಲಿ ಸಾಧಕ ಪ್ರಮಾಣಗಳೂ ಸಹ ಇವೆ

**तात्पर्यचन्द्रिका**

**श्रुतौ भूतपदस्य च तत्रोपासनार्थत्वात्सर्वपदेन च आदित्यस्यापि ग्रहणसम्भवेन आदित्य अनुक्तत्वाभावात्, उक्तरीत्या च बाधकाभोवन ब्रह्मशब्दस्याश्रुतत्वादेश्च अमुख्यत्वायोगात्,**

**भाष्योक्तश्रुत्यादिषु च ब्रह्मशब्दस्य विष्णावेव प्रसिद्धत्वात्, प्रसिद्धसम्भवे च अप्रसिद्धग्रहणायोगस्य सौत्रप्रसिद्धपदेन सूचनात्,**

**ब्रह्मशब्दस्य जीवरूपामुख्यार्थत्वे च जीवादन्यस्य मुख्यब्रह्मणो विष्णोरमुख्यब्रह्मणश्च जात्यादेः सत्त्वेन अन्यसम्बन्धनिराकरणासम्भवेन अवधारणायोगात्, ईश्वररूपमुख्यार्थत्वे चान्यस्य मुख्यस्य ब्रह्मणोऽसत्त्वेनान्य-सम्बन्धनिराकरणसम्भवात्,**

**भाष्योक्तश्रुत्यादौ च सावधारणब्रह्मशब्दस्य विष्णावेव प्रयोगदर्शनेन इहापि तेन तस्यैव प्रत्यभिज्ञानात्, ''ब्रह्मेत्याचक्षते'' इत्यनेनोक्तप्रसिद्धेश्च ब्रह्मशब्दार्थ-त्वेनाप्रसिद्धजीवपरत्वेऽनुपपत्तेः,**

**अश्रुतत्वादेश्च उपसंहारस्थत्वेन बलवात्त्वत्तदनुसारेणोपक्रमस्थादित्य श्रुतेरर्भकौकस्त्वादिलिङ्गानां च नेतव्यत्वात्,**

ಅನುವಾದ - 'ಸರ್ವೇಷು ಭೂತೇಷು' ಎಂಬ ಶ್ರುತಿಯಲ್ಲಿ ಭೂತಪದವನ್ನು ಉಪಾಸನೆಗೋಸ್ಕರ ಪ್ರಯೋಗಿಸಲಾಗಿದೆ. ಆದ್ದರಿಂದ ಭೂತಪದಾರ್ಥಗಳಲ್ಲಷ್ಟೇ ಆದಿತ್ಯನು ಇರುತ್ತಾನೆಂದು ಶ್ರುತಿ ಹೇಳುತ್ತಿಲ್ಲ. ಮತ್ತು ಶ್ರುತಿಯಲ್ಲಿರುವ ಸರ್ವಪದದಿಂದಲೇ ಆದಿತ್ಯನನ್ನು ಸ್ವೀಕರಿಸಬಹುದಾದ್ದರಿಂದ 'ಆದಿತ್ಯೇ ಅನುಕ್ತತ್ವ' ಎಂಬ ಲಿಂಗವು ಸೂರ್ಯನಲ್ಲಿ ಹೇಳಲಾಗದು.

ಇದುವರೆಗೂ ಸಮರ್ಥಿಸಿದ ಪ್ರಕಾರ ಸಂವತ್ಸರಸಾರತ್ವವೇ ಮೊದಲಾದ ಪೂರ್ವಪಕ್ಷ ಲಿಂಗಗಳು ವಿಷ್ಣುವಿನ ವಿಷಯದಲ್ಲಿ ಬಾಧಕವಾಗದ ಕಾರಣ ಬ್ರಹ್ಮಶಬ್ದಕ್ಕಾಗಲೀ, ಅಶ್ರುತತ್ವಾದಿ ಲಿಂಗಗಳಿಗಾಗಲಿ ಅಮುಖ್ಯಾರ್ಥವನ್ನು ಹೇಳಬೇಕಾಗಿಲ್ಲ. ಭಾಷ್ಯದಲ್ಲಿ ಉದಾಹರಿಸಿದ ಶ್ರುತ್ಯಾದಿಗಳಲ್ಲಿರುವ ಬ್ರಹ್ಮಶಬ್ದವು

ವಿಷ್ಣುವಿನಲ್ಲೇ ಪ್ರಸಿದ್ಧವಾಗಿದೆ. ಪ್ರಸಿದ್ಧಾರ್ಥವನ್ನೇ ಸ್ವೀಕರಿಸಲು ಬರುವಾಗ ಅಪ್ರಸಿದ್ಧಾರ್ಥವನ್ನು ಸ್ವೀಕರಿಸುವುದು ತಪ್ಪು. ಈ ವಿಷಯವನ್ನು 'ಸರ್ವತ್ರಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿರುವ ಪ್ರಸಿದ್ಧಪದದಿಂದ ಸೂಚಿಸಿದ್ದಾರೆ.

ಬ್ರಹ್ಮಶಬ್ದದಿಂದ ಜೀವನೆಂಬ ಅಮುಖ್ಯಾರ್ಥವನ್ನೂ ಸಹ ಸ್ವೀಕರಿಸಲಾಗದು. ಏಕೆಂದರೆ ಬ್ರಹ್ಮಶಬ್ದಕ್ಕೆ ಜೀವನಿಗಿಂತ ಭಿನ್ನನಾದ ಮುಖ್ಯಬ್ರಹ್ಮನೆನಿಸಿದ ವಿಷ್ಣುವನ್ನೂ ಸಹ ಬ್ರಹ್ಮಶಬ್ದದಿಂದ ಸ್ವೀಕರಿಸಬಹುದು. ಮತ್ತು ಅಮುಖ್ಯಬ್ರಹ್ಮನೆನಿಸಿದ ಜಾತ್ಯಾದಿಗಳನ್ನೂ ಸಹ ಸ್ವೀಕರಿಸಬಹುದು. ಒಂದು ವೇಳೆ ಜೀವನೆಂಬ ಅಮುಖ್ಯಾರ್ಥವನ್ನು ಹೇಳಿದರೆ ಜೀವನು ಮಾತ್ರ ಬ್ರಹ್ಮನಾಗುತ್ತಾನೆಂದು ಶ್ರುತಿಯಲ್ಲಿರುವ ಅವಧಾರಣಕ್ಕೆ ಅರ್ಥವನ್ನು ಹೇಳಲಾಗದು. ಒಂದು ವೇಳೆ ಈಶ್ವರನೆಂಬರ್ಥವನ್ನು ಹೇಳಿದರೆ ಈಶ್ವರನೇ ಮುಖ್ಯಾರ್ಥನಾದ್ದರಿಂದ ಈಶ್ವರನನ್ನು ಬಿಟ್ಟು ಬೇರೆ ಮುಖ್ಯಬ್ರಹ್ಮ ಪದಾರ್ಥವು ಇಲ್ಲದ ಕಾರಣ ಶ್ರುತಿಯಲ್ಲಿರುವ ಅವಧಾರಣದಿಂದ ಅನ್ಯಸಂಬಂಧವನ್ನು ನಿರಾಕರಿಸಬಹುದು.

ಮತ್ತು ಭಾಷ್ಯದಲ್ಲಿ ಉದಾಹರಿಸಿದ 'ತದೇವ ಬ್ರಹ್ಮ' ಇತ್ಯಾದಿಯಾಗಿ ಅವಧಾರಣದಿಂದ ಕೂಡಿರುವ ಬ್ರಹ್ಮಶಬ್ದವನ್ನು ವಿಷ್ಣುವಿನಲ್ಲಿಯೇ ಪ್ರಯೋಗಿಸುವುದು ಕಂಡಿದೆ. ಅದರಂತೆ ಇಲ್ಲಿಯೂ ಸಹ ಅದೇ ಬ್ರಹ್ಮಶಬ್ದದಿಂದ ಪ್ರತ್ಯಭಿಜ್ಞಾನವು ಬರುವುದರ ಜೊತೆಗೆ ''ಬ್ರಹ್ಮೇತ್ಯಾಚಕ್ಷತೇ'' ಎಂಬುದಾಗಿ ಜ್ಞಾನಿಗಳ ಪ್ರಸಿದ್ಧಿಯೂ ಸಹ ವಿಷ್ಣುವಿನಲ್ಲಿಯೇ ಇರುತ್ತದೆ. ಆದ್ದರಿಂದ ಮುಖ್ಯಾರ್ಥನೆನಿಸಿದ ವಿಷ್ಣುವೇ ಬ್ರಹ್ಮಶಬ್ದಾರ್ಥನೆಂದು ಹೇಳಲು ಬರುವಾಗ ಅಪ್ರಸಿದ್ಧವಾದ ಜೀವವೆಂಬರ್ಥವನ್ನು ಹೇಳುವುದು. ಅನುಪಪನ್ನವಾಗಿದೆ.

ಮತ್ತು ವಿಷ್ಣುವಿನ ಲಿಂಗವೆನಿಸಿದ ಅಶ್ರುತತ್ವಾದಿಗಳು ಉಪಸಂಹಾರದಲ್ಲಿರುವುದರಿಂದ ಬಲಿಷ್ಠವಾಗಿವೆ. ಈ ಲಿಂಗಗಳಿಗೆ ಅನುಸಾರಿಯಾಗಿ ಉಪಕ್ರಮದಲ್ಲಿರುವ ಆದಿತ್ಯಶ್ರುತಿಯನ್ನು ಹಾಗೂ ಅರ್ಭಕೌಕಸ್ತ್ವ ಲಿಂಗವನ್ನು ವಿಷ್ಣುವಿನಲ್ಲೇ ಸಮನ್ವಯಗೊಳಿಸಬೇಕು.

### ಕಠಿಣಪದಾರ್ಥ

ಶ್ರುತೌ = 'ಸರ್ವೇಷು ಭೂತೇಷು' ಎಂಬ ಶ್ರುತಿಯಲ್ಲಿ, ಉಕ್ತರೀತ್ಯಾ = ಹಿಂದೆ ಹೇಳಿದಂತೆ ಸಂವತ್ಸರಸಾರತ್ವಾದಿಗಳು ವಿಷ್ಣುವಿನಲ್ಲಿ ಸಮನ್ವಯವಾಗುವುದರಿಂದ. ಭಾಷ್ಯೋಕ್ತ ಶ್ರುತ್ಯಾದಿಷು = ''ತದೇವ ಬ್ರಹ್ಮ, ಪರಮಂ ಯೋ ಮಹದ್ ಬ್ರಹ್ಮ'' ಇತ್ಯಾದಿ ಶ್ರುತಿಗಳಲ್ಲಿ, ಬ್ರಹ್ಮಶಬ್ದಸ್ಯ = ಅವಧಾರಣದಿಂದ ಕೂಡಿರುವ ಬ್ರಹ್ಮಶಬ್ದವು, ಭಾಷ್ಯೋಕ್ತ ಶ್ರುತ್ಯಾದೌ = ಏಷ ಏವ ಬ್ರಹ್ಮ ಇತ್ಯಾದಿ ಶ್ರುತಿಗಳಲ್ಲಿ, ಸಾವಧಾರಣ ಬ್ರಹ್ಮಶಬ್ದಸ್ಯ = ''ತದೇವ ಬ್ರಹ್ಮ'' ಎಂಬಲ್ಲಿರುವ ಬ್ರಹ್ಮಶಬ್ದಕ್ಕೆ, ತಸ್ಯೈವ = ವಿಷ್ಣುವೇ, ಉಕ್ತ ಪ್ರಸಿದ್ಧೇಃ = ಜ್ಞಾನಿಗಳ ಪ್ರಸಿದ್ಧಿಯಿರುವುದರಿಂದ.

**प्रकाशः** – ननूक्तमत्र भूतपदोपादानात्तन्मात्रस्थत्वं सिध्यति, अन्यथा तद्व्यर्थमिति, तत्राह – **श्रुताविति** ।

**भूतपदस्य चेति ।** एतेन ''निचाय्यत्वात्'' इति सूत्रांशटीकायामर्भकौकस्त्वपदेन भूतावस्थितत्वं ग्राह्यम्, नतु भूतमात्रावस्थितत्वमिति सूचितम् ।

यदप्यादित्येऽनुक्तत्वं आदित्यप्रापकमिति, तत्प्राक् परिहर्तव्यमपि प्रसङ्गादत्र परिहरति – **सर्वेति ।**

ವಿವರಣೆ - ಹಿಂದೆ ಪೂರ್ವಪಕ್ಷವನ್ನು ಮಾಡುವಾಗ ಮತ್ತೊಂದು ಬಾಧಕವನ್ನು ಆಕ್ಷೇಪಿಸಿದ್ದರು - 'ಸರ್ವೇಷು ಭೂತೇಷು' ಎಂಬ ಶ್ರುತಿಯಲ್ಲಿ ಭೂತಪದವನ್ನು ಪ್ರಯೋಗಿಸಿದ್ದರಿಂದ ಆದಿತ್ಯನೆನಿಸಿದವನು ಭೂತಪದಾರ್ಥಗಳಲ್ಲಷ್ಟೇ ಇರುತ್ತಾನೆಂದು ತಿಳಿಯುತ್ತದೆ. ಬೇರೆ ಕಡೆಯೂ ಆದಿತ್ಯನು ಇರುವುದಾದರೆ ಶ್ರುತಿಯಲ್ಲಿ ಭೂತಪದವನ್ನು ಪ್ರಯೋಗಿಸಿದ್ದು ವ್ಯರ್ಥವಾಗುತ್ತದೆಂದು ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ 'ಶ್ರುತೌ' ಇತ್ಯಾದಿ ಗ್ರಂಥವು ಹೊರಟಿದೆ.

ಗ್ರಂಥದಲ್ಲಿ 'ಭೂತಪದಸ್ಯ ಚ' ಎಂದು ಹೇಳಿದ್ದರಿಂದ ಇದು ತಿಳಿಯುತ್ತದೆ. 'ನಿಚಾಯ್ಯತ್ವಾತ್' ಎಂಬ ಸೂತ್ರಭಾಗದ ಟೀಕೆಯಲ್ಲಿ ಅರ್ಭಕೌಕಸ್ತ್ವಪದದಿಂದ ಸಕಲಭೂತಗಳಲ್ಲಿಯೂ ಉಪಾಸನೆ ಮಾಡಬೇಕೆಂಬರ್ಥವನ್ನು ಸ್ವೀಕರಿಸಬೇಕು. ಕೇವಲ ಭೂತಪದಾರ್ಥಗಳಲ್ಲಿರುತ್ತಾನೆಂಬರ್ಥಗಳನ್ನು ತಿಳಿಯಬಾರದೆಂದು ಸೂಚಿಸಿದಂತಾಯಿತೆಂದು.

ಪೂರ್ವಪಕ್ಷ ಮಾಡುವ ಆದಿತ್ಯೇ ಅನುಕ್ತತ್ವ ಎಂಬ ಮತ್ತೊಂದು ಲಿಂಗವನ್ನು ಹೇಳಿದ್ದರು. ಈ ಲಿಂಗವನ್ನು ಈ ಹಿಂದೆಯೇ ನಿರಾಕರಿಸಬೇಕಿತ್ತು. ಆದರೆ ಪ್ರಸಂಗವಶಾತ್ ಇಲ್ಲಿ ಪರಿಹರಿಸುತ್ತಿದ್ದಾರೆ 'ಸರ್ವ' ಇತ್ಯಾದಿ ವಾಕ್ಯದಿಂದ.

**प्रकाशः** – ननूक्तमत्र विशिष्याऽऽदित्येऽनुक्तत्वलिङ्गादितीति चेन्न,

''सर्वप्राणिषु संस्थितः । सर्वनामाभिधेयः

इति स्मृत्याऽऽदित्यगतस्यैवादित्यनामवत्त्वोक्तेः'' इति टीकोक्तरीत्या च ''यश्चासावादित्ये'' इत्यादिना लब्धत्वादिति तात्पर्यात् । तत्राऽऽदित्यस्थत्वमस्पष्टमित्येवं समाधानमुक्तम् ।

ಶಂಕೆ - ಶ್ರುತಿಯಲ್ಲಿ ಚಂದ್ರ ನಕ್ಷತ್ರಾದಿಗಳಲ್ಲಿ ಸರ್ವಗತನೆಂದು ಖುದ್ದಾಗಿ ಹೇಳಿ ಆದಿತ್ಯನಲ್ಲಿದ್ದಾನೆಂದು ಹೇಳದ ಕಾರಣ ವಿಶಿಷ್ಯಾಽಽದಿತ್ಯೇಽನುಕ್ತತ್ವಲಿಂಗಗಳನ್ನು ಪೂರ್ವಪಕ್ಷದಲ್ಲಿ ಸಮರ್ಥಿಸಿದ್ದಾರಲ್ಲವೇ?

ಸಮಾಧಾನ - ''ಸರ್ವಪ್ರಾಣಿಷು ಸಂಸ್ಥಿತಃ । ಸರ್ವನಾಮಾಭಿಧೇಯಃ'' ಇತ್ಯಾದಿ ಶ್ರುತಿಯಂತೆ ಆದಿತ್ಯನಲ್ಲಿರುವ ವಿಷ್ಣುವೂ ಸಹ ಆದಿತ್ಯವೆಂಬ ನಾಮವನ್ನೇ ಧರಿಸಿದ್ದಾನೆ. ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಅದರ ಪ್ರಕಾರ ''ಯಶ್ಚಾಸಾವಾದಿತ್ಯೇ'' ಎಂಬುದರಿಂದ ಆದಿತ್ಯನು ಪ್ರಸಕ್ತನಾಗಿದ್ದಾನೆ. ಹಾಗಾದರೆ

"ಆದಿತ್ಯೇ ಅನುಕ್ತಿ" ಎಂಬ ಪೂರ್ವಪಕ್ಷಲಿಂಗಕ್ಕೆ ಇದೇ ಸಮಾಧಾನವನ್ನು ಹೇಳಬಹುದಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ ಆದಿತ್ಯನಾಮವತ್ತ್ವೋಪಪತ್ತಿಯಿಂದ ಆದಿತ್ಯಸ್ಥಿತತ್ವವು ಸ್ಪಷ್ಟವಾಗಿ ತಿಳಿಯುವುದಿಲ್ಲ. ಅದಕ್ಕೋಸ್ಕರ ಗ್ರಂಥಕಾರರು ಈ ಸಮಾಧಾನವನ್ನು ಹೇಳದೆ ಸರ್ವಪದದಿಂದ ಆದಿತ್ಯನನ್ನು ಸಂಗ್ರಹಿಸಲಾಗಿದೆ ಎಂದು ಹೇಳಿದ್ದಾರೆ.

**प्रकाशः** – एवं ''अर्भकौकस्त्वात्'' इति सूत्रे निरवकाशत्वादिनाऽऽदित्यश्रुत्यादितो बलवत्त्वेन प्राधान्यादन्योपलक्षकत्वेनोपात्तस्यार्भकौकस्त्वस्य समाधानेन तदुपलक्षितानां संवत्सरसारत्वादीनां सौत्रपदोपात्तानां चादित्यादिप्रापकाणां स्वपक्षबाधकानां समाधानस्य 'व्योमवन्निचाय्यत्वात्' इति सूत्रांशलब्धस्योक्त्या तद्विवृत्तिपरटीकां व्याख्याय,

इदानीं ''प्रसिद्धोपदेशात्'' ''विवक्षितगुणोपपत्तेश्च'' ''शब्दविशेषात्'' इत्यादिसूत्रोक्तश्रुतिलिङ्गादिरूपस्य स्वपक्षसाधकस्य सत्त्वादत्रोक्तस्सर्वगतो विष्णुरिति भावेन तत्तत्सूत्रटीकां विवृण्वंस्तेषां पूर्ववाद्युक्तममुख्यत्वं परिहृत्य निरवकाशत्वमाह – **उक्तरित्येति** ।

ಸೂತ್ರಕಾರರು ಅರ್ಭಕೌಕಸ್ತ್ವವೆಂಬ ಒಂದೇ ಬಾಧಕವನ್ನು ಹೇಳಿದ್ದಾರೆ. ಸಂವತ್ಸರಸಾರತ್ವ "ಯಚ್ಛಬ್ದೋಪಬಂಧತ್ವ" ಮೊದಲಾದವುಗಳನ್ನೆಲ್ಲ ಉಪಲಕ್ಷಣಯಾ ತೆಗೆದುಕೊಂಡಿದ್ದಾರೆ. ಅನ್ಯೋಪಲಕ್ಷಣತ್ವೇನ ಅರ್ಭಕೌಕಸ್ತ್ವವನ್ನೇ ಏಕೆ ತೆಗೆದುಕೊಂಡಿದ್ದಾರೆ? ಸಂವತ್ಸರಸಾರತ್ವಾದಿಗಳನ್ನೇ ಅನ್ಯೋಪಲಕ್ಷಣತ್ವೇನ ತೆಗೆದುಕೊಳ್ಳಬಹುದಿತ್ತಲ್ಲವೇ? ಎಂಬ ಪ್ರಶ್ನೆ ಬಂದರೆ ಅರ್ಭಕೌಕಸ್ತ್ವಕ್ಕೆ ಉಳಿದ ಲಿಂಗಗಳಿಗಿಂತ ಪ್ರಧಾನ್ಯವಿದೆ. ಆದಿತ್ಯಶ್ರುತ್ಯಾದಿಗಳಿಗಿಂತ ಈ ಅರ್ಭಕೌಕಸ್ತ್ವವು ನಿರವಕಾಶವಾಗಿರುವುದರಿಂದ ಬಲಿಷ್ಠವಾಗಿದೆ. ಹೀಗೆ ಪ್ರಧಾನವಾದ ಅರ್ಭಕೌಕಸ್ತ್ವವನ್ನು ಸಮಾಧಾನ ಮಾಡಿದ್ದರಿಂದ ಇದರಿಂದ ಉಪಲಕ್ಷಿತವಾದ ಸಂವತ್ಸರಸಾರತ್ವವೇ ಮೊದಲಾದ ಬಾಧಕಗಳನ್ನು ಸಮಾಧಾನ ಮಾಡಿದಂತಾಯಿತು. 'ನಿಚಾಯತ್ವಾತ್' ಎಂಬ ಸೂತ್ರದ ಅಂಶದಿಂದ ತಿಳಿಯುವ ಅರ್ಥವನ್ನು ವಿವರಿಸುವ ಟೀಕೆಯು ಇದೇ ಸಮಾಧಾನವನ್ನೇ ಹೇಳಿದೆ. ಅದನ್ನು ಈಗ ವ್ಯಾಖ್ಯಾನಿಸಿದಂತಾಯಿತು. ಒಟ್ಟು ಸ್ವಪಕ್ಷಬಾಧಕಗಳನ್ನೆಲ್ಲ ನಿರಾಕರಿಸಿದಂತಾಯಿತು.

ಪ್ರಕೃತ ಸ್ವಪಕ್ಷಸಾಧಕವಾದ ಯುಕ್ತಿಗಳನ್ನು ಮತ್ತು ಶ್ರುತಿಗಳನ್ನು ಪ್ರತಿಪಾದಿಸುವ "ಪ್ರಸಿದ್ಧೋಪದೇಶಾತ್" "ವಿವಕ್ಷಿತಗುಣೋಪಪತ್ತೇಶ್ಚ" ಮತ್ತು "ಶಬ್ದವಿಶೇಷಾತ್" ಇತ್ಯಾದಿ ಸೂತ್ರಗಳನ್ನು ವ್ಯಾಖ್ಯಾನಿಸುತ್ತಿದ್ದಾರೆ. ಮತ್ತು ಆ ಸೂತ್ರಗಳ ಟೀಕೆಯನ್ನೂ ಸಹ ವಿವರಿಸುತ್ತಿದ್ದಾರೆ. ಇದರಿಂದ ಶ್ರುತಿಪ್ರತಿಪಾದ್ಯನಾದ ಸರ್ವಗತನಾದವನು ವಿಷ್ಣುವೇ ಎಂದು ನಿರ್ಣಯವಾಗುತ್ತದೆ. ಮತ್ತು ಪೂರ್ವಪಕ್ಷಿಗಳು ವಿಷ್ಣುವಿನ ಲಿಂಗಗಳಿಗೆ ಹೇಳಿದ ಅಮುಖ್ಯತ್ವವನ್ನು ಪರಿಹರಿಸಿ ನಿರವಕಾಶತ್ವವನ್ನು 'ಉಕ್ತರೀತ್ಯಾ' ಇತ್ಯಾದಿ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः** – एतेन स्वपक्षसाधकानि यथासूत्रविन्यासं प्रागुपन्यस्य स्वबाधकभूतानि परसाधकानि पश्चान्निरस्यानि, नतु वैपरीत्यमिति निरस्तम् । तेषां बाधकानां स्वपक्षसाधकानामन्याथासिद्ध्यापादकत्वेन बाधकतया तन्निरासस्यैव प्रथममुपयुक्तत्वात् ।

सूत्रक्रमबीजं तु वक्ष्याम इति भावः ।

अत एवान्ते टीकायां ''एवं ईश्वरपक्षेऽपि विरोधाभावाद्ब्रह्मशब्दस्यामुख्यार्थत्वग्रहणमश्रुतत्वादीनां भाक्तत्वकल्पनमित्यादि निरस्तं भवति'' इत्युक्तम् ।

ಇದರಿಂದ ಮತ್ತೊಂದು ಶಂಕೆಯನ್ನು ಪರಿಹರಿಸಿದಂತಾಯಿತು - ವಸ್ತುತಃ ಗ್ರಂಥಕಾರರು ಸೂತ್ರದ ಕ್ರಮದಂತೆ ಸ್ವಪಕ್ಷಸಾಧಕಗಳನ್ನು ಮೊದಲು ಸಮರ್ಥಿಸಿ ಅನಂತರ ಸ್ವಪಕ್ಷಕ್ಕೆ ಬಾಧಕಗಳಾದ ಪರಪಕ್ಷಕ್ಕೆ ಸಾಧಕಗಳಾದ ಪ್ರಮಾಣಗಳನ್ನು ನಿರಾಕರಿಸಬೇಕು ಹೊರತು ವಿಪರೀತವಾಗಿ ಸಮರ್ಥಿಸಬಾರದಲ್ಲವೇ? ಈ ಶಂಕೆಗೆ ಈಗ ಅವಕಾಶವಿಲ್ಲ. ಏಕೆಂದರೆ ನಾವು ಹೇಳುವ ಸ್ವಪಕ್ಷಸಾಧಕಪ್ರಮಾಣಗಳನ್ನೆಲ್ಲ ಪೂರ್ವಪಕ್ಷಿಯು ಅಮುಖ್ಯವಾಗಿ ಮಾಡುತ್ತಾನೆ. ಇದಕ್ಕೆ ಕಾರಣವೇನೆಂದರೆ 'ಸಂವತ್ಸರಸಾರತ್ವ' ಮೊದಲಾದ ಬಾಧಕಪ್ರಮಾಣಗಳು. ಆದ್ದರಿಂದ ನಾವು ಸ್ವಪಕ್ಷಸಾಧಕಗಳಿಗೆ ಅನ್ಯಥಾಸಿದ್ಧ್ಯಾಪಾದಕವಾದ ಬಾಧಕಗಳನ್ನು ಮೊದಲು ನಿರಾಕರಿಸಿದರೆ ಸ್ವಪಕ್ಷಸಾಧಕಗಳನ್ನು ಸುಲಭವಾಗಿ ಸಮರ್ಥಿಸಬಹುದು. ಈ ಉದ್ದೇಶದಿಂದ ಗ್ರಂಥಕಾರರು ಮೊದಲೇ ಸ್ವಪಕ್ಷ ಸಾಧಕಗಳನ್ನು ಸಮರ್ಥಿಸಲು ಹೊರಟಿಲ್ಲ.

ಹಾಗಾದರೆ ಸೂತ್ರಕಾರರೂ ಸಹ ಮೊದಲು ಪರಪಕ್ಷಬಾಧಕಗಳನ್ನೇ ನಿರಾಕರಿಸಬೇಕಿತ್ತಲ್ಲವೇ? ಎಂದು ಶಂಕಿಸಬಾರದು. ಸೂತ್ರಕಾರರು ಯಾವ ಕಾರಣಕ್ಕಾಗಿ ಕ್ರಮವನ್ನು ಅನುಸರಿಸಿದ್ದಾರೆಂಬುದನ್ನು ಮುಂದೆ ಸಮರ್ಥಿಸುತ್ತೇವೆ.

ಆದ್ದರಿಂದಲೇ ಟೀಕೆಯ ಕೊನೆಯಲ್ಲಿಯೂ ಈ ಮಾತು ಕಾಣಿಸುತ್ತಿದೆ - "ಏವಂ ಈಶ್ವರಪಕ್ಷೇಽಪಿ ವಿರೋಧಾಭಾವಾದ್‌ಬ್ರಹ್ಮಶಬ್ದಸ್ಯಾಮುಖ್ಯಾರ್ಥತ್ವಗ್ರಹಣಮಶ್ರುತತ್ವಾದೀನಾಂ ಭಾಕ್ತತ್ವಕಲ್ಪನಮಿತ್ಯಾದಿ ನಿರಸ್ತಂ ಭವತಿ'' "ಈಶ್ವರಪಕ್ಷದಲ್ಲಿ ವಿರೋಧವಿಲ್ಲದ್ದರಿಂದ ಬ್ರಹ್ಮಶಬ್ದಕ್ಕೆ ಅಮುಖ್ಯಾರ್ಥವನ್ನು ಸ್ವೀಕರಿಸಿ ಅಶ್ರುತತ್ವಾದಿಗಳಿಗೆ ಗೌಣಾರ್ಥವನ್ನು ಕಲ್ಪನೆ ಮಾಡಬೇಕೆಂಬುದನ್ನು ನಿರಾಕರಿಸಿದಂತಾಯಿತು'' ಎಂದು.

**प्रकाशः** – **ब्रह्मशब्दस्येति** । आद्यसूत्रोक्तस्य ब्रह्मशब्दस्य द्वितीयोक्तस्याश्रुतत्वादिलिङ्गस्य चेत्यर्थः । अत्रापि पञ्चम्यन्तप्रधानहेतूनां 'सर्वगतो विष्णुरेव' इति साध्येनान्वयः ।

''ब्रह्मशब्दस्य श्रुत्यादौ नारायण एव प्रसिद्धत्वात्'' इति टीकां व्यनक्ति – **भाष्योक्तेति** । ''तदेव ब्रह्म परमं कवीनाम्'' ''परमं यो महद्ब्रह्म'' इत्यादिष्वित्यर्थः।

ಗ್ರಂಥದಲ್ಲಿ 'ಬ್ರಹ್ಮಶಬ್ದಸ್ಯ ವಿಷ್ಣಾವೇವ' ಇತ್ಯಾದಿಯಾಗಿ ಹೇಳಿದ್ದಾರೆ. ಇದಕ್ಕೆ ಪ್ರಥಮ ಸೂತ್ರದಲ್ಲಿ ಹೇಳಲ್ಪಟ್ಟ ಬ್ರಹ್ಮಶಬ್ದ, ದ್ವಿತೀಯ ಸೂತ್ರದಲ್ಲಿ ಹೇಳಲ್ಪಟ್ಟ ಅಶ್ರುತತ್ವಾದಿಲಿಂಗಗಳು ಎಂದರ್ಥ. ಇಲ್ಲಿಯೂ ಸಹ ಗ್ರಂಥದಲ್ಲಿ ಪಂಚಮ್ಯಂತವಾದ ಪ್ರಧಾನ ಹೇತುಗಳಿಗೆ 'ಸರ್ವಗತೋ ವಿಷ್ಣುರೇವ' ಎಂಬ ಸಾಧ್ಯದಲ್ಲಿ ಅನ್ವಯ ಮಾಡಬೇಕು. ಅವಾಂತರ ಹೇತುಗಳಿಗೆ ಅನ್ವಯವನ್ನು ತಿಳಿಯಬಾರದು.

"ಬ್ರಹ್ಮಶಬ್ದಸ್ಯ ಶ್ರುತ್ಯಾದೌ ನಾರಾಯಣೇ ಏವ ಪ್ರಸಿದ್ಧತ್ವಾತ್" ಬ್ರಹ್ಮಶಬ್ದವು ಶ್ರುತ್ಯಾದಿಗಳಲ್ಲಿ ನಾರಾಯಣನಲ್ಲೇ ಪ್ರಸಿದ್ಧವಾಗಿದೆ ಎಂಬ ಟೀಕೆಯನ್ನು 'ಭಾಷ್ಯೋಕ್ತ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. "ತದೇವ ಬ್ರಹ್ಮ ಪರಮಂ ಕವೀನಾಂ" "ಪರಮಂ ಯೋ ಮಹದ್ಬ್ರಹ್ಮ" ಇತ್ಯಾದಿ ಶ್ರುತಿಗಳಲ್ಲಿ ಎಂದರ್ಥ.

**प्रकाशः – प्रसिद्धेति** । अन्यथा ब्रह्मशब्दोपदेशादित्येव ब्रूयादिति भावः ।

यद्यपि लोकतो जीवादावपि प्रसिद्धिः, तथाऽपि वैदिकप्रसिद्धियुक्तस्यैवोपादानमिति भावः । ननु "श्रुत्वाऽप्येनं वेद नचैव कश्चित्" इति जीवस्याप्यश्रुत्वाद्युपपत्तेश्चक्षुर्मयत्वादिवशेन ब्रह्मशब्दो जीवेऽमुख्यः किं न स्यादित्यतः "शब्दविशेषात्" इति सूत्रभाष्यटीकाभिप्रायं व्यनक्ति – **ब्रह्मशब्दस्येति** ।

'ಪ್ರಸಿದ್ಧ' ಎಂಬ ಗ್ರಂಥಕ್ಕೆ ಹೀಗರ್ಥ - ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಪ್ರಸಿದ್ಧವಾದ್ದರಿಂದಲೇ ಸೂತ್ರದಲ್ಲಿ ಪ್ರಸಿದ್ಧಪದವನ್ನು ಪ್ರಯೋಗಿಸಿದ್ದಾರೆ. ಇಲ್ಲದಿದ್ದರೆ 'ಬ್ರಹ್ಮಶಬ್ದೋಪದೇಶಾತ್' ಎಂದೇ ಹೇಳುತ್ತಿದ್ದರು.

ವಸ್ತುತಃ ಜೀವಾದಿಗಳಲ್ಲಿಯೂ ಬ್ರಹ್ಮಶಬ್ದದ ಲೋಕಪ್ರಸಿದ್ಧಿ ಇದೆ. ಆದರೆ ವೈದಿಕಪ್ರಸಿದ್ಧಿಯನ್ನಷ್ಟೇ ಇಲ್ಲಿ ಅನುಸರಿಸಬೇಕು.

ಶಂಕೆ - "ಶ್ರುತ್ವಾऽಪ್ಯೇನಂ ವೇದ ನಚೈವ ಕಶ್ಚಿತ್" ಎಂಬಲ್ಲಿ ಜೀವನಲ್ಲಿಯೂ ಅಶ್ರುತತ್ವಾದಿಗಳನ್ನು ಕೂಡಿಸಬಹುದು. ಆದ್ದರಿಂದ ಚಕ್ಷುರ್ಮಯತ್ವಾದಿಲಿಂಗಗಳ ಬಲದಿಂದ ಅಮುಖ್ಯನಾದ ಜೀವನನ್ನು ಬ್ರಹ್ಮಶಬ್ದದಿಂದ ಏಕೆ ಸ್ವೀಕರಿಸಬಾರದು ?

ಸಮಾಧಾನ - 'ಶಬ್ದವಿಶೇಷಾತ್' ಎಂಬ ಸೂತ್ರದಲ್ಲಿ ಬ್ರಹ್ಮಶಬ್ದದಲ್ಲಿ ಅವಧಾರಣವೆಂಬ ವಿಶೇಷವಿರುವುದರಿಂದ ಜೀವನನ್ನು ಸರ್ವಥಾ ಸ್ವೀಕರಿಸಲು ಸಾಧ್ಯವಿಲ್ಲವೆಂದು ಸಮರ್ಥಿಸಿದ್ದಾರೆ. ಆ ಸೂತ್ರದ ಟೀಕಾಭಿಪ್ರಾಯವನ್ನು 'ಬ್ರಹ್ಮಶಬ್ದಸ್ಯ' ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – "सावधारणब्रह्मशब्दवाच्यत्वे मुख्यब्रह्मत्वं स्यात् । नच तज्जीवस्योपपद्यते" इति टीकोक्तमुपपादयति – **जीवरूपेति** । जीवरूपामुख्यार्थत्वे "एतमेव" इत्यवधारणं अन्यस्य मुख्यवृत्त्या ब्रह्मशब्दार्थत्वं वाऽमुख्यवृत्त्या तदर्थत्वं वा व्यवच्छिन्द्यात् । न द्वयमपि युक्तं, तथाभूतस्य ब्रह्मादेस्सत्त्वादित्यर्थः ।

"ಸಾವಧಾರಣಬ್ರಹ್ಮಶಬ್ದವಾಚ್ಯತ್ವೇ ಮುಖ್ಯಬ್ರಹ್ಮತ್ವಂ ಸ್ಯಾತ್ । ನಚ ತಜ್ಜೀವಸ್ಯೋಪಪದ್ಯತೇ" ಅವಧಾರಣದಿಂದ ಕೂಡಿರುವ ಬ್ರಹ್ಮಶಬ್ದದಿಂದ ವಾಚ್ಯನಾಗುವುದಾದರೆ ಮುಖ್ಯಬ್ರಹ್ಮನೇ ಆಗಬೇಕು. ಇದು ಜೀವನಲ್ಲಿ ಕೂಡುವುದಿಲ್ಲ ಎಂದು ಟೀಕೆಯಲ್ಲಿ ಹೇಳಿದ್ದನ್ನು 'ಜೀವರೂಪ ಅಮುಖ್ಯಾರ್ಥತ್ವೇ' ಎಂಬ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. ಅಮುಖ್ಯನಾದ ಜೀವನನ್ನು ಬ್ರಹ್ಮಶಬ್ದದಿಂದ ವಿವಕ್ಷಿಸಿದರೆ 'ಏತಮೇವ' ಎಂಬಲ್ಲಿರುವ ಅವಧಾರಣಕ್ಕೆ ಮತ್ತೊಬ್ಬನು ಮುಖ್ಯವೃತ್ತಿಯಿಂದ ಪ್ರತಿಪಾದ್ಯನೆಂಬುದನ್ನು ನಿರಾಕರಿಸಬೇಕು. ಅಥವಾ ಮತ್ತೊಬ್ಬನು ಅಮುಖ್ಯವೃತ್ತಿಯಿಂದ ಪ್ರತಿಪಾದ್ಯನೆಂಬುದನ್ನು ನಿರಾಕರಿಸಬೇಕು. ಆದರೆ ಎರಡೂ ಸಹ ಕೂಡುವುದಿಲ್ಲ. ಏಕೆಂದರೆ ಬ್ರಹ್ಮಶಬ್ದಕ್ಕೆ ಮುಖ್ಯಾರ್ಥನಾದ ವಿಷ್ಣುವೂ ಇದ್ದಾನೆ, ಅಮುಖ್ಯಾರ್ಥವಾದ ಜಾತ್ಯಾದಿಗಳೂ ಸಹ ಇರುತ್ತವೆಂದು ಅರ್ಥ.

**प्रकाशः – स्वपक्षेऽवधारणं युक्तमित्याह – ईश्वरेति । भाष्योक्तेति ।** "एष उ एव ब्रह्म" इत्यादावित्यर्थः । **प्रसिद्धेश्चेति ।** वृद्धप्रसिद्धेरित्यर्थः ।

पूर्वं श्रौतप्रसिद्धिरुक्तेति भेदज्ञापनाय 'इत्यनेनोक्त' इत्युक्तम् । श्रुतेर्निरवकाशत्वमुक्त्वा लिङ्गस्य तदाह – **अश्रुतत्वादेरिति ।** 'विवक्षित' इति सौत्रपदतात्पर्योक्तिः – **उपसंहारस्थत्वेनेति ।** "तेषाञ्च विष्णोरेव योग्यत्वेन" इति टीकोक्तिरुपलक्षणमिति भावः ।

ಬ್ರಹ್ಮಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನೆಂಬ ಸಿದ್ಧಾಂತದಲ್ಲಿ ಈ ಅವಧಾರಣವು ಯುಕ್ತವಾಗುತ್ತದೆಂದು 'ಈಶ್ವರ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಭಾಷ್ಯೋಕ್ತ ಎಂದರೆ "ಏಷ ಉ ಏವ ಬ್ರಹ್ಮ" ಇತ್ಯಾದಿಗಳಲ್ಲಿ ಎಂದರ್ಥ. 'ಪ್ರಸಿದ್ಧ' ಎಂದರೆ 'ಜ್ಞಾನಿಪ್ರಸಿದ್ಧ' ಎಂದರ್ಥ.

ಮೊದಲು ಹೇಳಿದ್ದು 'ಶ್ರುತಿಪ್ರಸಿದ್ಧಿ' ಎಂಬ ಭೇದವನ್ನು ತಿಳಿಸುವುದಕ್ಕಾಗಿ ಗ್ರಂಥದಲ್ಲಿ 'ಇತ್ಯನೇನೋಕ್ತ' ಎಂಬುದಾಗಿ ಹೇಳಿದ್ದಾರೆ. ಶ್ರುತಿಗೆ ನಿರವಕಾಶತ್ವವನ್ನು ಇಲ್ಲಿಯ ತನಕ ಸಮರ್ಥಿಸಿ ಲಿಂಗಕ್ಕೂ ಸಹ ನಿರವಕಾಶತ್ವವನ್ನು "ಅಶ್ರುತತ್ವಾದೇಃ" ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಸೂತ್ರದಲ್ಲಿರುವ ವಿವಕ್ಷಿತ ಎಂಬ ಪದದ ತಾತ್ಪರ್ಯವನ್ನೇ "ಉಪಸಂಹಾರಸ್ಥತ್ವೇನ" ಎಂಬ ಗ್ರಂಥದಿಂದ ವ್ಯಾಖ್ಯಾನಿಸಿದ್ದಾರೆ. ಇದರಿಂದ "ತೇಷಾಂಚ ವಿಷ್ಣೋರೇವ ಯೋಗ್ಯತ್ವೇನ" ಎಂಬ ಟೀಕೆಯ ಮಾತನ್ನು ಉಪಲಕ್ಷಣವೆಂದು ತಿಳಿಯಬೇಕು.

**गुरुराजीयम्** – सर्वेषु भूतेष्वित्यल्पौकस्त्वमुच्यते । भूतादन्यत्राभावप्रतीतेः । अन्यथा भूतपदवैयर्थ्यं स्यात् । तस्मात्स्वपदेनादित्यग्रहणमयुक्तमित्यत आह – **भूतपदस्येति ॥**

एवं परपक्षे साधकानि निराकृत्य परपक्षे बाधकत्वेनोक्तस्य ब्रह्मश्रुत्यादेः परशङ्कितसावकाशत्वमपाकरोति – **उक्तरीत्येत्यादिना ॥** यदुक्तमेतमेवेत्यवधारणेन

विष्णोरन्यस्यैव सर्वगतत्वाद्विष्णोर्भूतादन्यत्र सत्त्वेपि सर्वगतत्वायोग इत्यादि तदपि निराह – **ब्रह्मशब्दस्येति** ।। एवं प्रथमसूत्रोक्तहेतुमुक्त्वा शब्दविशेषादित्यनेन सूचितां युक्तिमाह – **भाष्योक्तेति** ।। एष उ एवेत्यादिश्रुत्यादौ यद्यपि प्रथमसूत्रोक्तयुक्त्यनन्तरं द्वितीयसूत्रोक्तयुक्तिरेव सङ्गता । तथापि शब्दविशेषादित्यस्य प्रथमसूत्रोक्त-ब्रह्मशब्दोपदेशरूपयुक्त्युपोद्बलकत्वमेव । नतु स्वतन्त्रयुक्तित्वमिति तदानन्तर्यम् । वक्ष्यते चैतत् । द्वितीयसूत्रोक्तं हेतुमाह – **अश्रुतत्वादेश्चेति** ।।



ಹಿಂದೆ ಪೂರ್ವಪಕ್ಷ ಮಾಡುವಾಗ 'ಸರ್ವೇಷು ಭೂತೇಷು' ಎಂಬುದಾಗಿ ಖುದ್ದಾಗಿ ಭೂತಪದವನ್ನು ಬಳಸಿದ್ದರಿಂದ ಭೂತಪದಾರ್ಥದಲ್ಲಷ್ಟೇ ಬ್ರಹ್ಮನಿದ್ದಾನೆಂದು ಹೇಳಬೇಕು ಎಂದು ಆಕ್ಷೇಪಿಸಿದ್ದರು. ಆದರೆ ಉಪಾಸನೆಗೋಸ್ಕರವಷ್ಟೇ ಭೂತಪದವನ್ನು ಬಳಸಲಾಗಿದೆ. ಸಕಲಭೂತಗಳಲ್ಲಿಯೂ ಭಗವಂತನನ್ನು ಉಪಾಸನೆ ಮಾಡಬೇಕು.

ಶ್ರುತಿಯಲ್ಲಿರುವ ಸರ್ವಪದದಿಂದಲೇ ಆದಿತ್ಯನನ್ನು ಸಂಗ್ರಹಿಸಬಹುದಾದ್ದರಿಂದ ಚಂದ್ರ, ನಕ್ಷತ್ರಾದಿಗಳನ್ನು ಹೇಳಿ ಆದಿತ್ಯನನ್ನು ಹೇಳಿಲ್ಲ ಎಂಬ ಶಂಕೆಗೆ ಅವಕಾಶವಿಲ್ಲ.

ಮತ್ತು ವಿಷ್ಣುವಿನ ಲಿಂಗವೆನಿಸಿದ ಬ್ರಹ್ಮಶಬ್ದ ಅಶ್ರುತತ್ವಾದಿಗಳನ್ನು ಅಮುಖ್ಯವೆಂದು ಹೇಳಲಾಗದು. ಏಕೆಂದರೆ ಈಗಾಗಲೇ ಸಮರ್ಥಿಸಿದಂತೆ ಸಂವತ್ಸರಸಾರತ್ವ ಮೊದಲಾದ ಲಿಂಗಗಳು ವಿಷ್ಣುವಿನಲ್ಲೇ ಇರುವುದರಿಂದ.

ಸಕಲ ಶ್ರುತಿಗಳಲ್ಲಿರುವ ಬ್ರಹ್ಮಶಬ್ದವು ವಿಷ್ಣುವಿನಲ್ಲೇ ಪ್ರಸಿದ್ಧವಾಗಿವೆ ಎಂಬುದನ್ನು ಸಮರ್ಥಿಸಲು ಸೂತ್ರದಲ್ಲಿ ಪ್ರಸಿದ್ಧ ಪದವನ್ನು ಪ್ರಯೋಗಿಸಿದ್ದಾರೆ. 'ತದೇವ ಬ್ರಹ್ಮ' ಎಂಬಲ್ಲಿರುವ ಬ್ರಹ್ಮಶಬ್ದವು ಅವಧಾರಣ ಸಹಿತವಾಗಿ ವಿಷ್ಣುವೊಬ್ಬನನ್ನೇ ಬ್ರಹ್ಮನೆನ್ನುತ್ತಿದೆ. ಉಳಿದವರು ಬ್ರಹ್ಮರಲ್ಲವೆಂದೂ ಸಹ ಸಮರ್ಥಿಸುತ್ತಿದೆ. ಈ ಅರ್ಥವನ್ನು ಜೀವಾದಿಗಳು ಬ್ರಹ್ಮರೆಂದು ಒಪ್ಪಿದಾಗ ಹೇಳಲಾಗದು. ಜ್ಞಾನಿಪ್ರಸಿದ್ಧಿಯೂ ಸಹ ವಿಷ್ಣುವಿನಲ್ಲೇ ಇರುತ್ತದೆ. ಉಪಸಂಹಾರದಲ್ಲಿ ಅಶ್ರುತತ್ವಾದಿಲಿಂಗಗಳು ಕೇಳಿಸುತ್ತಿರುವುದರಿಂದಲೂ ಉಪಕ್ರಮದಲ್ಲಿರುವ ಅರ್ಭಕೌಕಸ್ತ್ವಾದಿಲಿಂಗಗಳನ್ನು ವಿಷ್ಣುವಿನಲ್ಲೇ ಸಮರ್ಥಿಸಬೇಕು.



## ಅಣುಜೀವನು ಎಲ್ಲೆಡೆ ವ್ಯಾಪಿಸಲಾರ

**तात्पर्यचन्द्रिका**

**अणोश्च जीवस्य सर्वगतत्वायोगात्, योगे वाऽऽनादितः सर्वजीवानां सर्वशरीरसम्बन्धे शरीरकर्मादिव्यवस्थाऽयोगेनाभिमानस्यापि प्रसङ्गेन सर्वेषां सर्वशरीरगतदुःखदिभोगप्रसङ्गात्,**

**व्रीह्यादि शरीरगतजीवान्तरस्य तत्तदिन्द्रियाभिमानिनां च तदीयसर्वशरीर-सम्बन्धाभावेन भोगाप्रसङ्गात् ।**

**ईश्वरस्य तु स्वाभाविकशक्तिविशेषेण तदप्रसङ्गात् ।**

ಅನುವಾದ - ಅಣುವಾದ ಜೀವನಿಗೆ ಸರ್ವಶರೀರಸಂಬಂಧವಿದೆ ಎಂಬ ಸರ್ವಗತತ್ವವನ್ನು ಹೇಳುವುದು ಅಯುಕ್ತ. ಹಾಗೇ ಹೇಳಿದರೆ ಅನಾದಿಯಾದ ಸಕಲಜೀವರಿಗೆ ಸರ್ವಶರೀರಸಂಬಂಧ ನಿರಂತರ ಇರುವುದರಿಂದ ಶರೀರಭೇದವ್ಯವಸ್ಥೆಯನ್ನಾಗಲೀ ಕರ್ಮ ಅಂತಃಕರಣ ಭೇದವ್ಯವಸ್ಥೆಯನ್ನಾಗಲೀ ಮಾಡಲಾಗದು. ಮತ್ತು ಸಕಲ ಶರೀರದಲ್ಲಿ ಸಕಲರಿಗೂ ಅಭಿಮಾನ ಬರ ಬೇಕಾದ್ದರಿಂದ ಸಕಲರಿಗೂ ಪರಸ್ಪರವಾಗಿ ಸಕಲಶರೀರದಿಂದ ಸುಖದುಃಖಾದಿಗಳ ಭೋಗವು ಉಂಟಾಗುವ ಪ್ರಸಂಗ ಬರುತ್ತದೆ.

ಹಾಗಾದರೆ ಪಿತೃಶರೀರವನ್ನು ಹೊಂದಲು 'ವ್ರೀಹಿ' ಮೊದಲಾದ ಧಾನ್ಯಗಳನ್ನು ಪ್ರವೇಶಿಸುವ ಜೀವನಿಗೂ ವ್ರೀಹಿದೇಹದಿಂದ ಸುಖದುಃಖಾದಿಗಳು ಉಂಟಾಗಲಿ ಎಂದು ಶಂಕಿಸಬಾರದು. 'ವ್ರೀಹಿ' ಎಂಬ ಶರೀರದಲ್ಲಿರುವ ಬೇರೆ ಜೀವನಿಗೆ ವ್ರೀಹಿಯ ಉಳಿದ ಜನ್ಮಗಳ ಶರೀರಸಂಬಂಧವು ಇರುವುದಿಲ್ಲ. ಇದರಂತೆ ಆಯಾ ಶರೀರಗಳಲ್ಲಿರುವ ಇಂದ್ರಿಯಾಭಿಮಾನಿದೇವತೆಗಳಿಗೂ ಉಳಿದ ಕಲ್ಪದಲ್ಲಿರುವ ಜೀವನ ಶರೀರಸಂಬಂಧವು ಇರುವುದಿಲ್ಲವಾದ್ದರಿಂದ ಜೀವನಿಗೆ ಸಂಬಂಧಿಸಿದ ಶರೀರದಲ್ಲಾಗುವ ಸುಖದುಃಖಾದಿಗಳ ಅನುಭವವು ಅಭಿಮಾನಿ ದೇವತೆಗಳಿಗೆ ಉಂಟಾಗುವುದಿಲ್ಲ.

ಹಾಗಾದರೆ ಸಕಲ ಜೀವರ ಸಕಲಜನ್ಮಗಳ ಶರೀರಸಂಬಂಧವು ಈಶ್ವರನಿಗಿರುವುದರಿಂದ ಸುಖ-ದುಃಖಾದಿಗಳ ಅನುಸಂಧಾನವು ಈಶ್ವರನಿಗೆ ಉಂಟಾಗಬಹುದಲ್ಲವೇ? ಎಂದೂ ಸಹ ಶಂಕಿಸಬಾರದು. ಏಕೆಂದರೆ ಸ್ವಾಭಾವಿಕವಾದ ಸಾಮರ್ಥ್ಯದಿಂದ ಈಶ್ವರನಿಗೆ ಸುಖದುಃಖಾದಿಗಳ ಅನುಭವ ಬರುವುದಿಲ್ಲ.

ಪರಿಪೂರ್ಣಚಂದ್ರಿಕಾ

**ಕಠಿಣಪದಾರ್ಥ**

ಯೋಗೇ ವಾ = ಸರ್ವಗತತ್ವವನ್ನು ಹೇಳುವುದಾದರೆ, ಸರ್ವೇಷಾಂ = ಸಕಲಜೀವರಿಗೆ, ವ್ರೀಹ್ಯಾದಿ ಶರೀರಾದಿ ಜೀವಗತಸ್ಯ = ಭತ್ತವೇ ಶರೀರವಾಗಿವುಳ್ಳ ಒಬ್ಬ ಜೀವನಿರುತ್ತಾನೆ. ಮಾತೃ ಯೋನಿಯನ್ನು ಪ್ರವೇಶಿಸಲು ಮತ್ತೊಬ್ಬ ಜೀವಿಯು ಸೇರಿಕೊಂಡಿರುತ್ತಾನೆ. ಆ ಮತ್ತೊಬ್ಬ ಜೀವನಿಗೆ. ತದೀಯಸರ್ವಶರೀರ = ಭತ್ತವೇ ಶರೀರವಾಗಿವುಳ್ಳ ಜೀವರ ಇತರ ಜನ್ಮಗಳ ಸಕಲ ಶರೀರಗಳು. ತದಪ್ರಸಂಗಾತ್ = ಸುಖದುಃಖಾದಿಗಳ ಭೋಗವು ಬರುವುದಿಲ್ಲ.

**प्रकाशः** – एवं परपक्षे साधकानि निरस्य, स्वपक्षे साधकानि चोक्त्वा ''अनुपपत्तेस्तु न शारीरः'' इति सूत्रोक्तपरपक्षबाधकोक्तिपरटीकां विवृण्वन् परपक्षे बाधकमाह – **अणोश्चेति** ।

ಇಲ್ಲಿಯ ತನಕ ಪೂರ್ವಪಕ್ಷದ ಸಾಧಕಗಳನ್ನೆಲ್ಲಾ ನಿರಾಕರಿಸಿ ಸ್ವಪಕ್ಷ ಸಾಧಕಗಳನ್ನು ಸಮರ್ಥಿಸಿದ್ದಾಯಿತು. ಪ್ರಕೃತ ''ಅನುಪಪತ್ತೇಸ್ತು ನ ಶಾರೀರಃ'' ಪೂರ್ವಪಕ್ಷದಲ್ಲಿ ಹೇಳಿದ ಪರಪಕ್ಷದ ಬಾಧಕಗಳನ್ನು ಹೇಳುವ ಟೀಕೆಯನ್ನು ವಿವರಿಸುವುದಕ್ಕಾಗಿ ಪರಪಕ್ಷದಲ್ಲಿರುವ ಬಾಧಕಗಳನ್ನು ''ಅಣೋಶ್ಚ'' ಇತ್ಯಾದಿ ವಾಕ್ಯದಿಂದ ಎತ್ತಿ ತೋರಿಸುತ್ತಿದ್ದಾರೆ.

**प्रकाशः** – मिलितसर्वजीवानां सर्वगतत्वपक्षस्य ''स्वस्वदेहस्थितिमात्रस्य सर्वेषां सिद्धत्वात्'' इति टीकायामेव स्पष्टत्वादिति एकस्य सर्वगतत्वपक्षदूषणस्य विस्तृतिरियम्, टीकायां ''सुख-दुःखादिप्राप्त्यैकस्य सर्वशरीरस्थत्वानुपपत्तेः'' इत्युपलक्षणमिति भावः । अणुत्वं ''उत्क्रान्तिगत्यागतीनां'' इत्यत्र साधयिष्यत इति भावः ।

ಜೀವನು ಸರ್ವಗತನೆಂದರೆ ಎರಡು ಬಗೆಯಲ್ಲಿ ಹೇಳಬಹುದು -

೧. ಒಟ್ಟಿಗೆ ಸೇರಿದ ಸಕಲಜೀವರುಗಳು ಸರ್ವಗತನಾಗಿದ್ದಾರೆ.

೨. ಒಬ್ಬ ಜೀವನು ಸರ್ವಶರೀರಸಂಬಂಧವೆಂಬ ಸರ್ವತಗತತ್ವವಿದೆ ಎಂದು.

ಪ್ರಥಮಪಕ್ಷದಲ್ಲಿ ''ಸ್ವಸ್ವದೇಹಸ್ಥಿತಿಮಾತ್ರಸ್ಯ ಸರ್ವೇಷಾಂ ಸಿದ್ಧತ್ವಾತ್'' ಎಂಬ ಟೀಕೆಯಲ್ಲಿಯೇ ದೋಷವನ್ನು ಸ್ಪಷ್ಟವಾಗಿ ಹೇಳಿರುವುದರಿಂದ ಗ್ರಂಥಕಾರರು ಅದನ್ನು ಇಲ್ಲಿ ನಿರಾಕರಿಸಿಲ್ಲ. ಆದ್ದರಿಂದ ಎರಡನೆಯ ಪಕ್ಷವನ್ನು ವಿಸ್ತಾರವಾಗಿ ಇಲ್ಲಿ ದೂಷಿಸಿದ್ದಾರೆ.

ಟೀಕೆಯಲ್ಲಿ ''ಸುಖ-ದುಃಖಾದಿಪ್ರಾಪ್ತ್ಯೈಕಸ್ಯ ಸರ್ವಶರೀರಸ್ಥತ್ವಾನುಪಪತ್ತೇಃ'' ಎಂದು ಹೇಳಿದ ದೋಷವು ಉಪಲಕ್ಷಣವಾಗಿದೆ ಎಂಬ ಅಭಿಪ್ರಾಯದಿಂದ ಇನ್ನು ಅನೇಕ ದೋಷಗಳನ್ನು ಗ್ರಂಥಕಾರರು ಇಲ್ಲಿ

ಪ್ರತಿಪಾದಿಸುತ್ತಿದ್ದಾರೆ. ಜೀವನು ಅಣುವಾಗಿದ್ದಾನೆಂಬುದನ್ನು "ಉತ್ಕ್ರಾಂತಿಗತ್ಯಾಗತೀನಾಂ" ಗ್ರಂಥದಲ್ಲಿ ಸಾಧಿಸುತ್ತೇವೆಂದು ತಿಳಿಯಬೇಕು.

**प्रकाशः** – नन्वात्मनो विभुत्वमेवोपेयते, गत्यादेरुपाधिवशेनोपपत्तेरिति भावेनाह – **योगे वेति** । अयमर्थः – सर्वजीवानां प्रत्येकं सर्वशरीरगतत्वे सर्वेषां सर्वशरीरगतसुखादिभोगस्स्यात् ।

ಆತ್ಮನನ್ನು ವಿಭುವೆಂದೇ ಒಪ್ಪೋಣ. ಹಾಗಾದರೆ ವ್ಯಾಪ್ತನಾದ ಜೀವನಿಗೆ ಗಮನಾಗಮನಗಳನ್ನೆಲ್ಲಾ ಹೇಗೆ ಸಮರ್ಥಿಸುವುದು ಎಂಬ ಶಂಕೆಗೆ ಅವಕಾಶವಿಲ್ಲ. ಅಂತಃಕರಣ, ಅಜ್ಞಾನ ಮೊದಲಾದ ಉಪಾಧಿಗಳ ಅಧೀನವಾಗಿ ಆಯಾ ಶರೀರಗಳಲ್ಲಿ ಜೀವನ ಗಮನಾಗಮನಗಳನ್ನು ಹೇಳಬಹುದೆಂಬ ಅಭಿಪ್ರಾಯದಿಂದ 'ಯೋಗೇ ವಾ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಒಟ್ಟು ಅಭಿಪ್ರಾಯವೇನೆಂದರೆ ಸಕಲ ಜೀವರುಗಳೂ ಪ್ರತ್ಯೇಕವಾಗಿ ಸರ್ವಗತರಾದರೆ ಸಕಲ ಶರೀರಗಳಲ್ಲಿರುವ ಸುಖದುಃಖಾದಿಗಳು ಸಕಲರಿಗೂ ಉಂಟಾಗಬೇಕಾದೀತೆಂದು.

**प्रकाशः** – नच यथा स्वर्गाच्च्युतस्य स्थूलशरीरप्राप्त्यै मातृयोनिं प्राप्तुमागच्छतो मध्येऽन्यकर्मनिर्मितजीवान्तराधिष्ठितदेहं प्राप्तस्य जीवस्य, यथा वा तत्तदिन्द्रियाभिमानिनां तज्जीवशरीरगतानां तत्तच्छरीरगतसुखादिभोगाभावस्तथेहापि यदीयकर्मनिर्मितो यो देहस्स एव तस्य सुखादिभोगापादको नान्यस्य तद्गतस्यापीति वाच्यं, अनादितस्सर्वेषां सर्वशरीरगतत्वे कर्मव्यवस्थाऽयोगात् ।

ಶಂಕೆ - ಪರಸ್ಪರ ಸುಖದುಃಖಾದಿಗಳ ಅನುಸಂಧಾನವುಂಟಾಗಲಿ ಎಂದು ಆಕ್ಷೇಪಿಸಲಾಗದು. ಏಕೆಂದರೆ ಯಾವರೀತಿಯಾಗಿ ಸ್ವರ್ಗದಿಂದ ಬೀಳುವಂತಹ ಜೀವನು ಸ್ಥೂಲ ದೇಹವನ್ನು ಹೊಂದುವುದಕ್ಕಾಗಿ ಮಾತೃಯೋನಿಯನ್ನು ಹೊಂದಲು ಬಯಸುತ್ತಾನೆ. ಅದಕ್ಕೋಸ್ಕರ ಮಾರ್ಗಮಧ್ಯದಲ್ಲಿ ಅನ್ಯಕರ್ಮದಿಂದ ನಿರ್ಮಿಸಲ್ಪಟ್ಟ ಮತ್ತೊಂದು ಜೀವನಿಂದ ಅಧಿಷ್ಠಿತವಾದ ವ್ರೀಹ್ಯಾದಿಗಳಲ್ಲಿ ಪ್ರವೇಶಿಸುತ್ತಾನೆ. ಆ ಸಂದರ್ಭದಲ್ಲಿ ವ್ರೀಹ್ಯಾದಿಗಳಲ್ಲಿ ಪ್ರವೇಶಿಸಿದ ಜೀವನಿಗೆ ವ್ರೀಹ್ಯಾದಿ ದೇಹದಿಂದ ಸುಖದುಃಖಾದಿಭೋಗಗಳು ಹೇಗೆ ಉಂಟಾಗುವುದಿಲ್ಲವೋ; ಅಥವಾ ಯಾವರೀತಿಯಾಗಿ ಆಯಾ ಇಂದ್ರಿಯಾಭಿಮಾನಿ ದೇವತೆಗಳಿಗೆ ಆಯಾ ಜೀವರುಗಳ ಶರೀರಗಳ ಸಂಬಂಧವಿದ್ದರೂ ಜೀವರ ಶರೀರದಲ್ಲಿರುವ ಸುಖಾದಿಗಳ ಭೋಗವು ಉಂಟಾಗುವುದಿಲ್ಲವೋ ಅದರಂತೆ ಪ್ರಕೃತದಲ್ಲಿಯೂ ಯಾವಜೀವರ ಕರ್ಮದಿಂದ ನಿರ್ಮಿಸಲ್ಪಟ್ಟ ದೇಹವಿರುತ್ತದೋ ಅಂತಹ ದೇಹವೇ ಆ ಜೀವನಿಗೆ ಸುಖದುಃಖಾದಿಗಳಿಗೆ ಕಾರಣವಾಗುತ್ತದೆ ಹೊರತು ಯಾರ ಕರ್ಮದಿಂದ ನಿರ್ಮಿತವಾಗಿಲ್ಲವೋ ಅಂತಹವನ ಸುಖದುಃಖಾದಿಗಳಿಗೆ ಆ ಶರೀರವು ಕಾರಣವಾಗುವುದಿಲ್ಲ. ಒಂದೇ ಶರೀರದಲ್ಲಿ ಅನೇಕ ಜೀವರುಗಳಿದ್ದರೂ ಒಬ್ಬ ಜೀವನಿಗೆ ಮಾತ್ರ ಸುಖದುಃಖಾದಿಗಳು ಉಂಟಾಗುತ್ತವೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

ಸಮಾಧಾನ - ಅನಾದಿಕಾಲದಿಂದ ಸಕಲಜೀವರುಗಳು ಸಕಲಶರೀರದಲ್ಲಿದ್ದಾಗ ಭಿನ್ನಭಿನ್ನ ಕರ್ಮವ್ಯವಸ್ಥೆಯನ್ನು ಮಾಡಲು ನಿಮ್ಮಿಂದ ಹೇಗೆ ಸಾಧ್ಯ? ಕರ್ಮಭೇದ ವ್ಯವಸ್ಥೆಯನ್ನೇ ಮಾಡಲಾಗದ ನಿಮಗೆ ಪರಸ್ಪರ ಸುಖದುಃಖಾದಿ ಅನುಸಂಧಾನಗಳ ಸಮಸ್ಯೆಯನ್ನೂ ಸಹ ಪರಿಹರಿಸಿಕೊಳ್ಳಲಾಗದು.

**प्रकाशः** – नच यस्य यस्मिन्देहेऽभिमानस्तस्मिन् देहे कृतं कर्म तदीयमिति वा, कर्मनिर्मितत्वाविशेषेऽपि यस्य यत्राभिमानस्तद्गत सुखादिभोग एव तस्य, नान्यगततद्भोग इति वा युक्तं, अनादिकालं सर्वदेहसम्बन्धे सर्वत्र तस्याप्यवर्जनीयत्वादिति ।

ಶಂಕೆ - ಸಮಸ್ಯೆಯನ್ನು ಪರಿಹರಿಸಬಹುದು. ಯಾವ ಜೀವನಿಗೆ ಯಾವ ದೇಹದಲ್ಲಿ ಅಭಿಮಾನವಿರುತ್ತದೋ ಆ ದೇಹದಲ್ಲಿ ಮಾಡಲ್ಪಟ್ಟ ಕರ್ಮವು ಮಾತ್ರ ಆ ಜೀವನಿಗೆ ಸಂಬಂಧಪಟ್ಟಿರುತ್ತದೆ. ಯಜ್ಞದತ್ತನ ಶರೀರದಲ್ಲಿ ದೇವದತ್ತನೂ ಸಹ ಇರಬಹುದು. ಅಭಿಮಾನವಿಲ್ಲದ ಆ ದೇಹದಲ್ಲಿ ಮಾಡಲ್ಪಡುವ ಕರ್ಮವು ದೇವದತ್ತನಿಗೆ ಸಂಬಂಧಪಡುವುದೇ ಇಲ್ಲ ಹೊರತಾಗಿ ಅಭಿಮಾನವಿರುವ ದೇವದತ್ತನಿಗೆ ಮಾತ್ರ ಸಂಬಂಧಪಡುತ್ತದೆ. ಅಥವಾ ಸಕಲಜೀವರುಗಳ ಕರ್ಮದಿಂದ ಸಕಲಜೀವರುಗಳ ದೇಹವು ಪ್ರಾಪ್ತವಾಗಿದೆಯೆಂದಿಟ್ಟುಕೊಂಡರು ಯಾವ ಜೀವನಿಗೆ ಯಾವ ದೇಹದಲ್ಲಿ ಅಭಿಮಾನವಿದೆಯೋ ಆಯಾ ದೇಹದ ಸುಖಾದಿಭೋಗಗಳು ಮಾತ್ರ ಆ ಜೀವನಿಗೆ ಉಂಟಾಗುತ್ತದೆ ಹೊರತು ಮತ್ತೊಬ್ಬ ದೇಹದಲ್ಲಿರುವ ಸುಖಾದಿಭೋಗವು ಉಂಟಾಗುವುದಿಲ್ಲವೆಂದೂ ಸಹ ತಿಳಿಯಬಹುದಲ್ಲವೇ?

ಸಮಾಧಾನ - ಅನಾದಿಕಾಲದಿಂದ ಎಲ್ಲಾ ಜೀವರುಗಳಿಗೆ ಎಲ್ಲಾ ದೇಹಗಳ ಸಂಬಂಧವಿದ್ದ ಮೇಲೆ ಕರ್ಮಭೇದವನ್ನು ಸಮರ್ಥಿಸಲು ಸಾಧ್ಯವಿಲ್ಲ. ಅದರಂತೆ ಅಭಿಮಾನದ ಭೇದವನ್ನೂ ಸಹ ಸಮರ್ಥಿಸಲು ಸಾಧ್ಯವಿಲ್ಲ. ಅಂದರೆ ದೇವದತ್ತನೆಂಬ ಜೀವನಿಗೆ ದೇವದತ್ತ ಶರೀರದಲ್ಲಿ ಮಾತ್ರ ಅಭಿಮಾನವಿರುತ್ತದೆ. ಯಜ್ಞದತ್ತ ಶರೀರದಲ್ಲಿ ಅಭಿಮಾನವಿರುವುದಿಲ್ಲವೆಂದು ಸಮರ್ಥಿಸಲು ಸಾಧ್ಯವಿಲ್ಲ. ಆದ್ದರಿಂದ ಪರಸ್ಪರಸುಖದುಃಖಾದ್ಯನುಸಂಧಾನವು ಉಂಟಾಗಲಿ ಎಂಬ ಆಕ್ಷೇಪ ಬಂದೇ ಬರುತ್ತದೆ.

**प्रकाशः** – कथं तर्हि व्रीह्यादिगतीजवादौ गतिरित्यत आह – **व्रीह्यादीति** । इन्द्रियाभिमानिनां प्रतिकल्पं भिन्नत्वादिति भावः ।

एतेन ''सर्वशरीरगतसुखदुःखादिप्राप्त्यै'' इति टीका ''ब्रह्मादि-सर्वशरीरगतत्वानुपपत्तेः'' इति टीका च विवृता ।

ಶಂಕೆ - ಹಾಗಾದರೆ ವ್ರೀಹ್ಯಾದಿಗಳಲ್ಲಿ ಪಿತೃಶರೀರವನ್ನು ಪ್ರವೇಶಿಸುವ ಜೀವರಿಗೆ ವ್ರೀಹ್ಯಾದಿ ಶರೀರದಿಂದ ಸುಖಾದಿಗಳು ಏಕೆ ಉಂಟಾಗುವುದಿಲ್ಲ ?

ಸಮಾಧಾನ - ಈ ಶಂಕೆಗೆ 'ವ್ರೀಹ್ಯಾದಿ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ವ್ರೀಹ್ಯಾದಿ ಶರೀರದಲ್ಲಿರುವ ಬೇರೆ ಜೀವಗಳಿಗೆ ವ್ರೀಹಿಯ ಬೇರೆ ಜನ್ಮಗಳ ಶರೀರಗಳೆಲ್ಲದರ ಸಂಬಂಧವಿಲ್ಲದ ಕಾರಣ

ಸುಖದುಃಖಾದಿಗಳು ಉಂಟಾಗುವುದಿಲ್ಲ. ಇಂದ್ರಿಯಾಭಿಮಾನಿದೇವತೆಗಳು ಪ್ರತಿಯೊಂದು ಕಲ್ಪದಲ್ಲಿಯೂ ಭಿನ್ನರಾಗಿರುವುದರಿಂದ ಅವರಿಂದ ಅಭಿಮನ್ಯಮಾನವಾದ ಜೀವನ ಎಲ್ಲಾ ಜನ್ಮಗಳ ಶರೀರಸಂಬಂಧವು ಇಂದ್ರಿಯಾಭಿಮಾನಿದೇವತೆಗಳಿಗೆ ಇರುವುದಿಲ್ಲವೆಂಬ ಟೀಕೆಯನ್ನು "ಸರ್ವಶರೀರಗತಸುಖದುಃಖಾದಿ-ಪ್ರಾಪ್ತ್ಯಾ" ಎಂಬ ಟೀಕೆಯನ್ನು "ಬ್ರಹ್ಮಾದಿಸರ್ವಶರೀರಗತತ್ವಾನುಪಪತ್ತೇಃ" ಎಂಬ ಟೀಕೆಯನ್ನೂ ಸಹ ವ್ಯಾಖ್ಯಾನಿಸಿದಂತಾಯಿತು.

**प्रकाशः** – नन्वीश्वरस्यानादितस्सर्वदेहसम्बन्धादुक्तदोषसाम्यमित्यतः "सम्भोगप्राप्तिरिति चेन्न वैशेष्यात्" इति सूत्राभिमतं 'सामर्थ्यवैशेष्यात्' इति टीकाद्युक्तं समाधिमाह – **ईश्वरस्य त्विति ।**

ಶಂಕೆ - ಇಂದ್ರಿಯಾಭಿಮಾನಿದೇವತೆಗಳಿಗೆ ಸಕಲಜನ್ಮದಲ್ಲಿರುವ ಶರೀರ ಸಂಬಂಧವು ಇಲ್ಲದಿರಬಹುದು. ಆದರೆ ಈಶ್ವರನು ಅನಾದಿಕಾಲದಿಂದ ಸಕಲದೇಹದ ಸಂಬಂಧವನ್ನು ಹೊಂದಿರುವುದರಿಂದ ಜೀವರ ಶರೀರದ ಸುಖದುಃಖಾದಿಗಳ ಅನುಸಂಧಾನವು ಈಶ್ವರನಿಗೆ ಉಂಟಾಗಲಿ ಎಂಬ ಆಕ್ಷೇಪ ಬಂದೇ ಬರುತ್ತದೆ ಅಲ್ಲವೇ?

ಸಮಾಧಾನ - ಭಗವಂತನು ಸಕಲ ಶರೀರಗಳ ಸಂಬಂಧವನ್ನು ಹೊಂದಿದ್ದರೂ ಸಹ ಅವನಲ್ಲಿರುವ ಅದ್ಭುತ ಸಾಮರ್ಥ್ಯದಿಂದ ಸುಖದುಃಖಾದಿಗಳು ಭಗವಂತನಿಗೆ ಉಂಟಾಗುವುದಿಲ್ಲ. ಈ ವಿಷಯವು "ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್" ಎಂಬ ಸೂತ್ರದಲ್ಲಿ ಹಾಗೂ ಅದೇ ಸೂತ್ರದ "ಸಾಮರ್ಥ್ಯವೈಶೇಷ್ಯಾತ್" ಎಂಬ ಟೀಕೆಯಲ್ಲಿ ನಿರೂಪಿತವಾಗಿದೆ. ಅದನ್ನೇ ಪ್ರಕೃತ ಗ್ರಂಥಕಾರರು 'ಈಶ್ವರಸ್ತು' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**गुरुराजीयम्** – तृतीयसूत्रोक्तं हेतुमाह – **अणोरिति** ।। तुष्यतु दुर्जन इति न्यायेनाह – **योगेवेति** ।। सामर्थ्यविशेषादित्यनेनोक्तं हेतुमाह – **ईश्वरस्येति** ।।




ಪೂರ್ವಪಕ್ಷಕಾರರು ಜೀವನನ್ನು ಸರ್ವಗತನೆಂದು ಸಮರ್ಥಿಸಿದ್ದರು. ಅದೂ ಸಹ ತಪ್ಪು. ಜೀವನು ಸರ್ವಗತನೆಂದರೆ ಒಬ್ಬೊಬ್ಬ ಜೀವನು ಜಗತ್ತಿನಲ್ಲಿರುವ ಕೋಟ್ಯಾಂತರ ಶರೀರಗಳಲ್ಲಿದ್ದಾನೆಂದು ಅರ್ಥ. ಆವಾಗ ಪ್ರತಿಯೊಬ್ಬರೂ ಅನುಭವಿಸುವ ಕಷ್ಟ-ನಷ್ಟಗಳಿಂದ ಬರುವ ದುಃಖವು ಪ್ರತಿಯೊಬ್ಬರಿಗೂ ಬರಬೇಕಾದೀತು. ಮತ್ತು ಈ ಶರೀರವೇ ದೇವದತ್ತನದ್ದು ಮತ್ತೊಂದು ದೇವದತ್ತನದ್ದಲ್ಲವೆಂದು ವ್ಯವಸ್ಥೆಯನ್ನೇ ಮಾಡಲಾಗದು. ಆದ್ದರಿಂದ ಅಣುವಾದ ಜೀವನನ್ನು ಸರ್ವಗತನೆಂದು ಹೇಳುವುದು ಹಾಸ್ಯಾಸ್ಪದ ಮಾತು.

ಭಗವಂತನೇ ಸರ್ವಗತನಾಗಿದ್ದಾನೆ. ಸಕಲಜೀವರ ಶರೀರದ ಸಂಬಂಧವೂ ಸಹ ಭಗವಂತನಿಗಿದೆ. ಆದರೂ ತನ್ನಲ್ಲಿರುವ ಸ್ವಾಭಾವಿಕವಾದ ಸಾಮರ್ಥ್ಯದಿಂದ ಆಯಾ ಶರೀರಗಳಲ್ಲುಂಟಾಗುವ ಸುಖದುಃಖಾದಿ- ಗಳನ್ನು ಅನುಭವಿಸಲಾರ. ಇಂತಹ ಭಗವಂತನನ್ನೇ ಶ್ರುತಿಯು ಸರ್ವಗತನೆಂದು ಕೊಂಡಾಡುತ್ತಿದೆ.

## ಕರ್ಮಕರ್ತೃಗಳಿಗೆ ಭೇದವಿರುವುದರಿಂದಲೂ ವಿಷ್ಣುವೇ ಸರ್ವಗತನು

**तात्पर्यचन्द्रिका**

**''आत्मानं वेद'' ''आत्मानं परस्मै शंसति'' ''यस्तित्याज सचिविदं सखायम्'' इति च सर्वगतस्य तस्यात्मनो वेदनशंसनत्यागेषु कर्मत्वेन, जीवस्य तु कर्तृत्वेन निर्देशात्, कर्मकर्त्रोश्चोत्सर्गतः भिन्नत्वात्,**

**'मामहं जानामि' ''तदात्मानमेवावेदहं ब्रह्मास्मि'' इत्यादाविव च प्रकृतेऽपवादकाभावात्,**

ಅನುವಾದ - ಮತ್ತು ''ಆತ್ಮಾನಾಂ ವೇದ'' ''ಆತ್ಮಾನಂ ಪರಸ್ಮೈ ಶಂಸತಿ'' ''ಯಸ್ತಿತ್ಯಾಜ ಸಚಿವಿದಂ ಸಖಾಯಮ್'' ಎಂಬ ಶ್ರುತಿಯಲ್ಲಿ ಸರ್ವಗತನಾದ ಆತ್ಮನನ್ನು ವೇದ ಶಂಸನ ತ್ಯಾಗಗಳಿಗೆ ಕರ್ಮನೆಂದು ಹೇಳಲಾಗಿದೆ. ಜೀವನನ್ನಾದರೂ ಕರ್ತೃವೆಂದು ನಿರ್ದೇಶಿಸಲಾಗಿದೆ. ಎಲ್ಲಾ ಕರ್ಮ ಹಾಗೂ ಕರ್ತೃಗಳಿಗೆ ಔತ್ಸರ್ಗಿಕವಾಗಿ ಬೇಧವೇ ಇರುತ್ತದೆ. ಆದ್ದರಿಂದಲೂ ಜೀವನು ಸರ್ವಗತನಾಗಲಾರ.

'ಮಾಮಹಂ ಜಾನಾಮಿ' ಎಂಬ ಸ್ಥಳದಲ್ಲಿ ಜ್ಞಾನ ಎಂಬ ಕ್ರಿಯೆಯಲ್ಲಿ ಅಹಮರ್ಥನೊಬ್ಬನೇ ಕರ್ಮ ಹಾಗೂ ಕರ್ತೃ ಆಗಿದ್ದಾನೆ. ''ತದಾತ್ಮನಮೇವಾವೇದಹಂ ಬ್ರಹ್ಮಾಸ್ಮಿ'' ಎಂಬಲ್ಲಿಯೂ ಸಹ ಕರ್ಮಕರ್ತೃವಿಗೆ ಐಕ್ಯವಿದೆ. ಏಕೆಂದರೆ ಅನುಭವವೆಂಬ ಪ್ರಬಲವಾದ ಅಪವಾದ ಪ್ರಮಾಣವಿರುವುದರಿಂದ ಭೇದವನ್ನು ಒಪ್ಪಬೇಕಾಗಿಲ್ಲ. ಆದರೆ 'ಆತ್ಮಾನಂ ವೇದ' ಇತ್ಯಾದಿ ಸ್ಥಳಗಳಲ್ಲಿ ಇಂತಹ ಅಪವಾದದ ಪ್ರಮಾಣಗಳು ಇರುವುದಿಲ್ಲ.

**अहमात्मा गुडाकेश सर्वभूताशयस्थितः ।**

**इति स्मृतिसमाख्यानाच्च अत्रोक्तः सर्वगतो विष्णुरेवेति । तदेतदभिप्रेत्योक्तं न्यायविवरणे – ''तथाऽपि निरवकाशाः ''एतमेव'' इत्यवधारणादयः'' इति ।**

**अनुव्याख्याने तु – सर्वसंयोगित्वादिमात्रं नात्र प्रतिपाद्यम्, तस्यानन्दादिवद्गुणत्वाभावात् । किन्तु तत्तच्छक्तिप्रबोधनार्थं तत्र तत्रावस्थानम्,**

**तच्चायुक्तम्, ईश्वरस्य दूरस्थत्वेऽपि तत्र शक्तत्वादिति प्राप्ते, तत्र तत्रावस्थानं न दूरस्थस्याशक्त्या, किन्तु लीलयैवेति सिद्धान्त इत्युक्तम् ।**

**तत् ''विवक्षितगुणोपपत्तेः'' इति सूत्रस्य 'विवक्षितः' दूरे शक्तस्यपि तत्तच्छक्तिबोधनार्थं तत्र तत्रावस्थानरूपो यो गुणस्तस्य लीलयोपपत्तेरिति वर्णकान्तरमभिप्रेत्य ।**

'ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ' ಎಂಬುದಾಗಿ ಸ್ಮೃತಿಯಲ್ಲಿ ಎಲ್ಲೆಡೆಯೂ ನನ್ನ ವ್ಯಾಪ್ತಿಯಿದೆಯೆಂದು ಭಗವಂತನೇ ಹೇಳಿಕೊಂಡಿದ್ದರಿಂದ ಈ ಸ್ಮೃತಿಸಮಾಖ್ಯಾ ಎಂಬ ಪ್ರಮಾಣದ ಬಲದಿಂದ ಸರ್ವಗತನಾದವನು ವಿಷ್ಣುವೇ ಹೊರತು ಜೀವನಲ್ಲವೆಂದು ನಿರ್ಣಯವಾಗುತ್ತದೆ. ಈ ಅಭಿಪ್ರಾಯದಿಂದಲೇ ನ್ಯಾಯವಿವರಣದಲ್ಲಿ ''ತಥಾಽಪಿ ನಿರವಕಾಶಾಃ 'ಏತಮೇವ' ಇತ್ಯವಧಾರಣಾದಯಃ'' ಪೂರ್ವಪಕ್ಷ ಲಿಂಗಗಳಿಗಿಂತಲೂ ನಿರವಕಾಶಗಳಾದ ಲಿಂಗಗಳು ಸಿದ್ಧಾಂತದಲ್ಲಿರುವುದರಿಂದ 'ಏತಮೇವ' ಮೊದಲಾದ ಅವಧಾರಣಗಳಿರುವುದರಿಂದ ಸರ್ವಗತನಾದವನು ವಿಷ್ಣುವೇ ಎಂದು ಹೇಳಿದ್ದಾರೆ.

ಅನುವ್ಯಾಖ್ಯಾನದಲ್ಲಿಯೂ ಹೀಗೆ ಹೇಳಿದ್ದಾರೆ. ಸರ್ವಗತತ್ವವೆಂದರೆ ಕೇವಲ ಸಕಲಪದಾರ್ಥಗಳ ಜೊತೆಗೆ ಸಂಯೋಗವಿದೆಯೆಂದಷ್ಟೇ ಅರ್ಥವಲ್ಲ. ಈ ಸರ್ವಸಂಯೋಗಿತ್ವವು ಆನಂದಾದಿಗಳಂತೆ ಗುಣವೇ ಆಗಿರುವುದಿಲ್ಲ. ಹೊರತಾಗಿ ಆಯಾ ವಸ್ತುಗಳಲ್ಲಿರುವ ಶಕ್ತಿಯನ್ನು ಪ್ರಬೋಧನೆ ಮಾಡುವುದಕ್ಕಾಗಿ ಪ್ರತಿಯೊಂದು ಪದಾರ್ಥಗಳಲ್ಲಿ ಇರುತ್ತಾನೆ.

ಇದು ಅಯುಕ್ತವಲ್ಲವೇ? ಏಕೆಂದರೆ ಈಶ್ವರನು ದೂರದಲ್ಲಿದ್ದರೂ ಸಹ ಆಯಾ ಪದಾರ್ಥಗಳಲ್ಲಿರುವ ಶಕ್ತಿಯನ್ನು ಪ್ರಬೋಧನೆ ಮಾಡಲು ಸಮರ್ಥನೇ ಆಗಿರುತ್ತಾನೆಂಬ ಶಂಕೆಯು ತಪ್ಪು. ಭಗವಂತನು ಪ್ರತಿಯೊಂದು ಪದಾರ್ಥಗಳಲ್ಲಿ ನೆಲೆಸಲು ಕಾರಣವೇನೆಂದರೆ ದೂರದಲ್ಲಿದ್ದು ಶಕ್ತಿಪ್ರಬೋಧನೆ ಮಾಡಲು ಅಸಮರ್ಥನೆಂಬ ಕಾರಣದಿಂದಲ್ಲ. ಹೊರತಾಗಿ ಲೀಲೆಯಿಂದಷ್ಟೇ ಎಲ್ಲೆಡೆ ನಿಂತಿದ್ದಾನೆಂದು ಎಂದು.

ಆದ್ದರಿಂದಲೇ ''ವಿವಕ್ಷಿತ ಗುಣೋಪಪತ್ತೇಃ'' ಎಂಬ ಸೂತ್ರಕ್ಕೆ ವಿವಕ್ಷಿತಃ = ದೂರದಲ್ಲಿದ್ದರೂ ಆಯಾ ಶಕ್ತಿಗಳನ್ನು ಪ್ರಬೋಧನೆ ಮಾಡಲು ಸಮರ್ಥನಾಗಿದ್ದಾನೆ. ಆದರೂ ಸಹ ಪ್ರತಿಯೊಂದು ಪದಾರ್ಥಗಳಲ್ಲಿ ಇರುವಿಕೆಯೆಂಬ, ಗುಣಃ = ಗುಣವು ಭಗವಂತನಿಗೆ ಲೀಲೆಯಿಂದ, ಉಪಪತ್ತೇಃ = ಉಪಪನ್ನವಾಗುತ್ತದೆಂಬ ಮತ್ತೊಂದು ವ್ಯಾಖ್ಯಾನವನ್ನು ಆಚಾರ್ಯರು ಅನುಸರಿಸಿದ್ದಾರೆ.

**ಕಠಿಣಪದಾರ್ಥ**

ಆತ್ಮಾನಂ = ಸರ್ವಗತನನ್ನು, ಪರಸ್ಮೈ = ಶಿಷ್ಯನಿಗೆ, ಶಂಸತಿ = ಉಪದೇಶಿಸುತ್ತಾನೆ. ತಿತ್ಯಾಜ = ಬಿಡುತ್ತಾನೆ. ಉತ್ಸರ್ಗತಃ = ಬಾಧಕವಿಲ್ಲದಿದ್ದಾಗ, ಗುಡಾಕೇಶ = ಅರ್ಜುನನೇ, ಸರ್ವಸಂಯೋಗಿತ್ವಾದಿ ಮಾತ್ರಂ = ಸಕಲ

ಪದಾರ್ಥಗಳ ಜೊತೆ ಸಂಯೋಗವಾಗಿರುವಿಕೆಯಷ್ಟೇ, ತತ್ರತತ್ರ = ಪ್ರತಿಯೊಂದು ವಸ್ತುಗಳಲ್ಲಿ, ವರ್ಣಕಾಂತರಮ್ = ಮತ್ತೊಂದು ವ್ಯಾಖ್ಯಾನವನ್ನು.

**प्रकाशः** – परपक्षे ''कर्मकर्तृव्यपदेशात्'' इति सूत्रोक्तं बाधकान्तरं तदुपात्त-वाक्योक्तिपूर्वकमाह – **आत्मानामिति** ।

'मामहं जानामि' ''स्वाध्यायोऽध्येतव्यः'' इत्यादावेकस्यैव द्वयं दृष्टमित्यत आह – **कर्मकर्त्रोश्चेति** । विस्तृतं चैतत् ''कर्मकर्त्रोरुत्सर्गतो भिदा'' इत्यनुव्याख्यानसुधायाम् ।

ವಿವರಣೆ - ಪೂರ್ವಪಕ್ಷದವರೆಗೆ ಮತ್ತೊಂದು ಬಾಧಕವನ್ನು ಹೇಳುತ್ತಿದ್ದಾರೆ ''ಕರ್ಮಕರ್ತೃವ್ಯಪದೇಶಾತ್' ಎಂದು. ಈ ಸೂತ್ರದಲ್ಲಿ ಹೇಳಿರುವ ಬಾಧಕವನ್ನೇ ನಿರೂಪಿಸಲು 'ಆತ್ಮಾನಾಂ' ಇತ್ಯಾದಿ ಗ್ರಂಥವು ಹೊರಟಿದೆ.

ಪ್ರಶ್ನೆ - 'ಮಾಮಹಂ ಜಾನಾಮಿ' ಎಂಬ ಪ್ರಯೋಗದಲ್ಲಿ ಅಹಮರ್ಥನಾದ ಜೀವನೇ ಕರ್ತೃವಾದಂತೆ ಕರ್ಮನೂ ಆಗಿದ್ದಾನೆ. ''ಸ್ವಾಧ್ಯಾಯೋऽಧ್ಯೇತವ್ಯಃ'' ವೇದವಾಕ್ಯ ಕರ್ತೃವಾದಂತೆ ಕರ್ಮವೂ ಆಗಿದೆ. ಹೀಗೆ ಅನೇಕ ಪ್ರಯೋಗಗಳಲ್ಲಿ ಕರ್ಮತ್ವ ಹಾಗೂ ಕರ್ತೃತ್ವ ಒಂದೇ ವಸ್ತುವಿನಲ್ಲಿ ಕಂಡಿದೆಯಲ್ಲವೇ?

ಉತ್ತರ - ಈ ಪ್ರಶ್ನೆಗೆ ಕರ್ಮಕರ್ತ್ರೋಶ್ಚ ಕರ್ಮ ಹಾಗೂ ಕರ್ತೃಗಳಿಗಿರುವ ಬೇಧವು ಔತ್ಸರ್ಗಿಕವಾಗಿದೆ. ಬಾಧಕವಿಲ್ಲದಾಗ ಮಾತ್ರ ಐಕ್ಯವನ್ನು ಹೇಳಬೇಕೆಂದು ಅರ್ಥ. ಈ ವಿಷಯವನ್ನು ''ಕರ್ಮಕರ್ತ್ರೋರುತ್ಸರ್ಗತೋ ಭಿದಾ'' ಎಂಬ ಅನುವ್ಯಾಖ್ಯಾನದ ಸುಧೆಯಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿದೆ.

**प्रकाशः** – **प्रकृत इति** । तत्रैक्यग्राहकप्रमाणमपवादकं, इह च चक्षुर्मयत्वादिजीवलिङ्गस्य विष्णाववकाशितत्वादिति भावः ।

एतेन ''अत्रोक्तसर्वगतस्य 'आत्मानं' इति कर्मत्वेन'' इत्यादिटीका विवृता ।

''स्मृतेश्च'' इति सूत्रोक्तं स्वपक्षे साधकान्तरमाह – **अहमात्मेति** ।

'ಮಾಮಹಂ ಜಾನಾಮಿ' ಎಂಬಲ್ಲಿ ಕರ್ಮ ಹಾಗೂ ಕರ್ತೃಗಳಲ್ಲಿ ಐಕ್ಯವಿರಲು ಅನುಭವವೇ ಪ್ರಮಾಣವಾಗಿದೆ. ಆದರೆ ಪ್ರಕೃತದಲ್ಲಿ ಹಾಗೆ ಐಕ್ಯಗ್ರಾಹಕವಾದ ಪ್ರಮಾಣವಿರುವುದಿಲ್ಲ. ಚಕ್ಷುರ್ಮಯತ್ವಾದಿಗಳನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಿದ್ದರಿಂದ ಅವುಗಳೂ ಸಹ ಐಕ್ಯಗ್ರಾಹಕ ಪ್ರಮಾಣವಾಗುವುದಿಲ್ಲ.

ಸರ್ವಗತತ್ವಾಧಿಕರಣ (೧-೨-೧)

ಹೀಗೆ ಹೇಳಿದ್ದರಿಂದ "ಅತ್ರೋಕ್ತಸರ್ವಗತಸ್ಯ 'ಆತ್ಮಾನಂ' ಇತಿ ಕರ್ಮತ್ವೇನ" ಇತ್ಯಾದಿ ಟೀಕೆಯನ್ನು ವಿವರಿಸಿದಂತಾಯಿತು. "ಸ್ಮೃತೇಶ್ಚ" ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಮತ್ತೊಂದು ಸ್ವಪಕ್ಷಸಾಧಕವಾದ ಪ್ರಮಾಣವನ್ನು 'ಅಹಮಾತ್ಮಾ' ಇತ್ಯಾದಿ ಗ್ರಂಥದಿಂದ ನಿರೂಪಿಸುತ್ತಿದ್ದಾರೆ.

**प्रकाशः** – "नच स्मृतेरपि स्ववचनत्वेन विप्रतिपन्नं प्रति सूत्रकारः कथं तामुपादत्त इति वाच्यं, "तस्याः परोक्तानुवादरूपत्वात्" इति टीकायामेवोक्तेरिति भावः । 'तथाऽपि' पूर्वपक्षप्रापकश्रुतिलिङ्गभावेऽपि । 'अवधारणादयः' अवधारणसहितब्रह्मशब्दादयः ।

ಸ್ಮೃತಿಯೂ ಸಹ ಸೂತ್ರಕಾರರ ವಾಕ್ಯವೇ ಆಗಿರುವುದರಿಂದ ವಿಪ್ರತ್ತಿಪನ್ನನಾದ ವ್ಯಕ್ತಿಗೆ ಹೇಗೆ ಮನದಟ್ಟಾಗಿಸುವುದು? ಎಂದು ಪ್ರಶ್ನಿಸಬಾರದು. "ತಸ್ಯಾಃ ಪರೋಕ್ತಾನುವಾದರೂಪತ್ವಾತ್" ಎಂಬ ಟೀಕೆಯ ಪ್ರಕಾರ ಶ್ರೀಕೃಷ್ಣನ ಮಾತುಗಳನ್ನು ವೇದವ್ಯಾಸದೇವರು ಅನುವಾದ ಮಾಡಿದ್ದಾರೆ ಹೊರತು ತಮ್ಮ ಅಭಿಪ್ರಾಯವನ್ನು ಆ ಸ್ಮೃತಿ ವಾಕ್ಯದಲ್ಲಿ ಹೇಳಿರುವುದಿಲ್ಲ. ಆದ್ದರಿಂದ ದೋಷವಿಲ್ಲ.

ನ್ಯಾಯವಿವರಣದಲ್ಲಿರುವ 'ತಥಾऽಪಿ' ಪೂರ್ವಪಕ್ಷಪ್ರಾಪಕವಾದ ಶ್ರುತಿಲಿಂಗಗಳಿದ್ದರೂ ಎಂದು ಅರ್ಥ. 'ಅವಧಾರಣಾದಯಃ' ಎಂಬ ಪದಕ್ಕೆ ಅವಧಾರಣಸಹಿತವಾದ ಬ್ರಹ್ಮಶಬ್ದಾದಿಗಳು ಎಂದರ್ಥ.

**प्रकाशः** – एतेन भाष्याद्युक्तं न्यायविवरणोक्तं चैकार्थमिति दर्शितम् ।

तत्र तत्र स्थितो विष्णुः तत्तच्छक्तिप्रबोधकः ।
दूरतोऽप्यतिशक्तस्स लीलया केवलं प्रभुः ।

इत्यनुव्याख्यानेऽन्यथाव्याख्यानं प्रतीयते, तत्सुधायामस्फुटत्वात्सूत्रारूढतया व्यनक्ति – **अनुव्याखाने त्विति ।**

ಹೀಗೆ ಹೇಳಿದ್ದರಿಂದ ಭಾಷ್ಯಾದಿಗಳಲ್ಲಿ ನಿರೂಪಿಸುವ ವಿಷಯ ಹಾಗೂ ನ್ಯಾಯವಿವರಣದಲ್ಲಿ ನಿರೂಪಿತವಾದ ವಿಷಯ ಒಂದೇ ಆಗಿದೆಯೆಂದು ತೋರಿಸಿದಂತಾಯಿತು.

ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತಿಪ್ರಬೋಧಕಃ।
ದೂರತೋऽಪ್ಯತಿಶಕ್ತಸ್ಸ ಲೀಲಯಾ ಕೇವಲಂ ಪ್ರಭುಃ।

'ಎಲ್ಲರಲ್ಲೂ ನಿಂತಿರುವ ವಿಷ್ಣು ಪ್ರತಿಯೊಬ್ಬರ ಶಕ್ತಿಗೆ ಪ್ರಬೋಧಕನಾಗಿದ್ದಾನೆ. ಅತ್ಯಂತ ಬಲಿಷ್ಠನಾದ ಅವನು ದೂರದಲ್ಲಿದ್ದರೂ ಲೀಲೆಯಿಂದ ಎಲ್ಲಾ ಕೆಲಸವನ್ನು ಮಾಡುತ್ತಾನೆ'

ಎಂಬ ಅನುವ್ಯಾಖ್ಯಾನದಲ್ಲಿ ಬೇರೆ ರೀತಿಯಲ್ಲೇ ವ್ಯಾಖ್ಯಾನಿಸಿದ್ದಾರೆಂದು ತೋರುತ್ತದೆ. ಇದರ ಅರ್ಥವೂ ತಿಳಿಯದ ಕಾರಣ ಸೂತ್ರಾರೂಢವನ್ನು ಮಾಡಿ 'ಅನುವ್ಯಾಖ್ಯಾನೇ ತು' ಇತ್ಯಾದಿಯಾಗಿ ವ್ಯಾಖ್ಯಾನಿಸಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः – सर्वसंयोगित्वेति ।** एतेन "अथ वा न सर्वगतत्वं हरेरुपपादनीयं, तस्याऽऽनन्दादिवत्स्रष्टृत्वादिवद्वा गुणत्वाभावात्" इति सुधाऽनुवादः कृतः ।

"तत्किं दूरे स्थितः शक्तिप्रबोधने न शक्तः येन तत्र तत्र तिष्ठति" इति सुधास्थशङ्काभागानुवादः – **तच्चायुक्तमित्यादि ।** 'यद्यपि स प्रभुर्विष्णुर्दूरतोऽतिशक्तः' इत्यादिसुधार्थानुवादः – **तत्र तत्रेति ।**

"ಸರ್ವಸಂಯೋಗಿತ್ವ" ಇತ್ಯಾದಿ ವಾಕ್ಯದಿಂದ "ಅಥ ವಾ ನ ಸರ್ವಗತತ್ವಂ ಹರೇರುಪಪಾದನೀಯಂ ತಸ್ಯಾಽಽನಂದಾದಿವತ್ ಸ್ರಷ್ಟೃತ್ವಾದಿವದ್ವಾ ಗುಣತ್ವಾಭಾವಾತ್" ಹರಿಗೆ ಸರ್ವಗತತ್ವವನ್ನು ಉಪಪಾದಿಸಬೇಕಾಗಿಲ್ಲ. ಏಕೆಂದರೆ ಆನಂದಾದಿಗಳಂತೆ ಸರ್ವಗತತ್ವವೂ ಗುಣವಾಗಿರುವುದಿಲ್ಲ ಎಂದು ಸುಧೆಯಲ್ಲಿರುವುದನ್ನು ಅನುವಾದ ಮಾಡಿದ್ದಾರೆ.

'ದೂರದಲ್ಲಿದ್ದು ಶಕ್ತಿಯನ್ನು ಪ್ರಬೋಧಿಸಲು ಶ್ರೀಹರಿಗೆ ಶಕ್ತಿಯಿಲ್ಲವಾಗಿದ್ದಲ್ಲಿ ಪ್ರತಿಯೊಬ್ಬರಲ್ಲಿಯೂ ನಿಂತು ಕೆಲಸ ಮಾಡಿಸುವಂತಹ ಅವಶ್ಯಕತೆ ಇರುತ್ತಿತ್ತು' ಎಂಬ ಸುಧೆಯಲ್ಲಿರುವ ಶಂಕಾಭಾಗವನ್ನು 'ತಚ್ಚಾಯುಕ್ತಮ್' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ. 'ಯದ್ಯಪಿ ಸ ಪ್ರಭುರ್ವಿಷ್ಣುರ್ದೂರತೋಽತಿಶಕ್ತಃ' ಎಂಬುದಾಗಿ ಸುಧೆಯ ಅರ್ಥವನ್ನಷ್ಟೇ 'ತತ್ರ ತತ್ರೇತಿ' ಇತ್ಯಾದಿಯಾಗಿ ಅನುವಾದ ಮಾಡಲಾಗಿದೆ.

**गुरुराजीयम्** – कर्मकर्तृव्यपदेशाच्चेत्यनेनोक्तं बाधकमाह – **आत्मानं वेदेत्यादि ।।** अत्र 'प्राणो वंशः' इति स्थविरः शाकल्यः अथ कौण्ठरव्यस्त्रीणीत्यादिखण्डद्वयस्थमात्मानं वेदेति वाक्यं तथाऽऽत्मानं परस्मै शंसतीति चत्वारः पुरुषा इत्येतत्खण्डस्थं तथा यस्तित्याजेति दुग्धदोहा इत्येतत्खण्डस्थं वाक्यमुदाहरता इदं सर्वमेकप्रकरणमिति सूचितं भवति । स्मृतेश्चेति सूत्रोक्तं हेतुमाह – **अहमात्मेति ।।**

नन्वनुव्याख्याने प्रकारान्तरेण पूर्वपक्षसिद्धान्तावुक्तौ तदयुक्तम् । उत्सूत्रितत्वादित्यतस्तत्सूत्रारूढं कर्तुमाह – **अनुव्याख्यानेत्विति ।।**




ಒಂದೇ ಕ್ರಿಯೆಗೆ ಯಾವುದು ಕರ್ಮವೋ ಅದು ಕರ್ತೃವಾಗುವುದಿಲ್ಲವೆಂಬ ವ್ಯಾಪ್ತಿಯು ಲೋಕದಲ್ಲಿ ಸಿದ್ಧವಾಗಿದೆ. 'ಆತ್ಮಾನಂ ಪರಸ್ಮೈ ಶಂಸತಿ' ಎಂಬಲ್ಲಿ ಪರಮಾತ್ಮನು 'ಶಂಸನ' ಎಂಬ ಕ್ರಿಯೆಯಲ್ಲಿ ಕರ್ಮನಾದ್ದರಿಂದ ಕರ್ತೃವಾಗಲು ಸಾಧ್ಯವಿಲ್ಲ. ಇದರಿಂದ ಸರ್ವಗತನೆನಿಸಿದ ಆತ್ಮನೇ ಬೇರೆ ಕರ್ತೃವೆನಿಸಿದ ಜೀವನೇ ಬೇರೆ ಎಂದು ನಿರ್ಣಯವಾಗುತ್ತದೆ.

'ಮಾಮಹಂ ಜಾನಾಮಿ' ಇತ್ಯಾದಿ ಸ್ಥಳಗಳಲ್ಲಿ ಈ ನಿಯಮಕ್ಕೆ ವ್ಯಭಿಚಾರವಿರಬಹುದು. ಆದರೆ ಅನುಭವವೆಂಬ ಪ್ರಬಲ ಪ್ರಮಾಣದ ಬಲದಿಂದ ಕರ್ಮ ಹಾಗೂ ಕರ್ತೃಗಳು ಒಂದೇ ಆಗಬಹುದು 'ಆತ್ಮಾನಂ ಪರಸ್ಮೈ ಶಂಸತಿ' ಎಂಬಲ್ಲಿ ಇಂತಹ ಅಪವಾದ ಪ್ರಮಾಣವಿರುವುದಿಲ್ಲ. ಹೀಗೆ ಕರ್ಮಕರ್ತೃಗಳ ಭೇದವ್ಯಪದೇಶದಿಂದ ಸರ್ವಗತನು ಪರಮಾತ್ಮನೆಂದು ತಿಳಿಯುತ್ತದೆ.

ಸರ್ವಗತನೆಂದರೆ ಸಕಲ ಪದಾರ್ಥಗಳಲ್ಲಿ ಆಕಾಶದಂತೆ ಹೆಣೆದುಕೊಂಡಿದ್ದಾನೆಂದಷ್ಟೇ ಅರ್ಥ ಅಲ್ಲ. ಹಾಗೇನಾದರು ಹೇಳಿದರೆ ಅದು ಗುಣವೇ ಆಗುವುದಿಲ್ಲ. ಆದ್ದರಿಂದ ಪ್ರತಿಯೊಂದು ಪದಾರ್ಥಗಳಲ್ಲಿ ನೆಲೆಸಿ ಆಯಾ ಪದಾರ್ಥಗಳ ಶಕ್ತಿಯನ್ನು ಪ್ರಕಟಪಡಿಸಿ ನಿಯಮನ ಮಾಡುವಂತಹ ಗುಣವೇ ಸರ್ವಗತವೆಂಬುದರಿಂದ ತಿಳಿಯುತ್ತದೆ.

ವಸ್ತುತಸ್ತು ಭಗವಂತನು ದೂರದಲ್ಲಿದ್ದೂ ಸಹ ಸಕಲ ಪದಾರ್ಥಗಳನ್ನೂ ನಿಯಂತ್ರಣ ಮಾಡಬಹುದು ಆದರೂ ಕೇವಲ ಲೀಲೆಯಿಂದ ಆಯಾ ವಸ್ತುಗಳಲ್ಲೇ ಇದ್ದು ಸಕಲಪದಾರ್ಥಗಳನ್ನು ನಿಯಂತ್ರಣ ಮಾಡುವುದು ಅವನಲ್ಲಿರುವ ಮತ್ತೊಂದು ದೊಡ್ಡಗುಣ.





## ಸೂತ್ರಗಳ ಜೋಡಣೆಯಲ್ಲೂ ಸ್ವಾರಸ್ಯ

## तात्पर्यचन्द्रिका

**सूत्रक्रमस्तु – आद्ये सूत्रे विषयवाक्यस्थश्रुतिरूपस्वपक्षसाधकोक्तिः । द्वितीये तदुत्तरवाक्यस्थलिङ्गरूपसाधकोक्तिः ।**

**तत्र च 'विवक्षितत्वम्' टीकोक्तरीत्या वक्तुं योग्यत्वम्, वक्तुं योग्ये हि विवक्षा भवति ।**

**यद्वा – 'वितक्षितत्वम्' वक्ष्यमाणत्वं, वक्ष्यमाणे हि विवक्षा भवति । ततश्च अश्रुतत्वादीनामुपसंहारस्थत्वाद् बलवत्तेत्यर्थः ।**

अथवा – अपौरुषेये वेदे वक्तुमिच्छाया अभावाद्विवक्षितत्त्वं तात्पर्यविषयत्वम् । ततश्चाश्रुतत्वादीनामप्राप्तत्वादिना श्रुतेस्तत्र तात्पर्यान्न मिथ्यात्वमित्यर्थः ।

तृतीये साध्यस्य सर्वगतत्त्वस्य अणौ जीवे स्वरूपेणैवासम्भवरूपपरपक्षबाधकोक्तिः । ''स यश्चायमशरीरः'' इति श्रुतिश्रुतस्य अशरीरत्वस्य जीवे अनुपपत्तिं सूचयितुं च शारीरपदम् ।

चतुर्थे जीवे सर्वगतत्वस्य स्वरूपेणासम्भवेऽपि वाक्यशेषस्थकर्मकर्तृभावविरोध इत्येवंरूपबाधकोक्तिः ।

अत एव तृतीयसूत्रस्थानुपपत्तिशब्दस्य प्रकृतेन सर्वगतत्वेनैवान्वयात्कर्मकर्तृभावानुपपत्तिर्न तदर्थ इति चतुर्थसूत्रसार्थक्यम् । यद्यपि विवक्षितगुणाः अव्यवधानेन प्रकृताः, तथाऽपि ब्रह्मणि तेषामुपपत्तिं वदता द्वितीयसूत्रेणैव जीवेऽर्थादनुपपत्तेरप्युक्तत्वात् तृतीयसूत्रं न तत्परम् ।

ಅನುವಾದ - ಸೂತ್ರಗಳ ಜೋಡಣೆಗೆ ಕಾರಣ ಹೀಗಿದೆ - 'ಸರ್ವತ್ರಪ್ರಸಿದ್ಧೋಪದೇಶಾತ್' ಪ್ರಥಮಸೂತ್ರದಲ್ಲಿ 'ಏತಮೇವ ಬ್ರಹ್ಮ' ಎಂಬ ವಿಷಯವಾಕ್ಯದಲ್ಲಿರುವ ಬ್ರಹ್ಮವೆಂಬ ಶ್ರುತಿಯು ಸ್ವಪಕ್ಷಸಾಧವಾಗಿದೆಯೆಂದು ಹೇಳಿದ್ದಾರೆ.

'ವಿವಕ್ಷಿತಗುಣೋಪಪತ್ತೇಶ್ಚ' ಎಂಬ ಎರಡನೆಯ ಸೂತ್ರದಲ್ಲಿ 'ಸ ಯೋತೋಽಶ್ರುತೋ' ಎಂಬ ಮುಂದಿನ ವಾಕ್ಯದಲ್ಲಿರುವ ವಿವಕ್ಷಿತತ್ವವೆಂಬ ಸ್ವಪಕ್ಷಸಾಧಕಲಿಂಗವೆಂದು ಹೇಳಿದ್ದಾರೆ.

ಇಲ್ಲಿ 'ವಿವಕ್ಷಿತತ್ವ' ಎಂಬ ಲಿಂಗಕ್ಕೆ ಟೀಕೆಯಲ್ಲಿ ಹೇಳಿದಂತೆ 'ವಕ್ತುಂ ಯೋಗ್ಯತ್ವಮ್' ಎಂದರ್ಥ. ಹೇಳಲು ಯೋಗ್ಯವಾದುದರಲ್ಲಷ್ಟೇ ವಿವಕ್ಷೆಯು ಉಂಟಾಗುತ್ತದೆ. ಅಥವಾ 'ವಕ್ಷ್ಯಮಾಣತ್ವಂ' ಎಂದರ್ಥ. ಮುಂದೆ ಹೇಳುವ ವಿಷಯದಲ್ಲೇ ಮೊದಲು ವಿವಕ್ಷೆ ಉಂಟಾಗುತ್ತದೆ. ಆದ್ದರಿಂದ ಅಶ್ರುತತ್ವಾದಿಗಳು ಉಪಸಂಹಾರದಲ್ಲಿರುವುದರಿಂದ ಬಲಿಷ್ಠವಾಗಿವೆ ಎಂದರ್ಥ.

ಅಥವಾ ಅಪೌರುಷೇಯವಾದ ವೇದದಲ್ಲಿ ಹೇಳುವ ಇಚ್ಛೆಯು ಅಸಾಧ್ಯವಾದ್ದರಿಂದ ತಾತ್ಪರ್ಯ ವಿಷಯತ್ವವನ್ನೇ ವಿವಕ್ಷಿತತ್ವವೆನ್ನಬೇಕು. ಆದ್ದರಿಂದ ಅಶ್ರುತತ್ವಾದಿಗಳು ಶ್ರುತಿತಾತ್ಪರ್ಯಕ್ಕೆ ವಿಷಯವಾದ್ದರಿಂದ ಮಿಥ್ಯಾಭೂತವೆಂದು ಹೇಳಲಾಗದು ಎಂದರ್ಥ. ಹೀಗೆ ಮೊದಲೆರಡು ಸೂತ್ರಗಳಲ್ಲಿ ಸ್ವಪಕ್ಷಸಾಧಕಗಳನ್ನು ಹೇಳಿದ್ದಾರೆ.




ಒಂದೇ ಕ್ರಿಯೆಗೆ ಯಾವುದು ಕರ್ಮವೋ ಅದು ಕರ್ತೃವಾಗುವುದಿಲ್ಲವೆಂಬ ವ್ಯಾಪ್ತಿಯು ಲೋಕದಲ್ಲಿ ಸಿದ್ಧವಾಗಿದೆ. 'ಆತ್ಮಾನಂ ಪರಸ್ಮೈ ಶಂಸತಿ' ಎಂಬಲ್ಲಿ ಪರಮಾತ್ಮನು 'ಶಂಸನ' ಎಂಬ ಕ್ರಿಯೆಯಲ್ಲಿ ಕರ್ಮನಾದ್ದರಿಂದ ಕರ್ತೃವಾಗಲು ಸಾಧ್ಯವಿಲ್ಲ. ಇದರಿಂದ ಸರ್ವಗತನೆನಿಸಿದ ಆತ್ಮನೇ ಬೇರೆ ಕರ್ತೃವೆನಿಸಿದ ಜೀವನೇ ಬೇರೆ ಎಂದು ನಿರ್ಣಯವಾಗುತ್ತದೆ.

'ಮಾಮಹಂ ಜಾನಾಮಿ' ಇತ್ಯಾದಿ ಸ್ಥಳಗಳಲ್ಲಿ ಈ ನಿಯಮಕ್ಕೆ ವ್ಯಭಿಚಾರವಿರಬಹುದು. ಆದರೆ ಅನುಭವವೆಂಬ ಪ್ರಬಲ ಪ್ರಮಾಣದ ಬಲದಿಂದ ಕರ್ಮ ಹಾಗೂ ಕರ್ತೃಗಳು ಒಂದೇ ಆಗಬಹುದು 'ಆತ್ಮಾನಂ ಪರಸ್ಮೈ ಶಂಸತಿ' ಎಂಬಲ್ಲಿ ಇಂತಹ ಅಪವಾದ ಪ್ರಮಾಣವಿರುವುದಿಲ್ಲ. ಹೀಗೆ ಕರ್ಮಕರ್ತೃಗಳ ಭೇದವ್ಯಪದೇಶದಿಂದ ಸರ್ವಗತನು ಪರಮಾತ್ಮನೆಂದು ತಿಳಿಯುತ್ತದೆ.

ಸರ್ವಗತನೆಂದರೆ ಸಕಲ ಪದಾರ್ಥಗಳಲ್ಲಿ ಆಕಾಶದಂತೆ ಹೆಣೆದುಕೊಂಡಿದ್ದಾನೆಂದಷ್ಟೇ ಅರ್ಥ ಅಲ್ಲ. ಹಾಗೇನಾದರು ಹೇಳಿದರೆ ಅದು ಗುಣವೇ ಆಗುವುದಿಲ್ಲ. ಆದ್ದರಿಂದ ಪ್ರತಿಯೊಂದು ಪದಾರ್ಥಗಳಲ್ಲಿ ನೆಲೆಸಿ ಆಯಾ ಪದಾರ್ಥಗಳ ಶಕ್ತಿಯನ್ನು ಪ್ರಕಟಪಡಿಸಿ ನಿಯಮನ ಮಾಡುವಂತಹ ಗುಣವೇ ಸರ್ವಗತವೆಂಬುದರಿಂದ ತಿಳಿಯುತ್ತದೆ.

ವಸ್ತುತಸ್ತು ಭಗವಂತನು ದೂರದಲ್ಲಿದ್ದೂ ಸಹ ಸಕಲ ಪದಾರ್ಥಗಳನ್ನೂ ನಿಯಂತ್ರಣ ಮಾಡಬಹುದು ಆದರೂ ಕೇವಲ ಲೀಲೆಯಿಂದ ಆಯಾ ವಸ್ತುಗಳಲ್ಲೇ ಇದ್ದು ಸಕಲಪದಾರ್ಥಗಳನ್ನು ನಿಯಂತ್ರಣ ಮಾಡುವುದು ಅವನಲ್ಲಿರುವ ಮತ್ತೊಂದು ದೊಡ್ಡಗುಣ.





## ಸೂತ್ರಗಳ ಜೋಡಣೆಯಲ್ಲೂ ಸ್ವಾರಸ್ಯ

## तात्पर्यचन्द्रिका

**सूत्रक्रमस्तु – आद्ये सूत्रे विषयवाक्यस्थश्रुतिरूपस्वपक्षसाधकोक्तिः । द्वितीये तदुत्तरवाक्यस्थलिङ्गरूपसाधकोक्तिः ।**

**तत्र च 'विवक्षितत्वम्' टीकोक्तरीत्या वक्तुं योग्यत्वम्, वक्तुं योग्ये हि विवक्षा भवति ।**

**यद्वा – 'वितक्षितत्वम्' वक्ष्यमाणत्वं, वक्ष्यमाणे हि विवक्षा भवति । ततश्च अश्रुतत्वादीनामुपसंहारस्थत्वाद् बलवत्तेत्यर्थः ।**

ಪರಿಪೂರ್ಣಚಂದ್ರಿಕಾ

अथवा – अपौरुषेये वेदे वक्तुमिच्छाया अभावाद्विवक्षितत्वं तात्पर्य-विषयत्वम् । ततश्चाश्रुतत्वादीनामप्राप्तत्वादिना श्रुतेस्तत्र तात्पर्यान्न मिथ्यात्वमित्यर्थः ।

तृतीये साध्यस्य सर्वगतत्त्वस्य अणौ जीवे स्वरूपेणैवासम्भवरूप-परपक्षबाधकोक्तिः । "स यश्चायमशरीरः" इति श्रुतिश्रुतस्य अशरीरत्वस्य जीवे अनुपपत्तिं सूचयितुं च शारीरपदम् ।

चतुर्थे जीवे सर्वगतत्वस्य स्वरूपेणासम्भवेऽपि वाक्यशेषस्थकर्मकर्तृभाव-विरोध इत्येवंरूपबाधकोक्तिः ।

अत एव तृतीयसूत्रस्थानुपपत्तिशब्दस्य प्रकृतेन सर्वगतत्त्वेनैवान्वयात्-कर्मकर्तृभावानुपपत्तिर्न तदर्थ इति चतुर्थसूत्रसार्थक्यम् । यद्यपि विवक्षितगुणाः अव्यवधानेन प्रकृताः, तथाऽपि ब्रह्मणि तेषामुपपत्तिं वदता द्वितीयसूत्रेणैव जीवेऽर्थादनुपपत्तेरप्युक्तत्वात् तृतीयसूत्रं न तत्परम् ।

ಅನುವಾದ - ಸೂತ್ರಗಳ ಜೋಡಣೆಗೆ ಕಾರಣ ಹೀಗಿದೆ - 'ಸರ್ವತ್ರಪ್ರಸಿದ್ಧೋಪದೇಶಾತ್' ಪ್ರಥಮಸೂತ್ರದಲ್ಲಿ 'ಏತಮೇವ ಬ್ರಹ್ಮ' ಎಂಬ ವಿಷಯವಾಕ್ಯದಲ್ಲಿರುವ ಬ್ರಹ್ಮವೆಂಬ ಶ್ರುತಿಯು ಸ್ವಪಕ್ಷಸಾಧವಾಗಿದೆಯೆಂದು ಹೇಳಿದ್ದಾರೆ.

'ವಿವಕ್ಷಿತಗುಣೋಪಪತ್ತೇಶ್ಚ' ಎಂಬ ಎರಡನೆಯ ಸೂತ್ರದಲ್ಲಿ 'ಸ ಯೋತೋಽಶ್ರುತೋ' ಎಂಬ ಮುಂದಿನ ವಾಕ್ಯದಲ್ಲಿರುವ ವಿವಕ್ಷಿತತ್ವವೆಂಬ ಸ್ವಪಕ್ಷಸಾಧಕಲಿಂಗವೆಂದು ಹೇಳಿದ್ದಾರೆ.

ಇಲ್ಲಿ 'ವಿವಕ್ಷಿತತ್ವ' ಎಂಬ ಲಿಂಗಕ್ಕೆ ಟೀಕೆಯಲ್ಲಿ ಹೇಳಿದಂತೆ 'ವಕ್ತುಂ ಯೋಗ್ಯತ್ವಮ್' ಎಂದರ್ಥ. ಹೇಳಲು ಯೋಗ್ಯವಾದುದರಲ್ಲಷ್ಟೇ ವಿವಕ್ಷೆಯು ಉಂಟಾಗುತ್ತದೆ. ಅಥವಾ 'ವಕ್ಷ್ಯಮಾಣತ್ವಂ' ಎಂದರ್ಥ. ಮುಂದೆ ಹೇಳುವ ವಿಷಯದಲ್ಲೇ ಮೊದಲು ವಿವಕ್ಷೆ ಉಂಟಾಗುತ್ತದೆ. ಆದ್ದರಿಂದ ಅಶ್ರುತತ್ವಾದಿಗಳು ಉಪಸಂಹಾರದಲ್ಲಿರುವುದರಿಂದ ಬಲಿಷ್ಠವಾಗಿವೆ ಎಂದರ್ಥ.

ಅಥವಾ ಅಪೌರುಷೇಯವಾದ ವೇದದಲ್ಲಿ ಹೇಳುವ ಇಚ್ಛೆಯು ಅಸಾಧ್ಯವಾದ್ದರಿಂದ ತಾತ್ಪರ್ಯ ವಿಷಯತ್ವವನ್ನೇ ವಿವಕ್ಷಿತತ್ವವೆನ್ನಬೇಕು. ಆದ್ದರಿಂದ ಅಶ್ರುತತ್ವಾದಿಗಳು ಶ್ರುತಿತಾತ್ಪರ್ಯಕ್ಕೆ ವಿಷಯವಾದ್ದರಿಂದ ಮಿಥ್ಯಾಭೂತವೆಂದು ಹೇಳಲಾಗದು ಎಂದರ್ಥ. ಹೀಗೆ ಮೊದಲೆರಡು ಸೂತ್ರಗಳಲ್ಲಿ ಸ್ವಪಕ್ಷಸಾಧಕಗಳನ್ನು ಹೇಳಿದ್ದಾರೆ.

इति वाक्ये मनोमयत्वादिनोपास्यो जीवः, तस्यैव मनःप्राणादिसम्बन्धात्, ब्रह्मणस्तु 'अप्राणो ह्यमनाः शुभ्रः'' इत्युादिश्रुत्या तद्राहित्यादिति प्राप्ते, ब्रह्मैवोपास्यं, सत्यकामत्वज्यायस्त्वादिलिङ्गात् । जीवधर्मास्तु मनोमयत्वाणीयस्त्वादयो जीवाभिन्ने ब्रह्मणि युक्ताः । नच वैपरीत्यं शङ्क्यम्, विशिष्टचैतन्यरूपस्य जीवस्य ब्रह्मण्यध्यस्तत्वात् । अध्यस्तसर्पासाधारणधर्मैश्च भीषणत्वादिभिः रज्जू रूपवती, नतु रज्जुरूपेणाभिगम्यत्वादिना सर्पो रूपवान्, तदा सर्पस्यैवाभावात् । सर्पदशायां तु अस्ति वास्तवी रज्जुरिति सिद्धान्तः । तदुक्तं भामत्याम् –

समारोप्यस्य रूपेण विषयो रूपवान् भवेत् ।
विषयस्य तु रूपेण समारोप्यं न रूपवत् ।।

इति । आद्यसूत्रस्य च 'सर्वत्र' वेदान्तेषु परमात्मपरतया प्रसिद्धस्य ब्रह्मशब्दस्योपदेशादित्यर्थ इत्याहुः ।

ಅನುವಾದ - ಅದ್ವೈತಿಗಳ ಅಧಿಕರಣಶರೀರ ಹೀಗಿದೆ. "ಸ ಕ್ರತುಂ ಕುರ್ವೀತ ಮನೋಮಯಃ ಪ್ರಾಣಶರೀರೋ ಭಾರೂಪಃ ಸತ್ಯಸಂಕಲ್ಪಃ'' ಎಂಬ ಛಾಂದ್ಯೋಗೋಪನಿಷತ್ತಿನ ವಾಕ್ಯವನ್ನು ನೋಡಿದಾಗ ಮನೋಮಯವೆಂಬ ಶಬ್ದವು ಜೀವನನ್ನು ಹೇಳುತ್ತದೆ. ಆದ್ದರಿಂದ ಜೀವನನ್ನು ಮಯೋಮಯನೆಂದು ಉಪಾಸನೆ ಮಾಡಬೇಕು. ಏಕೆಂದರೆ ಮನಸ್ಸು ಪ್ರಾಣ ಮೊದಲಾದ ಸಂಬಂಧಗಳು ಜೀವನಿಗಷ್ಟೇ ಇರುವುದರಿಂದ ಜೀವನೇ ಮನೋಮಯನಾಗಬೇಕು. ಬ್ರಹ್ಮನಾದರೂ 'ಅಪ್ರಾಣೋ ಹ್ಯಮನಾಃ ಶುಭ್ರಃ' ಇತ್ಯಾದಿ ಶ್ರುತಿಯಂತೆ ಮನಸ್ಸು ಪ್ರಾಣ ಮೊದಲಾದ ಸಂಬಂಧಗಳಿರುವುದಿಲ್ಲ. ಆದ್ದರಿಂದ ಜೀವನೇ ಉಪಾಸ್ಯನಾಗಿ ಪ್ರತಿಪಾದ್ಯನೆಂದು ಪೂರ್ವಪಕ್ಷ.

बन्धनागारप्रवेशिता, येनानुयुज्येत किन्त्वियमनादिः पूर्वपूर्वकर्माविद्यासंस्कारनिबन्धना नानुयोगमर्हति । नचैतावता ईश्वरस्यानीशता नह्युपकरणाद्यपेक्षिता कर्तुः स्वातन्त्र्यं विहन्ति । तस्माद् यत्किञ्चिदेतदपीति ।। ६-७ ।।

विशेषादिति वक्तव्ये वैशेष्याभिधानमात्यन्तिकं विशेषं प्रतिपादयितुम् । तथा ह्यविद्याकल्पितः सुखादिसम्भोगोऽविद्यात्मन एव जीवस्य युज्यते । नतु निमृष्टनिखिलाविद्यातद्वासनस्य शुद्धबुद्धमुक्तस्वभावस्य परमात्मन इत्यर्थः । शेषमतिरोहितार्थम् ।। ८ ।।

ಸಿದ್ಧಾಂತ - ಈ ವಿಷಯವಾಕ್ಯದಲ್ಲಿ ಉಪಾಸ್ಯನಾಗಿ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಸತ್ಯಕಾಮತ್ವ, ಜ್ಯಾಯಸ್ತ್ವ ಮೊದಲಾದ ಬ್ರಹ್ಮನ ಲಿಂಗಗಳು ಕೇಳಿಸುತ್ತಿರುವುದರಿಂದ. ಇದರಂತೆ ಜೀವನ ಲಿಂಗಗಳೂ ಸಹ ಇವೆಯಲ್ಲವೇ ? ಎಂದು ಪ್ರಶ್ನಿಸಬಾರದು. ಮನೋಮಯತ್ವ, ಅಣೀಯಸ್ತ್ವ ಮೊದಲಾದ ಇಂತಹ ಜೀವನ ಲಿಂಗಗಳೆಲ್ಲವೂ ಜೀವಾಭಿನನ್ನಾದ ಬ್ರಹ್ಮನಲ್ಲಿ ಕೂಡಿಸಬಹುದು. ಜೀವಾಭೇದವಿರುವುದರಿಂದ ಬ್ರಹ್ಮನ ಧರ್ಮವನ್ನೇ ಜೀವನಲ್ಲೇಕೆ ಕೂಡಿಸಬಾರದು? ಎಂದು ವಿಪರೀತವಾಗಿ ಶಂಕಿಸಬಾರದು. ಏಕೆಂದರೆ ಜೀವನು ವಿಶಿಷ್ಟಚೈತನ್ಯರೂಪನಾಗಿದ್ದಾನೆ. ಇಂತಹ ಜೀವನು ಶುದ್ಧಬ್ರಹ್ಮನಲ್ಲಿ ಅಧ್ಯಸ್ತನಾಗಿದ್ದಾನೆ. ಅಧ್ಯಸ್ತದಲ್ಲಿರುವ ಧರ್ಮವು ಅಧಿಷ್ಠಾನದಲ್ಲಿ ಬರಬಹುದೇ ಹೊರತು. ಅಧಿಷ್ಠಾನದ ಧರ್ಮಗಳು ಅಧ್ಯಸ್ತದಲ್ಲಿ ಬರುವುದಿಲ್ಲ. ರಜ್ಜುವಿನಲ್ಲಿ ಸರ್ಪವು ಅಧ್ಯಸ್ತವಾದಾಗ ಸರ್ಪದ ಅಸಾಧಾರಣ ಧರ್ಮವೆನಿಸಿದ ಭೀಷಣತ್ವಾದಿಗಳು ರಜ್ಜುವಿನ ಧರ್ಮವಾಗಿ ಕಾಣಿಸಬಹುದು. ಆದರೆ ಅಧಿಷ್ಠಾನಭೂತವಾದ ರಜ್ಜುವಿನಲ್ಲಿರುವ ಅಭಿಗಮ್ಯತ್ವ (ಅಭಿಮುಖವಾಗಿ ಹೋಗುವಿಕೆ) ಎಂಬ ಧರ್ಮವು ಅಧ್ಯಸ್ತಭೂತವಾದ ಸರ್ಪದಲ್ಲಿ ಬರಲು ಸಾಧ್ಯವಿಲ್ಲ. ಏಕೆಂದರೆ ಅಧಿಷ್ಠಾನವಿರುವ ಕಾಲದಲ್ಲಿ ಸರ್ಪವೇ ಇರುವುದಿಲ್ಲ. ಆದರೆ ಸರ್ಪವಿರುವ ಕಾಲದಲ್ಲಿ ಅಧಿಷ್ಠಾನಭೂತವಾದ ರಜ್ಜು ಇರುತ್ತದೆಂದು ಸಿದ್ಧಾಂತ. ಇದನ್ನೇ ಭಾಮತಿಯಲ್ಲಿ ಹೀಗೆ ಹೇಳಲಾಗಿದೆ -

ಸಮಾರೋಪ್ಯಸ್ಯ ರೂಪೇಣ ವಿಷಯೋ ರೂಪವಾನ್ ಭವೇತ್ ।
ವಿಷಯಸ್ಯ ತು ರೂಪೇಣ ಸಮಾರೋಪ್ಯಂ ನ ರೂಪವತ್ ॥

ಆರೋಪ್ಯದಲ್ಲಿರುವ ಧರ್ಮದಿಂದ ಅಧಿಷ್ಠಾನಭೂತವಾದ ವಿಷಯವು ಧರ್ಮವುಳ್ಳದ್ದಾಗುತ್ತದೆ. ಆದರೆ ಅಧಿಷ್ಠಾನದಲ್ಲಿರುವ ಧರ್ಮದಿಂದ ಅಧ್ಯಸ್ತವು ಧರ್ಮವುಳ್ಳದ್ದಾಗುವುದಿಲ್ಲ ಎಂದು.

ಮೊದಲನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ - ಸರ್ವತ್ರ ಪ್ರಸಿದ್ಧೋಪದೇಶಾತ್ = ಸಕಲ ವೇದಾಂತಗಳಲ್ಲಿ ಜಗತ್ತಿಗೆ ಕಾರಣನಾಗಿ ಮತ್ತು ಬ್ರಹ್ಮಶಬ್ದದಿಂದ ಪ್ರತಿಪಾದ್ಯನಾಗಿ ಪ್ರಸಿದ್ಧನಾದ ಬ್ರಹ್ಮನೇ ಈ ಪ್ರಕರಣದ ಪ್ರಾರಂಭದಲ್ಲಿ ಪ್ರಕೃತನಾಗಿದ್ದಾನೆ. ಆದ್ದರಿಂದ ಅವನನ್ನೇ ಮನೋಮಯ ಶಬ್ದದಿಂದ ಉಪನಿಷತ್ತು ಪರಿಚಯಿಸುತ್ತಿದೆ ಎಂದು.

**प्रकाशः —**

**अन्ये त्विति ।** ''सर्वं खल्विदं ब्रह्म तज्जलानिति शान्त उपासीत अथ खलु क्रतुमयः पुरुषः यथाक्रतुरस्मिन् लोके पुरुषो भवति तथेतः प्रेत्य भवति । स क्रतुं कुर्वित मनोमयः प्राणशरीरो भारूपः सत्यकामस्सत्यसङ्कल्पः स आकाश आत्मा

सर्वकामः सर्वगन्धः सर्वरसः सर्वमिदमभ्यात्तोऽवाक्यनादरः । एष म आत्माऽन्तर्हृदयेऽणीयान् व्रीहेर्वा यवाद्वा सर्षपाद्वा श्यामाकाद्वा श्यमाकतण्डुलाद्वा एष म आत्मान्तर्हृदये ज्यायान् पृथिव्याः ज्यायानन्तरिक्षाज्ज्यायान्दिवो ज्यायानेभ्यो लोकेभ्यः सर्वकर्मा सर्वकामः सर्वगन्धस्सर्वरसस्सर्वमिदमभ्यात्तोऽवाक्यनादर एष म आत्मान्तर्हृदये एतद्ब्रह्मैतमितः प्रेत्याभिसम्भवितास्मि''

इति च्छान्दोग्ये तृतीये श्रूयते । तत्र ''स क्रतुं कुर्वीत'' इति क्रतुशब्दित-सङ्कल्पध्यानापरपर्यायोपासनाविधौ मनोमयत्वादिधर्मैर्जीव उपास्यत्वेनोपदिश्यते अथ ब्रह्मेति संशये,

ವಿವರಣೆ - "ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ । ಅಥ ಖಲು ಕ್ರತುಮಯಃ ಪುರುಷಃ ಯಥಾ ಕ್ರತುರಸ್ಮಿನ್ ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ । ಸ ಕ್ರತುಂ ಕುರ್ವೀತ ಮನೋಮಯಃ ಪ್ರಾಣಶರೀರೋ ಭಾರೂಪಃ ಸತ್ಯಕಾಮಸ್ಸತ್ಯಸಂಕಲ್ಪಃ ಸ ಆಕಾಶ ಆತ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ ಸರ್ವಮಿದಮಭ್ಯಾತ್ತೋऽವಾಕ್ಯನಾದರಃ । ಏಷ ಮ ಆತ್ಮಾಂऽತಹೃದಯೇऽಣೀಯಾನ್ ವ್ರೀಹೇರ್ವಾ ಯವಾದ್ವಾ ಸರ್ಷಪಾದ್ವಾ ಶ್ಯಾಮಾಕಾದ್ವಾ ಶಾಮಾಕತಂಡುಲದ್ವಾ ಏಷ ಮ ಆತ್ಮಾऽಂತಹೃದಯೇ ಜ್ಯಾಯಾನ್ ಪೃಥಿವ್ಯಾಃ ಜ್ಯಾಯಾನಂತರಿಕ್ಷಾಜ್ಜ್ಯಾಯಾಂದಿವೋ ಜ್ಯಾಯಾನೇಭ್ಯೋ ಲೋಕೇಭ್ಯಃ ಸರ್ವಕರ್ಮಾ ಸರ್ವಕಾಮಃ ಸರ್ವ ಗಂಧಸ್ಸರ್ವರಸ್ಸರ್ವಮಿದಮಭ್ಯಾತ್ತೋऽವಾಕ್ಯನಾದರ ಏಷ ಮ ಆತ್ಮಾಂತಹೃದಯೇ ಏತದ್ಬ್ರಹ್ಮೈತಮಿತ ಪ್ರೇತ್ಯಾಭಿಸಂಭವಿತಾಸ್ಮಿ" ಎಂಬುದಾಗಿ ಛಾಂದೋಗ್ಯದ ಮೂರನೇ ಅಧ್ಯಾಯದಲ್ಲಿ ಕೇಳಿಸುತ್ತಿದೆ. ಈ ವಾಕ್ಯದಲ್ಲಿ 'ಸ ಕ್ರತುಂ ಕುರ್ವೀತ' ಎಂದಿದೆ. ಇಲ್ಲಿರುವ ಕ್ರತು ಶಬ್ದದಿಂದ ಸಂಕಲ್ಪ, ಧ್ಯಾನ, ಇವುಗಳ ಪರ್ಯಾಯ ಪದವೆನಿಸಿದ ಉಪಾಸನಾವನ್ನು ವಿಧಿಸಲಾಗಿದೆ. ಈ ವಿಧಿಯಲ್ಲಿ ಮನೋಮಯತ್ವಾದಿಧರ್ಮಗಳಿಂದ ಜೀವನು ಉಪಾಸ್ಯನಾಗಿ ಉಪದೇಶಿಸಲ್ಪಟ್ಟಿದ್ದಾನೋ? ಅಥವಾ ಬ್ರಹ್ಮನೋ ? ಎಂದು ಸಂಶಯ.

**प्रकाशः** – ''मनोमयः'' इत्यादिवाक्योक्तो मनोमयत्वादिविशिष्टो जीव एव, कार्यकारणसङ्घातात्मनो जीवस्यैव मन आदिसम्बन्धस्य प्रसिद्धत्वात् । ब्रह्मणस्तु ''अप्राणो ह्यमनाः'' इत्यादिना तद्राहित्यात् । ''सर्वं खल्विदं ब्रह्म'' इति वाक्यं ब्रह्मबोधकमपि ''क्रतुं कुर्वीत'' इत्युक्तोपासनायां न कर्मतया ब्रह्मार्पकं, तस्य ''क्रतुं कुर्वीत'' इति वाक्यविहितोपासनानुवादेन शान्तत्वरूप-गुणविधिहेतुसमर्पकत्वात् । इदं सर्वं जगत्तज्जत्वात्तल्लत्वात्तदनत्वाद्ब्रह्मात्मकमेव

यस्मात्तस्माद्रागद्वेषौ हित्वा शान्त सन् उपासीतेत्येवम्परत्वात्, "क्रतुं कुर्वीत" इत्युक्तोपासनायां स्वाक्यगतमनोमयत्वादिविशिष्टजीवस्यैव कर्मत्वेनान्वयसम्भवेऽन्यपराद्वाक्याद्ब्रह्मणः कर्मत्वेन स्वीकारायोगात् । सत्यसङ्कल्पत्वादिब्रह्मधर्माणां तदभिन्ने जीवे नेयत्वात् ।

उक्तञ्च भामत्यां –

क्रतुमित्यादिवाक्येन विहितां क्रतुभावनाम् ।
अनूद्य सर्वमित्यादिवाक्याच्छमगुणे विधिः ।

इति । एवं प्राप्ते

'ಮನೋಮಯಃ' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಮನೋಮಯಾತ್ವಾದಿ ವಿಶಿಷ್ಟನಾದವನು ಜೀವನೇ ಆಗಿದ್ದಾನೆ. ಏಕೆಂದರೆ ಕಾರ್ಯಕಾರಣಗಳ ಸಂಗ್ರಾಹಕರೂಪನೇ ಆಗಿರುವ ಜೀವನಲ್ಲಷ್ಟೇ ಮನಸ್ಸು ಮೊದಲಾದವುಗಳ ಸಂಬಂಧವು ಪ್ರಸಿದ್ಧವಾಗಿವೆ. ಆದರೆ ಬ್ರಹ್ಮನಿಗೆ 'ಅಪ್ರಾಣೋ ಹ್ಯಮನಾಃ' ಇತ್ಯಾದಿಯಾಗಿ ಮನಸ್ಸು ಮೊದಲಾದವುಗಳ ಸಂಬಂಧವಿಲ್ಲವೆಂದು ಪ್ರಸಿದ್ಧವಾಗಿದೆ.

'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಪ್ರಕರಣವು ಪ್ರಾರಂಭವಾಗಿದೆ. ಹೀಗೆ ಉಪಕ್ರಮವಾಕ್ಯದಲ್ಲಿ ಬ್ರಹ್ಮನೇ ಶ್ರುತವಾದ್ದರಿಂದ ಬ್ರಹ್ಮವಿಷಯಕನಾದ ಉಪಾಸನೆಯನ್ನೇ ಮಾಡಬೇಕು ಹೊರತು ಜೀವವಿಷಯವಾದ ಉಪಾಸನೆಯನ್ನಲ್ಲವೆಂದು ತಿಳಿಯುತ್ತದಲ್ಲವೆ? ಎಂದು ಪ್ರಶ್ನಿಸಬಾರದು. 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವಾಕ್ಯವು ಬ್ರಹ್ಮಬೋಧಕವಾಗಿರಬಹುದು. ಆದರೆ ಉಪಾಸನಾ ವಿಷಯದಲ್ಲಿ ಬ್ರಹ್ಮನನ್ನು ಕರ್ಮತ್ವೇನ ತಿಳಿಸುತ್ತಿದೆ. ಏಕೆಂದರೆ ಮುಂದೆ 'ತಜಲಾನಿತಿ ಉಪಬ್ರಹ್ಮ' ಎಂದು ಕೇಳಿಸುತ್ತಿದೆ. ಇಲ್ಲಿರುವ 'ಇತಿ' ಶಬ್ದವು ಹೇತ್ವರ್ಥಕವಾಗಿದೆ. ಶಾಂತನಾಗಿ ಹೇಗೆ ಉಪಾಸನೆ ಮಾಡಬೇಕು ? ಎಂಬುದಕ್ಕೆ ಹೇತು ಸಮರ್ಪಕವಾಗಿ 'ಸರ್ವಂ ಖಲ್ವಿದಂ' ಎಂಬ ವಾಕ್ಯವು ಪ್ರಸಕ್ತವಾಗಿದೆ. ಈ ಸಮಸ್ತ ಜಗತ್ತು ಬ್ರಹ್ಮನಿಂದಲೇ ಹುಟ್ಟಿ ಅವನಿಂದಲೇ ಲಯವಾಗುವುದರಿಂದ ಸಮಸ್ತ ಜಗತ್ತೆಲ್ಲವೂ ಬ್ರಹ್ಮಸ್ವರೂಪವೇ ಆಗಿದೆ. ಈ ಕಾರಣದಿಂದ ರಾಗದ್ವೇಷಗಳನ್ನೆಲ್ಲಾ ತೊರೆದು ಶಾಂತನಾಗಿ ಉಪಾಸನೆಯನ್ನು ಮಾಡಬೇಕೆಂದು. ಆದ್ದರಿಂದ ವಾಕ್ಯಾಂತರದಲ್ಲಿ ಪ್ರಸಕ್ತನಾದ ಬ್ರಹ್ಮನ ಉಪಾಸನೆಯನ್ನು 'ಕ್ರತುಂ ಕುರ್ವೀತ' ಎಂಬ ವಾಕ್ಯವು ವಿಧಿಸುತ್ತಿಲ್ಲ. ತನ್ನ ವಾಕ್ಯದಲ್ಲಿಯೇ ಇರುವ ಮನೋಮಯತ್ವಾದಿ ವಿಶಿಷ್ಟನಾದ ಜೀವನನ್ನೇ ಕರ್ಮತ್ವೇನ ಉಪಾಸನೆಗೆ ವಿಷಯೀಕರಿಸುತ್ತಿದೆ. ಹೀಗೆ ಸುಲಭವಾಗಿಯೇ ಅರ್ಥೈಸಲು ಬರುವಾಗ ಬ್ರಹ್ಮನನ್ನು ಕರ್ಮತ್ವೇನ ಸ್ವೀಕರಿಸುವುದು ತಪ್ಪಾಗುತ್ತದೆ.

ಹಾಗಾದರೆ ಸತ್ಯಸಂಕಲ್ಪತ್ವೇ ಮೊದಲಾದ ಬ್ರಹ್ಮನ ಧರ್ಮಗಳು ಕೇಳಿಸುತ್ತಿರುವುದರಿಂದ ಬ್ರಹ್ಮನೇ ಉಪಾಸನೆಗೆ ಕರ್ಮವೆಂದು ಹೇಳಬೇಕೆಂದು ಶಂಕಿಸಬಾರದು. ಏಕೆಂದರೆ ಬ್ರಹ್ಮನಿಂದ ಅಭಿನ್ನನಾದ ಜೀವನಲ್ಲಿಯೂ ಸತ್ಯಸಂಕಲ್ಪತ್ವಾದಿಧರ್ಮಗಳನ್ನು ಜೀವನಲ್ಲಿ ಹೊಂದಿಸಬಹುದು. ಇದನ್ನು ಭಾಮತಿಯಲ್ಲಿ ಹೀಗೆ ಹೇಳಲಾಗಿದೆ -

ಕ್ರತುಮಿತ್ಯಾದಿವಾಕ್ಯೇನ ವಿಹಿತಾಂ ಕ್ರತುಭಾವನಾಮ್ ।
ಅನೂದ್ಯ ಸರ್ವಮಿತ್ಯಾದಿವಾಕ್ಯಾಚ್ಛಮಗುಣೇ ವಿಧಿಃ ।

'ಕ್ರತುಂ ಕುರ್ವೀತ' ಎಂಬ ವಾಕ್ಯದಿಂದ ಕ್ರತುವನ್ನು ಅನುವಾದ ಮಾಡಿ 'ಸರ್ವಂ ಖಲ್ವಿದಂ' ಎಂಬ ಶ್ರುತಿಯಿಂದ ಶಮಗುಣಾದಿ ಧರ್ಮವನ್ನು ವಿಧಿಸಲಾಗಿದೆ.

**प्रकाशः** – 'प्राणशरीरः' इत्यत्र प्राणः शरीरमस्येति बहुव्रीहित्वात्, समासस्थसर्वनाम्नः सन्निहितपरस्य "सर्वं खल्विदं ब्रह्म" इति पूर्ववाक्ये सर्ववेदान्तेषु प्रसिद्धस्य ब्रह्मशब्दस्योपदेशेन ब्रह्मण एव सन्निहितत्वात्, तत्परामर्शकतया प्राणशरीरपदेन ब्रह्मण एवोपस्थित्या जीवप्रतीत्यभावात्,

मनोमयशब्दस्य च विकारप्राचुर्याद्यनेकार्थकमयडन्तस्य साधारणतया जीव-विशेषोपस्थापकत्वायोगात्,

सत्यकामत्वादिविवक्षितगुणानां ब्रह्मण्येवोपपत्तेः, अन्यपरादपि वाक्यादुपासन-कर्माकाङ्क्षानिवर्तकत्वेन ब्रह्मैवोपास्यत्वेनोच्यते । नच जीवधर्मविरोधः, तेषां जीवाभिन्ने ब्रह्मण्यपि युक्तत्वात्, वैपरीत्यस्य चासम्भवात् ।

'ಪ್ರಾಣಶರೀರಃ' ಎಂಬಲ್ಲಿ 'ಪ್ರಾಣಂ ಶರೀರಃ ಅಸ್ಯ ಇತಿ ಪ್ರಾಣಃ' ಎಂದು ಬಹುವ್ರೀಹಿಸಮಾಸ. ಈ ಸಮಾಸದಲ್ಲಿ 'ಅಸ್ಯ' ಎಂಬ ಸರ್ವನಾಮ ಶಬ್ದದಿಂದ ಸನ್ನಿಹಿತವಾದದ್ದನ್ನೇ ಪರಾಮರ್ಶಿಸಬೇಕು. ಹಿಂದಿನ ವಾಕ್ಯವಾದ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದಾಗಿ ಸಕಲ ವೇದಾಂತಗಳಲ್ಲಿ ಪ್ರಸಿದ್ಧವಾದ ಬ್ರಹ್ಮಶಬ್ದದ ಉಪದೇಶವಿರುವುದರಿಂದ ಬ್ರಹ್ಮನೇ ಸನ್ನಿಹಿತನಾಗಿದ್ದಾನೆ. ಆದ್ದರಿಂದ ಇಂತಹ ಬ್ರಹ್ಮನನ್ನೇ 'ಅಸ್ಯ' ಎಂಬ ಸರ್ವನಾಮಶಬ್ದದಿಂದ ಪರಾಮರ್ಶಿಸಬೇಕು. ಆವಾಗ ಪ್ರಾಣಶರೀರ ಪದದಿಂದ ಬ್ರಹ್ಮನೇ ಉಪಸ್ಥಿತನಾಗುತ್ತಾನೆ ಹೊರತು ಜೀವನು ಉಪಸ್ಥಿತನಾಗುವುದಿಲ್ಲ. ಆದ್ದರಿಂದ 'ಪ್ರಾಣಶರೀರಃ' ಎಂಬ ವಿಷಯವಾಕ್ಯದಿಂದ ಪ್ರತಿಪಾದ್ಯನಾದವನು ಬ್ರಹ್ಮನೆಂದು ನಿರ್ಣಯವಾಗುತ್ತದೆ.

ವಸ್ತುತಸ್ತು ವಿಷಯ ವಾಕ್ಯದಲ್ಲಿ ಜೀವಲಿಂಗವನ್ನು ಹೇಳುವ ಮನೋಮಯ ಶಬ್ದವಿದೆ. ಆದರೆ ಇಲ್ಲಿರುವ ಮಯಟ್ ಪ್ರತ್ಯಯಕ್ಕೆ ವಿಕಾರ, ಪ್ರಾಚುರ್ಯ, ಮೊದಲಾದ ಅನೇಕ ಅರ್ಥಗಳಿರುವುದರಿಂದ ಮನೋಮಯಶಬ್ದವು ಖುದ್ದಾಗಿ ಜೀವನಿಗೆ ಉಪಸ್ಥಾಪಕವಾಗಲು ಸಮರ್ಥವಾಗುವುದಿಲ್ಲ.

ಸತ್ಯಕಾಮತ್ವವೇ ಮೊದಲಾದ ವಿವಕ್ಷಿತಗುಣಗಳು ಬ್ರಹ್ಮನಲ್ಲಿಯೇ ಉಪಪನ್ನವಾಗುತ್ತವೆ. ವಸ್ತುತಃ ಪೂರ್ವಪಕ್ಷದಲ್ಲಿ ಹೇಳಿದಂತೆ 'ಸರ್ವಂ ಖಲ್ವಿದಂ' ಎಂಬ ಹಿಂದಿನ ವಾಕ್ಯವು ಶಾಂತತ್ವವೆಂಬ ಗುಣವಿಧಾಯಕವಾಗಿ ಅನ್ಯಪರವಾಗಿರುತ್ತದೆ. ಆದರೂ ಸಹ ಉಪಸನಾ ಕರ್ಮಕ್ಕೆ ಆಕಾಂಕ್ಷಾನಿವರ್ತಕವಾಗಿ ಬ್ರಹ್ಮನೇ ಉಪಾಸ್ಯನೆಂದು ತಿಳಿಸುತ್ತದೆ. ಶ್ರುತಿಯಲ್ಲಿ ಕೇಳಿಸುತ್ತಿರುವ ಜೀವಧರ್ಮಗಳಿಂದಲೂ ವಿರೋಧ ಬರುವುದಿಲ್ಲ. ಏಕೆಂದರೆ ಅಂತಹ ಜೀವಧರ್ಮಗಳೆಲ್ಲವನ್ನು ಜೀವಾಭಿನ್ನವಾದ ಬ್ರಹ್ಮನಲ್ಲಿಯೂ

ಕೂಡಿಸಬಹುದು. ಜೀವಾಭೇದವಿರುವುದಾದರೆ ಬ್ರಹ್ಮನ ಧರ್ಮಗಳನ್ನೇ ಜೀವನಲ್ಲಿ ಕೂಡಿಸಬಹುದಲ್ಲವೇ? ಎಂದು ವಿಪರೀತವಾಗಿ ಶಂಕಿಸಬಾರದು.

**प्रकाशः** – तदुक्तं भामत्यां –

समासस्सर्वनामार्थः सन्निकृष्टमपेक्षते ।
तद्धितार्थोऽपि सामान्यान्नापेक्षाया निवर्तकः ॥
तस्मादपेक्षितं ब्रह्म ग्राह्यमन्यपरादपि ।
तथा च सत्यसङ्कल्पप्रभृतीनां यथार्थता ॥

इति । ''क्रतुं कुर्वीत'' इत्यस्य ध्यानं कुर्वीत उपासीतेति यावदित्यर्थः । ''मनोमयः'' इत्यंशोक्तिः पूर्वपक्षयुक्तिसूचनाय, ''सत्यसङ्कल्पः'' इत्यंशोक्तिः सिद्धान्तयुक्तिसूचनायेति ज्ञेयम् ।

ಹಿಂದೆ ಹೇಳಿದ ವಿಚಾರವನ್ನೇ ಭಾಮತಿಯಲ್ಲಿ ಹೀಗೆ ಸಂಗ್ರಹಿಸಲಾಗಿದೆ -

ಸಮಾಸಸ್ಸರ್ವನಾಮಾರ್ಥಃ ಸನ್ನಿಕೃಷ್ಟಮಪೇಕ್ಷತೇ ।
ತದ್ಧಿತಾರ್ಥೋಽಪಿ ಸಾಮಾನ್ಯಾನ್ನಾಪೇಕ್ಷಾಯಾ ನಿವರ್ತಕಃ ॥
ತಸ್ಮಾದಪೇಕ್ಷಿತಂ ಬ್ರಹ್ಮ ಗ್ರಾಹ್ಯಮನ್ಯಪರಾದಪಿ ।
ತಥಾ ಚ ಸತ್ಯಸಂಕಲ್ಪಪ್ರಭೃತೀನಾಂ ಯಥಾರ್ಥತಾ ॥

'ಪ್ರಾಣಶರೀರಃ' ಎಂಬ ಸಮಾಸದಲ್ಲಿ ಅಡಗಿದ 'ಅಸ್ಯ' ಎಂಬ ಸರ್ವನಾಮದ ಅರ್ಥವು ಸನ್ನಿಹಿತವಾದದ್ದನ್ನೇ ಪರಾಮರ್ಶಿಸುತ್ತದೆ. 'ಮನೋಮಯಃ' ಎಂಬಲ್ಲಿರುವ ತದ್ಧಿತಾರ್ಥವೂ ಸಹ ಜೀವವಿಶೇಷಬೋಧಕವಾಗಿಲ್ಲ. ಆದ್ದರಿಂದ ಆಕಾಂಕ್ಷೆಗೆ ನಿವರ್ತಕವಾಗುವುದಿಲ್ಲ. ಉಪಾಸನೆಗೆ ಕರ್ಮಕಾಂಕ್ಷೆಯು ಪ್ರಾಪ್ತವಾದಾಗ 'ಸರ್ವಂ ಖಲ್ವಿದಂ' ಎಂಬ ವಾಕ್ಯವು ಅನ್ಯಪರವಾದರೂ ಸಹ ಬ್ರಹ್ಮನನ್ನು ಕರ್ಮವೆಂದು ತಿಳಿಸುತ್ತದೆ. ಆದ್ದರಿಂದ 'ಸತ್ಯಸಂಕಲ್ಪತ್ವ' ಮೊದಲಾದ ಧರ್ಮಗಳು ಬ್ರಹ್ಮನಲ್ಲಿ ಯುಕ್ತವಾಗುತ್ತವೆ ಎಂದು.

ಶ್ರುತಿಯಲ್ಲಿರುವ ''ಕ್ರತುಂ ಕುರ್ವೀತ'' ಎಂಬುದಕ್ಕೆ ಧ್ಯಾನವನ್ನು ಮಾಡಬೇಕು ಅಂದರೆ ಉಪಾಸನೆ ಮಾಡಬೇಕೆಂದು ಅರ್ಥ. ವಿಷಯವಾಕ್ಯದಲ್ಲಿ 'ಮನೋಮಯಃ' ಎಂಬ ಅಂಶವನ್ನು ಸ್ವೀಕರಿಸಿದ್ದರಿಂದ ಪೂರ್ವಪಕ್ಷಯುಕ್ತಿಯನ್ನು ಸೂಚಿಸಿದ್ದಾರೆ. 'ಸತ್ಯಸಂಕಲ್ಪಃ' ಎಂಬ ಅಂಶವನ್ನು ಸ್ವೀಕರಿಸಿದ್ದರಿಂದ ಸಿದ್ಧಾಂತಯುಕ್ತಿಯನ್ನು ಸೂಚಿಸಿದ್ದಾರೆಂದು ತಿಳಿಯಬೇಕು.

**प्रकाशः** – ननु मनोमयावाक्योक्तो जीवः कुतः, ब्रह्मैव किं नेत्यत आह – तस्यैवेति ।

**ननु जीवस्य मनोमयत्वादयः स्वतः, ब्रह्मणस्तु तद्वारा । प्रथमं द्वारस्य बुद्धिस्थत्वात्तदेवोपास्यमस्तु, न पुनर्जघन्यं ब्रह्म, तल्लिङ्गानि च तदभेदाज्जीवेऽप्युपपत्स्यन्त इति भावेनाशङ्क्य निराह – नच वैपरीत्यमिति । 'रूपवती' धर्मवती । 'विषयः' अधिष्ठानं । रूपशब्दो धर्मपरः ।**

ಮನೋಮಯ ವಾಕ್ಯದಿಂದ ಹೇಳಲ್ಪಟ್ಟವನು ಜೀವನೇ ಏಕಾಗಬೇಕು. ಬ್ರಹ್ಮನು ಏಕೆ ಪ್ರತಿಪಾದ್ಯನಾಗಬಾರದು? ಎಂಬ ಪ್ರಶ್ನೆಗೆ 'ತಸ್ಯೇವ' ಎಂಬುದರಿಂದ ಉತ್ತರಿಸಿದ್ದಾರೆ.

ಜೀವನಲ್ಲಿ ಮನೋಮಯತ್ವಾದಿಗಳು ಸ್ವಾಭಾವಿಕವಾಗಿ ಜೀವನಲ್ಲಿ ಇರುತ್ತವೆ. ಬ್ರಹ್ಮನಲ್ಲಾದರೂ ಜೀವಾಭೇದಮೂಲಕವಾಗಿ ಇರುತ್ತವೆ. ಮೊದಲು ದ್ವಾರವೇ ಬುದ್ಧಿಯಲ್ಲಿ ಉಪಸ್ಥಿತವಾಗುವುದರಿಂದ ಅಂತಹ ಜೀವನೇ ಉಪಾಸ್ಯನಾಗಲಿ ಗೌಣನಾದ ಬ್ರಹ್ಮನು ಉಪಾಸ್ಯನಾಗುವುದು ಬೇಡ. ಶ್ರುತಿಯಲ್ಲಿ ಬ್ರಹ್ಮನ ಲಿಂಗಗಳು ಕೇಳಿಸುತ್ತಿರಬಹುದು. ಆದರೆ ಜೀವಾಭೇದವಿರುವುದರಿಂದ ಆ ಲಿಂಗಗಳೆಲ್ಲವನ್ನು ಜೀವನಲ್ಲಿ ಕೂಡಿಸಬಹುದು. ಹೀಗೆ ಆಶಂಕಿಸಿ 'ನಚ ವೈಪರೀತ್ಯಂ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ರೂಪವತಿ' ಎಂದರೆ ಧರ್ಮವುಳ್ಳದ್ದು ಎಂದರ್ಥ. 'ವಿಷಯ' ಶಬ್ದಕ್ಕೆ ಅಧಿಷ್ಠಾನ ಎಂದರ್ಥ. 'ರೂಪ' ಶಬ್ದಕ್ಕೆ ಧರ್ಮ ಎಂದರ್ಥ.

**गुरुराजीयम् – समारोप्यस्य रूपेणेति** ।। ज्ञायमानेन समारोप्यरूपेणाधिष्ठानं विषयो रूपवान् भवेत् । तस्याज्ञायमानत्वेन समारोपकालेपि सत्वात् । विषयस्य तु रूपेणासाधारणाकारेण ज्ञायमानेन समारोप्यं न रूपवत् । अधिष्ठानासाधारणरूपज्ञाने सति समारोप्याभावादित्यर्थः ।




ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - 'ಮನೋಮಯಃ ಪ್ರಾಣಶರೀರಃ ಭಾರೂಪಃ ಸತ್ಯಸಂಕಲ್ಪಃ' ಎಂಬುದು ವಿಷಯವಾಕ್ಯ. ಮನಸ್ಸು ಮೊದಲಾದವುಗಳ ಸಂಬಂಧವಿರುವ ಜೀವನೇ ಮನೋಮಯನೆಂದು ಉಪಾಸಿಸಬೇಕೆಂದು ಪೂರ್ವಪಕ್ಷ. ಸತ್ಯಕಾಮತ್ವಾದಿಲಿಂಗಗಳಿರುವುದರಿಂದ ಬ್ರಹ್ಮನೇ ಉಪಾಸ್ಯನೆಂದು ಸಿದ್ಧಾಂತ. ಮನೋಮಯತ್ವ ಮೊದಲಾದ ಜೀವನ ಧರ್ಮಗಳೆಲ್ಲವನ್ನು ಜಿವಾಭಿನ್ನನಾದ್ದರಿಂದ ಬ್ರಹ್ಮನಲ್ಲಿಯೇ ಹೊಂದಿಸಬೇಕು.

ಜೀವನ ಧರ್ಮವನ್ನು ಬ್ರಹ್ಮನಲ್ಲಿ ಕೂಡಿಸುವುದಾದರೆ ಬ್ರಹ್ಮನಲ್ಲಿರುವ ಸತ್ಯಸಂಕಲ್ಪತ್ವವೇ ಮೊದಲಾದ ಬ್ರಹ್ಮನ ಧರ್ಮಗಳನ್ನು ಜೀವನಲ್ಲೇಕೆ ಕೂಡಿಸಬಾರದು? ಎಂಬ ಪ್ರಶ್ನೆಗೆ ಅದ್ವೈತಿಗಳ ಉತ್ತರ ಹೀಗಿದೆ - ಜೀವನು ಬ್ರಹ್ಮನಲ್ಲಿ ಅಧ್ಯಸ್ತನಾಗಿದ್ದಾನೆ. ಅಧ್ಯಸ್ತಪದಾರ್ಥದಲ್ಲಿರುವ ಧರ್ಮವು ಅಧಿಷ್ಠಾನದಲ್ಲಿ ಬರಬಹುದು. ಆದರೆ ಅಧಿಷ್ಠಾನದಲ್ಲಿರುವ ಧರ್ಮವು ಅಧ್ಯಸ್ತದಲ್ಲಿ ಬರಲು ಸಾಧ್ಯವಿಲ್ಲ. ಹಗ್ಗವನ್ನು ನೋಡಿ ಹಾವು ಎಂದು ಭ್ರಮಿಸಿದಾಗ ಭಯವನ್ನು ಹುಟ್ಟಿಸುವಿಕೆ ಎಂಬುದು ಸರ್ಪದಲ್ಲಿರುವ ಧರ್ಮವಾಗಿದೆ. ಇದು

ರಜ್ಜುವಿನಲ್ಲಿ ಬರುವುದು ಕಂಡಿದೆ. ಆದರೆ ರಜ್ಜುವಿನಲ್ಲಿ ಅಭಿಮುಖವಾಗಿ ಹೋಗುವಿಕೆ ಎಂಬ ಧರ್ಮವಿದೆ. ಈ ಧರ್ಮವು ಸರ್ಪದಲ್ಲಿರುವುದು ಕಂಡಿಲ್ಲ. ಅಂದರೆ ಹಗ್ಗವನ್ನು ಸ್ವೀಕರಿಸಲು ಹೋಗುತ್ತೇವೆ. ಆದರ ಸರ್ಪವನ್ನು ಸ್ವೀಕರಿಸಲು ಯಾರೂ ಹೋಗುವುದಿಲ್ಲ.




## ಅದ್ವೈತಮತ ವಿಮರ್ಶೆ

**अत्र ब्रूमः –**

**तत्त्वतो भात्यधिष्ठाने नारोप्यगतधर्मधीः ।**
**ब्रह्मणश्च तथा भानं त्वयाऽप्यत्राभ्युपेयते ।।**

**यद्यप्यारोप्यस्यासाधारणरूपेण ज्ञानदशायामधिष्ठानमस्ति, अधिष्ठानस्य तु तथा ज्ञानदशायां आरोप्यं नास्ति । तथाऽप्यधिष्ठानं तथा ज्ञानदशायां नारोप्यधर्मेण धर्मवत् । नहि रज्जू रज्जुत्वाभिगम्यत्वादिना ज्ञानदशयां भीषणत्वादिमत् । प्रकृते च अधिष्ठानं ब्रह्मत्वसाधकसत्यकामत्वाद्यसाधारणरूपेण भासते । नहि सिद्धान्तः ''सत्यकामः'' इत्यादिवाक्यशेषाज्ञानमूलः ।**

**यद्यपि ''सत्यकामः'' इत्यादिवाक्यजन्यमधिष्ठानतत्त्वज्ञानं परोक्षम्, तथाऽपि तत्परोक्षभ्रमविरोध्येव । इह चाणीयस्त्वादिविभ्रमः श्रौतत्वात्परोक्षः । अत एवायं न सोपाधिकः, येन तत्त्वज्ञानेऽप्यनुवर्तेत ।**

ಅನುವಾದ - ಅದ್ವೈತಿಗಳಿಗೆ ಹೀಗೆ ಉತ್ತರಿಸುತ್ತೇವೆ -

ತತ್ತ್ವತೋ ಭಾತ್ಯಧಿಷ್ಠಾನೇ ನಾರೋಪ್ಯಗತಧರ್ಮಧೀಃ ।
ಬ್ರಹ್ಮಣಶ್ಚ ತಥಾ ಭಾನಂ ತ್ವಯಾಽಪ್ಯತ್ರಾಭ್ಯುಪೇಯತೇ ॥

ಭ್ರಾಂತಿಗೆ ಅಧಿಷ್ಠಾನನಾದ ಬ್ರಹ್ಮನು ತತ್ವತಃ ತೋರುವಾಗ

ವಸ್ತುತಸ್ತು ಯಾವ ಸಂದರ್ಭದಲ್ಲಿ ಆರೋಪ್ಯವು ತನ್ನಲ್ಲಿರುವ ಅಸಾಧಾರಣ ಧರ್ಮದಿಂದ ತೋರುತ್ತಿರುತ್ತದೋ ಆ ಸಂದರ್ಭದಲ್ಲಿ ಅಧಿಷ್ಠಾನವು ಇರಬಹುದು. ಅಧಿಷ್ಠಾನವು ತನ್ನಲ್ಲಿರುವ ಅಸಾಧಾರಣ ಧರ್ಮದಿಂದ ತೋರುವಾಗ ಆರೋಪ್ಯವು ಇರಲು ಸಾಧ್ಯವಿಲ್ಲ. ಆದರೆ ಅಧಿಷ್ಠಾನವು ಯಾವ ಸಂದರ್ಭದಲ್ಲಿ ತನ್ನಲ್ಲಿರುವ ಧರ್ಮದಿಂದ ಸಹಿತವಾಗಿ ತೋರುತ್ತಿರುತ್ತದೋ ಆ ಸಂದರ್ಭದಲ್ಲಿ ಆರೋಪ್ಯದಲ್ಲಿರುವ ಧರ್ಮದಿಂದ ಸಹಿತವಾಗಿ ತೋರಲು ಸಾಧ್ಯವಿಲ್ಲ. ಏಕೆಂದರೆ ಹಗ್ಗದಲ್ಲಿ

'ಅಭಿಮುಖೀಕೃತ್ಯ ಗಮ್ಯತ್ವ' ಎಂಬ ಧರ್ಮವು ತೋರುವ ಸಂದರ್ಭದಲ್ಲಿ ಅಧ್ಯಸ್ತವಾದ ಸರ್ಪದಲ್ಲಿರುವ ಭೀಷಣತ್ವಾದಿಧರ್ಮಗಳು ಹಗ್ಗದಲ್ಲಿ ತೋರುವುದಿಲ್ಲ.

ಪ್ರಕೃತ ಅಧಿಷ್ಠಾನಭೂತನಾದ ಬ್ರಹ್ಮನು ಬ್ರಹ್ಮತ್ವಕ್ಕೆ ಸಾಧಕವಾದ ಸತ್ಯಕಾಮತ್ವವೇ ಮೊದಲಾದ ಅಸಾಧಾರಣ ಧರ್ಮದಿಂದ ಸಹಿತನಾಗಿ ತೋರುತ್ತಿರುವುದರಿಂದ ಜೀವನಲ್ಲಿರುವ ಮನೋಮಯತ್ವಾದಿಗಳನ್ನು ಆರೋಪಿಸಲು ಸಾಧ್ಯವಿಲ್ಲ. ಒಂದು ವೇಳೆ ಸತ್ಯಕಾಮತ್ವಾದಿಗಳ ಜ್ಞಾನವು ಇಲ್ಲದಿದ್ದರೆ ಮನೋಮಯತ್ವಾದಿಗಳನ್ನು ಆರೋಪಿಸಬಹುದಿತ್ತು. ಆದರೆ ಸಿದ್ಧಾಂತವು 'ಸತ್ಯಕಾಮಃ' ಇತ್ಯಾದಿ ವಾಕ್ಯಶೇಷದ ಅಜ್ಞಾನಮೂಲವಾಗಲು ಸಾಧ್ಯವಿಲ್ಲ.

ವಿಚಾರ ಮಾಡಿದರೆ 'ಸತ್ಯಕಾಮಃ' ಇತ್ಯಾದಿ ವಾಕ್ಯದಿಂದ ಹುಟ್ಟುವ ಅಧಿಷ್ಠಾನತತ್ವಜ್ಞಾನವು ಶಬ್ದಜನ್ಯಜ್ಞಾನದಿಂದ ಪರೋಕ್ಷವಾಗಿದೆ. ಆದರೂ ಸಹ ಪರೋಕ್ಷಭ್ರಮಕ್ಕೆ ಆ ಅಧಿಷ್ಠಾನತತ್ವಜ್ಞಾನವು ವಿರೋಧಿಯಾಗಿಯೇ ತೀರುತ್ತದೆ. ಪ್ರಕೃತ ಬ್ರಹ್ಮನಲ್ಲಿ ಬರುತ್ತಿರುವ ಮನೋಮಯತ್ವ ಅಣೀಯತ್ವಾದಿ ಭ್ರಮೆಯು ಶ್ರುತಿಯಿಂದ ಬರುತ್ತಿರುವುದರಿಂದ ಪರೋಕ್ಷವಾದ್ದರಿಂದಲೇ ಶಂಖದಲ್ಲಿ ಬರುವ ಪೀತ ಭ್ರಮೆಯಂತೆ ಇದನ್ನು ಸೋಪಾಧಿಕವೆನ್ನಲಾಗದು. ಹಾಗೇ ಸೋಪಾಧಿಕವಾಗಿದ್ದಲ್ಲಿ ಅಧಿಷ್ಠಾನ-ತತ್ತ್ವಜ್ಞಾನವಿದ್ದಾಗಲೂ ಮನೋಮಯತ್ವಾದಿಗಳನ್ನು ಆರೋಪಿಸಬಹುದಿತ್ತು. ಅಂದರೆ ಭ್ರಮೆಯು ಅನುವೃತ್ತಿಯಾಗುತ್ತಿತ್ತು.

**प्रकाशः —**

**अत्रेदं दूषणं ध्येयं – अस्मद्रीत्या पूर्वसङ्गतस्य संशयपूर्वपक्षबीजयुक्तस्य स्ववाक्यस्थशब्दविशेषोपेतस्य वाक्यस्योदाहरणत्वसम्भवेऽनेवंविधवाक्योक्त्ययोगात्। नहि तद्वाक्ये सत्यकामत्वादिब्रह्मधर्माणां सत्त्वात्सन्देहो युज्यते,**

ವಿವರಣೆ - ಅದ್ವೈತಿಗಳ ಅಧಿಕರಣಶರೀರದಲ್ಲಿರುವ ದೋಷಗಳನ್ನು ಹೀಗೆ ತಿಳಿಯಬೇಕು - ನಮ್ಮ ಸಿದ್ಧಾಂತದಲ್ಲಿ 'ಏತಂಹ್ಯೇವ ಬಹ್ವೃಚಾಃ' ಎಂಬುದಾಗಿ ವಿಷಯವಾಕ್ಯ. ಅದ್ವೈತಮತದಲ್ಲಿ 'ಪ್ರಾಣಶರೀರಃ ಭಾರೂಪಃ' ಎಂಬುದು ವಿಷಯವಾಕ್ಯ. ನಮ್ಮ ಸಿದ್ಧಾಂತದ ವಿಷಯವಾಕ್ಯದಲ್ಲಿ ಹಿಂದಿನಿಂದ ಸಂಗತವಾಗುವಂತೆ ಸಂಶಯಪೂರ್ವಪಕ್ಷಕ್ಕೆ ಕಾರಣವನ್ನು ತಿಳಿಯುವಂತೆ ವಿಷಯವಾಕ್ಯದಲ್ಲಿ ಶಬ್ದಗಳಿರುತ್ತವೆ. ಇದನ್ನೇ ವಿಷಯವಾಕ್ಯವನ್ನಾಗಿ ಪರಿಗಣಿಸಲು ಬರುವಾಗ ಸಂದೇಹ ಪೂರ್ವಪಕ್ಷಾದಿಗಳಿಗೆ ಅವಕಾಶವಿಲ್ಲದಂತಹ ವಾಕ್ಯವನ್ನು ಉದಾಹರಿಸುವುದು ಅಯುಕ್ತವಾಗಿದೆ. ಏಕೆಂದರೆ ಅದ್ವೈತಿಗಳು ಉಲ್ಲೇಖಿಸುವ ವಿಷಯವಾಕ್ಯದಲ್ಲಿ

ಸತ್ಯಕಾಮತ್ವವೇ ಮೊದಲಾದ ಬ್ರಹ್ಮನ ಧರ್ಮಗಳು ಸ್ಫುಟವಾಗಿ ತಿಳಿಯುತ್ತಿರುವುದರಿಂದ ಸಂದೇಹಕ್ಕೆ ಅವಕಾಶವೇ ಇಲ್ಲ.

**प्रकाशः** – मनोमयत्वादेरानन्दमयाधिकरणन्यायेन सावकाशत्वात् । अपच्छेदन्यायेन परप्राबल्येन सत्यकामत्वादिना पूर्वस्य मनोमयत्वादेर्बाध-सम्भवाच्च ।

पूर्वप्राबल्येऽपि सत्यकामात्वादेर्बहुत्वेन निरवकाशत्वेन च बलवत्त्वात् पूर्वस्याप्यल्पस्य सावकाशस्य बाधोपपत्तेः ।

ವಸ್ತುತಃ ಮನೋಮಯತ್ವವೇ ಮೊದಲಾದ ಜೀವನ ಲಿಂಗಗಳು ಕೇಳಿಸುತ್ತಿರುವುದರಿಂದ ಸಂದೇಹ ಹುಟ್ಟುತ್ತದೆನ್ನಬಹುದು. ಆದರೆ ಈಗಾಗಲೇ ಆನಂದಮಯಾಧಿಕರಣದ ನ್ಯಾಯದಿಂದ ಮನೋಮಯತ್ವಾದಿಗಳನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಿದ್ದಾಗಿದೆ. ಮತ್ತು 'ವಿಪ್ರತಿಷೇಧೇ ಪರಂ ಕಾರ್ಯಂ' ಎಂದು ಸಿದ್ಧಾಂತ ಮಾಡುವ ಅಪಚ್ಛೇದನ್ಯಾಯವನ್ನು ಅನುಸರಿಸಿದಾಗ ಪೂರ್ವಕ್ಕಿಂತ ಪರವೇ ಪ್ರಬಲವೆಂದು ತಿಳಿಯುತ್ತದೆ. ಆದ್ದರಿಂದ ಪರದಲ್ಲಿರುವ ಸತ್ಯಕಾಮತ್ವಾದಿ ಧರ್ಮಗಳು ಪೂರ್ವದಲ್ಲಿರುವ ಮನೋಮಯತ್ವಾದಿಗಳನ್ನು ಬಾಧಿಸುತ್ತವೆ.

ಒಂದು ವೇಳೆ ಪೂರ್ವಕ್ಕೆ ಪ್ರಾಬಲ್ಯವನ್ನು ಒಪ್ಪಿದರೂ ಸಹ ಬ್ರಹ್ಮನ ಲಿಂಗವೆನಿಸಿದ ಸತ್ಯಕಾಮತ್ವಾದಿಗಳು ಬಹಳವಾಗಿವೆ, ಮತ್ತು ನಿರವಕಾಶಗಳಾಗಿವೆ. ಆದ್ದರಿಂದ ಅಲ್ಪವೂ ಸಾವಕಾಶವೂ ಆಗಿರುವ ಮನೋಮಯತ್ವಾದಿಗಳನ್ನು ಸತ್ಯಕಾಮಾತ್ವಾದಿಗಳು ಬಾಧಿಸುತ್ತವೆ.

**प्रकाशः** – किञ्च यथा त्वन्मते पूर्वाधिकरणे उपक्रमोपसंहाराभ्यां प्रतीतैकवाक्यतानुरोधेन जीवमुख्यप्राणलिङ्गे तदनुगुणतया ब्रह्मणि नीते, तथेहापि ''सर्वं खल्विदं ब्रह्म'' इत्युपक्रमात् ''एतद्वै ब्रह्म'' इत्युपसंहारादेकवाक्यत्वावगमेन ब्रह्मविषयत्वप्रतीतिस्वारस्येन मनोमयत्वादेर्नेयत्वात् । भिन्नविषयत्वप्रतिति-पूर्वपक्षायोगाच्चेति ।

ಮತ್ತು ನಿಮ್ಮ ಹಿಂದಿನ ಅಧಿಕರಣದ ಸಿದ್ಧಾಂತ ಹೀಗಿದೆ - ಉಪಕ್ರಮ ಹಾಗೂ ಉಪಸಂಹಾರಗಳಿಂದ ಏಕವಾಕ್ಯತ್ವವು ತಿಳಿಯುತ್ತದೆ. ಅದನ್ನು ಅನುಸರಿಸಿ ಜೀವ ಹಾಗೂ ಮುಖ್ಯಪ್ರಾಣರ ಲಿಂಗಗಳೆಲ್ಲವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಬೇಕು. ಅದರಂತೆ ಇಲ್ಲಿಯೂ ಸಹ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವಾಕ್ಯವು ಉಪಕ್ರಮದಲ್ಲಿದೆ. 'ಏತದ್ವೈ ಬ್ರಹ್ಮ' ಎಂಬ ವಾಕ್ಯವು ಉಪಸಂಹಾರದಲ್ಲಿದೆ. ಈ ಉಪಕ್ರಮ ಹಾಗೂ ಉಪಸಂಹಾರಗಳ ಬಲದಿಂದ ಸಮಗ್ರ ಪ್ರಕರಣವು ಬ್ರಹ್ಮವಿಷಯಕವೆಂದು ಸ್ಪಷ್ಟವಾಗಿ ತಿಳಿಯುವುದರಿಂದ ಮನೋಮಯತ್ವಾದಿಗಳನ್ನೂ ಸಹ ಬ್ರಹ್ಮನಲ್ಲಿಯೇ ಸಮನ್ವಯ ಮಾಡಬೇಕು. ಹೀಗಿರುವಾಗ ಮನೋಮಯತ್ವಾದಿಗಳು ಜೀವನನ್ನು ಹೇಳುತ್ತಿವೆ ಎಂಬ ಪೂರ್ವಪಕ್ಷವು ಕೂಡುವುದಿಲ್ಲ.

ಸರ್ವಗತತ್ವಾಧಿಕರಣ (೧-೨-೧)

**प्रकाशः** – यदुक्तं, सिद्धान्ते जीवधर्माणां ब्रह्मण्यारोप इति, तन्न युक्तं, – रज्जुत्वसाधारणधर्मेण प्रतीतायां रज्जौ भीषणत्वाद्यनारोपस्येव सत्यकामत्वाद्यसाधारणधर्मेण प्रतीते ब्रह्मणि जीवधर्मारोपस्यायोगात्

सिद्धान्तानुदय इत्याह – **तत्त्वत इति** । अत्र तथाभानमसिद्धमित्यत आह – **ब्रह्मणश्चेति** । सत्यकामात्वादिधर्मैस्सिद्धान्तितत्वादिति भावः ।

ಸಂಶಯ ಹಾಗೂ ಪೂರ್ವಪಕ್ಷಗಳು ಹೇಗೆ ಕೂಡುವುದಿಲ್ಲವೋ? ಅದರಂತೆ ಸಿದ್ಧಾಂತವೂ ಸಹ ಕೂಡುವುದಿಲ್ಲ. ಏಕೆಂದರೆ ಜೀವನ ಧರ್ಮಗಳು ಬ್ರಹ್ಮನಲ್ಲಿ ಆರೋಪಿತವಾಗುತ್ತವೆಂದು ಸಿದ್ಧಾಂತ ಮಾಡಿದರು. ಇದು ತಪ್ಪು. ಅಧ್ಯಸ್ತವಾದ ಸರ್ಪದಲ್ಲಿರುವ ಭೀಷಣತ್ವಾದಿಗಳನ್ನು ಅಧಿಷ್ಠಾನಭೂತವಾದ ರಜ್ಜುವಿನಲ್ಲಿ ತಿಳಿಯುವುದು ಕಂಡಿದೆ. ಆದರೆ ಯಾವಾಗ ರಜ್ಜುವನ್ನು ರಜ್ಜುತ್ವವೆಂಬ ಸಾಧಾರಣ ಧರ್ಮದಿಂದ ತಿಳಿಯುತ್ತೇವೋ, ಆವಾಗ ಅಧ್ಯಸ್ತದಲ್ಲಿರುವ ಭೀಷಣತ್ವಾದಿಗಳನ್ನು ಆರೋಪಿಸಲು ಸಾಧ್ಯವಿಲ್ಲ. ಅಂದರೆ ಅಧಿಷ್ಠಾನದಲ್ಲಿ ತನ್ನಲ್ಲಿರುವ ಧರ್ಮವನ್ನು ತಿಳಿದಾಗ ಅಧ್ಯಸ್ತದಲ್ಲಿರುವ ಧರ್ಮವನ್ನು ಆರೋಪಿಸಲಾಗದು. ಅದರಂತೆ ಅಧಿಷ್ಠಾನನಾದ ಬ್ರಹ್ಮನಲ್ಲಿ ಸತ್ಯಕಾಮತ್ವಾದಿ ಧರ್ಮಗಳು ತಿಳಿಯುತ್ತಿರುವುದರಿಂದ ಅಧ್ಯಸ್ತದಲ್ಲಿರುವ ಜೀವನ ಧರ್ಮಗಳನ್ನು ಆರೋಪಿಸಲು ಸಾಧ್ಯವಿಲ್ಲ.

ಸಿದ್ಧಾಂತವು ಹುಟ್ಟುವುದಿಲ್ಲವೆಂದು 'ತತ್ತ್ವತಃ' ಎಂಬ ಶ್ಲೋಕದಿಂದ ಪ್ರತಿಪಾದಿಸುತ್ತಿದ್ದಾರೆ. ಇಲ್ಲಿ ನೀವು ಹೇಳುವಂತೆ ತೋರುವಿಕೆಯು ಅಸಿದ್ಧವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಬ್ರಹ್ಮಣಶ್ಚ' ಎಂಬ ಶ್ಲೋಕದ ಉತ್ತರಾರ್ಧದಿಂದ ಉತ್ತರಿಸುತ್ತಾರೆ. ಸತ್ಯಕಾಮತ್ವಾದಿ ಧರ್ಮಗಳಿಂದ ನೀವು ಸಿದ್ಧಾಂತ ಮಾಡಿದ್ದೀರೆಂದು ಅಭಿಪ್ರಾಯ.

**प्रकाशः** – प्रागुक्तानुवादपूर्वं श्लोकं व्यनक्ति – **यद्यपीति** ।

ननु तत्त्वतो ब्रह्मभानस्य शाब्दत्वेन परोक्षत्वात्कथमारोपविरोधित्वम् । नहि श्वैत्यानुमितिः शङ्खे पैत्यारोपविरोधिनीत्याशङ्क्याह – **यद्यपीति** । **अत एवेति** । परोक्षत्वादेवेत्यर्थः । पैत्यारोपस्त्वपरोक्षः सोपाधिकश्चेति भावः ।

ಹಿಂದೆ ಹೇಳಿದ್ದನ್ನು ಅನುವಾದ ಮಾಡುವ ಮೂಲಕವಾಗಿ ಶ್ಲೋಕವನ್ನು ಸ್ವತಃ ವ್ಯಾಖ್ಯಾನಿಸುತ್ತಿದ್ದಾರೆ. 'ಯದ್ಯಪಿ' ಇತ್ಯಾದಿ ವಾಕ್ಯದಿಂದ.

ವಾಸ್ತವಿಕವಾದ ಬ್ರಹ್ಮನ ಭಾನವು ಶಬ್ದವೇದ್ಯವಾಗಿದೆ. ಆದ್ದರಿಂದ ಪರೋಕ್ಷವಾಗಿದೆ. ಹೀಗಿರುವಾಗ ಆರೋಪಕ್ಕೆ ವಿರೋಧಿಯೆಂದು ಹೇಗೆ ಹೇಳುತ್ತೀರಿ ? 'ಶಂಖಃ ಶ್ವೇತಃ ಶಂಖತ್ವಾತ್' ಎಂಬ ಅನುಮಾನದಿಂದ ಶಂಖವು ಶ್ವೇತವಾಗಿದೆಯೆಂಬ ಅನುಮಿತಿ ಬರುತ್ತದೆ. ಆದರೂ ಸಹ ಕಾಮಾಲೆ ದೋಷವಿರುವಂತಹ ವ್ಯಕ್ತಿಗೆ

ಶಂಖವು ಶ್ವೇತವರ್ಣದಲ್ಲಿದೆ ಎಂಬ ಜ್ಞಾನವಿರುವಾಗಲೇ ಶಂಖವು ಹಳದಿಯಾಗಿದೆ ಎಂಬ ಭ್ರಮೆಯು ಬರುತ್ತದೆ. ಈ ಸ್ಥಳದಲ್ಲಿ ಅಧಿಷ್ಠಾನದಲ್ಲಿರುವ ಧರ್ಮವು ತೋರುತ್ತಿದ್ದರೂ ಅಧ್ಯಸ್ತದಲ್ಲಿರುವ ಪೈತ್ಯವೂ ಸಹ ತೋರುತ್ತಿದೆ. ಆದ್ದರಿಂದ ಬ್ರಹ್ಮನಲ್ಲಿ ಸತ್ಯಕಾಮತ್ವಾದಿ ಧರ್ಮಗಳು ತೋರುವ ಕಾಲದಲ್ಲಿಯೂ ಮನೋಮಯತ್ವಾದಿಗಳನ್ನು ಅಧ್ಯಾಸ ಮಾಡಬಹುದಲ್ಲವೇ ? ಎಂಬ ಪ್ರಶ್ನೆಗೆ 'ಯದ್ಯಪಿ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಅಥೈವ' ಎಂದರೆ ಪರೋಕ್ಷವಾಗಿರುವುದರಿಂದಲೇ ಎಂದರ್ಥ. ಶಂಖದಲ್ಲಿ ಮಾಡುತ್ತಿರುವ ಪೈತ್ಯಾರೋಪವು ಅಪರೋಕ್ಷವಾಗಿರುವುದರಿಂದಲೂ ಸೋಪಾಧಿಕವಾಗಿದೆ. ಆದರೆ ಬ್ರಹ್ಮನಲ್ಲಿ ಮಾಡುತ್ತಿರುವ ಮನೋಮಯತ್ವಾದಿಗಳ ಆರೋಪವು ಶ್ರುತಿಸಿದ್ಧವಾದ್ದರಿಂದ ಪರೋಕ್ಷವಾಗಿದೆ. ಮತ್ತು ನಿರುಪಾಧಿಕವಾಗಿದೆ. ಹೀಗೆ ವ್ಯತ್ಯಾಸವಿರುವುದರಿಂದ ಶಂಖದಲ್ಲಿ ಬರುವ ಪೈತತ್ವ ಆರೋಪವನ್ನು ದೃಷ್ಟಾಂತವನ್ನಾಗಿ ನೀಡಲಾಗದು.

**ಗುರುರಾಜೀಯಮ್** – ननु सत्यकाम इत्यादिवाक्यशेषजन्यज्ञानस्य परोक्षत्वात् कथं तस्य मनोमयत्वाद्यारोपविरोधित्वम् । साक्षात्कारिभ्रमे साक्षात्कारिविशेषदर्शनस्यैव विरोधित्वेन परोक्षस्य तस्याविरोधित्वात् । अन्यथा 'पीतः शङ्खः' इति भ्रमो न स्यादित्यत आह – **यद्यपीति** ।।

ननु मनोमयत्वाद्यारोपस्य सोपाधिकत्वात् सत्यकामत्वादिनिर्णयेऽप्यनुवृत्तिः स्सयादित्यत आह – **अत एवेति** ।। **परोक्षत्वादेवेत्यर्थः** ।।




ಅದ್ವೈತಿಗಳ ಅಧಿಕರಣಶರೀರವು ಅಸಾಧುವಾಗಿದೆ. ತಮ್ಮ ಸಿದ್ಧಾಂತದಲ್ಲಿ ಜೀವಬ್ರಹ್ಮರ ಅಭೇದವನ್ನು ಒಪ್ಪಿ ಜೀವನಲ್ಲಿರುವ ಮನೋಮಯತ್ವಾದಿ ಧರ್ಮಗಳನ್ನು ಬ್ರಹ್ಮನಲ್ಲಿ ಸಮರ್ಥಿಸಿದ್ದು ಸರಿಯಲ್ಲ. ಏಕೆಂದರೆ ಸತ್ಯಸಂಕಲ್ಪತ್ವವೇ ಮೊದಲಾದ ಧರ್ಮಗಳಿಂದ ಅಧಿಷ್ಠಾನಭೂತನಾದ ಬ್ರಹ್ಮನು ತೋರುತ್ತಿರುವಾಗ ಜೀವನಲ್ಲಿರುವ ಮನೋಮಯತ್ವಾದಿಧರ್ಮಗಳನ್ನು ಆರೋಪಿಸಲು ಸಾಧ್ಯವೇ ಇಲ್ಲ. ಶುಕ್ತಿಯಲ್ಲಿ ಶುಕ್ತಿತ್ವವೆಂಬ ಧರ್ಮವು ಸ್ಪಷ್ಟವಾಗಿ ತೋರುವ ಕಾಲದಲ್ಲಿ ರಜತತ್ವವನ್ನು ಆರೋಪಿಸಲು ಹೇಗೆ ಸಾಧ್ಯ ? ಕಾಮಾಲೆಯಿರುವಂತಹ ವ್ಯಕ್ತಿಗೆ ಶಂಖವು ಬಿಳಿಯೆಂದು ತಿಳಿದಿದ್ದರೂ ಹಳದಿಬಣ್ಣವನ್ನು ಆರೋಪಿಸುವುದು ಕಂಡಿದೆಯಲ್ಲವೇ? ಅದರಂತೆ ಬ್ರಹ್ಮನಲ್ಲಿ ಸತ್ಯಕಾಮತ್ವಾದಿ ಧರ್ಮಗಳು ತೋರುತ್ತಿದ್ದರೂ ಮನೋಮಯತ್ವಾದಿಗಳನ್ನು ಆರೋಪಿಸುತ್ತೇವೆಂದು ಅದ್ವೈತಿಗಳು ತಮ್ಮ ವಾದವನ್ನು ಸಮರ್ಥಿಸಿಕೊಳ್ಳಬಹುದು. ಆದರೆ ಇದು ವಿಷಮದೃಷ್ಟಾಂತವಾಗಿದೆ. ಶಂಖದಲ್ಲಿ ಮಾಡುತ್ತಿರುವ ಹಳದಿಬಣ್ಣದ ಆರೋಪವು ಅಪರೋಕ್ಷವಾಗಿದೆ ಮತ್ತು ಸೋಪಾಧಿಕವಾಗಿದೆ. ಆದರೆ ಬ್ರಹ್ಮನಲ್ಲಿ

ಅದ್ವೈತಿಗಳು ಮಾಡುತ್ತಿರುವ ಮನೋಮಯತ್ವಾದಿ ಧರ್ಮಗಳ ಆರೋಪವು ಅಪರೋಕ್ಷವಾಗಿದೆ. ಮತ್ತು ನಿರುಪಾಧಿಕವಾಗಿದೆ. ಆದ್ದರಿಂದ ಸೋಪಾಧಿಕ ಬ್ರಹ್ಮಸ್ಥಳದಲ್ಲಿ ಮಾತ್ರ ಅಧಿಷ್ಠಾನದಲ್ಲಿರುವ ಧರ್ಮವು ತೋರಿದರೂ ಆರೋಪವನ್ನು ಮಾಡಬಹುದು. ಆದರೆ ನಿರುಪಾಧಿಕಬ್ರಹ್ಮಸ್ಥಳದಲ್ಲಿ ಹೀಗೆ ಆರೋಪಿಸುವುದು ಎಲ್ಲಿಯೂ ಕಂಡುಬಂದಿಲ್ಲ.

• • • • •

## ಅಧಿಷ್ಠಾನ ತತ್ತ್ವಜ್ಞಾನವಿದ್ದಾಗ ಆರೋಪವು ಅಸಂಭಾವಿತ

**तात्पर्यचन्द्रिका**

**किञ्च – त्वन्मतेऽप्यस्य वाक्यस्य सत्यसङ्कल्पत्वादियुक्तसगुणब्रह्मविषयत्वात् जीवसगुणब्रह्मणोश्च निर्गुणेऽध्यस्तत्वात् कथं परस्परमधिष्ठानाध्यस्तभावः । यथोक्तं सङ्क्षेपशारीरके –**

**स्वाज्ञानकल्पितजगत्परमेश्वरत्वजीवत्वभेदकलुषीकृतभूरिभावा ।**
**स्वाभाविकस्वमहिमस्थितिरस्तमोहा प्रत्यक्चितिर्विजयते भुवनैकयोनिः ॥**

**इति ।**

**किञ्च – रज्जुमुद्दिश्य भीषणमिति व्यपदेश इव, ब्रह्मणि मनोमयत्वादिश्रौतव्यपदेशोऽप्रमाणं स्यात् ।**

**अपिच – त्वयाऽस्य वाक्यस्य उपासनापरताया असत्योपासनायाश्च स्वीकृतत्वात्, सत्यसङ्कल्पत्वज्यायस्त्वादीनां जीवे स्वरूपेणासत्त्वेऽपि तथोपासनं किं न स्यात् । नच सहश्रुतेषु मनोमयत्वादिकमेव उपास्यं, नतु सत्यसङ्कल्पत्वादिकमित्यत्र हेतुरस्ति ।**

ಅನುವಾದ - ಮತ್ತು ನಿಮ್ಮ ಮತದಲ್ಲಿ 'ಸತ್ಯಸಂಕಲ್ಪಃ' ಎಂಬ ವಿಷಯವಾಕ್ಯವು ಸತ್ಯಸಂಕಲ್ಪತ್ವವೇ ಮೊದಲಾದ ಗುಣಗಳಿಂದ ಕೂಡಿದ ಸಗುಣಬ್ರಹ್ಮನನ್ನು ಪ್ರತಿಪಾದಿಸುತ್ತದೆಂದು ಒಪ್ಪಿದ್ದೀರಿ. ಜೀವ ಹಾಗೂ ಸಗುಣಬ್ರಹ್ಮರು ನಿರ್ಗುಣಬ್ರಹ್ಮರಲ್ಲಿ ಅಧ್ಯಸ್ತರಾಗಿದ್ದಾರೆಂದು ನೀವು ಹೇಳುತ್ತೀರಿ. ಹೀಗಿರುವಾಗ ಜೀವ ಹಾಗೂ ಸಗುಣಬ್ರಹ್ಮರಿಗೆ ಪರಸ್ಪರವಾಗಿ ಅಧಿಷ್ಠಾನ ಅಧ್ಯಸ್ತಭಾವವನ್ನು ಹೇಳಲು ಹೇಗೆ ಸಾಧ್ಯ ? ಸಂಕ್ಷೇಪ ಶಾರೀರಕವೆಂಬ ಗ್ರಂಥದಲ್ಲಿ ಈ ವಿಷಯವು ಸ್ಪಷ್ಟವಾಗಿ ಉಲ್ಲೇಖವಾಗಿದೆ -

ಸ್ವಾಜ್ಞಾನಕಲ್ಪಿತಜಗತ್ಪರಮೇಶ್ವರತ್ವಜೀವತ್ವಭೇದಕಲುಷೀಕೃತಭೂರಿಭಾವಾ ।
ಸ್ವಾಭಾವಿಕಸ್ವಮಹಿಮಸ್ಥಿತಿರಸ್ತಮೋಹಾ ಪ್ರತ್ಯಕ್‌ಚಿತಿರ್ವಿಜಯತೇ ಭುವನೈಕಯೋನಿಃ ॥

ಬ್ರಹ್ಮನು ಎಲ್ಲರ ಮನಸ್ಸನ್ನು ತನ್ನ ಅಜ್ಞಾನದಿಂದಲೇ ಕಲ್ಪಿತವಾದ ಜಗತ್ತು, ಪರಮೇಶ್ವರತ್ವ, ಜೀವತ್ವ, ಭೇದ ಇವುಗಳಿಂದೆಲ್ಲಾ ಕಲುಷ ಗೊಳಿಸಿದ್ದಾನೆ. ಆದರೂ ತನ್ನಲ್ಲಿರುವ ಸ್ವಾಭಾವಿಕವಾದ ಮಹಿಮೆಯಿಂದ ಮೋಹವಿಲ್ಲದವನಾಗಿದ್ದಾನೆ. ಇಂತಹ ಪತ್ಯಕ್ ಚೈತನ್ಯನೆನಿಸಿದ ಬ್ರಹ್ಮನು ಸಮಸ್ತ ಜಗತ್ತಿಗೆ ಕಾರಣಪುರುಷನಾಗಿ ವಿಜಯಿಸುತ್ತಾನೆ ಎಂದು.

ಹಗ್ಗವನ್ನು ಉದ್ದೇಶಿಸಿ ಭಯಾನಕವೆಂಬ ಮಾತು ಹೇಗೆ ಅಪ್ರಮಾಣವಾಗುತ್ತದೋ ! ಅದರಂತೆ ಬ್ರಹ್ಮನಲ್ಲಿ ಶ್ರುತಿಸಿದ್ಧವಾದ ಮನೋಮಯತ್ವವೇ ಮೊದಲಾದ ಮಾತುಗಳೂ ಅಪ್ರಮಾಣವಾಗುತ್ತವೆ.

ಮತ್ತು ಈ ವಾಕ್ಯವನ್ನು ಉಪಾಸನಾ ಪರವಾದ್ದರಿಂದ ಅಸತ್ಯೋಪಾಸನೆಯನ್ನು ಹೇಳುತ್ತಿದೆಯೆಂದು ಅಂಗೀಕರಿಸಿದ್ದೀರಿ. ಹೀಗಿರುವಾಗ ಸತ್ಯಸಂಕಲ್ಪತ್ವ, ಜ್ಯಾಯಸ್ತ್ವ ಮೊದಲಾದ ಧರ್ಮಗಳು ಜೀವನಲ್ಲಿ ಸ್ವರೂಪತಃ ಇಲ್ಲದಿದ್ದರೂ ಹಾಗೇಕೆ ಉಪಾಸನೆ ಮಾಡಬಾರದು. ಒಟ್ಟಿಗೆ ಕೇಳಿಸುತ್ತಿರುವ ಮನೋಮಯತ್ವಾದಿಗಳನ್ನು ಮಾತ್ರ ಉಪಾಸನೆ ಮಾಡಬೇಕು. ಸತ್ಯಸಂಕಲ್ಪತ್ವಾದಿಗಳನ್ನು ಉಪಾಸನೆ ಮಾಡಬಾರದೆನ್ನಲು ವಿನಿಗಮಕವಿಲ್ಲ.

**प्रकाशः —**

ननु सत्यकामत्वादिना ब्रह्मणोऽत्र भानेऽपि नाधिष्ठानस्य तत्त्वतो भानम् । नहि सत्यकामत्वादिकमधिष्ठानस्य तत्त्वं, किन्तु शुद्धस्वभावत्वं, नहि तथाऽत्र ब्रह्मणो भानमस्ति, सविशेषस्यैव भानाङ्गीकारादित्यनुशयेनाह – किञ्चेति ।

जगत्त्वेन परमेश्वरत्वेन जीवत्वेन त्रयाणां प्रतीत्यारोपितत्वप्रतीतेरिति भावः ।

ವಿವರಣೆ - ಸತ್ಯಕಾಮತ್ವಾದಿ ಧರ್ಮಗಳಿಂದ ಬ್ರಹ್ಮನು ತೋರಿದರೂ ಸಹ ಅಧಿಷ್ಠಾನವು ಸಾತ್ವಿಕವಾಗಿ ತೋರಿದಂತಾಗುವುದಿಲ್ಲ. ಏಕೆಂದರೆ ಸತ್ಯಕಾಮತ್ವಾದಿಗಳು ಅಧಿಷ್ಠಾನದ ತತ್ತ್ವವಲ್ಲ. ಹೊರತಾಗಿ ಶುದ್ಧಸ್ವಭಾವತ್ವವು ಅಧಿಷ್ಠಾನದ ತತ್ತ್ವವೆನಿಸಿದೆ. ಶುದ್ಧಸ್ವಭಾವನಾಗಿ ಬ್ರಹ್ಮನು ಇಲ್ಲಿ ತೋರುತ್ತಿಲ್ಲ. ಆದ್ದರಿಂದ ಸವಿಶೇಷಬ್ರಹ್ಮನ ಭಾನವನ್ನಷ್ಟೇ ಅಂಗೀಕರಿಸಿರುವುದರಿಂದ ಅಧಿಷ್ಠಾನದ ತತ್ತ್ವಜ್ಞಾನವನ್ನು ನಾವು ಹೇಳಿಲ್ಲ ಎಂಬ ಅಭಿಪ್ರಾಯದಿಂದ 'ಕಿಂಚ ತ್ವನ್ಮತೇ' ಇತ್ಯಾದಿ ವಾಕ್ಯಗಳು ಹೊರಟಿವೆ.

'ಸ್ವಜ್ಞಾನ' ಎಂಬ ಶ್ಲೋಕಕ್ಕೆ ಹೀಗರ್ಥ - ಶುದ್ಧಚೈತನ್ಯದಲ್ಲಿ ಜಗತ್ವ ಪರಮೇಶ್ವರತ್ವ, ಜೀವತ್ವವೆಂಬ ಮೂರು ಧರ್ಮಗಳು ಆರೋಪಿತವಾಗಿವೆಯೆಂಬ ಪ್ರತೀತಿ ಇರುವುದರಿಂದ ಎಂದು.

ಸರ್ವಗತತ್ವಾಧಿಕರಣ (೧-೨-೧)

**प्रकाशः** – ननु यस्सत्यकामः सोऽणीयानिति सत्यकामत्वादियुतमुद्दिश्य अणीयस्त्वादिविधौ यत्सत्यकामत्वाद्यारोपाधिष्ठानं तदेवाणीयस्त्वाद्यारोपाद्यधिष्ठानं भविष्यति, वल्मीके यः स्थाणुः स पुरुष इतिवदित्यत आह – **किञ्चेति ।**

ನಿರ್ಗುಣಬ್ರಹ್ಮನಲ್ಲಿ ಜೀವ ಹಾಗೂ ಸಗುಣಬ್ರಹ್ಮರು ಆರೋಪಿತವೆಂಬುದು ವಾಸ್ತವ. ಹೊರತು ಸಗುಣಬಹ್ಮನಲ್ಲಿ ಜೀವನು ಆರೋಪಿತನಾಗಿಲ್ಲ. ಉದಾ: - ವಲ್ಮೀಕವನ್ನು ನೋಡಿ ಒಬ್ಬನು ಸ್ಥಾಣುವೆಂದು ತಿಳಿಯುತ್ತಾನೆ. ಅನಂತರ ಸ್ಥಾಣುವಲ್ಲ ಪುರುಷನೆಂದು ತಿಳಿಯುತ್ತಾನೆ. ಆ ಸಂದರ್ಭದಲ್ಲಿ 'ಯಃ ಸ್ಥಾಣುಃ ಸ ಪುರುಷಃ' ಎಂದು ಪ್ರಯೋಗಿಸುತ್ತೇವೆ. ಸ್ಥಾಣುತ್ವ ಆರೋಪ್ಯಕ್ಕೆ ಯಾವುದ ಅಧಿಷ್ಠಾನವೋ ಅದು ಪುರುಷ ಎಂದು ಅರ್ಥ. ಇಲ್ಲಿ ಪುರುಷತ್ವ ಪ್ರತೀತಿಯೂ ಸಹ ಭ್ರಮವೇ ಆಗಿದೆ. ಅದರಂತೆ ಪ್ರಕೃತದಲ್ಲಿಯೂ ನಿರ್ಗುಣಬ್ರಹ್ಮನನ್ನು ನೋಡಿ ಸತ್ಯಕಾಮನೆಂದು ಮೊದಲು ತಿಳಿದು ಅನಂತರ ಮನೋಮಯನೆಂದು ತಿಳಿಯುತ್ತಾನೆ. ಸತ್ಯಕಾಮತ್ವಾದಿಗಳ ಆರೋಪಕ್ಕೆ ಯಾರು ಅಧಿಷ್ಠಾನನೋ ಅವನೇ ಮನೋಮಯತ್ವಾದಿಗಳ ಆರೋಪಕ್ಕೂ ಸಹ ಅಧಿಷ್ಠಾನನಾಗಿದ್ದಾನೆ. ಆದ್ದರಿಂದ ಒಬ್ಬನೇ ನಿರ್ಗುಣಬ್ರಹ್ಮನು ಸತ್ಯಕಾಮತ್ವಾದಿಗಳ ಆರೋಪಕ್ಕೆ ಅಧಿಷ್ಠಾನನಾದಂತೆ ಮನೋಮಯತ್ವಾದಿಗಳ ಆರೋಪಕ್ಕೂ ಸಹ ಅಧಿಷ್ಠಾನನಾಗುತ್ತಾನೆ. ಅದ್ವೈತಿಗಳ ಈ ವಾದವನ್ನು 'ಕಿಂಚ ರಜ್ಜುಂ' ಎಂದು ನಿರಾಕರಿಸುತ್ತಿದ್ದಾರೆ.

**प्रकाशः** – ननु तत्त्वावेदकप्रामाण्याभावोऽभ्युपेयत । एवेति अत आह – **अपिचेति । हेतुरस्तीति ।**

ननु मयोमयत्वादिकं ब्रह्मणि व्यावहारिकं, सत्यकामत्वादिकं तु जीवे प्रातीतिकम् । नच श्रुतेर्व्यावहारिकपरत्वसम्भवेऽत्यन्ताप्रामाण्यापादकप्रातीतिपरत्वं युक्तमिति चेन्न,

''अप्राणो ह्यमनाः शुभ्रः'' इति श्रुत्या तदभावावेदनेन तस्यापि ब्रह्मणि प्रातीतिकत्वात् । जीवेऽपि त्वन्मते व्यावहारिकतया ब्रह्मणि प्रातिभासिकत्वावश्यम्भवाच्चेति भावः ।

ಮನೋಮಯತ್ವಾದಿಗಳ ವಾಕ್ಯಕ್ಕೆ ಅಪ್ರಾಮಾಣ್ಯವನ್ನು ನೀವು ಆಪಾದಿಸಿದರೆ ನಮಗೆ ಅದು ಇಷ್ಟವೇ ಆಗಿದೆ. ಏಕೆಂದರೆ ನಾವೂ ಸಹ ಅಂತಹ ವಾಕ್ಯಗಳಲ್ಲಿ ತತ್ತ್ವಾವೇದಕ ಪ್ರಾಮಾಣ್ಯವನ್ನು ಒಪ್ಪಿರುವುದಿಲ್ಲ. ಅದ್ವೈತಿಗಳ ಈ ಮಾತನ್ನು 'ಅಪಿಚ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಕೊನೆಯಲ್ಲಿ 'ಹೇತುರಸ್ತಿ' ಎಂದಿದ್ದಾರೆ. ಇದರ ಮೇಲೆ ಅದ್ವೈತಿಗಳು ಆಕ್ಷೇಪಿಸುತ್ತಾರೆ - ಮನೋಮಯತ್ವಾದಿಗಳು ಬ್ರಹ್ಮನಲ್ಲಿ ವ್ಯಾವಹಾರಿಕವಾಗಿದೆ. ಆದರೆ ಸತ್ಯಸಂಕಲ್ಪತ್ವಾದಿಗಳು ಜೀವನಲ್ಲಿ ಪ್ರಾತಿಭಾಸಿಕವಾಗಿವೆ. ಶ್ರುತಿಯು ಬ್ರಹ್ಮಪರವೆಂದು ಹೇಳಿದಾಗ ವ್ಯಾವಹಾರಿಕ ಪ್ರಾಮಾಣ್ಯವನ್ನಾದರೂ ಶ್ರುತಿಗೆ ಹೇಳಬಹುದು. ಜೀವಪರವೆಂದು ಹೇಳಿದರೆ ಪ್ರಾತಿಭಾಸಿಕ ಪ್ರಾಮಾಣ್ಯವನ್ನು (ಅತ್ಯಂತ ಅಪ್ರಾಮಾಣ್ಯವನ್ನು) ಒಪ್ಪುವ ಪ್ರಸಂಗ ಬರುತ್ತದೆ.

ಇದು ತಪ್ಪು. ''ಅಪ್ರಾಣೋ ಹ್ಯಮನಾಃ ಶುಭ್ರಃ'' ಎಂಬಲ್ಲಿ ಬ್ರಹ್ಮನಲ್ಲಿ ಪ್ರಾಣ ಮನಸ್ಸು ಮೊದಲಾದವುಗಳು ಇಲ್ಲವೆಂದು ತಿಳಿದು ಬರುತ್ತಿದೆ. ಹೀಗಿರುವಾಗ ಪ್ರಾಣಶರೀರತ್ವ ಮನೋಮಯತ್ವಾದಿಗಳು ಬ್ರಹ್ಮನಲ್ಲಿ ತೋರಿದರೆ ಇದು ಪ್ರಾತಿಭಾಸಿಕವೇ ಆಗುತ್ತದೆ.

ಮತ್ತು ನಿಮ್ಮ ಮತದಲ್ಲಿ ಜೀವನಲ್ಲಿ ಮನೋಮಯತ್ವಾದಿಗಳನ್ನು ವ್ಯವಹಾರಿಕವೆಂದು ಒಪ್ಪಿದ್ದೀರಿ. ಆದ್ದರಿಂದ ಅದೇ ಮನೋಮಯತ್ವಾದಿಗಳನ್ನು ಬ್ರಹ್ಮನಲ್ಲಿ ಪ್ರಾತಿಭಾಸಿಕವೆಂದು ಹೇಳಲೇಬೇಕು. ಒಂದು ಕಡೆ ವ್ಯಾವಹಾರಿಕವಾದದ್ದು ಮತ್ತೊಂದು ಕಡೆ ಪ್ರಾತಿಭಾಸಿಕವಾಗುತ್ತದೆಂಬುದು ನಿಮ್ಮ ಸಿದ್ಧಾಂತವಲ್ಲವೇ?

**प्रकाशः** – उपलक्षणमेतत् । यदप्यणीयस्त्वादिर्जीवधर्मो ज्यायस्त्वादिर्ब्रह्मधर्म इति, तन्न, ''अणोरणीयान्महतो महीयान्'' इत्यणीयस्त्वस्यापि ब्रह्मणि श्रुतत्वात् । न चोभयं विरुद्धं, तर्हि प्रथमोपस्थिताणीयस्त्वाङ्गीकारेण ज्यायस्त्वस्यैव चरमस्य परित्याज्यत्वात् । श्रुत्यन्तरविरोधस्योभयत्र तुल्यत्वात् ।

विरोधशान्तिप्रकारस्य ''व्योमवत्'' इत्यनेन सूत्रकृतैवोक्तत्वाच्च । तदुक्तमनुव्याख्याने –

महतोल्पत्वमपि हि व्योमवत् प्राह वेदवित् ।

इतीत्यपि ध्येयम् ।

ಉಪಲಕ್ಷಣಯಾ ಈ ದೋಷವನ್ನು ತಿಳಿಯಬೇಕು. ಅಣೀಯತ್ವಾದಿಗಳು ಜೀವಧರ್ಮವಾಗಿವೆ. ಜ್ಯಾಯಸ್ತ್ವಾದಿಗಳು ಬ್ರಹ್ಮಧರ್ಮವಾಗಿವೆ ಎಂಬ ವಾದವೂ ಸಹ ತಪ್ಪು. ಏಕೆಂದರೆ 'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬ ಶ್ರುತಿಯಂತೆ ಅಣೀಯಸ್ತ್ವ ಧರ್ಮವೂ ಸಹ ಬ್ರಹ್ಮನಲ್ಲಿಯೇ ಸಿದ್ಧವಾಗಿದೆ. ಒಬ್ಬನೇ ಬ್ರಹ್ಮನಲ್ಲಿ ಜ್ಯಾಯಸ್ತ್ವ ಹಾಗೂ ಅಣೀಯತ್ವಗಳೆಂಬ ವಿರುದ್ಧ ಧರ್ಮಗಳನ್ನು ಒಪ್ಪುವುದು ತಪ್ಪಲ್ಲವೇ? ಎಂದು ಪ್ರಶ್ನಿಸಿದರೆ ಪ್ರಥಮೋಪಸ್ಥಿತವಾದ ಅಣೀಯಸ್ತ್ವವನ್ನು ಅಂಗೀಕರಿಸಿ ಅನಂತರ ಉಪಸ್ಥಿತವಾಗುವ ಜ್ಯಾಯಸ್ತ್ವವನ್ನು ಪರಿತ್ಯಾಗ ಮಾಡಿರಿ. ಶ್ರುತ್ಯಂತರ ವಿರೋಧವಂತೂ ಎರಡೂ ಪಕ್ಷದಲ್ಲಿ ಸಮಾನವೇ ಆಗಿವೆ. ಜಾಯ್ಯಸ್ತ್ವವನ್ನು ಬಿಟ್ಟರೆ ಹೇಗೆ ಶ್ರುತಿವಿರೋಧ ಬರುತ್ತದೋ ಅದರಂತೆ ಅಣೀಯಸ್ತ್ವವನ್ನು ಬಿಟ್ಟರೂ ಸಹ ಶ್ರುತಿವಿರೋಧ ತಪ್ಪಿದ್ದಲ್ಲ.

ಅಣೀಯಸ್ತ್ವ ಹಾಗೂ ಜ್ಯಾಯಸ್ತ್ವಗಳಿಗೆ ವಿರೋಧ ಬರುವುದಿಲ್ಲವೆಂಬ ವಿಚಾರವನ್ನು ಸ್ವತಃ ಸೂತ್ರಕಾರರೇ ''ವ್ಯೋಮವತ್'' ಎಂಬಲ್ಲಿ ಸಮರ್ಥಿಸುತ್ತಾರೆ. ಇದನ್ನೇ ಅನುವ್ಯಾಖ್ಯಾನದಲ್ಲಿ

ಮಹತೋಽಲ್ಪತ್ವಮಪಿ ಹಿ ವ್ಯೋಮತ್ ಪ್ರಾಹ ವೇದವಿತ್ ।

ಆಕಾಶಕ್ಕೆ ಮಹತ್ತ್ವವಿದ್ದರೂ ಅಲ್ಪತ್ವವೂ ಸಹ ಹೇಗೆ ಬರುತ್ತದೋ, ಅದರಂತೆ ಪರಬ್ರಹ್ಮನಲ್ಲಿಯೂ ಅಣುತ್ವ ಮಹತ್ತ್ವಗಳು ಒಟ್ಟಿಗೆ ಬರಬಹುದು ಎಂದು ಸಮರ್ಥಿಸಿದ್ದಾರೆ.

ಸರ್ವಗತತ್ವಾಧಿಕರಣ (೧-೨-೧)

**गुरुराजीयम् – स्वाज्ञानकल्पितेति** ।। अस्यायमर्थः स्वस्मिन्नखण्डचैतन्ये यदध्यस्तमज्ञानं तटस्थमज्ञानमुपाधिरिष्यत इति वक्ष्यति । तेन कल्पितं यदुपाधित्रयं धेनुपदप्रवृत्तिनिमित्तगोत्वेश्वरत्वजीवत्वानि तैर्भेदैर्भेदहेतुभिरिदं जगत् अयमीश्वरः अहं जीव इति भिद्यमानैः कलुषीकृतः परित्याजितत्रिविधपरिच्छेदशून्यतापि यत्र सा तथा । स्वाभाविको यस्स्वमहिमा देशकालवस्तुपरिच्छेदराहित्यं तत्रैव स्थितिरचलमर्यादा यस्यास्सा तथा । स आत्मा कस्मिन्प्रतिष्ठितः स्वेमहिम्नीति श्रुतेः । तत्कुतः वस्तुतोऽस्तो निरस्तो मोहोऽविद्यालक्षणो यत्र । असङ्गो नहि सज्जते तमसः परस्तादिति श्रुतेः । तादृशोऽपि मायावशाद्भुवनैकयोनिः सृष्टिस्थितिप्रलयहेतुः प्रत्यक्चितिः चित्स्वरूपा देहादिजडवर्गान्तः पातिनी सती कर्तृभोक्तृतया विजयते प्रथयते । तत्सृष्ट्वा तदेवानुप्राविशत् । स इह प्रविष्ट आनखाग्रेभ्य इत्यादिश्रुतेरिति । तथाच स्तुतिव्याजेन पूर्वं तत्त्वमसीति वाक्यार्थोपयोगि तत्पदलक्ष्यं सत्यादिरूपं ब्रह्मोक्त्वाऽनेन त्वम्पदलक्ष्यस्योक्तत्वात्तस्य च शुद्धत्वेन तस्यैवाधिष्ठानत्वोक्तेर्जीवसगुणब्रह्मणोश्च न परस्पराधिष्ठानाध्यस्तभाव इति भावः ।

## ಸಾರ

'ಪ್ರಾಣಶರೀರಃ ಭಾವರೂಪಃ' ಎಂಬ ವಾಕ್ಯವು ಸಗುಣಬ್ರಹ್ಮ ವಿಷಯಕವೆಂದು ನೀವು ಹೇಳಿದಂತಾಯಿತು. ಜೀವ ಹಾಗೂ ಸಗುಣಬ್ರಹ್ಮರಿಬ್ಬರು ನಿರ್ಗುಣಬ್ರಹ್ಮನಲ್ಲಿ ಆರೋಪಿತರಾದ್ದರಿಂದ ಜೀವ ಹಾಗೂ ಸಗುಣಬ್ರಹ್ಮರಿಗೆ ಪರಸ್ಪರವಾಗಿ ಅಧಿಷ್ಠಾನ ಅಧ್ಯಸ್ತಭಾವವು ಕೂಡುವುದಿಲ್ಲ.

ಹುತ್ತವನ್ನು ನೋಡಿ ಕಂಬವೆಂದು ಮೊದಲು ಭ್ರಾಂತಿ ಬರುತ್ತದೆ. 'ಇದು ಕಂಬವಲ್ಲ ಪುರುಷನು' ಎಂಬ ಭ್ರಾಂತಿ ಬರುತ್ತದೆ. ಈ ಸ್ಥಳದಲ್ಲಿ ಸ್ಥಾಣುತ್ವ ಹಾಗೂ ಪುರುಷತ್ವ ಆರೋಪಗಳಿಗೆ ಅಧಿಷ್ಠಾನವು ಒಂದೇ ಆಗಿವೆ. ಆದರಂತೆ ನಿರ್ಗುಣಬ್ರಹ್ಮನನ್ನು ಮೊದಲು ಸತ್ಯಕಾಮನೆಂದು ತಿಳಿದು ಅನಂತರ ಮನೋಮಯನೆಂದು ತಿಳಿಯುತ್ತಾನೆ. ಈ ಸ್ಥಳದಲ್ಲಿ ಸತ್ಯಕಾಮತ್ವ ಹಾಗೂ ಮನೋಮಯತ್ವ ಎಂಬ ಆರೋಪಗಳಿಗೆ ಒಬ್ಬನೇ ನಿರ್ಗುಣ ಬ್ರಹ್ಮನು ಅಧಿಷ್ಠಾನನಾಗಿದ್ದಾನಲ್ಲವೇ? ಇದೂ ಸಹ ತಪ್ಪು. ಹಾಗಾದರೆ ಹಗ್ಗವನ್ನು ನೋಡಿ ಭಯಾನಕವೆಂಬ ವ್ಯವಹಾರವು ಹೇಗೆ ಅಪ್ರಮಾಣವಾಗುತ್ತದೋ ಅದರಂತೆ ಬ್ರಹ್ಮನಲ್ಲಿ ಮಾಡುವ ಮನೋಮಯತ್ವಾದಿ ವ್ಯವಹಾರಗಳೂ ಸಹ ಅಪ್ರಮಾಣವಾಗಬೇಕಾದೀತು. ಮತ್ತು ಬ್ರಹ್ಮನಲ್ಲಿ ಅಸತ್ಯವಾದ ಮನೋಮಯತ್ವಾದಿಗಳನ್ನು ಉಪಾಸನೆ ಮಾಡುವುದಕ್ಕಾಗಿ ಈ ವಾಕ್ಯವು ಹೊರಟಿದೆ ಎಂದು ಹೇಳಿದರೆ ಜೀವನಲ್ಲಿ ಸತ್ಯಸಂಕಲ್ಪತ್ವಾದಿಗಳನ್ನು ಉಪಾಸನೆ ಮಾಡುವುದಕ್ಕಾಗಿ ಈ ವಾಕ್ಯ ಹೊರಟಿದೆ ಎಂದು ಏಕೆ ಹೇಳಬಾರದು? ಮನೋಮಯತ್ವ ಹಾಗೂ ಸತ್ಯಸಂಕಲ್ಪತ್ವಗಳು ಒಟ್ಟಿಗೆ ಕೇಳಿಸುತ್ತಿರುವಾಗ ಒಂದನ್ನು ಉಪಾಸನೆ ಮಾಡಬೇಕು. ಮತ್ತೊಂದನ್ನು ಉಪಾಸನೆ ಮಾಡಬಾರದೆನ್ನಲು ವಿನಿಗಮಕ ಪ್ರಮಾಣವಿಲ್ಲ.

## ಅದ್ವೈತಿಗಳ ಸೂತ್ರವ್ಯಾಖ್ಯಾನ ನಿರಾಕರಣೆ

**तात्पर्यचन्द्रिका**

**सूत्राक्षरार्थोऽप्ययुक्तः,**

**आद्यसूत्रे हेतुमात्रस्योक्तत्वेन मनोमयत्वादिनोपास्यं ब्रह्मेति प्रतिज्ञांशस्याध्याहर्तव्यत्वात् ।**

**द्वितीये सत्यकामत्वादिमिथ्याभूतगुणेषु श्रुतितात्पर्योपपत्तिसहितत्वयोरभावेन विवक्षितोपपत्तिपदयोरस्वारस्यात् ।**

**तृतीये सत्यकामत्वादिगुणानां ब्रह्मण्युपपपत्तिं वदता द्वितीयेनैव तेषां जीवे अनुपपत्तेरर्थादुक्तत्वेन तेन पौनरुक्त्यात् ।**

**चतुर्थे आधाराधयेभावस्येव ''एतमितः प्रेत्याभिसम्भवितास्मि'' इति कर्मकर्तृभावस्यापि विरुद्धविभक्तिकशब्दं वदता शब्दविशेषशब्देनैव ग्रहणसम्भवेन पञ्चमेन पौनरुक्त्यात् ।**

ಅನುವಾದ - ಅದ್ವೈತಿಗಳು ಮಾಡಿದ ಸೂತ್ರಗಳ ವ್ಯಾಖ್ಯಾನವೂ ಸಹ ಅಯುಕ್ತವಾಗಿದೆ - ಪ್ರಥಮಸೂತ್ರದಲ್ಲಿ ಕೇವಲ ಹೇತುವನ್ನು ಹೇಳಿದ್ದರಿಂದ ''ಮನೋಮಯತ್ವಾದಿನೋಪಾಸ್ಯಂ ಬ್ರಹ್ಮ'' ಎಂಬ ಪ್ರತಿಜ್ಞಾಭಾಗವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

'ವಿವಕ್ಷಿತಗುಣೋಪಪತ್ತೇಶ್ಚ' ಎಂಬ ಎರಡನೇ ಸೂತ್ರದಲ್ಲಿ ಸತ್ಯಕಾಮತ್ವವೇ ಮೊದಲಾದ ಮಿಥ್ಯಾಭೂತವಾದ ಗುಣಗಳಲ್ಲಿ ಶ್ರುತಿತಾತ್ಪರ್ಯ ಉಪಪತ್ತಿಸಹಿತತ್ವಗಳು ಇಲ್ಲದ ಕಾರಣ ವಿವಕ್ಷಿತ ಹಾಗೂ ಉಪಪತ್ತಿಪದಗಳ ಅರ್ಥವು ಅಸ್ವರಸವಾಗುತ್ತವೆ.

'ಅನುಪಪತ್ತೇಸ್ತು ನ ಶಾರೀರಃ' ಎಂಬ ಮೂರನೇ ಸೂತ್ರದಲ್ಲಿ ಸತ್ಯಕಾಮತ್ವಾದಿಗುಣಗಳನ್ನು ಬ್ರಹ್ಮನಲ್ಲಿ ಸಮರ್ಥಿಸುತ್ತೀರಿ. ಆದರೆ ಎರಡನೆಯ ಸೂತ್ರದಿಂದಲೇ ಸತ್ಯಕಾಮತ್ವಾದಿಗುಣಗಳನ್ನು ಜೀವನಲ್ಲಿ ಅನುಪಪನ್ನವೆಂದು ಹೇಳಿದ್ದರಿಂದ ಅರ್ಥಾತ್ ಬ್ರಹ್ಮನಲ್ಲಿ ಉಪಪನ್ನವಾಗು ಎಂದು ಹೇಳಿದಂತಾಗುವುದರಿಂದ ಎರಡನೇ ಸೂತ್ರದಿಂದ ಪುನರುಕ್ತಿದೋಷ ಬರುತ್ತದೆ.

'ಕರ್ಮಕರ್ತೃ ವ್ಯಪದೇಶಾಚ್ಚ' ಎಂಬ ನಾಲ್ಕನೇ ಸೂತ್ರದಲ್ಲಿ ಆಧಾರಾಧೇಯಭಾವವನ್ನು ಹೇಳುವಂತೆ ''ಏತಮಿತಃ ಪ್ರೇತ್ಯಾಭಿಸಂಭವಿತಾಸ್ಮಿ'' ಎಂಬುದಾಗಿ ಕರ್ಮಕರ್ತೃಭಾವವೂ ಸಹ ವಿರುದ್ಧ

ವಿಭಕ್ತಿಗಳಿಂದ ತಿಳಿಯಲ್ಪಟ್ಟಿದೆ ಎಂದು ಹೇಳುತ್ತೀರಿ. ಹಾಗಾದರೆ ಶಬ್ದವಿಶೇಷಶಬ್ದದಿಂದಲೇ ಈ ವಿಷಯವು ತಿಳಿಯುವಾಗ ನಾಲ್ಕನೆಯ ಸೂತ್ರಕ್ಕೆ ಐದನೆಯ ಸೂತ್ರದಿಂದ ಪುನರುಕ್ತಿ ಬರುತ್ತದೆ.

**प्रकाशः –**

एवमधिकरणशरीरं सिद्धान्तानुदयेन निरस्येदानीं सूत्रार्थासामञ्जस्यामाह – सूत्रेति ।

एवं हि सूत्रार्थानाहुः – 'मनोमयत्वादिनोपास्यं ब्रह्मैव' इति साध्यमध्याहार्यम् । हेत्वर्थः प्रागुक्तः ।

**'विवक्षितगुणोपपत्तेश्च'** – 'विवक्षितानां' वक्तुमिष्टानां तात्पर्य-विषयीभूतानामिति यावत्, तेषां सत्यकामत्वादीनां ब्रह्मण्येवोपपत्तेः ।

ವಿವರಣೆ – ಇಲ್ಲಿಯ ತನಕ ಅದ್ವೈತಿಗಳ ಅಧಿಕರಣ ಶರೀರವನ್ನು ಸಿದ್ಧಾಂತವೇ ಹುಟ್ಟುವುದಿಲ್ಲವೆಂಬುದಾಗಿ ನಿರಾಕರಿಸಿ ಪ್ರಕೃತ ಅವರ ಸೂತ್ರಾರ್ಥಗಳನ್ನು ಅಸಂಮಂಜಸವೆನ್ನುತ್ತಿದ್ದಾರೆ.

ಅದ್ವೈತಿಗಳು ವ್ಯಾಖ್ಯಾನಿಸುವ ಸೂತ್ರಾರ್ಥಗಳು ಹೀಗಿವೆ -

೧. ಸರ್ವತ್ರೋಪ್ರಸಿದ್ಧೋಪದೇಶಾತ್ = ಎಲ್ಲಾ ವೇದಾಂತಗಳಲ್ಲಿ ಪ್ರಸಿದ್ಧವಾದ ಯಾವ ಬ್ರಹ್ಮಶಬ್ದವಿದೆಯೋ ಅದರ ಉಪದೇಶದ ಬಲದಿಂದ ಎಂಬುದಾಗಿ ಸೂತ್ರವು ಹೇತುವನ್ನಷ್ಟೇ ಹೇಳುತ್ತಿದೆ. 'ಮನೋಮಯತ್ವಾದಿಗಳಿಂದ ಉಪಾಸ್ಯನಾದವನು ಬ್ರಹ್ಮನೇ ಆಗಿದ್ದಾನೆ' ಎಂಬ ಸಾಧ್ಯವನ್ನು ಅಧ್ಯಾಹಾರ ಮಾಡಬೇಕು.

೨. ವಿವಕ್ಷಿಗುಣೋಪಪತ್ತೇಶ್ಚ - ವಿವಕ್ಷಿತ = ಹೇಳಲು ಇಷ್ಟವಾದ ಅಂದರೆ ತಾತ್ಪರ್ಯವಿಷಯೀಭೂತವಾದ ಗುಣ = ಆ ಸತ್ಯಕಾಮತ್ವಾದಿಗುಣಗಳು, ಉಪಪತ್ತೇಃ = ಬ್ರಹ್ಮನಲ್ಲಿಯೇ ಉಪಪನ್ನವಾಗುತ್ತವೆ.

**प्रकाशः** – **'अनुपपत्तेस्तु न शारीरः'** – प्रागुक्तसत्यसङ्कल्पत्वादीनां जीवेऽनुपपत्तेः ।

**'कर्मकर्तृव्यपदेशाच्च'** – ''एतमितः प्रेत्याभिसम्भवितास्मि' इत्यत्र 'एतं' इति द्वितीयया ब्रह्मणः कर्मत्वेन 'अभिसम्भवितास्मि' इति प्रथमया जीवस्य कर्तृत्वेन व्यपदेशाच्च न शारीरोऽत्रोपास्यः ।

೩. ಅನುಪಪತ್ತೇಸ್ತು ನ ಶಾರೀರಃ - ಅನುಪಪತ್ತೇಃ = ಬ್ರಹ್ಮನಲ್ಲಿ ಉಪಪನ್ನವಾದ ಸತ್ಯಸಂಕಲ್ಪತ್ವಾದಿಗುಣಗಳೇ ಜೀವನಲ್ಲಿ ಅನುಪಪನ್ನವಾಗಿವೆ. ಆದ್ದರಿಂದ 'ನ ಶಾರೀರಃ' = ಜೀವನು ಉಪಾಸ್ಯನಲ್ಲ.

೪.'ಕರ್ಮಕರ್ತೃ ವ್ಯಪದೇಶಾಚ್ಚ - "ಏತಮಿತಃ ಪ್ರೇತ್ಯಾಭಿಸಂಭವಿತಾಸ್ಮಿ" ಎಂಬಲ್ಲಿ 'ಏತಂ' ಎಂಬುದಾಗಿ ದ್ವಿತೀಯಾ ವಿಭಕ್ತಿಯಿಂದ ಬ್ರಹ್ಮನು ಕರ್ಮತ್ವೇನ ಉಕ್ತನಾಗಿದ್ದಾನೆ. 'ಅಭಿಸಂಭವಿತಾಸ್ಮಿ' ಎಂಬಲ್ಲಿ ಜೀವನು ಕರ್ತೃತ್ವೇನ ಉಕ್ತನಾಗಿದ್ದಾನೆ. ಆದ್ದರಿಂದ ಶಾರೀರನು ಇಲ್ಲಿ ಉಪಾಸ್ಯನಲ್ಲ.

**प्रकाशः** – **'शब्दविशेषात्'** – समानप्रकरणे श्रुत्यन्तरे ''यथा व्रीहिर्वा यवो वा श्यामाकतण्डुलो वा एवमयमन्तरात्मन्पुरुषो हिरण्मयः'' इति जीवब्रह्मबोधक-सप्तम्यन्तप्रथमान्तरूपशब्दविशेषाच्च न शारीरोऽत्रोच्यते ।

ईश्वरस्सर्वभूतानां हृद्देशेऽर्जुन तिष्ठति ।

इति स्मृतेश्च न शारीरः ।

೫. ಶಬ್ದವಿಶೇಷಾತ್ = ಸಮಾನಪ್ರಕರಣದಲ್ಲಿ ಕೇಳಿಸುತ್ತಿರುವ ಮತ್ತೊಂದು ಶ್ರುತಿಯಲ್ಲಿ "ಯಥಾ ವ್ರೀಹಿರ್ವಾ ಯವೋ ವಾ ಶ್ಯಾಮಾಕತಂಡುಲೋ ವಾ ಏವಮಯಮಂತರಾತ್ಮನ್‌ಪುರುಷೋ ಹಿರಣ್ಮಯಃ" ಎಂಬುದಾಗಿ ಸಪ್ತಮ್ಯಂತವಾದ 'ಅಂತರಾತ್ಮನ್' ಎಂಬ ಶಬ್ದದ ಹಾಗೂ ಪ್ರಥಮಾಂತವಾದ 'ವ್ರೀಹಿಃ ಯವಾಃ' ಇತ್ಯಾದಿ ಶಬ್ದವಿಶೇಷ ಇರುವುದರಿಂದ 'ಶಾರೀರಿ' ಎನಿಸಿದ ಜೀವನು ಇಲ್ಲಿ ಉಪಾಸ್ಯನಾಗಲಾರ.

೬. ಸ್ಮೃತೇಶ್ಚ = ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಎಂಬ ಸ್ಮೃತಿ ಪ್ರಮಾಣದಿಂದಲೂ ಶಾರೀರನು ಉಪಾಸ್ಯನಲ್ಲ.

**प्रकाशः** – ''एष म आत्माऽन्तर्हृदये'' इत्यल्पायतनत्वात् ''अणीयान् व्रीहेर्यवाद्वा'' इति अणीस्यस्त्वव्यपदेशाच्च न सर्वगतः परमात्मा मनोमयत्वादिगुणक इति चेत्, सर्वगतस्यापि ब्रह्मणो हृदयपुण्डरीके निचाय्यत्वाद्द्रष्टव्यत्वादेवं व्यपदेशः 'व्योमवत्' यथा व्योम सर्वगतमपि सूचिपाशाद्यपेक्षयाऽर्भकौकोऽणीयो व्यपदिश्यते तद्वत् । ब्रह्मणः सर्वप्राणिहृदयसम्बन्धात् सुखादिसम्भोगप्राप्तिरिति चेन्न, अपहत-पाप्मत्वादिवैशेष्यादिति ।

"ಏಷ ಮ ಆತ್ಮಾಽಂತರ್ಹೃದಯೇ" ಎಂಬುದಾಗಿ ಅಲ್ಪಸ್ಥಾನದಲ್ಲಿರುವವನಾದ್ದರಿಂದ "ಅಣೀಯಾನ್ ವ್ರೀಹೇರ್ಯವಾದ್ವಾ' ಎಂಬುದಾಗಿ ಅಣೀಯಸ್ತ್ವವನ್ನು ಹೇಳಿದ್ದರಿಂದ ಸರ್ವಗತನಾದ ಪರಮಾತ್ಮನು ಮನೋಮಯತ್ವಾದಿಗುಣಗಳಿಂದ ಉಪಾಸ್ಯನಾಗಲಾರ ಎಂದು ಶಂಕಿಸಬಾರದು. ಏಕೆಂದರೆ

ಸರ್ವಗತನಾದರೂ ಸಹ ಬ್ರಹ್ಮನು ಹೃದಯಲ್ಲಿರುವ ಕಮಲದಲ್ಲಿ ನೋಡಬೇಕು. ಯಾವರೀತಿಯಾಗಿ ಆಕಾಶವು ಎಲ್ಲೆಡೆ ಇದ್ದರೂ ಸೂಜಿ ಮೊದಲಾದ ಸಣ್ಣ ಸ್ಥಳದಲ್ಲಿಯೂ ನೋಡುತ್ತೇವೋ, ಅದರಂತೆ ಸರ್ವಗತನಾದ ಬ್ರಹ್ಮನನ್ನು ಅಲ್ಪಸ್ಥಾನಸ್ಥಿತನೆಂದು ಅಣುವೆಂದು ಕರೆಯಲಾಗಿದೆ.

ಬ್ರಹ್ಮನು ಸಕಲ ಪ್ರಾಣಿಗಳ ಹೃದಯಸಂಬಂಧವನ್ನು ಹೊಂದಿರುವುದರಿಂದ ಸುಖಾದಿ ಭೋಗಗಳನ್ನು ಬ್ರಹ್ಮನು ಹೊಂದಬೇಕಲ್ಲವೇ? ಎಂದು ಶಂಕಿಸಬಾರದು. ಅಪಹತಪಾಪ್ಮತ್ವಾದಿಗಳಿಂದ ಬ್ರಹ್ಮನು ವಿಶಿಷ್ಟನಾಗಿದ್ದಾನೆ. ಆದ್ದರಿಂದ ಸಕಲ ಪ್ರಾಣಿಗಳ ಹೃದಯದಲ್ಲಿದ್ದರೂ ಸುಖ-ದುಃಖಾದಿಗಳನ್ನು ಅನುಭವಿಸಲಾರ.

**प्रकाशः – तत्सर्वं क्रमेण दूषयति – आद्य इति ।** उपलक्षणमेतत् 'सर्वत्र' इत्यस्य वैयर्थ्यादित्यपि ध्येयम् । **मिथ्येति ।** त्वन्मते तेषामारोपितत्वादिति भावः । **आधारेति ।** ''अयमन्तरात्मन्'' इति सप्तमिप्रथमाभ्यामुक्तस्येत्यर्थः । **वदतेति ।** वक्तृत्वमुपचरितं, प्रतिपादकेनेति यावत् ।

**अन्तरात्मन्निति ।** ''सुपां सुलुक्'' इति सप्तम्या लुकि ''न ङिसम्बुद्ध्योः'' इति नलोपाभावे च रूपमिति सप्तम्यन्तत्वं बोध्यम् ।

ಅದ್ವೈತಿಗಳ ಈ ಎಲ್ಲಾ ಸೂತ್ರವ್ಯಾಖ್ಯಾನಗಳನ್ನು ಗ್ರಂಥಕಾರರು ಕ್ರಮವಾಗಿ ದೂಷಿಸುತ್ತಿದ್ದಾರೆ - 'ಆದ್ಯ' ಇತ್ಯಾದಿಯಾಗಿ. ಪ್ರತಿಜ್ಞಾಭಾಗವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆಂಬ ದೋಷವನ್ನು ಗ್ರಂಥದಲ್ಲಿ ಹೇಳಿದ್ದಾರೆ. ಉಪಲಕ್ಷಣಯಾ 'ಸರ್ವತ್ರ' ಎಂಬ ಪದವು ವ್ಯರ್ಥವಾಗಬೇಕಾದೀತೆಂಬ ವೈಯರ್ಥ್ಯದೋಷವನ್ನು ತಿಳಿಯಬೇಕು.

ಎರಡನೇ ಸೂತ್ರದಲ್ಲಿ ಸತ್ಯಕಾಮತ್ವಾದಿಗುಣಗಳನ್ನು ಬ್ರಹ್ಮನಲ್ಲಿ ಆರೋಪಿತವೆನ್ನುತ್ತಾರೆ. ಆವಾಗ 'ವಿವಕ್ಷಿತ' ಹಾಗೂ 'ಉಪಪತ್ತೇಃ' ಎಂಬ ಎರಡು ಪದವು ವ್ಯರ್ಥವಾಗುತ್ತದೆ.

ಗ್ರಂಥದಲ್ಲಿ 'ಆಧಾರಾಧೇಯಭಾವಸ್ಯೈವ' ಎಂದಿದೆ. ಇದರ ಅರ್ಥ ಹೀಗಿದೆ - 'ಅಯಮಂತರಾತ್ಮನ್' ಎಂಬುದಾಗಿ ಸಪ್ತಮೀವಿಭಕ್ತಿಯಿಂದ ಹೇಳಲ್ಪಟ್ಟ, 'ವ್ರೀಹಿಃ ಯವಾಃ' ಇತ್ಯಾದಿ ಪ್ರಥಮಾವಿಭಕ್ತಿಯಿಂದ ಹೇಳಲ್ಪಟ್ಟ ಎಂದು. 'ಶಬ್ದಂ ವದತಾ' ಎಂಬುದಾಗಿ ಕರ್ತೃತ್ವವು ಔಪಚಾರಿಕವಾಗಿ ಪ್ರಯುಕ್ತವಾಗಿದೆ. ('ಹಂತಾ ರಾಮಶರಃ' ಎಂಬಂತೆ) ಪ್ರತಿಪಾದಿಸುವ ಎಂದು ಇದರ ತಾತ್ಪರ್ಯ.

ಅಂತರಾತ್ಮನ್ ಎಂಬಲ್ಲಿ 'ಸುಪಾಂ ಸುಲುಕ್' ಎಂಬ ಸೂತ್ರದಿಂದ ಸಪ್ತಮೀ ವಿಭಕ್ತಿಯು ಲೋಪವಾದ ಮೇಲೆ 'ನ' ಲೋಪವು ಪ್ರಸಕ್ತವಾಗುತ್ತದೆ. ಆವಾಗ ''ನ ಙಿಸಂಬುದ್ಧ್ಯೋಃ'' ಎಂಬ ಸೂತ್ರದಿಂದ ಸಪ್ತಮೀವಿಭಕ್ತಿಯಲ್ಲಿ ನಲೋಪವಾಗುವುದಿಲ್ಲವೆಂದು ವಿಧಿಸಲಾಗಿದೆ. ಆದ್ದರಿಂದ 'ಅಂತರಾತ್ಮನ್' ಎಂಬುದನ್ನು ಸಪ್ತಮ್ಯಂತಪದವೆಂದೇ ತಿಳಿಯಬೇಕು.

गुरुराजीयम् – द्वितीये सत्यकामत्वादीत्यादि ।। वक्तुमिष्टो विवक्षितः । यद्यप्यपौरुषेये वेदे वक्तुरभावान्नेच्छार्थस्सम्भवति । तथाप्युपादेयेन फलेनोपचर्यते । लोके हि यच्छब्दाभिहितमुपादेयं भवति तद्विवक्षितमित्युच्यते । यदनुपादेयं तदविवक्षितमिति । तद्वद्वेदेऽप्युपादेयत्वेनाभिहितं विवक्षितं भवति । इतरदविवक्षितम् । उपादानानुपादाने तु वेदवाक्यतात्पर्यातात्पर्याभ्यामवगम्येते । तदिह विवक्षितगुणा उपासनायामुपादेयत्वेनोपदिष्टाः सत्यसङ्कल्पप्रभृतयस्ते परस्मिन् ब्रह्मण्युपपद्यन्ते । सत्यसङ्कल्पत्वं हि सृष्टिस्थितिसंहारेष्वप्रतिबद्धशक्तित्वात् परमात्मनोऽवकल्प्यते । परमात्मगुणत्वेन च य आत्माऽपहतापाप्मेत्यत्र सत्यकामस्सत्यसङ्कल्प इति श्रुतम् । आकाशात्मेति आकाशवदात्माऽस्येत्यर्थः । सर्वगतत्वादिधर्मैस्सम्भवत्याकाशे न साम्यं ब्रह्मणः । ज्यायान् पृथिव्या इत्यादिना चैतदेव दर्शयति । यदाऽप्याकाश आत्माऽस्येति व्याख्यायते तदापि सम्भवति सर्वजगत्कारणस्य सर्वात्मनो ब्रह्मण आकाशात्मत्वम् । अत एव सर्वकर्मेत्यादि । एवमिहोपास्यतया विवक्षितगुण ब्रह्मण्युपपद्यन्ते । इत्यादि वदता भाष्यकृता विवक्षितशब्दार्थत्वेन श्रुतितात्पर्योपपत्तिसहितयोरुक्तत्वेन सत्यकामत्वादिमिथ्याभूतगुणेषु तयोरभावेन विवक्षितोपपत्तिपदयोरस्वारस्यादित्यर्थः ।।




ಅದ್ವೈತಿಗಳ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ. ಪ್ರಥಮಸೂತ್ರದಲ್ಲಿ ಪ್ರತಿಜ್ಞಾಭಾಗವನ್ನು ಹೇಳದೆ ಹೇತುಭಾಗವನ್ನಷ್ಟೇ ಹೇಳಿದಂತಾಗುತ್ತದೆ. ಆವಾಗ ಪ್ರತಿಜ್ಞಾಭಾಗವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಮತ್ತು ಹೇತುವಿನಲ್ಲಿರುವ ಸರ್ವತ್ರ ಎಂಬ ಪದವನ್ನು ವ್ಯರ್ಥವೆಂದು ಹೇಳಬೇಕಾಗುತ್ತದೆ.

ಎರಡನೆಯ ಸೂತ್ರದಲ್ಲಿ ಮಿಥ್ಯಾಭೂತವಾದ ಸತ್ಯಕಾಮತ್ವಾದಿಗುಣಗಳನ್ನು ಬ್ರಹ್ಮನಲ್ಲಿ ಸಮರ್ಥಿಸುತ್ತೀರಿ. ಆದರೆ ಈ ಗುಣಗಳ ಪ್ರತಿಪಾದನೆಯಲ್ಲಿ ಶ್ರುತಿಗೆ ತಾತ್ಪರ್ಯವೇ ಇಲ್ಲದ ಕಾರಣ ಸೂತ್ರದಲ್ಲಿರುವ ವಿವಕ್ಷಿತ ಹಾಗೂ ಉಪಪತ್ತಿಪದಗಳು ಅಸ್ವರಸವಾಗುತ್ತವೆ.

ಮೂರನೆಯ ಸೂತ್ರದಲ್ಲಿ ಸತ್ಯಕಾಮತ್ವಾದಿಗುಣಗಳು ಜೀವನಲ್ಲಿ ಅನುಪಪನ್ನವೆನ್ನುತ್ತೀರಿ ಆದರೆ ಎರಡನೆಯ ಸೂತ್ರದಲ್ಲಿ ಬ್ರಹ್ಮನಲ್ಲಿ ಸತ್ಯಕಾಮತ್ವಾದಿಗುಣಗಳು ಉಪಪನ್ನವಾಗುತ್ತವೆಂದು ಹೇಳಿದ್ದರಿಂದಲೇ ಜೀವನಲ್ಲಿ ಅನುಪಪನ್ನವಾಗುತ್ತವೆಂದು ತಿಳಿಯುವುದಿಲ್ಲವೇ?

ನಾಲ್ಕನೆಯ ಸೂತ್ರದಲ್ಲಿ ವಿರುದ್ಧವಿಭಕ್ತಿಗಳಿಂದ ಕರ್ಮಕರ್ತೃಭಾವವು ತಿಳಿಯುತ್ತದೆನ್ನುತ್ತೀರಿ. ಇದೂ ಸಹ ಐದನೆಯ ಸೂತ್ರಾರ್ಥದಿಂದ ಪುನರುಕ್ತವಾಗುತ್ತದೆ.

## ಸರ್ವಗತತ್ವಾಧಿಕರಣ (೧-೨-೧)

## ಐದನೆಯ ಸೂತ್ರಾರ್ಥವೂ ಅಯುಕ್ತ

**तात्पर्यचन्द्रिका**

**पञ्चमेऽपि "एष म आत्मान्तर्हृदये ज्यायान्" इति वाक्यशेषे अन्तस्स्थत्वेनोक्तस्य मनोमयत्वादिगुणकस्य "एवमयमन्तरात्मन् हिरण्मयः" इति समानप्रकरणे श्रुत्यन्तरे जीवस्य यः शब्दः 'अन्तरात्मन्' इति सप्तम्यन्तस्ततोऽन्यो 'हिरण्मयः' इति प्रथमान्तो यो ब्रह्मणः शब्दः, तेन शब्दविशेषेण मनोमयत्वादिगुणको न जीव इति त्वदुक्तस्य शब्दविशेषस्य श्रुत्यन्तरस्थत्वेन अस्मदुक्तस्य प्रस्तुतब्रह्मशब्दे सावधारणत्वरूपविशेषस्येव स्वप्रकरणस्थत्वाभावात् ।**

**स्वतन्त्रहेत्वन्तरपरत्वेन चतुर्थ इवात्रापि चशब्दप्रसङ्गाच्च । एवं सूत्रान्तरेऽप्यनुपपत्तिरूह्या ।**

**अत्रापि परमतेऽपि "अनुपपत्तेस्तु न शारीरः" इत्यादिना भेदस्य, "विवक्षितगुण" इत्यनेन गुणानां चोक्तैरैक्यनिर्गुणत्वप्रतिकूलता स्फुटैवेति ।।**

ಅನುವಾದ - 'ಶಬ್ದವಿಶೇಷಾತ್' ಎಂಬ ಐದನೆಯ ಸೂತ್ರದಲ್ಲಿಯೂ "ಏಷ ಮ ಆತ್ಮಾಽಂತಹೃದಯೇ ಜ್ಯಾಯಾನ್" ಎಂಬ ಛಾಂದೋಗ್ಯದ ವಾಕ್ಯಶೇಷದಲ್ಲಿ ಮನೋಮಯತ್ವಾದಿ-ಗುಣವುಳ್ಳ ಅಂತಸ್ಥನ ಬಗ್ಗೆ ಹೇಳಿದ್ದಾರೆ. ಅದೇ ಪ್ರಕರಣದ ಮತ್ತೊಂದು ಶ್ರುತಿಯಲ್ಲಿ "ಏವಮಯಮಂತರಾತ್ಮನ್ ಹಿರಣ್ಮಯಃ" ಎಂಬುದಾಗಿ ಈ ಮನೋಮಯತ್ವಾದಿ ಗುಣವುಳ್ಳವನನ್ನೇ ಪ್ರಥಮಾಂತವಾದ ಬ್ರಹ್ಮಶಬ್ದದಿಂದ ಹೇಳಿದ್ದಾರೆ. ಅಂದರೆ ಜೀವನಿಗೆ ಸಂಬಂಧಿಸಿದ 'ಅಂತರಾತ್ಮನ್' ಎಂಬ ಯಾವ ಸಪ್ತಮ್ಯಂತವಾದ ಶಬ್ದವಿದೆಯೋ ಅದಕ್ಕಿಂತ ಬೇರೆಯಾದ 'ಹಿರಣ್ಮಯಃ' ಎಂಬ ಪ್ರಥಮಾಂತವಾದ ಯಾವ ಬ್ರಹ್ಮನ ಶಬ್ದವಿದೆಯೋ ಅಂತಹ ಶಬ್ದವಿಶೇಷದಿಂದ ಮನೋಮಯತ್ವಾದಿಗುಣವುಳ್ಳವನು ಜೀವನಾಗುವುದಿಲ್ಲ. ಹೀಗೆ ನೀವು ಮಾಡಿದ ವ್ಯಾಖ್ಯಾನದಂತೆ ಶಬ್ದವಿಶೇಷವು ಮತ್ತೊಂದು ಶ್ರುತಿಯಲ್ಲಿದೆ ಎಂದಂತಾಯಿತು. ಆದರೆ ನಾವು ಮಾಡುವ ವ್ಯಾಖ್ಯಾನದಂತೆ ಸಾವಧಾರಣತ್ವರೂಪವಾದ ಶಬ್ದವಿಶೇಷವು ಪ್ರಸ್ತುತವಾದ ಬ್ರಹ್ಮಶಬ್ದದಲ್ಲಿಯೇ ಇರುವುದರಿಂದ ಸ್ವಪ್ರಕರಣಸ್ಥವಾಗಿದೆ. ಹೀಗೆ ಅನಾಯಾಸವಾಗಿಯೇ ವ್ಯಾಖ್ಯಾನಿಸಲು ಬರುತ್ತದೆ.

ನಿಮ್ಮ ಪ್ರಕಾರ ಸ್ವತಂತ್ರವಾದ ಮತ್ತೊಂದು ಹೇತುವನ್ನು ಈ ಸೂತ್ರವು ಹೇಳುತ್ತಿದೆಯೆಂದಂತಾಯಿತು. ಆವಾಗ ನಾಲ್ಕನೆಯ ಸೂತ್ರದಂತೆ ಈ ಸೂತ್ರದಲ್ಲಿಯೂ 'ಚ'

ಶಬ್ದವನ್ನು ಪ್ರಯೋಗಿಸಬೇಕಿತ್ತು. ಇದರಂತೆ ಉಳಿದ ಸೂತ್ರಗಳಲ್ಲಿಯೂ ಅನುಪಪತ್ತಿಯನ್ನು ಊಹಿಸಿಕೊಳ್ಳಬೇಕು.

ಈ ಅಧಿಕರಣದಲ್ಲಿಯೂ ಅದ್ವೈತಿಗಳು "ಅನುಪಪತ್ತೇಸ್ತು ನ ಶಾರೀರಃ" ಇತ್ಯಾದಿಯಾಗಿ ಜೀವಬ್ರಹ್ಮರ ಭೇದವನ್ನೇ ಒಪ್ಪಿದಂತಾಯಿತು. 'ವಿವಕ್ಷಿತಗುಣೋಪಪತ್ತೇಶ್ಚ' ಎಂಬುದರಿಂದ ಗುಣಗಳನ್ನು ಹೇಳಿದ್ದರಿಂದ ಆವಾಗ 'ಬ್ರಹ್ಮಮೀಮಾಂಸಾಶಾಸ್ತ್ರವು ನಿರ್ಗುಣತ್ವಪ್ರತಿಪಾದಕವಾಗಿದೆ' ಎಂಬ ಪ್ರಮೇಯಕ್ಕೆ ಈ ವಿಚಾರವು ಪ್ರತಿಕೂಲವಾಯಿತೆಂಬುದು ಸ್ಪಷ್ಟವಾಯಿತು.

**प्रकाशः –**

एवं सूत्रान्तर इति । षष्ठे

ईश्वरः सर्वभूतानां हृद्देशेऽर्जुन तिष्ठति ।

इति स्मृतौ आधारत्वपर्यवसन्नषष्ठ्यन्तजीवसम्बन्धिशब्दादन्यस्य 'ईश्वरः' इति प्रथमान्तब्रह्मवाचिशब्दस्य सद्भावेनास्या स्मृतेरेव "अयमन्तरात्मन्" इति श्रुत्यन्तरस्येव पञ्चमेनैव ग्रहणसम्भवेन तस्य वैयर्थ्यात्,

'ಏವಂ ಸೂತ್ರಾಂತರೇ' ಎಂಬ ಗ್ರಂಥದಿಂದ ತಿಳಿಯಬೇಕಾದ ವಿಚಾರ ಹೀಗಿದೆ - ಆರನೆಯ ಸೂತ್ರವು ಐದನೆಯ ಸೂತ್ರದಿಂದ ಗತಾರ್ಥವಾಗಿದೆ. ಏಕೆಂದರೆ 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ' ಎಂಬ ಸ್ಮೃತಿಯಲ್ಲಿ ಆಧಾರತ್ವದಲ್ಲಿ ಪರ್ಯವಸಾನವಾಗುವ ಷಷ್ಠ್ಯಂತವಾದ 'ಭೂತಾನಾಂ' ಎಂಬ ಶಬ್ದವು ಜೀವನಿಗೆ ಸಂಬಂಧಿಸಿದೆ. ವಸ್ತುತಃ ಷಷ್ಠೀವಿಭಕ್ತಿಗೆ ಆಧಾರವೆಂಬರ್ಥವು ಇರುವುದಿಲ್ಲ. ಆದರೆ ಪ್ರಕೃತ ಆಧಾರತ್ವಾರ್ಥದಲ್ಲಿ ಷಷ್ಠೀವಿಭಕ್ತಿಯು ಪರ್ಯವಸಾನವಾಗುತ್ತಿದೆ. ಇಂತಹ ಶಬ್ದಕ್ಕಿಂತ ಬೇರೆಯಾದ 'ಈಶ್ವರಃ' ಎಂಬ ಪ್ರಥಮಾಂತವಾದ ಬ್ರಹ್ಮಪ್ರತಿಪಾದಕವಿದೆ. ಆದ್ದರಿಂದ "ಅಯಮಂತರಾತ್ಮನ್" ಎಂಬ ಶ್ರುತ್ಯಂತರದಂತೆ ಇಲ್ಲಿಯೂ ಆಧಾರಾಧೇಯಭಾವವಾಚಕವಾದ ಶಬ್ದವಿಶೇಷವಿರುವುದರಿಂದ ಐದನೆಯ ಸೂತ್ರದಿಂದಲೇ ಸ್ಮೃತಿಯನ್ನೂ ಸಹ ಸ್ವೀಕರಿಸಬಹುದು. ಪುನಃ ಆರನೆಯ ಸೂತ್ರವು ಬೇಕಾಗಿರುವುದಿಲ್ಲ.

**प्रकाशः –** सप्तमे सर्वगते ब्रह्मण्ययुक्तानामल्पौकस्त्वादीनां उपासनार्थं व्यपदेशो जीवेऽप्ययुक्तानां ज्यायस्त्वादीनामुपासनार्थं व्यपदेश इति वैपरीत्यापातात्,

अष्टमे पूर्वत्र सर्वगतत्वेप्यल्पौकस्त्वाद्यनुपपत्त्या प्रकरणस्य ब्रह्मविषयत्वं निराकुर्वता पूर्वपक्षिणा सर्वगतत्वेऽनिष्टापादनायोगात्, स्वाभाविकाभेदे सुखादिभोगस्यावैशेष्यस्य चावर्जनीयत्वात् इत्याद्यूह्यमित्यर्थः ।

ಸರ್ವಗತತ್ವಾಧಿಕರಣ (೧-೨-೧)

'इत्यादिना' सूत्रचतुष्टयेन । नच मिथ्यात्वेनोपपत्तिः' श्रुतेरप्रामाण्यापत्तेः, अस्य स्पष्टं टीकादौ निरासाच्चेति ॥

ಏಳನೆಯ ಸೂತ್ರಕ್ಕೆ ವೈಪರೀತ್ಯದೋಷವು ಬರುತ್ತದೆ. ಸರ್ವಗತನಾದ ಬ್ರಹ್ಮನಲ್ಲಿ ಅರ್ಭಕೌಕಸ್ತ್ವ ಮೊದಲಾದ ಧರ್ಮಗಳು ಇರಲು ಸಾಧ್ಯವಿಲ್ಲ. ಆದರೂ ಸಹ ಉಪಾಸನೆಗೋಸ್ಕರ ಹೇಳಿದ್ದಾರೆನ್ನಬೇಕು. ಆವಾಗ ಜೀವನಲ್ಲಿಯೂ ಅಯುಕ್ತವಾದ ಜ್ಯಾಯಸ್ತ್ವ ಮೊದಲಾದ ಲಿಂಗಗಳನ್ನು ಶ್ರುತಿಯ ಉಪಾಸನೆಗೋಸ್ಕರ ಹೇಳುತ್ತಿದೆಯೆಂದು ವಿಪರೀತವಾಗಿ ಏಕೆ ಹೇಳಬಾರದು?

ಎಂಟನೇ ಸೂತ್ರದಲ್ಲಿ ಸರ್ವಗತನಲ್ಲಿ ಅಲ್ಪಸ್ಥಾನಸ್ಥಿತತ್ವವು ಕೂಡದ ಕಾರಣ ಈ ಪ್ರಕರಣವು ಬ್ರಹ್ಮವಿಷಯಕವಾಗುವುದಿಲ್ಲವೆಂದು ಪೂರ್ವಪಕ್ಷಿಯು ನಿರಾಕರಿಸುತ್ತಿದ್ದಾನೆ. ಯಾವ ಪೂರ್ವಪಕ್ಷಿಯು ಈ ಪ್ರಕರಣವನ್ನೇ ಬ್ರಹ್ಮಪರವೆಂದು ಹೇಳುವುದಿಲ್ಲವೋ? ಅಂತಹವನನ್ನು ಕುರಿತು ಸಂಭೋಗಪ್ರಾಪ್ತಿಯನ್ನು ಆಕ್ಷೇಪಿಸಲು ಹೇಗೆ ಸಾಧ್ಯ? ಸ್ವಾಭಾವಿಕವಾದ ಅಭೇದವನ್ನು ಒಪ್ಪಿದಾಗ ಮಾತ್ರ ಸುಖಾದಿಭೋಗದ ಪ್ರಸಂಗವನ್ನು ಆಪಾದಿಸಬಹುದು. ಇತ್ಯಾದಿಯಾದ ದೋಷಗಳನ್ನು ಊಹಿಸಿಕೊಳ್ಳಬೇಕು.

'ಇತ್ಯಾದಿನಾ' ಎಂದರೆ ನಾಲ್ಕುಸೂತ್ರಗಳಿಂದ ಎಂದು ಅರ್ಥ. ಮಿಥ್ಯಾತ್ವವನ್ನು ಒಪ್ಪುವುದರಿಂದ ಇವುಗಳನ್ನು ಕೂಡಿಸಲು ಸಾಧ್ಯವಿಲ್ಲ. ಹಾಗಾದಲ್ಲಿ ಶ್ರುತಿಗೆ ಅಪ್ರಾಮಾಣ್ಯದೋಷವು ಬರುತ್ತದೆ. ಈ ವಿಷಯವು ಟೀಕೆ ಮೊದಲಾದವುಗಳಲ್ಲಿ ಸ್ಪಷ್ಟವಾಗಿದೆ.

**गुरुराजीयम् – एव सूत्रान्तरेपीति ॥ स्मृतेश्चेतिसूत्रस्य स्मृतिश्च शारीरपरमात्मनोर्भेदेन दर्शयति ॥**

**ईश्वरस्सर्वभूतानां हृद्देशेऽर्जुन तिष्ठति ।**
**भ्रामयन् सर्वभूतानि यन्त्रारूढानि मायया ॥**

इत्याद्या ।

इति व्याख्यानं त्वन्मते भेदस्य मिथ्यात्वेन श्रुतिसूत्राणामप्रमाण्यापत्त्याऽयुक्तम् । तथा अर्भकौकस्त्वादिति सूत्रस्य अर्भकमल्पमोको नीडम् । एषम आत्मान्तर्हृदय इति परिच्छिन्नायतनत्वात् । स्वशब्देन च अणीयान् व्रीहेर्वा यवाद्वेत्यणीयस्त्वव्यपदेशाच्छारीर एवाराग्रमात्रोऽयं जीव इहोपदिश्यते न सर्वगतः परमात्मेनति यदुक्तं तत्परिहर्तव्यम् ।

अत्रोच्यते – नायं दोषः । न तावत्परिच्छिन्नदेशस्य सर्वगतत्वव्यपदेशः । कथमुपपद्यते । सर्वगतस्य तु सर्वदेशेषु विद्यमानत्वात् परिच्छिन्नदेशे व्यपदेशोऽपि

कयाचिद्विधया सम्भवति । यथा समस्तवसुधापतिरपि सन्नयोध्याधिपतिरिति व्यपदिश्यते । कया पुनरपेक्षया सर्वगतस्सनीन्नश्वरोऽर्भकौका अणीयांश्च व्यपदिश्यत इति । निचाय्यत्वादेवमिति ब्रूमः । एवमणीयस्त्वादिगुणगणोपेत ईश्वरस्तत्र हृदयपुण्डरीके निचाय्यो द्रष्टव्य उपदिश्यते । यथा सालिग्रामे हरिः । तत्रास्य बुद्धिविज्ञानं ग्राहकम् । सर्वगतोऽपीश्वरस्तत्रोपास्यमानः प्रसीदति । व्योमवच्चैतद्द्रष्टव्यम् । यथा सर्वगतमपि व्योम सूचीपाशाद्यपेक्षयाऽर्भकौकोऽणीयश्च व्यपदिश्यते एवं ब्रह्माऽपि ।

तदेवं निचाय्यत्वापेक्षं ब्रह्मणोऽर्भकौकस्त्वमणीयस्त्वं च न पारमार्थिकमिति व्याख्यानम् । तत्रार्भकोकस्त्वाणीयस्त्वयोरपारमार्थिकत्वेन श्रुतेरप्रामाण्यम-सदुपासनाया अनर्थफलत्वं च । तथा सम्भोगप्राप्तिरित्यस्य व्योमवत्सर्वगतस्य ब्रह्मणस्सर्वप्राणिहृदयसम्बन्धाच्चिद्रूपतया च शारीरेणाविशिष्टत्वात्सुखदुःखादि-सम्भोगोऽप्यविशिष्टः प्रसज्येयैकत्वाच्च । नहि परस्मादात्मनोऽन्यः कश्चित्संसारी विद्यते । नान्योऽतोऽस्ति द्रष्टा विज्ञातेत्यादिश्रुतिभ्यः । तस्मात्परस्य सम्भोगप्राप्तिरिति चेन्न वैशेष्यात् । न तावत् सर्वप्राणिहृदयसम्बन्धाच्छारीरवद्ब्रह्मणः सम्भोगप्रसङ्गो वैशेष्यात् । शारीरपरमेश्वरयोरेकः कर्ता भोक्ता धर्माधर्मसाधनः सुखदुःखादिमांश्च । एकस्तद्विपरीतोऽपहतपाप्मत्वादिगुणः । एतस्मादनयो-र्विशेषादेकस्य भोगो नेतरस्य । यदि च सन्निधानमात्रेण वस्तुशक्तिमनाश्रित्य कार्य सम्बन्धोऽभ्युपगम्येताकाशादीनामपि दाहादिप्रसङ्गः । सर्वगतानेकात्मवादिनामपि समावेतौ चोद्यपरिहारौ ।

यदप्येकत्वाद्ब्रह्मण आत्मान्तराभावाच्छारीरस्य भोगेन ब्रह्मणो भोगप्रसङ्ग इति । अत्र वदामः । कथमयं त्वयाऽऽत्मान्तराभावोऽध्यवसित इति । तत्त्वमस्यहंब्रह्मास्मि नान्योतोस्ति विज्ञातेत्यादिशास्त्रेभ्य इति चेत् यथाशास्त्रं तर्हि शास्त्रीयोऽर्थः प्रतिपत्तव्यो न तत्रार्धजरतीयं लभ्यम् । शास्त्रं च तत्त्वमसीत्यपहत-पाप्मत्वादिविशेषणं ब्रह्मशारीरस्यात्मत्वेनोपदिशच्छारीरस्यैव तावदुपभोक्तृत्वं वारयति । कुतस्तदुपभोगेन ब्रह्मण उपभोगप्रसङ्गः ।

अथागृहीतं शारीरस्य ब्रह्मणैकत्वं तदा मिथ्याज्ञाननिमित्तः शारीरस्योपभोगोऽनेन परमार्थरूपस्य ब्रह्मणः संस्पर्शः । नहि

बालैस्तलमलिनतादिभिर्व्योम्नि विकल्प्यमाने तलमलिनतादिविशिष्टमेव परमार्थतो व्योम भवति । तदाह । न वैशेष्यादिति ।

नैकत्वेऽपि शारीरस्योपभोगेन ब्रह्मण उपभोगप्रसक्तो वैशेष्यात् । विशेषो हि भाति मिथ्याज्ञानसम्यग्ज्ञानयोः । मिथ्याज्ञानकल्पित उपभोगः सम्यग्ज्ञानदृष्टमेकत्वम् । नच मिथ्याज्ञानकल्पितेनोप-भोगेन सम्यग्ज्ञानदृष्टं वस्तु संस्पृश्यते । तस्मान्नोपभोगसम्बन्धोऽपि शक्य ईश्वरस्य कल्पयितुमिति व्याख्यानम् । तच्चास्मद्रीत्या पारमार्थिकव्यवस्थोपपत्तौ काल्पनिकव्यवस्था क्लिष्टैवेत्यादिरूपेण सूत्रान्तरेऽप्यनुपपत्तिरूह्येत्यर्थः ॥



ಅದ್ವೈತಿಗಳ ಐದನೇ ಸೂತ್ರವ್ಯಾಖ್ಯಾನವೂ ಸಹ ಸರಿಯಿಲ್ಲ. ಏಕೆಂದರೆ ವಿರುದ್ಧ ವಿಭಕ್ತಿಗಳಿಂದ ಒಬ್ಬನೇ ಪ್ರತಿಪಾದ್ಯನಾಗುವುದಿಲ್ಲವೆಂದು ಅವರ ವ್ಯಾಖ್ಯಾನ. ಆದರೆ ಬೇರೆ ಬೇರೆ ಶ್ರುತಿಯಲ್ಲಿರುವ ವಿರುದ್ಧ ವಿಭಕ್ತಿಗಳನ್ನು ಆಶ್ರಯಿಸಿ ಕಷ್ಟ ಕೊಡುವುದಕ್ಕಿಂತ ಅನಾಯಾಸವಾಗಿ ಸಾವಧಾರಣವಾದ ಬ್ರಹ್ಮಶಬ್ದದಲ್ಲಿಯೇ ಶಬ್ದವಿಶೇಷವನ್ನು ಹೇಳುವುದು ಶ್ರೇಯಸ್ಕರವಾಗಿದೆ. ಇದರಂತೆ ಅದ್ವೈತಿಗಳ ಆರನೆಯ ಸೂತ್ರವು ಐದನೆಯ ಸೂತ್ರದಿಂದ ಗತಾರ್ಥವಾಗಿದೆ. ಏಳನೆಯ ಸೂತ್ರದಲ್ಲಿ ವೈಪರೀತ್ಯ ದೋಷವಿದೆ. ಎಂಟನೆಯ ಸೂತ್ರದಲ್ಲಿ ಅನಿಷ್ಟಪಾದನವನ್ನೇ ಪೂರ್ವಪಕ್ಷಿಗೆ ಮಾಡಲಾಗದೆಂಬ ದೋಷವಿದೆ. ಹೀಗೆ ಪ್ರತಿಯೊಂದು ಸೂತ್ರಗಳಲ್ಲಿಯೂ ಅನೇಕ ದೋಷಗಳಿರುವುದರಿಂದ ಅದ್ವೈತಿಗಳು ಸೂತ್ರವನ್ನು ವ್ಯಾಖ್ಯಾನಿಸಲು ಅನರ್ಹರಾಗಿದ್ದಾರೆ.

ಹಿಂದಿನ ಅಧಿಕರಣದಂತೆ ಇಲ್ಲಿಯೂ ಸಹ ಜೀವಬ್ರಹ್ಮರ ಭೇದವನ್ನೇ ಅದ್ವೈತಿಗಳು ಒಪ್ಪಿದ್ದಾರೆ. ಬ್ರಹ್ಮನಲ್ಲಿರುವ ಗುಣಗಳು ಜೀವನಲ್ಲಿ ಅನುಪಪನ್ನವಾಗಿವೆ ಎಂದು ಹೇಳುವಾಗ ಜೀವಬ್ರಹ್ಮರ ಭೇದವನ್ನು ಒಪ್ಪಿದಂತಾಯಿತು. ಮತ್ತು ಬ್ರಹ್ಮಮೀಮಾಂಸಾ ಶಾಸ್ತ್ರವು ನಿರ್ಗುಣಬ್ರಹ್ಮ ಪ್ರತಿಪಾದಕವೆನ್ನುತ್ತಾರೆ. ಆದರೆ 'ವಿವಕ್ಷಿತಗುಣೋಪಪತ್ತೇಃ' ಎಂಬ ಸೂತ್ರದಲ್ಲಿ ನಿರ್ಗುಣತ್ವಕ್ಕೆ ಪ್ರತಿಕೂಲವಾದ ಗುಣಗಳನ್ನು ಸಮರ್ಥಿಸಿದ್ದಾರೆ.





## ರಾಮಾನುಜರ ಅಧಿಕರಣ ಶರೀರ

### तात्पर्यचन्द्रिका

केचित्तु – ''सर्व खल्विदं ब्रह्म'' इत्यादिवाक्यं ब्रह्मविषयम् मनोमयवाक्यं तु जीवविषयमिति भिन्नविषयत्वेन यः परकीयपूर्वपक्षः, तस्यैकविषयत्वसम्भवे अयोगादेवं पूर्वपक्षः – ''सर्वं खल्विदं'' इति ब्रह्मशब्दनिर्दिष्टो जीव एव, सर्वशब्दनिर्दिष्टब्रह्मादिस्तम्बपर्यन्तकृत्स्नात्मकताया अनादिसंसारे कर्मवशाज्जीवे सम्भवात्, निखिलहेयप्रत्यनीके च ब्रह्मणि तदयोगात्, जन्मादिकारणतायाश्च कर्मद्वारा जीवेऽपि सम्भवात्, ब्रह्मशब्दस्य च जीवेऽपि प्रयोगादिति ।

सिद्धान्तस्तु – जीवस्य जीवान्तरात्मकत्वाभावेन सर्वात्मकत्वायोगात्, सर्वात्मकता च सर्वप्रकारकतेति स्वीकारेण प्रकारभूतशरीरगतानां दोषाणां प्रकारिणि ब्रह्मण्यप्रसङ्गात्, ब्रह्मशब्दकारणतयोश्च जीवेऽस्वारस्यात्, ब्रह्मैव सर्वात्मकमिति ।

सूत्राक्षरार्थस्तु – 'सर्वत्र' ''सर्वं खलु'' इति निर्दिष्टे जगति तत्समानाधिकरणेन ब्रह्मशब्देन तदात्मकतयाऽभिधीयमानं परं ब्रह्मैव, खलुशब्देन सर्वात्मकतायाः, ''तज्जलान् इति'' इति हेतुत्वार्थेनेतिशब्देन च जन्मादिकारणतायाः प्रसिद्धत्वेनोपदेशात्, कारणत्वादेश्च ''आनन्दाद्ध्येव खल्विमानि भूतानि'' इत्यादिश्रुत्यन्तरे ब्रह्मण्येव प्रसिद्धत्वादित्याहुः ।

ಅನುವಾದ - ರಾಮಾನುಜರ ಅಧಿಕರಣ ಶರೀರ ಹೀಗಿದೆ - 'ಸರ್ವಂ ಖಲ್ವಿದಂ' ಇತ್ಯಾದಿ ವಾಕ್ಯವು ಬ್ರಹ್ಮವಿಷಯಕವಾಗಿದೆ. 'ಮನೋಮಯಃ ಪ್ರಾಣಶರೀರಃ' ಎಂಬ ವಾಕ್ಯವು ಜೀವವಿಷಯಕವಾಗಿದೆ. ಭಿನ್ನವಿಷಯಕವಾದ್ದರಿಂದ ಬ್ರಹ್ಮನು ಶ್ರುತಿಪ್ರತಿಪಾದ್ಯನಲ್ಲ ಎಂದು ಅದ್ವೈತಿಗಳು ಪೂರ್ವಪಕ್ಷ ಮಾಡಿದರು. ಆದರೆ ಭಿನ್ನವಿಷಯಕವೆಂದು ಒಪ್ಪದೆ ಏಕವಿಷಯಕತ್ವವನ್ನು ಒಪ್ಪಿ ಸುಲಭವಾಗಿ ಪೂರ್ವಪಕ್ಷ ಮಾಡಲು ಬರುವಾಗ ಭಿನ್ನವಿಷಯಕವಾದ ಪೂರ್ವಪಕ್ಷವು ಅಯುಕ್ತವಾಗಿದೆ.

ಅದು ಹೀಗೆ - 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿಯಲ್ಲಿ ಬ್ರಹ್ಮಶಬ್ದದಿಂದ ನಿರ್ದೇಶಿಸಲ್ಪಟ್ಟಿರುವವನು ಜೀವನೇ ಆಗಿದ್ದಾನೆ. ಏಕೆಂದರೆ ಸರ್ವಶಬ್ದವು ಚತುರ್ಮುಖಬ್ರಹ್ಮನಿಂದ ಆರಂಭಿಸಿ ತೃಣಪರ್ಯಂತ ಸಕಲಜೀವರಾಶಿಗಳ ತಾದಾತ್ಮ್ಯವನ್ನು ಹೇಳುತ್ತಿದೆ. ಅನಾದಿ ಸಂಸಾರದಲ್ಲಿ ಪ್ರತಿಯೊಬ್ಬ ಜೀವನೂ ಸಹ ತಮ್ಮ ತಮ್ಮ ಕರ್ಮಗಳಿಗೆ ಅನುಗುಣವಾಗಿ ಬ್ರಹ್ಮನಿಂದ ಆರಂಭಿಸಿ

ತೃಣಪರ್ಯಂತವಿರುವ ಪ್ರತಿಯೊಂದು ಜನ್ಮಗಳನ್ನು ಹೊಂದುತ್ತಾನೆ. ಈ ದೃಷ್ಟಿಯಿಂದ ಶ್ರುತಿಯು 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಜೀವನಿಗೆ ಸರ್ವಾತ್ಮಕತ್ವವನ್ನು ಹೇಳುತ್ತಿದೆ. ಇಂತಹ ಸರ್ವಾತ್ಮಕತ್ವವು ಹೇಯವೆನಿಸಿದ ಸಕಲ ಜನ್ಮಗಳಿಂದ ವಿನಿರ್ಮುಕ್ತನಾದ ಬ್ರಹ್ಮನಲ್ಲಿ ಕೂಡುವುದಿಲ್ಲ.

ಹಾಗಾದರೆ ಜನ್ಮಾದಿಕಾರಣತ್ವವು ಜೀವನಲ್ಲಿ ಹೇಗೆ ಬರುತ್ತದೆ? ಎಂದರೆ ಕರ್ಮದ ಮೂಲಕವಾಗಿ ಜನ್ಮಾದಿಕಾರಣತ್ವವನ್ನೂ ಸಹ ಜೀವನಲ್ಲಿ ಹೇಳಬಹುದು. ಆದ್ದರಿಂದ 'ಸರ್ವಂ ಖಲ್ವಿದಂ' ಇತ್ಯಾದಿ ಸಮಸ್ತ ವಾಕ್ಯದಿಂದ ಜೀವನೇ ಪ್ರತಿಪಾದ್ಯನಾಗಿದ್ದಾನೆಂದು ಪೂರ್ವಪಕ್ಷ.

ಸಿದ್ಧಾಂತ - ಒಬ್ಬ ಜೀವನು ಮತ್ತೊಬ್ಬ ಜೀವನ ತಾದಾತ್ಮ್ಯವನ್ನು ಹೊಂದಲು ಸಾಧ್ಯವಿಲ್ಲ. ಇಂತಹ ತಾದಾತ್ಮ್ಯವನ್ನೇ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಸರ್ವಾತ್ಮಕತ್ವಶಬ್ದಕ್ಕೆ ಸರ್ವಪ್ರಕಾರತ್ವ ಎಂಬ ಅರ್ಥವನ್ನು ಹೇಳಬೇಕು. ಪ್ರಕಾರವೆಂದರೆ ಶರೀರಗಳೆಂದರ್ಥ. ಅಂದರೆ ಪರಬ್ರಹ್ಮನಿಗೆ ಸಕಲ ಜೀವರಾಶಿಗಳು ಶರೀರವಾಗಿರುವುದರಿಂದ ಸರ್ವಾತ್ಮಕತ್ವವನ್ನು ಹೇಳಬಹುದು. ಪ್ರಕಾರವೆನಿಸಿದ ಶರೀರದಲ್ಲಿರುವ ದೋಷಗಳು ಪ್ರಕಾರಿ ಎನಿಸಿದ ಬ್ರಹ್ಮನಲ್ಲಿ ಬರುವುದಿಲ್ಲ. ಬ್ರಹ್ಮಶಬ್ದ ಹಾಗೂ ಜಗತ್ಕಾರಣತ್ವಗಳು ಜೀವನಲ್ಲಿ ಸ್ವರಸವಾಗಿ ಕೂಡಿಸಲು ಬಾರದ ಕಾರಣ ಬ್ರಹ್ಮನೇ ಸರ್ವಾತ್ಮಕನೆಂದು ಹೇಳಬೇಕು. ಆದ್ದರಿಂದ 'ಸರ್ವಂ ಖಲ್ವಿದಂ' ಇತ್ಯಾದಿ ವಾಕ್ಯದಿಂದ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆಂದು ಸಿದ್ಧಾಂತ.

ಪ್ರಥಮ ಸೂತ್ರಾರ್ಥ ಹೀಗಿದೆ - ಸರ್ವತ್ರ = 'ಸರ್ವಂ ಖಲ್ವಿದಂ' ಎಂಬುದಾಗಿ ನಿರ್ದೇಶಿಸಲ್ಪಟ್ಟ ಜಗತ್ತಿನಲ್ಲಿ ಸರ್ವಶಬ್ದದ ಸಮಾನ ವಿಭಕ್ತಿಯಲ್ಲಿ ಪ್ರಯೋಗಿಸಲ್ಪಟ್ಟ ಬ್ರಹ್ಮಶಬ್ದದಿಂದ ಸರ್ವಾತ್ಮಕತ್ವವನ್ನು ಹೇಳಲಾಗಿದೆ. ಇಂತಹ ಸರ್ವಾತ್ಮಕನು ಪರಬ್ರಹ್ಮನೇ ಆಗಿದ್ದಾನೆ. 'ಖಲು' ಎಂಬ ಶಬ್ದದಿಂದ ಸರ್ವಾತ್ಮಕತ್ವವು ಪ್ರಸಿದ್ಧವಾಗಿದೆಯೆಂದು ತಿಳಿಸಲಾಗಿದೆ. 'ತಜ್ಜಲಾನ್ ಇತಿ' ಎಂಬಲ್ಲಿರುವ ಹೇತುತ್ವರ್ಥದಲ್ಲಿರುವ 'ಇತಿ' ಶಬ್ದದಿಂದಲೂ ಜನ್ಮಾದಿಕಾರಣತ್ವವು ಪ್ರಸಿದ್ಧವಾಗಿದೆಯೆಂದು ತಿಳಿಸಲಾಗಿದೆ. ಇಂತಹ 'ಸರ್ವಾತ್ಮಕತ್ವ' ಹಾಗೂ ಜಗತ್‌ಕಾರಣತ್ವಾದಿಗಳು 'ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ' ಇತ್ಯಾದಿಯಾಗಿ ಬೇರೆ ಶ್ರುತಿಯಲ್ಲಿ ಬ್ರಹ್ಮನಲ್ಲೇ ಪ್ರಸಿದ್ಧವಾಗಿವೆಯೆಂದು ತಿಳಿಯುತ್ತದೆ. ಇಷ್ಟು ರಾಮಾನುಜರ ವ್ಯಾಖ್ಯಾನ.

**प्रकाशः —**

**केचित्तु — सर्वमिति । परैः ''सर्वं खल्विदं ब्रह्म'' इति वाक्यं ब्रह्मपरमित्युपेत्य ''क्रतुं कुर्वीत'' इति वाक्यविहितोपासनानुवादेन शान्तत्वरूपगुण-विधिपरत्वान्नोपासनायां कर्मतया ब्रह्मार्पकं, किन्तु मनोमयवाक्यमेव जीवं कर्मतयाऽर्पयतीत्युक्तम् ।**

एते तु, सर्वात्मकं ब्रह्म शान्तः सन्नुपासीतेत्यत्रैवोपासना विधीयते, ''क्रतुं कुर्वीत'' इति तु मनोमयत्वादिगुणविधानाय प्राग्विहितोपासनानुवादः । ततश्च सर्वात्मकं ब्रह्म मनोमयत्वादिगुणकमुपासीतेति समग्रवाक्यार्थः इत्येकवाक्यतामाहुः ।

ವಿವರಣೆ - ರಾಮಾನುಜರ ಅಧಿಕರಣಶರೀರವನ್ನು ನಿರಾಕರಿಸಲು ಅನುವಾದ ಮಾಡುತ್ತಿದ್ದಾರೆ 'ಕೇಚಿತ್ತು' ಇತ್ಯಾದಿಯಾಗಿ. ಅದ್ವೈತಿಗಳಿಗೂ ರಾಮಾನುಜರಿಗೂ ಇಷ್ಟು ವ್ಯತ್ಯಾಸಗಳಿವೆ - ಅದ್ವೈತಿಗಳು 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿ ವಾಕ್ಯಗಳನ್ನು ಬ್ರಹ್ಮಪರವೆಂದು ಒಪ್ಪಿ 'ಕ್ರತುಂ ಕುರ್ವೀತ' ಎಂಬ ವಾಕ್ಯದಿಂದ ವಿಹಿತವಾದ ಉಪಾಸನೆಯನ್ನು ಅನುವಾದ ಮಾಡುವ ಮೂಲಕ ಶಾಂತತ್ವವೆಂಬ ಗುಣವನ್ನು ವಿಧಿಸುತ್ತದೆ ಎನ್ನುತ್ತಾರೆ. ಈ ವಾಕ್ಯವು ಉಪಾಸನೆಗೆ ಬ್ರಹ್ಮನು ಕರ್ಮನಾಗಿದ್ದಾನೆಂದು ಹೇಳುವುದಿಲ್ಲ. ಹೊರತಾಗಿ ಮನೋಮಯವಾಕ್ಯವೇ ಉಪಾಸನೆಗೆ ಕರ್ಮನಾದವನು ಜೀವನೆಂದು ಹೇಳುತ್ತದೆ ಎಂದು ಪೂರ್ವಪಕ್ಷ ಮಾಡುತ್ತಾರೆ.

ಆದರೆ ರಾಮಾನುಜರು ಸರ್ವಾತ್ಮಕನಾದ ಬ್ರಹ್ಮನನ್ನು ಶಾಂತನಾಗಿ ಉಪಾಸನೆ ಮಾಡಬೇಕೆಂದು 'ಸರ್ವಂ ಖಲ್ವಿದಂ' ಎಂಬ ವಾಕ್ಯವೇ ವಿಧಿಸುತ್ತಿದೆ. 'ಕ್ರತುಂ ಕುರ್ವೀತ' ಎಂಬ ವಾಕ್ಯವು ಮನೋಮಯತ್ವಾದಿ ಗುಣಗಳನ್ನು ವಿಧಾನ ಮಾಡುವುದಕ್ಕಾಗಿ ಹಿಂದೆ ವಿಹಿತವಾದ ಉಪಾಸನೆಯನ್ನು ಅನುವಾದ ಮಾಡುತ್ತಿದೆ. ಆದ್ದರಿಂದ ಸರ್ವಾತ್ಮಕನಾದ ಬ್ರಹ್ಮನೇ ಮನೋಮಯತ್ವಾದಿ ಗುಣಗಳಿಂದ ಉಪಾಸ್ಯನಾಗಿದ್ದಾನೆಂದು ಸಮಗ್ರವಾಕ್ಯದ ಅರ್ಥವೆನ್ನುತ್ತಾರೆ.

**प्रकाशः** – तथा च ब्रह्मपदनिर्दिष्टो यदि जीवस्तर्हि स तथोपास्यः । यदि ब्रह्म, तर्हि तदेव तथोपास्यमिति सेत्स्यतीति ब्रह्मपदनिर्दिष्टमेव किं जीव उत परमात्मेति विचार्यते । तत्र पूर्वपक्षाद्युनवदति – **सर्वं खल्विदं ब्रह्मेतीति** ।

अत्र ब्रह्मोद्दिश्य 'इदं सर्वं' इत्युच्यमानं सर्वात्मकत्वं चतुर्मुखादितृणपर्यन्त-जगदात्मकत्वम् । तच्चानाद्यविद्याकर्मवशेन नानायोनिषु जननसम्भवेन जीव एव भवति, नतु सर्वदोषदूरे परमात्मनीत्यर्थः । कथं तर्हि ''तज्जलान्'' इत्युक्तसृष्ट्यादि हेतुत्वमित्यत आह – **जन्मादीति** ।

ಆದ್ದರಿಂದ ಬ್ರಹ್ಮಪದದಿಂದ ನಿರ್ದೇಶಿಸಲ್ಪಡುವವನು ಜೀವನಾದರೆ ಉಪಾಸ್ಯನೂ ಸಹ ಅವನೇ ಆಗುತ್ತಾನೆ. ಒಂದು ವೇಳೆ ಬ್ರಹ್ಮನಾದರೆ ಬ್ರಹ್ಮನೇ ಉಪಾಸ್ಯನಾಗುತ್ತಾನೆ. ಆದ್ದರಿಂದ ಬ್ರಹ್ಮಪದದಿಂದ ನಿರ್ದೇಶಿಸಲ್ಪಟ್ಟವನು ಜೀವನೋ ಅಥವಾ ಪರಮಾತ್ಮನೋ ? ಎಂದು ಸಂಶಯ.

ಸರ್ವಗತತ್ವಾಧಿಕರಣ (೧-೨-೧)

ಈ ವಿಷಯದಲ್ಲಿ ಪೂರ್ವಪಕ್ಷ ಹಾಗೂ ಸಿದ್ಧಾಂತಗಳನ್ನು 'ಸರ್ವಂ ಖಲು' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ. ಈ ಶ್ರುತಿಯಲ್ಲಿ ಬ್ರಹ್ಮನನ್ನು ಉದ್ದೇಶಿಸಿ 'ಇದಂ ಸರ್ವಂ' ಎಂದು ಹೇಳುತ್ತಿರುವ ಸರ್ವಾತ್ಮಕತ್ವವು ಚತುರ್ಮುಖನಿಂದ ಆರಂಭಿಸಿ ತೃಣಪರ್ಯಂತವಾದ ಜಗತ್ತಿನಸ್ವರೂಪವಾಗಿದೆ. ಇಂತಹ ಜಗದಾತ್ಮಕತ್ವವು ಅನಾದಿಯಾದ ಅವಿದ್ಯಾಕರ್ಮಗಳ ಅಧೀನವಾಗಿ ಅನೇಕ ಯೋನಿಗಳಲ್ಲಿ ಹುಟ್ಟುವವನಾದ್ದರಿಂದ ಜೀವನಲ್ಲೇ ಯುಕ್ತವಾಗುತ್ತದೆ ಹೊರತು, ಸಕಲದೋಷ ವಿದೂರನಾದ ಪರಮಾತ್ಮನಲ್ಲಿ ಇಂತಹ ತದಾತ್ಮಕತ್ವವು ಯುಕ್ತವಾಗುವುದಿಲ್ಲ. ಹಾಗಾದರೆ "ತಜ್ಜಲಾನ್" ಎಂಬುದಾಗಿ ಹೇಳಲ್ಪಟ್ಟ ಜನ್ಮಾದಿಕಾರಣತ್ವವನ್ನು ಜೀವನಲ್ಲಿ ಹೇಗೆ ಸಮರ್ಥಿಸುತ್ತೀರಿ? ಎಂಬ ಪ್ರಶ್ನೆಗೆ 'ಜನ್ಮಾದಿ' ಇತ್ಯಾದಿಯಾಗಿ ಉತ್ತರಿಸಿದ್ದಾರೆ.

**प्रकाशः – सर्वप्रकारकतेतीति** । **सर्वविशेषणकत्वं देवतिर्यङ्मनुष्यशरीकत्वमिति** यावत् । 'सर्वत्र' इति पदं प्रतिज्ञापरं मत्वा सूत्रार्थमनुवदति – **सर्वत्रेति** ।

'सर्वत्र' इत्यनुवादः जगतीति व्याख्या । हेत्वंशार्थमाह – **खल्विति** । 'प्रसिद्धोपदेशात्, इत्यस्य प्रसिद्धत्वेनोपदेशादित्यर्थः । **कस्येति** प्रतियोग्याकाङ्क्षायां "तज्जलान्" इतिवाक्योक्तस्य जन्मादिहेतुत्वस्य 'सर्वमिदं' इत्युक्तसर्वात्मकतायाश्चान्वयः ।

ಗ್ರಂಥದಲ್ಲಿ ಸರ್ವಪ್ರಕಾರತ್ವವನ್ನು ಹೇಳಿದ್ದಾರೆ. ಅಂದರೆ ಸರ್ವವೂ ವಿಶೇಷಣವಾಗಿರುವುದು ಎಂದರ್ಥ. ದೇವತೆಗಳು, ತಿರ್ಯಂಗ್‌ಜಂತುಗಳು, ಮನುಷ್ಯರು ಇವರೇ ಶರೀರವಾಗಿವುಳ್ಳವನು ಎಂದು ಅಭಿಪ್ರಾಯ.

ಸೂತ್ರದಲ್ಲಿರುವ 'ಸರ್ವತ್ರ' ಎಂಬ ಪದವು ಪ್ರತಿಜ್ಞಾವಾಕ್ಯವಾಗಿದೆ ಎಂದು ತಿಳಿದು ಸೂತ್ರಾರ್ಥವನ್ನು ಹೇಳುತ್ತಾರೆ. ಅದನ್ನು 'ಸರ್ವತ್ರ' ಇತ್ಯಾದಿಯಾಗಿ ಅನುವಾದ ಮಾಡಿದ್ದಾರೆ. 'ಸರ್ವತ್ರ' ಎಂಬ ಪದವು ಸೂತ್ರದ ಅನುವಾದವಾಗಿದ್ದು 'ಜಗತಿ' ಎಂಬುದು ಅದರ ವ್ಯಾಖ್ಯಾನವಾಗಿದೆ. ಹೇತ್ವಂಶದ ಅರ್ಥವನ್ನು 'ಖಲು' ಇತ್ಯಾದಿಯಾಗಿ ಹೇಳಿದ್ದಾರೆ. 'ಪ್ರಸಿದ್ಧೋಪದೇಶಾತ್' ಎಂಬ ಪದಕ್ಕೆ ಪ್ರಸಿದ್ಧವೆಂದು ಉಪದೇಶಿಸಿದ್ದರಿಂದ ಎಂದರ್ಥ. ಯಾವುದನ್ನು ? ಎಂಬ ಆಕಾಂಕ್ಷೆಗೆ 'ತಜ್ಜಲಾನ್' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಜನ್ಮಾದಿಹೇತುತ್ವವು ಮತ್ತು 'ಸರ್ವಮಿದಂ' ಎಂಬಲ್ಲಿ ಹೇಳಲ್ಪಟ್ಟ ಸರ್ವಾತ್ಮಕತ್ವವು ಎಂದು ಅನ್ವಯ.

**प्रकाशः** – सार्वात्म्यस्य प्रसिद्धत्वं खलुशब्देन, हेतुत्वस्य प्रसिद्धत्वमिति-शब्देनोच्यते, इतिशब्दस्य हेत्वर्थत्वात्, प्रसिद्धस्यैव हेतुत्वात्, जन्मादिहेतुत्वं प्रसिद्धमिति गम्यत इति, सार्वात्म्यहेतुत्वयोः खल्वितिशब्दाभ्यां प्रसिद्धत्वेनोपदेशादिति सूत्रार्थः पर्यवस्यतीत्यर्थः ।

ಪರಿಪೂರ್ಣಚಂದ್ರಿಕಾ

अस्तु जन्मादिकारणत्वस्य प्रसिद्धत्वेनोपदेशः, ततश्च किमित्यत आह – **कारणत्वादेश्चेति ।**

ಸಾರ್ವಾತ್ಮ್ಯವು ಬ್ರಹ್ಮನಲ್ಲಿ ಪ್ರಸಿದ್ಧವಾಗಿದೆಯೆಂದು ಹೇಳಿದ್ದಾರೆ. ಜಗತ್‌ಕಾರಣತ್ವವು ಬ್ರಹ್ಮನಲ್ಲಿ ಪ್ರಸಿದ್ಧವಾಗಿದೆಯೆಂದು 'ಇತಿ' ಶಬ್ದದಲ್ಲಿ ಹೇಳಿದ್ದಾರೆ 'ಇತಿ' ಶಬ್ದವು ಹೇತ್ವರ್ಥದಲ್ಲಿರುವುದರಿಂದ ಪ್ರಸಿದ್ಧವೇ ಹೇತುವಾಗುವುದರಿಂದ ಜನ್ಮಾದಿಹೇತುತ್ವವು ಪ್ರಸಿದ್ಧವಾಗಿದೆಯೆಂದು ತಿಳಿಯುತ್ತದೆ. ಹೀಗೆ ಸರ್ವಾತ್ಮಕತ್ವ ಹಾಗೂ ಹೇತುತ್ವಗಳು ಪ್ರಸಿದ್ಧವಾಗಿವೆಯೆಂದು 'ಖಲು' ಹಾಗೂ 'ಇತಿ' ಶಬ್ದಗಳಿಂದ ಉಪದೇಶಿಸಿದ ಕಾರಣ ಎಂದು ಸೂತ್ರಾರ್ಥವು ಪರ್ಯವಸಾನವಾಗುತ್ತದೆ.

ಜನ್ಮಾದಿಕಾರಣತ್ವವು ಪ್ರಸಿದ್ಧವಾಗಿದೆಯೆಂದು ಉಪದೇಶಿಸಲ್ಪಡಲಿ ಆದರಿಂದೇನು ಪ್ರಯೋಜನ ? ಎಂಬ ಪ್ರಶ್ನೆಗೆ 'ಕಾರಣತ್ವಾದೇಶ್ಚ' ಎಂಬುದಾಗಿ ಉತ್ತರಿಸಿದ್ದಾರೆ.

**प्रकाशः – आनन्दाद्ध्येव खल्विति ।** ''यतो वा इमानि भूतानि जायन्ते'' इति श्रुत्यन्तरे ब्रह्मणि प्रसिद्धस्यैव जगत्कारणत्वस्येहाऽऽम्नानात्, विवक्षितगुणानामुपपत्तेश्च ब्रह्मेत्येवावगम्यत इत्यर्थः । यथोक्तमधिकरणसारावल्यां -

सर्वत्वं कर्मभिस्स्वैर्जनिमति घटते ब्रह्मशब्दोऽत्र चैवे-
त्यल्पस्थानोऽल्पमानस्सुखतदितरभुक् जीव एवेति चेन्न ।
तज्जत्वादेरनूक्तेर्विविधगुणभिदादर्शनात्सर्वतादेः
स्वारस्यादप्यणुत्वं ह्युपधिकृतमिहोपास्तये ज्यायसि स्यात् ।।

इति ।

अत्र प्राग्वद्ब्रह्मधर्माणामेव भावेन संशयपूर्वपक्षयोरयोगात्, सत्यकामत्वादिभिरनेकैर्निरवकाशैः पूर्वस्यापि सर्वात्मत्वादेः कथञ्चिन्नेयत्वात्, स्वप्रकरणे शब्दविशेषाभावेनोदाहरणानौचित्यादिति ध्येयम् ।

'ಆನಂದಾದ್ಧ್ಯೇವ ಖಲು' ಎಂಬ ಶ್ರುತಿಯಲ್ಲಿ ಹಾಗೂ ''ಯತೋ ವಾ ಇಮಾನಿ ಭೂತಾನಿ ಜಾಯಂತೇ'' ಎಂಬ ಶ್ರುತಿಯಲ್ಲಿ ಬ್ರಹ್ಮನಲ್ಲಿ ಪ್ರಸಿದ್ಧವಾದ ಜಗತ್ಕಾರಣತ್ವವನ್ನು ಈ ಶ್ರುತಿಯಲ್ಲಿ ಹೇಳಲಾಗಿದೆ. ಹೀಗೆ ವಿವಕ್ಷಿತವಾದ ಜಗತ್ಕಾರಣತ್ವಾದಿ ಗುಣಗಳು ಉಪಪನ್ನವಾಗುವುದರಿಂದ ಬ್ರಹ್ಮನೇ ಸರ್ವಾತ್ಮಕನೆಂದು ತಿಳಿಯುತ್ತದೆ. ಈ ವಿಷಯವು ಅಧಿಕರಣಸಾರಾವಳಿಯಲ್ಲಿ ಹೀಗೆ ಸಂಗ್ರಹಿಸಲಾಗಿದೆ -

ಸರ್ವತ್ವಂ ಕರ್ಮಭಿಸ್ಸ್ವೈರ್ಜನಿಮತಿ ಘಟತೇ ಬ್ರಹ್ಮಶಬ್ದೋಽತ್ರ ಚೈವೇ -
ತ್ಯಲ್ಪಸ್ಥಾನೋಽಲ್ಪಮಾನಸ್ಸುಖತದಿತರಭುಕ್ ಜೀವ ಏವೇತಿ ಚೇನ್ನ।

ತಜ್ಜತ್ವಾದೇರನೂಕ್ತೇರ್ವಿವಿಧಗುಣಭಿದಾದರ್ಶನಾತ್ಸರ್ವತಾದೇಃ
ಸ್ವಾರಸ್ಯಾದಪ್ಯಣುತ್ವಂ ಹ್ಯುಪಧಿಕೃತಮಿಹೋಪಾಸ್ತಯೇ ಜ್ಯಾಯಸಿ ಸ್ಯಾತ್ ॥

ಜೀವನು ತನ್ನ ಕರ್ಮಗಳಿಂದ ಸರ್ವಾತ್ಮಕತ್ವವನ್ನು ಹೊಂದುತ್ತಾನೆ. ಹುಟ್ಟುವಿಕೆಯೂ ಸಹ ಇವನಲ್ಲಿ ಕೂಡುತ್ತದೆ. ಕೋಶದ ಆಧಾರದಿಂದ ಬ್ರಹ್ಮಶಬ್ದವು ಜೀವವಾಚಿಯಾಗಿದೆ. ಅಲ್ಪಸ್ಥಾನಸ್ಥಿತತ್ವವು ಮತ್ತು ಅಲ್ಪಪರಿಮಾಣವು ಇವನಲ್ಲಿ ಕೂಡುತ್ತದೆ. ಮತ್ತು ಸುಖದುಃಖ ಇವುಗಳ ಭೋಗವು ಜೀವನಲ್ಲೇ ಕೂಡುತ್ತದೆ. ಆದ್ದರಿಂದ 'ಸರ್ವಂ ಖಲ್ವಿದಂ' ಇತ್ಯಾದಿ ವಾಕ್ಯದಿಂದ ಪ್ರತಿಪಾದ್ಯನಾದವನು ಜೀವನೇ ಆಗಿದ್ದಾನೆಂದು ಪೂರ್ವಪಕ್ಷ.

ಇದು ತಪ್ಪು. ಜಗತ್ಕಾರಣತ್ವ, ಜಗತ್ತಿನ ಪ್ರಳಯ ಇವುಗಳೆಲ್ಲವನ್ನು ಶ್ರುತಿಯಲ್ಲಿ ಕೇವಲ ಅನುವಾದ ಮಾಡುತ್ತಿರುವುದರಿಂದ ಪ್ರಸಿದ್ಧನಾದ ಬ್ರಹ್ಮನಲ್ಲೇ ಕೂಡಿಸಬೇಕು. ಮತ್ತು ಸತ್ಯಸಂಕಲ್ಪತ್ವವೇ ಮೊದಲಾದ ಗುಣಗಳೆಲ್ಲವು ಬ್ರಹ್ಮನಲ್ಲೇ ಕೂಡುತ್ತವೆ. ಮತ್ತು ಸರ್ವಾತ್ಮಕತ್ವ ಮತ್ತು ಜಗತ್ಕಾರಣತ್ವಗಳು ಬ್ರಹ್ಮನಲ್ಲೇ ಸ್ವರಸವಾಗಿ ಕೂಡುತ್ತವೆ. ಅಣುತ್ವವನ್ನು ಔಪಾಧಿಕವಾಗಿ ಕೂಡಿಸಬಹುದು. ಆದ್ದರಿಂದ ಬ್ರಹ್ಮನ ಉಪಾಸನೆಗೋಸ್ಕರ ಮಹತ್ತ್ವಗುಣವುಳ್ಳ ಬ್ರಹ್ಮನಲ್ಲಿ ಅಣುತ್ವವನ್ನು ಹೇಳಲಾಗಿದೆ.

ಅದ್ವೈತಿಗಳಿಗೆ ಹೇಳಿದ ದೋಷವು ಇವರಿಗೂ ಸಹ ತಪ್ಪಿದ್ದಲ್ಲ. ಮುಂದಿನ ವಾಕ್ಯಗಳಲ್ಲಿ ಸತ್ಯಕಾಮತ್ವವೇ ಮೊದಲಾದ ನಿರವಕಾಶವಾದ ಬಹಳವಾದ ಅನೇಕ ಬ್ರಹ್ಮನ ಧರ್ಮಗಳು ಕೇಳಿಸುತ್ತಿವೆ. ಆದ್ದರಿಂದ ಸಂಶಯವಾಗಲಿ ಪೂರ್ವಪಕ್ಷವಾಗಲಿ ಹುಟ್ಟಲು ಸಾಧ್ಯವೇ ಇಲ್ಲ. ವಸ್ತುತಸ್ತು ಹಿಂದಿನ ವಾಕ್ಯದಲ್ಲಿ ಸರ್ವಾತ್ಮಕತ್ವವು ಹೇಳಲ್ಪಟ್ಟಿರಬಹುದು. ಆದರೆ ಸತ್ಯಕಾಮತ್ವವೇ ಮೊದಲಾದ ಅನೇಕ ಧರ್ಮಗಳ ಬಲದಿಂದ ಈ ಒಂದು ಸರ್ವಾತ್ಮಕತ್ವವನ್ನು ಗೌಣವಾಗಿ ವ್ಯಾಖ್ಯಾನಿಸಬೇಕಾಗುತ್ತದೆ. ಮತ್ತು ಸ್ವಪ್ರಕರಣದಲ್ಲಿಯೇ ಶಬ್ದವಿಶೇಷವು ಇಲ್ಲದ ಕಾರಣ ಉದಾಹರಣೆಯು ಅನುಚಿತವಾಗಿದೆಯೆಂದು ತಿಳಿಯಬೇಕು.




ಛಾಂದೋಗ್ಯದಲ್ಲಿರುವ 'ಮನೋಮಯಃ ಪ್ರಾಣಶರೀರಃ' ಎಂಬ ವಾಕ್ಯವೇ ಈ ಅಧಿಕರಣದ ವಿಷಯವೆನ್ನುತ್ತಾರೆ ರಾಮಾನುಜರು. 'ಸರ್ವಂ ಖಲ್ವಿದಂ' ಎಂಬ ವಾಕ್ಯವು ಆಪಾತತಃ ಬ್ರಹ್ಮಪರವೆಂದು ತಿಳಿದರೂ ಸಹ ಮನೋಮಯ ಶಬ್ದವಿರುವುದರಿಂದ ಜೀವನೇ ಪ್ರತಿಪಾದ್ಯನು. ಆದ್ದರಿಂದ 'ಸರ್ವಂ ಖಲ್ವಿದಂ' ಎಂಬ ವಾಕ್ಯವನ್ನೂ ಸಹ ಜೀವಪರವೆಂದೇ ಹೇಳಬೇಕೆಂದು ಪೂರ್ವಪಕ್ಷ.

ಸಕಲ ವೇದಾಂತ ವಾಕ್ಯಗಳಲ್ಲಿ ಎಲ್ಲೆಲ್ಲಿ ಮನೋಮಯ ಶಬ್ದಗಳಿವೆಯೋ ಅವೆಲ್ಲವೂ ಬ್ರಹ್ಮನನ್ನೇ ಪ್ರತಿಪಾದಿಸುತ್ತವೆ. 'ಮನೋಮಯಃ ಪ್ರಾಣಶರೀರನೇತಾ'' ಎಂಬುದಾಗಿ ಮಾಂಡೂಕ್ಯದಲ್ಲಿ, ತೈತ್ತಿರೀಯದಲ್ಲೂ 'ತಸ್ಮಿನ್ ಅಯಂ ಪುರುಷಃ ಮನೋಮಯಃ' ಎಂಬುದಾಗಿ ತೈತ್ತಿರೀಯಾದಲ್ಲಿಯೂ ಮನೋಮಯಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ. ಹೀಗೆ ಬ್ರಹ್ಮ

ನನ್ನು ಬೇರೆ ಉಪನಿಷತ್ತುಗಳು ಮನೋಮಯನೆಂದು ಕರೆದಿರುವಾಗ ಛಾಂದೋಗ್ಯದಲ್ಲಿ ಹೇಳಿರುವ ಮನೋಮಯನೂ ಸಹ ಬ್ರಹ್ಮನೇ ಆಗುತ್ತಾನೆ. ಜೀವನಿಗೆ ಸರ್ವಾತ್ಮಕತ್ವವನ್ನಾಗಲೀ ಸಕಲಜಗತ್ಕಾರಣತ್ವವನ್ನಾಗಲೀ ಹೇಳಲು ಸಾಧ್ಯವಿಲ್ಲದ ಕಾರಣ 'ಸರ್ವಂ ಖಲ್ವಿದಂ' ಎಂಬ ವಾಕ್ಯದಿಂದ ಪ್ರತಿಪಾದ್ಯನಾಗಲಾರನೆಂದು ಸಿದ್ಧಾಂತ.

ರಾಮಾನುಜರ ಸೂತ್ರ ವ್ಯಾಖ್ಯಾನ ಹೀಗಿದೆ - ಸರ್ವತ್ರ = 'ಸರ್ವಂ ಖಲ್ವಿದಂ' ಎಂಬ ಶ್ರುತಿಯಿಂದ ಪ್ರತಿಪಾದ್ಯನಾದವನು ಪರಬ್ರಹ್ಮನೇ ಆಗಿದ್ದಾನೆ. ಪ್ರಸಿದ್ಧೋಪದೇಶಾತ್ = ಶ್ರುತ್ಯಂತರದಲ್ಲಿ ಪ್ರಸಿದ್ಧವಾದ ಜಗತ್ಕಾರಣತ್ವವನ್ನು ಹೇಳಿರುವುದರಿಂದ

• • • • •

## ರಾಮಾನುಜರ ಮತನಿರಾಕರಣೆ

## तात्पर्यचन्द्रिका

**तत्र, त्वन्मते अन्तरधिकरणे छान्दोग्योक्तस्यादित्यान्तस्स्थस्य जीवत्वे ''यश्चासावादित्ये'' इत्यानन्दवल्ल्युक्तस्यापि जीवत्वमिति पूर्वपक्षवत्, ''सर्वं खल्विदं'' इत्यत्रोक्तस्य कारणस्य जीवत्वे ''यतो व'' इत्यादावुक्तस्यापि तस्य जीवत्वमिति पूर्वपक्षस्य सम्भवेन कारणताया वाक्यान्तरे ब्रह्मणि प्रसिद्ध्यभावात् ।** [१]

---

(१) **सर्वत्र प्रसिद्ध्यधिकरणम्**

प्रथमे पादे अधीतवेदः पुरुषः कर्ममीमांसाश्रवणाधिगतकर्मयाथात्म्यविज्ञानः केवलकर्मणामल्पास्थिरफलत्वमवगम्य, वेदान्तवाक्येषु चापातप्रतीतानन्त स्थिरफलब्रह्मस्वरूपतदुपासनसमुपजातपरमपुरुषार्थलक्षणमोक्षा पेक्षोऽवधारितपरिनिष्पन्नवस्तुबोधनशब्दशक्तिर्वेदान्तवाक्यानां परस्मिन् ब्रह्मणि निश्चितप्रमाणभावस्तदितिकर्त्तव्यतारूपशारीरकमीमांसाश्रवणमारभेतेत्युक्तं शास्त्रारम्भसिद्धये । अनन्तविचित्रस्थिरत्रसरूपभोक्तृभोग्यभोगोपकरणभोगस्थान लक्षणनिखिलजगदुदयविभवलयमहानन्दैककारणं परं ब्रह्म 'यतो वा इमानि' इत्यादिवाक्यं बोधयतीति च प्रत्यपादि ।।२।। जगदेककारणं परं ब्रह्म सकलेतरप्रमाणाविषयतया शास्त्रैकप्रमाणकमित्यभ्यधाम ।।३।। शास्त्रप्रमाणकत्वं च ब्रह्मणः प्रवृत्तिनिवृत्त्यन्वयविरहेऽपि स्वरूपेणैव परमपुरुषार्थभूते परस्मिन् ब्रह्मणि वेदान्तवाक्यानां समन्वयान्निरूह्यत इत्यब्रूम ।।४।। निखिलजगदेककारणतया वेदान्तवेद्यं ब्रह्म च ईक्षणाद्यन्वयादानुमानिकप्रधानादर्थान्तरभूतश्चेतनविशेष एवेत्युपापीपदाम ।।५।। स च स्वाभाविकानवधिकातिशयानन्दविपश्चित्त्वनिखिलचेतनभयाभयहेतुत्वसत्यसङ्कल्पत्वसमस्तचेतनाचेतनान्तरात्मत्वादिभिर्बद्धमुक्तोभयावस्था जीवशब्दाभिलपनीयाच्चार्थान्तरभूत इति च

समार्थितामहि ।।६।। स चाप्राकृताकर्मनिमित्तस्वासाधारणदिव्यरूप इत्युदैरिराम ।।७।। आकाशप्राणाद्यचेतनविशेषाभिधायिभिर्जगत्कारणतया प्रसिद्धवन्निर्दिश्यमानस्सकलेतर चेतनाचेतनविलक्षणस्स एवेति समगरिष्महि ।।८।। परतत्त्वासाधारणनिरतिशयदीप्ति-युक्तज्योतिश्शब्दाभिधेयो द्युसम्बन्धितया प्रत्यभिज्ञानात्स एवेत्यातिष्ठामहि ।।९।। परमकारणासाधारणामृतत्वप्राप्तिहेतुभूतः परमपुरुष एव शास्त्रदृष्ट्या इन्द्रादिशब्दैरभिधीयत इत्यब्रूमहि ।।१०।। तदेवमतिपतितसकलेतरप्रमाणसम्भावनाभूमिः सार्वज्ञ्यसत्यसङ्कल्पत्वाद्य-परिमितोदारगुणसागरतया स्वेतरसमस्तवस्तुविलक्षणः परं ब्रह्म पुरुषोत्तमो नारायण एव वेदान्तवेद्य इत्युक्तम् । अतः परं द्वितीयतृतीयचतुर्थेषु पादेषु यद्यपि वेदान्तवेद्यं ब्रह्मैव, तथापि कानिचिद् वेदान्तवाक्यानि प्रधानक्षेत्रज्ञान्तर्भूतवस्तुविशेषस्वरूपप्रतिपादन-पराण्येवेत्याशङ्क्य तन्निरसनमुखेन तत्तद्वाक्योदितकल्याणगुणाकरत्वं ब्रह्मणः प्रतिपाद्यते । तत्रास्पष्टजीवादिलिङ्गकानि वाक्यानि द्वितीये पादे विचार्यन्ते, स्पष्टलिङ्गकानि तृतीये, तत्त त्प्रतिपादनच्छायानुसारीणि चतुर्थे ।।

**सर्वत्र प्रसिद्धोपदेशात्**

इदमाम्नायते छान्दोग्ये 'अथ खलु क्रतुमयः पुरुषो यथा क्रतुरस्मिंल्लोके पुरुषो भवति, तथेतः प्रेत्य भवति, स क्रतुं कुर्वीत मनोमयः प्राणशरीरो भारूपः' इत्यादि ।। अत्र 'स क्रतुं कुर्वीत' इति प्रतिपादितस्योपासनस्योपास्यः 'मनोमयः प्राणशरीरः' इति निर्दिश्यत इति प्रतीयते । तत्र संशयः – किं मनोमयत्वादिगुणकः क्षेत्रज्ञः? उत परमात्मा? इति । किं युक्तम्? क्षेत्रज्ञ इति । कुतः? मनःप्राणयोः क्षेत्रज्ञोपकरणत्वात्, परमात्मनस्तु 'अप्राणो ह्यमनाः' इति तत्प्रतिषेधाच्च । नच 'सर्वं खल्विदं ब्रह्म' इति पूर्वनिर्दिष्टं ब्रह्मात्रोपास्यतया सम्बन्द्धं शक्यते, 'शान्त उपासीत' इत्युपासनोपकरणशान्तिनिर्वृत्त्युपायभूतब्रह्मात्मकत्वोप - देशायोपात्तत्वात् । नच 'स क्रतुं कुर्वीत' इत्युपासनस्योपास्यसाकाङ्क्षत्वाद् वाक्यान्तरस्थमपि ब्रह्म सम्बद्ध्यत इति युक्तं वक्तुम् स्ववाक्योपात्तेन मनोमयत्वादिगुणकेन निराकाङ्क्षत्वात् 'मनोमयः प्राणशरीरः' इत्यनन्यार्थतया निर्दिष्टस्य विभक्तिविपरिणाम-मात्रेणोभयाकाङ्क्षानिर्वृत्तिसिद्धेः । एवं निश्चिते जीवत्वे 'एतद्ब्रह्म' इत्युपसंहारस्थब्रह्मपदमपि जीव एव पूजार्थं प्रयुक्तमित्यध्यवसीयत इति ।

एवं प्राप्ते ब्रूमः ।। **सर्वत्र प्रसिद्धोपदेशात्** ।। मनोमयत्वादिगुणकः परमात्मा । कुतः? सर्वत्र वेदान्तेषु परस्मिन्नेव ब्रह्मणि प्रसिद्धस्य मनोमयत्वादेरुपदेशात् । प्रसिद्धं हि मनोमयत्वादि ब्रह्मणः । यथा 'मनोमयः प्राणशरीरनेता' 'स एषोऽन्तर्हृदय आकाशः । तस्मिन्नयं पुरुषो मनोमयः । अमृतो हिरण्मयः' 'हृदा मनीषा मनसाभिक्लृप्तो य एनं विदुरमृतास्ते भवन्ति' । 'न चक्षुषा गृह्यते नापि वाचा' । 'मनसा तु विशुद्धेन' तथा 'प्राणस्य प्राणः'

'अथ खलु प्राण एव प्रज्ञात्मेदं शरीरं परिगृह्योत्थापयति' 'सर्वाणि ह वा इमानि भूतानि प्राणमेवाभिसंविशन्ति प्राणमभ्युज्जिहते' इत्यादिषु । मनोमयत्वम् विशुद्धेन मनसा ग्राह्यत्वम् । प्राणशरीरत्वम् प्राणस्याप्याधारत्वं नियन्तृत्वञ्च । एवञ्च सति 'एष म आत्माऽन्तर्हृदय एतद् ब्रह्म' इति ब्रह्मशब्दोऽपि मुख्य एव भवति । 'अप्राणो ह्यमनाः' इति मन आयत्तं ज्ञानं प्राणायत्तां स्थितिं च ब्रह्मणो निषेधति ।।

अथवा 'सर्वं खल्विदं ब्रह्म तज्जलानिति शान्त उपासीत' इत्यत्रैवोपासनं विधीयते, सर्वात्मकं ब्रह्म शान्तः सन्नुपासीतेति । 'स क्रतुं कुर्वीत' इति तस्यैव गुणोपादानार्थोऽनुवादः । उपादेयाश्च गुणाः मनोमयत्वादयः, अतः सर्वात्मकं ब्रह्म मनोमयत्वादिगुणकमुपासीतेति वाक्यार्थः । तत्र सन्देहः, किमिह ब्रह्मशब्देन प्रत्यगात्मा निर्दिश्यते, उत परमात्मा? इति । किं युक्तम्? प्रत्यगात्मेति । कुतः? तस्यैव सर्वपदसामानाधिकरण्यनिर्देशोपपत्तेः । सर्वशब्दनिर्दिष्टं हि ब्रह्मादिस्तम्बपर्यन्तं कृत्स्नं जगत् । ब्रह्मादिभावश्च प्रत्यगात्मनोऽनाद्यविद्यामूलकर्मविशेषोपाधिको विद्यत एव, परस्य तु ब्रह्मणः सर्वज्ञस्य सर्वशक्तेरपहतपाप्मनो निरस्तसमस्ताविद्यादिदोषगन्धस्य समस्तहेयाकारसर्वभावो नोपपद्यते । प्रत्यगात्मन्यपि कचित् कचिद् ब्रह्मशब्दः प्रयुज्यते, अत एव परमात्मा परं ब्रह्मेति परमेश्वरस्य कचित् सविशेषणो निर्देशः । प्रत्यगात्मनश्च निर्मुक्तोपाधेर्बृहत्त्वं च विद्यते । 'स चानन्त्याय कल्पते' इति श्रुतेः । 'अविदुषस्तस्यैव कर्मनिमित्तत्वाज्जगज्जन्मस्थितिलयानां तज्जलान्' इति हेतुनिर्देशोऽप्युपपद्यते । तदयमर्थः – अयं जीवात्मा स्वतः अपरिच्छिन्नस्वरूपत्वेन ब्रह्मभूतस्सन्नाद्यविद्यया देवतिर्यङ्मनुष्यस्थावरात्मनाऽवतिष्ठत इति ।।

अत्र प्रतिविधीयते – **सर्वत्र प्रसिद्धोपदेशात्** ।। सर्वत्र 'सर्वं खल्विदम्' इति निर्दिष्टे सर्वस्मिन् जगति ब्रह्मशब्देन तदात्मतया अभिधीयमानं परं ब्रह्मैव न प्रत्यगात्मा । कुतः? प्रसिद्धोपदेशात् – 'तज्जलान्' इति हेतुतः 'सर्वं खल्विदं ब्रह्म' इति प्रसिद्धवदुपदेशात् । ब्रह्मणो जातत्वाद् ब्रह्मणि लीनत्वाद्ब्रह्माधीनजीवनत्वाच्च हेतोर्ब्रह्मात्मकं सर्वं खल्विदं जगदित्युक्ते यस्माज्जगज्जन्मस्थितिलयाः वेदान्तेषु प्रसिद्धाः तदेवात्र ब्रह्मेति प्रतीयते । तच्च परमेव ब्रह्म । तथाहि 'यतो वा इमानि भूतानि जायन्ते । येन जातानि जीवन्ति । यत्प्रयन्त्यभिसंविशन्ति । तद् विजिज्ञासस्व । तद् ब्रह्म' इत्युपक्रम्य 'आनन्दो ब्रह्मेति व्यजानात् । आनन्दाद्ध्येव खल्विमानि भूतानि जायन्ते' इत्यादिना पूर्वानुवाकप्रतिपादितानवधिकातिशयानन्दयोगिनो विपश्चितः परस्माद् ब्रह्मण एव जगदुत्पत्तिस्थितिलया निर्दिश्यन्ते । तथा 'स कारणं करणाधिपाधिपो न चास्य कश्चिज्जनिता न चाधिपः' इति करणाधिपस्य जीवस्याधिपः परं ब्रह्मैव कारणं

व्यपदिश्यते । एवं सर्वत्र परस्यैव ब्रह्मणः कारणत्वं प्रसिद्धम् । अतः परब्रह्मणो जातत्वात् तस्मिन् प्रलीनत्वात् तेन प्राणनात् तदात्मकतया तादात्म्यमुपपन्नम् । अतस्सर्वप्रकारं सर्वशरीरं सर्वात्मभूतं परं ब्रह्म शान्तो भूत्वा उपासीतेति श्रुतिरेव परस्य ब्रह्मणः सर्वात्मकत्वमुपपाद्य तस्योपासनमुपदिशति । परं ब्रह्म हि कारणावस्थं कार्यावस्थं सूक्ष्मस्थूलचिदचिद्वस्तुशरीरतया सर्वदा सर्वात्मभूतम् । एवम्भूततादात्म्यस्य प्रतिपादने परस्य ब्रह्मणस्सकलहेयप्रत्यनीककल्याणगुणाकरत्वं न विरुद्ध्यते, प्रकारभूतशरीरगतानां दोषाणां प्रकारिण्यात्मन्यप्रसङ्गात्, प्रत्युत निरतिशयैश्वर्यापादनेन गुणायैव भवतीति पूर्वमेवोक्तम् । यदुक्तं जीवस्य सर्वतादात्म्यमुपपद्यत इति, तदसत् । जीवानां प्रतिशरीरं भिन्नानामन्योन्यतादात्म्यासम्भवात् । मुक्तस्याप्यनवच्छिन्नस्वरूपस्यापि जगत्तादात्म्यं जगज्जन्मस्थितिप्रलयकारणत्वनिमित्तं न सम्भवतीति 'जगद्व्यापारवर्जम्' इत्यत्र वक्ष्यते । जीवकर्मनिमित्तत्वाज्जगज्जन्मस्थितिलयानां स एव कारणमित्यपि न साधीयः, तत्कर्मनिमित्तत्वेऽपीश्वरस्यैव जगत्कारणत्वात् । अतः परमात्मैवात्र ब्रह्मशब्दाभिधेयः । इममेव सूत्रार्थमभियुक्ता बहुमन्वते । यथाह वृत्तिकारः 'सर्वं खल्विति सर्वात्मा ब्रह्मेशः' इति ॥

'सर्वकर्मा सर्वकामस्सर्वगन्धः सर्वरसः सर्वमिदमभ्यात्तोऽवाक्यनादरः' इति । मनोमयः परिशुद्धेन मनसैकेन ग्राह्यः । विवेकविमोकादिसाधनसप्तकानुगृहीतपरमात्मोपासननिर्मलीकृतेन हि मनसा गृह्यते । अनेन हेयप्रत्यनीककल्याणैकतानतया सकलेतरविलक्षण-स्वरूपतोच्यते । मलिनमनोभिर्मलिनानामेव ग्राह्यत्वात् । प्राणशरीरः जगति सर्वेषां प्राणानां धारकः । प्राणो यस्य शरीरम् आधेयं विधेयं शेषभूतश्च स प्राणशरीरः । आधेयत्वविधेयत्वशेषत्वानि शरीरशब्दप्रवृत्तिनिमित्तानीत्युपपादयिष्यते । भारूपः भास्वररूपः । अप्राकृतस्वासाधारणनिरतिशयकल्याणदिव्यरूपत्वेन निरतिशयदीप्तियुक्त इत्यर्थः । सत्यसङ्कल्पः अप्रतिहतसङ्कल्पः । आकाशात्मा आकाशवत् सूक्ष्मस्वच्छस्वरूपः, सकलेतरकारणभूतस्याकाशस्याप्यात्मभूत इति वा आकाशात्मा । स्वयं च प्रकाशते अन्यानपि प्रकाशयतीति वा आकाशात्मा । सर्वकर्मा क्रियत इति कर्म, सर्वं जगद् यस्य कर्म असौ सर्वकर्मा, सर्वा वा क्रिया यस्यासौ सर्वकर्मा । सर्वकामः काम्यन्त इति कामाः, भोग्यभोगोपकरणादयः, ते परिशुद्धाः सर्वविधास्तस्य सन्तीत्यर्थः । सर्वगन्धस्सर्वरसः 'अशब्दमस्पर्शम्' इत्यादिना प्राकृतगन्धरसादिनिषेधादप्राकृताः स्वासाधारणा निरवद्याः निरतिशयाः कल्याणाः स्वभोग्यभूताः सर्वविधाः गन्धरसास्तस्य सन्तीत्यर्थः । सर्वमिदमभ्यात्तः – उक्तं रसपर्यन्तं सर्वमिदं कल्याणगुणजातं स्वीकृतवान् । 'अभ्यात्तः' इति 'भुक्ता ब्राह्मणाः' इतिवत्कर्तरि क्तः प्रतिपत्तव्यः । अवाकीवाकः उक्तिः, सोऽस्य

नास्तीति अवाकी । कुत इत्याह – अनादर इति ॥ अवाप्तसमस्तकामत्वेनादर्तव्याभावादादररहितः । अत एव अवाकी – अजल्पाकः, परिपूर्णैश्वर्यत्वाद् ब्रह्मादिस्तम्बपर्यन्तं निखिलं जगत् तृणीकृत्य जोषमासीन इत्यर्थः । त एते विवक्षिता गुणाः परमात्मन्येवोपपद्यन्ते ॥२॥

**॥ अनुपपत्तेस्तु न शारीरः ॥ ३ ॥**

तमिमं गुणसागरं पर्यालोचयतां खद्योतकल्पस्य शारीरसम्बन्धनिबन्धनापरिमितदुःखसम्बन्धयोग्यस्य बद्धमुक्तावस्थस्य जीवस्य प्रस्तुतगुणलेशसम्बन्धगन्धोऽपि नोपपद्यत इति नास्मिन् प्रकरणे शारीरपरिग्रहशङ्का जायत इत्यर्थः ॥ ३ ॥

**॥ कर्मकर्तृव्यपदेशाच्च ॥ ४ ॥**

'एतमितः प्रेत्याभिसम्भवितास्मि' इति प्राप्यतया परं ब्रह्म व्यपदिश्यते, प्राप्तृतया च जीवः, अतः प्राप्ता जीव उपासकः, प्राप्यं परं ब्रह्मोपास्यमिति प्राप्तुरन्यदेवेदमिति विज्ञायते ॥ ४ ॥

**॥ शब्दविशेषात् ॥ ५ ॥**

'एष म आत्माऽन्तर्हृदये' इति शारीरः षष्ठ्या निर्दिष्टः, उपास्यस्तु प्रथमया । एवं समानप्रकरणे वाजिनाञ्च श्रुतौ शब्दविशेषः श्रूयते जीवपरयोः । यथा 'व्रीहिर्वा यवो वा श्यामाको वा श्यामाकतण्डुलो वा एवमयमन्तरात्मन् पुरुषो हिरण्मयो यथा ज्योतिरधूमम्' इति । अत्र 'अन्तरात्मन्' इति सप्तम्यन्तेन शारीरो निर्दिश्यते; 'पुरुषो हिरण्मयः' इति प्रथमयोपास्यः, अतः पर एवोपास्यः ॥ इतश्च शारीरादन्यः ॥ ५ ॥

**॥ स्मृतेश्च ॥६ ॥**

'सर्वस्य चाहं हृदि सन्निविष्टो मत्तः स्मृतिज्ञानमपोहनं च' 'यो मामेवसम्मूढो जानाति पुरुषोत्तमम्' 'ईश्वरस्सर्वभूतानां हृद्देशेऽर्जुन तिष्ठति । भ्रामयन् सर्वभूतानि यन्त्रारूढानि मायया ॥ तमेव शरणं गच्छ' इति च शारीरमुपासकं परमात्मानं चोपास्यं स्मृतिर्दर्शयति ॥ ६ ॥

**॥ अर्भकौकस्त्वात्तद्व्यपदेशाच्च नेति चेन्न निचाय्यत्वादेवं व्योमवच्च ॥ ७ ॥**

अल्पायतनत्वमर्भकौकस्त्वम्; तद्व्यपदेशः – अल्पत्वव्यपदेशः । 'एष म आत्माऽन्तर्हृदये' इत्यणीयसि हृदयायतने स्थितत्वात् 'अणीयान् व्रीहेर्वा यवाद्वा' इत्यादिनाऽणीयस्त्वस्य स्वरूपेण व्यपदेशाच्च नायं परमात्मा, अपितु जीव एव; 'सर्वगतं सुसूक्ष्मं तदव्ययं यद्भूतयोनिं परिपश्यन्ति धीराः' इत्यादिभिः परमात्मनोऽपरिच्छिन्नत्वावगमात्, जीवस्य चाराग्रमात्रत्वव्यवपदेशादिति चेत् । नैतदेवम्, परमात्मैव ह्यणीयानित्येवं निचाय्यत्वेन व्यपदिश्यते; एवं निचाय्यत्वेन एवं द्रष्टव्यत्वेन, एवमुपास्यत्वेनेति यावत् । न

**किञ्च – "आनन्दाद्ध्येव खलु" इत्यत्र हिशब्दखलुशब्दयोः "यतो वा इमानि" "आत्मावा इदम्" इत्यादौ वैशब्दादेः श्रवणेन तत्रापि श्रुत्यन्तरप्रसिद्ध्यपेक्षा स्यात् । अपिच "अन्नाद्ध्येव खल्विमानि भूतानि जायन्ते" "प्राणाद्ध्येव खल्विमानि भूतानि" इत्यत्रेव खलुशब्दादेः श्रवणेऽप्यब्रह्मपरता किं न स्यात् ।**

ಅನುವಾದ - ನಿಮ್ಮ ಮತದಲ್ಲಿ ಅಂತರಧಿಕರಣವನ್ನು ವ್ಯಾಖ್ಯಾನಿಸುವಾಗ ಛಾಂದೋಗ್ಯದಲ್ಲಿ

---

पुनरणीयस्त्वमेवास्य स्वरूपमिति; व्योमवच्चायं व्यपदिश्यते; स्वाभाविकं महत्त्वं चात्रैव व्यपदिश्यते, 'ज्यायान् पृथिव्या ज्यायानन्तरिक्षाज्ज्यायान् दिवो ज्यायानेभ्यो लोकेभ्यः' इति । अत उपासनार्थमेवाल्पत्व व्यपदेशः । तथाहि 'सर्वं खल्विदं ब्रह्म तज्जलानिति शान्त उपासीत' इति सर्वोत्पत्तिप्रलयकारणत्वेन सर्वस्यात्मतयाऽनुप्रवेशकृतजीवयितृत्वेन च सर्वात्मकं ब्रह्मोपासीतेत्युपासनं विधाय 'अथ खलु क्रतुमयः पुरुषो यथा क्रतुरस्मिंल्लोके पुरुषो भवति तथेतः प्रेत्य भवति' इति यथोपासनं प्राप्य सिद्धिमभिधाय 'स क्रतुं कुर्वीत' इति गुणविधानार्थमुपासनमनूद्य 'मनोमयः प्राणशरीरो भारूपस्सत्यसङ्कल्प आकाशात्मा सर्वकर्मा सर्वकामस्सर्वगन्धस्सर्वरसस्सर्वमिदमभ्यात्तोऽवाक्यनादरः' इति जगदैश्वर्यविशिष्टस्य स्वरूपगुणांश्चोपादेयान् प्रतिपाद्य 'एष म आत्माऽन्तर्हृदयेऽणीयान् व्रीहेर्वा यवाद्वा सर्षपाद्वा श्यामाकाद्वा श्यामाकतण्डुलाद्वा' इत्युपासकस्य हृदयेऽणीयस्त्वेन तदात्मतयोपास्यस्य परमपुरुषस्योपासनार्थमवस्थानमुक्त्वा 'एष म आत्माऽन्तर्हृदये ज्यायान् पृथिव्या ज्यायानन्तरिक्षाज्ज्यायान् दिवो ज्यायानेभ्यो लोकेभ्यः सर्वकर्मा सर्वकाम स्सर्वगन्धस्सर्वरसस्सर्वमिदमभ्यात्तोऽवाक्यनादरः' इत्यन्तर्हृदयेऽवस्थितस्योपास्यमानस्य प्राप्याकारं निर्दिश्य 'एष म आत्माऽन्तर्हृदय एतद् ब्रह्म' इत्येवम्भूतं परं ब्रह्म परमकारुण्येनास्मदुज्जिजीवषियाऽस्मद्धृदये सन्निहितमितीदमनुसन्धानं विधाय 'एतमितः प्रेत्याभिसम्भविताऽस्मि' इति यथोपासनं प्राप्तिनिश्चयानुसन्धानं च विधाय 'इति यस्य स्यादद्धा न विचिकित्साऽस्ति' इत्येवंविधप्राप्यप्राप्तिनिश्चयोपेतस्योपासकस्य प्राप्तौ न संशयोऽस्तीत्युपसंहृतम् । अत उपासनार्थमर्भकौकस्त्वमणीयस्त्वञ्च ॥ ७ ॥

**॥ सम्भोगप्राप्तिरिति चेन्न वैशेष्यात् ॥ ८ ॥**

जीवस्येव परस्यापि ब्रह्मणः शरीरान्तर्वर्तित्वमभ्युगतश्चेत् तद्वदेव शरीरसम्बन्धप्रयुक्तसुखदुःखोपभोगप्राप्तिरिति चेत् । तन्न । हेतुवैशेष्यात् । नहि शरीरान्तर्वर्तित्वमेव सुखदुःखोपभोगहेतुः, अपि तु पुण्यपापरूपकर्मपरवशत्वम्; तत्तु अपहतपाप्मनः परमात्मनो न सम्भवति । तथाच श्रुतिः 'तयोरन्यः पिप्पलं स्वाद्वत्त्यनश्नन्नन्यो अभिचाकशीति' इति ॥ ८ ॥

इति सर्वत्रप्रसिद्ध्यधिकरणम्

ಪರಿಪೂರ್ಣಚಂದ್ರಿಕಾ

ಪ್ರತಿಪಾದ್ಯನಾದ ಆದಿತ್ಯಾಂಸ್ಥನು ಜೀವನಾದರೆ 'ಯಶ್ಚಾಸಾವಾದಿತ್ಯೇ'' ಎಂಬಲ್ಲಿ ಆನಂದವಲ್ಲಿಯಲ್ಲಿ ಪ್ರತಿಪಾದ್ಯನಾದ ಆದಿತ್ಯಾಂತಸ್ಥನೂ ಸಹ ಜೀವನೇ ಆಗುತ್ತಾನೆಂದು ಪೂರ್ವಪಕ್ಷ ಮಾಡಿದ್ದೀರಿ. ಆದರಂತೆ ಪ್ರಕೃತದಲ್ಲಿಯೂ ''ಸರ್ವಂ ಖಲ್ವಿದಂ'' ಎಂಬಲ್ಲಿ ಹೇಳಲ್ಪಟ್ಟ ಜಗತ್‌ಕಾರಣತ್ವವು ಜೀವನಲ್ಲಿ ಬರುತ್ತದೆಂದು ಪೂರ್ವಪಕ್ಷ ಮಾಡುವುದಾದರೆ 'ಯತೋ ವಾ' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಜಗತ್ಕಾರಣತ್ವವೂ ಸಹ ಜೀವನಿಗೆ ಬರುತ್ತದೆಂದು ಪೂರ್ವಪಕ್ಷವು ಪರ್ಯವಸಾನವಾಗುತ್ತದೆ. ಹೀಗಿರುವಾಗ ಕಾರಣತ್ವ ಪ್ರತಿಪಾದಕವಾದ ಎಲ್ಲಾ ವಾಕ್ಯಗಳೂ ಸಹ ಜೀವನಲ್ಲೇ ಪ್ರಸಿದ್ಧವಾಗುತ್ತವೆ. ವಾಕ್ಯಾಂತರದಿಂದ ಬ್ರಹ್ಮನಲ್ಲಿಜಗತ್‌ಕಾರಣತ್ವವು ಪ್ರಸಿದ್ಧಾವಾಗಿದೆಯೆಂದು ನಿಮಗೆ ಕಾರಣವನ್ನು ಹೇಳಲಾಗದು.

'ಆನಂದಾದ್ಧ್ಯೇವ ಖಲು' ಎಂಬಲ್ಲಿ 'ಹಿ' ಮತ್ತು 'ಖಲು' ಶಬ್ದಗಳಿವೆ. 'ಯತೋ ವಾ ಇಮಾನಿ' ಎಂಬಲ್ಲಿ ಮತ್ತು ''ಆತ್ಮಾವಾ ಇದಂ'' ಎಂಬಲ್ಲಿಯೂ ಪ್ರಸಿದ್ಧಾರ್ಥಕವಾದ ''ವೈ'' ಎಂಬ ಶಬ್ದವಿದೆ. ಈ ಸ್ಥಳಗಳಲ್ಲಿಯೂ ಸಹ ಶ್ರುತ್ಯಂತರಪ್ರಸಿದ್ಧಿಯನ್ನು ಅಪೇಕ್ಷಿಸಬೇಕಾದೀತು ಅಂದರೆ 'ಸರ್ವಂ ಖಲ್ವಿದಂ' ಎಂಬ ಶ್ರುತಿಯು ಜಗತ್ಕಾರಣ ಪ್ರತಿಪಾದಕವಾಗಿದೆಯೆನ್ನಲು 'ಖಲು' ಶಬ್ದದ ಆಧಾರದಿಂದ 'ಯತೋ ವಾ' ಮೊದಲಾದ ವಾಕ್ಯಗಳನ್ನು ಅಪೇಕ್ಷಿಸುತ್ತೀರಿ. ಆದರೆ ಆ ವಾಕ್ಯಗಳಲ್ಲಿಯೂ ಸಹ 'ಖಲು' ಮೊದಲಾದ ಶಬ್ದಗಳಿರುವುದರಿಂದ ಮತ್ತೊಂದು ಶ್ರುತಿಯನ್ನು ಅಪೇಕ್ಷಿಸಬೇಕಾಗುತ್ತದೆ. ಹೀಗೆ ಹೇಳುತ್ತಲೇ ಇರಬೇಕಾದ್ದರಿಂದ ನಿಮ್ಮ ಯುಕ್ತಿಯು ಅರ್ಥಹೀನವಾಗಿದೆ. ಮತ್ತು ಜಗತ್ಕಾರಣತ್ವ ಪ್ರತಿಪಾದಕವಾದ ''ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ'' ''ಪ್ರಾಣಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ'' ಇತ್ಯಾದಿ ಸ್ಥಳಗಳಲ್ಲಿ 'ಖಲು' ಶಬ್ದವಿದೆ. ಆದರೂ ಸಹ ನೀವು ಬ್ರಹ್ಮಪರತ್ವವನ್ನು ಒಪ್ಪಿರುವುದಿಲ್ಲ. ಆದರಂತೆ 'ಸರ್ವಂ ಖಲ್ವಿದಂ' ಎಂಬ ಸ್ಥಳದಲ್ಲಿ 'ಖಲು' ಶಬ್ದವಿದ್ದರೂ ಬ್ರಹ್ಮಪರತ್ವವನ್ನು ಒಪ್ಪುವುದು ಬೇಡ.

**प्रकाशः –**

यदुक्तं – ''यतो वै'' इत्यादिवाक्यान्तरे ब्रह्मणि प्रसिद्धस्यैवेहाऽऽम्नानादिति, तत्र पूर्वपक्षे सर्वकारणवाक्ये ब्रह्मकारणत्वाक्षेपसम्भवेन न क्वापि ब्रह्मकारणत्व-प्रसिद्धिः । तथा च न सिद्धान्तोदय इति सदृष्टान्तमाह – **तत्रेत्यादिना ।**

''य एषोऽन्तरादित्ये हिरण्मयः पुरुषः'' इत्युक्तस्येत्यर्थः । 'तस्य' कारणस्य । तथा च सौत्रहेतोरसिद्धिरिति भावः ।

ವಿವರಣೆ - ರಾಮಾನುಜರ ಅಧಿಕರಣ ವಿಮರ್ಶೆಯು ಅಯುಕ್ತವಾಗಿದೆ. ''ಯತೋ ವಾ'' ಇತ್ಯಾದಿ ವಾಕ್ಯಾಂತರದಲ್ಲಿ ಬ್ರಹ್ಮನಲ್ಲಿ ಪ್ರಸಿದ್ಧವಾದ ಜಗತ್ಕಾರಣತ್ವವನ್ನೇ ಇಲ್ಲಿ ಹೇಳಲಾಗಿದೆಯೆಂದು ರಾಮಾನುಜರ

ಅಭಿಪ್ರಾಯ. ಆದರೆ ಪೂರ್ವಪಕ್ಷ ಮಾಡುವಾಗ ಕಾರಣತ್ವಪ್ರತಿಪಾದಕವಾದ ಸಕಲ ವಾಕ್ಯಗಳೂ ಸಹ ಬ್ರಹ್ಮಕಾರಣತ್ವವನ್ನು ಹೇಳಲಾರವೆಂದು ಆಕ್ಷೇಪಿಸಲು ಬರುತ್ತದೆ. ಆದ್ದರಿಂದ ಯಾವುದೇ ವಾಕ್ಯದಲ್ಲಿಯೂ ಬ್ರಹ್ಮಕಾರಣತ್ವದ ಪ್ರಸಿದ್ಧಿಯನ್ನು ನಿಮ್ಮಿಂದ ಉಪಪಾದಿಸಲಾಗದು. ಒಂದು ವೇಳೆ ಯಾವುದಾದರೂ ಒಂದು ವಾಕ್ಯದಲ್ಲಿ ಬ್ರಹ್ಮಕಾರಣತ್ವವೂ ಪ್ರಸಿದ್ಧವಾಗಿದ್ದರೆ ಅದರ ಬಲದಿಂದ ಸಿದ್ಧಾಂತವು ಉದಯವಾಗುತ್ತಿತ್ತು. ಈ ವಿಷಯದಲ್ಲಿ ದೃಷ್ಟಾಂತವೂ ಸಹ ಇದೆ ಎಂಬುದಾಗಿ 'ತನ್ನ' ಇತ್ಯಾದಿ ವಾಕ್ಯದಿಂದ ರಾಮಾನುಜರ ನಿಲುವನ್ನು ನಿರಾಕರಿಸುತ್ತಿದ್ದಾರೆ.

'ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ' ಎಂಬುದಾಗಿ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ವಾಕ್ಯದಲ್ಲಿ ಎಂದರ್ಥ. 'ತಸ್ಯ' ಎಂಬ ಪದಕ್ಕೆ ಕಾರಣಕ್ಕೆ ಎಂದರ್ಥ. 'ತನ್ಮತೇ' ಎಂಬ ವಾಕ್ಯದಿಂದ ಸೂತ್ರದಲ್ಲಿರುವ ಹೇತುವಿಗೆ ಅಸಿದ್ಧಿಯನ್ನು ಹೇಳಿದ್ದಾರೆಂದು ತಿಳಿಯಬೇಕು.

**प्रकाशः** – ननु ''यतो वै'' इत्युपक्रमस्य ''आनन्दाद्ध्येव खल्विमानि'' इति श्रवणात्, आनन्दस्य ब्रह्मवल्ल्यामनेकन्यायैर्ब्रह्मत्वेन निर्णीतानन्दमयस्थानपतित्वेन ब्रह्मत्वात् जीवत्वं न वक्तुं शक्यमिति चेत्, तर्ह्यत्रापि पूर्वपक्षानुदस्योक्तत्वात् ।

यद्यत्र प्रसिद्धिद्योतकखलुशब्दात्तत्प्रसिद्ध्यर्थं श्रुत्यन्तरानुसरणं, तर्हि तत्रापि तथा श्रवणान्न क्वापि व्यवस्था स्यादिति । दोषान्तरमाह – **किञ्चेति** । 'प्रसिद्धोपदेशात्' इति हेतोर्व्यभिचारं चाह – **अपिचेति** । अन्नादेर्ब्रह्मत्वस्य त्वयाऽनङ्गीकारादिति भावः ।

ಆಕ್ಷೇಪ - 'ಯತೋ ವಾ' ಇತ್ಯಾದಿಯಾಗಿ ಉಪಕ್ರಮದಲ್ಲಿ ಜಗತ್ಕಾರಣತ್ವವು ಬ್ರಹ್ಮನಲ್ಲಿ ಕೇಳಿಸುತ್ತಿದೆ. ಅನಂತರ "ಆನಂದಾದ್ಧ್ಯೇವ" ಎಂಬ ಮಾತು ಹೊರಟಿದೆ. ಇಲ್ಲಿರುವ ಆನಂದವೆಂಬ ಶಬ್ದವು ಬ್ರಹ್ಮನನ್ನೇ ಪ್ರತಿಪಾದಿಸುತ್ತದೆ ಏಕೆಂದರೆ ಬ್ರಹ್ಮವಲ್ಲಿಯಲ್ಲಿರುವ ಅನೇಕ ನ್ಯಾಯಗಳಿಂದ ಆನಂದಮಯಶಬ್ದವು ಬ್ರಹ್ಮಪ್ರತಿಪಾದಕವೆಂದು ನಿರ್ಣಯವಾಗಿದೆ. ಅಂತಹ ಆನಂದಮಯ ಶಬ್ದದ ಸ್ಥಾನದಲ್ಲಿಯೇ ಆನಂದಶಬ್ದವು ಪ್ರಯುಕ್ತವಾದ್ದರಿಂದ ಇದೂ ಸಹ ಬ್ರಹ್ಮನನ್ನೇ ಪ್ರತಿಪಾದಿಸುತ್ತದೆ ಹೊರತು ಜೀವನನ್ನು ಪ್ರತಿಪಾದಿಸುವುದಿಲ್ಲ. ಹೀಗೆ ಹಿಂದಿನ ಮುಂದಿನ ಪ್ರಕರಣವನ್ನು ನೋಡಿ 'ಆನಂದಾದ್ಧ್ಯೇವ' ವಾಕ್ಯವು ಬ್ರಹ್ಮನ ಜಗತ್ಕಾರಣತ್ವವನ್ನು ಹೇಳುತ್ತಿದೆಯೆಂದು ನಿರ್ಣಯಿಸಬಹುದು. ಈ ವಾಕ್ಯದ ಬಲದಿಂದ 'ಸರ್ವಂ ಖಲ್ವಿದಂ' ಎಂಬ ವಾಕ್ಯವು ಬ್ರಹ್ಮನಿಗೆ ಜಗತ್‌ಕಾರಣತ್ವವನ್ನು ಪ್ರತಿಪಾದಿಸುತ್ತದೆಂದು ನಿರ್ಣಯ ಮಾಡಬಹುದಲ್ಲವೇ?

ಸಮಾಧಾನ - ಹಾಗಾದರೆ 'ಸರ್ವಂ ಖಲ್ವಿದಂ' ಎಂಬ ವಾಕ್ಯದಲ್ಲಿಯೂ ಹಿಂದಿನ ಮುಂದಿನ ಪ್ರಕರಣವನ್ನು ಗಮನಿಸಿದಾಗ ಬ್ರಹ್ಮಪರವೆಂದು ಸುಲಭವಾಗಿ ನಿರ್ಣಯವಾಗುತ್ತದೆ. ಆದ್ದರಿಂದ ಪೂರ್ವಪಕ್ಷವೇ ಹುಟ್ಟದಿರಬೇಕಾದೀತು.

ಪರಿಪೂರ್ಣಚಂದ್ರಿಕಾ

ಒಂದು ವೇಳೆ ಪ್ರಸಿದ್ಧಿದ್ಯೋತಕವಾದ 'ಖಲು' ಶಬ್ದವಿರುವುದರಿಂದ ಮತ್ತೊಂದು ಶ್ರುತಿಯನ್ನು ಅನುಸರಿಸಬೇಕೆಂದು ಹೇಳುವುದಾದರೆ ಆವಾಗ 'ಆನಂದಾದ್ಧ್ಯೇವ' ಎಂಬ ಶ್ರುತಿಯಲ್ಲಿಯೂ 'ಖಲು' ಶಬ್ದವಿರುವುದರಿಂದ ಅಲ್ಲಿಯೂ ಮತ್ತೊಂದು ಶ್ರುತಿಯನ್ನು ಅನುಸರಿಸಬೇಕಾದೀತು. ಹೀಗೆ ನಿಮ್ಮ ವ್ಯವಸ್ಥೆಯನ್ನು ಯಾವುದೇ ಶ್ರುತಿಯನ್ನು ಇಟ್ಟುಕೊಂಡಾಗಲೂ ಅನುಸರಿಸಲಾಗದೆಂದು ಮತ್ತೊಂದು ದೋಷವನ್ನು 'ಕಿಂಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಸೂತ್ರದಲ್ಲಿರುವ 'ಪ್ರಸಿದ್ಧೋಪದೇಶಾತ್' ಎಂಬ ಹೇತುವಿಗೆ 'ಅಪಿಚ' ಇತ್ಯಾದಿ ವಾಕ್ಯದಿಂದ ವ್ಯಭಿಚಾರವನ್ನು ಹೇಳುತ್ತಿದ್ದಾರೆ. ಏಕೆಂದರೆ ಅನ್ನಾದಿಗಳಿಗೆ ಬ್ರಹ್ಮತ್ವವನ್ನು ರಾಮಾನುಜರೇ ಅಂಗೀಕರಿಸಿರುವುದಿಲ್ಲ.

## ಸಾರ

ರಾಮಾನುಜರ ಉಳಿದ ಸೂತ್ರಗಳ ವ್ಯಾಖ್ಯಾನ ಹೀಗಿದೆ -

ವಿವಕ್ಷಿತಗುಣೋಪಪತ್ತೇಶ್ಚ - ಮನೋಮಯನೆನಿಸಿರುವ ಬ್ರಹ್ಮನಲ್ಲಿ ವಿವಕ್ಷಿತವಾದ ಸತ್ಯಕಾಮತ್ವಾದಿ-ಗುಣಗಳು ಉಪಪನ್ನವಾಗುತ್ತವೆ. ಜೀವನಲ್ಲಿ ಆ ಗುಣಗಳು ಇಲ್ಲದ ಕಾರಣ ಉಪಪನ್ನವಾಗುವುದಿಲ್ಲ.

ಅನುಪಪತ್ತೇಸ್ತು ನ ಶಾರೀರಃ - ಆ ಸತ್ಯಕಾಮತ್ವಾದಿಗುಣಗಳು ಜೀವನಲ್ಲಿಲ್ಲದ ಕಾರಣ ಮನೋಮಯನಾಗಿ ವಿವಕ್ಷಿತನಾಗುವುದಿಲ್ಲ.

ಕರ್ಮಕರ್ತೃವ್ಯಪದೇಶಾಚ್ಚ - 'ಏತಂ ಇತಃ ಪ್ರೇತ್ಯ' ಎಂಬಲ್ಲಿ ಮನೋಮಯನನ್ನು ಪ್ರಾಪ್ತನೆಂದು ಜೀವನನ್ನು ಪ್ರಾಪ್ಯವೆಂದು ಹೇಳಲಾಗಿದೆ. ಈ ಕಾರಣದಿಂದಲೂ ಜೀವನು ಮನೋಮಯನಲ್ಲ.

ಶಬ್ದವಿಶೇಷಾತ್ - 'ಏಷ ಮೇ ಆತ್ಮ' ಎಂಬ ಶ್ರುತಿಯಲ್ಲಿ ಷಷ್ಠಿ ವಿಭಕ್ತಿಯಲ್ಲಿ ಮೇ ಎಂಬ ಪದದಿಂದ ಆತ್ಮಾ ಎಂಬ ಪ್ರಥಮಾವಿಭಕ್ತಿಪದದಿಂದ ಮನೋಮಯನನ್ನು ನಿರ್ದೇಶಿಸಲಾಗಿದೆ. ಈ ಕಾರಣದಿಂದಲೂ ಜೀವನು ಮನೋಮಯನಲ್ಲ.

ಸ್ಮೃತೇಶ್ಚ - 'ಸರ್ವತ್ರ ಚ' ಎಂಬ ಗೀತೆಯಲ್ಲಿ ಜೀವನ ಹೃದಯದಲ್ಲಿರುವವನು ಬ್ರಹ್ಮನೇ ಎಂದು ಹೇಳಲಾಗಿದೆ. ಪ್ರಕೃತ ಉಪನಿಷತ್ತಿನಲ್ಲಿಯೂ ಸರ್ವಗತನೆಂದು ಹೇಳಲ್ಪಟ್ಟಿರುವವನು ಬ್ರಹ್ಮನೇ ಆಗಬೇಕು.

'ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ' ಅಲ್ಪದೇಶದಲ್ಲಿ ಇರುವಂತಹ ಬ್ರಹ್ಮನು ಸರ್ವಗತನಾಗಲಾರನೆಂದು ಆಕ್ಷೇಪಿಸಬಾರದು. ಕೇವಲ ಉಪಾಸನೆಗಾಗಿ ಅಲ್ಪದೇಶದ ಇರುವಿಕೆಯು ಹೇಳಲಾಗಿದೆ. ಎಲ್ಲೆಡೆ ವ್ಯಾಪಿಸಿರುವ ಆಕಾಶವು ಅಲ್ಪದೇಶದಲ್ಲಿಯೂ ಇರುವಂತೆ.

ಸರ್ವಗತತ್ವಾಧಿಕರಣ (೧-೨-೧)

ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ - ಒಂದೇ ದೇಹದಲ್ಲಿ ಜೀವನೊಡನೆ ನೆಲೆಸಿರುವ ಬ್ರಹ್ಮನಿಗೆ ಸುಖದುಃಖಗಳು ಬರಬೇಕಲ್ಲವೇ? ಎಂದು ಪ್ರಶ್ನಿಸಿದರೆ ಪಾಪದ ಸಂಪರ್ಕವಿಲ್ಲದ ಕಾರಣ ಬ್ರಹ್ಮನಿಗೆ ಸುಖದುಃಖಗಳ ಅನುಭವವು ಬರುವುದಿಲ್ಲವೆಂದು ಉತ್ತರಿಸಲು ಕೊನೆಯ ಸೂತ್ರ ಹೊರಟಿದೆ.

ರಾಮಾನುಜರ ಅಧಿಕರಣಶರೀರವಾಗಲೀ, ಸೂತ್ರಾರ್ಥವಾಗಲಿ ಸಮಂಜಸವಲ್ಲ. ಸೂತ್ರದಲ್ಲಿರುವ 'ಸರ್ವತ್ರ' ಎಂಬ ಪದಕ್ಕೆ ಎಲ್ಲೆಡೆ ಇರುವ ಎಂಬರ್ಥವನ್ನು ಹೇಳಬೇಕು. ಆದರೆ ಅವರು "ಎಲ್ಲವೂ" ಎಂಬರ್ಥವನ್ನು ಹೇಳುತ್ತಾರೆ. ಈ ಅರ್ಥದಲ್ಲಿ 'ಸರ್ವಂ' ಎಂಬ ಪದವಿರಬೇಕೇ ಹೊರತು 'ಸರ್ವತ್ರ' ಎಂಬ ಪದವು ತಪ್ಪಾಗುತ್ತದೆ. ಮತ್ತು 'ಪ್ರಸಿದ್ಧತ್ವೇನ ಉಪದೇಶಾತ್' ಎಂದು ಅವರ ಪ್ರಕಾರ ಹೇಳಬೇಕಾಗುತ್ತದೆ. ಇದೂ ಸಹ ಸ್ವಾರಸ್ಯವಲ್ಲ. ಮತ್ತು ಬೇರೆ ವಾಕ್ಯಗಳಲ್ಲಿ ಜಗತ್ಕಾರಣತ್ವವು ಪ್ರಸಿದ್ಧವಾಗಿದೆಯೆಂದು ಪೂರ್ವಪಕ್ಷಿಯು ಒಪ್ಪುವುದೇ ಇಲ್ಲ. ಇವೇ ಮೊದಲಾದ ಕಾರಣಗಳಿಂದ ರಾಮಾನುಜರ ಮತವು ಅಸಾಧುವಾಗಿದೆ. ಅದ್ವೈತ ಮತ ನಿರಾಕರಣೆಯಿಂದಲೇ ಅವರ ಸೂತ್ರಾರ್ಥಗಳನ್ನೂ ಸಹ ನಿರಾಕರಿಸಿದಂತಾಗುತ್ತದೆ.



• • • • •

## ರಾಮಾನುಜರ ಸೂತ್ರಾರ್ಥ ನಿರಾಕರಣೆ

### तात्पर्यचन्द्रिका

**अक्षरार्थोप्ययुक्तः, सर्वात्मकत्वस्य हि साध्यत्वे तत्प्रतिपादनाय श्रुत्यनुगमाय च सूत्रे 'सर्वं' इति निर्देशः स्यात् । नहि 'सर्वत्र' इत्यनेन सर्वात्मकता लभ्यते, किन्तु सर्वगतता । सौत्रप्रसिद्धशब्दस्य भावप्रधानता च कल्प्या ।**

**यच्चोक्तं ''अर्भकौकस्त्वात्'' इति सूत्रे ''एष म आत्मान्तर्हृदयेऽणीयान् व्रीहेर्वा यवाद्वा सर्षपाद्वा'' इत्युक्तमणीयस्त्वमौपाधिकं, तदुपाधेर्हृदयस्योक्तत्वात्, ''ज्यायान् पृथिव्याः'' इत्यादिनोक्तमहत्त्वं तु स्वाभाविकं तदुपाधेरनुक्तत्वादिति ।**

**तन्न, ''हृद्यपेक्षया'' इत्यत्र हृदयस्याङ्गुष्ठमात्रप्रमाणतायास्त्वयाऽप्युक्तत्वात्, तस्य सर्षपादणीयस्त्वेऽनुपाधित्वात् ।**

**किञ्च ''प्रशस्यस्य श्रः'' ज्य च'' वृद्धस्य च'' इत्यत्र ''वृद्धस्य'' इति सूत्रेण वृद्धशब्दस्येव ''ज्य च'' इत्यनेन सूत्रेण प्रशस्यशब्दस्यापि ज्यादेशविधानात्, इह**

**श्रुतावणीयस्त्वं स्वाभाविकं, ज्यायस्त्वं तु अतिशयेन प्रशस्यत्वमिति किं न स्यात् । एतदप्यभिप्रेत्योक्तं भाष्ये – ''न चाप्रामाणिकं कल्प्यम्'' इति, नतु टीकोक्तरीत्या भेदसत्यत्वमात्रमभिप्रेत्य ।**

ಅನುವಾದ - ರಾಮಾನುಜರ ಸೂತ್ರಾರ್ಥವೂ ಸಹ ತಪ್ಪಿದೆ. ಸರ್ವಾತ್ಮಕತ್ವವನ್ನು ಸಾಧ್ಯವೆನ್ನುತ್ತಾರೆ. ಆದರೆ ಸರ್ವಾತ್ಮಕತ್ವವನ್ನು ಪ್ರತಿಪಾದನೆ ಮಾಡುವುದಕ್ಕಾಗಿ 'ಸರ್ವಂ' ಎಂದೇ ಸೂತ್ರದಲ್ಲಿ ನಿರ್ದೇಶಿಸಬೇಕು. ಹಾಗೇ ನಿರ್ದೇಶಿಸುವುದರಿಂದ ಶ್ರುತಿಯ ಆನುಗುಣ್ಯವೂ ಸಹ ಬರುತ್ತದೆ. ಏಕೆಂದರೆ 'ಸರ್ವತ್ರ' ಎಂಬ ಪದದಿಂದ ಸರ್ವಾತ್ಮಕತ್ವ ತಿಳಿಯುವುದಿಲ್ಲ. ಕೇವಲ ಸರ್ವಗತತ್ವ ತಿಳಿಯುತ್ತದೆ. ಮತ್ತು ಸೂತ್ರದಲ್ಲಿರುವ ಪ್ರಸಿದ್ಧಶಬ್ದಕ್ಕೆ ಕಾರಣವಿಲ್ಲದೆ ಭಾವಪ್ರಧಾನವಾಚಿತ್ವವನ್ನು ಒಪ್ಪಬೇಕಾಗುತ್ತದೆ.

ಮತ್ತು ರಾಮಾನುಜರು 'ಅರ್ಭಕೌಕಸ್ತ್ವಾತ್' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾಸಿದ್ದಾರೆ - ''ಏಷ ಮೇ ಆತ್ಮಾಽಂತರ್ಹೃದಯೇಽಣೀಯಾನ್ ವ್ರೀಹೇರ್ವಾ ಯವಾದ್ವಾ ಸರ್ಷಪಾದ್ವಾ'' ಎಂಬಲ್ಲಿ ಹೇಳಲ್ಪಟ್ಟ ಅಣೀಯಸ್ತ್ವವು ಔಪಾಧಿಕವಾಗಿದೆ. ಏಕೆಂದರೆ ಹೃದಯವೆಂಬ ಉಪಾಧಿಯನ್ನು ಹೇಳಿರುವುದರಿಂದ ಆದರೆ 'ಜ್ಯಾಯಾನ್ ಪೃಥಿವ್ಯಾಃ' ಎಂಬಲ್ಲಿ ಹೇಳಲ್ಪಟ್ಟ ಮಹತ್ವವು ಸ್ವಾಭಾವಿಕವಾಗಿದೆ. ಏಕೆಂದರೆ ಇಲ್ಲಿ ಯಾವುದೇ ವಿಧವಾದ ಉಪಾಧಿಯನ್ನು ಹೇಳಿರುವುದಿಲ್ಲವೆಂದು

ಇದು ತಪ್ಪು. 'ಹೃದ್ಯಪೇಕ್ಷಯಾ' ಎಂಬಲ್ಲಿ ಹೃದಯವು ಅಂಗುಷ್ಠಪ್ರಮಾಣವುಳ್ಳದ್ದಾಗಿದೆಯೆಂದು ನೀವೇ ಒಪ್ಪಿರುತ್ತೀರಿ? ಹೀಗಿರುವಾಗ ಪರಮಾತ್ಮನು ಸರ್ಷಪಕ್ಕಿಂತ ಅಣುವಾಗಿದ್ದಾನೆನ್ನಲು ಇಂತಹ ಹೃದಯವು ಉಪಾಧಿಯಾಗುವುದಿಲ್ಲ.

ಮತ್ತೊಂದು ದೋಷ - 'ಪ್ರಶಸ್ಯಸ್ಯ ಶ್ರಃ' ಎಂಬ ಸೂತ್ರದಿಂದ 'ಪ್ರಶಸ್ಯಸ್ಯ' ಶಬ್ದಕ್ಕೆ 'ಶ' ಆದೇಶ ಬಂದರೆ 'ಶ್ರೇಷ್ಠಃ ಶ್ರೇಯಾನ್' ಇತ್ಯಾದಿ ರೂಪಗಳು ಶ್ರೇಷ್ಠವೆಂಬರ್ಥದಲ್ಲಿ ಉಂಟಾಗುತ್ತವೆ. ''ಜ್ಯ ಚ'' ಎಂಬ ಸೂತ್ರದಲ್ಲಿ ಪ್ರಶಸ್ಯ ಶಬ್ದಕ್ಕೆ 'ಜ್ಯ' ಆದೇಶವನ್ನೂ ಸಹ ಹೇಳಿದ್ದಾರೆ. ಆವಾಗ ''ಜ್ಯೇಷ್ಠ'' ಮೊದಲಾದ ರೂಪಗಳು ಉಂಟಾಗುತ್ತವೆ. ''ವೃದ್ಧಸ್ಯ ಚ '' ಎಂಬ ಸೂತ್ರದಿಂದ ವೃದ್ಧ ಶಬ್ದಕ್ಕೂ ಸಹ 'ಜ್ಯ' ಆದೇಶ ಬರುತ್ತದೆ. ಈ ಮೂರು ಸೂತ್ರಗಳಲ್ಲಿ 'ವೃದ್ಧಸ್ಯ' ಎಂಬ ಸೂತ್ರದಿಂದ ವೃದ್ಧ ಶಬ್ದಕ್ಕೆ 'ಜ್ಯ' ಎಂಬ ಆದೇಶವು ಬಂದಂತೆ 'ಜ್ಯ ಚ' ಎನ್ನುವ ಸೂತ್ರದಿಂದ ಪ್ರಶಸ್ಯಸ್ಯ ಶಬ್ದಕ್ಕೂ ಸಹ 'ಜ್ಯ' ಎಂಬ ಆದೇಶವನ್ನು ವಿಧಿಸಲಾಗಿದೆ. ಆದ್ದರಿಂದ ಈ ಶ್ರುತಿಯಲ್ಲಿ ಅಣೀಯತ್ವವೇ ಸ್ವಾಭಾವಿಕವಾಗಿವೆ. ಜ್ಯಾಯಸ್ತ್ವವು ಅತಿಶಯವಾಗಿ ಪ್ರಶಸ್ತವಾಗಿದೆ ಎಂಬರ್ಥದಲ್ಲಿದೆ. ಹೀಗೂ ಹೇಳಿ ಅಣೀಯತ್ವ ಹಾಗೂ ಜ್ಯಾಯಸ್ತ್ವಗಳನ್ನು ಪರಮಾತ್ಮನಲ್ಲಿ ಕೂಡಿಸಲು ಬರುವಾಗ ಮಹತ್ವವನ್ನು ಸ್ವಾಭಾವಿಕವೆಂದು ಅಣೀಯತ್ವವನ್ನು ಔಪಾಧಿಕವೆಂದು ಕಲ್ಪಿಸಬೇಕಾಗಿಲ್ಲ.

ಸರ್ವಗತತ್ವಾಧಿಕರಣ (೧-೨-೧)

ಶ್ರೀಮದಾಚಾರ್ಯರು ರಾಮಾನುಜರ ಈ ಕಲ್ಪನೆಯನ್ನೂ ಸಹ ನಿರಾಕರಿಸುವುದಕ್ಕಾಗಿ ಭಾಷ್ಯದಲ್ಲಿ 'ನಚ ಅಪ್ರಾಮಾಣಿಕಂ ಕಲ್ಪ್ಯಮ್' ಅಪ್ರಮಾಣಿಕವಾದ್ದದ್ದನ್ನು ಕಲ್ಪಿಸಬಾರದು ಎಂದು ಹೇಳಿದ್ದಾರೆ. ಟೀಕೆಯಲ್ಲಿ ಹೇಳಿದಂತೆ ಭೇದಸತ್ಯತ್ವವನ್ನಷ್ಟೇ ಈ ವಾಕ್ಯಕ್ಕೆ ವಿವಕ್ಷಿಸಬಾರದು.

**प्रकाशः –**

**सूत्रार्थं निराह – अक्षरार्थोपीति । ब्रह्मशब्दाभिधेयस्य परब्रह्मत्वं सर्वात्मत्वं च द्वयमपि यदि साध्यत्वेनाभिमतं, तर्हि सर्वं ब्रह्मेति वाच्यं, नतु सर्वत्र ब्रह्मेति, तथोक्तौ पराभिमतासिद्धिं व्यनक्ति – नहीति । एतेनास्मदर्थे सूत्रानुगुण्यं सूचितम् । उपलक्षणमेतत् – 'सर्वत्र' इत्यनेन सर्वस्मिन् जगतीत्युक्तावपि ब्रह्मशब्देनोच्यमानं ब्रह्मैवेत्यंशस्य बोधकपदाभावेनाध्याहार्यत्वात् ।**

ವಿವರಣೆ - ರಾಮಾನುಜರ ಸೂತ್ರಾರ್ಥವನ್ನು 'ಅಕ್ಷರಾರ್ಥೋಽಪಿ' ಎಂಬ ಇತ್ಯಾದಿ ವಾಕ್ಯಗಳಿಂದ ನಿರಾಕರಿಸುತ್ತಿದ್ದಾರೆ. ಒಂದು ವೇಳೆ ಪ್ರಥಮಸೂತ್ರದಲ್ಲಿ ಬ್ರಹ್ಮಶಬ್ದದಿಂದ ಪರಬ್ರಹ್ಮತ್ವ ಹಾಗೂ ಸರ್ವಾತ್ಮಕತ್ವ ಎರಡೂ ಸಹ ಪ್ರತಿಪಾದ್ಯವೆಂದು ಹೇಳಿ ಎರಡನ್ನೂ ಸಾಧ್ಯವೆಂದು ಹೇಳುವುದಾದರೆ ಆವಾಗ 'ಸರ್ವಂ ಬ್ರಹ್ಮ' ಎಂದು ಹೇಳಬೇಕು ಹೊರತು 'ಸರ್ವತ್ರ ಬ್ರಹ್ಮ' ಎಂದು ಹೇಳಬಾರದು. ಒಂದು ವೇಳೆ ಹಾಗೆ 'ಸರ್ವತ್ರ ಬ್ರಹ್ಮ' ಎಂದು ಹೇಳಿದರೆ ರಾಮಾನುಜರಿಗೆ ಅಭಿಪ್ರೇತವಾದ ಅರ್ಥವು ಅಸಿದ್ಧವಾಗುತ್ತದೆಂದು 'ನಹಿ' ಇತ್ಯಾದಿ ವಾಕ್ಯದಿಂದ ಉಪಪಾದಿಸಿದ್ದಾರೆ. ಈ ವಾಕ್ಯದಿಂದ ನಮಗೆ ಅಭಿಮತವಾದ ಅರ್ಥವು ಸೂತ್ರಕ್ಕೆ ಅನುಗುಣವಾಗಿದೆಯೆಂದು ಸೂಚಿಸಿದಂತಾಯಿತು. 'ಸರ್ವತ್ರ' ಎಂಬ ಪದದಿಂದ 'ಸರ್ವಸ್ಮಿನ್ ಜಗತಿ' ಎಂದು ಹೇಳಿದರೂ ಸಹ ಬ್ರಹ್ಮಶಬ್ದದಿಂದ ಹೇಳಲ್ಪಟ್ಟ 'ಬ್ರಹ್ಮೈವ' ಎಂಬ ಅಂಶಕ್ಕೆ ಬೋಧಕವಾದ ಪದವು ಇರುವುದಿಲ್ಲ. ಅದನ್ನು ನೀವು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ.

**प्रकाशः** – यदत्रोक्तं श्रुतप्रकाशे – 'नाशब्दं' इति वा, 'नेतरः' इति वा, 'अन्य' इति वा पूर्वपादादनुवर्तते वा, "न शारीरः" इति वक्ष्यमाणमपकृष्यते वा । तस्य पर्यवसानद्ब्रह्मैवेति लभ्यते, नाध्याहार इति,

तन्न, ब्रह्मशब्देताभिधीयमानमित्यस्यैतावताऽध्याहारापरिहारात्

अस्मद्रीत्याऽऽध्यायपरिसमाप्ति प्रत्यधिकरणमनुवर्तमानेन 'तत्तु इति पदेनैव साक्षात्साध्यबोधसम्भवे, अत्यन्तव्यवहितस्यानुवर्तनेनापकर्षणेन वा पर्यवसानद्वारा साध्यबोधोक्तेरयुक्तत्वात् ।

अत एव द्वितीये "व्यवायान्नानुषज्यते" इत्यत्र "सं यज्ञपतिराशिषा" इति वाक्ये क्रियाध्याहार इत्युक्तमित्यपि ध्येयम् ।

ಶ್ರುತಪ್ರಕಾಶದಲ್ಲಿ ಹೀಗೆ ಹೇಳಿದ್ದಾರೆ - ಹಿಂದಿನ ಪಾದದಿಂದ 'ನಾಶಬ್ದಂ' ಎಂಬ ಪದವನ್ನು ಅಥವಾ 'ನೇತರಃ' ಎಂಬ ಪದವನ್ನು, ಅಥವಾ 'ಅನ್ಯಃ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬಹುದು. ಅಥವಾ ಮುಂದಿರುವ 'ನ ಶಾರೀರಃ' ಎಂಬುದನ್ನು ಅಪಕರ್ಷ ಮಾಡಬಹುದು. ಇದರಿಂದ ಸರ್ವಾತ್ಮಕನೆಂದು ಹೇಳಲ್ಪಡುವವನು ಬ್ರಹ್ಮನೇ ಆಗಿದ್ದಾನೆಂದು ಪರ್ಯವಸಾನವಾಗುತ್ತದೆ. ಅನುವೃತ್ತಿ ಅಥವಾ ಅಪಕರ್ಷವನ್ನು ಮಾಡಿಕೊಂಡಿದ್ದರಿಂದ ಅಧ್ಯಾಹಾರ ದೋಷವು ಬರುವುದಿಲ್ಲ ಎಂದು.

ಶ್ರುತಪ್ರಕಾಶದಲ್ಲಿ ಹೀಗೆ ಹೇಳಿದ್ದರೂ ಅಧ್ಯಾಹಾರ ದೋಷವು ತಪ್ಪಿದ್ದಲ್ಲ. 'ಬ್ರಹ್ಮಶಬ್ದೇನ ಅಭಿಧೀಯಮಾನಂ' ಎಂಬ ಪಕ್ಷವನ್ನು ಇದರಿಂದ ಅಧ್ಯಾಹಾರ ಮಾಡಿದಂತಾಗುವುದಿಲ್ಲ. ಆದ್ದರಿಂದ 'ಬ್ರಹ್ಮೈವ' ಎಂಬ ಸಾಧ್ಯವು ಅನುವೃತ್ತಿಯಿಂದಲೋ ಅಪಕರ್ಷದಿಂದಲೋ ಲಾಭವಾದರೂ ಸಹ ಪಕ್ಷವನ್ನು ಅಧ್ಯಾಹಾರ ಮಾಡಿಕೊಳ್ಳಲೇಬೇಕು.

ನಮ್ಮ ಪ್ರಕಾರ ವ್ಯಾಖ್ಯಾನ ಮಾಡಿದಾಗ ಅಧ್ಯಾಯದ ಕೊನೆಯ ತನಕ ಪ್ರತಿಯೊಂದು ಅಧಿಕರಣಗಳಲ್ಲಿಯೂ 'ತತ್ತು' ಎಂಬ ಪದವು ಅನುವೃತ್ತಿಯಾಗುತ್ತದೆ. ಆವಾಗ ನೇರವಾಗಿ 'ಬ್ರಹ್ಮೈವ' ಎಂಬ ಸಾಧ್ಯವು ತಿಳಿಯುತ್ತದೆ. ಹೀಗೆ ಸುಲಭವಾಗಿ ಸಾಧ್ಯವನ್ನು ತಿಳಿಯಲು ಬರುವಾಗ ಅತ್ಯಂತ ವ್ಯವಹಿತವಾದ ಅನುವೃತ್ತಿಯಿಂದ ಅಥವಾ ಅಪಕರ್ಷದಿಂದ ಪರ್ಯವಸಾನದ ಮೂಲಕವಾಗಿ ಸಾಧ್ಯವನ್ನು ತಿಳಿಯುವುದು ಅಯುಕ್ತವಾಗಿದೆ.

ಆದ್ದರಿಂದಲೇ ಪೂರ್ವಮೀಮಾಂಸೆಯ ದ್ವಿತೀಯಾಧ್ಯಾಯದಲ್ಲಿ ಹೀಗೆ ಹೇಳಿದ್ದಾರೆ - 'ವ್ಯವಾಯಾನ್ನಾನುಷಜ್ಯತೇ' ಎಂಬ ಸೂತ್ರದಲ್ಲಿ 'ಸಂ ಯಜ್ಞಪತಿರಾಶಿಷಾ' ಎಂಬ ವಾಕ್ಯದಲ್ಲಿ 'ಗಚ್ಛತಾಂ' ಎಂಬ ಕ್ರಿಯೆಯನ್ನು ಅಧ್ಯಾಹಾರವನ್ನು ಮಾಡಿಕೊಳ್ಳುವುದೇ ಸುಲಭವೆಂದು ಸಮರ್ಥಿಸಿದ್ದಾರೆ. ಆದ್ದರಿಂದ ನೀವೂ ಸಹ ಅನುವೃತ್ತಿ ಮಾಡಿಕೊಳ್ಳುವುದಕ್ಕಿಂತ ಅಧ್ಯಾಹಾರ ಮಾಡಿಕೊಳ್ಳುವುದೇ ಲೇಸು.

**प्रकाशः** – इतराणि सूत्राणि प्रागुक्तदिशा निरसनीयानीति भावः । तथा हि – यदुक्तं – 'विवक्षितगुणोपपत्तेः' 'विवक्षितानां' वक्ष्यमाणानां उपसंहारस्थानामिति यावत् । मनोमयत्वादीनां ''अवाक्यनादरः'' इत्यन्तानां गुणानां परमात्मन्येवोपपत्तेः परमात्मैवात्रोच्यते,

विवक्षितगुणानामनुपपत्तेः न शारीरोऽत्रोच्यते,

ಗ್ರಂಥಕಾರರು ಪ್ರಥಮಸೂತ್ರವನ್ನು ಮಾತ್ರ ನಿರಾಕರಿಸಿದ್ದಾರೆ. ಇದರಂತೆ ಉಳಿದ ಸೂತ್ರಗಳ ನಿರಾಕರಣೆಯನ್ನು ತಿಳಿಯಬೇಕು. ಅದು ಹೀಗೆ - 'ವಿವಕ್ಷಿತಗುಣೋಪಪತ್ತೇಃ' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸಿದ್ದಾರೆ. ವಿವಕ್ಷಿತವಾದ ಗುಣಗಳೆಂದರೆ ಮುಂದೆ ಹೇಳುವ ಅಂದರೆ ಉಪಸಂಹಾರದಲ್ಲಿರುವ ಗುಣಗಳೆಂದರ್ಥ. ಮನೋಮಯತ್ವದಿಂದ ಪ್ರಾರಂಭಿಸಿ 'ಅವಾಕ್ಯನಾದರಃ' ಎಂಬಲ್ಲಿಯ ತನಕ ಹೇಳಲ್ಪಟ್ಟ

ಗುಣಗಳೆಲ್ಲವು ಪರಮಾತ್ಮನಲ್ಲಿಯೇ ಉಪಪನ್ನವಾಗುತ್ತವೆ. ಆದ್ದರಿಂದ ಪರಮಾತ್ಮನೇ ವಿಷಯವಾಕ್ಯದಿಂದ ಪ್ರತಿಪಾದ್ಯನಾಗಿದ್ದಾನೆ. 'ಅನುಪಪತ್ತೇಸ್ತು ನ ಶಾರೀರಃ' ಎಂಬ ಸೂತ್ರದಲ್ಲಿ ವಿವಕ್ಷಿತವಾದ ಗುಣಗಳು ಅನುಪಪನ್ನವಾದ್ದರಿಂದ ಜೀವನು ವಿಷಯವಾಕ್ಯದಿಂದ ಪ್ರತಿಪಾದ್ಯನಲ್ಲ ಎಂದು ಹೇಳಿದ್ದಾರೆ.

**प्रकाशः** – "इतः प्रेत्याभिसम्भवितास्मि" इति प्राप्यप्राप्तृतया ब्रह्मजीवयोः कर्मकर्तृभावेन व्यपदेशाच्च,

"एव म आत्मान्तर्हृदये" इति षष्ठ्यन्तप्रथमान्तरूपात्, वाजसनेयकानां श्रुतौ च "एवमयमन्तरात्मन्पुरुषो हिरण्मयः" इति सप्तम्यन्तप्रथमान्तरूपाज्जीवब्रह्मणोः शब्दविशेषाच्च, "सर्वस्य चाहं हृदि सन्निविष्टः" इत्यादिस्मृतेश्च न शारीर इति,

"ಇತಃ ಪ್ರೇತ್ಯಾಭಿಸಂಭವಿತಾಸ್ಮಿ" ಎಂದು ಬ್ರಹ್ಮನನ್ನು ಪ್ರಾಪ್ಯತ್ವೇನ ಜೀವನನ್ನು ಪ್ರಾಪ್ತೃತ್ವೇನ ಹೇಳಲಾಗಿದೆ. ಹೀಗೆ ಬ್ರಹ್ಮ ಹಾಗೂ ಜೀವರನ್ನು ಕರ್ಮಕರ್ತೃಭಾವದಿಂದ ವ್ಯಪದೇಶಿಸಿದ್ದರಿಂದ ಜೀವನು ಪ್ರತಿಪಾದ್ಯನಾಗಲಾರ.

'ಶಬ್ದವಿಶೇಷಾತ್' ಎಂಬ ಸೂತ್ರಕ್ಕೆ ಹೀಗರ್ಥ - 'ಏಷ ಮೇ ಆತ್ಮಾಽಂತರ್ಹೃದಯೇ' ಎಂದು ಛಾಂದೋಗ್ಯದಲ್ಲಿ ಷಷ್ಠ್ಯಂತ ಹಾಗೂ ಪ್ರಥಮಾಂತವಾದ ಶಬ್ದವಿಶೇಷವಿದೆ. ಮತ್ತು ಬೃಹದಾರಣ್ಯಕದಲ್ಲಿ "ಏವಮಯಮಂತರಾತ್ಮಪುರುಷೋ ಹಿರಣ್ಮಯಃ' ಎಂಬುದಾಗಿ ಸಪ್ತಮ್ಯಂತ ಹಾಗೂ ಪ್ರಥಮಾಂತವಾದ ಜೀವಬ್ರಹ್ಮ ಪ್ರತಿಪಾದಕವಾದ ಶಬ್ದವಿಶೇಷವಿದೆ.

'ಸ್ಮೃತೇಶ್ಚ' ಎಂಬ ಸೂತ್ರಕ್ಕೆ 'ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ' ಎಂಬ ಶ್ರುತಿಪ್ರಮಾಣದಿಂದ ಜೀವನು ಪ್ರತಿಪಾದ್ಯನಲ್ಲವೆಂದು ವ್ಯಾಖ್ಯಾನಿಸಿದ್ದಾರೆ.

**प्रकाशः** – तन्न, ब्रह्मणि विवक्षितगुणानामुपपत्त्युक्त्याऽर्थाज्जीवे तदनुपपत्तेरुक्तत्वात् तेन तृतीयस्य पौनरुक्त्यम् । चतुर्थषष्ठगृहीतयोः "एतमितः प्रेत्य" इति "सर्वस्य चाहं" इति श्रुतिस्मृत्योरपि "एष म आत्माऽन्तर्हृदये" इति विरुद्धविभक्तिकशब्दग्राहकेण पञ्चमेनैव ग्रहणसम्भवात्तेन तयोः पौनरुक्त्यम् ।

'शब्दविशेषाच्च' इति चशब्दाध्याहारश्चेत्यादि ध्येयम् ।

ರಾಮಾನುಜರ ಈ ಸೂತ್ರ ವ್ಯಾಖ್ಯಾನಕ್ಕೆ ಅದ್ವೈತಿಗಳಿಗೆ ಬಂದ ದೋಷವೇ ಬರುತ್ತವೆ. ಬ್ರಹ್ಮನಲ್ಲಿ ವಿವಕ್ಷಿತವಾದ ಗುಣಗಳು ಉಪಪನ್ನವಾಗುತ್ತವೆಂದು ಹೇಳಿದ್ದರಿಂದಲೇ ಅರ್ಥಾತ್ ಜೀವನಲ್ಲಿ ಆ ಗುಣಗಳು ಅನುಪಪನ್ನವಾಗುತ್ತವೆಂದು ತಿಳಿಯುತ್ತವೆ. ಆದ್ದರಿಂದ ಎರಡನೆಯ ಸೂತ್ರದಿಂದ ಮೂರನೆಯ ಸೂತ್ರಕ್ಕೆ ಪುನರುಕ್ತಿದೋಷ ಬರುತ್ತದೆ. ಮತ್ತು ನಾಲ್ಕು ಹಾಗೂ ಆರನೆಯ ಸೂತ್ರಗಳ ಪ್ರಮೇಯವು ಐದನೆಯ ಸೂತ್ರದಿಂದಲೇ ಸಿದ್ಧವಾಗುತ್ತದೆ. 'ಶಬ್ದವಿಶೇಷಾತ್' ಎಂಬ ಸೂತ್ರದಿಂದಲೇ 'ಏತಮಿತಃ ಪ್ರೇತ್ಯ' ಎಂಬ ಪ್ರಾಪ್ಯಪ್ರಾಪ್ತೃತ್ವವನ್ನು ಹೇಳುವ ಶಬ್ದವಿಶೇಷವನ್ನು ಸ್ವೀಕರಿಸಬಹುದು. ಅದರಂತೆ 'ಸರ್ವಸ್ಯ ಚಾಹಂ'

ಎಂಬಲ್ಲಿಯೂ ವಿರುದ್ಧ ವಿಭಕ್ತಿಗಳಿರುವುದರಿಂದ ಆರನೆಯ ಸೂತ್ರದ ಸ್ಮೃತಿವಾಕ್ಯವನ್ನು 'ಶಬ್ದವಿಶೇಷ' ಸೂತ್ರದಿಂದಲೇ ಸ್ವೀಕರಿಸಬಹುದು. "ಏಷ ಮೇ ಆತ್ಮಾಽಂತರ್ಹೃದಯೇ' ಎಂಬಲ್ಲಿ ಯಾವರೀತಿಯಾಗಿ ವಿರುದ್ಧ ವಿಭಕ್ತಿವುಳ್ಳ ಶಬ್ದಗಳಿವೆಯೋ ನಾಲ್ಕು ಹಾಗೂ ಆರನೆಯ ಸೂತ್ರದಲ್ಲಿ ಉಲ್ಲೇಖಿಸುವ ಅಂತಹ ವಿರುದ್ಧ ವಿಭಕ್ತಿವುಳ್ಳ ಶ್ರುತಿ ಸ್ಮೃತಿ ವಾಕ್ಯಗಳೇ ಇರುವುದರಿಂದ ಐದನೆಯ ಸೂತ್ರದಿಂದ ಪುನರುಕ್ತಿ ದೋಷ ಬರುತ್ತದೆ.

ಮತ್ತು 'ಶಬ್ದವಿಶೇಷ' ಎಂಬುದು ಸ್ವತಂತ್ರಹೇತುವಾದ್ದರಿಂದ ಸೂತ್ರದಲ್ಲಿ 'ಚ' ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ.

**प्रकाशः** – सप्तमे दूष्यभागमनूद्य निराह – **यच्चेति** । सूत्रार्थस्तु – पूर्वमत इव ध्येयः । **त्वयेति** । "हृद्यपेक्षया तु मनुष्याधिकारत्वात्" इत्यत्र "उपासक-हृदयस्याङ्गुष्ठप्रमाणत्वात्" इति त्वद्भाष्योक्तेरिति भावः । 'तस्य' हृदयस्य आत्मनि सर्षपादणीयस्त्वसम्पादनेऽनुपाधित्वात्, तत्परिमितस्यैव तत्रोपाधित्वेन वाच्यत्वादित्यर्थः ।

ಏಳನೆಯ ಸೂತ್ರದಲ್ಲಿ ದೂಷಣೆ ಮಾಡಬೇಕಾದ ಭಾಗವನ್ನಷ್ಟೇ ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚ' ಇತ್ಯಾದಿ ವಾಕ್ಯದಿಂದ. ಅರ್ಭಕೌಕಸ್ತ್ವವೆಂಬ ಏಳನೇ ಸೂತ್ರಾರ್ಥವನ್ನೂ ಅದ್ವೈತಿಗಳಂತೆ ಹೇಳುತ್ತಾರೆ. ಆದ್ದರಿಂದ ಆ ಸಂದರ್ಭದಲ್ಲಿ ಮಾಡಿದ ವ್ಯಾಖ್ಯಾನವನ್ನೇ ಇಲ್ಲಿಯು ತಿಳಿಯಬೇಕು. 'ತ್ವಯ' ಇತ್ಯಾದಿ ವಾಕ್ಯದಿಂದ ಗ್ರಂಥಕಾರರು ಹೃದಯವು ಅಂಗುಷ್ಠಪರಿಮಾಣದಲ್ಲಿದೆ ಎಂದು ನೀವೇ ಹೇಳಿದ್ದೀರಿ 'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನಿಸುವಾಗ "ಉಪಾಸಕ-ಹೃದಯಸ್ಯಾಂಗುಷ್ಠಪ್ರಮಾಣತ್ವಾತ್' ಎಂದು ರಾಮಾನುಜರು ಭಾಷ್ಯದಲ್ಲಿ ಹೇಳಿದ್ದಾರೆ. ಅದನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು. 'ತಸ್ಯ' ಎಂಬ ಪದಕ್ಕೆ ಹೃದಯಕ್ಕೆ ಎಂದರ್ಥ. ಆತ್ಮನು ಸರ್ಷಪಕ್ಕಿಂತ ಅಣುವಾಗಿದ್ದಾನೆನ್ನಲು ಹೃದಯಪರಿಮಾಣವು ಉಪಾಧಿಯಾಗುವುದಿಲ್ಲ. ಸರ್ಷಪದಷ್ಟೇ ಪರಿಮಾಣವನ್ನು ಹೇಳಿದರೆ ಮಾತ್ರ ಅದು ಉಪಾಧಿಯಾಗುತ್ತದೆ.

**प्रकाशः** – अत एव श्रुतप्रकाशे – 'अत्र हृदयमल्पत्वोपाधिभूतं श्रुतं, नतु ज्यायस्त्वोपाधिः श्रुतः, पृथिव्यादयः तदुपाधय इति न शङ्कनीयं, ततोऽपि ज्यायस्त्वश्रवणात् । नहि ततोऽधिकपरिमाणत्वं तदुपाधिकं भवितुमर्हति' इत्यधिकपरिमाणस्य न्यूनपरिमाणोपाधित्वं निराकृतम् । तद्वदेवेहापि न्यूनपरिमाणस्य ततोऽधिकपरिमाणहृदयोपाधिकत्वमयुक्तमिति ।

ಆದ್ದರಿಂದಲೇ ಶ್ರುತಪ್ರಕಾಶದಲ್ಲಿ ಅಣೀಯತ್ವಕ್ಕೂ ಮಹತ್ವಕ್ಕೂ ವಿರೋಧವನ್ನು ಪರಿಹರಿಸುವಾಗ ಹೀಗೆ ಹೇಳಿದ್ದಾರೆ. 'ಅತ್ರ ಹೃದಯಮಲ್ಪತ್ವೋಪಾಧಿಭೂತಂ ಶ್ರುತಂ, ನತು ಜ್ಯಾಯಸ್ತ್ವೋಪಾಧಿಃ ಶ್ರುತಃ, ಪೃಥಿವ್ಯಾದಯಃ ತದುಪಾದಯ ಇತಿ ನ ಶಂಕನೀಯಂ, ತತೋಽಪಿ ಜ್ಯಾಯಸ್ತ್ವಶ್ರವಣಾತ್ । ನಹಿ ತತೋಽಧಿಕಪರಿಮಾಣತ್ವಂ ತದುಪಾಧಿಕಂ ಭವಿತುಮರ್ಹತಿ' ಹೃದಯವು ಅಲ್ಪವಾದ ಪರಿಮಾಣವುಳ್ಳ ಉಪಾಧಿಯಾಗಿದೆಯೆಂದು ಶ್ರುತವಾಗಿದೆ. ಹೊರತು ಜ್ಯಾಯಸ್ತ್ವವು ಉಪಾಧಿಯೆಂದು ಕೇಳಿಸುತ್ತಿಲ್ಲ. ಪೃಥಿವಿಯಾಗಲೀ ದ್ಯುಲೋಕವಾಗಲಿ ಉಪಾಧಿಯಾಗುವುದಿಲ್ಲ. ಏಕೆಂದರೆ ಪಂಚಮಿವಿಭಕ್ತಿಯನ್ನು ಹೇಳಿರುವುದರಿಂದ ಪೃಥಿವಿಗಿಂತ ಬ್ರಹ್ಮನಲ್ಲಿ ಜ್ಯಾಯಸ್ತ್ವವು ಕೇಳಿಸುತ್ತಿದೆ. ಇದರಿಂದ ಬ್ರಹ್ಮನಲ್ಲಿರುವ ಅಧಿಕ ಪರಿಮಾಣಕ್ಕೆ ಪೃಥಿವೀ ಹಾಗೂ ದ್ಯುಲೋಕಗಳಲ್ಲಿರುವ ಮೂಲ ಪರಿಮಾಣವು ಉಪಾಧಿಯಾಗುವುದಿಲ್ಲವೆಂದು ತಿಳಿಯುತ್ತದೆ. ಹೀಗೆ ಶ್ರುತಪ್ರಕಾಶದಲ್ಲಿ ಅಧಿಕ ಪರಿಮಾಣಕ್ಕೆ ನ್ಯೂನಪರಿಮಾಣವು ಉಪಾಧಿಯಾಗುವುದಿಲ್ಲವೆಂದು ನಿರಾಕರಿಸಿದ್ದಾರೆ. ಅದರಂತೆ ಪ್ರಕೃತ ಸರ್ಷಪಪರಿಮಾಣಕ್ಕೆ ಸರ್ಷಪಕ್ಕಿಂತಲೂ ಅಧಿಕಪರಿಮಾಣವುಳ್ಳ ಹೃದಯವು ಉಪಾಧಿಯಾಗಲು ಸಾಧ್ಯವಿಲ್ಲ.

**प्रकाशः – नन्वणीयस्त्वज्यायस्त्वयोर्विरोधादेकस्यावश्यपरित्यागे कथञ्चिदौपाधिकत्वेन समाधेयमित्यतोऽविरोधप्रकारमाह – किञ्चेति । अत्र ज्यायस्त्वं नाम नातिशयितमहत्त्वं, किन्तु प्रशस्ततमत्वमुच्यते, ज्यायश्शब्दस्यार्थद्वयेऽपि व्युत्पन्नत्वात्,**

ಆಕ್ಷೇಪ - ಅಣೀಯಸ್ತ್ವಕ್ಕೂ ಜ್ಯಾಯಸ್ತ್ವಕ್ಕೂ ಪರಸ್ಪರ ವಿರೋಧವಿದೆ. ಆದ್ದರಿಂದ ಎರಡಲ್ಲಿ ಒಂದನ್ನು ಅವಶ್ಯವಾಗಿ ಬಿಡಬೇಕಾಗುತ್ತದೆ. ಆದ್ದರಿಂದ ಅಣೀಯಸ್ತ್ವವನ್ನೇ ಔಪಾಧಿಕವೆಂದು ಸಮಾಧಾನ ಹೇಳುವುದು ಸೂಕ್ತವಲ್ಲವೇ?

ಸಮಾಧಾನ - ವಿರೋಧವನ್ನು ಬೇರೆ ಪ್ರಕಾರದಲ್ಲಿಯೂ ಪರಿಹರಿಸಬಹುದೆಂಬ 'ಕಿಂಚ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಇಲ್ಲಿ 'ಜ್ಯಾಯಸ್ತ್ವ' ಎಂಬ ಪದಕ್ಕೆ ಅತಿಶಯವಾದ ಮಹತ್ತ್ವವುಳ್ಳದ್ದು ಎಂದರ್ಥವಲ್ಲ. ಹೊರತು ಅತ್ಯಂತ ಪ್ರಶಸ್ತವಾದದ್ದು ಎಂದರ್ಥ. ಏಕೆಂದರೆ 'ಜ್ಯಾಯ' ಶಬ್ದವು ಎರಡು ಅರ್ಥದಲ್ಲಿ ನಿಷ್ಪನ್ನವಾಗಿದೆ.

**प्रकाशः – प्रशस्यशब्दस्यातिशायने 'ईयसुन्'प्रत्यये कृते ''प्रशस्यस्य श्रः'' इति सूत्रात् प्रशस्यस्येत्यनुवर्त्य ''ज्य च'' इति सूत्रेण ज्यादेशो विहितः । तदनन्तरं ''वृद्धस्य च'' इति सूत्रे वृद्धशब्दस्यापीयसुन्प्रत्यये परतः ''ज्य च'' इति सूत्राज्ज्यशब्दमनुवर्त्य ज्यादेशो विहितः ।**

ಅದು ಹೀಗೆ - 'ಪ್ರಶಸ್ಯ' ಎಂಬ ಶಬ್ದಕ್ಕೆ ಅತಿಶಯವೆಂಬ ಅರ್ಥದಲ್ಲಿ 'ಈಯಸುನ್' ಪ್ರತ್ಯಯವು ಬರುತ್ತದೆ. ಆವಾಗ ''ಪ್ರಶಸ್ಯಸ್ಯ ಶ್ರಃ' ಎಂಬ ಸೂತ್ರವು 'ಈಯಸುನ್' ಪ್ರತ್ಯಯವು ಮುಂದಿರುವಾಗ 'ಶ'

ಎಂಬ ಆದೇಶವನ್ನು ಹೇಳುತ್ತದೆ. ಅನಂತರ 'ಜ್ಯ ಚ' ಎಂಬ ಎರಡನೆಯ ಸೂತ್ರದಲ್ಲಿ 'ಪ್ರಶಸ್ಯ' ಎಂಬ ಶಬ್ದವನ್ನು ಅನುವೃತ್ತಿ ಮಾಡಿಕೊಂಡು 'ಜ್ಯ' ಎಂಬ ಆದೇಶವನ್ನು ವಿಧಿಸಲಾಗಿದೆ. ಅನಂತರ 'ವೃದ್ಧಸ್ಯ ಚ' ಎಂಬ ಮೂರನೇ ಸೂತ್ರದಲ್ಲಿ 'ವೃದ್ಧ' ಶಬ್ದಕ್ಕೆ 'ಈಯಸುನ್' ಪ್ರತ್ಯಯವು ಪರದಲ್ಲಿದ್ದಾಗ 'ಜ್ಯ ಚ' ಎಂಬ ಸೂತ್ರದಿಂದ 'ಜ್ಯ' ಎಂಬ ಶಬ್ದವನ್ನು ಅನುವೃತ್ತಿ ಮಾಡಿಕೊಂಡು 'ಜ್ಯ' ಎಂಬ ಆದೇಶವನ್ನು ವಿಧಿಸಲಾಗಿದೆ.

**प्रकाशः** – तथा च 'ज्यायान्' इत्यस्यातिशयेन वृद्धत्वमतिशयेन प्रशस्तत्वं चेति द्वयमप्यर्थो भवति । तथा च प्रकृतेऽतिशयेन वृद्धिमत्त्वरूपमर्थं हित्वा प्रशस्त-तमत्वरूपार्थमादायाणीयस्त्वं स्वाभाविकमित्यङ्गीक्रियतामित्यर्थः ।

इदमङ्गीकृत्योक्तेत् । वस्तुतस्तु–पूर्वोक्तरीत्याऽणुत्वमहत्त्वयोस्स्वाभाविकत्वेऽपि न विरोधलेश इति ध्येयम् ।

ಆದ್ದರಿಂದ 'ಜ್ಯಾಯಾನ್' ಎಂಬ ಪದಕ್ಕೆ ಅತಿಶಯವಾದ ವೃದ್ಧಿಯುಳ್ಳವನು ಮತ್ತು ಅತಿಶಯವಾಗಿ ಪ್ರಶಸ್ತನಾದವನು ಎಂದು ಎರಡು ಬಗೆಯಲ್ಲಿ ಅರ್ಥವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಪ್ರಕೃತದಲ್ಲಿ ಎರಡು ಅತಿಶಯವಾದ ವೃದ್ಧಿವುಳ್ಳವನು ಎಂಬರ್ಥವನ್ನು ಬಿಟ್ಟು ಅತ್ಯಂತ ಪ್ರಶಸ್ತನಾಗಿದ್ದಾನೆಂಬ ಅರ್ಥವನ್ನು ಸ್ವೀಕರಿಸಬಹುದು. ಹೀಗೆ ಸ್ವೀಕರಿಸಿ ಅಣೀಯಸ್ತ್ವವನ್ನು ಸ್ವಾಭಾವಿಕವೆಂದು ಅಂಗೀಕರಿಸಿಯೂ ಕೂಡ ವಿರೋಧವನ್ನು ಪರಿಹರಿಸಬಹುದು.

ಈ ವಿಚಾರವು ಅಂಗೀಕಾರವಾದವಾಗಿದೆ - ವಸ್ತುತಸ್ತು ಹಿಂದೆ ಹೇಳಿದ ಪ್ರಕಾರ ಪರಮಾತ್ಮನಲ್ಲಿ 'ಅಣುತ್ವ' ಹಾಗೂ 'ಮಹತ್ವ' ಎರಡನ್ನು ಸ್ವಾಭಾವಿಕವೆಂದು ಒಪ್ಪಿದರೂ ಸಹ ವಿರೋಧಕ್ಕೆ ಅವಕಾಶವಿಲ್ಲವೆಂದು ತಿಳಿಯಬೇಕು.

**प्रकाशः** – एतेन यत्केनचिदुक्तं – आद्यसूत्रद्वयमेकमधिकरणम् । तत्र "मनोमयः प्राणशरीरः" इति वाक्ये मनोमयत्वादियुतो जीवः शिवो वेति विशये,

"यथा क्रतुमयः पुरुषः यथाक्रतुरस्मिन् लोके पुरुषो भवति तदेतः प्रेत्य भवति" इति कर्मवशादिहामुत्र भ्रमतो जीवस्य प्रस्तुत्वात्, 'सति' यथार्थेऽसङ्कल्प इत्यादिविभागेन सत्यसङ्कल्पत्वादेरुपपत्तेर्जीव इति प्राप्ते,

"सर्वं खल्विदं ब्रह्म तज्जलानिति" इति सर्वकारणस्योपास्यत्वेनोपदेशात् विवक्षितसत्यकामत्वादिगुणानामुपपत्तेश्च शिव एव तथाविध इति सिद्धान्त इति,

ಹೀಗೆ ಅದ್ವೈತಿಗಳನ್ನು ಹಾಗೂ ರಾಮನುಜರುಗಳನ್ನು ನಿರಾಕರಿಸಿದ್ದರಿಂದಲೇ ಶೈವಮತವನ್ನೂ ಸಹ ನಿರಾಕರಿಸಿದಂತಾಯಿತು.

ಶೈವರ ಅಧಿಕರಣ ಶರೀರ ಹೀಗಿದೆ - ಮೊದಲೆರಡು ಸೂತ್ರಗಳು ಸೇರಿ ಒಂದು ಅಧಿಕರಣವಾಗಿದೆ. ಆ ಅಧಿಕರಣದಲ್ಲಿ 'ಮನೋಮಯಃ ಪ್ರಾಣಶರೀರಃ' ಎಂಬ ಪದವು ವಿಷಯವಾಕ್ಯವಾಗಿದೆ. ಈ ವಾಕ್ಯದಲ್ಲಿ ಮನೋಮಯತ್ವಾದಿ ಗುಣವುಳ್ಳವನು ಜೀವನೋ ಅಥವಾ ಶಿವನೋ? ಎಂದು ಸಂಶಯ.

"ಯಥಾ ಕ್ರತುಮಯಃ ಪುರುಷಃ ಯಥಾಕ್ರತುರಸ್ಮಿನ್ ಲೋಕೇ ಪುರುಷೋ ಭವತಿ ತದೇತಃ ಪ್ರೇತ್ಯ ಭವತಿ" ಎಂಬ ವಾಕ್ಯದಲ್ಲಿ ಜೀವನು ಯಾವ ಪ್ರಕಾರದಲ್ಲಿ ಕರ್ಮಗಳನ್ನು ಆಚರಿಸುತ್ತಾನೋ ಅಂತಹ ಫಲವನ್ನೇ ಮೇಲಿನ ಲೋಕದಲ್ಲಿ ಅನುಭವಿಸುತ್ತಾನೆ ಎಂದು ಹೇಳಲಾಗಿದೆ. ಕರ್ಮದ ಅಧೀನವಾಗಿ ಇಹಲೋಕದಲ್ಲಿ ಹಾಗೂ ಪರಲೋಕದಲ್ಲಿ ಇರುವ ಜೀವನೇ ಇಲ್ಲಿ ಪ್ರಸ್ತುತನಾಗಿದ್ದಾನೆ. ಇಂತಹ ಜೀವನಲ್ಲಿ ಮನೋಮಯತ್ವಾದಿಗಳನ್ನು ಸುಲಭವಾಗಿ ಕೂಡಿಸಬಹುದು ಆದರೆ ಸತ್ಯಸಂಕಲ್ಪತ್ವವನ್ನು ಹೇಗೆ ಕೂಡಿಸುವುದೆಂದರೆ 'ಸತಿ ಅಸಂಕಲ್ಪಃ' ಎಂದು ಪದಚ್ಛೇದ ಮಾಡಬೇಕು. ಅಂದರೆ ಸತಿ = ಯಥಾರ್ಥವಾದ ವಿಚಾರದಲ್ಲಿ, ಅಸಂಕಲ್ಪಃ = ಸಂಕಲ್ಪ ಮಾಡಲಾರನು ಎಂಬರ್ಥವನ್ನು ಜೀವನಲ್ಲಿ ಹೇಳಬಹುದು. ಆದ್ದರಿಂದ 'ಮನೋಮಯಃ' ಇತ್ಯಾದಿ ವಾಕ್ಯದಿಂದ ಪ್ರತಿಪಾದ್ಯನಾದವನು ಜೀವನೇ ಆಗಿದ್ದಾನೆಂದು ಪೂರ್ವಪಕ್ಷ.

'ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನ್' ಇತ್ಯಾದಿಯಾಗಿ ಸರ್ವಜಗತ್ಕಾರಣನಾದ ಬ್ರಹ್ಮನು ಉಪಾಸ್ಯನಾಗಿದ್ದಾನೆಂದು ಉಪದೇಶಿಸಲಾಗಿದೆ. ಇದು ಮೊದಲನೆಯ ಸೂತ್ರಾರ್ಥ. ಸತ್ಯಕಾಮತ್ವಾದಿಗುಣಗಳು ಶಿವನಲ್ಲಿ ಉಪಪನ್ನವಾಗುವುದರಿಂದ ಶಿವನೇ ಮನೋಮಯನೆಂಬ ವಾಕ್ಯದಿಂದ ಪ್ರತಿಪಾದ್ಯನಾಗಿದ್ದಾನೆಂಬುದು ಎರಡನೇ ಸೂತ್ರಾರ್ಥ. ಹೀಗೆ ಸಿದ್ಧಾಂತ ಮಾಡಿದ್ದಾರೆ.

**प्रकाशः** – तन्निरस्तं, संशयाद्ययोगेनोदाहरणानौचित्यस्योक्तत्वात् । सूत्राक्षरासमाञ्जस्यस्य स्फुटत्वात् ।

तच्च ब्रह्म जलान् साक्षाद्योऽसौ विष्णुर्जलेऽनिति ।
महाज्ञानात्मकत्वात्तु प्रोक्तो विष्णुर्मनोमयः ।
यस्माद्बलशरीरोऽसावतः प्राणशरीरकः ।

इत्यादिस्मृतिविरुद्धत्वाच्च । "अनुपपत्तेः" इत्यादेरधिकरणान्तरत्वेऽत्रोक्तार्भकौस्त्वसम्भोगप्राप्त्यादिशङ्कासमाधानाभावेन सिद्धान्तनुत्थितेश्च । अणीयस्त्वस्यासमाधानाच्चेति ध्येयम् ।

ಶೈವರ ಈ ಅಧಿಕರಣ ಶರೀರವು ಅತ್ಯಂತ ಅನುಪಪನ್ನವಾಗಿದೆ. ಸಂಶಯ ಪೂರ್ವಪಕ್ಷಗಳೇ ಹುಟ್ಟಲು ಸಾಧ್ಯವಿಲ್ಲವೆಂಬ ಅದ್ವೈತಿಗಳಿಗೆ ಹೇಳಿದ ದೋಷ ಇವರಿಗೂ ತಪ್ಪಿದ್ದಲ್ಲ. ಆದ್ದರಿಂದ 'ಮನೋಮಯಃ' ಎಂಬ ವಾಕ್ಯವನ್ನು ವಿಷಯವಾಕ್ಯವನ್ನಾಗಿ ಪರಿಗಣಿಸುವುದು ಅನುಚಿತವಾಗಿದೆ. ಇನ್ನು ಶೈವರು ಹೇಳಿದ ಸೂತ್ರಾರ್ಥವೂ ಸಹ ಅಸಮಂಜಸವಾಗಿದೆಯೆಂದು ಸ್ಪಷ್ಟವಾಗಿ ತಿಳಿಯುತ್ತದೆ. 'ಕಾರಣತ್ವೇನ' ಎಂಬ ಪದವನ್ನು

ಅಧ್ಯಾಹಾರ ಮಾಡಿಕೊಳ್ಳಬೇಕು. ಪ್ರತಿಜ್ಞಾಭಾಗವೂ ಸಹ ಕಾಣಿಸುತ್ತಿಲ್ಲ. ಇತ್ಯಾದಿ ದೋಷಗಳನ್ನು ಸ್ವತಃ ಊಹಿಸಿಕೊಳ್ಳಬೇಕು.

ಮತ್ತು 'ತಜ್ಜಾಲಾನ್' ಎಂಬ ಶ್ರುತಿ ವಾಕ್ಯಕ್ಕೆ ಸ್ಮೃತಿಯಲ್ಲಿ ಹೀಗೆ ವ್ಯಾಖ್ಯಾನಿಸಲಾಗಿದೆ -

ತಚ್ಚ ಬ್ರಹ್ಮ ಜಲಾನ್ ಸಾಕ್ಷಾದ್ಯೋಽಸೌ ವಿಷ್ಣುರ್ಜಲೇಽನಿತಿ ।
ಮಹಾಜ್ಞಾನಾತ್ಮಕತ್ವಾತ್ತು ಪ್ರೋಕ್ತೋ ವಿಷ್ಣುರ್ಮನೋಮಯಃ ।
ಯಸ್ಮಾದ್ಬಲಶರೀರೋಽಸಾವತಃ ಪ್ರಾಣಶರೀರಕಃ ।

'ತತ್' ಎಂದರೆ ಬ್ರಹ್ಮನು 'ಜಲೇ ಅನೀತಿ ಜಲಾನ್' ಎಂದರೆ 'ಮತ್ಸ್ಯಾದಿ' ಅವತಾರಗಳಲ್ಲಿ ನೀರಿನಲ್ಲಿ ಸಂಚರಿಸಿದ್ದಾನೆ 'ಮನೋಮಯಃ' ಎಂಬಲ್ಲಿರುವ 'ಮಯಟ್' ಪ್ರತ್ಯಯಕ್ಕೆ 'ಪ್ರಾಚುರ್ಯ' ಎಂಬರ್ಥವನ್ನು ಹೇಳಬೇಕಾಗಿದ್ದರಿಂದ ಪ್ರಧಾನಜ್ಞಾನಸ್ವರೂಪನೆಂದು ತಿಳಿಯಬೇಕು. ಯಾವ ಕಾರಣದಿಂದ ಪ್ರಾಣಶಬ್ದಕ್ಕೆ ಬಲ ಎಂಬರ್ಥವಿದೆಯೋ, ಆ ಕಾರಣದಿಂದ 'ಪ್ರಾಣಶಾರೀರಃ' ಎಂಬ ಪದಕ್ಕೆ ಬಲಿಷ್ಠವಾದ ಶರೀರವುಳ್ಳವನು ಎಂಬರ್ಥವನ್ನು ಹೇಳಬಹುದು. ಇವೇ ಮೊದಲಾದ ಶ್ರುತಿಗಳ ವಿರೋಧವೂ ಬರುತ್ತದೆ.

ಶೈವರು 'ಅನುಪಪತ್ತೇಃ' ಇತ್ಯಾದಿ ಸೂತ್ರಗಳನ್ನು ಮತ್ತೊಂದು ಅಧಿಕರಣವೆನ್ನುತ್ತಾರೆ. ಹಾಗಾದರೆ ಇಲ್ಲಿ ಹೇಳಲ್ಪಟ್ಟ 'ಅರ್ಭಕೌಕಸ್ತ್ವ' ಹಾಗೂ 'ಸಂಭೋಗಪ್ರಾಪ್ತಿತ್ವ' ಮೊದಲಾದವುಗಳ ಶಂಕೆಗೆ ಸಮಾಧಾನವನ್ನೇ ಹೇಳಿದಂತಾಗುವುದಿಲ್ಲ. ಆದ್ದರಿಂದ ಸಿದ್ಧಾಂತವೇ ಹುಟ್ಟುವುದಿಲ್ಲ. ಮತ್ತು ಅಣೀಯಸ್ತ್ವಾದಿಗಳಿಗೆ ಸಮಾಧಾನವನ್ನು ಶೈವರು ಹೇಳಿರುವುದಿಲ್ಲವೆಂಬುದನ್ನು ಗಮನಿಸಬೇಕು.

**प्रकाशः** – यदपि ''अनुपपत्तेस्तु'' इत्यादिषट्सूत्रीमधिकरणान्तरं मत्वा,

पतिं विश्वस्यात्मेश्वर ऽ शाश्वत ऽ शिवमच्युतम् ।
नारायणं महाज्ञेयं ...................... ।।

इत्याद्युदाहृत्य, नारायणशब्दवाच्यश्चतुर्मूत्यात्मा विष्णुश्शिवो वेति संशये,

''समुद्रेऽन्तं विश्वशम्भुवं'' इति समुद्रान्तस्स्थत्वादिविष्णुलिङ्गनामच्युतादिश्रुतीनां सत्त्वेन विष्णुरिति प्राप्ते,

''पशूनां पतये वृक्षाणां पतये जगतां पतये'' ''विश्वाधिको रुद्रो महर्षिः'' इत्यादौ शिवे प्रसिद्धस्य विश्वपतित्वादेर्विष्णावनुपपत्तेः शिव एवेति सिद्धान्त इति,

'ಅನುಪಪತ್ತೇಃ' ಎಂಬ ಸೂತ್ರದಿಂದ ಪ್ರಾರಂಭಿಸಿ ಆರು ಸೂತ್ರಗಳು ಒಂದೇ ಅಧಿಕರಣವಾಗಿವೆಯೆಂದು ಶೈವರು ಹೇಳುತ್ತಾರೆ. ಅದರಲ್ಲಿ 'ಪತಿಂ ವಿಶ್ವಸ್ಯಾತ್ಮೇಶ್ವರ ಽ ಶಾಶ್ವತ ಽ ಶಿವಮಚ್ಯುತಮ್ । ನಾರಾಯಣಂ

ಮಹಾಜ್ಞೇಯಂ ...... ॥ '' ಇತ್ಯಾದಿ ವಾಕ್ಯಗಳನ್ನು ವಿಷಯವಾಕ್ಯಗಳೆನ್ನುತ್ತಾರೆ. ಇಲ್ಲಿರುವ ನಾರಾಯಣ ಮೊದಲಾದ ಶಬ್ದಗಳಿಂದ ವಾಚ್ಯನಾದವನು ಮೂರ್ತಿಸ್ವರೂಪನಾದ ವಿಷ್ಣುವೋ ಅಥವಾ ಶಿವನೋ ? ಎಂದು ಸಂಶಯ.

'ಸಮುದ್ರೇಂತಂ ವಿಶ್ವಶಂಭುವಂ' ಎಂಬುದಾಗಿ ಸಮುದ್ರಾಂತಸ್ಥತ್ವ ಲಿಂಗಗಳು ಕೇಳಿಸುತ್ತಿರುವುದರಿಂದ ಅಚ್ಯುತಾದಿ ಶ್ರುತಿಗಳಿರುವುದರಿಂದ ವಿಷ್ಣುವೇ ನಾರಾಯಣಾದಿ ಶಬ್ದಗಳಿಂದ ವಾಚ್ಯನಾಗಿದ್ದಾನೆಂದು ಪೂರ್ವಪಕ್ಷ. ''ಪಶೂನಾಂ ಪತಯೇ ವೃಕ್ಷಾಣಾಂ ಪತಯೇ ಜಗತಾಂ ಪತಯೇ'' ''ವಿಶ್ವಾಧಿಕೋ ರುದ್ರೋ ಮಹರ್ಷಿಃ'' ಎಂಬಲ್ಲಿ ವಿಶ್ವಪತಿತ್ವವು ಶಿವನಲ್ಲೇ ಪ್ರಸಿದ್ಧವಾಗಿವೆ. ಇಂತಹ ವಿಶ್ವಪತಿತ್ವವು ವಿಷ್ಣುವಿನಲ್ಲಿ ಕೂಡುವುದಿಲ್ಲ. ಆದರೆ ಶಿವನೇ ಪ್ರತಿಪಾದ್ಯನೆಂದು ಸಿದ್ಧಾಂತ.

**प्रकाशः** – तदपि न, विष्णौ निरूढश्रुतिलिङ्गानां बाहुल्येन संशयादेरयोगात् । विश्वपतित्वादेः पालकत्वेन प्रसिद्धे विष्णौ

''न ते विष्णो जायमानः''

य उ त्रिधातु पृथिवीमुत द्यामेको दाधार भुवनानि विश्वा ।
सप्तार्धगर्भा भुवनस्य रेतो विष्णोस्तिष्ठन्ति प्रदिशा विधर्मणि ।।

इत्यादिश्रुतिभिः ''श्रियः पतिर्यज्ञपतिः प्रजापतिः गिरां पतिर्लोकपतिः'' इत्यादिस्मृत्या विष्णोरेव प्रसिद्धेः ।

ಇದೂ ಸಹ ತಪ್ಪು. ಏಕೆಂದರೆ ವಿಷ್ಣುವಿನಲ್ಲಿ ನಿರೂಢವಾದ ಅನೇಕ ಶ್ರುತಿಗಳು ಹಾಗೂ ಅನೇಕ ಲಿಂಗಗಳು ಇರುವುದರಿಂದ ಸಂಶಯವು ಹುಟ್ಟಲು ಸಾಧ್ಯವೇ ಇಲ್ಲ. ವಿಶ್ವಪತಿತ್ವ ಮೊದಲಾದ ಧರ್ಮಗಳೂ ಸಹ ಜಗತ್ಪಾಲಕನೆಂದು ಪ್ರಸಿದ್ಧನಾದ ವಿಷ್ಣುವಿನಲ್ಲೇ ಕೂಡುತ್ತವೆ.

ಅದು ಹೀಗೆ -

'ನ ತೇ ವಿಷ್ಣೋ ಜಾಯಮಾನಃ' ಎಂಬ ಜಗತ್ಪಾಲಕತ್ವವು ವಿಷ್ಣುನಲ್ಲಿಯೇ ಪ್ರಸಿದ್ಧವಾಗಿವೆ.

**प्रकाशः** – ''विश्वाधिकः'' इत्यादिनिरवकाशचतुर्मुखजनकत्वलिङ्गेन रुद्रशब्दस्य विष्णावेवोपपत्तेः ।

अस्य स्वपक्षसाधकत्वे ''अन्तस्तद्धर्मोपदेशात्'' इत्यादाविव समन्वीयमानं लिङ्गं नाम वा निर्दिश्य तद्धर्मोपदेशादित्यन्वयमुखेन वचनं विना, व्यतिरेकमुखेन सूत्रविन्यासायोगादिति दिक् ।।

ಪರಿಪೂರ್ಣಚಂದ್ರಿಕಾ

ಮತ್ತು "ವಿಶ್ವಾಧಿಕಃ" ಇತ್ಯಾದಿಯಾದ ಚತುರ್ಮುಖಜನಕತ್ವವೆಂಬ ನಿರವಕಾಶಲಿಂಗದ ಬಲದಿಂದ ರುದ್ರ ಶಬ್ದವು ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ.

ಮತ್ತು 'ಯಾವ ರೀತಿಯಾಗಿ "ಅಂತಸ್ತದ್ಧರ್ಮೋಪದೇಶಾತ್" ಎಂಬ ಸೂತ್ರದಲ್ಲಿ ಮೊದಲು ಸ್ವಪಕ್ಷಸಾಧಕವನ್ನು ಹೇಳಿದ್ದಾರೋ ಅದರಂತೆ ಇಲ್ಲಿಯೂ ಸ್ವಪಕ್ಷಸಾಧಕವನ್ನು ಹೇಳಿ ಅನಂತರ ಬಾಧಕವನ್ನು ಪರಿಹರಿಸಬೇಕು. ಆದರೆ "ಅನುಪಪತ್ತೇಸ್ತು" ಎಂಬುದಾಗಿ ಒಂದೇ ಬಾರಿಗೆ ಬಾಧಕವನ್ನು ಹೇಳುವುದು ತಪ್ಪಾಗುತ್ತದೆ. ಸಮನ್ವಯ ಮಾಡಬೇಕಾದ ಲಿಂಗವನ್ನೋ ಅಥವಾ ನಾಮವನ್ನು ನಿರ್ದೇಶ ಮಾಡಿ 'ತದ್ಧರ್ಮೋಪಪತ್ತೇಃ' ಎಂಬುದಾಗಿ ಸ್ವಪಕ್ಷಸಾಧಕವಾದ ಮಾತನ್ನು ಹೇಳದೆ ವ್ಯತಿರೇಕ ಮುಖದಿಂದ ಸೂತ್ರವನ್ನು ವಿನ್ಯಾಸ ಮಾಡಿದ್ದು ಅಯುಕ್ತವಾಗುತ್ತದೆ. ಈ ದೋಷಗಳೆಲ್ಲವೂ ಕೇವಲ ದಿಕ್‌ಪ್ರದರ್ಶನವಾಗಿದೆ. ಇನ್ನೂ ಹೆಚ್ಚಿನ ದೋಷಗಳನ್ನು ಸ್ವತಃ ಊಹಿಸಿಕೊಳ್ಳಬೇಕು.

**गुरुराजीयम् – श्रुत्यनुगमायेति** ।। सर्वं खल्विदं ब्रह्मेत्यादिश्रुत्याऽनुगमायेत्यर्थः ।। **सौत्रेति** ।। गत्यन्तराभाव एव तत्कल्पनं युक्तम् । प्रकृते चास्मद्रीत्या प्रकारान्तरेणोपपत्तिरिति भावः ।

किञ्च यद्यत्र प्रकरणेऽणुत्वं महत्त्वं चोच्येत तदा विरोधे प्राप्ते स्वाभाविकत्वौपाधिकत्वाभ्यां विरोधः परिहर्तव्यः स्यात् । न चाणुत्वमहत्त्वप्रतिपादनमस्ति । नच ज्यायानित्यनेनैव महत्त्वं प्रतिपादितमिति वाच्यम् । तस्य प्राशस्त्यप्रतिपादकत्वेन महत्त्वाप्रतिपादकत्वादित्याह – **किञ्चेति** ।।




ರಾಮಾನುಜರ ಸೂತ್ರಾರ್ಥವೂ ಸಹ ತಪ್ಪಿದೆ. ಸರ್ವಾತ್ಮಕತ್ವವನ್ನು ಸಾಧ್ಯವೆನ್ನುತ್ತಾರೆ. ಆದರೆ ಸರ್ವಾತ್ಮಕತ್ವವನ್ನು ಪ್ರತಿಪಾದನೆ ಮಾಡುವುದಕ್ಕಾಗಿ 'ಸರ್ವಂ' ಎಂದೇ ಸೂತ್ರದಲ್ಲಿ ನಿರ್ದೇಶಿಸಬೇಕು. ಹಾಗೇ ನಿರ್ದೇಶಿಸುವುದರಿಂದ ಶ್ರುತಿಯ ಆನುಗುಣ್ಯವೂ ಸಹ ಬರುತ್ತದೆ. ಏಕೆಂದರೆ 'ಸರ್ವತ್ರ' ಎಂಬ ಪದದಿಂದ ಸರ್ವಾತ್ಮಕತ್ವ ತಿಳಿಯುವುದಿಲ್ಲ. ಕೇವಲ ಸರ್ವಗತತ್ವ ತಿಳಿಯುತ್ತದೆ. ಮತ್ತು ಸೂತ್ರದಲ್ಲಿರುವ ಪ್ರಸಿದ್ಧಶಬ್ದಕ್ಕೆ ಕಾರಣವಿಲ್ಲದೆ ಭಾವಪ್ರಧಾನವಾಚಿತ್ವವನ್ನು ಒಪ್ಪಬೇಕಾಗುತ್ತದೆ.

ಮತ್ತು ರಾಮಾನುಜರು 'ಅರ್ಭಕೌಕಸ್ತ್ವಾತ್' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸಿದ್ದಾರೆ - "ಏಷ ಮೇ ಆತ್ಮಾಽಂತರ್ಹೃದಯೇಽಣೀಯಾನ್ ವ್ರೀಹೇರ್ವಾ ಯವಾದ್ವಾ ಸರ್ಷಪಾದ್ವಾ" ಎಂಬಲ್ಲಿ ಹೇಳಲ್ಪಟ್ಟ ಅಣೀಯಸ್ತ್ವವು ಔಪಾಧಿಕವಾಗಿದೆ. ಏಕೆಂದರೆ ಹೃದಯವೆಂಬ ಉಪಾಧಿಯನ್ನು ಹೇಳಿರುವುದರಿಂದ ಆದರೆ 'ಜ್ಯಾಯಾನ್ ಪೃಥಿವ್ಯಾಃ'

ಎಂಬಲ್ಲಿ ಹೇಳಲ್ಪಟ್ಟ ಮಹತ್ತ್ವವು ಸ್ವಾಭಾವಿಕವಾಗಿದೆ. ಏಕೆಂದರೆ ಇಲ್ಲಿ ಯಾವುದೇ ವಿಧವಾದ ಉಪಾಧಿಯನ್ನು ಹೇಳಿರುವುದಿಲ್ಲವೆಂದು

ಇದು ತಪ್ಪು. 'ಹೃದ್ಯಪೇಕ್ಷಯಾ' ಎಂಬಲ್ಲಿ ಹೃದಯವು ಅಂಗುಷ್ಠಪ್ರಮಾಣವುಳ್ಳದ್ದಾಗಿದೆಯೆಂದು ನೀವೇ ಒಪ್ಪಿರುತ್ತೀರಿ? ಹೀಗಿರುವಾಗ ಪರಮಾತ್ಮನು ಸರ್ಷಪಕ್ಕಿಂತ ಅಣುವಾಗಿದ್ದಾನೆನ್ನಲು ಇಂತಹ ಹೃದಯವು ಉಪಾಧಿಯಾಗುವುದಿಲ್ಲ.





ಟೀಕೆಯ ಕಠಿಣಪದಾರ್ಥ

## तात्पर्यचन्द्रिका

**टीकाक्षरार्थस्तु** – पूर्वं चक्षुर्मयत्वादिकमन्तर्यामिणि अङ्गीकृत्याल्पौकस्त्वं न युक्तमित्युक्तम् । इदानीं जीवधर्मत्वात्तस्य तदपि न युक्तमित्याह – चक्षुर्मयत्वाद्ययोगाच्चेति ।

**सर्वगतत्वानतिरिक्तत्वेनेति** । "अत सातत्यगमने" इति धातोः, "सन्ततो ह्यत उच्यते" इति वचनाच्च अतत्वं सर्वगतत्वानतिरिक्तमित्यर्थः ।

**व्रीह्यादिगतजीवान्तरवदिति** । स्वर्गाच्युतः स्थूलशरीरसम्बन्धार्थं पित्रादिशरीर प्रवेशायान्यकर्मनिर्मितव्रीह्यादिशरीरगतो जीवो जीवान्तरशब्दार्थ ।

**सर्वगततया सर्वजीवाग्रहणापातादिति** । सर्वजीवानां कर्मत्वाभावे सर्वगतवाक्ये सर्वगततया ये सर्वजीवाः प्रकृतास्तेषां "स य एवमेतमात्मानं" इति कर्मीभूतात्मविशेषणेनैतच्छब्देन ग्रहणं न स्यात् । ग्रहणे च सर्वजीवानां कर्मत्वापत्तेः । तथा चैतच्छब्दस्य प्रकृतसर्वपरत्वसम्भवे तदेकदेशपरत्वम-युक्तमित्यर्थः ।

यद्वा – 'एतं' इत्यनेन सर्वजीवानामनिर्देशे एतच्छब्दस्वारस्यार्थं सर्वगतवाक्येऽपि सर्वगततया सर्वेषां ग्रहणं न स्यात् । तथा च सर्वे जीवाः सर्वगता इति पूर्वपक्षिणा यद्गृहीतं तद्धीयेतेत्यर्थः ।

तथा प्रतीत्यभावेनेति । कर्मीभूतात्मविशेषणेन चक्षुर्मयत्वादिना जीवसामान्यलिङ्गेन जीवमात्रस्यैव प्रतीतेरित्यर्थः । न केवलं कर्मत्वं जीवविशेषस्येत्ययुक्तम्, किन्तु कर्तृत्वमपि, ''योऽवगुरेत् तं शतेन यातयेत्'' इत्यत्रेव ''यः शंसति अस्य वेदा दुग्धदोहा भवन्ति'' इति सामान्येनैव प्रत्यवायश्रवणात् ।

अन्यथा केषाञ्चित्प्रत्यवायो न स्यादित्यपि द्रष्टव्यम् । असदपरोक्षतया प्रतीयते वाच्यत्वात् इति । धर्माधर्मादिरपि ईश्वराद्यपरोक्षत्वान्न तत्र व्यभिचार इति भावः ।।

।। इति श्रीब्रह्मण्यतीर्थपूज्यश्रीपादशिष्यव्यासतीर्थविरचिता तात्पर्यचन्द्रिकायां सर्वगतत्वाधिकरणं सम्पूर्णम् ।।

ಅನುವಾದ - ಟೀಕೆಯ ಕಠಿಣಪದಾರ್ಥ ಹೀಗಿದೆ - ಹಿಂದೆ ಚಕ್ಷುರ್ಮಯತ್ವಾದಿಗಳನ್ನು ಅಂತರ್ಯಾಮಿಯಲ್ಲಿ ಅಂಗೀಕರಿಸಿ ಅಲೌಕಸ್ತ್ವವು (ಅಲ್ಪಸ್ಥಾನಸ್ಥಿತತ್ವವು) ಕೂಡುವುದಿಲ್ಲವೆಂದು ಹೇಳಿದ್ದರು. ಪ್ರಕೃತ ಚಕ್ಷುರ್ಮಯತ್ವಾದಿಗಳೂ ಸಹ ಜೀವಧರ್ಮವಾದ್ದರಿಂದ ಅಂತರ್ಯಾಮಿಯಲ್ಲಿ ಕೂಡುವುದಿಲ್ಲವೆಂದು ಹೇಳುತ್ತಿದ್ದಾರೆ ''ಚಕ್ಷುರ್ಮಯತ್ವಾದ್ಯಯೋಗಾಚ್ಚ'' ಇತ್ಯಾದಿ ವಾಕ್ಯಗಳಿಂದ.

''ಸರ್ವಗತತ್ವಾನತಿರಿಕ್ತತ್ವಾನ್'' ಎಂಬ ಮಾತು ಎರಡನೇ ಸೂತ್ರ ವ್ಯಾಖ್ಯಾನದಲ್ಲಿದೆ. ''ವಿವಕ್ಷಿತಗುಣೋಪಪತ್ತೇಶ್ಚ'' ಎಂಬ ಸೂತ್ರದಲ್ಲಿ 'ಅಶ್ರುತತ್ವ ಅಮೃತತ್ವ' ಮೊದಲಾದ ಧರ್ಮಗಳನ್ನು ಆಚಾರ್ಯರು ಹೇಳಿದ್ದಾರೆ. ಆದರೆ 'ಸ ಯೋಽತೋ ಅಶ್ರುತೋ' ಎಂಬಲ್ಲಿ ಮೊದಲಿರುವ 'ಅತಃ' ಎಂಬುದರಿಂದ ತಿಳಿಯುವ 'ಅತತ್ವ' ಧರ್ಮವನ್ನೇ ಆಚಾರ್ಯರು ಹೇಳಿಲ್ಲವಲ್ಲ? ಎಂಬ ಪ್ರಶ್ನೆಗೆ ಟೀಕೆಯಲ್ಲಿ ಉತ್ತರಿಸಿದ್ದಾರೆ. 'ಅತತ್ವ' ಧರ್ಮವೆಂದರೆ ಸರ್ವಗತತ್ವವೇ ಆಗುತ್ತದೆ. ಆವಾಗ ಸರ್ವಗತತ್ವವನ್ನು ಸಾಧನೆ ಮಾಡಲು ಈ ಅತತ್ವವನ್ನು ಹೇತುವನ್ನಾಗಿ ಮಾಡಿದರೆ ಸಾಧ್ಯಾವೈಶಿಷ್ಟ್ಯದೋಷವು ಬರುತ್ತದೆ. 'ಅತ ಸಾತತ್ಯಗಮನೇ' ಎಂಬ ಧಾತುವಿನಿಂದ 'ಅತಃ' ಎಂಬ ಪದವು ನಿಷ್ಪನ್ನವಾಗಿದೆ. 'ಸಂತೋ ಹತ ಉಚ್ಯತೇ' ವಚನವೂ ಸಹ ಅತತ್ವವು ಸರ್ವಗತತ್ವಕ್ಕಿಂತ ಅನತಿರಿಕ್ತವಾಗಿದೆಯೆನ್ನಲು ಆಧಾರವಾಗಿದೆ.

'ಅನುಪಪತ್ತೇಸ್ತು ನ ಶಾರೀರಃ' ಎಂಬ ಸೂತ್ರದ ವ್ಯಾಖ್ಯಾನದಲ್ಲಿ 'ವ್ರೀಹ್ಯಾದಿಗತಜೀವಾಂತರವತ್'

ಎಂಬ ಟೀಕಾವಾಕ್ಯವಿದೆ. ಒಬ್ಬ ಜೀವನಿಗೆ ಸಕಲಹೃದಯಗತತ್ವವನ್ನು ಹೇಳಲು ಹೇಗೆ ಸಾಧ್ಯ? ಹಾಗೇನಾದರೂ ಹೇಳಿದರೆ ಎಲ್ಲರ ದೇಹದಲ್ಲಿ ಉಂಟಾಗುವ ಸುಖದುಃಖಗಳ ಅನುಭವವು ಒಬ್ಬನೇ ಜೀವನಿಗೆ ಬರಬೇಕಾದೀತು. ವ್ರೀಹಿಯಲ್ಲಿ ಸೇರಿಕೊಂಡು ಸ್ವರ್ಗದಿಂದ ಜೀವನು ಪಿತೃಶರೀರವನ್ನು ಸೇರುವಂತೆ ಒಬ್ಬ ಜೀವನು ಮತ್ತೊಬ್ಬನ ಶರೀರದಲ್ಲಿ ಇರಬಹುದೆಂದು ಪೂರ್ವಪಕ್ಷ ಮಾಡುವ ವಾಕ್ಯವಾಗಿದೆ. ಟೀಕೆಯಲ್ಲಿರುವ 'ವ್ರೀಹ್ಯಾದಿಗತಜೀವಾಂತರವತ್' ಎಂಬಲ್ಲಿ ಜೀವಾಂತರ ಶಬ್ದಕ್ಕೆ ಹೀಗರ್ಥ - ಸ್ವರ್ಗದಿಂದ ಸ್ಥಿತನಾದ ಜೀವನು ಸ್ಥೂಲ ಶರೀರ ಸಂಬಂಧಕ್ಕೋಸ್ಕರ ಪಿತೃವಿನ ಶರೀರವನ್ನು ಪ್ರವೇಶಿಸುವುದಕ್ಕಾಗಿ ಅನ್ಯಕರ್ಮದಿಂದ ನಿರ್ಮಿತವಾದ ವ್ರೀಹ್ಯಾದಿಶರೀರದಲ್ಲಿರುವ ಕರ್ಮಿಯಾದ ಜೀವನು ಜೀವಾಂತರಶಬ್ದದ ಅರ್ಥನಾಗಿದ್ದಾನೆ. ಸಕಲಜೀವರಿಗೆ ಪರಮತ್ವವನ್ನು ಹೇಳದಿದ್ದರೆ ಸರ್ವಗತವಾಕ್ಯದಲ್ಲಿ ಸಕಲಜೀವರು ಸರ್ವಗತನೆಂದು ಪ್ರಕೃತನಾಗಿದ್ದಾನೆ. ಅವರು 'ಸ ಯ ಏವ ಮೇತ ಆತ್ಮಾನಾಂ' ಎಂಬುದಾಗಿ ಕರ್ಮಿಯಾದ ಆತ್ಮನಿಗೆ ವಿಶೇಷಣರಾಗಿರವುದರಿಂದ 'ಏತತ್' ಶಬ್ದದಿಂದ ಗ್ರಹಣ ಮಾಡದಿರಬೇಕಾದೀತು. ಒಂದು ವೇಳೆ ಸಕಲಜೀವರನ್ನು ಗ್ರಹಣ ಮಾಡಿದರೆ ಸಕಲಜೀವರುಗಳು ಉಪದೇಶದಲ್ಲಿ ಕರ್ಮೀಭೂತರಾಗಬೇಕಾದೀತು. ಆದ್ದರಿಂದ 'ಏತತ್' ಶಬ್ದಕ್ಕೆ ಪ್ರಕೃತರಾದ ಸಕಲಜೀವರನ್ನು ಸ್ವೀಕರಿಸಲು ಬರುವಾಗ ತದೇಕದೇಶನಾದ ಒಬ್ಬ ಜೀವನನ್ನು ಗ್ರಹಿಸುವುದು ಅಯುಕ್ತವಾಗುತ್ತದೆ.

ಅಥವಾ 'ಏತಂ' ಎಂಬ ವಾಕ್ಯದಲ್ಲಿಯೂ ಸಕಲ ಜೀವರನ್ನು ನಿರ್ದೇಶ ಮಾಡದೆ ಒಬ್ಬ ಜೀವನನ್ನೇ ನಿರ್ದೇಶಿಸುವುದಾದರೆ 'ಏತತ್' ಶಬ್ದದ ಸ್ವಾರಸ್ಯಕ್ಕೋಸ್ಕರ ಸರ್ವಗತವಾಕ್ಯದಲ್ಲಿಯೂ ಸರ್ವಗತರಾದ ಸಕಲಜೀವರನ್ನು ಗ್ರಹಣ ಮಾಡಿರುವುದಿಲ್ಲ. ಒಬ್ಬನೇ ಜೀವನನ್ನು ಗ್ರಹಣ ಮಾಡಿದ್ದಾರೆಂದು ಆಗಬೇಕಾದೀತು. ಆದ್ದರಿಂದ ಸಕಲಜೀವರೂ ಸರ್ವಗತರಾಗಿದ್ದಾರೆಂಬ ಪೂರ್ವಪಕ್ಷಿಯ ಅಭಿಪ್ರಾಯವನ್ನು ಬಿಡಬೇಕೆಂದು ಅಭಿಪ್ರಾಯ.

'ತಥಾ ಪ್ರತೀತ್ಯಭಾವೇನ' ಎಂದು ಟೀಕೆಯಲ್ಲಿದೆ. ಕರ್ಮವೆನಿಸಿದ ಆತ್ಮನಿಗೆ ವಿಶೇಷಣವಾಗಿ ಚಕ್ಷುರ್ಮಯತ್ವಾದಿಗಳನ್ನು ಹೇಳಲಾಗಿದೆ. ಆದರೆ ಈ ಚಕ್ಷುರ್ಮಯತ್ವಾದಿಗಳು ಜೀವ ಸಾಮಾನ್ಯರ ಲಿಂಗವಾದ್ದರಿಂದ ಒಬ್ಬನೇ ಜೀವನನ್ನು ಸ್ವೀಕರಿಸಲು ಕಾರಣವಾಗುವುದಿಲ್ಲ.

ಜೀವ ವಿಶೇಷನಿಗೆ ಕರ್ತೃತ್ವವನ್ನು ಹೇಳಿದಾಗ ಜೀವವಿಶೇಷನಲ್ಲಿ ಕರ್ಮತ್ವವು ಕೂಡುವುದಿಲ್ಲವೆಂದು ಇಲ್ಲಿಯ ತನಕ ಉಪಪಾದಿಸಿದರು. ಈಗ ಕರ್ತೃತ್ವವೂ ಸಹ ಜೀವವಿಶೇಷನಲ್ಲಿ ಕೂಡುವುದಿಲ್ಲವೆಂದು ಹೇಳುತ್ತಿದ್ದಾರೆ. ''ಯೋऽವಗುರೇತ್ ತಂ ಶತೇನ ಯಾತಯೇತ್'' 'ಯಾರು ಅವಮಾನ ಮಾಡುತ್ತಾನೋ ಅವನನ್ನು ನೂರು ಯಾತನೆಯಿಂದ ದಂಡಿಸಬೇಕು' ಎಂದು ಹೇಳಲಾಗಿದೆ. ಇದರಂತೆ ''ಯಃ ಶಂಸತಿ ಅಸ್ಯ ವೇದಾ ದುಗ್ಧದೋಹಾ ಭವಂತಿ'' ಎಂಬಲ್ಲಿಯೂ ಸಾಮಾನ್ಯವಾಗಿಯೇ ಪ್ರತ್ಯವಾಯವು ಕೇಳಿಸುತ್ತಿದೆ. ಹೀಗೆ ಹೇಳದಿದ್ದರೆ ಯಾರಿಗೂ ಪ್ರತ್ಯವಾಯವೇ ಬಾರದಿರಬೇಕಾಗುತ್ತದೆ.

ಟೀಕೆಯಲ್ಲಿ 'ಅಸದಪರೋಕ್ಷತಯಾ ಪ್ರತೀಯತೇ ವಾಚ್ಯತ್ವಾತ್' ಎಂದಿದೆ. ಧರ್ಮ ಹಾಗೂ ಅಧರ್ಮಗಳೆಲ್ಲವೂ ಈಶ್ವರನ ಅಪರೋಕ್ಷಕ್ಕೆ ವಿಷಯವಾದ್ದರಿಂದ ವ್ಯಭಿಚಾರಕ್ಕೆ ಅವಕಾಶವಿಲ್ಲವೆಂದು ಅಭಿಪ್ರಾಯ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಸರ್ವಗತತ್ವಾಧಿಕರಣವು ಸಂಪೂರ್ಣವಾಯಿತು.

**प्रकाशः –**

ननु 'नच तल्लिङ्गमन्तर्यामिविषयम्' इति चक्षुर्मयत्वादेरन्यथासिद्धौ शङ्कितायां तत्समाधानमकृत्वाऽल्पौकस्त्वायोगमभिधाय व्यवधानेन तदुक्तिरयुक्तेत्यत आह – **पूर्वमिति** । तात्पर्यं तु प्रागेव विवृतमिति भावः ।

ವಿವರಣೆ - ಗ್ರಂಥದಲ್ಲಿ ಟೀಕೆಯ ಕಠಿಣಪದದ ಅರ್ಥಗಳನ್ನು ಬರೆಯುತ್ತಿದ್ದಾರೆ. ಟೀಕೆಯಲ್ಲಿ 'ನಚ ತಲ್ಲಿಂಗಮಂತರ್ಯಾಮಿವಿಷಯಮ್' ಎಂಬುದಾಗಿ ಚಕ್ಷುರ್ಮಯತ್ವಾದಿ ಲಿಂಗಗಳು ಅನ್ಯಥಾ ಸಿದ್ಧವಾಗಿವೆಯೆಂದು ಮೊದಲು ಶಂಕಿಸಿದರು. ಆದರೆ ಮುಂದೆ ಇದಕ್ಕೆ ಸಮಾಧಾನವನ್ನು ಹೇಳದೆ ಅಲ್ಪೌಕಸ್ತ್ವವು ಅಂತರ್ಯಾಮಿಯಲ್ಲಿ ಕೂಡುವುದಿಲ್ಲವೆಂದು ಸಮಾಧಾನವನ್ನು ಹೇಳಿದ್ದಾರೆ. ಹೀಗೆ ವ್ಯವಧಾನದಿಂದ ಚಕ್ಷುರ್ಮಯತ್ವಾದಿಗಳ ಅನ್ಯಥಾಸಿದ್ಧಿಯನ್ನು ಪರಿಹರಿಸಿದ್ದಾರೆ ಇದು ತಪ್ಪಲ್ಲವೇ? ಎಂಬ ಪ್ರಶ್ನೆಗೆ 'ಪೂರ್ವಂ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಮೊದಲು ಅಂಗೀಕಾರವಾದವನ್ನು ಮಾಡಿ ಚಕ್ಷುರ್ಮಯತ್ವಾದಿಗಳನ್ನು ಅಂತರ್ಯಾಮಿಯಲ್ಲಿ ಒಪ್ಪಿದ್ದಾರೆ. ಅನಂತರ ಜೀವಧರ್ಮವಾದ್ದರಿಂದ ಆ ಚಕ್ಷುರ್ಮಯತ್ವ ಧರ್ಮವೇ ಅಂತರ್ಯಾಮಿಯಲ್ಲಿ ಕೂಡುವುದಿಲ್ಲವೆಂದು ಉಪಪಾದಿಸುತ್ತಿದ್ದಾರೆ. ಇದರ ತಾತ್ಪರ್ಯವನ್ನು ಈ ಹಿಂದೆ ವಿವರಿಸಿದ್ದಾಗಿದೆ.

**प्रकाशः** – विवक्षितसूत्रे टीकायां ''अतत्वस्यादिमत्वेऽपि तस्य सर्वगतत्वानतिरिक्तत्वेन साध्यत्वादश्रुतत्वादीनामेव ग्रहणम्'' इत्युक्तम् । तत्रातत्वस्य सर्वगतत्वरूपत्वं व्यनक्ति – **अतेति** । सातत्यागमनार्थादनधातोरचि कृते 'अतः' इति भवति ।

देशतः कालतश्चैव गुणतश्चापि पूर्तितः ।
अत इत्युच्यते विष्णुः सन्ततो ह्यत उच्यते ॥

इत्यैतरेयभाष्योक्तवचनाच्चेत्यर्थः ।

"ವಿವಕ್ಷಿತ ಗುಣೋಪಪತ್ತೇಶ್ಚ" ಎಂಬ ಟೀಕೆಯಲ್ಲಿ "ಅತತ್ವಸ್ಯಾದಿಮತ್ವೇऽಪಿ ತಸ್ಯ ಸರ್ವಗತತ್ವಾನತಿರಿಕ್ತತ್ವೇನ ಸಾಧನತ್ವಾದಶ್ರುತತ್ವಾದೀನಾಮೇವ ಗ್ರಹಣಮ್" ಎಂಬ ಮಾತಿದೆ. ಅಂದರೆ "ಸ ಯೋ ತೋ ಶ್ರುತಃ" ಎಂಬ ಶ್ರುತಿಯಲ್ಲಿ 'ಅತಃ' ಎಂಬ ಶಬ್ದದಿಂದ ಅತತ್ವಧರ್ಮವು ಕೇಳಿಸುತ್ತಿದೆ. ಅನಂತರ ಅಶ್ರುತತ್ವಾದಿ ಧರ್ಮಗಳು ಕೇಳಿಸುತ್ತಿವೆ. ಅತತ್ವಧರ್ಮವು ಸರ್ವಗತತ್ವಕ್ಕಿಂತ ಬೇರೆಯಲ್ಲದ್ದರಿಂದ ಸಾಧ್ಯರೂಪವಾಗಿದೆ ಎಂಬ ಅಭಿಪ್ರಾಯದಿಂದ ಅಶ್ರುತತ್ವಾದಿ ಗುಣಗಳನ್ನೇ ಆಚಾರ್ಯರು ಸ್ವೀಕರಿಸಿದ್ದಾರೆ.

ಅತತ್ವವು ಸರ್ವಗತತ್ವರೂಪವಾಗಿದೆಯೆಂಬುದನ್ನು ಪ್ರಕೃತ 'ಅತಃ' ಎಂಬುದರಿಂದ ವ್ಯಾಖ್ಯಾನಿಸುತ್ತಿದ್ದಾರೆ. ಸಾತತ್ಯಗಮನ ಎಂಬ ಅರ್ಥವಿರುವ 'ಅತ' ಧಾತುವಿಗೆ 'ಅಚ್' ಪ್ರತ್ಯಯವು ಬಂದಾಗ 'ಅತಃ' ಎಂಬ ರೂಪವು ನಿಷ್ಪನ್ನವಾಗುತ್ತದೆ.

ದೇಶತಃ ಕಾಲತಶ್ಚೈವ ಗುಣತಶ್ಚಾಪಿ ಪೂರ್ತಿತಃ।
ಅತ ಇತ್ಯುಚ್ಯತೇ ವಿಷ್ಣುಃ ಸಂತತೋ ಹ್ಯತ ಉಚ್ಯತೇ ॥

'ದೇಶತಃ ಕಾಲತಃ ಗುಣತಃ ಪೂರ್ಣನಾದ ಪರಮಾತ್ಮನು ಅತಃ ಶಬ್ದದಿಂದ ವಾಚ್ಯನಾಗಿದ್ದಾನೆ' ಎಂಬ ಐತರೇಯ ಭಾಷ್ಯದ ಆಚಾರ್ಯರ ಮಾತು ಈ ವಿಷಯದಲ್ಲಿ ಆಧಾರವಾಗಿದೆ.

**प्रकाशः** – ननु व्रीह्यभिमानिजीवे कुट्टनभर्जनादिना दुःखभावात् कथं तद्दृष्टान्त इत्यत आह – **स्वर्गादिति** ।

ವ್ರೀಹಿಗೆ ಅಭಿಮಾನಿಯಾದ ಜೀವನಿಗೆ ವ್ರೀಹಿಯನ್ನು ಕುಟ್ಟುವುದರಿಂದ ಅಥವಾ ಹುರಿಯುವುದರಿಂದ ದುಃಖವಾಗುವಿಕೆಯು ಕಂಡಿದೆ. ಹೀಗಿರುವಾಗ ಇದು ಹೇಗೆ ದೃಷ್ಟಾಂತವಾಗುತ್ತದೆ ? ಎಂಬ ಪ್ರಶ್ನೆಗೆ 'ಸ್ವರ್ಗಾತ್' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ವ್ರೀಹಿಗೆ ಅಭಿಮಾನಿಯಾದ ಜೀವನನ್ನು ಇಲ್ಲಿ ವಿವಕ್ಷಿಸಬಾರದು. ಹೊರತಾಗಿ ಸ್ವರ್ಗದಿಂದ ಬಿದ್ದು ಪಿತೃಶರೀರವನ್ನು ಪ್ರವೇಶಿಸುವ ಮತ್ತೊಬ್ಬ ಜೀವನೆಂದು ತಿಳಿಯಬೇಕು.

**प्रकाशः** – कर्मकर्तृसूत्रे ''न चैकस्सर्वगतो जीवस्सर्वगतं जीवान्तरं शंसतीति योज्यं, सर्वगततया सर्वजीवाग्रहणापातात्'' इति वाक्यं दुर्गमत्वाद् द्वेधा व्याचष्टे **सर्वेति** ।। सर्वगतवाक्ये' ''सर्वेषु भूतेष्वेतं'' इति वाक्ये । ''तथा प्रतीत्यभावेन क्लिष्टकल्पनत्वाच्च'' इति तदुत्तरवाक्यं व्यनक्ति – **कर्मीभूतेति** ।

'ಕರ್ಮಕರ್ತೃ ವ್ಯಪದೇಶಾತ್' ಎಂಬ ಸೂತ್ರದಲ್ಲಿ 'ಆತ್ಮಾನಾಂ ಪ್ರರಸ್ಮೈ ಶಂಸತಿ' ಎಂಬುದಾಗಿ ಆತ್ಮನನ್ನು ಕರ್ಮವೆಂದು ಜೀವನನ್ನು ಕರ್ತೃವೆಂದು ಹೇಳಿದ್ದಾರೆ. ಈ ಸಂದರ್ಭದಲ್ಲಿ ಹೀಗೆ ಶಂಕೆ ಬರುತ್ತದೆ- ಸಕಲಜೀವರೂ ಸಹ ಸರ್ವಗತರೇ ಆಗಿದ್ದಾರೆ. ಸರ್ವಗತನಾದ ಒಬ್ಬ ಜೀವನು ಸರ್ವಗತನಾದ ಮತ್ತೊಬ್ಬ

ಜೀವನನ್ನು ಉಪದೇಶಿಸುತ್ತಾನೆಂದು ಹೇಳಬಹುದಲ್ಲವೇ? ಈ ಶಂಕೆಯನ್ನು ಟೀಕೆಯಲ್ಲಿ 'ಸರ್ವಗತತಯಾ ಸರ್ವಜೀವಗ್ರಹಣಾಪಾತಾತ್' ಎಂಬುದಾಗಿ ಉತ್ತರಿಸಿದ್ದಾರೆ. ಈ ವಾಕ್ಯವು ಸುಲಭವಾಗಿ ಅರ್ಥವಾಗದ ಕಾರಣ ಗ್ರಂಥದಲ್ಲಿ ಎರಡು ಬಗೆಯಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ 'ಸರ್ವಜೀವಾನಾಂ' ಇತ್ಯಾದಿಯಾಗಿ. ಸರ್ವಗತ ವಾಕ್ಯವೆಂದರೆ 'ಸರ್ವೇಷು ಭೂತೇಷು ಏತಂ' ಎಂಬ ವಾಕ್ಯದಲ್ಲಿ 'ತಥಾ ಪ್ರತೀತ್ಯಭಾವೇನ ಕ್ಲಿಷ್ಟಕಲ್ಪನತ್ವಾಚ್ಚ' ಎಂಬ ಮುಂದಿನ ವಾಕ್ಯವನ್ನು 'ಕರ್ಮೀಭೂತ' ಇತ್ಯಾದಿಯಾಗಿ ವ್ಯಾಖ್ಯಾನಿಸಿದ್ದಾರೆ.

**प्रकाशः** – **कर्मीभूतजीवसङ्कोचे क्लिष्टकल्पनत्वमुपपाद्य, यदुक्तं कश्चित्सर्वगतो जीव इति "स य एव" इत्यत्र तच्छब्देन सर्वगतः कश्चिद्गृह्यत इति, तत्रापि क्लिष्टकल्पनत्वं ध्येयमित्याह – न केवलमिति । 'अवगुरेत्' निन्देदित्यर्थः । शिष्टमुपन्यासमुखेन स्पष्टमिति भावः ।।**

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे सर्वगतत्वाधिकरणं सम्पूर्णम् ॥१॥**

ಕರ್ಮೀಭೂತರಾದ ಜೀವರಲ್ಲಿ ಸಂಕೋಚ ಮಾಡುವುದಾದರೆ ಕ್ಲಿಷ್ಟಕಲ್ಪನೆಯನ್ನು ಮೊದಲು ಹೇಳಿ ಈಗ ಯಾರೋ ಒಬ್ಬ ಜೀವನು ಸರ್ವಗತನಾಗಿದ್ದಾನೆ. ಅವನೇ 'ಸ ಯ ಏವಂ' ಎಂಬಲ್ಲಿ 'ತತ್' ಶಬ್ದದಿಂದ ಸರ್ವಗತನೆಂದು ಪ್ರಸಿದ್ಧನಾಗಿದ್ದಾನೆ ಎಂದು ಆಕ್ಷೇಪಿಸಿದರೆ ಇದೂ ಸಹ ಕ್ಲಿಷ್ಟಕಲ್ಪನೆಯಾಗಿದೆ ಎಂದು 'ನ ಕೇವಲಂ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ಅವಗುರೇತ್' ಎಂಬ ಪದಕ್ಕೆ 'ನಿಂದಿಸಿದರೆ' ಎಂದರ್ಥ. ಉಳಿದ ಟೀಕೆಯ ಕಠಿಣಪದಾರ್ಥಗಳು ಉಪನ್ಯಾಸಮುಖವಾಗಿ ವ್ಯಾಖ್ಯಾನಿಸುವ ಗ್ರಂಥದಲ್ಲಿಯೇ ಸ್ಪಷ್ಟವಾಗಿಯೇ ತಿಳಿಯುತ್ತದೆ.

**ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಸರ್ವಗತತ್ವಾಧಿಕರಣವು ಮುಕ್ತಾಯವಾಯಿತು.**

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – नच तल्लिङ्गमन्र्यामिविषयमित्वादिटीकाऽनुपपन्ना । तत्र चक्षुर्मयत्वादेरन्तर्यामिविषयत्वे शङ्किते ऽर्भकौकस्त्वायोगादिति बाधकान्तरमुच्यते । तत्किं चक्षुर्मयत्वस्यान्तर्यामिविषयत्वमङ्गीक्रियते न वा नाद्यः। तथा सति चक्षुर्मयत्वायोगाच्चेत्युत्तरटीकानुपपत्तिः । द्वितीये चक्षुर्मत्वस्यैव बाधकत्वेन वक्तव्यत्वेन तत्परित्यज्यार्भकौकस्त्वस्य बाधकत्वोक्तिरयुक्ता । तथा च टीका पूर्वोत्तरविरुद्धत्वादनुपपन्नेवेत्यत आह – **पूर्वमिति** ।। अनेन चक्षुर्मयत्वायोगाच्चेत्यत्र तस्य जीवधर्मत्वादिति युक्तिः सूचिता भवति ।

**अप्रतीतेर्व्याचष्टे – अत सातत्येति** ।। ननु कथमेकस्मिञ्छरीरे जीवद्वय-सद्भावः । तथासति यावद्देहसद्भावमुभयोस्तत्र सद्भावेनोभयकर्मनिर्मितत्वापत्त्या सुखादिभोगस्स्यात् । सर्वस्यापि जीवान्तरत्वाज्जीवान्तरशब्देन किं विवक्षितमित्यतो व्याचष्टे – **स्वर्गाच्च्युत इति** ।। ननु सर्वजीवग्रहणापातादित्ययुक्तम् । तत्र किं सर्वेषु भूतेष्विति वाक्ये वा सर्वगततया सर्वजीवग्रहणमुच्यते किं वा एतमात्मानमिति वाक्ये वा । नाद्यः । सर्वगतजीवानामेव सर्वजीवसाधारणस्य चक्षुर्मयत्वादेस्तत्र सद्भावने सर्वगततया सर्वजीवग्रहणोपपत्तेः । न द्वितीयः । तत्र कर्तृव्यतिरिक्त-सर्वगतजीवानामेव शंसनकर्मत्वापत्त्याऽनिष्टाभावात् । सर्वेषां सर्वगतत्वेऽपि केषाञ्चिदेतच्छब्देन परामर्शेऽपि बाधकाभावादित्यतस्तत्र बाधकं वक्तुं व्याचष्टे – **सर्वजीवानामिति** ।।

सर्वगतवाक्यानुसारेणैतमात्मानमिति वाक्यं व्याख्येयमित्युक्तम् ।। इदानीमेतमिति वाक्यानुसारेण सर्वगतवाक्यं व्याख्येयमित्याह – **यद्वेति** ।। **तद्धीयेतेत्यर्थ इति** ।। अंशे बाधादित्यर्थः । तद्व्यतिरिक्तजीवपक्षाङ्गीकारे शंसनादिक र्तृत्वजीवान्यविवेकस्य शक्यत्वेन प्रतिज्ञायाः सम्भावनारूपत्वापत्तेः । विवेकेपि वा कर्तृजीवेषु परस्मा इत्युक्तासज्जीवविशेषेषु च व्यभिचारिणश्चक्षुर्मयत्वादिहेतोः कर्मीभूतजीवविशेषसर्वगतत्वसाधकत्वायोगात् । प्रथमपक्षतात्पर्यमप्येवं ज्ञेयम् ।। ।।

।। इति श्रीकेशवभट्टारकेण विरचितायां भावदीपिकायां
सर्वगतत्वाधिकरणम् सम्पूर्णम् ।। ।।

ಪರಿಪೂರ್ಣಚಂದ್ರಿಕಾ

# ೦೧-ಸರ್ವಗತತ್ವಾಧಿಕರಣ

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣಪಂಚಿಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿಃ,
ಸೂತ್ರಾರ್ಥರತ್ನಾವಳಿಃ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

## सर्वगतत्वाधिकरणम् -१

ॐ सर्वत्र प्रसिद्धोपदेशात् ॐ ॥ १-२-१ ॥

ॐ विवक्षितगुणोपपत्तेश्च ॐ ॥ १-२-२ ॥

ॐ अनुपपत्तेस्तु न शारीरः ॐ ॥ १-२-३ ॥

ॐ कर्मकर्तृव्यपदेशाच्च ॐ ॥ १-२-४ ॥

ॐ शब्दविशेषात् ॐ ॥ १-२-५ ॥

ॐ स्मृतेश्च ॐ ॥ १-२-६ ॥

ॐ अर्भकौकस्त्वात्तद्व्यपदेशाच्च नेति चेन्न निचाय्यत्वादेवं व्योमवच्च ॐ ॥१-२-७ ॥

ॐ सम्भोगप्राप्तिरिति चेन्न वैशेष्यात् ॐ ॥ १-२-८ ॥

बहुलिङ्गसहितश्रुतेरपि सावकाशायाः निरवकाशश्रुत्यादीनामेव बलवत्त्वम् । बहवो ह्यत्रादित्यशब्दाः । क्षित्यादिषूक्त्वादित्येऽनुक्तिरित्यादिलिङ्गं च । तथाऽपि निरवकाशा एतमेवेत्यवधारणादयः ॥

ನ್ಯಾಯವಿವರಣೆ

ವಸ್ತುತಃ ಬಹಳವಾದ ಲಿಂಗಗಳಿಂದ ಸಹಿತವಾದ ಶ್ರುತಿಯು ಪೂರ್ವಪಕ್ಷದಲ್ಲಿರಬಹುದು. ಆದರೂ ಸಹ ಪೂರ್ವಪಕ್ಷದಲ್ಲಿರುವ ಶ್ರುತಿಲಿಂಗಾದಿಗಳು ಸಾವಕಾಶಗಳಾಗಿವೆ. ಇವುಗಳಿಗಿಂತ ಸಿದ್ಧಾಂತದಲ್ಲಿರುವ ಶ್ರುತಿಲಿಂಗಾದಿಗಳು ನಿರವಕಾಶವಾದ್ದರಿಂದ ಬಲಿಷ್ಠವಾಗಿವೆ. ಆದಿತ್ಯನನ್ನು ಪ್ರತಿಪಾದಿಸುವ ಶಬ್ದಗಳು ಬಹಳ ಇವೆ. ಭೂಮ್ಯಾದಿಗಳಲ್ಲಿದ್ದಾನೆಂದು ಹೇಳಿ 'ಏತಮಾದಿತ್ಯೇ'

ಆದಿತ್ಯನಲ್ಲಿದ್ದಾನೆಂದು ಹೇಳದಿರುವಿಕೆಯೆಂಬ ಲಿಂಗವು ಇದೆ. ಆದರೂ ಸಹ ಸಿದ್ಧಾಂತದಲ್ಲಿರತಕ್ಕ ಹೇತುಗಳು 'ಏತಮೇವ' ಎಂದು ಅವಧಾರಣಸಹಿತವಾದ ಬ್ರಹ್ಮಶಬ್ದಾದಿಗಳು ನಿರವಕಾಶಗಳಾಗಿವೆ.

**न्यायविवरणपञ्चिका**

'एतं ह्येव बह्वृचा' इत्यादावादित्यः प्रतिपाद्यो भवितुमर्हति, तदीयश्रुतिलिङ्गानामत्र दर्शनात् । जीवो वा जीवलिङ्गानां चक्षुर्मयत्वादीनां श्रवणात् । नच एतदन्तःस्थाधिकरणन्यायेन उपासात्रैविध्यादिति वा परिहृतमिति वाच्यम् । सम्भवति हीश्वरे कल्पनैषा । नचासावत्र सम्भवति, सर्वेषु भूतेष्वित्यल्पौकस्त्व-श्रवणात् । ईश्वरस्य पूर्णतया 'ब्रह्म ततम्' इत्यङ्गीकृतत्वात्, सम्भोगप्राप्तेश्च । नचेश्वरसाधकं प्रमाणमस्ति, ब्रह्मशब्दस्य जीवे सम्भवात्, मुख्यानुपपत्तावमुख्य-स्वीकारस्य न्यायप्राप्तत्वादित्येवं प्राप्ते प्रतिविहितम् 'सर्वत्रोच्यमानो नारायण एव, ब्रह्मशब्दस्याश्रुतत्वादिलिङ्गानां च श्रवणात्, स्मृतिसमाख्यानाच्च । जीवस्य चाणोरेकस्य सर्वशरीरस्थत्वानुपपत्तेः, कर्मकर्तृव्यपदेशानुपपत्तेश्च' इति । तदिदमनुपपन्नम्, श्रुतिलिङ्गपरपक्षानुपपत्तिभिः पूर्वपक्षे सति, तावन्मात्रेण सिद्धान्तनिर्णयायोगात्, नहि समबलं बाधकं भवति इत्यत आह – **बहुलिङ्गेति** ।।

'परपक्षानुपपत्तेरपि' इत्यपि ग्राह्यम् । श्रुत्यादीनामिति आदिपदेन लिङ्गसमाख्यापरपक्षानुपपत्तीनां परिग्रहः । यद्यपि, पूर्वपक्षश्रुत्यादयः सन्ति, सिद्धान्तेऽपि, तथाऽपि, पूर्वपक्षस्थाः सावकाशाः, निरवकाशास्तु सिद्धान्तस्थाः, सावकाशाच्च निरवकाशस्य प्राबल्यं सिद्धमेवेति कथं निर्णयाभावः । 'बहुलिङ्गसहितश्रुतेः' इत्युक्तं विवृणोति – **बहवो हीति** ।।

यद्यप्यादित्यशब्द एक एव, तथाप्यावृत्तिबहुत्वाद् बहव इत्युक्तम् । यद्वा आदित्यस्य प्रतिपादकाः शब्दा, आदित्यशब्दाः । ते च, 'यश्चाऽसावादित्ये', 'सूर्य आत्मा जगतः', 'चक्षुर्मित्रस्य' इत्यत्र बहवः सन्ति ।

'एतमस्याम्' इत्यादिना, 'एतमादित्ये' इत्येवमात्मकोऽयमादित्य इत्यत्र लिङ्गम् । सजातीयेषूक्त्वाऽत्रानुक्तेः कारणान्तराभावात् । आदिपदेन चक्षुर्मयत्वादिकं जीवलिङ्गं च । अत्र श्रुतेर्लिङ्गानां च बहुत्वोक्त्या, बह्वी च सा, लिङ्गसहित

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

## सर्वगतत्वाधिकरणम् -१

ॐ सर्वत्र प्रसिद्धोपदेशात् ॐ ॥ १-२-१ ॥

ॐ विवक्षितगुणोपपत्तेश्च ॐ ॥ १-२-२ ॥

ॐ अनुपपत्तेस्तु न शारीरः ॐ ॥ १-२-३ ॥

ॐ कर्मकर्तृव्यपदेशाच्च ॐ ॥ १-२-४ ॥

ॐ शब्दविशेषात् ॐ ॥ १-२-५ ॥

ॐ स्मृतेश्च ॐ ॥ १-२-६ ॥

ॐ अर्भकौकस्त्वात्तद्व्यपदेशाच्च नेति चेन्न निचाय्यत्वादेवं व्योमवच्च ॐ ॥१-२-७ ॥

ॐ सम्भोगप्राप्तिरिति चेन्न वैशेष्यात् ॐ ॥ १-२-८ ॥

बहुलिङ्गसहितश्रुतेरपि सावकाशायाः निरवकाशश्रुत्यादीनामेव बलवत्त्वम् । बहवो ह्यत्रादित्यशब्दाः । क्षित्यादिषूक्त्वादित्येऽनुक्तिरित्यादिलिङ्गं च । तथाऽपि निरवकाशा एतमेवेत्यवधारणादयः ॥

ನ್ಯಾಯವಿವರಣೆ

ವಸ್ತುತಃ ಬಹಳವಾದ ಲಿಂಗಗಳಿಂದ ಸಹಿತವಾದ ಶ್ರುತಿಯು ಪೂರ್ವಪಕ್ಷದಲ್ಲಿರಬಹುದು. ಆದರೂ ಸಹ ಪೂರ್ವಪಕ್ಷದಲ್ಲಿರುವ ಶ್ರುತಿಲಿಂಗಾದಿಗಳು ಸಾವಕಾಶಗಳಾಗಿವೆ. ಇವುಗಳಿಗಿಂತ ಸಿದ್ಧಾಂತದಲ್ಲಿರುವ ಶ್ರುತಿಲಿಂಗಾದಿಗಳು ನಿರವಕಾಶವಾದ್ದರಿಂದ ಬಲಿಷ್ಠವಾಗಿವೆ. ಆದಿತ್ಯನನ್ನು ಪ್ರತಿಪಾದಿಸುವ ಶಬ್ದಗಳು ಬಹಳ ಇವೆ. ಭೂಮ್ಯಾದಿಗಳಲ್ಲಿದ್ದಾನೆಂದು ಹೇಳಿ 'ಏತಮಾದಿತ್ಯೇ'

ಆದಿತ್ಯನಲ್ಲಿದ್ದಾನೆಂದು ಹೇಳದಿರುವಿಕೆಯೆಂಬ ಲಿಂಗವು ಇದೆ. ಆದರೂ ಸಹ ಸಿದ್ಧಾಂತದಲ್ಲಿರತಕ್ಕ ಹೇತುಗಳು 'ಏತಮೇವ' ಎಂದು ಅವಧಾರಣಸಹಿತವಾದ ಬ್ರಹ್ಮಶಬ್ದಾದಿಗಳು ನಿರವಕಾಶಗಳಾಗಿವೆ.

**न्यायविवरणपञ्चिका**

'एतं ह्येव बह्वृचा' इत्यादावादित्यः प्रतिपाद्यो भवितुमर्हति, तदीयश्रुतिलिङ्गानामत्र दर्शनात् । जीवो वा जीवलिङ्गानां चक्षुर्मयत्वादीनां श्रवणात् । नच एतदन्तःस्थाधिकरणन्यायेन उपासात्रैविध्यादिति वा परिहृतमिति वाच्यम् । सम्भवति हीश्वरे कल्पनैषा । नचासावत्र सम्भवति, सर्वेषु भूतेष्वित्यल्पौकस्त्वश्रवणात् । ईश्वरस्य पूर्णतया 'ब्रह्म ततम्' इत्यङ्गीकृतत्वात्, सम्भोगप्राप्तेश्च । नचेश्वरसाधकं प्रमाणमस्ति, ब्रह्मशब्दस्य जीवे सम्भवात्, मुख्यानुपपत्तावमुख्यस्वीकारस्य न्यायप्राप्तत्वादित्येवं प्राप्ते प्रतिविहितम् 'सर्वत्रोच्यमानो नारायण एव, ब्रह्मशब्दस्याश्रुतत्वादिलिङ्गानां च श्रवणात्, स्मृतिसमाख्यानाच्च । जीवस्य चाणोरेकस्य सर्वशरीरस्थत्वानुपपत्तेः, कर्मकर्तृव्यपदेशानुपपत्तेश्च' इति । तदिदमनुपपन्नम्, श्रुतिलिङ्गपरपक्षानुपपत्तिभिः पूर्वपक्षे सति, तावन्मात्रेण सिद्धान्तनिर्णयायोगात्, नहि समबलं बाधकं भवति इत्यत आह – **बहुलिङ्गेति** ।।

'परपक्षानुपपत्तेरपि' इत्यपि ग्राह्यम् । श्रुत्यादीनामिति आदिपदेन लिङ्गसमाख्यापरपक्षानुपपत्तीनां परिग्रहः । यद्यपि, पूर्वपक्षश्रुत्यादयः सन्ति, सिद्धान्तेऽपि, तथाऽपि, पूर्वपक्षस्थाः सावकाशाः, निरवकाशास्तु सिद्धान्तस्थाः, सावकाशाच्च निरवकाशस्य प्राबल्यं सिद्धमेवेति कथं निर्णयाभावः । 'बहुलिङ्गसहितश्रुतेः' इत्युक्तं विवृणोति – **बहवो हीति** ।।

यद्यप्यादित्यशब्द एक एव, तथाप्यावृत्तिबहुत्वाद् बहव इत्युक्तम् । यद्वा आदित्यस्य प्रतिपादकाः शब्दा, आदित्यशब्दाः । ते च, 'यश्चाऽसावादित्ये', 'सूर्य आत्मा जगतः', 'चक्षुर्मित्रस्य' इत्यत्र बहवः सन्ति ।

'एतमस्याम्' इत्यादिना, 'एतमादित्ये' इत्येवमात्मकोऽयमादित्य इत्यत्र लिङ्गम् । सजातीयेषूक्त्वाऽत्रानुक्तेः कारणान्तराभावात् । आदिपदेन चक्षुर्मयत्वादिकं जीवलिङ्गं च । अत्र श्रुतेर्लिङ्गानां च बहुत्वोक्त्या, बह्वी च सा, लिङ्गसहित

श्रुतिर्बहुलिङ्गसहितश्रुतिः, बुहलिङ्गैः सहिता श्रुतिर्बहुलिङ्गसहितश्रुतिरिति समासद्वयस्यैकशेषनिर्देश इति सूचयति, बहुशब्दद्वयं वा तन्त्रेणोपात्तमिति । बहुलिङ्गश्रुतेरित्येतद् व्याख्यायेदानीं समस्तं वाक्यं विवृणोति – तथाऽपीति ॥

यद्यपि पूर्वपक्षे श्रुतिलिङ्गपरपक्षासम्भवाः सन्ति, तथापि ते सावकाशाः । तथाहि आदित्यादिश्रुतिस्तावदन्तःस्थाधिकरणन्यायेन विष्णौ सावकाशा । आदित्येऽनुक्तिस्त्वसिद्धा, उपलक्षणतयोक्तत्वात् । चक्षुर्मयत्वादिकं च, शतायुष्ट्वादिवदीश्वरे घटत एव । अल्पौकस्त्वादिकं च, निचाय्यत्वादिना प्रत्युक्तम् । सिद्धान्तहेतवस्तु, निरवकाशा इति निर्णयो युज्यत एवेति । निरवकाशब्रह्मशब्दादय इति वक्तव्ये 'एतमेव' इत्यवधारणादय इति वचनन्तु, ब्रह्मशब्दस्यामुख्यवृत्त्या जीवेऽप्यवकाशोऽस्तीत्याशङ्कापरिहारार्थम् । ततश्चावधारण-सहितब्रह्मशब्दादय इत्यर्थः ॥

ನ್ಯಾಯವಿವರಣ ಟೀಕೆ

'ಏತಂ ಹ್ಯೇವ ಬಹ್ವೃಚಾಃ' ಇತ್ಯಾದಿ ಶ್ರುತಿಗಳಿಂದ ಆದಿತ್ಯನೇ ಪ್ರತಿಪಾದ್ಯನಾಗುತ್ತಾನೆ. ಏಕೆಂದರೆ ಆದಿತ್ಯನ ಶ್ರುತಿ ಹಾಗೂ ಲಿಂಗಗಳು ಬಹಳವಾಗಿ ಕೇಳಿಸುತ್ತಿವೆ. ಅಥವಾ ಜೀವನ ಲಿಂಗವಾದ ಚಕ್ಷುರ್ಮಯತ್ವಾದಿಗಳು ಕೇಳಿಸುತ್ತಿರುವುದರಿಂದ ಜೀವನೂ ಸಹ ಪ್ರತಿಪಾದ್ಯನಾಗಬಹುದು.

ಹಿಂದಿನ ಅಂತರಧಿಕರಣದ ನ್ಯಾಯದಿಂದ ಅಥವಾ 'ಉಪಸಾತ್ಮೈವಿಧ್ಯಾತ್' ಎಂಬ ಸೂತ್ರದಿಂದ ಈ ಶ್ರುತಿಲಿಂಗಗಳೆಲ್ಲವನ್ನು ಭಗವಂತನಲ್ಲಿ ಸಮನ್ವಯ ಮಾಡುವ ಮೂಲಕ ಆದಿತ್ಯಾದಿಗಳು ಪ್ರತಿಪಾದ್ಯರಾಗುವುದಿಲ್ಲವೆಂದು ಹೇಳಿದ್ದಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಒಂದುವೇಳೆ ಈಶ್ವರನಲ್ಲಿ ಇಂತಹ ಧರ್ಮಗಳನ್ನು ಕಲ್ಪಿಸಲು ಬರುವುದಾದಲ್ಲಿ ಮಾತ್ರ ನಿಮ್ಮ ಶಂಕೆಯು ಸರಿಯಾಗುತ್ತಿತ್ತು. ಆದರೆ ಈ ಧರ್ಮಗಳು ಈಶ್ವರನಲ್ಲಿ ಕೂಡುವುದಿಲ್ಲ. 'ಸರ್ವೇಷು ಭೂತೇಷು' ಎಂಬುದಾಗಿ ಅಲ್ಪೌಕಸ್ತ್ವ ಧರ್ಮವು ಕೇಳಿಸುತ್ತಿದೆ. ಈಶ್ವರನು 'ಬ್ರಹ್ಮತ್ತಮಂ' ಎಂಬ ಶ್ರುತಿಯಂತೆ ಪೂರ್ಣನೆಂದು ಸಿದ್ಧನಾಗಿದ್ದಾನೆ. ಇಂತಹವನಲ್ಲಿ ಅಲ್ಪಸ್ಥಾನಸ್ಥಿತತ್ವವನ್ನು ಹೇಳಲು ಸಾಧ್ಯವಿಲ್ಲ. ಮತ್ತು ಸಂಭೋಗಪ್ರಾಪ್ತಿಯನ್ನು ಈಶ್ವರನಲ್ಲಿ ಉಪಪಾದಿಸಲಾಗುವುದಿಲ್ಲ.

ಮತ್ತು ಈಶ್ವರ ಸಾಧಕವಾದ ಪ್ರಮಾಣವೇ ಇರುವುದಿಲ್ಲ. ಬ್ರಹ್ಮಶಬ್ದವನ್ನು ಜೀವನಲ್ಲಿಯೂ ಸಹ ಕೂಡಿಸಬಹುದು. ಮುಖ್ಯಾರ್ಥದಲ್ಲಿ ಅನುಪಪತ್ತಿ ಇರುವುದರಿಂದ ಅಮುಖ್ಯಾರ್ಥನಾದ ಜೀವನೆಂಬ ಅರ್ಥವನ್ನು ಅಂಗೀಕರಿಸುವುದು ನ್ಯಾಯಬದ್ಧವಾದ ಮಾತೇ ಆಗಿದೆ. ಇಷ್ಟು ಪೂರ್ವಪಕ್ಷ.

ಪರಿಪೂರ್ಣಚಂದ್ರಿಕಾ

ಸಿದ್ಧಾಂತ - ಈ ಪೂರ್ವಪಕ್ಷವು ಸರಿಯಿಲ್ಲ. ಎಲ್ಲೆಡೆ ಹೇಳಲ್ಪಟ್ಟವನು ನಾರಾಯಣನೇ ಆಗಿದ್ದಾನೆ. ಬ್ರಹ್ಮಶಬ್ದ ಹಾಗೂ ಅಶ್ರುತತ್ವಾದಿ ಲಿಂಗಗಳೆಲ್ಲವೂ ನಾರಾಯಣನನ್ನೇ ಪ್ರತಿಪಾದಿಸುತ್ತಿವೆ. 'ಸ್ಮೃತಿಸಮಾಖ್ಯಾ' ಎಂಬ ಪ್ರಮಾಣವೂ ಇದೆ. ಒಬ್ಬನೇ ಅಣುವಾದ ಜೀವನು ಸಕಲ ಶರೀರಗಳಲ್ಲಿ ಇರಲಾರ. ಹಾಗಾದಲ್ಲಿ ಕರ್ಮಕರ್ತೃವ್ಯಪದೇಶವೂ ಸಹ ಅನುಪಪನ್ನವಾಗಬೇಕಾದೀತು.

ಇದು ಅನುಪಪನ್ನವಲ್ಲವೇ? ಏಕೆಂದರೆ ಶ್ರುತಿಲಿಂಗಗಳೆಂಬ ಸಾಧಕಪ್ರಮಾಣವಿದ್ದು ಈಶ್ವರನ ಪಕ್ಷದಲ್ಲಿ ಅನುಪಪತ್ತಿಗಳಿರುವುದರಿಂದ ಪೂರ್ವಪಕ್ಷವು ದೃಢವಾಗಿದೆ. ಸಿದ್ಧಾಂತಿಗಳೂ ಸಹ ಶ್ರುತಿಲಿಂಗಗಳೆಂಬ ಸಾಧಕಪ್ರಮಾಣಗಳನ್ನು ಹೇಳಿ ಬಾಧಕಪ್ರಮಾಣಗಳನ್ನು ಹೇಳುತ್ತಿದ್ದಾರೆ. ಸಮಬಲವಾದದ್ದು ಯಾವತ್ತೂ ಸಹ ಬಾಧಕವಾಗುವುದಿಲ್ಲ. ಆದ್ದರಿಂದ ಸಿದ್ಧಾಂತವನ್ನು ನಿರ್ಣಯಿಸ ಬೇಕೆಂದರೆ ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಪ್ರಮಾಣಗಳಿಗಿಂತ ಹೆಚ್ಚಿನ ಪ್ರಮಾಣಗಳನ್ನು ಸಿದ್ಧಾಂತಿಗಳು ಹೇಳಬೇಕಲ್ಲವೇ? ಎಂಬ ಪ್ರಶ್ನೆಗೆ 'ಬಹುಲಿಂಗ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಪರಪಕ್ಷಾನುಪಪತ್ತೇರಪಿ' ಎಂಬುದನ್ನೂ ಸಹ ವಿವಕ್ಷಿಸಬೇಕು. 'ಶ್ರುತ್ಯಾದೀನಾಂ' ಎಂಬಲ್ಲಿರುವ ಆದಿಪದದಿಂದ ಲಿಂಗ, ಸಮಾಖ್ಯಾ, ಪರಪಕ್ಷದಲ್ಲಿ ಅನುಪಪತ್ತಿ ಇವುಗಳನ್ನು ವಿವಕ್ಷಿಸಬೇಕು. ವಸ್ತುತಃ ಪೂರ್ವಪಕ್ಷದಲ್ಲಿ ಇರುವಂತೆ ಸಿದ್ಧಾಂತದಲ್ಲಿಯೂ ಸಹ ಶ್ರುತಿಲಿಂಗಾದಿಗಳೇ ಇರುತ್ತವೆ. ಆದರೆ ಪೂರ್ವಪಕ್ಷದಲ್ಲಿರುವ ಶ್ರುತಿಲಿಂಗಾದಿಗಳು ಸಾವಕಾಶವಾಗಿವೆ. ಸಿದ್ಧಾಂತದಲ್ಲಿರುವ ಶ್ರುತಿಲಿಂಗಾದಿಗಳು ನಿರವಕಾಶವಾಗಿವೆ. ಸಾವಕಾಶಕ್ಕಿಂತ ನಿರವಕಾಶಕ್ಕೆ ಹೆಚ್ಚಿನ ಪ್ರಾಬಲ್ಯವಿದೆಯೆಂಬ ವಿಚಾರವು ಸಿದ್ಧವೇ ಆಗಿದೆ. ಆದ್ದರಿಂದ ಸಿದ್ಧಾಂತದ ನಿರ್ಣಯವು ಸಾಧ್ಯವಿಲ್ಲವೆಂದು ನಿಮಗೆ ಶಂಕಿಸಲಾಗದು.

'ಬಹುಲಿಂಗಸಹಿತಶ್ರುತೇಃ' ಎಂಬುದಾಗಿ ಹೇಳಿದ್ದನ್ನು ಸ್ವತಃ ತಾವೇ ವಿವರಿಸುತ್ತಿದ್ದಾರೆ. 'ಬಹವೋ ಹಿ' ಇತ್ಯಾದಿಯಾಗಿ. ವಸ್ತುತಃ ಆದಿತ್ಯವೆಂಬ ಒಂದೇ ಶಬ್ದವು ಶ್ರುತಿಯಲ್ಲಿ ಕೇಳಿಸುತ್ತಿದೆ. ಆದರೂ ಸಹ ಒಂದೇ ಬಾರಿ ಕೇಳಿಸಿದ ಆದಿತ್ಯಶಬ್ದವನ್ನೇ ಅನೇಕಬಾರಿ ಆವೃತ್ತಿ ಮಾಡಿಕೊಳ್ಳಬೇಕು. ಈ ದೃಷ್ಟಿಯಿಂದ 'ಬಹವೋಹಿ ಆದಿತ್ಯಶಬ್ದಾಃ' ಎಂದು ಹೇಳಿದ್ದಾರೆ. ಅಥವಾ ಆದಿತ್ಯನನ್ನು ಪ್ರತಿಪಾದಿಸುವ ಶಬ್ದಗಳು ಆದಿತ್ಯಗಳಾಗಿವೆ. ಅಂತಹ ಆದಿತ್ಯ ಶಬ್ದಗಳು 'ಯಶ್ಚಾಸಾವಾದಿತ್ಯೇ' 'ಸೂರ್ಯ ಆತ್ಮಾ ಜಗತಃ' 'ಚಕ್ಷುರ್ಮಿತ್ರಸ್ಯ' ಇತ್ಯಾದಿ ಶ್ರುತಿಗಳಲ್ಲಿ ಸೂರ್ಯ, ಮಿತ್ರ ಮೊದಲಾದ ಆದಿತ್ಯವಾಚಕವಾದ ಅನೇಕ ಶಬ್ದಗಳನ್ನು ವಿವಕ್ಷಿಸಿ ಹೀಗೆ ಹೇಳಿದ್ದಾರೆ.

'ಏತಮಸ್ಯಾಂ' ಎಂಬುದರಿಂದ 'ಏತಂ ಆದಿತ್ಯೇ' ಎಂಬುದಕ್ಕೆ ಲಿಂಗವನ್ನು ಹೇಳಲಾಗಿದೆ. ಸಜಾತೀಯವಾದದ್ದರಲ್ಲಿ ಹೇಳಿ ಇಲ್ಲಿ ಹೇಳದ ಕಾರಣ ಕಾರಣಾಂತರಗಳು ಇರುವುದಿಲ್ಲ. ಆದಿಪದದಿಂದ ಜೀವಲಿಂಗವೆನಿಸಿದ ಚಕ್ಷುರ್ಮಯತ್ವಾದಿಗಳನ್ನು ವಿವಕ್ಷಿಸಬೇಕು. ಇಲ್ಲಿ ಶ್ರುತಿಗೆ ಹಾಗೂ ಲಿಂಗಗಳಲ್ಲಿ ಬಹುತ್ವವನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ ಎರಡುವಿಧ ಸಮಾಸವನ್ನು ತಿಳಿಯಬೇಕು. ೧) 'ಬಹ್ವೀ ಚ ಸಾ ಲಿಂಗಸಹಿತ ಶ್ರುತಿಶ್ಚ ಬಹುಲಿಂಗಸಹಿತಶ್ರುತಿಃ' ೨) 'ಬಹುಲಿಂಗೈಃ

ಸಹಿತಾ ಶ್ರುತಿಃ ಬಹುಲಿಂಗಸಹಿತಶ್ರುತಿಃ' ಎಂದು. ಮೊದಲನೆಯ ಪಕ್ಷದಲ್ಲಿ ಲಿಂಗದಿಂದ ಕೂಡಿರುವ ಶ್ರುತಿಗಳು ಬಹಳ ಇವೆಯೆಂದರ್ಥ. ಎರಡನೆಯ ಪಕ್ಷದಲ್ಲಿ ಲಿಂಗಗಳೇ ಬಹಳವಾಗಿವೆ. ಅವುಗಳಿಂದ ಕೂಡಿರುವ ಶ್ರುತಿಯೆಂದರ್ಥ. 'ಬಹ್ವ್ಯಃ' ಲಿಂಗಸಹಿತಶ್ರುತೀ ಚ ಬಹುಲಿಂಗಗಳಿಂದ ಸಹಿತವಾದ ಹಾಗೂ ಶ್ರುತಿ ಬಾಹುಲ್ಯದಿಂದ ಸಹಿತವಾದ ಲಿಂಗದಿಂದ ಸಹಿತವಾದ ಶ್ರುತಿ ಎಂಬುದಾಗಿ ಎರಡುವಿಧ ಸಮಾಸಗಳನ್ನು ಮಾಡಿ ಒಂದನ್ನಷ್ಟೇ ಉಳಿಸಿದ್ದಾರೆ. ಬಹು ಎಂಬ ಶಬ್ದವನ್ನು ಎರಡು ಬಾರಿ ಆವೃತ್ತಿ ಮಾಡಿಕೊಂಡಿದ್ದಾರೆ. 'ಬಹುಲಿಂಗಶ್ರುತೇಃ' ಎಂಬುದನ್ನು ವ್ಯಾಖ್ಯಾನಿಸಿ ಈಗ ಸಮಸ್ತವಾಕ್ಯವನ್ನು 'ತಥಾಪಿ' ಎಂಬುದರಿಂದ ವ್ಯಾಖ್ಯಾನಿಸುತ್ತಿದ್ದಾರೆ.

ವಸ್ತುತಃ ಪೂರ್ವಪಕ್ಷದಲ್ಲಿ ಶ್ರುತಿ, ಲಿಂಗ, ಪರಪಕ್ಷದಲ್ಲಿ ಬಾಧಕಗಳು ಇರುತ್ತವೆ. ಆದರೂ ಸಹ ಇವು ಸಾವಕಾಶಗಳಾಗಿವೆ. ಅದು ಹೀಗೆ - ಅದಿತಿಶ್ರುತಿಯು ಅಂತರಧಿಕರಣದ ನ್ಯಾಯದಂತೆ ವಿಷ್ಣುವಿನಲ್ಲಿ ಸಾವಕಾಶಗಳಾಗಿವೆ. ಆದಿತ್ಯನಲ್ಲಿ ಅನುಕ್ತಿಯು ಸಿದ್ಧವಾಗಿದೆ. ಉಪಲಕ್ಷಣಯಾ ಮತ್ತೊಂದು ದೋಷವನ್ನು ತಿಳಿಯಬೇಕು. ಚಕ್ಷುರ್ಮಯತ್ವ ಹಾಗೂ ಶತಾಯುಷ್ಟ್ವಾದಿಗಳು ಈಶ್ವರನಲ್ಲಿ ಸಂಭವಿಸುತ್ತವೆ. ಅಲೌಕಿಕತ್ವವೂ ಸಹ ಉಪಾಸನೆಗೋಸ್ಕರವೆಂದು ಉತ್ತರಿಸಲಾಗಿದೆ.

ಸಿದ್ಧಾಂತ ಹೇತುಗಳು ಹೀಗಿವೆ - 'ನಿರವಕಾಶಗಳಾಗಿವೆಯೆಂಬ ನಿರ್ಣಯವು ಯುಕ್ತವೇ ಆಗಿದೆ'. 'ನಿರವಕಾಶಬ್ರಹ್ಮಶಬ್ದಾದೇಃ' ಎಂದು ಹೇಳುವ ಬದಲು 'ಏತಮೇವ' ಎಂಬ ಅವಧಾರಣಾದಿಗಳನ್ನು ಹೇಳಿದ್ದು ಬ್ರಹ್ಮಶಬ್ದವು ಅಮುಖ್ಯವೃತ್ತಿಯಿಂದಲೂ ಸಹ ಜೀವನಲ್ಲಿ ಬರುವುದಿಲ್ಲ ಎಂಬುದನ್ನು ತಿಳಿಸಲು. ಆದ್ದರಿಂದ 'ಅವಧಾರಣಸಹಿತಬ್ರಹ್ಮಶಬ್ದಾದೇಃ' ಎಂಬುದು ಮತ್ತೊಂದು ಸಿದ್ಧಾಂತಹೇತು.

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣಟೀಕೆಯ
ಕನ್ನಡಾನುವಾದದಲ್ಲಿ ಸರ್ವಗತತ್ವಾಧಿಕರಣವು ಸಮಾಪ್ತವಾಯಿತು.

***

**श्रीमदानन्दतीर्थभगवत्पादाचार्यविरचितम्**

# अणुभाष्यम्

## सर्वगतत्वाधिकरणम् -१

**सर्वगः**

ಅಣುಭಾಷ್ಯ - ಎಲ್ಲರ ಹೃದಯದಲ್ಲಿ ನಿಯಾಮಕನಾಗಿರುವವನು ವಿಷ್ಣುವೇ ಆಗಿದ್ದಾನೆ.

ಪರಿಪೂರ್ಣಚಂದ್ರಿಕಾ

श्री राघवेन्द्रतीर्थविरचिता

# तत्वमञ्जरी

## सर्वगतत्वाधिकरणम् -१

एवं सर्वशाखागतनानावाक्यस्थितैः अन्यवस्तुषु प्रसिद्धैः सर्वनामभिरेको विष्णुरेव तत्तत्प्रकरणस्थनानालिङ्गेभ्यो हेतुभ्य उच्यत इत्युक्तं पूर्वपादे । तदसाध्विव । हेतूकृतलिङ्गेषु केषाञ्चिदीश्वरनिष्ठताप्रसिद्धावपि सर्वेषां तदसिद्धेरित्यतः लिङ्गपादः प्रवृत्तः ।

ತತ್ವಮಂಜರಿ

ಮೊದಲನೆಯ ಪಾದದಲ್ಲಿ ಎಲ್ಲಾ ಶಾಖೆಗಳಲ್ಲಿರುವ ಅನೇಕವಿಧ ವಾಕ್ಯಗಳಲ್ಲಿರುವ ಬೇರೆ ವಸ್ತುಗಳಲ್ಲಿ ಪ್ರಸಿದ್ಧವಾದ ನಾಮಾತ್ಮಕ ಶಬ್ದಗಳನ್ನು ವಿಷ್ಣುವಿನಲ್ಲಿ ಸಮರ್ಥಿಸಿದ್ದಾಯಿತು. ಆಯಾ ಪ್ರಕರಣಗಳಲ್ಲಿರುವ ಅನೇಕ ವಿಧವಾದ ವಿಷ್ಣುವಿನ ಧರ್ಮಗಳೇ ವಿಷ್ಣುವಾಚಕಗಳೆನ್ನಲು ಕಾರಣಗಳಾಗಿವೆ ಎಂದು ಪ್ರತಿಪಾದಿಸಲಾಯಿತು. ಆದರೆ ಈ ಪ್ರತಿಪಾದನೆಯು ಅಸಾಧುವಾದಂತಿದೆ. ಏಕೆಂದರೆ ಅಲ್ಲಿ ಹೇಳಲ್ಪಟ್ಟ ಲಿಂಗಗಳಲ್ಲಿ ಕೆಲವು ವಿಷ್ಣುವಿನಲ್ಲಿ ಪ್ರಸಿದ್ಧವಾಗಿದ್ದರೂ ಎಲ್ಲಾ ಲಿಂಗಗಳು ವಿಷ್ಣುವಿನಲ್ಲಿ ಪ್ರಸಿದ್ಧವಾಗಿಲ್ಲ. ಆದಕ್ಕೋಸ್ಕರವೇ ಈ ಲಿಂಗಪಾದವು ಹೊರಟಿದೆ.

तदर्थमाह – **प्रसिद्धैरन्यवस्तुषु उच्यते विष्णुरेवैक इति** ।। 'लिङ्गैः सर्वैर्युतः स हि' इत्यग्रेतनमप्यत्रान्वेति । यः पूर्वपादे अशेषनामभिरुक्तः, स एको विष्णुरेव अन्यवस्तुषु प्रसिद्धैरत एव भगवत्यप्रसिद्धैः विप्रतिपन्नैरिति यावत् । सर्वैर्लिङ्गैर्युतः युक्त इत्युच्यते प्रतिपाद्यते । अस्मिन् पादे सूत्रकृतेत्यर्थः । विप्रतिपन्नाशेषलिङ्ग-समन्वयं ब्रूतेऽस्मिन् पाद इति यावत् । किं नाम्ना लिङ्गेन । नाद्यः, अन्योन्याश्रयात् । नान्त्यः, विप्रतिपत्तेः । इत्यतोऽप्युक्तम् – **लिङ्गैर्हीति** ।। विष्णुधर्मत्वेन प्रमाणप्रसिद्धैः तत्तत्प्रकरणस्थनिरवकाशाविप्रतिपन्नलिङ्गैरित्यर्थः । उपलक्षणमेतत् । निरवकाशश्रुत्यादिना चेत्यपि ध्येयम् ।

ಎಲ್ಲ ಲಿಂಗಗಳು ವಿಷ್ಣುವಿನಲ್ಲಿಯೇ ಪ್ರಸಿದ್ಧವಾಗಿವೆಯೆಂಬುದನ್ನು ಶ್ರೀಮದಾಚಾರ್ಯರು 'ಪ್ರಸಿದ್ಧೈರನ್ಯವಸ್ತುಷು ಉಚ್ಯತೇ ವಿಷ್ಣುರೇವೈಕಃ' ಎಂದು ಹೇಳಿದ್ದಾರೆ. ವಸ್ತುತಃ 'ಲಿಂಗೈ ಸರ್ವೈರ್ಯುತಃ ಸ ಹಿ' ಎಂಬ ಎರಡನೆಯ ಪಾದದ ಅರ್ಥವನ್ನು ಸಂಗ್ರಹಿಸುವ ಈ ವಾಕ್ಯವನ್ನು ಇಲ್ಲಿಯೂ ಸಹ ಅನ್ವಯ ಮಾಡಬೇಕು. ಪ್ರಥಮಪಾದದಲ್ಲಿ ಎಲ್ಲಾ ನಾಮಾತ್ಮಕವಾದ ಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನೆನ್ನಲಾಯಿತು. ಆ ವಿಷ್ಣುವೊಬ್ಬನೇ ಅನ್ಯವಸ್ತುಗಳಲ್ಲಿ ಪ್ರಸಿದ್ಧವಾದ ಲಿಂಗಾತ್ಮಕ ಶಬ್ದಗಳಿಂದಲೂ ಪ್ರತಿಪಾದ್ಯನಾಗಿದ್ದಾನೆಂದು ಈ ಪಾದದಲ್ಲಿ ಪ್ರತಿಪಾದಿಸುತ್ತಿದ್ದಾರೆ. ಈ ಪಾದದಲ್ಲಿ ವಿಪ್ರತಿಪನ್ನವಾದ ಎಲ್ಲ ವಿಧವಾದ ಲಿಂಗಗಳ ಸಮನ್ವಯವನ್ನು ಸಾಧಿಸುತ್ತಿದ್ದಾರೆ.

ಈ ಪಾದದಲ್ಲಿ ಪ್ರತಿಪಾದಿಸುತ್ತಿರುವ ಲಿಂಗ ಸಮನ್ವಯವು ನಾಮಸಮನ್ವಯ ಮೂಲಕವಾಗಿದೆಯೋ? ಅಥವಾ ಲಿಂಗಸಮನ್ವಯ ಮೂಲಕವಾಗಿದೆಯೋ ? ಎಂದು ಸಂಶಯ. ನಾಮಾತ್ಮಕಶಬ್ದದ ಬಲದಿಂದ ಲಿಂಗಾತ್ಮಕಶಬ್ದದ ಸಮನ್ವಯವನ್ನು ಮಾಡಿದರೆ ಅನ್ಯೋನ್ಯಾಶ್ರಯ ದೋಷವು ಸ್ಪಷ್ಟವಾಗಿ ಬರುತ್ತದೆ. ಇನ್ನು ಲಿಂಗದಿಂದ ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಹೇಳಿದರೆ ಎಲ್ಲ ಲಿಂಗಗಳು ವಿಷ್ಣುಪ್ರತಿಪಾದಕವಲ್ಲವೆಂಬ ವಿಪ್ರತಿಪತ್ತಿಯು ಇಲ್ಲಿಯ ತನಕ ಇರುವುದರಿಂದ ಅಂತಹ ಸಮನ್ವಯವು ಸಿದ್ಧವಾಗುವುದಿಲ್ಲ. ಈ ಸಮಸ್ಯೆಯ ಪರಿಹಾರಕ್ಕೋಸ್ಕರವೇ ಶ್ರೀಮದಾಚಾರ್ಯರು 'ಲಿಂಗೈರ್ಹಿ' ಎಂದು ಹೇಳಿದ್ದಾರೆ. 'ಲಿಂಗೈರ್ಹಿ' ಎಂಬ ಮಾತಿಗೆ ಪ್ರಮಾಣಗಳಿಂದ ಸಿದ್ಧವಾದ ಆಯಾ ಪ್ರಕರಣಗಳಲ್ಲಿರುವ ನಿರವಕಾಶವಾದ ಮತ್ತು ವಿಪ್ರತಿಪತ್ತಿಗಳಿಲ್ಲದ ಲಿಂಗಗಳೆಂದು ಅರ್ಥ. ಉಪಲಕ್ಷಣಗಳಿಂದ ನಿರವಕಾಶವಾದ ಶ್ರುತ್ಯಾದಿ ಪ್ರಮಾಣಗಳಿಂದ ಎಂಬುದನ್ನೂ ಸಹ ವಿವಕ್ಷಿಸಬೇಕು.

ननु प्राणशब्दितस्य विष्णोरुपासनार्थं 'स इदं ब्रह्म ततमम्' इत्यादिनोक्त-ततमत्वादिगुणवत्त्वमयुक्तम् । तत्रैवैतरेये उत्तरत्र 'एतमस्यां एतं दिवि' इत्यादौ वाक्ये एतमित्येतच्छब्देन 'आदित्यो रसः' इति पूर्वप्रकृततया आदित्यं वा, 'चक्षुर्मयः श्रोत्रमयः' इत्यादिना वक्ष्यमाणजीवं वा परामृश्य तस्य पृथिव्यादिकतिचिज्जीवदेहहृदयगुहास्थत्वमुक्त्वा अन्ते 'सर्वेषु भूतेषु एतमेव ब्रह्मेत्याचक्षते' इत्यत्र भूतेष्वेतमेवाचक्षते नान्यमिति सर्वभूतहृदये जीवादित्ययोरेव सत्त्वोक्त्या प्राचीनततमत्वान्तस्थत्वयोरपि तयोरेवावश्यसम्भावात्, एकप्रकरणस्थत्वात् । व्याप्तस्य हरेः अल्पदेशे अन्तरवस्थानायोगाच्च । देहान्तरस्थत्वे जीवसमानभोगप्राप्तेश्चेत्यतः प्राप्तम् – सर्वत्र प्रसिद्धोपदेशादित्यादिसूत्राष्टकम् ।।

ಪರಿಪೂರ್ಣಚಂದ್ರಿಕಾ

ಹಿಂದಿನ ಅಧಿಕರಣದಲ್ಲಿ ಪ್ರಾಣಶಬ್ದವಾಚ್ಯನಾದ ವಿಷ್ಣುವಿನ ಉಪಾಸನೆಗೋಸ್ಕರ 'ಸ ಇದಂ ಬ್ರಹ್ಮ ತತಮಂ' ಎಂಬುದಾಗಿ ಹೇಳಲ್ಪಟ್ಟ ಬ್ರಹ್ಮನನ್ನು ವ್ಯಾಪ್ತತ್ವವೆಂಬ ಗುಣದಿಂದ ಉಪಾಸನೆ ಮಾಡಬೇಕೆಂದು ಹೇಳಲಾಯಿತು. ಇದು ಅಯುಕ್ತ. ಏಕೆಂದರೆ ಅದೇ ಐತರೇಯ ಭಾಗದಲ್ಲಿ ಮುಂದೆ 'ಏತಮಸ್ಯಾಂ ಏತಂ ದಿವಿ' ಎಂಬುದಾಗಿ ಏತತ್ ಶಬ್ದದಿಂದ 'ಆದಿತ್ಯೋ ರಸಃ' ಎಂಬುದಾಗಿ ಪೂರ್ವಪ್ರಕೃತನಾದ ಆದಿತ್ಯನನ್ನು ಪರಾಮರ್ಶಿಸಲಾಗಿದೆ. ಅಥವಾ 'ಚಕ್ಷುರ್ಮಯಃ ಶ್ರೋತ್ರಮಯಃ' ಎಂಬುದಾಗಿ ಮುಂದೆ ಪ್ರಸಕ್ತನಾಗುವ ಜೀವನನ್ನು ಪರಾಮರ್ಶಿಸಲಾಗಿದೆ. ಆದಿತ್ಯ ಅಥವಾ ಜೀವನು ಪೃಥಿವೀ ಮೊದಲಾದ ಕೆಲವು ಜೀವರ ದೇಹದ ಹೃದಯಗುಹೆಯಲ್ಲಿರುವಿಕೆಯನ್ನು ಹೇಳಲಾಗಿದೆ. ಕೊನೆಯಲ್ಲಿ 'ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಕ್ಷತೇ' ಎಂಬುದಾಗಿ ಸಕಲ ಭೂತಗಳ ಹೃದಯದಲ್ಲಿರುವ ಜೀವನು ಅಥವಾ ಆದಿತ್ಯನು ಇದ್ದಾನೆಂದು ಹೇಳಲಾಗಿದೆ. ಆದ್ದರಿಂದ ಮೊದಲು ಪ್ರಸಕ್ತವಾಗಿರುವ ತತಮತ್ವ ಎಂಬ ಶಬ್ದಕ್ಕೆ ವ್ಯಾಪ್ತತ್ವ ಅಥವಾ ಅಂತಸ್ಥತ್ವ ಎಂದರ್ಥ. ಈ ಧರ್ಮಗಳು ಜೀವ ಮತ್ತು ಆದಿತ್ಯನಲ್ಲಿಯೇ ಇರುತ್ತವೆಂದು ಹೇಳಬೇಕು. ವಿಷ್ಣುವಿನ ಧರ್ಮವೆಂದು ಹೇಳಬಾರದು. ಏಕೆಂದರೆ ಒಂದೇ ಪ್ರಕರಣದಲ್ಲಿ ಜೀವನಿಗೆ ಅಥವಾ ಆದಿತ್ಯನಿಗೆ ವ್ಯಾಪ್ತತ್ವವನ್ನು ಹೇಳಿ ಮತ್ತೊಂದು ಕಡೆ ವಿಷ್ಣುವಿನ ವ್ಯಾಪ್ತತ್ವವನ್ನು ಹೇಳುವುದು ಸರಿಯಲ್ಲ. ಅಷ್ಟೇ ಅಲ್ಲದೆ ಸರ್ವತ್ರ ವ್ಯಾಪ್ತನಾದ ಪರಮಾತ್ಮನು ಹೃದಯಗುಹೆಯಲ್ಲಿದ್ದಾನೆಂದು ಹೇಳಿದರೆ ಜೀವನಿಗೆ ಉಂಟಾಗುವ ಸುಖದುಃಖಗಳ ಭೋಗವು ವಿಷ್ಣುವಿಗೂ ಬರಬೇಕಾಗುತ್ತದೆ. ಆದ್ದರಿಂದ ಹಿಂದಿನ ಅಂತಿಮಪ್ರಾಣಾಧಿಕರಣದಲ್ಲಿ ಪ್ರಸಕ್ತವಾದ ತತಮತ್ವವು ವ್ಯಾಪ್ತತ್ವರೂಪವಾದದ್ದಲ್ಲವೆಂಬ ಶಂಕೆಗೆ ಉತ್ತರ ನೀಡುವುದಕ್ಕಾಗಿ 'ಸರ್ವತ್ರ ಪ್ರಸಿದ್ಧೋಪದೇಶಾತ್' ಮೊದಲಾದ ಎಂಟು ಸೂತ್ರಗಳು ಹೊರಟಿವೆ. ಈ ಅಧಿಕರಣದಲ್ಲಿರುವ ಎಲ್ಲಾ ಸೂತ್ರಗಳ ಸಾರವನ್ನೇ ಅಣುಭಾಷ್ಯದಲ್ಲಿ 'ಸರ್ವಗಃ' ಎಂದು ಸಂಗ್ರಹಿಸಿದ್ದಾರೆ.

तदर्थः – **सर्वग इति ।। लिङ्गैः सर्वैर्युतः स हीत्यन्वेति । विष्णुरेवैक इति च ।** 'एतमस्याम्' इत्यादिनोक्तः सर्वगः सर्वभूतदेहहृदयगुहागतः सः प्राक् ततमत्वेनोक्तो विष्णुरेव । नत्वादित्यः सर्वे जीवा वा । कुतः? **लिङ्गैः सर्वैर्युतो हीति ।।** हिर्हेतौ । 'एतमेव ब्रह्म' इति, 'अशरीरः प्रज्ञात्मा' इति, 'स योऽतोऽश्रुतोऽगतोऽमतः' इति 'आत्मानं परस्मै शंसति' इत्यादिनोक्तसावधारणब्रह्मशब्दार्थत्व-अशरीरत्व-अश्रुतत्वादिजीवकर्तृकशंसनक्रियाकर्मत्वाद्येतत्प्रकरणश्रुतलिङ्गयुक्तत्वाद् विष्णोरित्यर्थः। तच्च भाष्योक्तश्रुत्या सिद्धमिति भावः ।

ಎಲ್ಲ ಲಿಂಗಗಳು ವಿಷ್ಣುವಿನಲ್ಲಿಯೇ ಪ್ರಸಿದ್ಧವಾಗಿವೆಯೆಂಬುದನ್ನು ಶ್ರೀಮದಾಚಾರ್ಯರು 'ಪ್ರಸಿದ್ಧೈರನ್ಯವಸ್ತುಷು ಉಚ್ಯತೇ ವಿಷ್ಣುರೇವೈಕಃ' ಎಂದು ಹೇಳಿದ್ದಾರೆ. ವಸ್ತುತಃ 'ಲಿಂಗೈ ಸರ್ವೈರ್ಯುತಃ ಸ ಹಿ' ಎಂಬ ಎರಡನೆಯ ಪಾದದ ಅರ್ಥವನ್ನು ಸಂಗ್ರಹಿಸುವ ಈ ವಾಕ್ಯವನ್ನು ಇಲ್ಲಿಯೂ ಸಹ ಅನ್ವಯ ಮಾಡಬೇಕು. ಪ್ರಥಮಪಾದದಲ್ಲಿ ಎಲ್ಲಾ ನಾಮಾತ್ಮಕವಾದ ಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನೆನ್ನಲಾಯಿತು. ಆ ವಿಷ್ಣುವೊಬ್ಬನೇ ಅನ್ಯವಸ್ತುಗಳಲ್ಲಿ ಪ್ರಸಿದ್ಧವಾದ ಲಿಂಗಾತ್ಮಕ ಶಬ್ದಗಳಿಂದಲೂ ಪ್ರತಿಪಾದ್ಯನಾಗಿದ್ದಾನೆಂದು ಈ ಪಾದದಲ್ಲಿ ಪ್ರತಿಪಾದಿಸುತ್ತಿದ್ದಾರೆ. ಈ ಪಾದದಲ್ಲಿ ವಿಪ್ರತಿಪನ್ನವಾದ ಎಲ್ಲ ವಿಧವಾದ ಲಿಂಗಗಳ ಸಮನ್ವಯವನ್ನು ಸಾಧಿಸುತ್ತಿದ್ದಾರೆ.

ಈ ಪಾದದಲ್ಲಿ ಪ್ರತಿಪಾದಿಸುತ್ತಿರುವ ಲಿಂಗ ಸಮನ್ವಯವು ನಾಮಸಮನ್ವಯ ಮೂಲಕವಾಗಿದೆಯೋ? ಅಥವಾ ಲಿಂಗಸಮನ್ವಯ ಮೂಲಕವಾಗಿದೆಯೋ ? ಎಂದು ಸಂಶಯ. ನಾಮಾತ್ಮಕಶಬ್ದದ ಬಲದಿಂದ ಲಿಂಗಾತ್ಮಕಶಬ್ದದ ಸಮನ್ವಯವನ್ನು ಮಾಡಿದರೆ ಅನ್ಯೋನ್ಯಾಶ್ರಯ ದೋಷವು ಸ್ಪಷ್ಟವಾಗಿ ಬರುತ್ತದೆ. ಇನ್ನು ಲಿಂಗದಿಂದ ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಹೇಳಿದರೆ ಎಲ್ಲ ಲಿಂಗಗಳು ವಿಷ್ಣುಪ್ರತಿಪಾದಕವಲ್ಲವೆಂಬ ವಿಪ್ರತಿಪತ್ತಿಯು ಇಲ್ಲಿಯ ತನಕ ಇರುವುದರಿಂದ ಅಂತಹ ಸಮನ್ವಯವು ಸಿದ್ಧವಾಗುವುದಿಲ್ಲ. ಈ ಸಮಸ್ಯೆಯ ಪರಿಹಾರಕ್ಕೋಸ್ಕರವೇ ಶ್ರೀಮದಾಚಾರ್ಯರು 'ಲಿಂಗೈರ್ಹಿ' ಎಂದು ಹೇಳಿದ್ದಾರೆ. 'ಲಿಂಗೈರ್ಹಿ' ಎಂಬ ಮಾತಿಗೆ ಪ್ರಮಾಣಗಳಿಂದ ಸಿದ್ಧವಾದ ಆಯಾ ಪ್ರಕರಣಗಳಲ್ಲಿರುವ ನಿರವಕಾಶವಾದ ಮತ್ತು ವಿಪ್ರತಿಪತ್ತಿಗಳಿಲ್ಲದ ಲಿಂಗಗಳೆಂದು ಅರ್ಥ. ಉಪಲಕ್ಷಣಗಳಿಂದ ನಿರವಕಾಶವಾದ ಶ್ರುತ್ಯಾದಿ ಪ್ರಮಾಣಗಳಿಂದ ಎಂಬುದನ್ನೂ ಸಹ ವಿವಕ್ಷಿಸಬೇಕು.

**ननु प्राणशब्दितस्य विष्णोरुपासनार्थं 'स इदं ब्रह्म ततमम्' इत्यादिनोक्त-ततमत्वादिगुणवत्त्वमयुक्तम् । तत्रैवैतरेये उत्तरत्र 'एतमस्यां एतं दिवि' इत्यादौ वाक्ये एतमित्येतच्छब्देन 'आदित्यो रसः' इति पूर्वप्रकृततया आदित्यं वा, 'चक्षुर्मयः श्रोत्रमयः' इत्यादिना वक्ष्यमाणजीवं वा परामृश्य तस्य पृथिव्यादिकतिचिज्जीवदेहहृदयगुहास्थत्वमुक्त्वा अन्ते 'सर्वेषु भूतेषु एतमेव ब्रह्मेत्याचक्षते' इत्यत्र भूतेष्वेतमेवाचक्षते नान्यमिति सर्वभूतहृदये जीवादित्ययोरेव सत्त्वोक्त्या प्राचीनततमत्वान्तस्थत्वयोरपि तयोरेवावश्यसम्भावात्, एकप्रकरणस्थत्वात् । व्याप्तस्य हरेः अल्पदेशे अन्तरवस्थानायोगाच्च । देहान्तरस्थत्वे जीवसमानभोगप्राप्तेश्चेत्यतः प्राप्तम् – सर्वत्र प्रसिद्धोपदेशादित्यादिसूत्राष्टकम् ।।**

ಪರಿಪೂರ್ಣಚಂದ್ರಿಕಾ

ಹಿಂದಿನ ಅಧಿಕರಣದಲ್ಲಿ ಪ್ರಾಣಶಬ್ದವಾಚ್ಯನಾದ ವಿಷ್ಣುವಿನ ಉಪಾಸನೆಗೋಸ್ಕರ 'ಸ ಇದಂ ಬ್ರಹ್ಮ ತತಮಂ' ಎಂಬುದಾಗಿ ಹೇಳಲ್ಪಟ್ಟ ಬ್ರಹ್ಮನನ್ನು ವ್ಯಾಪ್ತತ್ವವೆಂಬ ಗುಣದಿಂದ ಉಪಾಸನೆ ಮಾಡಬೇಕೆಂದು ಹೇಳಲಾಯಿತು. ಇದು ಅಯುಕ್ತ. ಏಕೆಂದರೆ ಅದೇ ಐತರೇಯ ಭಾಗದಲ್ಲಿ ಮುಂದೆ 'ಏತಮಸ್ಯಾಂ ಏತಂ ದಿವಿ' ಎಂಬುದಾಗಿ ಏತತ್ ಶಬ್ದದಿಂದ 'ಆದಿತ್ಯೋ ರಸಃ' ಎಂಬುದಾಗಿ ಪೂರ್ವಪ್ರಕೃತನಾದ ಆದಿತ್ಯನನ್ನು ಪರಾಮರ್ಶಿಸಲಾಗಿದೆ. ಅಥವಾ 'ಚಕ್ಷುರ್ಮಯಃ ಶ್ರೋತ್ರಮಯಃ' ಎಂಬುದಾಗಿ ಮುಂದೆ ಪ್ರಸಕ್ತನಾಗುವ ಜೀವನನ್ನು ಪರಾಮರ್ಶಿಸಲಾಗಿದೆ. ಆದಿತ್ಯ ಅಥವಾ ಜೀವನು ಪೃಥಿವೀ ಮೊದಲಾದ ಕೆಲವು ಜೀವರ ದೇಹದ ಹೃದಯಗುಹೆಯಲ್ಲಿರುವಿಕೆಯನ್ನು ಹೇಳಲಾಗಿದೆ. ಕೊನೆಯಲ್ಲಿ 'ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಕ್ಷತೇ' ಎಂಬುದಾಗಿ ಸಕಲ ಭೂತಗಳ ಹೃದಯದಲ್ಲಿರುವ ಜೀವನು ಅಥವಾ ಆದಿತ್ಯನು ಇದ್ದಾನೆಂದು ಹೇಳಲಾಗಿದೆ. ಆದ್ದರಿಂದ ಮೊದಲು ಪ್ರಸಕ್ತವಾಗಿರುವ ತತಮತ್ವ ಎಂಬ ಶಬ್ದಕ್ಕೆ ವ್ಯಾಪ್ತತ್ವ ಅಥವಾ ಅಂತಸ್ತತ್ವ ಎಂದರ್ಥ. ಈ ಧರ್ಮಗಳು ಜೀವ ಮತ್ತು ಆದಿತ್ಯನಲ್ಲಿಯೇ ಇರುತ್ತವೆಂದು ಹೇಳಬೇಕು. ವಿಷ್ಣುವಿನ ಧರ್ಮವೆಂದು ಹೇಳಬಾರದು. ಏಕೆಂದರೆ ಒಂದೇ ಪ್ರಕರಣದಲ್ಲಿ ಜೀವನಿಗೆ ಅಥವಾ ಆದಿತ್ಯನಿಗೆ ವ್ಯಾಪ್ತತ್ವವನ್ನು ಹೇಳಿ ಮತ್ತೊಂದು ಕಡೆ ವಿಷ್ಣುವಿನ ವ್ಯಾಪ್ತತ್ವವನ್ನು ಹೇಳುವುದು ಸರಿಯಲ್ಲ. ಅಷ್ಟೇ ಅಲ್ಲದೆ ಸರ್ವತ್ರ ವ್ಯಾಪ್ತನಾದ ಪರಮಾತ್ಮನು ಹೃದಯಗುಹೆಯಲ್ಲಿದ್ದಾನೆಂದು ಹೇಳಿದರೆ ಜೀವನಿಗೆ ಉಂಟಾಗುವ ಸುಖದುಃಖಗಳ ಭೋಗವು ವಿಷ್ಣುವಿಗೂ ಬರಬೇಕಾಗುತ್ತದೆ. ಆದ್ದರಿಂದ ಹಿಂದಿನ ಅಂತಿಮಪ್ರಾಣಾಧಿಕರಣದಲ್ಲಿ ಪ್ರಸಕ್ತವಾದ ತತಮತ್ವವು ವ್ಯಾಪ್ತತ್ವರೂಪವಾದದ್ದಲ್ಲವೆಂಬ ಶಂಕೆಗೆ ಉತ್ತರ ನೀಡುವುದಕ್ಕಾಗಿ 'ಸರ್ವತ್ರ ಪ್ರಸಿದ್ಧೋಪದೇಶಾತ್' ಮೊದಲಾದ ಎಂಟು ಸೂತ್ರಗಳು ಹೊರಟಿವೆ. ಈ ಅಧಿಕರಣದಲ್ಲಿರುವ ಎಲ್ಲಾ ಸೂತ್ರಗಳ ಸಾರವನ್ನೇ ಅಣುಭಾಷ್ಯದಲ್ಲಿ 'ಸರ್ವಗಃ' ಎಂದು ಸಂಗ್ರಹಿಸಿದ್ದಾರೆ.

तदर्थः – **सर्वग इति ।। लिङ्गैः सर्वैर्युतः स हीत्यन्वेति । विष्णुरेवैक इति च ।** 'एतमस्याम्' इत्यादिनोक्तः सर्वगः सर्वभूतदेहहृदयगुहागतः सः प्राक् ततमत्वेनोक्तो विष्णुरेव । नत्वादित्यः सर्वे जीवा वा । कुतः? **लिङ्गैः सर्वैर्युतो हीति ।।** हिर्हेतौ । 'एतमेव ब्रह्म' इति, 'अशरीरः प्रज्ञात्मा' इति, 'स योऽतोऽश्रुतोऽगतोऽमतः' इति 'आत्मानं परस्मै शंसति' इत्यादिनोक्तसावधारणब्रह्मशब्दार्थत्व-अशरीरत्व-अश्रुतत्वादिजीवकर्तृकशंसनक्रियाकर्मत्वाद्येतत्प्रकरणश्रुतलिङ्गयुक्तत्वाद् विष्णोरित्यर्थः। तच्च भाष्योक्तश्रुत्या सिद्धमिति भावः ।

'ಲಿಂಗೈಃ ಸರ್ವೈರ್ಯುತಃ ಸ ಹಿ' ಎಂಬುದನ್ನು 'ವಿಷ್ಣುರೇವೈಕಃ' ಎಂಬುದನ್ನು 'ಸರ್ವಗಃ' ಎಂಬಲ್ಲಿ ಅನ್ವಯ ಮಾಡಿಕೊಳ್ಳಬೇಕು. 'ಏತಮಸ್ಯಾಮ್' ಎಂಬ ಶ್ರುತಿಯಲ್ಲಿ ಸರ್ವಗತತ್ವವನ್ನು ಹೇಳಲಾಗಿದೆ. ಅಂದರೆ ಸರ್ವಭೂತಗಳ ದೇಹದ ಹೃದಯಗುಹೆಯಲ್ಲಿರುವ ಎಂದರ್ಥ. 'ಸಃ' ಎಂದರೆ ಹಿಂದಿನ ಪ್ರಾಣಾಧಿಕರಣದಲ್ಲಿ ತತಮತ್ವ ಧರ್ಮದಿಂದ ಹೇಳಲ್ಪಟ್ಟಿರುವವನು ವಿಷ್ಣುವೇ ಆಗಿದ್ದಾನೆಂದರ್ಥ; ಹೊರತು ಆದಿತ್ಯ ಅಥವಾ ಜೀವರುಗಳು ಸರ್ವಗತರಲ್ಲ. ಏಕೆಂದರೆ 'ಏತಮೇವ ಬ್ರಹ್ಮ', 'ಅಶರೀರಃ ಪ್ರಜ್ಞಾತ್ಮಾ' 'ಸ ಯೋಽತೋಽಶ್ರುತೋಽಗತೋಽಮತಃ' 'ಆತ್ಮಾನಾಂ ಪರಸ್ಮೈ ಶಂಸತಿ' ಇವೇ ಮೊದಲಾದ ಶ್ರುತಿಗಳಲ್ಲಿ ಅವಧಾರಣದಿಂದ ಸಹಿತವಾದ ಬ್ರಹ್ಮಶಬ್ದಾರ್ಥತ್ವ, ಅಶರೀರತ್ವ, ಅಶ್ರುತತ್ವ, ಜೀವಕರ್ತೃಕಶಂಸನಕ್ರಿಯಾವಿಷಯತ್ವ ಮೊದಲಾದ ಲಿಂಗಗಳು ಕೇಳಿಸುತ್ತಿವೆ. ಇವೆಲ್ಲವೂ ವಿಷ್ಣುವಿನ ಅಸಾಧಾರಣ ಧರ್ಮಗಳು ಈ ವಿಷಯಗಳು ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಗಳಿಂದ ಸಿದ್ಧವಾಗುತ್ತವೆ.

यद्वा एतैर्लिङ्गैर्युतः सर्वगो विष्णुरेव । तेषां लिङ्गानां भाष्योक्तवाक्यैर्वैष्णवत्व-प्रसिद्धेरिति हेरर्थः । मुख्यब्रह्मणः एव सावधारणब्रह्मशब्दार्थत्वात् । अन्यस्य मुख्यत्वे अस्यामुख्यत्वे वा 'एतमेव ब्रह्मेत्याचक्षते' इत्यस्यायोगात् । अश्रुतत्वाद्यप्येवं ध्येयम् ।

ಅಥವಾ ಈ ಲಿಂಗಗಳಿಂದ ಯುಕ್ತನಾದವನು ಸರ್ವಗತನಾದ ವಿಷ್ಣುವೇ ಆಗಿದ್ದಾನೆ. ಏಕೆಂದರೆ ಭಾಷ್ಯದಲ್ಲಿ ಉದಾಹರಿಸಿದ ವಾಕ್ಯಗಳಿಂದ ಇವೆಲ್ಲವೂ ವಿಷ್ಣುವಿನ ಅಸಾಧಾರಣ ಧರ್ಮಗಳೆಂದು ಪ್ರಸಿದ್ಧವಾಗಿವೆ. ಇದನ್ನು 'ಹಿ' ಶಬ್ದವು ಹೇಳುತ್ತಿದೆ. 'ಏತಮೇವ ಬ್ರಹ್ಮ' ಎಂಬ ಶ್ರುತಿಯಲ್ಲಿರುವ ಬ್ರಹ್ಮಶಬ್ದಕ್ಕೆ ಮುಖ್ಯಬ್ರಹ್ಮನೇ ಅರ್ಥನಾಗಿದ್ದಾನೆ. ಬೇರೆಯವರಿಗೆ ಮುಖ್ಯಾರ್ಥತ್ವವನ್ನು ಹೇಳಿದರೆ ಅಥವಾ ವಿಷ್ಣುವನ್ನು ಅಮುಖ್ಯಾರ್ಥನೆಂದು ಹೇಳಿದರೆ ಸಾವಧಾರಣವಾದ 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬ ಪ್ರಯೋಗವು ಅಯುಕ್ತವಾಗುತ್ತದೆ. ಇದರಂತೆ ಅಶ್ರುತತ್ವಾದಿ ಧರ್ಮಗಳಿರುವುದರಿಂದಲೂ ವಿಷ್ಣುವೇ ಮುಖ್ಯಾರ್ಥನೆಂದು ತಿಳಿಯಬೇಕು.

ननु 'तस्यैतस्यासावादित्यो रसः', 'पुरुषं पुरुषं प्रत्यादित्यः' इत्यादित्यशब्दस्य नामपादीयन्यायेन वैष्णवत्वेऽपि संवत्सरसारत्वसर्वपुरुषाभिमुख्याद्यादित्यलिङ्गस्य 'चक्षुर्मयः, श्रोत्रमयः' इति चक्षुर्मयत्वादेः हृदयगुहारूपाल्पस्थानत्वरूपाल्पौकस्त्वस्य जीवलिङ्गस्य भावात्तद्विरोध इत्यतोऽपि लिङ्गैः सर्वैर्युतः स हीति ॥

'ತಸ್ಯೈತಸ್ಯಾಸಾವಾದಿತ್ಯೋ ರಸಃ', 'ಪುರುಷಂ ಪುರುಷಂ ಪ್ರತ್ಯಾದಿತ್ಯಃ' ಇವೇ ಮೊದಲಾದ ಶ್ರುತಿಗಳಲ್ಲಿ ಆದಿತ್ಯ ಶಬ್ದವಿದೆ. ಇವು ನಾಮಪಾದದ ನ್ಯಾಯದಂತೆ ವಿಷ್ಣುವನ್ನೇ ಪ್ರತಪಾದಿಸುತ್ತವೆ.

ಆದರೆ ಸಂವತ್ಸರಸಾರತ್ವ ಸರ್ವಪುರುಷಾಭಿಮುಖ್ಯ ಮೊದಲಾದವುಗಳು ಲಿಂಗಗಳಾಗಿದೆ. ಚಕ್ಷುರ್ಮಯ ಹಾಗೂ ಶ್ರೋತ್ರಮಯ ಎಂಬಲ್ಲಿ ಹೇಳಲ್ಪಟ್ಟ ಚಕ್ಷುರ್ಮಯತ್ವಾದಿಗಳು ಹೃದಯಗುಹೆಯೆಂಬ ಅಲ್ಪಸ್ಥಾನತ್ವ ರೂಪವಾದ ಅಲ್ಪೌಕಸ್ತ್ವವು ಜೀವನ ಲಿಂಗವಾಗಿದೆಯೆಂದು ಶ್ರುತಿಗಳು ಹೇಳುತ್ತಿವೆ. ಎಲ್ಲವನ್ನು ನೀವು ವಿಷ್ಣುಲಿಂಗಗಳೆಂದು ಹೇಳಿದರೆ ಈ ಶ್ರುತಿಗಳ ವಿರೋಧ ಬರುತ್ತದಲ್ಲವೆ? ಎಂಬ ಪ್ರಶ್ನೆಗೆ 'ಲಿಂಗೈಃ ಸರ್ವೈರ್ಯುತಃ ಸ ಹಿ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

स हि विष्णुरेव संवत्सरसारत्वादिसर्वलिङ्गैर्युतो हि प्रसिद्धमेतत् श्रुत्यादाविति । तथाहि 'संवत्सरो हि प्रजापतिः', 'तत्र संवत्सरं नाम ब्रह्माणमसृजत्', 'संवत्सराभिमानी तु ब्रह्मा' इत्यादिश्रुतिस्मृतिभिः संवत्सरस्य विरिञ्चत्वेन तन्नियन्तृत्वरूपसारत्वस्य च 'यो ब्रह्माणं विदधाति पूर्वम्' इत्यादिश्रुतिस्मृतिभिः,

सर्वपुरुषाभिमुख्यस्य मण्डलद्वारा आदित्य इव 'स एषोऽन्तरादित्ये हिरण्मयः पुरुषः', 'यश्चासावादित्ये', 'ध्येयः सदा सवितृमण्डलमध्यवर्ती नारायणः' 'ब्रह्मणः सारभूतस्तु प्रद्युम्नो भगवान् हरिः । स एवादित्यसंस्थश्च' इत्यादिश्रुतिस्मृतिभिः आदित्यस्थतया निर्णीते हरौ चक्षुर्मयत्वादेश्च

'सर्वेन्द्रियमयो विष्णुः सर्वप्राणिषु संस्थितः' इति स्मृत्या चक्षुचुरादिस्वामित्वेन च पूर्णानन्द इत्यत्रोक्तन्यायेन 'पूर्णदर्शनशक्तित्वाच्चक्षुर्मयः' इत्यादिस्मृत्या च मयटः प्राचुर्यार्थत्वेन च उपपत्तेः ।

ಸ ಹಿ = ವಿಷ್ಣುವೇ, ಲಿಂಗೈಃ = ಸಂವತ್ಸರಸಾರತ್ವ ಮೊದಲಾದ ಸಕಲಲಿಂಗಗಳಿಂದ, ಯುತಃ = ಕೂಡಿದ್ದಾನೆ. ಹಿ = ಇದು ಶ್ರುತ್ಯಾದಿಗಳಲ್ಲಿ ಪ್ರಸಿದ್ಧವಾಗಿದೆಯಷ್ಟೇ. ಅದು ಹೀಗೆ - 'ಸಂವತ್ಸರೋ ಹಿ ಪ್ರಜಾಪತಿಃ', 'ತತ್ರ ಸಂವತ್ಸರಂ ನಾಮ ಬ್ರಹ್ಮಾಣಮಸೃಜತ್', 'ಸಂವತ್ಸರಾಭಿಮಾನೀ ತು ಬ್ರಹ್ಮಾ' ಇವೇ ಮೊದಲಾದ ಶ್ರುತಿ ಸ್ಮೃತಿಗಳಿಂದ ಚತುರ್ಮುಖಬ್ರಹ್ಮನು ಸಂವತ್ಸರ ಶಬ್ದದಿಂದ ವಾಚ್ಯನಾಗಿದ್ದಾನೆ. ಅವನನ್ನು ನಿಯಂತ್ರಣ ಮಾಡುವಿಕೆಯೇ 'ಸಂವತ್ಸರಸಾರತ್ವ' ಎನಿಸುತ್ತದೆ. ಚತುರ್ಮುಖಬ್ರಹ್ಮನನ್ನು ನಿಯಂತ್ರಣ ಮಾಡುವ ಸಾಮರ್ಥ್ಯ ವಿಷ್ಣುವಿಗಷ್ಟೇ ಇರುವುದರಿಂದ 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಮ್' ಇತ್ಯಾದಿ ಶ್ರುತಿಸ್ಮೃತಿಗಳಿಂದ ವಿಷ್ಣುವೇ ಸಂವತ್ಸರಸಾರ ಎನಿಸಿದ್ದಾನೆ.

'ಸರ್ವಪುರುಷಾಭಿಮುಖ್ಯ' ಎಂಬ ಧರ್ಮವು ವಿಷ್ಣುವಿನಲ್ಲೇ ಬರುತ್ತದೆ. ವಸ್ತುತಃ ಸೂರ್ಯನಲ್ಲಿಯೂ ಸಹ ನೇರವಾಗಿ ಸರ್ವಪುರುಷಾಭಿಮುಖ್ಯವನ್ನು ಹೇಳಲಾಗದು. ಹೊರತಾಗಿ ಸೂರ್ಯಮಂಡಲವೇ ಸಕಲ ಪುರುಷರಿಗೆ ಅಭಿಮುಖವಾಗಿದೆ. ಅದರ ಒಳಗಡೆ ಸೂರ್ಯನಿದ್ದಾನೆಂಬ

ಅಭಿಪ್ರಾಯದಿಂದ ಸೂರ್ಯನಿಗೆ ಸರ್ವಪುರುಷಾಭಿಮುಖ್ಯವನ್ನು ನೀವು ಹೇಳಬೇಕು. ನಾವೂ ಸಹ ಅದೇ ಸೂರ್ಯಮಂಡಲದಲ್ಲಿರುವ ನಾರಾಯಣನಿಗೆ ಸರ್ವಪುರುಷಾಭಿಮುಖ್ಯವನ್ನು ಹೇಳುತ್ತೇವೆ. 'ಸ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ', 'ಯಶ್ಚಾಸಾವಾದಿತ್ಯೇ', 'ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ' 'ಬ್ರಹ್ಮಣಃ ಸಾರಭೂತಸ್ತು ಪ್ರದ್ಯುಮ್ನೋ ಭಗವಾನ್ ಹರಿಃ । ಸ ಏವಾದಿತ್ಯಸಂಸ್ಥಶ್ಚ' ಇವೇ ಮೊದಲಾದ ಶ್ರುತಿಸ್ಮೃತಿಗಳಲ್ಲಿ ಆದಿತ್ಯನಲ್ಲಿ ಶ್ರೀಹರಿಯು ಇದ್ದಾನೆಂದು ನಿರ್ಣಯವಾಗಿದೆ. ಮತ್ತು ಜೀವನ ಲಿಂಗವೆನಿಸಿದ ಚಕ್ಷುರ್ಮಯತ್ವಾದಿಗಳೂ ಸಹ ವಿಷ್ಣುವಿನಲ್ಲೇ ಬರುತ್ತವೆ.

'ಸರ್ವೇಂದ್ರಿಯಮಯೋ ವಿಷ್ಣುಃ ಸರ್ವಪ್ರಾಣಿಷು ಸಂಸ್ಥಿತಃ' ಎಂಬ ಶ್ರುತಿಯಿಂದ ಚಕ್ಷುರಾದಿಗಳಿಗೆ ಸ್ವಾಮಿಯಾದ್ದರಿಂದ ಪೂರ್ಣಾನಂದನಾದ ಭಗವಂತನು ಚಕ್ಷುರ್ಮಯನೆನಿಸುತ್ತಾನೆ ಎಂಬ ನ್ಯಾಯದಿಂದ 'ಪೂರ್ಣದರ್ಶನಶಕ್ತಿತ್ವಾಚ್ಚಕ್ಷುರ್ಮಯಃ' ಮೊದಲಾದ ಶ್ರುತಿಗಳಿಂದ ಮತ್ತು 'ಮಯಟ್' ಪ್ರತ್ಯಯಕ್ಕೆ ಪ್ರಾಚುರ್ಯವೆಂಬರ್ಥವಿರುವುದರಿಂದ ಭಗವಂತನೇ ಚಕ್ಷುರ್ಮಯ-ನಾಗುತ್ತಾನೆ.

**अर्भकौकस्त्वस्यापि व्याप्ते हरौ 'अन्तर्बहिश्च तत्सर्वं व्याप्य नारायणः स्थितः' इति श्रुत्या, 'अहमात्मा गुडाकेश सर्वभूताशयस्थितः' इत्यादिस्मृत्या, 'अन्तरः खवत्' इत्यत्र प्रसङ्गादुक्तयुक्त्या च समाहितत्वाद्वा ।**

ಅರ್ಭಕೌಕಸ್ತ್ವವೂ ಸಹ ವ್ಯಾಪ್ತನಾದ ಶ್ರೀಹರಿಯಲ್ಲಿಯೇ ಬರುತ್ತದೆ. 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಎಂಬ ಶ್ರುತಿಯಿಂದ 'ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ' ಎಂಬ ಮಾತಿನಂತೆ 'ಅಂತರಃ ಖವತ್' ಎಂಬುದಾಗಿ ಪ್ರಾಸಂಗಿಕವಾಗಿ ಹೇಳಿದ ಯುಕ್ತಿಯಿಂದ ವ್ಯಾಪ್ತನಾದ ಶ್ರೀಹರಿಯು ಅಲ್ಪಸ್ಥಾನದಲ್ಲಿಯೂ ಇರುತ್ತಾನೆಂದು ಸ್ಪಷ್ಟವಾಗುತ್ತದೆ.

**पूर्वस्मात् खवदिति पदस्यानुवृत्त्या खवत् सर्वगो विष्णुरित्यन्वयेन समाधानाद्वेति भावः ।**

ಹಿಂದಿರುವ 'ಖವತ್' ಎಂಬ ಪದವನ್ನು ಇಲ್ಲಿಯೂ ಅನುವೃತ್ತಿ ಮಾಡಿಕೊಳ್ಳಬೇಕು. ಆವಾಗ 'ಖವತ್ ಸರ್ವಗೋ ವಿಷ್ಣುಃ' ಎಂದಂತಾಗುತ್ತದೆ. ಆಕಾಶದಂತೆ ವ್ಯಾಪ್ತನಾದ ವಿಷ್ಣುವು ಅಂತಸ್ಥನಾಗುತ್ತಾನೆಂಬ ಸಮಾಧಾನವನ್ನು ಹೇಳಿದಂತಾಗುತ್ತದೆ.

**एतेन सर्वगो विष्णुरिति वचनेनैव 'तत्र तत्र स्थितो विष्णुः तत्तच्छक्तिप्रबोधकः' इत्याद्यनुभाष्योक्त्या सर्वगतत्वस्य तत्तच्छक्तिप्रबोधनार्थत्वात् सामर्थ्यातिशयेन**

जीवसमानभोगप्राप्तिरपि समाहितेति ध्येयम् । अत्र स इत्युक्तिः पूर्वोक्तेन ऐक्योक्त्यर्था ।

ಅನುವ್ಯಾಖ್ಯಾನದಲ್ಲಿ 'ಸರ್ವಗೋ ವಿಷ್ಣುಃ' ಎಂಬ ಅಣುಭಾಷ್ಯದ ಮಾತನ್ನೇ 'ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತಿಪ್ರಬೋಧಕಃ' ಎಂದು ವಿವರಿಸಿದ್ದಾರೆ. ಆಯಾ ವಸ್ತುಗಳಲ್ಲಿದ್ದು ಅವುಗಳ ಶಕ್ತಿಪ್ರಚೋದನೆಯನ್ನು ಮಾಡುವುದಕ್ಕಾಗಿ ಈ ಅಧಿಕರಣದಲ್ಲಿ ನಿರೂಪಿಸುತ್ತಿರುವ ಸರ್ವಗತತ್ವವು ಹೇಳಲ್ಪಟ್ಟಿದೆ. ಇದರಿಂದ ಜೀವನ ಜೊತೆಯಲ್ಲೇ ಇರುವ ಭಗವಂತನಿಗೂ ಸುಖದುಃಖಾದಿಗಳ ಅನುಭವವು ಉಂಟಾಗಲಿ ಎಂಬ ಆಕ್ಷೇಪವನ್ನು ಪರಿಹರಿಸಿದಂತಾಗುತ್ತದೆ. ಭಗವಂತನ ಸಾಮರ್ಥ್ಯಾತಿಶಯದಿಂದ ಜೀವನ ಜೊತೆಗಿದ್ದರೂ ಸಮಾನಭೋಗವನ್ನು ಹೊಂದಲಾರ. ಭಾಷ್ಯದಲ್ಲಿ 'ಸಃ' ಎಂದು ಹೇಳಿದ್ದು ಹಿಂದಿನ ಅಧಿಕರಣದಲ್ಲಿ ಪ್ರತಿಪಾದ್ಯನಾದ ಭಗವಂತನೇ ಸರ್ವಗತನಾಗಿದ್ದಾನೆಂದು ತಿಳಿಸುವುದಕ್ಕಾಗಿ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ
ತತ್ವಮಂಜರಿಯ ಕನ್ನಡಾನುವಾದದಲ್ಲಿ ಸರ್ವಗತತ್ವಾಧಿಕರಣವು ಮುಗಿಯಿತು.

* * * * *

श्री राघवेन्द्रतीर्थविरचिता

# तन्त्रदीपिका

## सर्वगतत्वाधिकरणम् -१

एवमन्यत्रप्रसिद्धाशेषनामसमन्वयमुक्त्वा अत्र पादे तादृशलिङ्गसमन्वय उच्यते –

**ॐ सर्वत्र प्रसिद्धोपदेशात् ॐ ॥ १-२-१ ॥**

अत्र नये सर्वत्रावस्थितत्वरूपतादृशभावाख्यलिङ्गसमन्वयः क्रियते । तत्त्विति वर्तते । उच्यमानमिति शेषः । सर्वत्र 'एतमस्यामेतं दिवि' इत्यादिना 'सर्वेषु भूतेषु' इत्यन्तेन पृथिव्यादिषूच्यमानम्, तत्तु ब्रह्मैव । न त्वादित्यो जीवो वा । कुतः? प्रसिद्धस्य ब्रह्मण्येव श्रुत्यादौ प्रसिद्धस्य ब्रह्मशब्दस्य 'एतमेव ब्रह्मेत्याचक्षते'

इत्युपदेशादित्यर्थः । ब्रह्मशब्दादिति वाच्ये प्रसिद्धेत्युक्तिः जीवादिग्रहणे प्रसिद्धिबाधसूचनाय ॥

ತಂತ್ರದೀಪಿಕಾ

ಹೀಗೆ ಅನ್ಯತ್ರಪ್ರಸಿದ್ಧವಾದ ನಾಮಾತ್ಮಕವಾದ ಎಲ್ಲಾ ಶಬ್ದಗಳನ್ನು ಸಮನ್ವಯ ಮಾಡಿದ್ದಾಯಿತು. ಈಗ ಎರಡನೆಯ ಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ಎಲ್ಲಾವಿಧ ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಮಾಡುತ್ತಿದ್ದಾರೆ.

ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ (೧-೨-೧)

ಈ ಸರ್ವಗತತ್ವಾಧಿಕರಣದಲ್ಲಿ ಸರ್ವತ್ರಾವಸ್ಥಿತತ್ವ ಎಂಬ ಭಾವರೂಪವಾದ ಲಿಂಗದ ಸಮನ್ವಯವನ್ನು ಮಾಡಲಾಗಿದೆ. ಈ ಸೂತ್ರದಲ್ಲಿ 'ತತ್' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. 'ಉಚ್ಯಮಾನಂ' ಎಂಬುದಾಗಿ ಸೇರಿಸಿಕೊಳ್ಳಬೇಕು.

ಆವಾಗ ಸೂತ್ರಾರ್ಥ ಹೀಗಾಗುತ್ತದೆ - ಸರ್ವತ್ರ = 'ಏತಮಸ್ಯಾಮೇತಂ ದಿವಿ' ಎಂದು ಪ್ರಾರಂಭಿಸಿ 'ಸರ್ವೇಷು ಭೂತೇಷು' ಎಂಬಲ್ಲಿಯ ತನಕ ಭೂಮಿ ಮೊದಲಾದವುಗಳಲ್ಲಿ, ಉಚ್ಯಮಾನಂ = ಹೇಳಲ್ಪಟ್ಟಿರುವುದು, ತತ್ = ಬ್ರಹ್ಮನೇ ಆಗಿದ್ದಾನೆ. ಆದಿತ್ಯನಾಗಲೀ ಜೀವನಾಗಲೀ ಅಲ್ಲ. ಎಕೆಂದರೆ ಪ್ರಸಿದ್ಧಸ್ಯ = ಶ್ರುತ್ಯಾದಿಗಳಿಂದ ಬ್ರಹ್ಮನಲ್ಲಿಯೇ ಪ್ರಸಿದ್ಧವಾದ ಬ್ರಹ್ಮಶಬ್ದದ, ಉಪದೇಶಾತ್ = 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂದು ಉಪದೇಶವಿರುವುದರಿಂದ ಎಂದು. ವಸ್ತುತಃ ಸೂತ್ರದಲ್ಲಿ 'ಬ್ರಹ್ಮಶಬ್ದಾತ್' ಎಂದೇ ಹೇಳಬೇಕಾಗಿತ್ತು. ಆದರೆ ಜೀವಾದಿಗಳನ್ನು ಸ್ವೀಕರಿಸಿದರೆ ಪ್ರಸಿದ್ಧಿಬಾಧದೋಷ ಬರುತ್ತದೆಂದು ಸೂಚಿಸುವುದಕ್ಕಾಗಿ 'ಪ್ರಸಿದ್ಧ' ಪದವನ್ನೇ ಉಪಯೋಗಿಸಿದ್ದಾರೆ.

इतश्चैवमित्याह –

ॐ विवक्षितगुणोपपत्तेश्च ॐ ॥ १-२-२ ॥

सर्वत्र तत्त्विति वर्तते । विवक्षितानां वक्तुं योग्यानां वक्ष्यमाणानामिति वा, उपसंहारस्थानामिति यावत्, तात्पर्यविषयाणामिति वा, गुणानां 'स योऽतोऽश्रुत' इत्याद्युक्ताश्रुतत्वादिधर्माणामुपपत्तेश्च पृथिव्यादौ ब्रह्मैव । जीवादावनुपपत्तेरित्यर्थः । विवक्षितेत्युक्तिर्गुणानामुपसंहारस्थत्वादिना प्राबल्यसूचनाय ।

ಪರಿಪೂರ್ಣಚಂದ್ರಿಕಾ

अनुव्याख्याने तु विवक्षित एतच्छ्रुत्यादावभिमतो दूरे शक्तस्यापि तत्तच्छक्तिप्रबोधनार्थं तत्र तत्रावस्थानरूपो यो गुणस्तस्य लीलयोपपत्तेर्दूरस्थस्यापि शक्तस्य तत्र तत्रावस्थानं व्यर्थमिति न चोद्यमिति वृत्त्यन्तरमभिप्रेतम् ॥

ಮತ್ತೊಂದು ಕಾರಣದಿಂದಲೂ ಸರ್ವಗತನು ಬ್ರಹ್ಮನೇ ಆಗಿದ್ದಾನೆಂದು ಹೇಳಲು ಮುಂದಿನ ಸೂತ್ರ ಹೊರಟಿದೆ.

ಓಂ ವಿವಕ್ಷಿತಗುಣೋಪಪತ್ತೇಶ್ಚ ಓಂ (೧-೨-೨)

ಈ ಸೂತ್ರದಲ್ಲಿ ಸರ್ವತ್ರ, ತತ್ತು ಎಂಬ ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು.

ಸೂತ್ರಾರ್ಥ - ವಿವಕ್ಷಿತಾನಾಂ = ಹೇಳಲು ಯೋಗ್ಯವಾದ, ಅಥವಾ ಮುಂದೆ ಹೇಳಲ್ಪಡುವ, ಉಪಸಂಹಾರದಲ್ಲಿರುವ ಎಂದು ಅಭಿಪ್ರಾಯ. ಅಥವಾ ಶ್ರುತಿತಾತ್ಪರ್ಯಕ್ಕೆ ವಿಷಯಗಳಾದ, ಗುಣಾನಾಂ = 'ಸ ಯೋಽತೋಽಶ್ರುತಃ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟಿರುವ ಅಶ್ರುತತ್ವ ಮೊದಲಾದ ಧರ್ಮಗಳು. ಉಪಪತ್ತೇಶ್ಚ = ಉಪಪನ್ನವಾಗುವುದರಿಂದಲೂ, ಭೂಮಿ ಮೊದಲಾದವುಗಳಲ್ಲಿರುವವನು ಬ್ರಹ್ಮನೇ ಆಗಿದ್ದಾನೆ. ಜೀವ ಮೊದಲಾದವರಲ್ಲಿ ಈ ಧರ್ಮಗಳು ಅನುಪಪನ್ನವಾಗಿವೆ ಎಂದು ಅಭಿಪ್ರಾಯ. ವಿವಕ್ಷಿತ ಎಂಬ ಪದದಿಂದ ಗುಣಗಳು ಉಪಸಂಹಾರದಲ್ಲಿರುವುದರಿಂದ ಪ್ರಬಲವಾಗಿವೆಯೆಂದು ಸೂಚಿಸಲಾಗಿದೆ.

ಅನುವ್ಯಾಖ್ಯಾನದ ಪ್ರಕಾರ ಸೂತ್ರಾರ್ಥ ಹೀಗಿದೆ - ವಿವಕ್ಷಿತಃ = ಪ್ರಸಕ್ತವಾದ ಶ್ರುತಿ ಮೊದಲಾದವುಗಳಲ್ಲಿ ವಿವಕ್ಷಿತವಾದ, ಗುಣಃ = ದೂರದಲ್ಲಿದ್ದರೂ ಆಯಾ ವಸ್ತುಗಳ ಶಕ್ತಿಯನ್ನು ಪ್ರಬೋಧಿಸಲು ಶಕ್ತನಾಗಿದ್ದರೂ ಆಯಾ ಪದಾರ್ಥಗಳಲ್ಲಿರುವಿಕೆ ಎಂಬ ಗುಣವು, ಉಪಪತ್ತೇಃ = ಲೀಲೆಯಿಂದ ಉಪಪನ್ನವಾಗುತ್ತದೆ. ಆದ್ದರಿಂದ ದೂರದಲ್ಲಿದ್ದು ನಿಯಮನ ಮಾಡಲು ಸಮರ್ಥನಾಗಿದ್ದರೂ ಆಯಾ ವಸ್ತುಗಳಲ್ಲಿರುವಿಕೆಯು ವ್ಯರ್ಥವೆಂಬ ಶಂಕೆಗೆ ಅವಕಾಶವಿಲ್ಲ. ಹೀಗೆ ಮತ್ತೊಂದು ಬಗೆಯ ವ್ಯಾಖ್ಯಾನವು ಅಭಿಪ್ರೇತವಾಗಿದೆ.

आदित्यश्रुतेरादित्यश्चक्षुर्मयत्वादिलिङ्गाच्च जीवो वा किं न स्यादित्यत आह –

ॐ अनुपपत्तेस्तु न शारीरः ॐ ॥ १-२-३ ॥

सर्वत्रोच्यमानमिति वर्तते । तुरेव । शारीरः शरीरसम्बन्धी आदित्यो जीवो वा न तथा । सर्वगतत्वानुपपत्तेरेवेत्यर्थः । अणुत्वस्य वक्ष्यमाणत्वात्तयोः सर्वगतत्वे कर्मणामपि सर्वसम्बन्धितापत्त्याऽभिमानस्याप्यापातेन सुखदुःखादिव्यवस्थायोगाच्चेति

भावः । एवेत्यनुपपत्तेर्दार्ढ्यं किं तत्र साधकोक्त्येति वा सूचयति । नेतर इति वाच्ये शारीर इत्युक्तिः 'स यश्चायमशरीरः' इति श्रुतावशरीरत्वानुपपत्तिं च जीवे सूचयितुम् ।।

ಆದಿತ್ಯಶ್ರುತಿಯ ಬಲದಿಂದ ಆದಿತ್ಯನು, ಚಕ್ಷುರ್ಮಯತ್ವಾದಿ ಲಿಂಗಗಳಿಂದ ಜೀವನು ಸರ್ವಗತನಾಗಬಹುದಲ್ಲವೇ? ಎಂಬ ಪ್ರಶ್ನೆಗೆ ಮುಂದಿನ ಸೂತ್ರದಿಂದ ಉತ್ತರಿಸುತ್ತಿದ್ದಾರೆ.

ಓಂ ಅನುಪಪತ್ತೇಸ್ತು ನ ಶಾರೀರಃ ಓಂ (೧-೨-೩)

'ಸರ್ವತ್ರ ಉಚ್ಯಮಾನಂ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. 'ತು' ಶಬ್ದಕ್ಕೆ ಏವ ಎಂದರ್ಥ.

ಸೂತ್ರಾರ್ಥ - ಶಾರೀರಃ = ಶರೀರಸಂಬಂಧಿಯಾದ ಆದಿತ್ಯನಾಗಲೀ ಅಥವಾ ಜೀವನಾಗಲಿ, ಸರ್ವಗತರಲ್ಲ, ಏಕೆಂದರೆ ಸರ್ವಗತತ್ವವು ಅನುಪಪನ್ನವಾಗುತ್ತದೆ. ಜೀವರಿಗೆ ಅಣುತ್ವವನ್ನು ಮುಂದೆ ಹೇಳಲಾಗುತ್ತದೆ. ಆದ್ದರಿಂದ ಅವರಿಬ್ಬರಿಗೆ ಸರ್ವಗತತ್ವವನ್ನು ಹೇಳಿದರೆ ಅವರಿಗೆ ಸಂಬಂಧಿಸಿದ ಕರ್ಮಗಳೂ ಸಹ ಸರ್ವರಿಗೂ ಸಂಬಂಧಪಡಬೇಕಾದೀತು. ಆದ್ದರಿಂದ ಅಭಿಮಾನವೂ ಸಹ ಎಲ್ಲರಿಗೂ ಬರಬೇಕಾದೀತು. ಸುಖದುಃಖಗಳ ವ್ಯವಸ್ಥೆಯೇ ಹಾಳಾಗಬೇಕಾದೀತೆಂದು ಭಾವ.

'ಏವ' ಎಂಬರ್ಥದಲ್ಲಿರುವ 'ತು' ಶಬ್ದವು ಅನುಪಪತ್ತಿಯ ದಾರ್ಢ್ಯವನ್ನು ತಿಳಿಸುತ್ತದೆ. ಸಾಧಕಗಳನ್ನು ಹೇಳುವುದರಿಂದೇನು ಪ್ರಯೋಜನವೆಂಬುದನ್ನು ತಿಳಿಸುತ್ತದೆ. ಸೂತ್ರದಲ್ಲಿ 'ನೇತರಃ' ಎಂದು ಹೇಳದೆ 'ಶಾರೀರಃ' ಎಂದು ಹೇಳಿರುವುದರಿಂದ 'ಸ ಯಶ್ಚಾಯಮಶರೀರಃ' ಎಂಬ ಶ್ರುತಿಯಲ್ಲಿರುವ ಅಶರೀರತ್ವದ ಅನುಪಪತ್ತಿಯನ್ನು ಸೂಚಿಸಿದೆ.

इतश्च न शारीरस्तथेत्याह –

**ॐ कर्मकर्तृव्यपदेशाच्च ॐ ।। १-२-४ ।।**

भावप्रधानोऽयम् । सर्वत्रोच्यमानस्येति शारीरस्येति च विपरिणम्यानुवर्तते । एतमस्यामिति पृथिव्यादौ सर्वत्रोच्यमानस्य 'आत्मानं परस्मै' इति कर्मत्वेन शारीरस्य शंसतीति कर्तृत्वेन व्यपदेशाच्च न शारीरस्तथेत्यर्थः । तथात्वे शारीरस्यैव शंसनक्रियायां कर्मत्वं कर्तृत्वं च स्यात् । तच्च विरुद्धमेकस्येति भावः ।।

ಮತ್ತೊಂದು ಕಾರಣದಿಂದ ಶಾರೀರನು ಸರ್ವಗತನಲ್ಲವೆಂದು ಸಮರ್ಥಿಸುತ್ತಿದ್ದಾರೆ.

ಓಂ ಕರ್ಮಕರ್ತೃವ್ಯಪದೇಶಾಚ್ಚ ಓಂ (೧-೨-೪)

ಸೂತ್ರದಲ್ಲಿರುವ ಕರ್ಮಕರ್ತೃಪದಗಳು ಭಾವಪ್ರಧಾನದಿಂದ ನಿರ್ದಿಷ್ಟವಾಗಿದೆ. 'ಸರ್ವತ್ರ ಉಚ್ಯಮಾನಸ್ಯ' ಎಂದು 'ಶಾರೀರಸ್ಯ' ಎಂದು ಷಷ್ಠ್ಯಂತವಾಗಿ ವಿಪರಿಣಾಮ ಮಾಡಿಕೊಂಡು ಅನುವೃತ್ತಿ ಮಾಡಿಕೊಳ್ಳಬೇಕು. 'ಏತಮಸ್ಮಾಮ್' ಎಂಬುದಾಗಿ ಪೃಥ್ವೀ ಮೊದಲಾದ ಪದಾರ್ಥಗಳಲ್ಲಿ ಇದ್ದಾನೆಂದು ಹೇಳಲ್ಪಡುವವನಿಗೆ 'ಆತ್ಮಾನಂ ಪರಸ್ಮೈ' ಎಂದು ಕರ್ಮತ್ವೇನ 'ಶಂಸತಿ' ಎಂದು ಶಾರೀರನಿಗೆ ಕರ್ತೃತ್ವೇನ ವ್ಯಪದೇಶವಿರುವುದರಿಂದಲೂ ಶಾರೀರನು ಸರ್ವಗತನಾಗಲಾರ ಎಂದರ್ಥ. ಒಂದು ವೇಳೆ ಶಾರೀರನು ಸರ್ವಗತನಾದರೆ ಶಂಸನ ಕ್ರಿಯೆಗೆ ಒಬ್ಬನನ್ನೇ ಕರ್ಮ ಹಾಗೂ ಕರ್ತೃವೆಂದು ಹೇಳಿದಂತಾಗುತ್ತದೆ. ಇದು ವಿರುದ್ಧವೆಂದು ಅಭಿಪ್ರಾಯ.

चक्षुर्मयत्वादिप्रबलजीवलिङ्गात् प्रागुक्तं ब्रह्मशब्दादिकं सर्वमन्यथयितव्यमित्यत आह –

**ॐ शब्दविशेषात् ॐ ।। १-२-५ ।।**

**शब्दस्य ब्रह्मशब्दस्य । विशेषात् सावधारणत्वरूपविशेषाद् ब्रह्मशब्दो न शारीरपर इत्यर्थः । 'एतमेव ब्रह्मेत्याचक्षते' इति सावधारणब्रह्मशब्दत्वे मुख्यब्रह्मत्वं स्यात्तच्च जीवे न युक्तमिति भावः ।।**

ಚಕ್ಷುರ್ಮಯತ್ವ ಮೊದಲಾದ ಪ್ರಬಲವಾದ ಜೀವಲಿಂಗಗಳಿರುವುದರಿಂದಲೂ ಹಿಂದೆ ಹೇಳಲ್ಪಟ್ಟ ಬ್ರಹ್ಮಶಬ್ದಾದಿಗಳೆಲ್ಲವನ್ನು ಜೀವನಲ್ಲಿ ಕೂಡಿಸಬೇಕೆಂಬ ಆಕ್ಷೇಪಕ್ಕೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ.

ಓಂ ಶಬ್ದವಿಶೇಷಾತ್ ಓಂ (೧-೨-೫)

ಶಬ್ದಸ್ಯ = ಬ್ರಹ್ಮಶಬ್ದಕ್ಕೆ, ವಿಶೇಷಾತ್ = ಸಾವಧಾರಣತ್ವವೆಂಬ ವಿಶೇಷವಿರುವುದರಿಂದ ಬ್ರಹ್ಮಶಬ್ದವು ಶಾರೀರಿಗೆ ಸಂಬಂಧಪಟ್ಟಿಲ್ಲ ಎಂದರ್ಥ.

'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬಲ್ಲಿರುವ ಅವಧಾರಣ ಸಹಿತವಾದ ಬ್ರಹ್ಮಶಬ್ದವು ಮುಖ್ಯಬ್ರಹ್ಮನನ್ನೇ ಪ್ರತಿಪಾದಿಸುತ್ತಿದೆ. ಆ ಮುಖ್ಯಬ್ರಹ್ಮತ್ವವು ಜೀವನಲ್ಲಿ ಕೂಡುವುದಿಲ್ಲವೆಂದು ಅಭಿಪ್ರಾಯ.

इतश्च सर्वत्रोच्यमानं ब्रह्मेत्याह –

ॐ स्मृतेश्च ॐ ॥ १-२-६ ॥

'अहमात्मा गुडाकेश सर्वभूताशयस्थितः' इति स्मृतेश्च सर्वत्र तदेवेत्यर्थः । स्मृतेः स्ववचनत्वेऽपि परोक्तार्थानुवादरूपत्वात्तदुक्तिः । एवमग्रेऽपि ।

ಮತ್ತೊಂದು ಕಾರಣದಿಂದಲೂ ಸರ್ವಗತನೆಂದು ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆ -

ಓಂ ಸ್ಮೃತೇಶ್ಚ ಓಂ (೧-೨-೬)

'ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ' ಎಂಬ ಸ್ಮೃತಿಯ ಆಧಾರದಿಂದಲೂ ಸರ್ವಗತನಾದವನು ಬ್ರಹ್ಮನೇ ಆಗಿದ್ದಾನೆಂದು ಅರ್ಥ. ವಸ್ತುತಃ ಈ ಸ್ಮೃತಿಯು ಸೂತ್ರಕಾರರ ವಚನವೇ ಆಗಿರಬಹುದು. ಆದರೂ ಸಹ ಶ್ರೀಕೃಷ್ಣನಿಂದ ಹೇಳಲ್ಪಟ್ಟ ವಿಷಯದ ಅನುವಾದ ರೂಪವಾದ್ದರಿಂದ ಇಲ್ಲಿ ಅದನ್ನು ಉಲ್ಲೇಖಿಸಲಾಗಿದೆ. ಮುಂದೆಯೂ ಸಹ ಹೀಗೆಯೇ ತಿಳಿಯಬೇಕು.

उक्तमाक्षिप्य समाधत्ते –

ॐ अर्भकौकस्त्वात्तद्व्यपदेशाच्च नेति चेन्न निचाय्यत्वादेवं व्योमवच्च ॐ ॥१-२-७ ॥

सर्वत्र तत्त्विति वर्तते । अर्भकमल्पमोकः स्थानं यस्य तस्य भावस्तत्त्वं तस्मात् । व्यपदेशादित्येतदत्राप्यन्वेति । 'सर्वेषु भूतेषु'२२

ुक्तावपि निचाय्यत्वादिति पुनरुक्तिरुपासाया ज्ञानस्वरूपत्व-प्रदर्शनाय । 'चायृ दर्शने' इति धातोः । तेनोपासा मानसक्रियाऽर्थहीनापि युक्तेति तच्छ्रुतिरमानमिति न शङ्क्यम् ॥

ಇಲ್ಲಿಯ ತನಕ ಸಮರ್ಥಿಸಿದ್ದನ್ನು ಆಕ್ಷೇಪಿಸಿ ಸಮಾಧಾನ ನೀಡಲು ಮುಂದಿನ ಸೂತ್ರ ಹೊರಟಿದೆ.

॥ ಓಂ ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ ಓಂ ॥ (೧-೨-೭)

'ಸರ್ವತ್ರ,' 'ತತ್' ಎಂಬ ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು.

ಸೂತ್ರಾರ್ಥ - ಅರ್ಭಕಂ = ಅಲ್ಪವಾದ, ಓಕಃ = ಸ್ಥಾನವು ಯಾವ ಪದಾರ್ಥಕ್ಕಿದೆಯೋ ಅದು

ಅರ್ಭಕೌಕ ಎನಿಸುತ್ತಿದೆ. ಅದರ ಧರ್ಮವೇ ಅರ್ಭಕೌಕಸ್ತ್ವ ಎನಿಸಿದೆ. ಆ ಅರ್ಭಕೌಕಸ್ತ್ವದಿಂದ ಎಂದು ಸೂತ್ರದಲ್ಲಿರುವ 'ಅರ್ಭಕೌಕಸ್ತ್ವಾತ್' ಎಂಬ ಪದದ ಅರ್ಥ. 'ವ್ಯಪದೇಶಾತ್' ಎಂಬುದನ್ನು ಇಲ್ಲಿ ಅನ್ವಯಿಸಿಕೊಳ್ಳಬೇಕು. 'ಸರ್ವೇಷು ಭೂತೇಷು' ಎಂಬುದಾಗಿ ಸಕಲ ಪ್ರಾಣಿಗಳ ಹೃದಯಗುಹೆಯಲ್ಲಿರುವಿಕೆಯೆಂಬ ಅರ್ಭಕೌಕಸ್ತ್ವವನ್ನು ಹೇಳಿದ್ದರಿಂದ, ತದ್ವ್ಯಪದೇಶಾಚ್ಚ = ತಸ್ಯ = ಆ ಶಾರೀರನ, ವ್ಯಪದೇಶಾಚ್ಚ = ಆದಿತ್ಯಶ್ರುತಿ ಹಾಗೂ ಚಕ್ಷುರ್ಮಯತ್ವಲಿಂಗಗಳಿಂದ ಉಪದೇಶ ಮಾಡಿರುವುದರಿಂದಲೂ ಸರ್ವಗತನಾದವನು ಬ್ರಹ್ಮನಾಗುವುದಿಲ್ಲ. ಏಕೆಂದರೆ ನಿಯಾಮಕನಾದವನು ವ್ಯಾಪ್ತನಾಗಿರುವುದರಿಂದ ಶಾಸ್ತ್ರದೃಷ್ಟಿಯಿಂದಲೂ ಅರ್ಭಕೌಕಸ್ತ್ವವನ್ನು ಬ್ರಹ್ಮನಲ್ಲಿ ಹೊಂದಿಸಲು ಸಾಧ್ಯವಿಲ್ಲ.

ಈ ಶಂಕೆಯು ತಪ್ಪು. ಏಕೆಂದರೆ ಬ್ರಹ್ಮನಿಗೆ ಅಲ್ಪೌಕಸ್ತ್ವ ಮೊದಲಾದವನ್ನು ಹೇಳಿರುವುದು ವ್ಯರ್ಥವೆಂದು ನಿಮ್ಮ ಅಭಿಪ್ರಾಯವೋ? ಅಥವಾ ಅಯುಕ್ತವೆಂದೋ? ಮೊದಲನೇ ಪಕ್ಷ ತಪ್ಪೆಂದು 'ನಿಚಾಯ್ಯತ್ವಾದೇವಂ' ಎಂಬುದರಿಂದ ಹೇಳಿದ್ದಾರೆ. ಅರ್ಭಕೌಕಸ್ತ್ವ ಚಕ್ಷುರ್ಮಯತ್ವ ಮೊದಲಾದವುಗಳ ಮೂಲಕ ಬ್ರಹ್ಮನು ಉಪಾಸ್ಯನಾಗಿರುವುದರಿಂದ ಹಾಗೇ ಹೇಳಿದ್ದು ವ್ಯರ್ಥವಲ್ಲ. ಎರಡನೇ ಪಕ್ಷಕ್ಕೆ 'ವ್ಯೋಮವತ್' ಎಂದು ಉತ್ತರಿಸಿದ್ದಾರೆ. ಯಾವರೀತಿಯಾಗಿ ಆಕಾಶವು ಎಲ್ಲೆಡೆ ವ್ಯಾಪ್ತವಾಗಿದ್ದರೂ ಸಣ್ಣ ಪ್ರದೇಶದಲ್ಲಿಯೂ ಇರುತ್ತದೋ, ಅದರಂತೆ ಬ್ರಹ್ಮನೂ ಸಹ ಎಲ್ಲೆಡೆ ವ್ಯಾಪ್ತನಾಗಿದ್ದರೂ ಸಕಲ ಪ್ರಾಣಿಗಳ ಹೃದಯದಲ್ಲಿ ಸ್ಥಿತನಾಗಿರುವುದು ಯುಕ್ತವೇ ಆಗಿದೆಯೆಂದರ್ಥ.

ಆದರೆ ಆಕಾಶನಿಗೂ ಬ್ರಹ್ಮನಿಗೂ ವ್ಯತ್ಯಾಸವಿದೆಯಲ್ಲವೇ? ಎಂಬ ಪ್ರಶ್ನೆಗೆ 'ಅಲ್ಪಶ್ರುತೇಃ' ಎಂಬ ಸೂತ್ರದಲ್ಲಿ ಉತ್ತರಿಸುತ್ತಾರೆ. 'ಉಪಾಸಾತ್ರೈವಿಧ್ಯಾತ್' ಎಂಬುದಾಗಿ ಅಲ್ಪಸ್ಥಾನಸ್ಥಿತತ್ವವನ್ನು ಉಪಾಸನೆಗೋಸ್ಕರ ಹೇಳಿರಬಹುದು. ಆದರೂ ಸಹ ಉಪಾಸನೆಯು ಜ್ಞಾನಸ್ವರೂಪವಾದದ್ದೆಂದು ತೋರಿಸಲು ಪುನಃ 'ನಿಚಾಯ್ಯತ್ವಾತ್' ಎಂದು ಹೇಳಿದ್ದಾರೆ. 'ಚಾಯೃ ದರ್ಶನೇ' ಎಂಬ ಧಾತುವಿನಿಂದ ನಿಷ್ಪನ್ನವಾದ್ದರಿಂದ ಉಪಾಸನಾರ್ಥದಲ್ಲಿರುವ 'ನಿಚಾಯ' ಶಬ್ದವು ಜ್ಞಾನವಾಚಿಯಾಗಿದೆಯೆಂದು ತಿಳಿಯುತ್ತದೆ. ಇದರಿಂದ ಉಪಾಸನೆಯು ಮಾನಸಿಕಕ್ರಿಯೆಯಾಗಿದ್ದರೂ ವಿಷಯವಿಲ್ಲದಿದ್ದರೂ ಅಂತಹ ಕ್ರಿಯೆಯೊಂದು ಇರಬಹುದೆಂದು ತಿಳಿಸಲು ಸಕಲ ಪ್ರಾಣಿಹೃದಯಗುಹಾಸ್ಥಿತತ್ವವೆಂಬ ಧರ್ಮವನ್ನು ಬ್ರಹ್ಮನಲ್ಲಿ ಹೇಳಿದ್ದಾರೆ. ಆದ್ದರಿಂದ 'ಸರ್ವೇಷು ಭೂತೇಷು' ಎಂಬ ಶ್ರುತಿಯನ್ನು ಅಪ್ರಮಾಣವೆಂದು ಹೇಳಬಾರದು.

पुनरुक्तमाक्षिप्याह –

**ॐ सम्भोगप्राप्तिरिति चेन्न वैशेष्यात् ॐ ।। १-२-८ ।।**

समानो भोगः सम्भोगः । व्योमवत् सर्वजीवशरीरस्थत्वे तत्समानभोगप्राप्तिर्ब्रह्मण इति चेन्न । कुतः? वैशेष्यात् सामर्थ्यातिशयादित्यर्थः । अन्तर्नये

कतिपयान्तःस्थत्वमुक्तम् । अत्र तु सर्वान्तःस्थत्वम् । व्याप्ते हरौ व्योमवदिति तस्योपपन्नता चोच्यत इति भेदः ।।

ಇಲ್ಲಿಯ ತನಕ ವಿವರಿಸಿದ್ದನ್ನು ಸಮಾಧಾನ ಹೇಳಲು ಮುಂದಿನ ಸೂತ್ರ ಹೊರಟಿದೆ -

ಓಂ ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ಓಂ ॥ (೧-೨-೮)

ಸಂಭೋಗವೆಂದರೆ ಸಮಾನವಾದ ಭೋಗವೆಂದರ್ಥ. ಆಕಾಶದಂತೆ ಬ್ರಹ್ಮನು ಸಕಲ ಜೀವರುಗಳ ಹೃದಯದಲ್ಲಿರುವುದಾದರೆ ಜೀವನಿಗೂ ಬ್ರಹ್ಮನಂತೆ ಸುಖದುಃಖಾನುಭವರೂಪವಾದ ಭೋಗವು ಬರಬೇಕಾದೀತು. ಇದು ಸರಿಯಲ್ಲ. ಏಕೆಂದರೆ ವೈಶೇಷ್ಯಾತ್ = ಸಮರ್ಥ್ಯಾತಿಶಯತ್ವ-ವಿರುವುದರಿಂದ ಎಂದರ್ಥ. ಅಂತರಧಿಕರಣದಲ್ಲಿ ಕೆಲವು ಜೀವಿಗಳ ಅಂತರ್ಯಾಮಿಯಾಗಿದ್ದಾನೆಂದಷ್ಟೇ ಹೇಳಲಾಗಿದೆ. ಆದರೆ ಈ ಅಧಿಕರಣದಲ್ಲಿ ಸರ್ವಾಂತಸ್ಥಿತತ್ವವನ್ನು ಹೇಳಲಾಗಿದೆ. ಅಷ್ಟೇ ಅಲ್ಲದೆ 'ವ್ಯೋಮವತ್' ಎಂಬುದರಿಂದ ವ್ಯಾಪ್ತನಾದ ಶ್ರೀಹರಿಗೆ ಅಲ್ಪಸ್ಥಾನದಲ್ಲಿರುವಿಕೆ ಎಂಬ ಧರ್ಮವು ಸಿದ್ಧವಾಗಿದೆ. ಹೀಗೆ ಅಂತರಧಿಕರಣಕ್ಕೂ ಮತ್ತು ಈ ಅಧಿಕರಣಕ್ಕೂ ವೈಷಮ್ಯವನ್ನು ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಸರ್ವಗತತ್ವಾಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावळिः

## सर्वगतत्वाधिकरणम्-१

एवमनन्तवेदगताशेषनाम्नां तत्तद्वाक्यगताशेषलिङ्गैः वैष्णवत्वेऽभिहिते तत्र विप्रतिपन्नलिङ्गानां समन्वयोऽत्र पादे निरूप्यते –

**ॐ सर्वत्र प्रसिद्धोपदेशात् ॐ ।। १-२-१ ।।**

**ॐ विवक्षितगुणोपपत्तेश्च ॐ ।। १-२-२ ।।**

**ॐ अनुपपत्तेस्तु न शारीरः ॐ ।। १-२-३ ।।**

**ॐ कर्मकर्तृव्यपदेशाच्च ॐ ।। १-२-४ ।।**

**ॐ शब्दविशेषात् ॐ ।। १-२-५ ।।**

ॐ स्मृतेश्च ॐ ॥ १-२-६ ॥

ॐ अर्भकौकस्त्वात्तद्व्यपदेशाच्च नेति चेन्न निचाय्यत्वादेवं व्योमवच्च ॐ ॥१-२-७॥

ॐ सम्भोगप्राप्तिरिति चेन्न वैशेष्यात् ॐ ॥ १-२-८ ॥

पूर्वोत्तरपादान्त्याद्यनययोर्नावश्यं सङ्गत्यपेक्षा । अपेक्षायां तु पूर्वाक्षेपादाक्षेपिकी ।

ऐतरेये 'चत्वारः पुरुषा इति बाध्व' इति खण्डे (ऐ-३-२-३) तस्यैतस्यासावादित्यो रस इत्युपक्रम्य एतं ह्येव बह्वृचा महत्युक्थे मीमांसन्त इत्यादिना उक्थाग्निमहाव्रतपृथिवीद्युवाय्वाकाशौषधिवनस्पतिचन्द्रनक्षत्रेषूक्त्वा 'सर्वेषु भूतेष्वेतमेव ब्रह्मेत्याचक्षते' इत्यादिना सर्वभूतगतः कश्चिदाम्नायते । स सर्वत्र श्रुतः किमादित्यजीवौ विष्णुर्वेति सन्देहः ।

ನ್ಯಾಯಮುಕ್ತಾವಳಿ

ಹಿಂದಿನ ಪಾದದ ಕೊನೆ ಅಧಿಕರಣಕ್ಕೂ ಮುಂದಿನ ಪಾದದ ಪ್ರಥಮಾಧಿಕರಣಕ್ಕೂ ಸಂಗತಿಯನ್ನು ಹೇಳಲೇಬೇಕೆಂಬ ಅಪೇಕ್ಷೆ ಇರುವುದಿಲ್ಲ. ಹಾಗೇನಾದರೂ ಅಪೇಕ್ಷೆ ಇರುವುದಾದರೆ ಹಿಂದಿನ ಅಧಿಕರಣದ ಪ್ರಮೇಯವನ್ನು ಆಕ್ಷೇಪಿಸಿದಂತಾಗುವುದರಿಂದ ಆಕ್ಷೇಪಿಕೀಸಂಗತಿಯನ್ನು ಹೇಳಬಹುದು.

ಐತರೇಯೋಪನಿಷತ್ತಿನಲ್ಲಿ 'ಚತ್ವಾರಃ ಪುರುಷಾ ಇತಿ ಬಾಧ್ವಃ' ಎಂಬ ಪ್ರಕರಣದಲ್ಲಿ 'ತಸ್ಯೈತಸ್ಯಾಸಾವಾದಿತ್ಯೋ ರಸ ಇತ್ಯುಪಕ್ರಮ್ಯ ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸಂತೇ' ಇತ್ಯಾದಿಯಾದ ಮಾತುಗಳಿವೆ. ಇಲ್ಲಿ ಉಕ್ಥ, ಅಗ್ನಿ, ಮಹಾವ್ರತ, ಪೃಥಿವೀ, ದ್ಯು, ವಾಯು, ಆಕಾಶ, ಔಷಧಿ, ವನಸ್ಪತಿ, ಚಂದ್ರ, ನಕ್ಷತ್ರ ಇವುಗಳಲ್ಲಿರುವಿಕೆಯನ್ನು ಹೇಳಿ 'ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ' ಆ ಬ್ರಹ್ಮನೇ ಸಕಲಭೂತಗಳಲ್ಲಿಯೂ ಇದ್ದಾನೆಂದು ಶ್ರುತನಾಗಿದ್ದಾನೆ. ಎಲ್ಲೆಡೆ ಕೇಳಿಸುತ್ತಿರುವ ಇಂತಹ ಯಾರೋ ಒಬ್ಬ ಬ್ರಹ್ಮನು ಆದಿತ್ಯನೋ? ಅಥವಾ ಜೀವನೋ? ಅಥವಾ ವಿಷ್ಣುವೋ ? ಎಂದು ಸಂಶಯ ಬರುತ್ತದೆ.

तत्र पूर्वः पक्षः । प्रागसकृच्छ्रुतादित्यपदोक्तस्यैव एतमिति परामर्शात् तस्य च 'तस्यैतस्य' इति पदेन प्रस्तुतसंवत्सरं परामृश्य रस इति तत्सारत्वाख्यलिङ्गोक्त्यादि त्यपरत्वात्

चित्रं देवानामिति सौरमन्त्रोदाहरणाद् आदित्ये एतमिति विशिष्यादित्येऽनुक्तत्वलिङ्गाच्च आदित्य एव सर्वगत इति वा,

चक्षुर्मयः श्रोत्रमय इत्यादिना वक्ष्यमाणज्ञानकरणतया प्रसिद्धचक्षुरादिसम्बन्धरूप जीवलिङ्गाद्भूतेष्वेतमिति भूतपदोपादानबलाद् भूतादन्यत्राभावप्रतीत्या प्राप्ताल्पौकस्त्वलिङ्गाच्च, वक्ष्यमाणपरामर्शित्वस्याप्येतच्छब्दे तत्रतत्र दर्शनात्, सर्वे जीवा वा, नतु विष्णुः, उक्तश्रुतिलिङ्गानामयोगात् । सर्वभूतगतत्वे तद्गतसुख-दुःखादिभोगप्राप्तेश्चेति प्राप्तम् ।

ಪೂರ್ವಪಕ್ಷ ಹೀಗಿದೆ - ಈ ಸರ್ವಗತನು ಆದಿತ್ಯನೇ ಆಗಿದ್ದಾನೆ. ಏಕೆಂದರೆ ಮೊದಲು ಅನೇಕ ಬಾರಿ ಆದಿತ್ಯನನ್ನು ಪ್ರತಿಪಾದಿಸುವ ಶಬ್ದವು ಕೇಳಿಸುತ್ತಿದೆ. ಅದನ್ನೇ 'ಏತಂ' ಎಂದು ಪರಾಮರ್ಶಿಸಬೇಕು. ಅಂತಹ ಆದಿತ್ಯನು 'ತಸ್ಸೈತಸ್ಯ' ಎಂಬ ಪದದಿಂದ ಪ್ರಸ್ತುತವಾದ ಸಂವತ್ಸರಕ್ಕೆ ಸಾರನಾಗಿದ್ದಾನೆ. ಅಂದರೆ ಸಂವತ್ಸರಗಳಿಗೆ ನಿಯಾಮಕನಾಗಿದ್ದಾನೆ. ಆದ್ದರಿಂದಲೇ ಸಂವತ್ಸರಸಾರತ್ವವೆಂಬ ಲಿಂಗವು ಆದಿತ್ಯನ ಅಸಾಧಾರಣ ಧರ್ಮವಾಗಿದೆ. ಇದರಿಂದ ಆದಿತ್ಯನೇ ಸರ್ವಗತನೆಂದು ಹೇಳಬೇಕು.

ಮತ್ತು 'ಚಿತ್ರಂ ದೇವಾನಾಂ' ಎಂಬ ಸೂರ್ಯಮಂತ್ರದ ಉದಾಹರಣೆಯಿರುವುದರಿಂದ 'ಆದಿತ್ಯೇ ಏತಂ' ಎಂಬುದಾಗಿ ವಿಶೇಷವಾಗಿ ಆದಿತ್ಯನನ್ನು ಹೇಳದಿರುವಿಕೆಯೆಂಬ ಲಿಂಗವಿರುವುದರಿಂದಲೂ ಆದಿತ್ಯನೇ ಸರ್ವಗತನಾಗಿದ್ದಾನೆ.

ಅಥವಾ ಜೀವನು ಸರ್ವಗತನಾಗಬಹುದು. ಏಕೆಂದರೆ 'ಚಕ್ಷುರ್ಮಯಃ ಶ್ರೋತ್ರಮಯಃ' ಇತ್ಯಾದಿಯಾಗಿ ಮುಂದೆ ಹೇಳುವ ಪ್ರಕಾರ ಚಕ್ಷುರ್ಮಯತ್ವಾದಿ ಧರ್ಮಗಳು ಜೀವನ ಲಿಂಗಗಳಾಗಿವೆ. ಜ್ಞಾನಕ್ಕೆ ಕರಣವಾದ ಚಕ್ಷುರಾದಿ ಇಂದ್ರಿಯಗಳ ಸಂಬಂಧ ಇರುವುದರಿಂದ ಚಕ್ಷುರ್ಮಯತ್ವವು ಜೀವನ ಲಿಂಗವೆಂದೇ ಹೇಳಬೇಕು. ಮತ್ತು 'ಭೂತೇಷು ಏತಂ' ಎಂಬುದಾಗಿ ಭೂತಪದವನ್ನು ಪ್ರಯೋಗಿಸಿದ್ದರಿಂದ ಭೂತಪದಾರ್ಥವನ್ನು ಬಿಟ್ಟು ಬೇರೆಡೆ ಇರಲಾನೆಂದು ತಿಳಿಯುತ್ತದೆ. ಇದರಿಂದ ಅಲ್ಪೌಕಸ್ತ್ವವೆಂಬ ಜೀವನ ಲಿಂಗವು ತಿಳಿಯುತ್ತದೆ. ಮತ್ತು ಮುಂದೆ ಹೇಳುವುದನ್ನೂ ಸಹ 'ಏತತ್' ಶಬ್ದದಿಂದ ಪರಾಮರ್ಶಿಸುವುದು ಅನೇಕ ಕಡೆ ಕಂಡಿದೆ. ಹಾಗಾಗಿ ಸಕಲ ಜೀವರುಗಳು ಸರ್ವಗತರೆನ್ನಬಹುದು; ಹೊರತು ವಿಷ್ಣುವಲ್ಲ. ಏಕೆಂದರೆ ಹಿಂದೆ ಹೇಳಲ್ಪಟ್ಟ ಶ್ರುತಿ ಹಾಗೂ ಲಿಂಗಗಳು ವಿಷ್ಣುವಿನಲ್ಲಿ ಕೂಡುವುದಿಲ್ಲ. ಒಂದುವೇಳೆ ಸಕಲಭೂತಗತತ್ವವನ್ನು ಹೇಳಿದರೆ ಸಕಲಜೀವರಿಗೆ ಉಂಟಾಗುವ ಸುಖದುಃಖಾದಿಗಳ ಭೋಗವು ವಿಷ್ಣುವಿಗೂ ಉಂಟಾಗಬೇಕಾದೀತು. ಇಷ್ಟು ಪೂರ್ವಪಕ್ಷ.

ಪರಿಪೂರ್ಣಚಂದ್ರಿಕಾ

सिद्धान्तस्तु । 'एतमेव ब्रह्मेत्याचक्षते' इति ब्रह्मशब्दस्य 'तदेव ब्रह्म परमं कवीनाम्' (महाना ङ) इत्यादौ विष्णौ प्रसिद्धत्वात् ।

जात्यादेर्ब्रह्मपदामुख्यार्थस्य विष्णोर्ब्रह्मपदमुख्यार्थस्य सत्वेन एतमेवेत्यवधारणा योगात्, तद्बलेन बह्मपदेनात्र मुख्यार्थस्यैव ग्राह्यत्वात् ।

'स योऽतोऽश्रुतोऽगतोऽमत' इत्यादिनोत्तरवाक्येनोक्तानां कार्त्स्न्येना-श्रुतत्वादिलिङ्गानां च सत्वात् । 'अहमात्मा गुडाकेश सर्वभूताशयस्थितः' (भ.गी. १०-१०) इति स्मृतिसमाख्यानाच्च साधकसत्वात् ।

'संवत्सरो वै प्रजापतिः' इत्यादेः संवत्सरपदस्य विरिञ्चपरतया तत्सारत्वस्य अन्तर्नयन्यायेनादित्यश्रुतेः सर्वगतत्वादेव अल्पस्थानेऽपि स्थितेः विष्णावल्पस्थानत्व-रूपाल्पौकस्त्वस्य व्योमवदुपपत्तेः । भूतपदस्य तथोपासनार्थत्वात् ।

सम्भोगप्राप्तेश्च सामर्थ्यवैशेष्येण सुपरिहरत्वेन 'भूतेषु' इत्यनेन चादित्यस्थत्वस्याप्युपपत्तेः । चक्षुरादिस्वामित्वादिरूपचक्षुर्मयत्वादेरपि सम्भवेन बाधकानामभावात् । अणोर्जीवस्यादित्यस्य वा सर्वगतत्वाद्ययोगेन परपक्षे बाधकभावाच्च पृथिव्यादौ सर्वत्रोच्यमानो विष्णुरेवेति ।

ವಿಷ್ಣುವೇ ಸರ್ವಗತನಾಗಿದ್ದಾನೆ. ಏಕೆಂದರ 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬಲ್ಲಿರುವ ಬ್ರಹ್ಮಶಬ್ದವು ವಿಷ್ಣುವನ್ನೇ ಪ್ರತಿಪಾದಿಸುತ್ತದೆಂದು 'ತದೇವ ಬ್ರಹ್ಮ ಪರಮಂ ಕವೀನಾಂ' ಇತ್ಯಾದಿ ಶ್ರುತಿಯಲ್ಲಿ ಪ್ರಸಿದ್ಧವಾಗಿದೆ.

ಜೀವ ಜಾತಿ ಮೊದಲಾದವುಗಳನ್ನು ಬ್ರಹ್ಮಪದವು ಅಮುಖ್ಯವಾಗಿ ಪ್ರತಿಪಾದಿಸುತ್ತದೆಂದು ವಿಷ್ಣುವನ್ನು ಮುಖ್ಯವಾಗಿ ಪ್ರತಿಪಾದಿಸುತ್ತದೆಂದು ಹೇಳಬೇಕು. ಆದ್ದರಿಂದ 'ಏತಮೇವ' ಎಂಬಲ್ಲಿರುವ ಅವಧಾರಣವನ್ನು ಕೂಡಿಸಬೇಕೆಂದರೆ ಮುಖ್ಯಾರ್ಥನಾದ ವಿಷ್ಣುವನ್ನೇ ಬ್ರಹ್ಮಪದಾರ್ಥನೆಂದು ಸ್ವೀಕರಿಸಬೇಕು.

'ಸ ಯೋಽತೋಽಶ್ರುತೋಽಗತೋಽಮತ' ಇತ್ಯಾದಿಯಾಗಿ ಮುಂದಿನ ವಾಕ್ಯದಲ್ಲಿ ಹೇಳಲ್ಪಟ್ಟ ಅಶ್ರುತತ್ವಾದಿಲಿಂಗಗಳು ಸಂಪೂರ್ಣವಾಗಿ ವಿಷ್ಣುವಿನಲ್ಲೇ ಕೂಡುತ್ತವೆ. 'ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ' ಎಂಬ ಸಮಾಖ್ಯಾಪ್ರಮಾಣವಾಗಿರುವ ಗೀತೆಯು ಈ ವಿಷಯಕ್ಕೆ ಸಾಧಕವಾಗಿದೆ.

ಚತುರ್ಮುಖನು, ವಿರುರಾವ = ಅತ್ತನು. ಅತಃ = ಅನಂತರ, ವಿಷ್ಣುಃ = ವಿಷ್ಣುವು, ಕೃಪಯಾ = ದಯೆಯಿಂದ, ತಂ = ಆ ಚತುರ್ಮುಖ ಬ್ರಹ್ಮನನ್ನು, ಸೃಷ್ಟಿಕರ್ಮಣಿ = ಜಗತ್ತಿನ ಸೃಷ್ಟಿಕ್ರಿಯೆಯಲ್ಲಿ, ನ್ಯಯೋಜಯತ್ = ಯೋಜನೆ ಮಾಡಿದನು. ಸಃ = ಆ ಚತುರ್ಮುಖಬ್ರಹ್ಮನು, ಹರಯೇ = ಭಗವಂತನಿಗೋಸ್ಕರ, ಅದ್ಯಾರ್ಥಂ = ತಿನ್ನುವುದಕ್ಕಾಗಿ, ವಿಶ್ವಂ = ವಿಶಾಲವಾದ, ಭುವನಂ = ಬ್ರಹ್ಮಾಂಡವನ್ನು, ಅಸೃಜತ್ = ಸೃಷ್ಟಿ ಮಾಡಿದನು. ಇತಿ =ಈ ಕಾರಣದಿಂದಲೇ, ಸಃ = ಆ ವಿಷ್ಣುವು, ವಿಭುಃ = ಸರ್ವಸಮರ್ಥನು, ಇತಿ = ಹೀಗೆ, ಬ್ರಹ್ಮವೈವರ್ತೇ = ಬ್ರಹ್ಮವೈವರ್ತ ಪುರಾಣದಲ್ಲಿ ಹೇಳಲ್ಪಟ್ಟದೆ. ಈ ಎಲ್ಲಾ ಪ್ರಮಾಣಗಳ ಆಧಾರದಿಂದ ಅತ್ತೃತ್ವ ಧರ್ಮವು ವಿಷ್ಣುವಿನಲ್ಲಿಯೇ ಬರುತ್ತದೆ.(१)

---

(१) **भाष्यदीपिका** – नन्वप्सं वत्सरसृष्ट्यादिनाऽत्रोच्यमानेनापि कथमस्य विष्णुप्रकरणत्वनिश्चय इत्यतोऽप्संवत्सरसृष्ट्यादेर्विष्णुलिङ्गत्वादिति भावेन तस्य तल्लिङ्गत्वे स्मृतिमाह – **नेहाऽसीदिति** ।। 'आदौ' प्रलये 'इह' अस्वतन्त्रवर्गे 'किञ्चनापि' जीवो जडं वा नाऽसीत् । नन्विदमयुक्तं, जीवादेः नित्यस्य सत्त्वादित्यत आह – **मृत्युरिति** ।। प्रलये मृत्युनामा हरिः जीवाद्यावरकत्वेनाऽसीत् । अत आवृतत्वान्नाऽसीदित्युक्तमिति नानुपपत्तिरिति भावः । 'सः आत्मनः' इति पदच्छेदः । 'मन्त्रेष्वाङ्यादेरात्मनः' (पा.सू. ६-४-१४१) इत्याल्लोपः । तथा च 'सः' प्रभुर्विष्णुरात्मनो 'मनसा' स्वेच्छयैवापोऽस्राक्षीत् । 'तासु' अप्सु 'महत्तरं' स्वार्थे तरप् । महत् स्थूलम् 'अण्डं' ब्रह्माण्डं निर्ममे । 'तत्र' अण्डे संवत्सराख्यं ब्रह्माणमसृजदित्यन्वयः । नामेत्यनेन सम्यग्वत्सभूतान् रमयतीति व्युत्पत्त्या संवत्सरशब्दश्चतुर्मुखे प्रसिद्ध इत्युच्यते । अत्रासामर्थ्यपरिहाराय – **प्रभुरिति** ।। 'तं' चतुर्मुखम् 'अत्तुं' भक्षयितुं 'व्याददात्' व्यावृणोद् विष्णुः । तदा ब्रह्मा 'विरुराव' भाणिति शब्दमकरोदित्यर्थः । हेति, अस्यार्थस्य श्रुतिप्रसिद्धतां सूचयति । अथ आरावकरणानन्तरं 'तत्कृपया' तस्मिन् चतुर्मुखे कृपया विष्णुस्तमजग्ध्वा सृष्टिक्रियायामयोजयत् । 'स विभुः' चतुर्मुखो हरये हरेरद्यार्थं भुवनमसृजत् ।।

यद्वा – भुवनमसृजत्, सृष्टं तद्धरयेऽद्यार्थमर्पितवानिति शेषेण योजना । ब्रह्मवैवर्त इत्यनन्तरं यत उक्तमिति शेषः । अस्यातोऽप्संवत्सरसृष्ट्यादेर्विष्णुलिङ्गत्वसिद्धिरित्यध्याहृतसाध्येनान्वयः ।।

।। इत्यत्तृत्वाधिकरणम् ।। २ ।।

ಪರಿಪೂರ್ಣಚಂದ್ರಿಕಾ

**श्रीपद्मनाभतीर्थविरचितसत्तर्कदीपावळिः**

**ॐ प्रकरणाच्च ॐ ।। १-२-१० ।।**

**हेत्वन्तरेणोक्तार्थं साधयत्सूत्रमुपन्यस्य व्याचष्टे – प्रकरणादित्यादिना ।। विष्णोरेव प्रकृतत्वात् 'स यद्यदेव' इत्यादिना स एवादनाददितिशब्दोक्तः सर्वात्तोच्यते । न प्रसिद्धादितिः । यो मृत्युर्मृत्युत्वेन प्रसिद्धो विष्णुस्तत्परमेवेदं प्रकरणमित्यत्र पुराणवाक्यान्युदाहरति – नेहासीदिति ।।**

**।। इति सत्तर्कदीपावळ्याम् अत्तृत्वाधिकरणम् ।।**

ಮತ್ತೊಂದು ಹೇತುವಿನಿಂದ ಹಿಂದೆ ಹೇಳಿದ ಪ್ರಮೇಯವನ್ನು ಸಾಧಿಸುವುದಕ್ಕಾಗಿ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನಿಸುತ್ತಿದ್ದಾರೆ 'ಪ್ರಕರಣ' ಇತ್ಯಾದಿಯಾಗಿ. ವಿಷ್ಣುವೇ ಪ್ರಕೃತನಾದ್ದರಿಂದ "ಸಃ ಯದ್ಯದೇವ" ಇತ್ಯಾದಿ ಶ್ರುತಿಯಿಂದ ಅವನೇ ಅತ್ತಾ ಎಂದು ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಅದಿತಿಶಬ್ದಪ್ರತಿಪಾದ್ಯನಾದವನು ವಿಷ್ಣುವೇ ಹೊರತು ದೇವಮಾತೆಯಾದ ಅದಿತಿಯಲ್ಲ. "ಯೋ ಮೃತ್ಯು" ಇತ್ಯಾದಿಯಾಗಿ ಮೃತ್ಯು ಎಂದು ಪ್ರಸಿದ್ದನಾದ ವಿಷ್ಣುವನ್ನೇ ಈ ಪ್ರಕರಣವು ಪ್ರತಿಪಾದಿಸುತ್ತದೆನ್ನಲು ಪುರಾಣವಾಕ್ಯಗಳನ್ನು ಉದಾಹರಿಸುತ್ತಿದ್ದಾರೆ "ನೇಹಾಸೀತ್" ಇತ್ಯಾದಿಯಾಗಿ.

ಇಲ್ಲಿಗೆ ಸತರ್ಕದೀಪಾವಳಿಯ ಕನ್ನಡಾನುವಾದದಲ್ಲಿ ಅತ್ತೃತ್ವಾಧಿಕರಣವು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣಮಸ್ತು

**तत्वप्रकाशिका –**

**ॐ प्रकरणाच्च ॐ ।। १-२-१० ।।**

**एवं निरवकाशलिङ्गबलात्सावकाशश्रुतिलिङ्गयोर्बाधोपपत्तेर्विष्णुरेवात्तेति सिद्ध्यति । किं पुनर्निरवकाशप्रकरणेन चेत्यर्थं प्रतिपादयत्सूत्रं पठित्वा व्याचष्टे – प्रकरणाच्चेति ।। 'नैवेह किञ्चनाग्र आसीन्मृत्युनैवेदमावृतमासीदशनाया अशनाया**

ಚತುರ್ಮುಖನು, ವಿರುರಾವ = ಅತ್ತನು. ಅತಃ = ಅನಂತರ, ವಿಷ್ಣುಃ = ವಿಷ್ಣುವು, ಕೃಪಯಾ = ದಯೆಯಿಂದ, ತಂ = ಆ ಚತುರ್ಮುಖ ಬ್ರಹ್ಮನನ್ನು, ಸೃಷ್ಟಿಕರ್ಮಣಿ = ಜಗತ್ತಿನ ಸೃಷ್ಟಿಕ್ರಿಯೆಯಲ್ಲಿ, ನ್ಯಯೋಜಯತ್ = ಯೋಜನೆ ಮಾಡಿದನು. ಸಃ = ಆ ಚತುರ್ಮುಖಬ್ರಹ್ಮನು, ಹರಯೇ = ಭಗವಂತನಿಗೋಸ್ಕರ, ಅದ್ಯಾರ್ಥಂ = ತಿನ್ನುವುದಕ್ಕಾಗಿ, ವಿಶ್ವಂ = ವಿಶಾಲವಾದ, ಭುವನಂ = ಬ್ರಹ್ಮಾಂಡವನ್ನು, ಅಸೃಜತ್ = ಸೃಷ್ಟಿ ಮಾಡಿದನು. ಇತಿ =ಈ ಕಾರಣದಿಂದಲೇ, ಸಃ = ಆ ವಿಷ್ಣುವು, ವಿಭುಃ = ಸರ್ವಸಮರ್ಥನು, ಇತಿ = ಹೀಗೆ, ಬ್ರಹ್ಮವೈವರ್ತೇ = ಬ್ರಹ್ಮವೈವರ್ತ ಪುರಾಣದಲ್ಲಿ ಹೇಳಲ್ಪಟ್ಟದೆ. ಈ ಎಲ್ಲಾ ಪ್ರಮಾಣಗಳ ಆಧಾರದಿಂದ ಅತ್ತೃತ್ವ ಧರ್ಮವು ವಿಷ್ಣುವಿನಲ್ಲಿಯೇ ಬರುತ್ತದೆ.(१)

---

(१) **भाष्यदीपिका** – नन्वप्सं वत्सरसृष्ट्यादिनाऽत्रोच्यमानेनापि कथमस्य विष्णुप्रकरणत्वनिश्चय इत्यतोऽप्संवत्सरसृष्ट्यादेर्विष्णुलिङ्गत्वादिति भावेन तस्य तल्लिङ्गत्वे स्मृतिमाह – **नेहाऽसीदिति** ।। 'आदौ' प्रलये 'इह' अस्वतन्त्रवर्गे 'किञ्चनापि' जीवो जडं वा नाऽसीत् । नन्विदमयुक्तं, जीवादेः नित्यस्य सत्त्वादित्यत आह – **मृत्युरिति** ।। प्रलये मृत्युनामा हरिः जीवाद्यावरकत्वेनाऽसीत् । अत आवृतत्वान्नाऽसीदित्युक्तमिति नानुपपत्तिरिति भावः । 'सः आत्मनः' इति पदच्छेदः । 'मन्त्रेष्वाङ्यादेरात्मनः' (पा.सू. ६-४-१४१) इत्याल्लोपः । तथा च 'सः' प्रभुर्विष्णुरात्मनो 'मनसा' स्वेच्छयैवापोऽस्राक्षीत् । 'तासु' अप्सु 'महत्तरं' स्वार्थे तरप् । महत् स्थूलम् 'अण्डं' ब्रह्माण्डं निर्ममे । 'तत्र' अण्डे संवत्सराख्यं ब्रह्माणमसृजदित्यन्वयः । नामेत्यनेन सम्यग्वत्सभूतान् रमयतीति व्युत्पत्त्या संवत्सरशब्दश्चतुर्मुखे प्रसिद्ध इत्युच्यते । अत्रासामर्थ्यपरिहाराय – **प्रभुरिति** ।। 'तं' चतुर्मुखम् 'अत्तुं' भक्षयितुं 'व्याददात्' व्यावृणोद् विष्णुः । तदा ब्रह्मा 'विरुराव' भाणिति शब्दमकरोदित्यर्थः । हेति, अस्यार्थस्य श्रुतिप्रसिद्धतां सूचयति । अथ आरावकरणानन्तरं 'तत्कृपया' तस्मिन् चतुर्मुखे कृपया विष्णुस्तमजग्ध्वा सृष्टिक्रियायामयोजयत् । 'स विभुः' चतुर्मुखो हरये हरेरद्यार्थं भुवनमसृजत् ।।

यद्वा – भुवनमसृजत्, सृष्टं तद्धरयेऽद्यार्थमर्पितवानिति शेषेण योजना । ब्रह्मवैवर्त इत्यनन्तरं यत उक्तमिति शेषः । अस्यातोऽप्संवत्सरसृष्ट्यादेर्विष्णुलिङ्गत्वसिद्धिरित्यध्याहृतसाध्येनान्वयः ।।

।। इत्यत्तृत्वाधिकरणम् ।। २ ।।

ಪರಿಪೂರ್ಣಚಂದ್ರಿಕಾ

## श्रीपद्मनाभतीर्थविरचितसत्तर्कदीपावळिः

ॐ प्रकरणाच्च ॐ ।। १-२-१० ।।

हेत्वन्तरेणोक्तार्थं साधयत्सूत्रमुपन्यस्य व्याचष्टे – प्रकरणादित्यादिना ।। विष्णोरेव प्रकृतत्वात् 'स यद्यदेव' इत्यादिना स एवादनाददितिशब्दोक्तः सर्वात्तोच्यते । न प्रसिद्धादितिः । यो मृत्युर्मृत्युत्वेन प्रसिद्धो विष्णुस्तत्परमेवेदं प्रकरणमित्यत्र पुराणवाक्यान्युदाहरति – नेहासीदिति ।।

।। इति सत्तर्कदीपावळ्याम् अत्तृत्वाधिकरणम् ।।

ಮತ್ತೊಂದು ಹೇತುವಿನಿಂದ ಹಿಂದೆ ಹೇಳಿದ ಪ್ರಮೇಯವನ್ನು ಸಾಧಿಸುವುದಕ್ಕಾಗಿ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನಿಸುತ್ತಿದ್ದಾರೆ 'ಪ್ರಕರಣ' ಇತ್ಯಾದಿಯಾಗಿ. ವಿಷ್ಣುವೇ ಪ್ರಕೃತನಾದ್ದರಿಂದ ''ಸಃ ಯದ್ಯದೇವ'' ಇತ್ಯಾದಿ ಶ್ರುತಿಯಿಂದ ಅವನೇ ಅತ್ತಾ ಎಂದು ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಅದಿತಿಶಬ್ದಪ್ರತಿಪಾದ್ಯನಾದವನು ವಿಷ್ಣುವೇ ಹೊರತು ದೇವಮಾತೆಯಾದ ಅದಿತಿಯಲ್ಲ. ''ಯೋ ಮೃತ್ಯು'' ಇತ್ಯಾದಿಯಾಗಿ ಮೃತ್ಯು ಎಂದು ಪ್ರಸಿದ್ದನಾದ ವಿಷ್ಣುವನ್ನೇ ಈ ಪ್ರಕರಣವು ಪ್ರತಿಪಾದಿಸುತ್ತದೆನ್ನಲು ಪುರಾಣವಾಕ್ಯಗಳನ್ನು ಉದಾಹರಿಸುತ್ತಿದ್ದಾರೆ ''ನೇಹಾಸೀತ್'' ಇತ್ಯಾದಿಯಾಗಿ.

ಇಲ್ಲಿಗೆ ಸತರ್ಕದೀಪಾವಳಿಯ ಕನ್ನಡಾನುವಾದದಲ್ಲಿ ಅತ್ತೃತ್ವಾಧಿಕರಣವು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣಮಸ್ತು

तत्वप्रकाशिका –

ॐ प्रकरणाच्च ॐ ।। १-२-१० ।।

एवं निरवकाशलिङ्गबलात्सावकाशश्रुतिलिङ्गयोर्बाधोपपत्तेर्विष्णुरेवात्तेति सिद्ध्यति । किं पुनर्निरवकाशप्रकरणेन चेत्यर्थं प्रतिपादयत्सूत्रं पठित्वा व्याचष्टे – प्रकरणाच्चेति ।। 'नैवेह किञ्चनाग्र आसीन्मृत्युनैवेदमावृतमासीदशनाया अशनाया

हि मृत्युस्तन्मनोऽकुरुतात्मन्वी स्यामिति । सोऽर्चन्नचरत्तस्यार्चत आपोऽजायन्त । 'तद् यदपां शर आसीत्तत्समहन्यत । सा पृथिव्यभवत्तस्यामश्राम्यत् सोऽकामयत । द्वितीयो म आत्मा जायेत' इति । स मनसा वाचा मिथुनं समभवदशनाया मृत्युस्तद् यद् रेत आसीत् स संवत्सरोऽभवत्तं जातमभिव्याददात्स भाणमकरोत्सैव वागभवत्स ऐक्षत । यदि ह वा इममभिमंस्ये कनीयोऽन्नं करिष्य इति स तया वाचा तेनात्मनेदं सर्वमसृजत' इत्यस्मिन् प्रकरणे मृत्युमात्रावशेषाप्संवत्सरसृष्टि-संवत्सरादनोद्यमादिश्रवणादेतत्प्रकरणस्य वैष्णवत्वं ज्ञायते । अतो निरवकाशप्रकरणबलाच्च विष्णुरेवात्तेत्याशयः । नन्वप्संवत्सरसृष्ट्यादिनात्रोच्य-मानेनापि कथमस्य विष्णुप्रकरणत्वनिश्चय इत्यतोऽप्संवत्सरसृष्ट्यादेर्विष्णुलिङ्ग-त्वादिति भावेन तत्र स्मृतिमाह – नेहासीदिति ।। तस्माद् विष्णोरेवेदमत्तृत्वमिति युक्तमेव लक्षणमिति स्थितम् ।। १० ।।

।। इति श्रीमज्जयतीर्थभिक्षुविरचितायां तत्वप्रकाशिकयाम्
अत्तृत्वाधिकरणम् ।।

ಈ ರೀತಿಯಾಗಿ ಸರ್ವಸಂಹರ್ತೃತ್ವ ಎಂಬ ನಿರವಕಾಶಲಿಂಗದ ಬಲದಿಂದ ಸಾವಕಾಶಶ್ರುತಿಯಲ್ಲಿರುವ ಅದಿತಿಶಬ್ದ ಮತ್ತು ಅತ್ತೃತ್ವವೆಂಬ ಲಿಂಗಕ್ಕೆ ಬಾಧ ಬರುವುದರಿಂದ ವಿಷ್ಣುವೇ ಸರ್ವಸಂಹಾರಕ ಎಂದು ಸಿದ್ಧವಾಯಿತು. ಇನ್ನು ನಿರವಕಾಶವಾದ ಪ್ರಕರಣದ ಬಲವೂ ಇದೆ ಎಂಬುದನ್ನು ಪ್ರತಿಪಾದನೆ ಮಾಡಲು ''ಪ್ರಕರಣಾಚ್ಚ'' ಎಂದು ಸೂತ್ರವನ್ನು ಪಠನೆ ಮಾಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

''ನೈವೇಹ ಕಿಂಚನಾಗ್ರೇ ಆಸೀನ್ ಮೃತ್ಯುನೈವೇದಮಾವೃತಮಾಸೀತ್ ಅಶನಾಯ ಅಶನಾಯಾ ಹಿ ಮೃತ್ಯುಸ್ತನ್ಮನೋऽಕುರುತಾತ್ಮನ್ವೀಸ್ಯಾಮಿತಿ । ಸೋऽರ್ಚನ್ನಚರತ್ತಸ್ಯಾರ್ಚತ ಆಪೋ ಅಜಾಯಂತ । ತದ್ಯದಪಾಂಶರ ಆಸೀತ್ತತ್ಸಮಹನ್ಯತ । ಸಾ ಪೃಥಿವ್ಯಭವತ್ತಸ್ಯಾಮಶ್ರಾಮ್ಯತ್ಸೋ ಅಕಾಮಯತ ದ್ವಿತೀಯೋ ಮ ಆತ್ಮಾ ಜಾಯೇತೇತಿ । ಸ ಮನಸಾ ವಾಚಾ ಮಿಥುನಂ ಸಮಭವದಶನಾಯ ಮೃತ್ಯುಸ್ತದ್ಯದ್ರೇತ ಆಸೀತ್ ಸಃ ಸಂವತ್ಸರೋऽಭವತ್ತಂ ಜಾತಮಭಿವ್ಯಾದದಾತ್ಸ

ಭಾಣಮಕರೋತ್ಸೈವ ವಾಗಭವತ್ಸ ಐಕ್ಷತ ಯದಿ ಹ ವಾ ಇಮಂ ಅಭಿಮಂಸ್ಯೇ ಕನೀಯೋ ಅನ್ನಂ ಕರಿಷ್ಯ ಇತಿ ಸ ತಯಾ ವಾಚಾ ತೇನಾತ್ಮನೇದಂ ಸರ್ವಮಸೃಜತ'' ಈ ಸೃಷ್ಟಿಯ ಪೂರ್ವದಲ್ಲಿ ಏನೂ ಇರಲಿಲ್ಲ. ಸರ್ವವಿಶ್ವನಿಯಾಮಕನಾದ ಮೃತ್ಯುನಾಮಕಪರಮಾತ್ಮನಿಂದ ಆಚ್ಛಾದಿತವಾಗಿತ್ತು. ತಿನ್ನುವುದಕಾಗಿ ವಿಷ್ಣುವೇ ಈ ವಿಶ್ವವನ್ನು ಉತ್ಪಾದನೆ ಮಾಡಲು ಮನಸ್ಸು ಮಾಡಿದನು. ಅನಂತರ ಆ ಮೃತ್ಯುವು ತನ್ನ ಪೂಜೆಯನ್ನೇ ಮಾಡುತ್ತಾ ಸಂಚಾರ ಮಾಡಿದನು. ಅವನಿಂದ ಪೂಜಾಸಾಧನವಾದ ಉದಕವು ಹುಟ್ಟಿತು. ಆ ಉದಕದ ನೊರೆ ಘಟ್ಟಿ ಮಾಡಲಾಗಿ ಅದೇ ಪೃಥ್ವಿಯಾಯಿತು. ಆ ಪೃಥಿವಿಯ ಮೇಲೆ ಮೃತ್ಯುವು ವಿಶ್ರಾಂತಿ ತೆಗೆದುಕೊಂಡನು. ಆನಂತರ ಅವನ ಇಚ್ಛೆಯಿಂದ ಬ್ರಹ್ಮದೇವನು ಉತ್ಪನ್ನನಾದನು. ಆಗ ವಾಗಭಿಮಾನಿಯಾದ ರಮಾದೇವಿಯ ಜೊತೆಯಲ್ಲಿ ತನ್ನ ಇಚ್ಛೆಯಿಂದ ಮಿಥುನಭಾವವನ್ನು ಹೊಂದಿದನು. ಅದರಿಂದ ಸಂವತ್ಸರನಾಮಕ ಪ್ರಜಾಪತಿಯು ಹುಟ್ಟಿದನು. ಆ ಪ್ರಜಾಪತಿಯನ್ನು ಭಕ್ಷಣ ಮಾಡಲು ತನ್ನ ಬಾಯಿಯನ್ನು ತೆರೆದನು. ಅದನ್ನು ನೋಡಿ ಆ ಪ್ರಜಾಪತಿಯು ದೊಡ್ಡ ಧ್ವನಿ ಮಾಡಿದನು. ಆ ಶಬ್ದವೇ ವಾಗಭಿಮಾನಿ ಸರಸ್ವತಿಯಾದಳು. ಆಗ ಪರಮಾತ್ಮನು ವಿಚಾರ ಮಾಡಿದನು - ಒಂದು ಪಕ್ಷ ಈ ಪ್ರಜಾಪತಿಯನ್ನು ನನ್ನ ಅನ್ನವೆಂದು ಸ್ವೀಕರಿಸಿದರೆ ಅದು ನನಗೆ ಬಹಳ ಸ್ವಲ್ಪ ಅನ್ನವಾಗುತ್ತದೆ. ಆದ್ದರಿಂದ ಅವನು ಆ ಸರಸ್ವತೀ ಬ್ರಹ್ಮರಿಂದ ಸರ್ವವಿಶ್ವವನ್ನು ಸೃಷ್ಟಿ ಮಾಡಿಸಿದನು.

ಈ ಪ್ರಕಾರವಾಗಿ ಈ ಪ್ರಕರಣದಲ್ಲಿ ಹೇಳಿದಂತೆ 'ಮೊದಲು ಮೃತ್ಯುನಾಮಕ ಪರಮಾತ್ಮ ಒಬ್ಬನೇ ಇದ್ದನು. ಅವನಿಂದ ಉದಕ ಮತ್ತು ಸಂವತ್ಸರ ನಾಮಕ ಪ್ರಜಾಪತಿ ಉತ್ಪನ್ನರಾದರು. ಆ ಮೃತ್ಯುವು ಪ್ರಜಾಪತಿಯನ್ನು ತಿನ್ನಲು ಇಚ್ಛಿಸಿದನು' ಇತ್ಯಾದಿ ಪರಮಾತ್ಮ ಸಂಬಂಧವಾದ ವರ್ಣನೆ ಇರುವುದರಿಂದ ಇದು ವಿಷ್ಣು ಪ್ರಕರಣವೆಂದು ಸಿದ್ಧವಾಗುತ್ತದೆ. ಆದ್ದರಿಂದ ಈ ಪ್ರಕರಣದ ಬಲದಿಂದ ವಿಷ್ಣುವೇ 'ಅತ್ತಾ' ಎಂದು ನಿಶ್ಚಯವಾಗುತ್ತದೆ.

ಈ ನೀರು ಸಂವತ್ಸರಗಳ ಸೃಷ್ಟಿಯಿಂದ ಈ ಪ್ರಕರಣವು ವಿಷ್ಣುಪ್ರಕರಣವೆಂದು ಹೇಗೆ ನಿಶ್ಚಯ ಮಾಡುವುದು? ಎಂದು ಪ್ರಶ್ನೆ ಮಾಡಿದರೆ ಇವುಗಳು ವಿಷ್ಣುವಿನ ಲಿಂಗಗಳೇ ಆಗಿವೆ. ಈ ವಿಷಯದಲ್ಲಿ ''ನೇಹಾಽಸೀತ್'' ಎಂಬ ಸ್ಮೃತಿ ವಾಕ್ಯವನ್ನು ಪ್ರಮಾಣವನ್ನಾಗಿ ಹೇಳುತ್ತಿದ್ದಾರೆ.

ಆದ್ದರಿಂದ ಈ ಎಲ್ಲಾ ಪ್ರಮಾಣಗಳಿಂದ ಸರ್ವಸಂಹಾರಕರ್ತೃತ್ವವು ವಿಷ್ಣುವಿನ ಧರ್ಮವೇ ಎಂದು ನಿಶ್ಚಯವಾಗುತ್ತದೆ. ಆದ್ದರಿಂದ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳಿದ ವಿಷ್ಣುವಿನ ಲಕ್ಷಣವು ಯುಕ್ತವೇ ಆಗಿದೆ.

॥ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಅತ್ತೃತ್ವಾಧಿಕರಣವು ಸಮಾಪ್ತವಾಯಿತು ॥

ಅತ್ತೃತ್ವಾಧಿಕರಣ (೧-೨-೨)

**ॐ प्रकरणाच्च ॐ ।। १-२-१० ।।**

**भावदीपः – सूत्रे चशब्दादाह – किं पुनरिति ।।** मृत्युना विष्णुना इदं नित्यरूपं जगद् आत्मन्वी जगदाख्यदेहवान् अर्चन् आत्मानं पूजयन् शरः घनीभूतं मण्डं समहन्यत संहतमभवत् । तस्यां पृथिव्यां श्वेतद्वीपे अश्राम्यद् अशेत । आत्मा चतुर्मुखः मनसा स्वेच्छया । वाचं वेदाभिमानिनीं श्रियम् । संवत्सरः सम्यक् वत्सभूतान् देवादीन् रमयतीति चतुर्मुखः अभि प्रति व्याददाद् आस्यं विवृतमकरोदित्यर्थः । स ब्रह्मा भाणं भाणिति वाचं वाक् सरस्वती । अभिमंस्ये लीनं करिष्ये चेद् वाचा सरस्वत्या आत्मना ब्रह्मणा ।।

ಸೂತ್ರದಲ್ಲಿರುವ 'ಚ' ಶಬ್ದದ ಅಭಿಪ್ರಾಯವನ್ನು 'ಕಿಂ ಪುನಃ' ಇತ್ಯಾದಿ ವಾಕ್ಯಗಳಿಂದ ತಿಳಿಸುತ್ತಿದ್ದಾರೆ.

'ಮೃತ್ಯುನಾ'= ವಿಷ್ಣುವಿನಿಂದ, 'ಇದಂ' = ನಿತ್ಯರೂಪವಾದ ಜಗತ್ತು, ಆತ್ಮನ್ವೀ = ಜಗತ್ತೆಂಬ ದೇಹವಾಗಿವುಳ್ಳವನು, ಅರ್ಚನ್ = ತನ್ನ ಪೂಜೆಯನ್ನೇ ಮಾಡುತ್ತಾ, ಶರಃ = ಘಟ್ಟಿಯಾದ ಅಂಡ, ಸಮಹನ್ಯತ = ಸಂಹರಿಸಿದನು. ಹೀಗೆ ಕಠಿಣಪದಗಳ ಅರ್ಥ.

ತಸ್ಯಾಂ = ಪೃಥಿವಿಯಲ್ಲಿ ಅಂದರೆ ಶ್ವೇತದ್ವೀಪದಲ್ಲಿ, ಅಶ್ರಾಮ್ಯತ್ = ವಿಶ್ರಾಂತಿ ಪಡೆದನು. ಆತ್ಮಾ = ಚತುರ್ಮುಖನು, ಮನಸಾ = ತನ್ನ ಇಚ್ಛೆಯಿಂದ, ವಾಚಂ = ವೇದಾಭಿಮಾನಿನಿಯಾದ ರಮಾದೇವಿ. ಸಂವತ್ಸರಃ = ಚೆನ್ನಾಗಿ ಮಕ್ಕಳಂತಿರುವ ದೇವತೆಗಳನ್ನು ಸಂತೋಷ ಪಡಿಸುವ ಚತುರ್ಮುಖನು, ಅಭಿ = ಕುರಿತು, ವ್ಯಾದದಾತ್ = ಬಾಯಿಯನ್ನು ವಿಸ್ತಾರ ಮಾಡಿದನು ಎಂದರ್ಥ. ಸಃ = ಬ್ರಹ್ಮನು, ಭಾಣಂ = ದೊಡ್ಡ ಧ್ವನಿ, ವಾಕ್ = ಸರಸ್ವತೀ ಎಂದರ್ಥ. ಅಭಿಮಂಸ್ಯೇ = ಲೀನ ಮಾಡಿಕೊಂಡರೇ , ವಾಚಾ = ಸರಸ್ವತಿಯಿಂದ, ಆತ್ಮನಾ = ಬ್ರಹ್ಮನಿಂದ ಎಂದರ್ಥ.

**भावदीपः – एतत्प्रकरणस्य वैष्णवत्वमिति ।।** श्रुतिलिङ्ग-वाक्यानामुपक्रमादितोऽन्यत्रश्रुतत्वं चेत् प्रकरणनिश्चायकत्वेन लिङ्गत्वमिति शब्दादेवेत्यत्र वक्ष्यमाणदिशा प्रकरणस्य विष्णुपरत्वं ज्ञायत इत्यर्थः । प्रतिज्ञांशमनु वर्त्याऽर्थमाह – **विष्णुरेवेति ।।** स्मृतौ सोऽऽत्मनः । स आत्मन इत्यर्थः । 'मन्त्रेष्वाङ्यादेरात्मनः' इत्याकारलोपः । तस्मान्निरवकाशलिङ्गप्रकरणभावादित्यर्थः ।। १० ।।

।। इति राघवेन्द्रयतिकृते भावदीपे अत्तृत्वाधिकरणम् ।।

ಪರಿಪೂರ್ಣಚಂದ್ರಿಕಾ

ಟೀಕೆಯಲ್ಲಿ 'ಏತತ್ಪ್ರಕರಣಸ್ಯ ವೈಷ್ಣವತ್ವಂ' ಎಂದು ಇದೆ. ಇದರ ಅಭಿಪ್ರಾಯ - 'ಶ್ರುತಿಲಿಂಗವಾಕ್ಯಾನಾಮುಪಕ್ರಮಾದಿತೋ ಅನ್ಯತ್ರ ಶ್ರುತತ್ವಂ ಚೇತ್ ಪ್ರಕರಣನಿಶ್ಚಾಯಕತ್ವೇನ ಲಿಂಗತ್ವಂ' ಎಂದು ಮೂರನೆಯ ಪಾದದಲ್ಲಿ ಬರುವ ವಾಮನಾಧಿಕರಣದ 'ಶಬ್ದಾದೇವ' ಎಂಬ ಸೂತ್ರದಲ್ಲಿ ಹೇಳಿದ್ದಾರೆ. ಈ ನ್ಯಾಯಾನುಸಾರವಾಗಿ ಪ್ರಕರಣವು ವಿಷ್ಣುಪರವಾಗಿದೆಯೆಂದು ತಿಳಿಯುತ್ತದೆಂದರ್ಥ. ಈ ಪ್ರಕರಣದ ಪ್ರತಿಜ್ಞಾಂಶವನ್ನು ಅನುಸರಿಸಿ ಅರ್ಥವನ್ನು 'ವಿಷ್ಣುರೇವ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ಸ್ಮೃತೌ' ಎಂದರೆ 'ಸೋಽತ್ಮನಃ' ಎಂಬ ಸ್ಮೃತಿವಾಕ್ಯದಲ್ಲಿ. ಸೋಽತ್ಮನಃ ಎಂಬಲ್ಲಿ 'ಸಃ ಆತ್ಮನಃ' ಎಂದು ಪದಚ್ಛೇದ. 'ಮಂತ್ರೇಷ್ವಾಙ್ ಯಾದೇರಾತ್ಮನಃ' ಎಂಬುದರಿಂದ ಆಕಾರವು ಲೋಪವಾಗಿದೆ. 'ತಸ್ಮಾತ್' ಎಂದರೆ ನಿರವಕಾಶವಾದ ಲಿಂಗ ಮತ್ತು ಪ್ರಕರಣಗಳಿರುವುದರಿಂದ ಎಂದರ್ಥ.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಅತ್ತೃತ್ವಾಧಿಕರಣವು ಸಮಾಪ್ತವಾಯಿತು ॥

## अथ श्रीशर्कराश्रीनिवासविचचिता वाक्यार्थमञ्जर्याम्

**वाक्यार्थमञ्जरी – ।। ॐ प्रकरणाच्च ॐ ।।** अप्संवत्सरसृष्ट्यादिना वैष्णवत्वेन निश्चितेनवेह किञ्चनेत्यादिप्रकरणबलाच्चात्ता विष्णुरेवेत्यर्थः ।। **नैवेह किञ्चनेति ।।** अग्रे प्रलये । इह अस्वतन्त्रवर्गे । किञ्चनजीवजडरूपंनैवासीत् । अनादिसिद्धजीवादेः सत्वात् कथमेतदित्यत उक्तम् – **मृत्युनैवेति ।।** पृथङ् नासीदिति भावः । मृत्योरावरकत्वे हेतुः ।। **अशनायेति ।।** अश्यत इत्यशं जगत्, तं नयतीत्यशनाया । अन्यत्र नेतृत्वप्रतीतावपि श्रुतिषु प्रसिद्धेः स एव नेतेत्याह – **अशनाया हीति ।।** मृत्युरशनाया हीति श्रुत्यादिप्रसिद्धमित्यर्थः । यस्मान्मृत्युः स्वयमेवासीदन्यन्नैवासीत्तस्मादात्मन्वी आत्मवान् । जगद्रूपशरीरवान् स्यामिति मनो कुरुत ऐच्छत् । स मृत्युः शरीररूपजगत्सिसृक्षयासृष्ट्यर्थं मनो कुरुतेति शेषः । तदनन्तरं स मृत्युरर्चयन् आत्मानं पूजयन् अचरत् चचार । तस्य अर्चयतः पूजयतः मृत्योः सकाशात् पूजासाधनभूता आपो जायन्त इत्यर्थः ।। **तद्यदिति ।।** तत् तत्राप्सु । य अपां शरः फेनरूपो मण्ड आसीत् । स शरः मृत्युना स्वरेतसा समहन्यत । सङ्घातत्वं घनीभावमिति यावत् प्रापितः । यः सङ्घातः सा पृथिवी ब्रह्माण्डरूपाभावात् । मृत्युनामा जनार्दनः तस्यां पृथिव्यामश्राम्यत् शिश्य इत्यर्थः ।

सोऽकामयतेति स मृत्युनामा भगवान् मे ममात्मा ब्रह्मा द्वितीयो वाय्वपेक्षया जायेतेत्यकामयद् ऐच्छत् । तत् तदनन्तरम् । अशनायां द्वितीया प्रथमार्थे । सर्वाशननेता मृत्युर्मनसा स्वेच्छयैव वाचं वेदाभिमानिनीं श्रियं मिथुनं द्वन्द्वभावं समभवत् ।।

तत् तेन मिथुनीभावेन यद्रेत आसीत् स तदुपादानकदेहवान् संवत्सरः । सम्यगात्मनो वत्सान् पुत्रान् देवादीन् रमयतीति संवत्सरनामा चतुर्मुखोऽभवदित्यर्थः ।। **तं जातमिति** ।। मृत्युः जातं तं संवत्सरमभि अभिलक्ष्य अत्तुमिति यावत् । व्यददात् स्वमुखं विददार । संवत्सरो भयात् भाणं, भाणिति वाचमकरोत् निःसारितवान् । यद्भणिति वचः सैव तदभिमानी सरस्वत्यभवत् । अभिमन्यमानशब्दोच्चारणकाल एवाभिमानिनी देव्यभवदिति यावत् ।। **स इति** ।। स मृत्युः कृतरवं कुमारमालोक्य ऐक्षद् विचारमकरोत् । किमिति? यदीमं जातं संवत्सरम् अभिमंस्ये लीनं करिष्ये, तदा कनीयोऽल्पमन्नं करिष्ये अतोबह्वन्नं भवत्वित्यालोच्यसमृत्युस्तया पूर्वोत्पन्नया वाचा गायत्र्या तेन आत्मना चतुर्मुखेन चेदं सर्वमसृजत् जनयामासेत्यर्थः । स्मृतौ सोऽत्मनः स आत्मनः मन्त्रेष्वाङ्यादेरात्मनीत्याकारलोपः।।

।। इति श्रीशर्कराश्रीनिवासविचचिता वाक्यार्थमञ्जर्याम् अत्तृत्वाधिकरणम् ।।

# ಅತ್ರ್ಯತ್ವಾಧಿಕರಣ
# (೧-೨-೨)

## ಭಾಗ - ೨

ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ,
ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ,
ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ अत्तृत्वाधिकरणम्

ಪ್ರತ್ಯುದಾಹರಣ ಸಂಗತಿಯ ಪ್ರದರ್ಶನ

**।। ॐ अत्ता चराचरग्रहणात् ॐ ।।**

**अत्र पूर्ववैषम्यप्रदर्शनेन पूर्वपक्षोत्थानादनन्तरसङ्गतिः ।**

**अत्र ''सर्वं वा अत्तीति तददितेरदितित्वम्'' इत्युक्तमत्तृत्वं किमदितेर्विष्णोर्वेति चिन्ता । तदर्थं सर्वशब्दसङ्कोचकमस्ति न वेति । तदर्थं ''सर्वं वै'' इति वाक्यं किं प्रसिद्धेऽर्थे शब्दान्वाख्यापकं, किं वा प्रसिद्धार्थं बाधित्वा योगोक्त्या तत्तदत्तुमध्रियत'' इति प्रतिज्ञाते सर्वात्तृत्वेन हेतुपरमिति ।।**

ಅನುವಾದ - ಈ ಅಧಿಕರಣದಲ್ಲಿ ಹಿಂದಿನ ಅಧಿಕರಣದ ಪೂರ್ವಪಕ್ಷಕ್ಕಿಂತ ವಿಲಕ್ಷಣವಾದ ಪೂರ್ವಪಕ್ಷವು ಹುಟ್ಟುತ್ತಿರುವುದರಿಂದ ಅನಂತರಸಂಗತಿ ಇರುತ್ತದೆ. ''ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಮ್'' ಎಂಬುದು ವಿಷಯವಾಕ್ಯ. ಈ ವಾಕ್ಯದಲ್ಲಿ ಹೇಳಲ್ಪಟ್ಟ ಅತ್ತೃತ್ವವು ಅದಿತಿಯ ಧರ್ಮವೋ ಅಥವಾ ವಿಷ್ಣುವಿನ ಧರ್ಮವೋ ? ಎಂದು ಸಂಶಯ. ಇದಕ್ಕಾಗಿ ಸರ್ವಶಬ್ದವನ್ನು ಸಂಕೋಚ ಮಾಡಬೇಕೋ ಬೇಡವೋ ? ಎಂಬ ಸಂಶಯ ಹುಟ್ಟುತ್ತದೆ. ಇದರ ನಿರ್ಣಯಕ್ಕಾಗಿ 'ಸರ್ವಂ ವೈ' ಎಂಬ ವಾಕ್ಯವು ಪ್ರಸಿದ್ಧಾರ್ಥದಲ್ಲಿ ಪ್ರವೃತ್ತಿನಿಮಿತ್ತವನ್ನು ಉತ್ಪಾದನೆ ಮಾಡುತ್ತದೋ ಅಥವಾ ಪ್ರಸಿದ್ಧಾರ್ಥವನ್ನು ಬಾಧಿಸಿ ಯೋಗವೃತ್ತಿಯಿಂದ 'ತತ್ತದತ್ತುಮಧ್ರಿಯತ' ಎಂದು ಪ್ರತಿಜ್ಞೆ ಮಾಡಿದರೆ ಸರ್ವಾತ್ತೃತ್ವಕ್ಕೆ ಹೇತುಪರವಾಗುತ್ತದೋ ಎಂಬ ಸಂಶಯವು ಬರುತ್ತದೆ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः** – ।। श्रीः ।। ॐ अत्ता चराचरग्रहणात् ॐ ।। अत्र भाष्यदिशा जन्मादिसूत्रानन्तर्यभावेऽपि तत् फलपरमिति भावेन पूर्वेण प्रत्युदाहरणसङ्गतिमाह **– अत्रेति । वैषम्यं चाग्रे स्पष्टम् ।**

ವಿವರಣೆ - ಅತ್ತೃತ್ವಾಧಿಕರಣವು ಪ್ರಾರಂಭವಾಗುತ್ತಿದೆ. ಭಾಷ್ಯದ ಪ್ರಕಾರ ಈ ಅಧಿಕರಣವು ಜನ್ಮಾದಿಸೂತ್ರದ ಅನಂತರ ಪ್ರಸಕ್ತವಾಗಬೇಕಿತ್ತು. ಆದರೆ ಜನ್ಮಾದಿಸೂತ್ರದ ಪ್ರಮೇಯದ ಸಿದ್ಧಿಯು ಈ ಅಧಿಕರಣದ ಫಲರೂಪವಾಗಿರುವುದರಿಂದ ಭಾಷ್ಯದಲ್ಲಿ ಜನ್ಮಾದಿಸೂತ್ರದಿಂದ ಸಂಗತಿಯನ್ನು ತೋರಿಸಿಲ್ಲ ಹೊರತಾಗಿ ಫಲವನ್ನಷ್ಟೇ ತೋರಿಸಿದ್ದಾರೆಂದು ತಿಳಿಯಬೇಕು. ಆದ್ದರಿಂದ ಹಿಂದಿನ ಅತ್ತೃತ್ವಾಧಿಕರಣದಿಂದ ಈ ಅಧಿಕರಣಕ್ಕೆ ಪ್ರತ್ಯುದಾಹರಣ ಎಂಬ ಸಂಗತಿಯನ್ನು 'ಅತ್ರ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

ಹಿಂದಿನ ಅಧಿಕರಣದ ಪೂರ್ವಪಕ್ಷಕ್ಕಿಂತ ವಿಲಕ್ಷಣವಾದ ಪೂರ್ವಪಕ್ಷವನ್ನು ಈ ಅಧಿಕರಣದಲ್ಲಿ ಮಾಡಲಾಗಿದೆ. ವೈಲಕ್ಷಣ್ಯವು ಮುಂದಿನ ಭಾಗದಿಂದ ಸ್ಪಷ್ಟವಾಗುತ್ತದೆ.

**प्रकाशः – एतेन टीकोक्तरीत्याऽदितिश्रुतेस्सावकाशत्वात् लिङ्गस्य निरवकाशत्वात् स्वत एव लिङ्गमन्यत्रप्रसिद्धं, नतु श्रुतितः, प्रत्युत लिङ्गाच्छ्रुतिरेव पूर्वत्रेवान्यत्रप्रसिद्धेति कथं लिङ्गस्य तत्साहित्येन तथात्वेक्तिरिति निरस्तम् ।**

ಹೀಗೆ ಹೇಳಿದ್ದರಿಂದ ಮತ್ತೊಂದು ಶಂಕೆಯು ನಿರಸ್ತವಾಯಿತು. ಆ ಶಂಕೆಯು ಹೀಗಿದೆ - ಟೀಕೆಯಲ್ಲಿ ಹೇಳಿದಂತೆ ಅದಿತಿಶ್ರುತಿಯು ಸಾವಕಾಶವಾಗಿದೆ. ಅದಿತಿತ್ವಲಿಂಗವು ನಿರವಕಾಶವಾಗಿದೆ. ಆದ್ದರಿಂದ ಲಿಂಗವು ಸ್ವತಃ ಅನ್ಯತ್ರ ಪ್ರಸಿದ್ಧವಾಗಿದೆ ಹೊರತು ಶ್ರುತಿಯ ಬೆಂಬಲದಿಂದ ಅನ್ಯತ್ರಪ್ರಸಿದ್ಧವಾಗಿಲ್ಲ. ಹೊರತಾಗಿ ಲಿಂಗದ ಬೆಂಬಲದಿಂದಲೇ ಶ್ರುತಿಯು ಹಿಂದಿನ ಅಧಿಕರಣದಂತೆ ಅನ್ಯತ್ರಪ್ರಸಿದ್ಧವಾಗಿದೆ. ಹೀಗಿರುವಾಗ ಲಿಂಗಕ್ಕೆ ಶ್ರುತಿಸಾಹಿತ್ಯದಿಂದ ನಿರವಕಾಶತ್ವವನ್ನು ಹೇಗೆ ಹೇಳಿದಿರಿ? ಎಂದು.

**प्रकाशः** – पूर्ववैषम्यस्य श्रुतेर्निरवकाशत्वस्य च वक्ष्यमाणत्वात् । लोकतः श्रुतेरेवान्यत्र रूढत्वाच्च । अत एव टीकायां 'लोकतः' इत्युक्तम् ।

न चैवं नामैव समन्वीयतामिति वाच्यं, पादसङ्गत्यर्थं सर्वात्तृत्वरूपापूर्वगुण लाभार्थं च लिङ्गस्यैव समन्वयोक्तेरिति ।

ಮೇಲಿನ ಶಂಕೆಗೆ ಈಗ ಅವಕಾಶವಿಲ್ಲ. ಏಕೆಂದರೆ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ವೈಷಮ್ಯವನ್ನು ತೋರಿಸುವುದಕ್ಕಾಗಿ ಶ್ರುತಿಗೆ ನಿರವಕಾಶತ್ವವನ್ನು ಮುಂದೆ ಸಮರ್ಥಿಸುತ್ತಾರೆ. ಮತ್ತು ಶ್ರುತಿಯು

ಲೋಕದಲ್ಲಿ ಅನ್ಯತ್ರ ನಿರೂಢವಾಗಿದೆ. ಆದ್ದರಿಂದಲೇ ಟೀಕೆಯಲ್ಲಿ 'ಲೋಕತಃ' ಎಂಬ ಮಾತು ಕಾಣಿಸುತ್ತದೆ. ಆದ್ದರಿಂದ ಲಿಂಗವು ನಿರವಕಾಶವಾಗಿಲ್ಲ ಹೊರತಾಗಿ ಶ್ರುತಿಯೇ ನಿರವಕಾಶವಾಗಿದೆ.

ಹಾಗಾದರೆ ಅದಿತಿಶ್ರುತಿಯನ್ನೇ ಸಮನ್ವಯ ಮಾಡಬಹುದಲ್ಲವೇ? ಎಂದು ಕೇಳಬಾರದು. ಇದು ಲಿಂಗಪಾದವಾದ್ದರಿಂದ ಪಾದಸಂಗತಿಗೋಸ್ಕರ ಮತ್ತು ಸರ್ವಾತ್ತೃತ್ವವೆಂಬ ಅಪೂರ್ವಗುಣದ ಲಾಭಕ್ಕಾಗಿ ಸರ್ವಾತ್ತೃತ್ವವೆಂಬ ಲಿಂಗವನ್ನೇ ಸಮನ್ವಯ ಮಾಡಬೇಕು..

**प्रकाशः – संशयटीकां व्यनक्ति – अत्रेति ।** ''स यद्यदेवासृजत तत्तदत्तुमध्रियत, सर्वं वा अत्तीति तददितेरदितित्वम्'' इति बृहदारण्यके तृतीयेऽध्याये ''सः अदितिः यद्यदेवासृजत तत्तदत्तुं मनोऽध्रियत आदच्च । कुतः, सर्वात्री सा । सर्वं वा अत्तीति यत्, तदेव ह्यदितेरदितित्वम्' इति टीकोक्तदिशा श्रुतं सर्वसंहर्तृत्वरूपमत्तृत्वम् इत्यर्थः । **प्रसिद्धेऽर्थ इति ।** अदितिरूपदेवतायां अदितिशब्दप्रवृत्तिनिमित्त-व्युत्पादकमित्यर्थः ।

ಸಂಶಯಟೀಕೆಯನ್ನು 'ಅತ್ರ' ಇತ್ಯಾದಿವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ''ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ, ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಮ್'' ಎಂಬುದಾಗಿ ಬೃಹದಾರಣ್ಯಕದ ಮೂರನೆಯ ಅಧ್ಯಾಯದಲ್ಲಿ ಪ್ರಸಕ್ತವಾಗಿದೆ. ಇದಕ್ಕೆ ಟೀಕೆಯಲ್ಲಿ ''ಸಃ ಅದಿತಿಃ ಯದ್ಯದೇವಾಸೃಜತ ತತ್ತದತ್ತುಂ ಮನೋಽಧ್ರಿಯತ ಆದಾಚ್ಚ । ಕುತಃ, ಸರ್ವಾತ್ರೀ ಸಾ । ಸರ್ವಂ ವಾ ಅತ್ತೀತಿ ಯತ್, ತದೇವ ಹ್ಯದಿತೇರದಿತಿತ್ವಮ್'' ಎಂದು ವ್ಯಾಖ್ಯಾನಿಸಿದ್ದಾರೆ. ಇದರಿಂದ ಸರ್ವಸಂಹರ್ತೃತ್ವವೆಂಬ ಅತ್ತೃತ್ವವನ್ನು ಹೇಳಿದಂತಾಗುತ್ತದೆ. 'ಪ್ರಸಿದ್ಧೇಽರ್ಥಃ' ಎಂದರೆ ಅದಿತಿ ಎಂಬ ದೇವತೆಯಲ್ಲಿ ಎಂದರ್ಥ. ಶಬ್ದಾನ್ವಖ್ಯಾಪಕಮ್ ಎಂದರೆ ಅದಿತಿಶಬ್ದ ಪ್ರವೃತ್ತಿನಿಮಿತ್ತಕ್ಕೆ ವ್ಯುತ್ಪಾದಕವಾದದ್ದು ಎಂದರ್ಥ.

**प्रकाशः – हेतुपरमिति ।** यस्मात्सर्वात्तृत्वादेव अदितित्वमतः सर्वमत्तुं मनोऽकुरुतेति हेतुपरमित्यर्थः ।

यद्यन्वाख्यापकं तदा तत्र सम्भावितकतिपयात्तृत्वस्यैव ग्राह्यत्वेन सर्वशब्द-सङ्कोचाददितिरेवेति पूर्वपक्षे फलम्,

यदि हेतुपरं तदा सङ्कोचकाभावाद्विष्णुरेवेति सिद्धान्ते फलमिति स्पष्टत्वान्नोक्तम् ।

'ಹೇತುಪರಂ' ಎಂದರೆ ಯಾವ ಕಾರಣದಿಂದ ಸರ್ವಾತ್ತೃತ್ವಗುಣವಿರುವುದರಿಂದಲೇ ಅದಿತಿತ್ವವು ಬರುತ್ತದೋ ಆದ್ದರಿಂದಲೇ ಸರ್ವವನ್ನು ತಿನ್ನಲು ಮನಸ್ಸು ಮಾಡಲಾಯಿತು ಎಂದರ್ಥ.

ಪರಿಪೂರ್ಣಚಂದ್ರಿಕಾ

ಒಂದು ವೇಳೆ ಈ ವಾಕ್ಯವು ಅದಿತಿಶಬ್ದ ಪ್ರವೃತ್ತಿನಿಮಿತ್ತಕ್ಕೆ ವ್ಯುತ್ಪಾದಕವಾಗಿದ್ದಲ್ಲಿ ಆವಾಗ ಸಂಭಾವಿತವಾದ ಕೆಲವು ಪದಾರ್ಥಗಳ ಅತ್ತೃತ್ವವನ್ನೇ ಹೇಳಬೇಕಾಗುತ್ತದೆ. ಸರ್ವಶಬ್ದಕ್ಕೆ ಸಂಕೋಚ ಮಾಡಿದ್ದರಿಂದ ಅದಿತಿಯೇ ಅತ್ತೃತ್ವಗುಣವುಳ್ಳವಳಾಗುತ್ತಾನೆ. ಇದು ಪೂರ್ವಪಕ್ಷದ ಫಲ.

ಒಂದು ವೇಳೆ ಈ ವಾಕ್ಯವು ಹೇತು ಪರವಾದರೆ ಆವಾಗ ಸರ್ವಶಬ್ದಕ್ಕೆ ಸಂಕೋಚ ಮಾಡಲು ಕಾರಣವಿಲ್ಲದ್ದರಿಂದ ವಿಷ್ಣುವೇ ಅತ್ತೃತ್ವಗುಣವುಳ್ಳವನಾಗುತ್ತಾನೆ. ಇದು ಸಿದ್ಧಾಂತದ ಫಲ. ಈ ಎರಡು ವಿಧ ಫಲಗಳು ಸ್ಪಷ್ಟವಾಗಿರುವುದರಿಂದ ಗ್ರಂಥಕಾರರು ಹೇಳಿರುವುದಿಲ್ಲ.






ಅತ್ತೃತ್ವಾಧಿಕರಣವು ಪ್ರಾರಂಭವಾಗುತ್ತಿದೆ. 'ತತ್ತದತ್ತುಮಧ್ರಿಯತ' ಎಂಬುದು ಈ ಅಧಿಕರಣದ ವಿಷಯವಾಕ್ಯ . ಈ ವಿಷಯವಾಕ್ಯದಲ್ಲಿ ಸಕಲ ಪದಾರ್ಥಗಳ ಅತ್ತೃತ್ವವನ್ನು ಅದಿತಿಗೆ ಹೇಳಲಾಗಿದೆ. ಇಲ್ಲಿರುವ ಅದಿತಿ ಶಬ್ದವು ದೇವಮಾತೆಯಾದ ಅದಿತಿದೇವಿಯನ್ನು ಹೇಳುತ್ತಿದೆಯೋ ಅಥವಾ ವಿಷ್ಣುವನ್ನು ಹೇಳುತ್ತಿದೆಯೋ? ಎಂದು ಸಹಜವಾಗಿ ಸಂಶಯ ಬರುತ್ತದೆ.

ಒಂದು ವೇಳೆ ಕೆಲವು ಪದಾರ್ಥಗಳನ್ನಷ್ಟೇ ಸರ್ವಶಬ್ದವು ಹೇಳುವುದಾದರೆ ಕೆಲವು ಪದಾರ್ಥಗಳನ್ನು ಅದಿತಿದೇವಿಯು ತಿನ್ನುವುದರಿಂದ ಅದಿತಿಯಲ್ಲಿಯೇ ಅತ್ತೃತ್ವಧರ್ಮವು ಬರುತ್ತದೆ. ಅದಿತಿ ಶಬ್ದವು ಅದಿತಿದೇವಿಯಲ್ಲಿ ರೂಢವಾಗಿರುವುದೂ ಸಹ ಮತ್ತೊಂದು ಕಾರಣ.

ಒಂದು ವೇಳೆ ಸರ್ವಶಬ್ದಕ್ಕೆ ಸಂಕೋಚ ಮಾಡದಿದ್ದರೆ ಸಕಲ ಪದಾರ್ಥಗಳನ್ನು ತಿನ್ನುವ ವಿಷ್ಣುವನ್ನೇ ಅದಿತಿಯೆನ್ನಬೇಕಾಗುತ್ತದೆ. ಇದರಿಂದ ಸಕಲ ಸಂಹರ್ತೃತ್ವ ಎಂಬ ಗುಣವು ವಿಷ್ಣುವಿನಲ್ಲಿ ಸಿದ್ಧವಾಗುತ್ತದೆ.

• • • • •

## ಅದಿತಿಶ್ರುತಿ ಹಾಗೂ ಅದಿತಿತ್ವಲಿಂಗಗಳಿಂದ ಪೂರ್ವಪಕ್ಷ

### तात्पर्यचन्द्रिका

पूर्वपक्षस्तु – युक्तमादित्यश्रुतिसहचरितमपि सर्वगतत्वं विष्णौ, "अन्तः" इत्यत्र तत्पर्यायसवितृशब्दसमन्वयस्य सिद्धेः । अदितिशब्दपर्यायस्यापि न तत्र सिद्धिः । तथा च अदितिरेवात्री, "तददितेरदितित्वं" इत्यदितिश्रुतेरदितित्व-लिङ्गाच्च । तदुक्तं न्यायविवरणे – "श्रुतिर्लिङ्गं च अदितिशब्दोऽदितित्वं च" इति ।

**नन्वत्र टीकायामुक्तन्यायेन श्रुतेस्सावकाशत्वे शङ्किते तामनुक्त्वा, लिङ्गमुक्त्वा, ''न ह्यदितिभिन्नस्यादितित्वं'' इति लिङ्गस्य निरवकाशत्वं चोक्तम्, तत्कथम्, अदितिश्रुतेर्ब्रह्मणि मुख्यत्वे अमुख्यत्वे वा अदितित्वलिङ्गस्यापि तत्र मुख्यस्यामुख्यस्य वा सम्भवादिति चेत्,**

**उच्यते, तीरादौ गङ्गादिपदप्रयोगेऽपि 'तीरे गङ्गात्वं' इत्यप्रयोगात् श्रुतेर्ब्रह्मण्यमुख्यत्वेन सम्भवेऽपि लिङ्गस्यामुख्यत्वेनाप्यसम्भव इति टीकाभिप्रायः ।**

ಅನುವಾದ - ಪೂರ್ವಪಕ್ಷ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಆದಿತ್ಯಶ್ರುತಿಯ ಜೊತೆಗೆ ಹೇಳಲ್ಪಟ್ಟಿದ್ದರೂ ಸಹ ಸರ್ವಗತತ್ವವನ್ನು ವಿಷ್ಣುವಿನಲ್ಲಿ ಸಮರ್ಥಿಸಲಾಯಿತು. ಏಕೆಂದರೆ ಅಂತರಧಿಕರಣದಲ್ಲಿ ಆದಿತ್ಯಶಬ್ದಕ್ಕೆ ಪರ್ಯಾಯಶಬ್ದವಾಗಿರುವ ಸವಿತೃಶಬ್ದದ ಸಮನ್ವಯವನ್ನು ಮಾಡಲಾಗಿತ್ತು. ಆದರೆ ಅದಿತಿಶಬ್ದದ ಪರ್ಯಾಯಶಬ್ದವನ್ನು ಅಂತರಧಿಕರಣದಲ್ಲಿ ಸಮನ್ವಯ ಮಾಡಿಲ್ಲ. ಆದ್ದರಿಂದ ಅದಿತಿದೇವಿಯೇ ಅತ್ತೃತ್ವಗುಣವುಳ್ಳವಳಾಗುತ್ತಾಳೆ. ಈ ವಿಷಯದಲ್ಲಿ 'ತದದಿತೇಃ ಅದಿತಿತ್ವಂ' ಎಂಬ ಶ್ರುತಿಯಿಂದ ತಿಳಿಯುವ ಅದಿತಿಶ್ರುತಿ ಹಾಗೂ ಲಿಂಗ ಎರಡು ಪ್ರಮಾಣಗಳಿವೆ. ಈ ವಿಷಯವನ್ನೇ ನ್ಯಾಯವಿವರಣದಲ್ಲಿ ''ಶ್ರುತಿಲಿಂಗಂಚಾದಿತಿಶಬ್ದೋಽದಿತಿತ್ವಂಚ'' ಅದಿತಿ ಶಬ್ದವೆಂಬ ಶ್ರುತಿಯು ಅದಿತಿತ್ವ ಎಂಬ ಲಿಂಗವು ಪೂರ್ವಪಕ್ಷ ಪ್ರಾಪಕವೆಂದು ಹೇಳಿದ್ದಾರೆ.

ಆಕ್ಷೇಪ - ಅದಿತಿಶ್ರುತಿ ಹಾಗೂ ಅದಿತಿತ್ವ ಲಿಂಗ ಎರಡನ್ನೂ ನಿರವಕಾಶ ಪ್ರಮಾಣಗಳೆನ್ನುತ್ತಿದ್ದೀರಿ. ಆದರೆ ಟೀಕೆಯಲ್ಲಿ ಅಂತರಧಿಕರಣದ ನ್ಯಾಯದಿಂದ ಶ್ರುತಿಯು ಸಾವಕಾಶವಾಗಿದೆಯೆಂದು ಶಂಕಿಸಿದ್ದಾರೆ. ಸಾವಕಾಶವಾದ್ದರಿಂದಲೇ ಪೂರ್ವಪಕ್ಷಪ್ರಾಪಕವಾಗುವುದಿಲ್ಲವೆಂದು ಒಪ್ಪಿ ಲಿಂಗವನ್ನಷ್ಟೇ ಹೇಳಿದ್ದಾರೆ. ಮತ್ತು ''ನ ಹ್ಯದಿತಿಭಿನ್ನಸ್ಯಾದಿತಿತ್ವಂ'' ಅದಿತಿತ್ವಲಿಂಗವು ಅದಿತಿದೇವಿಯನ್ನು ಬಿಟ್ಟು ಬೇರೆ ಯಾರಲ್ಲಿಯೂ ಇಲ್ಲವೆಂದು ಅದಿತಿತ್ವಲಿಂಗಕ್ಕೆ ನಿರವಕಾಶತ್ವವನ್ನು ಹೇಳಿದ್ದಾರೆ. ಇದು ಹೇಗೆ ಕೂಡುತ್ತದೆ? ಏಕೆಂದರೆ ಅದಿತಿಶ್ರುತಿಯು ಬ್ರಹ್ಮನಲ್ಲಿ ಮುಖ್ಯವೃತ್ತಿಯಿಂದ ಅಥವಾ ಅಮುಖ್ಯವೃತ್ತಿಯಿಂದ ಕೂಡಿದರೆ ಮಾತ್ರ ಅದಿತಿತ್ವ ಲಿಂಗವೂ ಬ್ರಹ್ಮನಲ್ಲಿ ಮುಖ್ಯವೃತ್ತಿಯಿಂದ ಅಥವಾ ಅಮುಖ್ಯವೃತ್ತಿಯಿಂದ ಕೂಡಲು ಸಾಧ್ಯ. ಆದರೆ ನೀವು ಅದಿತಿಶ್ರುತಿಯನ್ನು ಒಪ್ಪದೆ ಅದಿತಿತ್ವಲಿಂಗವನ್ನು ಮಾತ್ರ ಒಪ್ಪುತ್ತಿದ್ದೀರಿ. ಇದು ಹೇಗೆ ಸಾಧ್ಯ ?

ಸಮಾಧಾನ - ಶ್ರುತಿಯು ಉಪಪನ್ನವಾಗದಿದ್ದರೂ ಲಿಂಗವು ಉಪಪನ್ನವಾಗುತ್ತದೆ. ಉದಾಹರಣೆ - ತೀರದಲ್ಲಿ ಗಂಗಾಪದದ ಪ್ರಯೋಗವಿದೆ. ಆದರೆ ತೀರದಲ್ಲಿ 'ಗಂಗಾತ್ವಂ' ಎಂಬುದರ ಪ್ರಯೋಗವಿಲ್ಲ. ಅದರಂತೆ ಶ್ರುತಿಯು ಬ್ರಹ್ಮನಲ್ಲಿ ಅಮುಖ್ಯವಾಗಿ ಕೂಡಿದರೂ ಸಹ ಲಿಂಗವು ಅಮುಖ್ಯವೃತ್ತಿಯಿಂದ ಕೂಡುವುದಿಲ್ಲವೆಂದು ಟೀಕೆಯ ಅಭಿಪ್ರಾಯ.

ಪರಿಪೂರ್ಣಚಂದ್ರಿಕಾ

**प्रकाशः –**

अत्र सन्दिग्धश्रुतिलिङ्गाभ्यां निश्चितलिङ्गप्रकरणयोरेव बलवत्त्वं, ''सन्दिग्धश्रुतिर्लिङ्गं चादितिशब्दोऽदितित्वं च'' इति न्यायविवरणे श्रुतेरेव सन्दिग्धत्वविशेषणात्, लिङ्गस्य तदविशेषणात्, भाष्यटीकायां न्यायविवरणटीकायां च श्रुतेरन्तर्नयन्यायेन सावकाशत्वमुपेत्य लिङ्गस्य निरवकाशत्वेन पूर्वपक्षः कृतः ।

ಈ ಅಧಿಕರಣದ ನ್ಯಾಯವಿವರಣದಲ್ಲಿ ಹೀಗೆ ಹೇಳಲಾಗಿದೆ - ಸಂದಿಗ್ಧಶ್ರುತಿಲಿಂಗಾಭ್ಯಾಂ ನಿಶ್ಚಿತಲಿಂಗಪ್ರಕರಣಯೋರೇವ ಬಲವತ್ತ್ವಂ "ಸಂದಿಗ್ಧಶ್ರುತಿರ್ಲಿಂಗಂ ಚಾದಿತಿಶಬ್ದೋಽದಿತಿತ್ವಂ ಚ" ಸಂದಿಗ್ಧವಾದ (ಸಾವಕಾಶವಾದ) ಶ್ರುತಿಲಿಂಗಗಳಿಗಿಂತ ನಿಶ್ಚಿತವಾದ (ನಿರವಕಾಶವಾದ) ಲಿಂಗ ಹಾಗೂ ಪ್ರಕರಣಗಳೇ ಬಲಿಷ್ಠವಾಗಿವೆ. ಸಂದಿಗ್ಧವಾದ ಶ್ರುತಿ ಎಂದರೆ ಅದಿತಿಶಬ್ದ, ಸಂದಿಗ್ಧವಾದ ಲಿಂಗವೆಂದರೆ ಅದಿತತ್ವವೆಂಬ ಲಿಂಗ. ಹೀಗೆ ನ್ಯಾಯವಿವರಣದಲ್ಲಿ ಶ್ರುತಿಯಲ್ಲಿ ಸಂದಿಗ್ಧತ್ವವನ್ನು ವಿಶೇಷಣವನ್ನಾಗಿ ಹೇಳಿದ್ದಾರೆ, ಹೊರತು ಲಿಂಗದಲ್ಲಿ ವಿಶೇಷಣವನ್ನಾಗಿ ಹೇಳಿರುವುದಿಲ್ಲ. ಭಾಷ್ಯ ಹಾಗೂ ಟೀಕೆಗಳಲ್ಲಿ ಮತ್ತು ನ್ಯಾಯವಿವರಣದ ಟೀಕೆಯಲ್ಲಿ ಶ್ರುತಿಗೆ ಅಂತರಧಿಕರಣದ ನ್ಯಾಯದಿಂದ ಸಾವಕಾಶತ್ವವನ್ನು ಅಂಗೀಕರಿಸಿ ಲಿಂಗಕ್ಕೆ ನಿರವಕಾಶತ್ವದಿಂದ ಪೂರ್ವಪಕ್ಷವನ್ನು ಮಾಡಲಾಗಿದೆ.

**प्रकाशः** – तस्मिन्पक्षे लिङ्गस्य निरवकाशत्वं ''नन्वत्र'' इत्यादिना वक्ष्यमाणदिशोपपादनसापेक्षम् । श्रुतेरपि निरवकाशत्वे तु नोपपादनक्लेश इति भावेन न्यायविवरणस्थचशब्दने द्वयोरपि प्रत्येकं पूर्वपक्षप्रापकत्वभानत्तदनुरोधेन द्वयोरपि प्रत्येकं निरवकाशत्वं न्यायविवरणाभिमतम् । सन्दिग्धपदेन श्रुतेः सावकाशत्वोक्तिस्तु अन्तर्नये सजातीयेन्द्रादिदेवतावाचिशब्दस्य समन्वितत्वात् सिद्धान्तिना सावकाशयितव्यत्वाभिप्रायत्वादिति।

ಮೇಲೆ ಹೇಳಿದ ಪ್ರಕಾರ ಲಿಂಗವು ನಿರವಕಾಶವಾಗಿದೆ. ಏಕೆಂದರೆ "ನನ್ವತ್ರ" ಇತ್ಯಾದಿ ವಾಕ್ಯಗಳಲ್ಲಿ ಮುಂದೆ ಉಪಪಾದಿಸುವಂತೆ ಲಿಂಗವು ನಿರವಕಾಶವೆಂದು ಸ್ಪಷ್ಟವಾಗುತ್ತದೆ. ಶ್ರುತಿಯೂ ಸಹ ನಿರವಕಾಶವಾದರೆ ಪೂರ್ವಪಕ್ಷವನ್ನು ಸಮರ್ಥಿಸುವುದು ಸುಲಭವಾಗುತ್ತದೆ. ಈ ಅಭಿಪ್ರಾಯದಿಂದಲೇ ನ್ಯಾಯವಿವರಣದಲ್ಲಿ 'ಚ' ಶಬ್ದವನ್ನು ಪ್ರಯೋಗಿಸಿದ್ದಾರೆ. ಅಂದರೆ ಶ್ರುತಿ ಹಾಗೂ ಲಿಂಗ ಎರಡೂ ಸಹ ಪ್ರತ್ಯೇಕವಾಗಿ ಪೂರ್ವಪಕ್ಷಕ್ಕೆ ಪ್ರಾಪಕಗಳಾಗಿವೆ. ಅದಕ್ಕೆ ಅನುಸಾರಿಯಾಗಿ ಎರಡೂ ಸಹ ಪ್ರತ್ಯೇಕವಾಗಿ ನಿರವಕಾಶಗಳಾಗಿವೆ ಎಂಬುದು ನ್ಯಾಯವಿವರಣದ ಅಭಿಪ್ರಾಯ. ಹಾಗಾದರೆ ಸಂದಿಗ್ಧತ್ವವನ್ನು ಶ್ರುತಿಯಲ್ಲಿ ವಿಶೇಷಣವನ್ನಾಗಿ ಏಕೆ ಹೇಳಿದರು. ಹೀಗೆ ಹೇಳಿದ್ದರಿಂದ ಶ್ರುತಿಗೆ ಸಾವಕಾಶತ್ವವನ್ನು ಹೇಳಿದಂತಾಯಿತಲ್ಲವೆ? ಎಂದರೆ ಅಂತರಧಿಕರಣದ ನ್ಯಾಯದಿಂದ ಅದಿತಿ ಶಬ್ದಕ್ಕೆ ಸಜಾತೀಯವಾದ ಇಂದ್ರಾದಿ ದೇವತಾವಾಚಿಯಾದ ಶಬ್ದಗಳ ಸಮನ್ವಯವನ್ನು ಮಾಡಿದ್ದರಿಂದ ಪ್ರಕೃತ ಅದಿತಿಶಬ್ದವನ್ನು ವಿಷ್ಣುವಿನಲ್ಲಿ ಸಾವಕಾಶವೆಂದಿದ್ದಾರೆ. ಅಥವಾ ಮುಂದೆ ಸಿದ್ಧಾಂತ

ಮಾಡುವಾಗ ಅದಿತಿ ಶ್ರುತಿಯನ್ನು ಸಾವಕಾಶ ಮಾಡುತ್ತಾರಾದ್ದರಿಂದ ಅದನ್ನು ಉದ್ದೇಶಿಸಿಯೂ ನ್ಯಾಯವಿವರಣೆಯಲ್ಲಿ ಶ್ರುತಿಗೆ ಸಾವಕಾಶತ್ವವನ್ನು ಹೇಳಿದ್ದಾರೆ.

**प्रकाशः** – श्रुतेर्निरवकाशत्वं च द्वेधा, पूर्वमदितिशब्दपर्यायस्यापि विष्णावसमन्वयाद्वा श्रुतिबाधकनिरवकाशविष्णुलिङ्गाभावेनान्तर्नयन्यायाविषयत्वाद्वेत्यभिप्रेत्य, तत्राद्यं पूर्ववैषम्यप्रदर्शनपूर्वं व्यनक्ति – **युक्तमित्यादिना** । द्वितीयं "अथवा" इत्यादिनाऽग्रे विवरिष्यते इति ध्येयम् ।

ಒಟ್ಟು ಎರಡು ರೀತಿಯಲ್ಲಿ ಶ್ರುತಿಗೆ ಸಾವಕಾಶತ್ವವನ್ನು ಹೇಳಬಹುದು -

೧) ಹಿಂದಿನ ಅಂತರಧಿಕರಣದಲ್ಲಿ ಅದಿತಿಶಬ್ದದ ಪರ್ಯಾಯಪದವನ್ನೂ ಸಹ ವಿಷ್ಣುವಿನಲ್ಲಿ ಸಮನ್ವಯ ಮಾಡಿರುವುದಿಲ್ಲ. ಆದ್ದರಿಂದ ಇಲ್ಲಿ ಪ್ರಸಕ್ತವಾದ ಅದಿತಿ ಶಬ್ದಗಳು ವಿಷ್ಣುವಿನಲ್ಲಿ ಸಾವಕಾಶವೆಂದು ಹೇಳಲಾಗದು.

೨) ಅದಿತಿಶ್ರುತಿಗೆ ಬಾಧಕವಾದ ಯಾವುದೇ ವಿಷ್ಣುಲಿಂಗಗಳಿರುವುದಿಲ್ಲ. ಆದ್ದರಿಂದ ಅಂತರಧಿಕರಣದಲ್ಲಿ ಅದಿತಿಶಬ್ದವನ್ನು ಸಮನ್ವಯ ಮಾಡಲು ಬೇಕಾಗಿರುವ ಸಿದ್ಧಾಂತ ಸ್ಥಾಪಕನ್ಯಾಯಕ್ಕೆ ವಿಷಯವಾಗಿರುವುದಿಲ್ಲ. ಆದ್ದರಿಂದಲೂ ಇಲ್ಲಿ ಪ್ರಕೃತವಾದ ಅದಿತಿಶಬ್ದವು ನಿರವಕಾಶವಾಗಿದೆ.

ಈ ಎರಡು ಪಕ್ಷಗಳಲ್ಲಿ ಮೊದಲನೆಯ ಪಕ್ಷವನ್ನು ಸ್ವೀಕರಿಸಿ ಹಿಂದಿನ ಅಧಿಕರಣದ ಪೂರ್ವಪಕ್ಷಕ್ಕಿಂತ ವಿಲಕ್ಷಣವಾಗಿ ಈ ಅಧಿಕರಣದ ಪೂರ್ವಪಕ್ಷವು ಹುಟ್ಟುತ್ತಿದೆ ಎಂದು 'ಯುಕ್ತಂ ಆದಿತ್ಯಶ್ರುತಿ' ಇತ್ಯಾದಿ ವಾಕ್ಯಗಳಿಂದ ಸಮರ್ಥಿಸುತ್ತಿದ್ದಾರೆ. ಎರಡನೆಯ ಪಕ್ಷವನ್ನು ಸ್ವೀಕರಿಸಿ ಮುಂದೆ 'ಅಥವಾ' ಇತ್ಯಾದಿ ಗ್ರಂಥದಿಂದ ಪೂರ್ವಪಕ್ಷವನ್ನು ಸ್ಥಾಪಿಸುತ್ತಾರೆಂದು ತಿಳಿಯಬೇಕು.

**प्रकाशः** – अत्रैवं योजना – अदितिरेवात्तृत्वेनोच्यते, "तददितेरदितित्वं" इत्यदितिश्रुतेः । न चाऽऽदित्यश्रुतौ सत्यामपि सर्वगतत्वं विष्णोरिवात्तृत्वमपि किं न स्यादिति वाच्यं, युक्तमादित्यश्रुतीत्यादि । **सवितृशब्देति** । "सवितारं बृहस्पतिं" इति तत्र श्रवणादिति भावः ।

ಗ್ರಂಥದಲ್ಲಿರುವ ಮಾತುಗಳನ್ನು ಹೀಗೆ ಯೋಜಿಸಿಕೊಳ್ಳಬೇಕು - ಅದಿತಿಯೇ ಅತ್ತೃತ್ವ ಧರ್ಮವುಳ್ಳವಳಾಗಿದ್ದಾಳೆ. 'ತದದಿತೇಃ' ಎಂಬ ಶ್ರುತಿ ಪ್ರಮಾಣವಿರುವುದರಿಂದ. ಹಾಗಾದರೆ ಆದಿತ್ಯಶ್ರುತಿಯು ಪ್ರಮಾಣವಾಗಿದ್ದರೂ ಸರ್ವಗತತ್ವವು ವಿಷ್ಣುವಿನಲ್ಲಿ ಬಂದಂತೆ ಪ್ರಕೃತ ಅದಿತಿಶ್ರುತಿಯು ಪ್ರಮಾಣವಾಗಿದ್ದರೂ ಅತ್ತೃತ್ವಧರ್ಮವು ವಿಷ್ಣುವಿನಲ್ಲೇಕೆ ಬರಬಾರದು ? ಎಂದು ಪ್ರಶ್ನಿಸಬಾರದು. ಇದಕ್ಕೆ 'ಯುಕ್ತಮಾದಿತ್ಯಶ್ರುತಿ' ಇತ್ಯಾದಿ ವಾಕ್ಯದಿಂದಲೇ ಉತ್ತರಿಸುತ್ತಿದ್ದಾರೆ. ಅಂತರಧಿಕರಣದಲ್ಲಿ ಆದಿತ್ಯಶಬ್ದಕ್ಕೆ ಪರ್ಯಾಯಶಬ್ದವೆನಿಸಿದ "ಸವಿತಾರಂ ಬೃಹಸ್ಪತಿಂ" ಎಂಬಲ್ಲಿ ಕೇಳಿಸುತ್ತಿರುವ ಸವಿತೃ ಶಬ್ದವನ್ನು ಸಮನ್ವಯ ಮಾಡಲಾಗಿದೆ. ಅದಿತಿ ಶಬ್ದಕ್ಕೆ ಪರ್ಯಾಯ ಶಬ್ದದ ಸಮನ್ವಯವನ್ನು ಅಲ್ಲಿ ಮಾಡಿರುವುದಿಲ್ಲವೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – एवं श्रुत्यैव पूर्वपक्षे तद्दार्ढ्याय लिङ्गं चाह – **अदितित्वेति** । श्रुतेर्निरवकाशत्वोक्त्यैवादितित्वलिङ्गस्य विष्णौ निरवकाशत्वं सिद्धमेव, तच्छब्द-प्रवृत्तिनिमित्तरूपत्वात्तस्य । अतो न तत्रोपपादनापेक्षेति भावेन वा, ''अथवा'' इत्यत्राग्रे स्पष्टमित्यभिप्रेत्य वाऽदितित्वलिङ्गाच्चेत्येवोक्तम् ।

टीकायामेवमदृष्टेः किमस्य मूलमित्यतो न्यायविवरणटीकोक्त-वर्णकाद्वर्णकान्तरमेतदिति भावेनाह – **तदुक्तमिति** ।

ಹೀಗೆ ಶ್ರುತಿಯಿಂದಲೇ ಪೂರ್ವಪಕ್ಷ ಮಾಡಲು ಬರುವಾಗ ಶ್ರುತಿಯ ದಾರ್ಢ್ಯಕ್ಕಾಗಿ ಲಿಂಗವನ್ನು ಉಪಯೋಗಿಸಿಕೊಂಡಿದ್ದಾರೆಂದು 'ಅದಿತಿತ್ವಂ' ಇತ್ಯಾದಿಯಾಗಿ ಹೇಳಿದ್ದಾರೆ. ವಸ್ತುತಃ ಶ್ರುತಿಗೆ ನಿರವಕಾಶತ್ವವನ್ನು ಹೇಳಿದ್ದರಿಂದಲೇ ಅದಿತತ್ವವೆಂಬ ಲಿಂಗವೂ ಸಹ ವಿಷ್ಣುವಿನಲ್ಲಿ ನಿರವಕಾಶತ್ವವು ಸಿದ್ಧವಾಗಿದೆ. ಏಕೆಂದರೆ ಅದಿತಿತ್ವವೆಂಬ ಲಿಂಗವು ಅದಿತಿಶಬ್ದದ ಪ್ರವೃತ್ತಿನಿಮಿತ್ತರೂಪವಾಗಿದೆ. ಆದ್ದರಿಂದ ಲಿಂಗವನ್ನು ಇಲ್ಲಿ ಹೇಳಬೇಕಾಗಿರಲಿಲ್ಲ. ಅಥವಾ ಮುಂದೆ ''ಅಥವಾ'' ಇತ್ಯಾದಿ ಗ್ರಂಥದಿಂದ ಲಿಂಗವನ್ನು ಹೇಳಿದ್ದಕ್ಕೆ ಕಾರಣವನ್ನು ನಿರೂಪಿಸುತ್ತಾರೆ. ಈ ಅಭಿಪ್ರಾಯದಿಂದಲೂ 'ಅದಿತಿತ್ವಲಿಂಗಾಚ್ಚ' ಎಂದೇ ಹೇಳಿದ್ದಾರೆ.

ಟೀಕೆಯಲ್ಲಿ ಈ ರೀತಿಯಾಗಿ ಶ್ರುತಿ ಹಾಗೂ ಲಿಂಗ ಎರಡಕ್ಕೂ ನಿರವಕಾಶತ್ವವನ್ನು ಒಪ್ಪಿರುವುದು ಕಾಣಸುತ್ತಿಲ್ಲ. ಆದ್ದರಿಂದ ಯಾವ ಆಧಾರದಿಂದ ಗ್ರಂಥಕಾರರು ಶ್ರುತಿ ಹಾಗೂ ಲಿಂಗಗಳಿಗೆ ನಿರವಕಾಶತ್ವವನ್ನು ಸಮರ್ಥಿಸುತ್ತಿದ್ದಾರೆ ? ಎಂದರೆ ನ್ಯಾಯವಿವರಣದ ಟೀಕೆಯಲ್ಲಿ ಮಾಡಿದ ವ್ಯಾಖ್ಯಾನಕ್ಕಿಂತ ಭಿನ್ನವಾದ ಮತ್ತೊಂದು ವ್ಯಾಖ್ಯಾನ ಇದಾಗಿದೆಯೆಂಬ ಅಭಿಪ್ರಾಯದಿಂದ 'ತದುಕ್ತಂ' ಎಂದು ಹೇಳುತ್ತಿದ್ದಾರೆ.

**प्रकाशः** – ''सन्दिग्धश्रुतिर्लिङ्गञ्च'' इत्यादिरूपेण तत्र पाठेऽपि 'श्रुतिर्लिङ्गञ्च' इत्यनुवादस्तु सन्दिग्धपदं, टीकायां ''श्रुतेः सावकाशत्वोक्तिस्तु'' इत्यादिना वक्ष्यमाणाभिप्रायमिति सूचयितुम् ।

''श्रुतिर्लिङ्गञ्च'' इत्युक्तस्य यथाक्रमं विवरणं ''अदितिशब्दोऽदितित्वं च'' इति । नन्वस्त्वेवमुक्तदिशा श्रुतिर्निरवकाशेति, लिङ्गमपि तादृशं, श्रुतिस्सावकाशेति पक्षे कथमित्याक्षिपति – **नन्विति** ।

ನ್ಯಾಯವಿವರಣದಲ್ಲಿ 'ಸಂದಿಗ್ಧಶ್ರುತಿರ್ಲಿಂಗಂಚ' ಇತ್ಯಾದಿಯಾಗಿ ಪಾಠವಿದೆ. ಆದರೆ ಪ್ರಕೃತ ಗ್ರಂಥಕಾರರು ಸಂದಿಗ್ಧಪದವನ್ನು ಬಿಟ್ಟು 'ಶ್ರುತಿರ್ಲಿಂಗಂ ಚ' ಎಂದು ಅನುವಾದ ಮಾಡಿದ್ದಾರೆ. ಇದಕ್ಕೆ ಕಾರಣವೇನೆಂದರೆ ನ್ಯಾಯವಿವರಣದಲ್ಲಿರುವ ಸಂದಿಗ್ಧಪದವು ಟೀಕೆಯಲ್ಲಿರುವ ''ಶ್ರುತೇಃ ಸಾವಕಾಶತ್ವೋಕ್ತಿಃ'' ಇತ್ಯಾದಿಯಾಗಿ ಮುಂದೆ ಹೇಳುವ ಅಭಿಪ್ರಾಯವನ್ನು ಒಳಗೊಂಡಿದೆ. ಇದನ್ನು ಸೂಚಿಸಲು ''ಶ್ರುತಿರ್ಲಿಂಗಂಚ'' ಎಂದು ಗ್ರಂಥಕಾರರು ಹೇಳಿದ್ದಾರೆ.

'ಶ್ರುತಿಃ' ಎಂಬ ಪದಕ್ಕೆ ಅದಿತಿ ಎಂಬರ್ಥ. ಲಿಂಗ ಪದಕ್ಕೆ ಅದಿತಿತ್ವಲಂಗವೆಂದರ್ಥ ಎಂದು ಯಥಾಕ್ರಮವಾಗಿ ಅರ್ಥೈಸಿಕೊಳ್ಳಬೇಕು.

ಇಲ್ಲಿಯ ತನಕ ಹೇಳಿದಂತೆ ಶ್ರುತಿ ಹಾಗೂ ಲಿಂಗ ಎರಡೂ ಸಹ ನಿರವಕಾಶಗಳಾಗಿವೆ. ಹಾಗಾದರೆ ಶ್ರುತಿಯು ಸಾವಕಾಶವೆಂಬ ಟೀಕೆಯಲ್ಲಿ ಹೇಳಿದ ಪಕ್ಷವನ್ನು ಆಶ್ರಯಿಸಿದಾಗ ಪೂರ್ವಪಕ್ಷವನ್ನು ಹೇಗೆ ತಿಳಿಯಬೇಕು ಎಂಬ ಆಕ್ಷೇಪಕ್ಕೆ 'ನನು' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – ''नच श्रुतिर्विष्णुविषया किं न स्यादुक्तन्यायात्' इत्यन्तरधिकरणन्यायेन शङ्कित इत्यर्थः ।

**पूर्वपादे प्रतिनयमधिदैवाधिभूतादिशब्दानां विष्णौ शक्तिरप्यस्तीत्युच्यत इति पक्षमभ्युपेत्याह – श्रुतेर्ब्रह्मणि मुख्यत्वे इति । तात्पर्यमात्रमेवोच्यते नतु शक्तिरिति पक्षमुपेत्याह – अमुख्यत्वे वेति ।**

ಶ್ರುತಿಯು ಏಕೆ ವಿಷ್ಣುವಿಷಯವಾಗುವುದಿಲ್ಲ; ಏಕೆಂದರೆ ಅಂತರಧಿಕರಣದ ನ್ಯಾಯದಿಂದ ಅದಿತಿ ಶಬ್ದವು ವಿಷ್ಣುವಿನಲ್ಲಿ ಸಮನ್ವಯವಾಗಿದೆಯಲ್ಲವೇ? ಎಂದು 'ಸಾವಕಾಶತ್ವೇ ಶಂಕಿತೇ' ಎಂಬುದರ ತಾತ್ಪರ್ಯ.

ಹಿಂದಿನ ನಾಮಪಾದದ ಪ್ರತಿಯೊಂದು ಅಧಿಕರಣಗಳಲ್ಲಿ ಸಮನ್ವಯ ಮಾಡಿದ ಆಧಿದೈವಿಕ ಹಾಗೂ ಆಧಿಭೌತಿಕ ಮೊದಲಾದ ಶಬ್ದಗಳು ವಿಷ್ಣುವಿನಲ್ಲಿ ಶಕ್ತಿರುಕ್ತಿಯಿಂದ ಸಿದ್ಧವಾಗಿವೆ ಎಂಬ ಪಕ್ಷವನ್ನು ಅಂಗೀಕರಿಸಿ 'ಶ್ರುತೇರ್ಬ್ರಹ್ಮಣಿ ಮುಖ್ಯತ್ವೇ' ಎಂಬುದಾಗಿ ಹೇಳುತ್ತಿದ್ದಾರೆ. ಹಿಂದಿನ ನಾಮಪಾದದಲ್ಲಿ ಆಧಿದೈವಿಕ ಮೊದಲಾದ ಶಬ್ದಗಳ ತಾತ್ಪರ್ಯವನ್ನಷ್ಟೇ ಹೇಳಲಾಗಿದೆ ಹೊರತು ಶಕ್ತಿರುಕ್ತಿಯನ್ನು ಹೇಳಿರುವುದಿಲ್ಲವೆಂಬ ಪಕ್ಷವನ್ನು ಅಂಗೀಕರಿಸಿ 'ಅಮುಖ್ಯತ್ವೇನ' ಎಂದು ಹೇಳಿದ್ದಾರೆ.

**प्रकाशः** – यद्वा – लोकरूढ्यभावमदनरूपप्रवृत्तिनिमित्ताभावं वाऽभिप्रेत्याह – **अमुख्यत्वे वेति लिङ्गस्यापीति** । तच्छब्दप्रवृत्तिहेतुत्वात्तस्येति भावः । द्वेधा समाधिमाह – **तीरेति** । 'सम्भवेऽपि' इत्यभ्युपगमवादं सूचयत्यपिपदेन । वस्तुतोऽदितिशब्दस्य तत्पर्यायस्य वा प्रागसमन्वयेन मुख्यत्वेन ब्रह्मणि सम्भवायोगात् ।

ವಿಷ್ಣುವಿನಲ್ಲಿ ಅದಿತಿ ಶಬ್ದದ ಪ್ರಯೋಗವು ಲೋಕರೂಢಿಯಿಂದ ಸಿದ್ಧವಾಗಿಲ್ಲ. ಅಥವಾ ಅದನವೆಂಬ ಪ್ರವೃತ್ತಿನಿಮಿತ್ತವೂ ಸಹ ಸಿದ್ಧವಾಗಿಲ್ಲವೆಂಬ ಅಭಿಪ್ರಾಯದಿಂದ 'ಅಮುಖ್ಯತ್ವೇವಾ' ಎಂದು ಹೇಳಿದ್ದಾರೆ.

ಗ್ರಂಥದಲ್ಲಿ 'ಅದಿತಿತ್ವಲಿಂಗಸ್ಯಾಪಿ' ಎಂದಿದೆ. ಅಂದರೆ ಅದಿತಿತ್ವ ಲಿಂಗವು ಅದಿತಿ ಶಬ್ದದ ಪ್ರವೃತ್ತಿನಿಮಿತ್ತವಾದ್ದರಿಂದ ವಿಷ್ಣುವಿನಲ್ಲಿ ಹೇಳಬಹುದೆಂದು ಅಭಿಪ್ರಾಯ. ಆಕ್ಷೇಪಕ್ಕೆ ಎರಡು ಬಗೆಯಾಗಿ ಸಮಾಧಾನವನ್ನು 'ತೀರಾದೌ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. 'ಸಂಭವೇಽಪಿ' ಎಂಬುದಾಗಿ ಅಪಿ

ಪದದಿಂದ ಅಭ್ಯುಪಗಮವಾದವೆಂದು ಸೂಚಿಸಿದ್ದಾರೆ. ವಸ್ತುತಸ್ತು ಅದಿತಿಶಬ್ದವನ್ನಾಗಲೀ, ಅದಿತಿಶಬ್ದದ ಪರ್ಯಾಯಶಬ್ದವನ್ನಾಗಲೀ ಅಂತರಧಿಕರಣದಲ್ಲಿ ಸಮನ್ವಯ ಮಾಡಿಲ್ಲ. ಆದ್ದರಿಂದ ಅಮುಖ್ಯವಾಗಿಯೂ ಸಹ ಬ್ರಹ್ಮನಲ್ಲಿ ಅದಿತಿ ಶಬ್ದವನ್ನು ಹೇಳಲಾಗದು.

**प्रकाशः** – सजातीयेन्द्रादिशब्दसमन्वयोक्तिमात्रेणादितिशब्दप्रवृत्तिहेतोर्हराव- सिद्धेः ''ब्रह्मण्यमुख्यत्वेन सम्भवेऽपि'' इत्युक्तम् । मुख्यत्वेन सम्भवे तु तच्छब्द- प्रवृत्तिनिमित्तस्यादितित्वस्य ब्रह्मणि मुख्यत्वेन सम्भव एव स्यादिति भावः ।

ಅಥವಾ ಸಜಾತೀಯವಾದ ಇಂದ್ರಾದಿ ಶಬ್ದಗಳ ಸಮನ್ವಯವನ್ನು ಅಂತರಧಿಕರಣದಲ್ಲಿ ಮಾಡಿದ್ದಾರೆ. ಇಷ್ಟರಿಂದಲೇ ಅದಿತಿ ಶಬ್ದದ ಪ್ರವೃತ್ತಿನಿಮಿತ್ತವು ಶ್ರೀಹರಿಯಲ್ಲಿ ಸಿದ್ಧವಾಗುವುದಿಲ್ಲ. ಈ ಕಾರಣದಿಂದಲೂ ಗ್ರಂಥದಲ್ಲಿ ''ಬ್ರಹ್ಮಣ್ಯಮುಖ್ಯತ್ವೇನ ಸಂಭವೇऽಪಿ'' ಎಂದು ಹೇಳಿದ್ದಾರೆ. ಒಂದು ವೇಳೆ ಮುಖ್ಯ ವೃತ್ತಿಯಿಂದ ಅದಿತಿ ಶಬ್ದವು ಶ್ರೀಹರಿಯಲ್ಲಿ ಬರುವುದಾದರೆ ಅದಿತಿ ಶಬ್ದದ ಪ್ರವೃತ್ತಿನಿಮಿತ್ತವೇ ಆಗಿರುವ ಅದಿತಿತ್ವವೆಂಬ ಲಿಂಗವೂ ಸಹ ಬ್ರಹ್ಮನಲ್ಲಿ ಮುಖ್ಯವಾಗಿಯೇ ಬರುತ್ತದೆ. ಈ ಅಭಿಪ್ರಾಯವನ್ನು ಗ್ರಂಥದ ಮಾತುಗಳಿಂದ ತಿಳಿದುಕೊಳ್ಳಬೇಕು.

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम्** – ॐ अत्ताचराचरग्रहणात् ॐ ।। **पूर्ववैषम्येति** ।। युक्तमादित्यश्रुतिसहचरितमपि सर्वगतत्वं विष्णौ । अन्तरित्यत्र तत्पर्यायसवितृशब्द समन्वयस्य सिद्धत्वात् । नच प्रकृतेऽदितिशब्दपर्यायशब्दसमन्वयोऽन्तरित्यत्र सिद्धः । तथापूर्ववैषम्यमित्यर्थः ।




'ಅದಿತಿಯ' ಶಬ್ದದಿಂದ ವಾಚ್ಯಳಾದವಳು ಅದಿತಿದೇವಿಯೇ ಆಗಿದ್ದಾಳೆಂದು ಪೂರ್ವಪಕ್ಷ. ಕಾರಣವೇನೆಂದರೆ ಅದಿತಿಶ್ರುತಿ ಹಾಗೂ ಅದಿತಿತ್ವವೆಂಬ ಲಿಂಗ. ಇವೆರಡೂ ಸಹ ನಿರವಕಾಶವೇ ಆಗಿವೆ. ಹಿಂದೆ ಅಂತರಧಿಕರಣದಲ್ಲಿ ಅದಿತಿಶಬ್ದದ ಪರ್ಯಾಯಶಬ್ದಗಳನ್ನು ಸಮನ್ವಯ ಮಾಡದ ಕಾರಣ ಅದಿತಿಶ್ರುತಿಯು ನಿರವಕಾಶವಾಗಲು ಒಂದು ಕಾರಣ. ಅದಿತಿಶ್ರುತಿಯ ಸಮನ್ವಯವನ್ನು ಅಂತರಧಿಕರಣದಲ್ಲಿ ಮಾಡದಿದ್ದರೂ ಅಸಾಧಾರಣವಾದ ವಿಷ್ಣುಲಿಂಗಗಳಿರುವಿಕೆಯೆಂಬ ಅಂತರಧಿಕರಣದ ನ್ಯಾಯಕ್ಕೆ ವಿಷಯವಾಗದಿರುವಿಕೆಯು ಅದಿತಿಶ್ರುತಿಯ ನಿರವಕಾಶಕ್ಕೆ ಮತ್ತೊಂದು ಕಾರಣ. ಹೀಗೆ ಶ್ರುತಿ ಹಾಗೂ ಲಿಂಗಗಳೆರಡು ನಿರವಕಾಶಗಳೆಂದು ಒಪ್ಪಿ ಪೂರ್ವಪಕ್ಷವನ್ನು ಪುಷ್ಟೀಕರಿಸಲಾಗಿದೆ. ಹಿಂದಿನ ಅಧಿಕರಣದಲ್ಲಿ ಲಿಂಗವನ್ನು ಮಾತ್ರ ನಿರವಕಾಶವೆಂದು ಒಪ್ಪಲಾಗಿತ್ತು. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕಿರುವ ವೈಷಮ್ಯವನ್ನೂ ಸಹ ಗಮನಿಸಬೇಕು.

ಅತ್ತ್ರತ್ವಾಧಿಕರಣ (೧-೨-೨)

ಆದರೆ ಟೀಕೆಯಲ್ಲಿ ಅದಿತಿಶ್ರುತಿಯನ್ನು ಸಾವಕಾಶವೆಂದು ಒಪ್ಪಿ ಲಿಂಗವನ್ನು ನಿರವಕಾಶವೆಂದು ಹೇಳಿದ್ದಾರೆ. ನಿರವಕಾಶವಾದ ಒಂದೇ ಲಿಂಗದಿಂದ ಪೂರ್ವಪಕ್ಷವನ್ನು ದೃಢಗೊಳಿಸಬಹುದು. ಏಕೆಂದರೆ ಅದಿತಿತ್ವವು ಜಾತಿರೂಪವಾದ್ದರಿಂದ ವಿಷ್ಣುವಿನಲ್ಲಿ ಬರಲು ಸಾಧ್ಯವೇ ಇಲ್ಲ. ಮತ್ತು ಲೋಕರೂಢಿಯೂ ಸಹ ಅದಿತಿದೇವಿಯಲ್ಲಿಯೇ ಇರುತ್ತದೆ. ಆದ್ದರಿಂದ ಕೇವಲ ಲಿಂಗದಿಂದ ಪೂರ್ವಪಕ್ಷ ಮಾಡಿದ್ದು ತಪ್ಪಲ್ಲ.

• • • • •

## ಜಾತಿರೂಪವಾದ ಅದಿತಿತ್ವವು ಬಲಿಷ್ಠಲಿಂಗ

### तात्पर्यचन्द्रिका

**यद्वा – अन्तरधिकरणन्यायेन रूढिबाधेन श्रुतेर्ब्रह्मपरत्वसम्भवेऽपि ''अनश्नन्'' इत्यादिश्रुत्या अनत्तुर्ब्रह्मणोऽत्तुत्वरूपादित्वलिङ्गं न सम्भवतीति टीकाभिप्रायः ।**

**नच कर्मफलात्तृत्वसाधकेनोत्तराधिकरणेन अत्रत्यानत्तृत्वशङ्का-दण्डापूपनयपराहतेति वाच्यम्, तत्रात्रसिद्धमत्तृत्वसामान्यमुपेत्य कर्मफलात्तृत्व-रूपस्तद्विशेषो नेति या शङ्का तस्य निरसिष्यमाणत्वेन, अत्रत्यपूर्वपक्षदशायां तत्रत्यसिद्धान्तानुन्मेषात् । अत एव तत्र भाष्ये विशेषाक्षेपार्थं 'सर्वात्तैकः पर उक्तः'' इत्यत्तृत्वसामान्यानुवादः ।**

ಅನುವಾದ - ಅಥವಾ ಅಂತರಧಿಕರಣದ ನ್ಯಾಯದಿಂದ ಅದಿತಿ ಶಬ್ದದ ರೂಢಿಗೆ ಬಾಧವನ್ನು ಹೇಳಿ ಬ್ರಹ್ಮಪರತ್ವವನ್ನು ಒಪ್ಪಬಹುದು. ಆದರೆ ''ಅನಶ್ನನ್ನನ್ಯಃ'' ಇತ್ಯಾದಿ ಶ್ರುತಿಯಿಂದ ಬ್ರಹ್ಮನು ಏನನ್ನೂ ತಿನ್ನಲಾರನೆಂದು ಸಿದ್ಧವಾಗಿದೆ. ಈಗ ಅತ್ತೃತ್ವವೆಂಬ ಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿದರೆ ''ಅನಶ್ನನ್ನನ್ಯಃ'' ಎಂಬ ಶ್ರುತಿಯ ವಿರೋಧ ಬರುತ್ತದೆಂಬುದು ಟೀಕೆಯ ಅಭಿಪ್ರಾಯ.

ಪ್ರಶ್ನೆ - ಮುಂದಿನ ಗುಹಾಧಿಕರಣದಲ್ಲಿ ಕರ್ಮಫಲ ಅತ್ತೃತ್ವವನ್ನು ಪರಮಾತ್ಮನಲ್ಲಿ ಸಾಧಿಸುತ್ತಾರೆ. ಅದರಿಂದಲೇ ಈ ಅಧಿಕರಣದಲ್ಲಿ ಮಾಡುತ್ತಿರುವ ಪರಮಾತ್ಮನು ಏನನ್ನೂ ತಿನ್ನುವುದಿಲ್ಲವೆಂಬ ಪೂರ್ವಪಕ್ಷವನ್ನು ನಿರಾಕರಿಸಿದಂತಾಗುತ್ತದೆ. ದಂಡವನ್ನು ತಿನ್ನುವವನು ಅಪೂಪವನ್ನು ತಿನ್ನದೇ ಇರುತ್ತಾನೆಯೇ?

ಉತ್ತರ - ಇದು ತಪ್ಪು. ಮುಂದಿನ ಗುಹಾಧಿಕರಣದಲ್ಲಿ ಈ ಅಧಿಕರಣದಲ್ಲಿ ಸಿದ್ಧವಾದ ಅತ್ತೃತ್ವ ಸಾಮಾನ್ಯವನ್ನು ಪರಮಾತ್ಮನಲ್ಲಿ ಒಪ್ಪಿ ಕರ್ಮಫಲಾತ್ತೃತ್ವವೆಂಬ ವಿಶೇಷವನ್ನು ಪರಮಾತ್ಮನಲ್ಲಿ ಒಪ್ಪಲು ಸಾಧ್ಯವಿಲ್ಲವೆಂದು ಶಂಕಿಸಲಾಗಿದೆ. ಆ ಶಂಕೆಯನ್ನು ನಿರಾಸ ಮಾಡದಿದ್ದರೆ ಮತ್ತು ಆ ಶಂಕೆಯನ್ನು

ನಿರಾಕರಿಸಿದ್ದಾರೆ. ಹೀಗಿರುವಾಗ ಈ ಅಧಿಕರಣದ ಪೂರ್ವಪಕ್ಷದ ಸಂದರ್ಭದಲ್ಲಿ ಮುಂದಿನ ಅಧಿಕರಣದ ಸಿದ್ಧಾಂತವು ಹುಟ್ಟಿರಲು ಸಾಧ್ಯವೇ ಇಲ್ಲ. ಆದ್ದರಿಂದಲೇ ಗುಹಾಧಿಕರಣದ ಪ್ರಾರಂಭದ ಭಾಷ್ಯದಲ್ಲಿ ಕರ್ಮಫಲಾತ್ತೃತ್ವವೆಂಬ ವಿಶೇಷವನ್ನು ಆಕ್ಷೇಪಿಸುವುದಕ್ಕಾಗಿ "ಸರ್ವಾತ್ತೃಕಃ ಪರ ಉಕ್ತಃ" ಎಂದು ಅತ್ತೃತ್ವಸಾಮಾನ್ಯವನ್ನು ಅನುವಾದ ಮಾಡಿದ್ದಾರೆ.

**प्रकाशः –**

पूर्वमदितित्वं गोत्वादिवज्जातिरूपमित्युपेत्य समाहितं, अधुनाऽदन-कर्तृत्वमित्युपेत्याह – **यद्वेति** ।

अत्रापि भगवल्लिङ्गमस्तीत्युपेत्याह – **अन्तरधिकरणन्यायेनेति** । पूर्वपादे प्रतिनयं लिङ्गादिभिर्नाम्नां तत्परत्वमेवोक्तं, नतु तत्र शक्तिरपीति पक्षमुपेत्योक्तं – **ब्रह्मपरत्वसम्भवेपीति** ।

ಈ ಹಿಂದೆ ಅದಿತಿತ್ವವನ್ನು ಗೋತ್ವಾದಿಗಳಂತೆ ಜಾತಿರೂಪವೆಂದು ಅಂಗೀಕರಿಸಿ ಸಮಾಧಾನವನ್ನು ಹೇಳಿದರು. ಈಗ ಅದನಕರ್ತೃತ್ವವೆಂದು ಪ್ರವೃತ್ತರೂಪವಾದದ್ದೆಂದು ಅಂಗೀಕರಿಸಿ ಮತ್ತೊಂದು ಬಗೆಯಲ್ಲಿ 'ಯದ್ವಾ' ಇತ್ಯಾದಿ ವಾಕ್ಯದಿಂದ ಸಮಾಧಾನವನ್ನು ಹೇಳುತ್ತಿದ್ದಾರೆ.

ಈ ಪಕ್ಷದಲ್ಲಿ ಅದಿತಿಶ್ರುತಿಯಲ್ಲಿ ಭಗವಲ್ಲಿಂಗವು ಇದೆಯೆಂದು ಒಪ್ಪಿ ಅಂತರಧಿಕರಣ ನ್ಯಾಯಕ್ಕೆ ಇದು ವಿಷಯವಾಗಿದೆಯೆಂದು 'ಅಂತರಧಿಕರಣ ನ್ಯಾಯೇನ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಹಿಂದಿನ ಪಾದದಲ್ಲಿ ಪ್ರತಿಯೊಂದು ಅಧಿಕರಣದಲ್ಲಿಯೂ ಲಿಂಗಗಳ ಬಲದಿಂದ ನಾಮಾತ್ಮಕಶಬ್ದಗಳಿಗೆ ವಿಷ್ಣುಪರತ್ವವನ್ನೇ ಹೇಳಲಾಗಿದೆ ಹೊರತು ಆಯಾಶಬ್ದಗಳ ಶಕ್ತಿರುಕ್ತಿಯನ್ನು ಹೇಳಿರುವುದಿಲ್ಲವೆಂಬ ಪಕ್ಷವನ್ನು ಅಂಗೀಕರಿಸಿ 'ಬ್ರಹ್ಮಪರತ್ವಸಂಭವೇಪಿ' ಎಂದು ಹೇಳಿದ್ದಾರೆ. ಇಲ್ಲದಿದ್ದರೆ ಮುಖ್ಯಪರತ್ವವೆಂದು ಹೇಳಬೇಕಿತ್ತು.

**प्रकाशः – अनश्नन्नित्यादीति** । यद्यपीयं श्रुतिः कर्मफलाशनं नेत्याह, पिप्पलमिति सन्निधानात्, अन्यथोत्तराधिकरणपूर्वपक्षटीकादावेतदुक्तिर्न स्यात् । तथाऽपि "न तदश्नाति किञ्चन" इत्यादौ तात्पर्यम् । अत एवादितिपदोक्तिः । एतच्छ्रुत्युक्तिस्तूत्तराधिकरणवैषम्योक्त्यर्थं, शङ्कोत्थापनाय वा, सामान्यनिषेधपरत्वमपि अभिप्रेत्य वेति ।

ಪ್ರಶ್ನೆ - 'ಅನಶ್ನನ್ನನ್ಯಃ' ಎಂಬ ಶ್ರುತಿಯು ಕರ್ಮಫಲಭೋಕ್ತೃತ್ವವನ್ನು ನಿರಾಕರಿಸುತ್ತಿದೆ. ಏಕೆಂದರೆ 'ಪಿಪ್ಪಲಂ' ಎಂಬ ಪದವು ಹತ್ತಿರವಿರುವುದರಿಂದ, ಪಿಪ್ಪಲಪದಕ್ಕೆ ಕರ್ಮಫಲವೆಂದರ್ಥ. ಹೀಗೆ ಹೇಳದಿದ್ದರೆ ಮುಂದಿನ ಗುಹಾಧಿಕರಣದ ಪೂರ್ವಪಕ್ಷದ ಟೀಕೆಯಲ್ಲಿ ಕರ್ಮಫಲಭೋಕ್ತೃತ್ವವನ್ನು ಹೇಳಿದ್ದು ತಪ್ಪಾದೀತು.

ಆದ್ದರಿಂದ ಪ್ರಕೃತ ಸಕಲ ಪದಾರ್ಥಗಳ ಅತ್ತೃತ್ವವು ಪರಮಾತ್ಮನಲ್ಲಿಲ್ಲ ಎಂಬುದಕ್ಕೆ ಇದು ಆಧಾರವಾಗುವುದಿಲ್ಲವಲ್ಲವೇ?

ಉತ್ತರ - ಹೌದು, 'ಅನಶ್ನನ್ನನ್ಯಃ' ಎಂಬ ಶ್ರುತಿಯು ಕರ್ಮಫಲಭೋಕ್ತೃತ್ವವನ್ನಷ್ಟೇ ನಿರಾಕರಿಸುತ್ತಿದೆ. ಆದರೆ ''ನ ತದಶ್ನಾತಿ ಕಿಂಚನ'' ಎಂಬ ಶ್ರುತಿಯನ್ನು ಇಲ್ಲಿ ವಿವಕ್ಷಿಸಬೇಕು. ಆದ್ದರಿಂದಲೇ ಗ್ರಂಥದಲ್ಲಿ ಆದಿಪದವನ್ನು ಹೇಳಿದ್ದಾರೆ. ಹಾಗಾದರೆ 'ಅನಶ್ನನ್ನನ್ಯಃ' ಎಂಬ ಶ್ರುತಿಯನ್ನೇಕೆ ಉಲ್ಲೇಖಿಸಿದರು ಎಂದರೆ ಮುಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ವೈಷಮ್ಯವನ್ನು ತೋರಿಸಬೇಕಾಗಿದೆ. ಅಂದರೆ ಈ ಅಧಿಕರಣದಲ್ಲಿ ಸಕಲ ಪದಾರ್ಥಗಳ ಅತ್ತೃತ್ವವು ಭಗವಂತನಿಗೆ ಇಲ್ಲವೆಂದು ಪೂರ್ವಪಕ್ಷ ಮಾಡಿದರೆ ಮುಂದಿನ ಅಧಿಕರಣದಲ್ಲಿ ಕರ್ಮಫಲಭೋಕ್ತೃತ್ವವಿಲ್ಲವೆಂಬ ಪೂರ್ವಪಕ್ಷವನ್ನು ಮಾಡಲಾಗುತ್ತದೆ.

ಅಥವಾ 'ಅನಶ್ನನ್ನನ್ಯಃ' ಎಂಬ ಶ್ರುತಿಗೆ ಸಕಲಪದಾರ್ಥಗಳ ಅತ್ತೃತ್ವವನ್ನೇ ನಿಷೇಧಿಸುತ್ತಿದೆ. ಏಕೆಂದರೆ ಕರ್ಮಫಲಭೋಕ್ತೃತ್ವವೆಂಬ ವಿಶೇಷವನ್ನು ತಿನ್ನಲು ಸಮರ್ಥನಾಗದವನು ಸಕಲ ಪದಾರ್ಥಗಳನ್ನು ತಿನ್ನಲು ಹೇಗೆ ಸಮರ್ಥನಾಗುತ್ತಾನೆ. ಈ ವಿವಕ್ಷೆಯಿಂದಲೂ 'ಅನಶ್ನನ್ನನ್ಯಃ' ಎಂಬ ಶ್ರುತಿಯನ್ನು ಉಲ್ಲೇಖಿಸಿದ್ದು ತಪ್ಪಾಗುವುದಿಲ್ಲ.

**प्रकाशः – दण्डापूपेति ।** यथा दण्डं भक्षयतोऽपूपभक्षणं न दुश्शकं, तद्वददन-विशेषसाधनेऽदनसामान्यस्यानायासेन सिद्धत्वादित्यर्थः ।

एतत्सिद्धान्तोपजीवनेनैव तस्य प्रवृत्तेरित्याह – **तत्रेति ।**

अन्यथा भावार्थाधिकरणेन स्वर्गकामाधिकरणस्य वैयर्थ्यापत्तेः, स्वर्गकामनय-सिद्धापूर्वोपजीवनेनैव तस्य प्रवृत्तेरिति भावः ।

ಕರ್ಮಫಲಭೋಕ್ತೃತ್ವವನ್ನು ತಿನ್ನುವ ಭಗವಂತನಿಗೆ ಜಗತ್ತನ್ನು ತಿನ್ನುವುದು ಕಷ್ಟವಲ್ಲ. ಉದಾಹರಣೆ - ಕೋಲನ್ನೇ ತಿನ್ನುವ ವ್ಯಕ್ತಿಗೆ ಅಪೂಪವನ್ನು ತಿನ್ನುವುದು ಹೇಗೆ ಕಷ್ಟವಲ್ಲವೋ, ಅದರಂತೆ ಕರ್ಮಫಲಭೋಕ್ತೃತ್ವವನ್ನು ತಿನ್ನುತ್ತಾನೆಂದು ಹೇಳಿದರೆ ಸಕಲಜಗತ್ತನ್ನೂ ಸಹ ತಿನ್ನುತ್ತಾನೆಂದು ಸಿದ್ಧವಾಯಿತು.

ಈ ಅಧಿಕರಣದ ಸಿದ್ಧಾಂತವನ್ನು ಅವಲಂಬಿಸಿ ಮುಂದಿನ ಗುಹಾಧಿಕರಣವು ಪ್ರವೃತ್ತವಾಗಿದೆಯೆಂದು 'ತತ್ರ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

ಸ್ವರ್ಗಕಾಮಾಧಿಕರಣದಲ್ಲಿ ಸಿದ್ಧವಾದ ಅಪೂರ್ವವನ್ನು ಅಪೇಕ್ಷಿಸಿ ಭಾವಾರ್ಥಾಧಿಕರಣವು ಹೊರಟಿದೆ. ಒಂದು ವೇಳೆ ಮುಂದಿನ ಅಧಿಕರಣದ ಸಿದ್ಧಾಂತದಿಂದ ಹಿಂದಿನ ಅಧಿಕರಣವು ಗತಾರ್ಥವೆಂದು ಹೇಳಿದರೆ ಭಾವಾರ್ಥಾಧಿಕರಣದಿಂದ ಸ್ವರ್ಗಕಾಮಾಧಿಕರಣಕ್ಕೆ ವೈಯರ್ಥ್ಯ ಬರಬೇಕಾಗುತ್ತದೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದ್ದಾರೆ. ಆದ್ದರಿಂದ ಪ್ರಕೃತ ಗುಹಾಧಿಕರಣದ ಸಿದ್ಧಾಂತದಿಂದ ಈ ಅಧಿಕರಣವು ಗತಾರ್ಥವೆಂದು ಹೇಳಬಾರದು.

**गुरुराजीयम् –** नन्वन्तरधिकरणन्यायेन श्रुतेर्मुख्यत्वाल्लिङ्गस्यापि ब्रह्मणि मुख्यत्वमेवेत्यभ्युपगन्तव्यम् । तथाच श्रुतेर्ब्रह्मण्यमुख्यत्वेन सम्भवेऽपि

लिङ्गस्यामुख्यत्वेनाप्यसम्भव इति कथं टीकाभिप्राय इत्यरुचेराह – यद्वेति ।। अभ्यधिकाशङ्कापक्षानुसारेण वाह – यद्वेति ।।

**दण्डापूपनयेति** ।। वेणुदण्डापाश्रितमध्यापूपपातनायन्दण्डपातनन्यायेनेत्यर्थः। तथाच वेण्वग्रापाश्रितापूपपातनार्थं न पृथक्प्रयासः । वंशपातनेनैव तत्सम्भवादिति भावः । एवं सामान्यस्यानुस्यूतत्वेन विशेषसिद्ध्या सामान्यस्यापि सिद्धेः । अन्यथा ऋग्वेदित्वे सिद्धेऽपि ब्राह्मण्याभावशङ्का स्यादिति भावः ।। **तत्रेति** ।। दण्डस्यापूपार्थमेव हन्तव्यत्वाकर्मफलात्तृत्वस्यात्तृत्वसामान्यसिद्ध्यर्थमेव साधनात् । सर्वात्तृत्वकर्मफल-भोक्तृत्वयोः प्रत्येकं स्वप्रधान्तवेनासिषाधयिषितत्वात् सामान्यविशेषभावस्य च पौर्वापर्यमात्रनिमित्तत्वान्नान्यतरेणान्यतरगतार्थतेति भावः ।




ಶ್ರುತಿ ಹಾಗೂ ಲಿಂಗಗಳೆರಡೂ ನಿರವಕಾಶವೆಂದು ಗ್ರಂಥಕಾರರು ಸಮರ್ಥಿಸಿದರು. ಆದರೆ ಟೀಕೆಯಲ್ಲಿ ಲಿಂಗವನ್ನಷ್ಟೇ ನಿರವಕಾಶವೆಂದು ಹೇಳಿದ್ದಾರೆ. ಈ ಟೀಕೆಯ ಅಭಿಪ್ರಾಯವನ್ನು ಹಿಂದೆ ಒಂದು ಪ್ರಕಾರದಲ್ಲಿ ಸ್ಪಷ್ಟಪಡಿಸಿದರು. ಈಗ ಮತ್ತೊಂದು ಪ್ರಕಾರದಲ್ಲಿ ವರ್ಣಿಸುತ್ತಿದ್ದಾರೆ. ಅದಿತಿತ್ವ ಎಂಬ ಲಿಂಗಕ್ಕೆ ಪ್ರವೃತ್ತಿನಿಮಿತ್ತವೆಂಬರ್ಥವನ್ನು ಪರಿಗಣಿಸಿದರೆ ತೀರದಲ್ಲಿ ಗಂಗಾಶಬ್ದವು ಬಂದರೂ ಸಹ ಗಂಗಾಪದಪ್ರವೃತ್ತಿನಿಮಿತ್ತವು ಬರುವುದಿಲ್ಲವೆಂದು ಹೇಗೆ ನಿರ್ಣಯವಾಗಿದೆಯೋ ಅದರಂತೆ ಅದಿತಿಶ್ರುತಿಯು ಪರಮಾತ್ಮನಲ್ಲಿ ಬಂದರೂ ಅದಿತಿತ್ವವೆಂಬ ಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಬರುವುದಿಲ್ಲವೆಂದು ಹಿಂದೆ ಸಮರ್ಥಿಸಿದರು.

ಈಗ ಅದಿತಿತ್ವವೆಂಬ ಲಿಂಗವನ್ನು ಜಾತಿರೂಪವೆಂದು ಪರಿಗಣಿಸಿ ಭಗವಂತನಲ್ಲಿ ಬರಲು ಸಾಧ್ಯವಿಲ್ಲವೆಂದು ಸಮರ್ಥಿಸುತ್ತಿದ್ದಾರೆ. ಈ ಪಕ್ಷದಲ್ಲಿ ಅಂತರಧಿಕರಣನ್ಯಾಯಕ್ಕೆ ಅದಿತಿಶ್ರುತಿಯು ವಿಷಯವಾಗಿದೆಯೆಂದು ಒಪ್ಪಲಾಗಿದೆ. ಅದಿತಿಶ್ರುತಿಯು ಪರಮಾತ್ಮನಲ್ಲಿ ಬರುವ ಮಾತ್ರದಿಂದ ಅದಿತಿತ್ವಲಿಂಗವು ಬರಬೇಕಾಗಿಲ್ಲ. ಏಕೆಂದರೆ 'ಅನಶ್ನನ್ನನ್ಯಃ' ಎಂಬ ಶ್ರುತಿಯು ಭಗವಂತನು ಏನನ್ನೂ ತಿನ್ನಲಾರನೆಂದು ಸ್ಪಷ್ಟವಾಗಿ ಹೇಳುತ್ತಿದೆ.

ಮುಂದಿನ ಅಧಿಕರಣದಲ್ಲಿ ಕರ್ಮಫಲಗಳನ್ನು ಭಗವಂತನು ತಿನ್ನುತ್ತಾನೆಂದು ಸಮರ್ಥಿಸುತ್ತಾರೆ. ಆದರಿಂದಲೇ ಈ ಅಧಿಕರಣದಲ್ಲಿ ಹೇಳುತ್ತಿರುವ ಸಕಲಪದಾರ್ಥಗಳನ್ನು ತಿನ್ನುತ್ತಾನೆಂದು ನಿರ್ಣಯವಾಗುತ್ತದೆ. ಕೋಲನ್ನೇ ತಿನ್ನುವವನು ಅಪೂಪವನ್ನು ತಿನ್ನಲು ಅಸಮರ್ಥನಾಗುತ್ತಾನೆಯೇ ? ಎಂದು ಪ್ರಶ್ನಿಸಬಾರದು. ಮುಂದಿನ ಅಧಿಕರಣವು ಈ ಅಧಿಕರಣದ ಸಿದ್ಧಾಂತವನ್ನು ಅಪೇಕ್ಷಿಸಿ ಹೊರಟಿರುವುದರಿಂದ ಮುಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ವೈಯರ್ಥ್ಯವನ್ನು ಹೇಳಬಾರದು.



## ಅತ್ರತ್ವಾಧಿಕರಣ (೧-೨-೨)

## ಶ್ರುತಿಲಿಂಗಗಳ ನಿರವಕಾಶತ್ವವು ನ್ಯಾಯವಿವರಣಕ್ಕೆ ಸಮ್ಮತ

**तात्पर्यचन्द्रिका**

**अथवा – वक्ष्यमाणरीत्या अत्र विष्णुलिङ्गाभावेन अन्तरधिकरणन्यायविषयतया 'अदितेः' इत्यत्रेव 'अदितित्वं' इत्यत्रापि अदितिप्रातिपदिकस्य प्रसिद्धादितिपरत्वात्ततः परेण त्वप्रत्ययेनापि तद्गतधर्म एव वक्तव्यः ।**

**एवञ्च "तद्ध्नो दधित्वं" इत्यादाविव प्रसिद्धादित्युद्देशात् प्रसिद्धार्थ एव शब्दान्वाख्यानस्याऽऽकाङ्क्षितत्वाच्च श्रुतिलिङ्गञ्च निरवकाशमिति न्यायविवरणाभिप्रायः । अत एव न्यायविवरणस्थचशब्दस्वारस्यम् ।**

**टीकायां श्रुतेस्सावकाशत्वोक्तिस्तु सजातीयदेवतावाचिशब्दसमन्वयस्य सिद्धत्वमभिप्रेत्येति द्रष्टव्यम् ।**

ಅನುವಾದ - ಮುಂದೆ ಹೇಳುವ ಪ್ರಕಾರ 'ತದದಿತೇಃ' ಎಂಬ ಶ್ರುತಿಯಲ್ಲಿ ನಿರವಕಾಶವಾದ ವಿಷ್ಣುಲಿಂಗವಿರುವುದಿಲ್ಲ. ಆದ್ದರಿಂದ ಅಂತರಧಿಕರಣದ ನ್ಯಾಯಕ್ಕೆ ಅದಿತಿಶ್ರುತಿಯು ವಿಷಯವಾಗುವುದಿಲ್ಲ. ಆದ್ದರಿಂದಲೇ ಅದಿತಿ ಶಬ್ದವು ಅದಿತಿದೇವಿಯನ್ನೇ ಪ್ರತಿಪಾದಿಸುತ್ತದೆ. ಹೀಗೆ ಅದಿತಿಶಬ್ದವು ಅದಿತಿದೇವಿಯನ್ನು ಪ್ರತಿಪಾದಿಸುವಂತೆ 'ಅದಿತಿತ್ವಂ' ಎಂಬಲ್ಲಿ 'ತ್ವ' ಪ್ರತ್ಯಯದ ಹಿಂದಿರುವ ಅದಿತಿಪ್ರಾತಿಪದಿಕವೂ ಸಹ ಪ್ರಸಿದ್ಧಳಾದ ಅದಿತಿದೇವಿಯನ್ನೇ ಪ್ರತಿಪಾದಿಸುತ್ತದೆ. ಆದ್ದರಿಂದ ಅದಿತಿಪ್ರಾತಿಪದಿಕದ ಮುಂದಿರುವ 'ತ್ವ' ಪ್ರತ್ಯಯವೂ ಸಹ ಅದಿತಿಯದೇವಿಯಲ್ಲಿರುವ ಧರ್ಮವನ್ನೇ ಹೇಳಬೇಕು.

'ತದ್ಧ್ನೋ ದಧಿತ್ವಂ' ಎಂಬಲ್ಲಿ ಯಾವರೀತಿಯಾಗಿ ಪ್ರಸಿದ್ಧವಾದ ದಧಿಯನ್ನೇ ಉದ್ದೇಶವನ್ನಾಗಿ ಹೇಳಲಾಗುತ್ತದೋ ಅದರಂತೆ ಅದಿತಿಯನ್ನು ಉದ್ದೇಶಿಸಿ ಪ್ರಸಿದ್ಧಾರ್ಥದಲ್ಲೇ ಶಬ್ದದ ಅನ್ವಾಖ್ಯಾನವು ಆಕಾಂಕ್ಷಿತವಾಗುತ್ತದೆ. ಆದ್ದರಿಂದ ಶ್ರುತಿ ಹಾಗೂ ಲಿಂಗಗಳೆರಡು ನಿರವಕಾಶಗಳಾಗಿವೆ ಎಂಬುದು ನ್ಯಾಯವಿವರಣದ ಅಭಿಪ್ರಾಯ. ಹೀಗೆ ಶ್ರುತಿ ಹಾಗೂ ಲಿಂಗಗಳೆರಡೂ ನಿರವಕಾಶಗಳಾದ್ದರಿಂದಲೇ ನ್ಯಾಯವಿವರಣದಲ್ಲಿರುವ 'ಚ' ಶಬ್ದವು ಸ್ವರಸಾರ್ಥವುಳ್ಳದ್ದಾಗುತ್ತದೆ.

ಹಾಗಾದರೆ ಟೀಕೆಯಲ್ಲಿ ಶ್ರುತಿಗೆ ಸಾವಕಾಶತ್ವವನ್ನು ಏಕೆ ಹೇಳಿದರು ಎಂದರೆ ಅದಿತಿಶಬ್ದಕ್ಕೆ ಸಜಾತೀಯವಾದ ದೇವತಾವಾಚಕವಾದ ಇಂದ್ರಾದಿ ಶಬ್ದಗಳು ಅಂತರಧಿಕರಣದ ನ್ಯಾಯದಿಂದ ಸಿದ್ಧವಾಗಿವೆ ಎಂಬ ಅಭಿಪ್ರಾಯದಿಂದಷ್ಟೇ ಟೀಕೆಯಲ್ಲಿ ಅದಿತಿಶಬ್ದಕ್ಕೆ ಸಾವಕಾಶತ್ವವನ್ನು ಹೇಳಿದ್ದಾರೆಂದು ತಿಳಿಯಬೇಕು.

**प्रकाशः –**

एवं टीकोक्तं श्रुतेः सावकाशत्वेऽपि लिङ्गस्य निरवकशत्वं द्वेधोपपाद्य, अधुना प्रागुक्तन्यायविवरणस्य तात्पर्यान्तरमाह – **अथ वेति** ।

**वक्ष्यमाणेति** । ''सर्वशब्दस्तु योग्यसर्वपरः'' इति वक्ष्यमाणरीत्येत्यर्थः । **अदितेरित्यत्रेवेति** । श्रुतिबाधकलिङ्गाभावेनान्तर्नयन्यायाविषयत्वेन श्रुतेर्विष्णो निरवकाशत्वाद्यथा प्रसिद्धादितिदेवतापरत्वं तद्वदित्यर्थः । तावता वाक्यस्य कोऽर्थ इत्यत आह – **एवञ्चेति** । श्रुतेः प्रसिद्धार्थत्वे सतीत्यर्थः ।

ವಿವರಣೆ - ಇಲ್ಲಿಯ ತನಕ ಟೀಕೆಯಲ್ಲಿ ಹೇಳಲ್ಪಟ್ಟ ಶ್ರುತಿಗೆ ಸಾವಕಾಶತ್ವವನ್ನು ಲಿಂಗಕ್ಕೆ ನಿರವಕಾಶತ್ವವನ್ನು ಎರಡು ಬಗೆಯಲ್ಲಿ ಉಪಪಾದಿಸಿದರು. ಪ್ರಕೃತ ಹಿಂದೆ ಉಲ್ಲೇಖಿಸಿದ ನ್ಯಾಯವಿವರಣದ ಮಾತಿಗೆ ಮತ್ತೊಂದು ಬಗೆಯಲ್ಲಿ 'ಅಥವಾ' ಇತ್ಯಾದಿ ವ್ಯಾಕದಿಂದ ವ್ಯಾಖ್ಯಾನಿಸುತ್ತಿದ್ದಾರೆ.

'ವಕ್ಷ್ಯಮಾಣರೀತ್ಯಾ' ಎಂದರೆ ಸರ್ವಶಬ್ದಕ್ಕೆ ತನಗೆ ತಿನ್ನಲು ಯೋಗ್ಯವಾದ ಎಲ್ಲವನ್ನು ತಿನ್ನುತ್ತಾಳೆಂಬುದನ್ನು ಮುಂದೆ ಹೇಳುತ್ತಾರೆ. 'ಅದಿತಿರಿತ್ಯತ್ರೇವ' ಎಂಬುದಕ್ಕೆ ಹೀಗರ್ಥ - ಶ್ರುತಿಗೆ ಬಾಧಕವಾದ ಲಿಂಗವಿಲ್ಲದ ಕಾರಣ ಅಂತರಧಿಕರಣದ ನ್ಯಾಯಕ್ಕೆ ಅದಿತಿಶ್ರುತಿಯು ವಿಷಯವಾಗುವುದಿಲ್ಲ. ಆದ್ದರಿಂದ ಅದಿತಿಶ್ರುತಿಯನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದಂತಾಗಲಿಲ್ಲ, ಹೊರತಾಗಿ ಪ್ರಸಿದ್ಧಳಾದ ಅದಿತಿದೇವಿಯನ್ನೇ ಅದಿತಿಶ್ರುತಿಯು ಹೇಗೆ ಪ್ರತಿಪಾದಿಸುತ್ತದೋ ಅದರಂತೆ ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ವಾಕ್ಯಕ್ಕೆ ಯಾವ ಅರ್ಥವನ್ನು ಹೇಳಿದಂತಾಯಿತು? ಎಂಬ ಪ್ರಶ್ನೆಗೆ 'ಏವಂಚ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಶ್ರುತಿಗೆ ಪ್ರಸಿದ್ಧಾರ್ಥವನ್ನು ಹೇಳಿದ್ದಾರೆ ಎಂದರ್ಥ.

**प्रकाशः – तद्दध्न इति** । ''एतदस्मै दधि कुरुतेत्यब्रवीत् । तदस्मै दध्यचकुर्वन् तदेनमधिनोत्तद्दध्नो दधित्वम्'' इति पूर्ववाक्ये प्रकृतस्य प्रसिद्धस्यैव दध्नः 'तदेनमधिनोत्' धिनु पुष्टौ' अपुष्णात्, 'धिवि प्रीणने' अप्रीणाद्वा । तत्पोषकत्वाद्येव प्रसिद्धदध्नो दधिपदवाच्यस्य दधित्वं दधिपदप्रवृत्तिनिमित्तमिति प्रसिद्धस्यैव दधिपदेनोद्देशात् तद्वाक्यं यथा तत्र तच्छब्दान्वाख्यानपरं, तथेदमपि देवमातर्यदितौ अदितिशब्दप्रवृत्तिनिमित्तोक्तिपरमित्यर्थः ।

''ಏತದಸ್ಮೈ ದಧಿ ಕುರುತೇತ್ಯಬ್ರವೀತ್ । ತದಸ್ಮೈ ದಧ್ಯಕುರ್ವನ್ ತದೇನಮಧಿನೋತ್ತದ್ದಧ್ನೋ ದಧಿತ್ವಮ್'' ಎಂಬುದಾಗಿ ಹಿಂದಿನ ವಾಕ್ಯದಲ್ಲಿ ದಧಿಯು ಪ್ರಕೃತವಾಗಿದೆ. ಇಲ್ಲಿರುವ ದಧಿ ಶಬ್ದದಿಂದ ಪ್ರಸಿದ್ಧವಾದ ದಧಿಯನ್ನೇ ವಿವಕ್ಷಿಸಬೇಕು. ಏಕೆಂದರೆ 'ತದೇನಮಧಿನೋತ್' ಮತ್ತು 'ಧಿನು ಪುಷ್ಟೌ' ಎಂಬಂತೆ ದಧಿಯು ಪುಷ್ಟೀಕರಿಸುತ್ತದೆ. 'ಧಿವಿ ಪ್ರೀಣನೇ' ಎಂದು ವಿವಕ್ಷಿಸಿದಾಗ ದಧಿಯು ಸಂತೋಷ ಪಡಿಸುತ್ತದೆ. ಆದ್ದರಿಂದ ದಧಿ ಪದದಿಂದ ಪ್ರಸಿದ್ಧವಾದ ದಧಿಯೇ ವಾಚ್ಯವಾಗಿದೆ. ಆ ದಧಿಯಲ್ಲಿರುವ ದಧಿತ್ವವು

ದಧಿಪದದ ಪ್ರವೃತ್ತಿನಿಮಿತ್ತವಾಗಿದೆ. ಇಲ್ಲಿ ಯಾವರೀತಿಯಾಗಿ ಪ್ರಸಿದ್ಧವಾದ ದಧಿ ಪದದಿಂದ ಈ ವಾಕ್ಯವು ದಧಿಯನ್ನು ಉದ್ದೇಶಿಸಿರುವುದರಿಂದ ದಧಿಶಬ್ದದ ಅನ್ವಾಖ್ಯಾನಪರವಾಗಿದೆಯೋ ಅದರಂತೆ ಪ್ರಕೃತದಲ್ಲಿಯೂ ದೇವಮಾತೆಯಾದ ಅದಿತಿದೇವಿಯಲ್ಲಿ ಅದಿತಿಶಬ್ದದ ಪ್ರವೃತ್ತಿನಿಮಿತ್ತವನ್ನು ಹೇಳಬೇಕು.

**प्रकाशः** – एतेन – ''अदितेरदितित्वं'' इति हि श्रूयते । त्वप्रत्ययश्च जातेर्वाचकः, यथा पृथिवीत्वं गोत्वमित्यादौ । तदसम्भवे स्वरूपस्यैव, यथाऽऽकाशत्वं चन्द्रत्वं इत्यादौ । तस्माददितित्वं न जातिः, व्यक्तेरभेदात् । ततोऽदितित्वं अदितेस्स्वरूपमेव । न चादितिस्वरूपमीश्वरस्य सम्भवति, अत्यन्तभिन्नत्वात् । न चादितिशब्दो भगवत्पर इत्यनुपपत्त्यभावः, अदितित्वेनादितिशब्दस्य तत्र विधित्सितत्वेनानुवादानुपपत्तेः । अन्यथा अन्योन्याश्रयप्रसङ्गादिति 'पूर्वपक्षी मन्यते' इति न्यायविवरणटीका विवृता ।

टीकाविरोधं निराह – **टीकायामिति** । **सजातीयेति** - अत एव न्यायविवरणटीकायां ''नच श्रुतिरिन्द्रादिश्रुतिरिव विष्णौ सावकाशा'' इत्येवोक्तमिति भावः ।

ಹೀಗೆ ಹೇಳಿದ್ದರಿಂದ ನ್ಯಾಯವಿವರಣಕ್ಕೆ ಹೀಗೆ ವ್ಯಾಖ್ಯಾನಿಸಿದಂತಾಯಿತು - 'ಅದಿತೇರದಿತಿತ್ವಂ' ಎಂದು ಶ್ರುತಿಯಲ್ಲಿ ಕೇಳಿಸುತ್ತಿದೆ. ಇಲ್ಲಿರುವ ತ್ವಪ್ರತ್ಯಯವು ಜಾತಿವಾಚಕವಾಗಿದೆ. ಪೃಥಿವೀತ್ವಂ, ಗೋತ್ವಂ ಎಂಬಲ್ಲಿರುವ ಪ್ರತ್ಯಯವು ಜಾತಿವಾಚಕವಾದಂತೆ. ಒಂದು ವೇಳೆ 'ತ್ವ' ಪ್ರತ್ಯಯವು ಜಾತಿಯನ್ನು ಹೇಳಲು ಸಾಧ್ಯವಿಲ್ಲವೆಂದರೆ ಸ್ವರೂಪವನ್ನಷ್ಟೇ ಹೇಳುತ್ತದೆ. ಯಾವ ರೀತಿಯಾಗಿ ಆಕಾಶತ್ವಂ, ಚಂದ್ರತ್ವಂ ಇತ್ಯಾದಿ ಸ್ಥಳಗಳಲ್ಲಿ 'ತ್ವ' ಪ್ರತ್ಯಯವು ಆಕಾಶಸ್ವರೂಪ, ಚಂದ್ರಸ್ವರೂಪ ಎಂದಷ್ಟೇ ಅರ್ಥವನ್ನು ಹೇಗೆ ಹೇಳುತ್ತದೋ ಅದರಂತೆ ಅದಿತಿತ್ವ ಎಂಬಲ್ಲಿರುವ 'ತ್ವ' ಪ್ರತ್ಯಯವೂ ಸಹ ಜಾತಿಯನ್ನು ಹೇಳದೆ ಸ್ವರೂಪವನ್ನು ಹೇಳುತ್ತದೆ. ಏಕೆಂದರೆ ವ್ಯಕ್ತೇರಭೇದವು ಜಾತಿಬಾಧಕವಾಗಿದೆ. ಒಂದೇ ವ್ಯಕ್ತಿಯಲ್ಲಿ ಜಾತಿ ಇರಲು ಸಾಧ್ಯವಿಲ್ಲವೆಂದರ್ಥ. ಇಂತಹ ಅದಿತಿಸ್ವರೂಪವು ಈಶ್ವರನಾಗಲು ಸಾಧ್ಯವಿಲ್ಲ. ಈಶ್ವರನಿಗಿಂತ ಅದಿತಿದೇವಿಯು ಅತ್ಯಂತ ಭಿನ್ನಳಾಗಿದ್ದಾಳೆ. ಇನ್ನು ಅದಿತಿಶಬ್ದವು ಭಗವತ್ಪರವೆಂದಾಗ ಯಾವುದೇ ಅನುಪಪತ್ತಿ ಇಲ್ಲವೆಂದೂ ಸಹ ಹೇಳಬಾರದು. ಏಕೆಂದರೆ ಅದಿತಿಶಬ್ದವನ್ನು ಅನುವಾದ ಮಾಡಿ ಭಗವತ್ಪರತ್ವವೆಂದು ಸಾಧಿಸಬೇಕಾಗುತ್ತದೆ. ಆದರೆ ಅದಿತಿಶಬ್ದವು ಈಗ ತಾನೇ ಅದಿತಿತ್ವ ಧರ್ಮವನ್ನು ವಿಧಾನ ಮಾಡುತ್ತಿರುವುದರಿಂದ ಅನುವಾದವೆಂದು ಹೇಳಬಾರದು. ಪೂರ್ವದಲ್ಲಿ ವಿಧಾನ ಮಾಡಿದ್ದರೆ ಅದನ್ನು ಅನುವಾದ ಮಾಡಬಹುದಿತ್ತು. ಒಂದು ವೇಳೆ ವಿಧಾನ ಮಾಡಲು ಇಚ್ಛಿಸಿದ್ದೂ ಸಹ ಅನುವಾದಕ್ಕೆ ವಿಷಯವಾಗುವುದಾದರೆ ಅನ್ಯೋನ್ಯಾಶ್ರಯದೋಷವೂ ಬರುತ್ತದೆ. ಹೀಗೆ ಪೂರ್ವಪಕ್ಷಿಯು ತಿಳಿಯುತ್ತಾನೆ. ಇತ್ಯಾದಿಯಾಗಿ ನ್ಯಾಯವಿವರಣಟೀಕೆಯಲ್ಲಿ ಹೇಳಲಾಗಿದೆ. ಇದನ್ನು ಈಗ ವಿವರಿಸಿದಂತಾಯಿತು.

ತತ್ತ್ವಪ್ರಕಾಶಿಕೆಯ ವಿರೋಧವನ್ನು 'ಟೀಕಾಯಾಂ' ಎಂಬುದರಿಂದ ನಿರಾಕರಿಸುತ್ತಿದ್ದಾರೆ. ಆದ್ದರಿಂದ ಗ್ರಂಥದಲ್ಲಿ 'ಸಜಾತೀಯ' ಎಂಬ ಪದವಿದೆ. ಆದ್ದರಿಂದಲೇ ನ್ಯಾಯವಿವರಣೆಯ ಟೀಕೆಯಲ್ಲಿ ''ನಚ

ಶ್ರುತಿರಿಂದ್ರಾದಿಶ್ರುತಿರಿವ ವಿಷ್ಣೌ ಸಾವಕಾಶಾ'' ಅದಿತಿಶ್ರುತಿಯು ಇಂದ್ರಾದಿಶ್ರುತಿಗಳಂತೆ ವಿಷ್ಣುವಿನಲ್ಲಿ ಸಾವಕಾಶವಾಗಿಲ್ಲ ಎಂದು ಹೇಳಿದ್ದನ್ನು ಸ್ಮರಿಸಿಕೊಳ್ಳಬೇಕು.

**गुरुराजीयम् –** ननु चान्तरधिकरणन्यायो निरवकाशलिङ्गेन सावकाशश्रुत्यादि बाधः । तथाच तत्तच्छब्दप्रवृत्तिनिमित्तस्य भगवद्गतत्वात् सर्वेषामपि शब्दानां भगवति मुख्यत्वमित्यप्यन्तरधिकरणन्यायः । तत्र पूर्वाधिकरण इव नात्र निरवकाशब्रह्मलिङ्गमस्ति । येनादितिश्रुतेर्भगवति मुख्यत्वं स्यात् । नापि तच्छब्दप्रवृत्तिनिमित्तस्य भगवद्गतत्वेन भगवति तच्छब्दस्य मुख्यत्वम् । अनश्नन्न्य इति च श्रुत्याऽनत्तृत्वेन प्रमिते ब्रह्मण्यदितिशब्दप्रवृत्तिनिमित्तस्य सर्वात्तृत्वस्याभावात् । तथाच कथमन्तरधिकरणन्यायेन श्रुतेर्भगवति मुख्यत्वमित्यपरितोषादाह – **अथवेति** ।।

ननु प्रातिपदिकस्य प्रसिद्धादितिपरत्वेऽपि त्वप्रत्ययस्य तद्गतधर्मप्रतिपादकत्वं कुतः । कुत्राप्यदर्शनादित्यत आह – **एवञ्चेति** ।। **प्रसिद्धादित्युद्देशादिति** ।। प्रसिद्धामदितिमुद्दिश्येत्यर्थः ।

ननु चादितिर्देवतामयीत्यादावदितिशब्दस्य भगवत्यपि प्रयोगोऽस्तीत्यत आह – **प्रसिद्धार्थ एवेति** ।। **अत एवेति** ।। श्रुतिलिङ्गयोरुभयोरपि निरवकाशत्वादेवेत्यर्थः । नन्वेवं टीकोक्तायाः सावकाशत्वोक्तेः का गतिरित्यत आह – **टीकायामिति** ।।




ಇಲ್ಲಿಯ ಶ್ರೀಃ ತತ್ತ್ವಪ್ರಕಾಶಿಕಾ ವಾಕ್ಯಕ್ಕೆ ಎರಡು ಬಗೆಯಲ್ಲಿ ವ್ಯಾಖ್ಯಾನಿಸಿ ಪ್ರಕೃತ ನ್ಯಾಯವಿವರಣಕ್ಕೆ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ. ಅದಿತಿಶ್ರುತಿ ಹಾಗೂ ಅದಿತಿತ್ವಲಿಂಗ ಎರಡೂ ಸಹ ನಿರವಕಾಶಗಳೇ ಆಗಿವೆ. ಅದಿತಿಶ್ರುತಿಯಲ್ಲಿ ಯಾವುದೇ ವಿಷ್ಣುಲಿಂಗಗಳು ಇಲ್ಲದ ಕಾರಣ ದೇವಮಾತೆಯನ್ನೇ ಅದಿತಿಶಬ್ದವು ಪ್ರತಿಪಾದಿಸುತ್ತದೆ. ಆದ್ದರಿಂದ ಅದಿತಿಶ್ರುತಿಯು ನಿರವಕಾಶವಾಯಿತು. ಇದರಂತೆ ಅದಿತಿತ್ವವೆಂಬ ಲಿಂಗವೂ ಸಹ ನಿರವಕಾಶವಾಗಿದೆ. ಏಕೆಂದರೆ ಅದಿತಿತ್ವ ಎಂಬಲ್ಲಿರುವ ಅದಿತಿ ಎಂಬ ಪ್ರಾತಿಪದಿಕವು ಅದಿತಿದೇವಿಯನ್ನು ಪ್ರತಿಪಾದಿಸಿದ ಮೇಲೆ 'ತ್ವ' ಪ್ರತ್ಯಯವೂ ಸಹ ಅದಿತಿದೇವಿಯಲ್ಲಿರುವ ಧರ್ಮವನ್ನೇ ಪ್ರತಿಪಾದಿಸಬೇಕಲ್ಲವೇ? ಹೀಗೆ ಶ್ರುತಿ ಹಾಗೂ ಲಿಂಗಗಳೆರಡು ನಿರವಕಾಶಗಳಾಗುತ್ತವೆ. 'ಶ್ರುತಿರ್ಲಿಂಗಂಚ' ಎಂಬಲ್ಲಿರುವ ನ್ಯಾಯವಿವರಣದ 'ಚ' ಶಬ್ದವೂ ಸಹ ಅತ್ಯಂತ ಸ್ವರಸವಾಗುತ್ತದೆ.



• • • • •

ಅತ್ತೃತ್ವಾಧಿಕರಣ (೧-೨-೨)

ವಿಷ್ಣುಲಿಂಗ ಹಾಗೂ ವಿಷ್ಣುಪ್ರಕರಣಗಳು ಸಾವಕಾಶವಾಗಿವೆ

**तात्पर्यचन्द्रिका**

श्रुतौ सर्वशब्दस्त्वदित्यदनयोग्यसर्वपरः । स्वीकृतश्च सिद्धान्तिनाऽप्यत्रैव प्रकरणे "सर्वस्यैतस्यात्ता भवति, सर्वमस्यान्नं भवति, य एवमेतददितेरदितित्वं वेद" इत्युत्तरवाक्यस्थसर्वशब्दस्य सङ्कोचः ।

यद्वा – श्रुतिबलाददितेरेव असङ्कुचितसर्वात्तृत्वमस्तु । अत्र चाद्यः पक्षः "अदितिरपि स्वभोग्यस्यान्नपानादेर्भोक्त्री" इति सुधोक्तः । द्वितीयस्तु अत्र टीकायाम्,

नचाऽऽद्यपक्षे भाष्यस्थजन्मादिसूत्रोक्तासङ्कुचितसर्वसंहर्तृत्वस्य अतिव्याप्त्युक्तिरयुक्तेति वाच्यम्,

अदितेः स्वातन्त्र्येण कतिपयसंहर्तृत्वे ब्रह्मणस्सर्वसंहर्तृत्वायोगेन कतिपयसंहर्तृत्वस्य लक्षणत्वेनातिव्याप्तिसम्भवात् ।

न चादेर्भक्षणार्थत्वेन अदितेरत्तृत्वेऽपि पक्षद्वयेऽपि संहर्तृत्वस्य नातिव्याप्तिरिति शङ्क्यम्, "मृत्युनैवेदम्" इत्युपक्रमे मृत्युशब्दात्, "यद्यदेवासृजत तत्तदत्तुमध्रियत" इति च सृष्टिप्रतियोगित्वाद्भक्षणस्यापि संहारविशेषत्वात् ऊर्णनाभ्यादिवच्च भगवतः संहर्तृत्वस्यात्तृत्वरूपत्वात् ।

"अद्यतेऽत्ति च भूतानि"

स सर्गकाले च करोति सर्वं संहारकाले तु तदत्ति भूयः ।

"स्रष्टा पाता तथैवात्ता" इत्यादौ संहारेऽदधातुप्रयोगाच्च । अत एव टीकायां "संहर्तृत्वापरपर्यायवाच्यमत्तृत्वम्" इत्युक्तम् ।

"नैवेह किञ्चनाग्र आसीत्" इत्यादिनाऽस्य प्रकरणस्य वैष्णवत्वेऽपि, दर्शपौर्णमासप्रकरणात्, "पूषा प्रपिष्टभागः" इत्युक्तं पौष्णं पेषणमिव,

विष्णुप्रकरणात् ''तददितेरदितित्वं'' इत्यादिकमुत्कृष्यतां, प्रकरणाच्छ्रुतिर्लिङ्गयोर्बलीयस्त्वात् ।

अथवा – यथा ''अभिक्रामं जुहोति'' इति दर्शपौर्णमासप्रकरणे श्रुतस्य अभिक्रमणस्य तदङ्गप्रयाजान्वयार्थं प्रयाजानामवान्तरप्रकरणं, तथा विष्णुप्रकरणेऽदितेरवान्तरप्रकरणमस्तु ।

यद्वा – अदितिश्रुतिबलात् ''नैवेह'' इत्यादिमहाप्रकरणमप्यदितेरेवेति ।।

ಅನುವಾದ - ಶ್ರುತಿಯಲ್ಲಿರುವ ಸರ್ವಶಬ್ದದಿಂದ ಅದಿತಿಯು ತಿನ್ನಲು ಯೋಗ್ಯವಾದ ಸಕಲ ಪದಾರ್ಥಗಳನ್ನಷ್ಟೇ ವಿವಕ್ಷಿಸಬೇಕು. ಹೀಗೆ ಸರ್ವಶಬ್ದಕ್ಕೆ ಸಂಕೋಚ ಮಾಡಿ ಅರ್ಥೈಸುವುದು ಸಿದ್ಧಾಂತಿಗಳೂ ಸಹ ಒಪ್ಪಿದ್ದಾರೆ. ಇದೇ ಪ್ರಕರಣದಲ್ಲಿ "ಸರ್ವಸ್ಯೈತಸ್ಯಾತ್ತಾ ಭವತಿ, ಸರ್ವಮಸ್ಯಾನ್ನಂ ಭವತಿ, ಯ ಏವಮೇತದದಿತೇರದಿತಿತ್ವಂ ವೇದ" ಎಂಬುದು ಮುಂದಿನ ವಾಕ್ಯ. ಈ ವಾಕ್ಯದಲ್ಲಿ ಯಾರು ಸರ್ವಾತ್ತೃತ್ವ ಗುಣವನ್ನು ಉಪಾಸಿಸುತ್ತಾರೋ ಅವರೂ ಸಹ ಸಕಲವನ್ನು ಭೋಗಿಸುತ್ತಾರೆಂದು ಹೇಳಲಾಗಿದೆ. ಇಲ್ಲಿರುವ ಸರ್ವಶಬ್ದಕ್ಕೆ ಆಯಾ ಜೀವರಿಂದ ತಿನ್ನಲು ಯೋಗ್ಯವಾದ ಪದಾರ್ಥಗಳಲ್ಲಿ ಸರ್ವಶಬ್ದಕ್ಕೆ ಸಂಕೋಚ ಮಾಡಿ ಅರ್ಥವನ್ನು ಹೇಳುತ್ತಾರೆ.

ಅಥವಾ ಅದಿತಿಶ್ರುತಿಯ ಬಲದಿಂದ ಅದಿತಿದೇವಿಯಲ್ಲಿಯೇ ಅಸಂಕುಚಿತವಾದ ಸಕಲಪದಾರ್ಥಗಳ ಅತ್ತೃತ್ವವನ್ನು ಹೇಳಬಹುದು.

ಇವೆರಡರಲ್ಲಿ ಅದಿತಿಯೂ ಸಹ ತನಗೆ ಯೋಗ್ಯವಾದ ಅನ್ನಪಾನಾದಿಗಳ ಭೋಕ್ತ್ರಿವಾಗಿದ್ದಾಳೆ. ಎಂಬ ಮೊದಲನೇ ಪಕ್ಷವು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಎರಡನೇ ಪಕ್ಷವು ಟೀಕೆಯಲ್ಲಿ ಹೇಳಲ್ಪಟ್ಟಿದೆ.

ಪ್ರಶ್ನೆ - ಮೊದಲನೇ ಪಕ್ಷವನ್ನು ಸ್ವೀಕರಿಸಿದಾಗ ಭಾಷ್ಯದಲ್ಲಿ ಜನ್ಮಾದಿಸೂತ್ರದಲ್ಲಿ ನಿರ್ಧರಿಸಿದ ಅಸಂಕುಚಿತವಾದ ಸರ್ವಸಂಹರ್ತೃತ್ವವೆಂಬ ವಿಷ್ಣುವಿನ ಲಕ್ಷಣಕ್ಕೆ ಅದಿತಿದೇವಿಯಲ್ಲಿ ಅತಿವ್ಯಾಪ್ತಿದೋಷವನ್ನು ಹೇಳಲಾಗಿದೆ. ಇದು ತಪ್ಪು. ಏಕೆಂದರೆ ವಿಷ್ಣುವಿನ ಸರ್ವಸಂಹರ್ತೃತ್ವಗುಣವು ವಿಷ್ಣುವಿನಲ್ಲಿ ಬಾರದೆ ಅದಿತಿದೇವಿಯಲ್ಲಿ ಬರುತ್ತದೆಂದು ಆಕ್ಷೇಪಿಸುತ್ತಿರುವುದರಿಂದ ಅಸಂಭವದೋಷವನ್ನು ಹೇಳಬೇಕಲ್ಲವೇ?

ಉತ್ತರ - ಅದಿತಿದೇವಿಯು ಸ್ವತಂತ್ರವಾಗಿ ಕೆಲವು ಪದಾರ್ಥಗಳ ಸಂಹಾರಕಳಾದ್ದರಿಂದ ಬ್ರಹ್ಮನಿಗೆ ಸರ್ವಸಂಹರ್ತೃತ್ವವೆಂಬ ಗುಣವು ಕೂಡುವುದಿಲ್ಲ. ಆದ್ದರಿಂದ ಕತಿಪಯಸಂಹರ್ತೃತ್ವವನ್ನೇ

ವಿಷ್ಣುಲಿಂಗ ಹಾಗೂ ವಿಷ್ಣುಪ್ರಕರಣಗಳು ಸಾವಕಾಶವಾಗಿವೆ

**तात्पर्यचन्द्रिका**

श्रुतौ सर्वशब्दस्त्वदित्यदनयोग्यसर्वपरः । स्वीकृतश्च सिद्धान्तिनाऽप्यत्रैव प्रकरणे "सर्वस्यैतस्यात्ता भवति, सर्वमस्यान्नं भवति, य एवमेतददितेरदितित्वं वेद" इत्युत्तरवाक्यस्थसर्वशब्दस्य सङ्कोचः ।

यद्वा – श्रुतिबलाददितेरेव असङ्कुचितसर्वात्तृत्वमस्तु । अत्र चाद्यः पक्षः "अदितिरपि स्वभोग्यस्यान्नपानादेर्भोक्त्री" इति सुधोक्तः । द्वितीयस्तु अत्र टीकायाम्,

नचाऽऽद्यपक्षे भाष्यस्थजन्मादिसूत्रोक्तासङ्कुचितसर्वसंहर्तृत्वस्य अतिव्याप्त्युक्तिरयुक्तेति वाच्यम्,

अदितेः स्वातन्त्र्येण कतिपयसंहर्तृत्वे ब्रह्मणस्सर्वसंहर्तृत्वायोगेन कतिपयसंहर्तृत्वस्य लक्षणत्वेनातिव्याप्तिसम्भवात् ।

न चादेर्भक्षणार्थत्वेन अदितेरत्तृत्वेऽपि पक्षद्वयेऽपि संहर्तृत्वस्य नातिव्याप्तिरिति शङ्क्यम्, "मृत्युनैवेदम्" इत्युपक्रमे मृत्युशब्दात्, "यद्यदेवासृजत तत्तदत्तुमध्रियत" इति च सृष्टिप्रतियोगित्वाद्भक्षणस्यापि संहारविशेषत्वात् ऊर्णनाभ्यादिवच्च भगवतः संहर्तृत्वस्यात्तृत्वरूपत्वात् ।

"अद्यतेऽत्ति च भूतानि"

स सर्गकाले च करोति सर्वं संहारकाले तु तदत्ति भूयः ।

"स्रष्टा पाता तथैवात्ता" इत्यादौ संहारेऽदधातुप्रयोगाच्च । अत एव टीकायां "संहर्तृत्वापरपर्यायवाच्यमत्तृत्वम्" इत्युक्तम् ।

"नैवेह किञ्चनाग्र आसीत्" इत्यादिनाऽस्य प्रकरणस्य वैष्णवत्वेऽपि, दर्शपौर्णमासप्रकरणात्, "पूषा प्रपिष्टभागः" इत्युक्तं पौष्णं पेषणमिव,

**विष्णुप्रकरणात् "तददितेरदितित्वं" इत्यादिकमुत्कृष्यतां, प्रकरणाच्छ्रुतिर्लिङ्गयोर्बलीयस्त्वात् ।**

**अथवा – यथा "अभिक्रामं जुहोति" इति दर्शपौर्णमासप्रकरणे श्रुतस्य अभिक्रमणस्य तदङ्गप्रयाजान्वयार्थं प्रयाजानामवान्तरप्रकरणं, तथा विष्णुप्रकरणेऽदितेरवान्तरप्रकरणमस्तु ।**

**यद्वा – अदितिश्रुतिबलात् "नैवेह" इत्यादिमहाप्रकरणमप्यदितेरेवेति ॥**

ಅನುವಾದ - ಶ್ರುತಿಯಲ್ಲಿರುವ ಸರ್ವಶಬ್ದದಿಂದ ಅದಿತಿಯು ತಿನ್ನಲು ಯೋಗ್ಯವಾದ ಸಕಲ ಪದಾರ್ಥಗಳನ್ನಷ್ಟೇ ವಿವಕ್ಷಿಸಬೇಕು. ಹೀಗೆ ಸರ್ವಶಬ್ದಕ್ಕೆ ಸಂಕೋಚ ಮಾಡಿ ಅರ್ಥೈಸುವುದು ಸಿದ್ಧಾಂತಿಗಳೂ ಸಹ ಒಪ್ಪಿದ್ದಾರೆ. ಇದೇ ಪ್ರಕರಣದಲ್ಲಿ "ಸರ್ವಸ್ಯೈತಸ್ಯಾತ್ತಾ ಭವತಿ, ಸರ್ವಮಸ್ಯಾನ್ನಂ ಭವತಿ, ಯ ಏವಮೇತದದಿತೇರದಿತಿತ್ವಂ ವೇದ" ಎಂಬುದು ಮುಂದಿನ ವಾಕ್ಯ. ಈ ವಾಕ್ಯದಲ್ಲಿ ಯಾರು ಸರ್ವಾತ್ತೃತ್ವ ಗುಣವನ್ನು ಉಪಾಸಿಸುತ್ತಾರೋ ಅವರೂ ಸಹ ಸಕಲವನ್ನು ಭೋಗಿಸುತ್ತಾರೆಂದು ಹೇಳಲಾಗಿದೆ. ಇಲ್ಲಿರುವ ಸರ್ವಶಬ್ದಕ್ಕೆ ಆಯಾ ಜೀವರಿಂದ ತಿನ್ನಲು ಯೋಗ್ಯವಾದ ಪದಾರ್ಥಗಳಲ್ಲಿ ಸರ್ವಶಬ್ದಕ್ಕೆ ಸಂಕೋಚ ಮಾಡಿ ಅರ್ಥವನ್ನು ಹೇಳುತ್ತಾರೆ.

ಅಥವಾ ಅದಿತಿಶ್ರುತಿಯ ಬಲದಿಂದ ಅದಿತಿದೇವಿಯಲ್ಲಿಯೇ ಅಸಂಕುಚಿತವಾದ ಸಕಲಪದಾರ್ಥಗಳ ಅತ್ತೃತ್ವವನ್ನು ಹೇಳಬಹುದು.

ಇವೆರಡರಲ್ಲಿ ಅದಿತಿಯೂ ಸಹ ತನಗೆ ಯೋಗ್ಯವಾದ ಅನ್ನಪಾನಾದಿಗಳ ಭೋಕ್ತ್ರವಾಗಿದ್ದಾಳೆ. ಎಂಬ ಮೊದಲನೇ ಪಕ್ಷವು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಎರಡನೇ ಪಕ್ಷವು ಟೀಕೆಯಲ್ಲಿ ಹೇಳಲ್ಪಟ್ಟಿದೆ.

ಪ್ರಶ್ನೆ - ಮೊದಲನೇ ಪಕ್ಷವನ್ನು ಸ್ವೀಕರಿಸಿದಾಗ ಭಾಷ್ಯದಲ್ಲಿ ಜನ್ಮಾದಿಸೂತ್ರದಲ್ಲಿ ನಿರ್ಧರಿಸಿದ ಅಸಂಕುಚಿತವಾದ ಸರ್ವಸಂಹರ್ತೃತ್ವವೆಂಬ ವಿಷ್ಣುವಿನ ಲಕ್ಷಣಕ್ಕೆ ಅದಿತಿದೇವಿಯಲ್ಲಿ ಅತಿವ್ಯಾಪ್ತಿದೋಷವನ್ನು ಹೇಳಲಾಗಿದೆ. ಇದು ತಪ್ಪು. ಏಕೆಂದರೆ ವಿಷ್ಣುವಿನ ಸರ್ವಸಂಹರ್ತೃತ್ವಗುಣವು ವಿಷ್ಣುವಿನಲ್ಲಿ ಬಾರದೆ ಅದಿತಿದೇವಿಯಲ್ಲಿ ಬರುತ್ತದೆಂದು ಆಕ್ಷೇಪಿಸುತ್ತಿರುವುದರಿಂದ ಅಸಂಭವದೋಷವನ್ನು ಹೇಳಬೇಕಲ್ಲವೇ?

ಉತ್ತರ - ಅದಿತಿದೇವಿಯು ಸ್ವತಂತ್ರವಾಗಿ ಕೆಲವು ಪದಾರ್ಥಗಳ ಸಂಹಾರಕಳಾದ್ದರಿಂದ ಬ್ರಹ್ಮನಿಗೆ ಸರ್ವಸಂಹರ್ತೃತ್ವವೆಂಬ ಗುಣವು ಕೂಡುವುದಿಲ್ಲ. ಆದ್ದರಿಂದ ಕತಿಪಯಸಂಹರ್ತೃತ್ವವನ್ನೇ

ಬ್ರಹ್ಮನ ಲಕ್ಷಣವೆಂದು ಹೇಳಬೇಕು. ಆವಾಗ ಈ ಲಕ್ಷಣವು ಅದಿತಿದೇವಿಯಲ್ಲಿಯೂ ಬರುವುದರಿಂದ ಅತಿವ್ಯಾಪ್ತಿದೋಷವನ್ನು ಹೇಳಬಹುದು.

ಆಕ್ಷೇಪ - 'ಅದ' ಎಂಬ ಧಾತುವಿಗೆ ಭಕ್ಷಣವೆಂಬರ್ಥವು ಪ್ರಸಿದ್ಧವಾಗಿದೆ. ಆದ್ದರಿಂದ ಅದಿತಿಗೆ ಎರಡು ಪಕ್ಷಗಳಲ್ಲಿ ಅತ್ತೃತ್ವವನ್ನು ಹೇಳಬಹುದೇ ಹೊರತು ಸಂಹರ್ತೃತ್ವವನ್ನು ಹೇಳಲಾಗದು. ಆದ್ದರಿಂದ ಭಗವಂತನ ಸಂಹರ್ತೃತ್ವಗುಣಕ್ಕೆ ಅತಿವ್ಯಾಪ್ತಿದೋಷವನ್ನು ಶಂಕಿಸಲು ಸಾಧ್ಯವಿಲ್ಲವಲ್ಲವೇ?

ಸಮಾಧಾನ - ಉಪಕ್ರಮದಲ್ಲಿ 'ಮೃತ್ಯುನೈವೇದಂ' ಎಂದಿರುವುದರಿಂದ ಸಂಹರ್ತೃತ್ವಗುಣವೇ ತಿಳಿಯುತ್ತದೆ. ಏಕೆಂದರೆ 'ಮೃತ್ಯು' ಶಬ್ದಕ್ಕೆ ಸಂಹಾರವೆಂಬರ್ಥವು ಪ್ರಸಿದ್ಧವಾಗಿದೆ. ಮತ್ತು ''ಯದ್ಯದೇವಾಸೃಜತ ತತ್ತದತ್ತುಮ್'' ಎಂಬುದಾಗಿ ಸಂಹಾರಕ್ಕೆ ಸೃಷ್ಟಿಪ್ರತಿಯೋಗಿತ್ವವನ್ನು ಹೇಳಿದ್ದಾರೆ. ಇದರಿಂದಲೂ ಸಂಹರ್ತೃತ್ವವನ್ನೇ ವಿವಕ್ಷಿಸಬೇಕೆಂದು ತಿಳಿಯುತ್ತದೆ. ಮತ್ತು ಭಕ್ಷಣವು ಸಂಹಾರದ ವಿಶೇಷರೂಪವಾಗಿದೆ. ಭಕ್ಷಣ ಮಾಡುತ್ತಾನೆಂದರೆ ಆ ಪದಾರ್ಥವನ್ನು ಸಂಹಾರ ಮಾಡುತ್ತಾನೆಂದೇ ಅರ್ಥ. ಈ ಎಲ್ಲ ಕಾರಣಗಳಿಂದ ಭಗವಂತನು ತಿನ್ನುತ್ತಾನೆಂದರೆ ಊರ್ಣನಾಭಿಯಂತೆ ಸಂಹಾರ ಮಾಡುತ್ತಾನೆಂದರ್ಥ.

ವಿಚಾರ ಮಾಡಿದರೆ ಅದ ಧಾತುವು ಸಂಹಾರವೆಂಬರ್ಥದಲ್ಲಿಯೂ ಪ್ರಸಿದ್ಧವಾಗಿದೆ. ''ಅದ್ಯತೇಽತ್ತಿ ಚ ಭೂತಾನಿ'' 'ಸ ಸರ್ಗಕಾಲೇ ಚ ಕರೋತಿ ಸರ್ವಂ ಸಂಹಾರಕಾಲೇ ತು ತದತ್ತಿ ಭೂಯಃ' । ''ಸ್ರಷ್ಟಾ ಪಾತಾ ತಥೈವಾತ್ತಾ'' ಇತ್ಯಾದಿ ಸ್ಥಳಗಳಲ್ಲಿ ಸಂಹಾರವೆಂಬರ್ಥದಲ್ಲಿ ಅದ ಧಾತುವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ಟೀಕೆಯಲ್ಲಿ 'ಸಂಹರ್ತೃತ್ವಾಪರಪರ್ಯಾಯವಾಚ್ಯ-ಮತ್ತೃತ್ವಂ ' ಅತ್ತೃತ್ವವು ಸಂಹರ್ತೃತ್ವದ ಮತ್ತೊಂದು ಪರ್ಯಾಯ ಶಬ್ದವೆಂದು ಹೇಳಿದ್ದಾರೆ.

''ನೈವೇಹ ಕಿಂಚನಾಗ್ರ ಆಸೀತ್'' ಇತ್ಯಾದಿ ವಾಕ್ಯಗಳ ಆಧಾರದಿಂದ ಈ ಪ್ರಕರಣವು ವಿಷ್ಣುವನ್ನೇ ಪ್ರತಿಪಾದಿಸುತ್ತದೆಂದು ತಿಳಿಯುತ್ತದೆ. ಹೀಗಿರುವಾಗ ಮಧ್ಯದಲ್ಲಿರುವ ಅದಿತಿ ಶಬ್ದವನ್ನು ಮಾತ್ರ ಅದಿತಿಯಲ್ಲಿ ಹೇಗೆ ಸಮನ್ವಯ ಮಾಡುತ್ತೀರಿ ? ಎಂದು ಪ್ರಶ್ನಿಸಬಾರದು. ಪೂರ್ವಮೀಮಾಂಸೆಯಲ್ಲಿ ದರ್ಶಪೂರ್ಣಮಾಸ ಪ್ರಕರಣವಾಗಿದ್ದರೂ ''ಪೂಷಾ ಪ್ರಪಿಷ್ಟಭಾಗಃ'' ಎಂಬಲ್ಲಿ ಹೇಳಲ್ಪಟ್ಟ ಪೇಷಣವು ಪೂಷಾ ದೇವತೆಗೆ ಸಂಬಂಧಪಟ್ಟಿದೆಯೆಂದು ನಿರ್ಣಯಿಸಿದ್ದಾರೆ. ಅದರಂತೆ ಇದು ವಿಷ್ಣು ಪ್ರಕರಣವಾಗಿದ್ದರೂ 'ತದದಿತೇರದಿತಿತ್ವಂ' ಎಂಬುದನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡದೆ ಎಳೆದು ಅದಿತಿದೇವಿಯಲ್ಲಿ ಸಮನ್ವಯ ಮಾಡುವುದು ತಪ್ಪಲ್ಲ. ಏಕೆಂದರೆ ಪ್ರಕರಣಕ್ಕಿಂತ ಶ್ರುತಿಲಿಂಗಗಳೇ ಬಲಿಷ್ಠವಾಗಿವೆ.

ಅಥವಾ ಯಾವರೀತಿಯಾಗಿ ಪೂರ್ವಮೀಮಾಂಸೆಯಲ್ಲಿ ''ಅಭಿಕ್ರಾಮನ್ ಜುಹೋತಿ'' ಎಂಬುದು ದರ್ಶಪೂರ್ಣಮಾಸ ಪ್ರಕರಣದಲ್ಲಿ ಪ್ರಸಕ್ತವಾಗಿದ್ದರೂ ದರ್ಶಪೂರ್ಣಮಾಸಯಾಗಕ್ಕೆ

ಅಂಗಯಾಗವೆನಿಸಿದ 'ಪ್ರಯಾಜ' ಎಂಬ ಅವಾಂತರ ಪ್ರಕರಣಕ್ಕೆ ಅಭಿಕ್ರಮಣವು ಸಂಬಂಧಪಟ್ಟಿದೆಯೆಂದು ನಿರ್ಣಯಿಸಲಾಗಿದೆ. ದರ್ಶಪೂರ್ಣಮಾಸವೆಂಬ ಮಹಾಪ್ರಕರಣವೇ ಬೇರೆ, ಪ್ರಯಾಜವೆಂಬ ಅವಾಂತರ ಪ್ರಕರಣವೇ ಬೇರೆ. ಅಭಿಕ್ರಮಣವು ಅವಾಂತರ ಪ್ರಕರಣಕ್ಕೆ ಸಂಬಂಧ ಪಡುತ್ತದೆ ಹೊರತು, ಮಹಾಪ್ರಕರಣಕ್ಕೆ ಸಂಬಂಧ ಪಡುವುದಿಲ್ಲ. ಅದರಂತೆ ಪ್ರಕೃತದಲ್ಲಿ ವಿಷ್ಣು ಪ್ರಕರಣವಾಗಿದ್ದರೂ ಅದಿತಿಯು ಅವಾಂತರ ಪ್ರಕರಣವಾಗಬಹುದು.

ಅಥವಾ ಅದಿತಿಶ್ರುತಿಯ ಅಧಾರದಿಂದ "ನೈವೇಹ ಕಿಂಚನ" ಇತ್ಯಾದಿ ಮಹಾಪ್ರಕರಣವೂ ಸಹ ಅದಿತಿ ಪರವೇ ಆಗಬಹುದು. ಆದ್ದರಿಂದ ಅತ್ತೃತ್ವವೆಂಬ ಗುಣವು ಅದಿತಿದೇವಿಯಲ್ಲಿ ಬರುತ್ತದೆ ಹೊರತು ವಿಷ್ಣುವಿನಲ್ಲಿ ಬರುವುದಿಲ್ಲ.

**प्रकाशः —**

नन्वत्र सर्वात्तृत्वरूपं विष्णुलिङ्गं, "नैवेह किञ्चन" इति विष्णुप्रकरणं च । अतो लिङ्गप्रकरणाभ्यां श्रुत्यादिबाधेन विष्णुरेवात्ता स्यादित्यतो लिङ्गस्य सावकाशत्वं तावदाह — **श्रुताविति** । अदितिश्रुत्यदितित्वलिङ्गरूपबाधकात्सङ्कोचो न्याय्य इति भावः । बाधकात्सङ्कोचस्तवापि सम्मत इत्याह — **स्वीकृतश्चेति** । वेदितुरधिकारिणो ब्रह्मण इवासङ्कुचितसर्वादनस्य बाधादिति भावः ।

ಪ್ರಶ್ನೆ - ಸರ್ವಾತ್ತೃತ್ವವೆಂಬ ವಿಷ್ಣು ಲಿಂಗದಿಂದ ಹಾಗೂ 'ನೈವೇಹ ಕಿಂಚನ' ಎಂಬ ವಿಷ್ಣು ಪ್ರಕರಣದಿಂದ ಅದಿತಿಶ್ರುತಿಯನ್ನು ಬಾಧಿಸಬಹುದು. ಆದ್ದರಿಂದ ವಿಷ್ಣುವೇ ಅತ್ತೃತ್ವಧರ್ಮವುಳ್ಳವನಾಗಿದ್ದಾನಲ್ಲವೇ?

ಉತ್ತರ - ಸರ್ವಾತ್ತೃತ್ವವೆಂಬ ವಿಷ್ಣುಲಿಂಗವು ಸಾವಕಾಶವಾಗಿದೆ. ಹಾಗೂ ಪ್ರಕರಣವೂ ಸಹ ಅದಿತಿಯ ಪ್ರಕರಣವೇ ಆಗಿದೆ. ಮೊದಲು ಸರ್ವಾತ್ತೃತ್ವವೆಂಬ ಲಿಂಗಕ್ಕೆ ಸಾವಕಾಶತ್ವವನ್ನು 'ಶ್ರುತೌ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಅದಿತಿ ಶ್ರುತಿ ಹಾಗೂ ಅದಿತಿತ್ವವೆಂಬ ಲಿಂಗಗಳು ಬಾಧಕವಾಗಿವೆ. ಆದ್ದರಿಂದ ಸರ್ವಪದಕ್ಕೆ ಸಂಕೋಚ ಮಾಡುವುದೇ ನ್ಯಾಯವೆಂದು ತಿಳಿಯಬೇಕು. ಇದೇ ಬಾಧಕವು ವಿಷ್ಣುಪರತ್ವವನ್ನು ಸಮರ್ಥಿಸುವವರಿಗೂ ಬರುತ್ತದೆ. ಆದ್ದರಿಂದ ಅವರೂ ಸಹ ಸರ್ವಪದಕ್ಕೆ ಸಂಕೋಚವನ್ನು ಮಾಡಿದ್ದಾರೆಂದು 'ಸ್ವೀಕೃತಶ್ಚ' ಇತ್ಯಾದಿವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ತಿಳಿಯುವಂತಹ ಅಧಿಕಾರಿಗೆ ಬ್ರಹ್ಮನಂತೆ ಅಸಂಕುಚಿತವಾದ ಸರ್ವಾತ್ತೃತ್ವವನ್ನು ಹೇಳಲು ಸಾಧ್ಯವಿಲ್ಲವೆಂದು ಅಭಿಪ್ರಾಯ.

**प्रकाशः — अत्र टीकायामिति** । अत्तृत्वं विष्णोरन्यस्य वेति संशयं प्रदर्श्य अन्यस्येत्युपपादनात्, अन्यथाऽन्यस्यापि वेत्युक्तिप्रसङ्गात्,

**अन्ते 'लक्षणं न युक्तं' इति सामान्यत उपसंहारश्च एतदवसीयते । अतिव्याप्तीति । टीका त्वन्यनिष्ठत्वप्रसङ्गादिति व्याख्येयेति भावः ।**

ಗ್ರಂಥದಲ್ಲಿ 'ಅತ್ರ ಟೀಕಾಯಾಂ' ಎಂದು ಹೇಳಿದ್ದಾರೆ. ಅತ್ತೃತ್ವವೆಂಬ ಧರ್ಮವು ವಿಷ್ಣುವಿನಲ್ಲಿ ಬರುತ್ತದೋ ಅಥವಾ ಬೇರೆಯವರಲ್ಲಿ ಬರುತ್ತದೋ? ಎಂದು ಸಂಶಯವನ್ನು ತೋರಿಸಿ 'ಅನ್ಯಸ್ಯ' ಎಂದು ಉಪಪಾದಿಸಿದ್ದಾರೆ. ಅದಿತಿಗೆ ಅಸಂಕುಚಿತವಾದ ಸರ್ವಾತ್ತೃತ್ವವನ್ನು ಹೇಳುವ ವಿವಕ್ಷೆಯು ಟೀಕಾಕಾರರಿಗೆ ಇಲ್ಲದಿದ್ದಲ್ಲಿ 'ಅನ್ಯಸ್ಯಾಪಿ ವಾ' ಎಂದು ಹೇಳಬೇಕಿತ್ತು.

ಮತ್ತು ಕೊನೆಯಲ್ಲಿ 'ಲಕ್ಷಣಂ ನ ಯುಕ್ತಂ' ಎಂದು ಸಾಮಾನ್ಯವಾಗಿ ಉಪಸಂಹಾರ ಮಾಡಿದ್ದಾರೆ. ಇದರಿಂದಲೂ ಟೀಕಾಕಾರರಿಗೆ ವಿಷ್ಣುವಿನ ಲಕ್ಷಣಕ್ಕೆ ಅಸಂಭವದೋಷವು ಅಭಿಮತವೆಂದು ತಿಳಿಯುತ್ತದೆ. ಹಾಗಾದರೆ ಅತಿವ್ಯಾಪ್ತಿಯನ್ನು ಹೇಳುವ ಟೀಕೆಗೆ ಏನು ಅರ್ಥ? ಎಂದು ಸಹಜವಾಗಿ ಪ್ರಶ್ನೆ ಬರುತ್ತದೆ. ಬೇರೆಯವರಲ್ಲಿ ವಿಷ್ಣುವಿನ ಅತ್ತೃತ್ವ ಲಕ್ಷಣವು ಬರುತ್ತದೆಂಬ ಅಭಿಪ್ರಾಯದಿಂದಷ್ಟೇ ಅತಿವ್ಯಾಪ್ತಿಯನ್ನು ಕೂಡಿಸಬೇಕು ಹೊರತು, ಲಕ್ಷ್ಯನಾದ ವಿಷ್ಣುವಿನಲ್ಲಿ ಲಕ್ಷಣವಿರುವುದರ ಜೊತೆಗೆ ಅಲಕ್ಷ್ಯಭೂತರಾದ ಅದಿತಿದೇವಿಯಲ್ಲಿಯೂ ಲಕ್ಷಣ ಬರುತ್ತದೆಂಬ ಅಭಿಪ್ರಾಯದಿಂದಲ್ಲ. ವಿಷ್ಣುವಿನ ಲಕ್ಷಣಕ್ಕೆ ಅಸಂಭವ ದೋಷ ಹೇಳುವುದೇ ಟೀಕಾಕಾರರಿಗೆ ಸಮ್ಮತವಾಗಿದೆ; ಅತಿವ್ಯಾಪ್ತಿದೋಷವು ಸಮ್ಮತವಾಗಿಲ್ಲವೆಂದು ಸ್ಪಷ್ಟವಾಗಿ ತಿಳಿಯಬೇಕು.

**प्रकाशः** – टीकायां ''संहर्तृत्वापरपर्यायवाच्यमत्तृत्वम्'' इत्युक्तेर्व्यावर्त्यशङ्कां दर्शयन् संहर्तृत्वरूपत्वं साधयति – **न चेत्यादिना ।**

**मृत्युनेति ।** मृत्युपदस्य मारकपर्यायत्वादिति भावः । संहारेऽदधातोश्शक्तिं चाह – **भक्षणस्येति ।** रूढिं चाह – **अद्यत इत्यादिना ।** स्मार्तप्रयोगं चाह – **स सर्गेति ।** ''अत्ता निखिलस्यैक एव तु'' इति निखिलपदप्रयोगात्स्रष्टृत्वप्रतियोगि त्वात्संहर्तेति गम्यत इति भावः ।

ಟೀಕೆಯಲ್ಲಿ ''ಸಂಹರ್ತೃತ್ವಾಪರಪರ್ಯಾಯವಾಚ್ಯಮತ್ತೃತ್ವಂ'' ಎಂದು ಅತ್ತೃತ್ವವನ್ನು ಸಂಹರ್ತೃತ್ವದ ಮತ್ತೊಂದು ಪರ್ಯಾಯ ಶಬ್ದವೆಂದು ಹೇಳಿದ್ದಾರೆ. ಈ ಮಾತಿನಿಂದ ವ್ಯಾವರ್ತ್ಯವಾದ ಶಂಕೆಯನ್ನು ತೋರಿಸುತ್ತಾ ಅತ್ತೃತ್ವವು ಸಂಹರ್ತೃತ್ವ ರೂಪವಾಗಿದೆಯೆಂದು 'ನಚ' ಇತ್ಯಾದಿ ವಾಕ್ಯದಿಂದ ಸಾಧಿಸುತ್ತಿದ್ದಾರೆ.

'ಮೃತ್ಯು' ಪದವು ಮಾರಕ ಪದದ ಪರ್ಯಾಯ ರೂಪವಾಗಿದೆ. ಸಂಹಾರವೆಂಬರ್ಥದಲ್ಲಿ ಅದ ಧಾತುವಿಗೆ ಶಕ್ತಿಯೂ ಸಹ ಇದೆಯೆಂದು 'ಭಕ್ಷಣಸ್ಯ' ಎಂಬುದರಿಂದ ಸಮರ್ಥಿಸುತ್ತಿದ್ದಾರೆ. 'ಅದ್ಯತೇ' ಎಂಬುದರಿಂದ ರೂಢಿಯನ್ನು ಸಮರ್ಥಿಸುತ್ತಿದ್ದಾರೆ. ಶ್ರುತಿ ಪ್ರಯೋಗವನ್ನೂ ಸಹ 'ಸ ಸರ್ಗಕಾಲೇ' ಎಂಬುದರಿಂದ ಹೇಳುತ್ತಿದ್ದಾರೆ. ''ಅತ್ತಾ ನಿಖಿಲಸ್ಯೈಕ ಏವ ತು'' ಎಂಬಲ್ಲಿ ನಿಖಿಲಪದವನ್ನು ಪ್ರಯೋಗಿಸಿದ್ದರಿಂದ ಸೃಷ್ಟಿಗೆ ಪ್ರತಿಯೋಗಿಯಾಗಿದ್ದರಿಂದಲೂ 'ಸಂಹರ್ತಾ' ಎಂಬರ್ಥವು ತಿಳಿಯುತ್ತದೆ.

ಪರಿಪೂರ್ಣಚಂದ್ರಿಕಾ

**प्रकाशः** – एवं लिङ्गस्य सावकाशत्वमुक्त्वा प्रकरणस्यापि तदग्रे विवक्षुर्निरवकाशत्वं तावदुपेत्योपपत्तिमाह – **नैवेहेति** । "नैवेह किञ्चनाग्र आसीत् मृत्युनैवेदमावृतमासीत् अशनाया हि मृत्युः । तन्मनोऽकुरुत आत्मन्वी स्यामिति । सोऽर्चन्नचरत्तस्यार्चत आपोऽजायन्त । तद्यदपाꣳशर आसीत् तत्समहन्यत । सा पृथिव्यभवत् । तस्यामश्राम्यत् । सोऽकामयत द्वितीयो म आत्मा जायेतेति । स मनसा वाचा मिथुनं समभवत् । अशनाया हि मृत्युः । तद्यद्रेत आसीत् स संवत्सरोऽभवत् । तं जातमभिव्याददात् । स भाणमकरोत् । सैव वागभवत् । स ऐक्षत यदि ह वा इममभिमंस्ये कनीयोऽन्नं करिष्ये इति । स तया वाचा तेनात्मनेदꣳ सर्वमसृजत" इति मृत्यमात्रावशेषाप्संवत्सरसृष्टिसंवत्सरादनोद्यमादिश्रवणेन प्रकरणस्य वैष्णवत्वेऽपीत्यर्थः ।

ಹೀಗೆ ಅತ್ತೃತ್ವಲಿಂಗಕ್ಕೆ ಸಾವಕಾಶತ್ವವನ್ನು ಸಮರ್ಥಿಸಿ ವಿಷ್ಣು ಪ್ರಕರಣಕ್ಕೂ ಸಹ ಸಾವಕಾಶತ್ವವನ್ನು ಮುಂದೆ ಸಮರ್ಥಿಸುತ್ತಾರೆ. ಈಗ ವಿಷ್ಣು ಪ್ರಕರಣಕ್ಕೆ ನಿರವಕಾಶತ್ವವನ್ನು ಅಂಗೀಕರಿಸಿ "ನೈವೇಹ" ಇತ್ಯಾದಿ ವಾಕ್ಯದಿಂದ ಉತ್ತರವನ್ನು ನೀಡುತ್ತಿದ್ದಾರೆ.

"ನೈವೇಹ ಕಿಂಚನಾಗ್ರ ಆಸೀತ್ ಮೃತ್ಯುನೈವೇದಮಾವೃತಮಾಸೀತ್ ಅಶನಾಯಾ ಹಿ ಮೃತ್ಯುಃ । ತನ್ಮನೋಽಕುರುತ ಆತ್ಮನ್ವೀ ಸ್ಯಾಮಿತಿ । ಸೋಽರ್ಚನ್ನಚರತ್ತಸ್ಯಾರ್ಚತ ಆಪೋಽಜಾಯಂತ । ತದ್ಯದಪಾಂಶರ ಆಸೀತ್ ತತ್ಸಮಹನ್ಯತ । ಸಾ ಪೃಥಿವ್ಯಭವತ್ । ತಸ್ಯಾಮಶ್ರಾಮ್ಯತ್ । ಸೋಽಕಾಮಯತ ದ್ವಿತೀಯೋ ಮ ಆತ್ಮಾ ಜಾಯೇತೇತಿ । ಸ ಮನಸಾ ವಾಚಾ ಮಿಥುನಂ ಸಮಭವತ್ । ಅಶನಾಯಾ ಹಿ ಮೃತ್ಯುಃ । ತದ್ಯದ್ರೇತ ಆಸೀತ್ ಸ ಸಂವತ್ಸರೋಽಭವತ್ । ತಂ ಜಾತಮಭಿವ್ಯಾದದಾತ್ । ಸ ಭಾಣಮಕರೋತ್ । ಸೈವ ವಾಗಭವತ್ । ಸ ಐಕ್ಷತ ಯದಿ ಹ ವಾ ಇಮಮಭಿಮಂಸ್ಯೇ ಕನೀಯೋಽನ್ನಂ ಕರಿಷ್ಯೇ ಇತಿ । ಸ ತಯಾ ವಾಚಾ ತೇನಾತ್ಮನೇದಂ ಸರ್ವಮಸೃಜತ" ಹೀಗೆ ಶ್ರುತಿಯಲ್ಲಿ ಪ್ರಳಯಕಾಲದಲ್ಲಿ ಮೃತ್ಯುವಿಗೆ ಮಾತ್ರ ಸ್ಥಿತಿಯನ್ನು ಹೇಳಲಾಗಿದೆ. ಮತ್ತು ನೀರನ್ನು ಹಾಗೂ ಚತುರ್ಮುಖ ಬ್ರಹ್ಮದೇವನನ್ನು ಸೃಷ್ಟಿಸಿದನೆಂದು ಹೇಳಲಾಗಿದೆ. ಇದರ ಜೊತೆಗೆ ಸಂವತ್ಸರನೆನಿಸಿದ ಚತುರ್ಮುಖ ಬ್ರಹ್ಮನನ್ನು ತಿನ್ನಲು ತೊಡಗುತ್ತಾನೆಂದೂ ಸಹ ಹೇಳಲಾಗಿದೆ. ಇವೆಲ್ಲವೂ ಸಹ ವಿಷ್ಣುವಿನ ಧರ್ಮಗಳೇ ಆಗಿರುವುದರಿಂದ ಸಂಪೂರ್ಣ ಪ್ರಕರಣವು ವಿಷ್ಣುಪರವೆಂದು ತಿಳಿಯುತ್ತದೆ.

**प्रकाशः – दर्शपौर्णमासेति** । तृतीयस्य तृतीये पादे अष्टादशोऽधिकरणे "पौष्णं पेषणं विकृतौ प्रतीयेताचोदनात्प्रकृतौ" इति सूत्रे दर्शपूर्णमासप्रकरणे "पूषा प्रपिष्टभागः" इति श्रुतं पूषदेवताकं पेषणम् । तत्र प्रकरणे पूषाभावात्, यत्र पूषा

तत्र वाक्यमुत्कृष्यत इत्युक्तम् । तद्वदिदमपि अत उत्कृष्य, यत्रादितिप्रकरणमस्ति, तत्र निवेश्यतामित्यर्थः ।

ಪೌಷ್ಣಂ ಪೇಷಣಂ ವಿಕೃತೌ ಪ್ರತೀಯೇತಾಚೋದನಾತ್ಪ್ರಕೃತೌ[1] (೩-೩-೧೮)

ದರ್ಶಪೂರ್ಣಮಾಸ ಪ್ರಕರಣದಲ್ಲಿ 'ಪೂಷಾ ಪ್ರಪಿಷ್ಟಭಾಗಃ' ಎಂದು ಕೇಳಿಸುತ್ತಿದೆ. ಇದರಲ್ಲಿ ಪೂಷದೇವತಾಕವಾದ ಪೇಷಣವು ಕೇಳಿಸುತ್ತಿದೆ. ವಸ್ತುತಃ ಈ ಪ್ರಕರಣದಲ್ಲಿ ಪೂಷಾ ದೇವತೆಯು ಪ್ರತಿಪಾದ್ಯವಾಗಿಲ್ಲ. ಆದರೆ ಯಾವ ವಾಕ್ಯದಲ್ಲಿ ಪೂಷಾ ದೇವತೆಯನ್ನು ಪ್ರತಿಪಾದಿಸಲಾಗಿದೆಯೋ ಆ ವಾಕ್ಯದಲ್ಲಿ ಈ ಪೇಷಣವನ್ನು ಉತ್ಕರ್ಷ ಮಾಡಬೇಕೆಂದು ನಿರ್ಣಯಿಸಿದ್ದಾರೆ. ಆದರಂತೆ ಇಲ್ಲಿಯೂ ಸಹ ಸಂವತ್ಸರಪ್ರಸ್ಪೃತ್ವ ಮೊದಲಾದವುಗಳೆಲ್ಲವೂ ವಿಷ್ಣುವನ್ನೇ ಪ್ರತಿಪಾದಿಸಲಿ. ಆದರೆ 'ತತ್ತದತ್ತುಮಧ್ರಿಯತ' ಎಂಬ ವಾಕ್ಯವು ಮಾತ್ರ ಅದಿತಿದೇವಿಯನ್ನು ಪ್ರತಿಪಾದಿಸಲಿ ಪ್ರಬಲವಾದ ಶ್ರುತಿಲಿಂಗಗಳ ಆಧಾರದಿಂದ ಈ ವಾಕ್ಯವನ್ನು ಮತ್ತೊಂದು ಪ್ರಕರಣಕ್ಕೆ ತೆಗೆದುಕೊಂಡು ಅರ್ಥೈಸಬೇಕು ಎಂದರ್ಥ.

**प्रकाशः** – **अभिक्रामममिति** । तत्रैव आद्यपादे ''कर्तृगुणे तु कर्मासमवायाद्वाक्य-भेदस्स्यात्'' इति नवमेऽधिकरणे दर्शपौर्णमासप्रकरणे प्रयाजसमीपे ''अभिक्रमामं

(१) भाट्टसङ्ग्रहः –

**अथाष्टादशं पौष्णपेषणस्य विकृतौ विनियोगाधिकरणम् ॥**

**पौष्णं पेषणं विकृतौ प्रतीयेताऽचोदनात्प्रकृतौ ॥ ३४ ॥**

अत्रापि पूर्ववैषम्येण शङ्कनात्सङ्गतिः । दर्शपूर्णमासौ प्रकृत्य 'पूषा प्रपिष्टभागोऽदन्तको हि' इति श्रुतम् । तत्र पूषभागसम्बन्धि पेषणं पूषेतिवाक्योक्तं प्रकरणे निविशते, अथ दर्शपूर्णमासविकृतावुत्कृष्यत इति सन्देहे, पूर्वत्र विरोधेन वाक्यात्प्रकरणबाधो युक्तः । अत्र तु न तथा । प्रकृते दर्शपूर्णमासयागे पूषदेवताया अभावेऽपि अग्न्यादेरेव यजमानपोषकत्वेन पूषशब्दार्थत्वोपपत्त्या वाक्यप्रकरणयोरविरोधात्प्रकृतावेव निवेशान्नोत्कर्ष इति प्राप्ते, रूढ्या पूषशब्दमुख्यार्थस्य पूष्णोऽलाभे हि कथञ्चिदमुख्यार्थाश्रयणादग्न्याद्यर्थत्वं कल्प्यम् । अस्ति तु विकृतौ मुख्यः पूषेति वाक्यात्प्रकरणबाधेन पूषदैवत्यायां विकृतावुत्कर्षः पौष्णपेषणस्येति सिद्धान्तः । तदाह **सूत्रकारः, पौष्णं पेषणं विकृतौ** पूषदैवत्यायां **प्रतीयेत** । कुतः? **प्रकृतौ** दर्शपूर्णमासयागे पूष्णो**ऽचोदनाद**विधानादिति । एवमधिकरणशरीरं भाष्येऽभिधाय पूर्वन्यायेनैव अत्राप्युत्कर्षसिद्ध्या गतार्थत्वमाशङ्क्योत्तरविवक्षया पौष्णं पेषणमिति सूत्रं प्रस्तावितमित्युक्तम् । पूषदैवत्यस्य विकृतौ विनिवेश इत्यस्यासिद्धौ पूषदैवत्यविकृतिमात्रे वा चरुद्रव्यकपूषदैवत्यमात्रे वा इति विशेषचिन्ताया अनवसरादिति ॥

इत्यष्टादशं पौष्णपेषणस्य विकृतौ विनियोगाधिकरणम् ।

ಪರಿಪೂರ್ಣಚಂದ್ರಿಕಾ

जुहोति'' इति होमानुवादेन विधीयमानमभिक्रमणं प्राकरणिकसर्वहोमाङ्गमुत प्रयाजहोमाङ्गमिति संशये,

फलाभावेनेत्थंभावतिरोधानेनाङ्गानामित्थंभावाकाङ्क्षानुत्थानात्, उत्थाने वा तेषामव्यवस्थायाऽन्योन्याङ्गाङ्गिभावापत्तेः, प्रयाजानामवान्तरप्रकरणाभावात्, सन्निधेश्च दौर्बल्यात्, प्रकरणेन दर्शपौर्णमासभावनासम्बन्धात्तदीयसर्वहोमाङ्गमिति प्राप्ते,

''समानयत उपभृतः, यो वै प्रयाजानां मिथुनं वेद'' इत्यभितः प्रयाजसम्बन्धिनोऽभिक्रमणस्य अन्यत्रान्वयायोगात्, प्रयाजानामवान्तरप्रकरणसम्भवेनाव्यवस्थाप्रसङ्गाभावात्, प್ರबलेनावान्तरप्रकरणेन प्रयाजहोमाङ्गमिति सिद्धान्तितं, तद्वदित्यर्थः ।

ಕರ್ತೃಗುಣೇ ತು ಕರ್ಮಾಸಮವಾಯಾದ್ವಾಕ್ಯಭೇದಸ್ಸ್ಯಾತ್[1] (೩-೧-೯)

(१) भाट्टसङ्ग्रहः –

अथ दशममभिक्रमणादीनां प्रयाजमात्राङ्गताधिकरणम् (सूत्रे ११-२०)

भाष्याभिमतं वर्णकम्

**कर्तृगुणे तु कर्मासमवायाद्वाक्यभेदः स्यात् ॥ १९ ॥**

**(साकाङ्क्षं त्वेकवाक्यं स्यादसमाप्तं हि पूर्वेण ॥ २० ॥)**

अत्र पूर्ववैषम्येण शङ्कात्सङ्गतिः । दर्शपूर्णमासौ प्रकृत्य प्रयाजसमीपे श्रूयते 'अभिक्रामं जुहोत्यभिजित्यै' इति । तत्र अभिक्राममिति आभीक्ष्ण्ये णमुल् इति भृशार्थकणमुलन्तपदोक्तमाहवनीयस्याभितः सञ्चरणं किं प्रयाजकत्राऽन्वेति, उत कृत्स्नप्राकरणिककत्रेति सन्देहः । पूर्वपक्षस्तु युक्तं पूर्वत्र यूपश्रुतिवशात् प्रधानान्वयप्रकरणानुग्रहयोरनादरणम् । इह तु प्रधानान्वयानादरो न युक्तः । जुहोतिनोक्तप्रयाजक्रियया कारकस्यैवान्वयार्हतया अभिक्रमणरूपक्रियाया अमूर्तरूपायाः कारकत्वाभावेन तदन्वयायोगात्, वाक्यात् पृथग्भूतमभिक्रमणं प्रयाजादिकमिव प्रकरणेन दर्शपूर्णमासाङ्गतया गृहीतं सत् सामर्थ्याद्दर्शपूर्णमासकर्त्रा तत्संस्कारकतया अन्वेतीत्युपपत्तेरिति । तथा च सूत्रम्, **कर्तृगुणे** कर्तृसंस्काररूपे अभिक्रमणे विधेये सति **वाक्यभेदः स्यात्** तद्वाक्यगतजुहोतित्यागेन प्राकरणिककर्मान्वयात् भिन्नवाक्यता स्यात् । कुतः? अमूर्तत्वेन प्रकृत**कर्मासमवायादिति** । **सिद्धान्तस्तु** क्रियात्वेनाभिक्रमणस्य जुहोतिनोक्तप्रयाजरूपक्रियानन्वये दर्शपूर्णमासरूपप्रधानक्रियान्वयोपि न स्यात् । प्रकरणबलेन प्रधानान्वितं सत् तत्कर्तृसंस्कारद्वारा तदुपकारकं चेत् प्रयाजान्वयेऽपि तथा स्यात् । अतस्सन्निधिबलात् प्रयाजकर्त्रैवान्वेतीति ।

ಈ ಅಧಿಕರಣದಲ್ಲಿ "ಅಭಿಕ್ರಮಾನ್ ಜುಹೋತಿ" ಎಂಬ ವಾಕ್ಯವು ಕೇಳಿಸುತ್ತಿದೆ. ದರ್ಶಪೂರ್ಣಮಾಸ ಪ್ರಕರಣದ ಪ್ರಯಾಜ ಯಾಗದ ಸಮೀಪದಲ್ಲಿ ಈ ವಾಕ್ಯವು ಪ್ರಸಕ್ತವಾಗಿದೆ. ಈ ವಾಕ್ಯವು ಹೋಮವನ್ನು ಅನುವಾದ ಮಾಡುತ್ತಾ ಅಭಿಕ್ರಮಣವನ್ನು (ಪ್ರದಕ್ಷಿಣಾಕಾರವಾದ ಹೋಮವನ್ನು) ವಿಧಿಸುತ್ತಿದೆ. ಈ ಅಭಿಕ್ರಮಣವು ಆ ಪ್ರಕರಣದಲ್ಲಿ ಪ್ರಸಕ್ತವಾದ ಸಕಲ ಹೋಮಗಳಿಗೂ ಅಂಗವಾಗುತ್ತದೋ? ಅಥವಾ ಪ್ರಯಾಜ ಹೋಮಕ್ಕೆ ಮಾತ್ರ ಅಂಗವಾಗುತ್ತದೋ? ಎಂದು ಸಂಶಯ.

ಪೂರ್ವಪಕ್ಷ - ಪ್ರಕರಣದಲ್ಲಿರುವ ಸಕಲ ಹೋಮಗಳಿಗೂ ಸಹ ಇದು ಅಂಗವಾಗಿದೆಯೆಂದು ಹೇಳಬೇಕು. ಹೊರತು ಪ್ರಯಾಜ ಹೋಮಕ್ಕೆ ಮಾತ್ರ ಅಂಗವೆಂದು ಹೇಳಬಾರದು. ಏಕೆಂದರೆ ಎಲ್ಲಿ ಇತ್ಥಂಭಾವಾಕಾಂಕ್ಷೆಯು ಇರುತ್ತದೋ ಅಲ್ಲಿ ಮಾತ್ರ ಅಂಗಾಂಗಿಭಾವವನ್ನು ಹೇಳಬೇಕು. ಫಲವು ಯಾವ ವಾಕ್ಯದಲ್ಲಿ ಕೇಳಿಸುತ್ತದೋ ಅಂತಹ ಸ್ಥಳದಲ್ಲಿ ಮಾತ್ರ ಇತ್ಥಂಭಾವಾಕಾಂಕ್ಷೆ ಬರುತ್ತದೆ. ಅಂದರೆ ಸ್ವರ್ಗಾದಿಫಲಗಳು ದೊರೆಯುತ್ತವೆಂದು ಹೇಳಿದಾಗ ಅಂತಹ ಫಲವನ್ನು ದೊರಕಿಸುವ ಯಾಗವನ್ನು ಹೇಗೆ ಮಾಡಬೇಕೆಂದು ಆಕಾಂಕ್ಷೆಯು ಹುಟ್ಟುತ್ತದೆ ಎಂದರ್ಥ. ಆದರೆ ಅಂಗಯಾಗಗಳಲ್ಲಿ ಇತ್ಥಂಭಾವಾಕಾಂಕ್ಷೆಯು ಬರಲು ಸಾಧ್ಯವಿಲ್ಲ. ಏಕೆಂದರೆ ಪ್ರಧಾನ ಯಾಗದಲ್ಲಿ ಫಲವನ್ನು ಹೇಳಿರುತ್ತಾರೆ ಹೊರತು ಅಂಗಯಾಗದಲ್ಲಿ ಫಲವನ್ನು ಹೇಳಿರುವುದಿಲ್ಲ. ಪ್ರಕೃತ ಪ್ರಯಾಜ ಹೋಮವು ಅಂಗಯಾಗವಾದ್ದರಿಂದ ಫಲವು ಹೇಳಲ್ಪಟ್ಟಿಲ್ಲ. ಆದ್ದರಿಂದ ಇತ್ಥಂಭಾವಾಕಾಂಕ್ಷೆಯು ತಿರೋಹಿತವಾಗುತ್ತದೆ.

ಒಂದು ವೇಳೆ ಅಂಗಯಾಗಗಳಲ್ಲಿಯೂ ಇತ್ಥಂಭಾವಾಕಾಂಕ್ಷೆಯು ಹುಟ್ಟುವುದಾದರೆ ಅವ್ಯವಸ್ಥೆಯು ಉಂಟಾಗುತ್ತದೆ. ಅಂದರೆ ಯಾವ ಯಾಗಕ್ಕೆ ಯಾವ ಅಂಗವೆಂದು ಯಾವುದು ಅಂಗಿಯೆಂದು ತೀರ್ಮಾನಿಸುವುದೇ ಕಷ್ಟವಾಗುತ್ತದೆ.

ಮತ್ತು ಪ್ರಯಾಜ ಹೋಮಗಳನ್ನು ವಿಧಿಸುವ ವಾಕ್ಯವು ಅವಾಂತರ ಪ್ರಕರಣವೆಂದು ನಿರ್ಣಯಿಸಲು ಸಾಧ್ಯವಿಲ್ಲ. 'ಇಡೋ ಯಜತಿ' ಇತ್ಯಾದಿ ವಾಕ್ಯಗಳ ಸಮೀಪದಲ್ಲಿಯೇ 'ಅಭಿಕ್ರಾಮಾನ್ ಜುಹೋತಿ' ಎಂದು ಹೇಳಿರುವುದರಿಂದ ಅಭಿಕ್ರಮಣವು ಪ್ರಯಾಜ ಹೋಮದ ಅಂಗವೆಂದು ನಿರ್ಣಯಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಕೇವಲ ಸನ್ನಿಧಿ ಎಂಬ ಪ್ರಮಾಣವು ಪ್ರಕರಣಕ್ಕಿಂತ ದುರ್ಬಲವಾಗಿದೆ. ಸ್ಥಾನವೆಂಬ ಪ್ರಮಾಣವೇ ಸನ್ನಿಧಿಯೆಂದು ಮೀಮಾಂಸಕರು ಒಪ್ಪಿದ್ದಾರೆ. ಸ್ಥಾನಪ್ರಮಾಣವು ಪ್ರಕರಣಕ್ಕಿಂತ ದುರ್ಬಲವೇ ಆಗಿದೆ.

ಹೀಗೆ ಪ್ರಕರಣದ ಪ್ರಮಾಣದಿಂದ 'ದರ್ಶಪೂರ್ಣಮಾಸಾಭ್ಯಾಂ ಯಜೇತ' ಎಂಬಲ್ಲಿ ಕೇಳಿಸುತ್ತಿರುವ ದರ್ಶಪೂರ್ಣಮಾಸ ಭಾವನಾದಲ್ಲಿ ಸಂಬಂಧವನ್ನು ಹೇಳಬೇಕು. ಈ ಭಾವನಾವು ಸಫಲವಾಗಿದೆ. ಆದ್ದರಿಂದ ದರ್ಶಪೂರ್ಣಮಾಸಕ್ಕೆ ಸಂಬಂಧಿಸಿದ ಸಕಲ ಹೋಮಗಳಿಗೆ ಅಭಿಕ್ರಮಣವು ಅಂಗವಾಗುತ್ತದೆ.

ಸಿದ್ಧಾಂತ - ಅಭಿಕ್ರಮಣವು ಪ್ರಯಾಜ ಹೋಮಕ್ಕೆ ಮಾತ್ರ ಅಂಗವಾಗಿದೆ ಹೊರತು ದರ್ಶಪೂರ್ಣಮಾಸಯಾಗಗಳಿಗೆ ಸಂಬಂಧಿಸಿದ ಎಲ್ಲಾ ಹೋಮಗಳಿಗೆ ಅಂಗವಾಗಿರುವುದಿಲ್ಲ. ಏಕೆಂದರೆ

---

**एतच्च यथाभाष्यं वर्णकं ज्ञेयम् ।**

**इति दशमेऽधिकरणे भाष्यभिमतं वर्णकम्**

**ಪರಿಪೂರ್ಣಚಂದ್ರಿಕಾ**

"ಸಮಾನಯತ ಉಪಭೃತಃ, ಯೋ ವೈ ಪ್ರಯಾಜಾನಾಂ ಮಿಥುನಂ ವೇದ" ಇತ್ಯಾದಿಯಾಗಿ ಹಿಂದಿನ ಮುಂದಿನ ವಾಕ್ಯಗಳಲ್ಲಿ ಪ್ರಯಾಜಯಾಗವೇ ಪ್ರಸಕ್ತವಾಗಿದೆ. ಆದ್ದರಿಂದ ಇಂತಹ ಪ್ರಯಾಜ ಯಾಗದಲ್ಲಿಯೇ ಅಭಿಕ್ರಮಣವು ಅನ್ವಯವನ್ನು ಹೊಂದಿರುತ್ತದೆ ಹೊರತು ಬೇರೆಡೆ ಅನ್ವಯವನ್ನು ಹೊಂದುವುದಿಲ್ಲ. ಹಾಗಾದರೆ ಅವ್ಯವಸ್ಥಾಪ್ರಸಂಗದೋಷವು ಬರುತ್ತದಲ್ಲವೆ? ಎಂಬ ಶಂಕೆಗೂ ಅವಕಾಶವಿಲ್ಲ. ಪ್ರಯಾಜ ಯಾಗವನ್ನು ವಿಧಿಸುವ ಪ್ರಕರಣವು ಪ್ರತ್ಯೇಕವಾದ ಅವಾಂತರ ಪ್ರಕರಣವಾಗಿದೆ. ಆದ್ದರಿಂದ ಅವ್ಯವಸ್ಥೆಗೆ ಅವಕಾಶವಿಲ್ಲ. ಹೀಗೆ ಪ್ರಬಲವಾದ ಅವಾಂತರಪ್ರಕರಣವೆಂಬ ಪ್ರಮಾಣದಿಂದ ಅಭಿಕ್ರಮಣವು ಪ್ರಯಾಜ ಹೋಮದ ಅಂಗವೆಂದೇ ಹೇಳಬೇಕು.

ಇದರಂತೆ ಪ್ರಕೃತದಲ್ಲಿ ಸಂವತ್ಸರಸಾರತ್ವ, ಸ್ರಷ್ಟೃತ್ವಾದಿಗಳೆಲ್ಲವೂ ವಿಷ್ಣುವನ್ನು ಪ್ರತಿಪಾದಿಸುವ ಮೂಲಕ ಮಹಾಪ್ರಕರಣವೆನಿಸಿದ್ದರೂ 'ತತ್ತದತ್ತುಮಧ್ರಿಯತ' ಎಂಬ ವಾಕ್ಯವು ಅವಾಂತರ ಪ್ರಕರಣವಾಗಿದೆ. ಆದ್ದರಿಂದ ಅದಿತಿ ಶಬ್ದವು ಅದಿತಿದೇವಿಯನ್ನೇ ಪ್ರತಿಪಾದಿಸುತ್ತಿದೆ.

**प्रकाशः** – प्रकरणस्य वैष्णवत्वमभ्युपेत्योक्तं, इदानीं तदेव नेत्याह – **यद्वेति** ।

"स यद्यदेव" इति पुल्लिङ्गनिर्देशस्तु "पुंशक्तियोगाद्युज्यते" इति भाष्यादावेवोक्तम् । विवरिष्यते चाक्षरार्थोक्तिप्रस्ताव इति भावः ।

ಇಲ್ಲಿಯ ತನಕ ಸಂಪೂರ್ಣ ಪ್ರಕರಣಕ್ಕೆ ವಿಷ್ಣುಪರತ್ವವನ್ನು ಅಂಗೀಕರಿಸಿ ಅದಿತಿತ್ವಲಿಂಗವನ್ನು ಸಾವಕಾಶವೆಂದು ಹೇಳಿದರು. ಅದಿತಿಶ್ರುತಿಯನ್ನು ಅದಿತಿದೇವಿಯಲ್ಲಿ ಸಮರ್ಥಿಸಿದರು. ಪ್ರಕೃತ ಆ ಪ್ರಕರಣವೇ ವಿಷ್ಣುಪರವಲ್ಲವೆಂದು 'ಯದ್ವಾ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

ಅದಿತಿದೇವಿಯೇ ಪ್ರತಿಪಾದ್ಯಳಾದರೆ "ಸ ಯದ್ಯದೇವ' ಎಂಬುದಾಗಿ ಪುಲ್ಲಿಂಗ ಪ್ರಯೋಗವು ತಪ್ಪಾಗುತ್ತದಲ್ಲವೇ? ಎಂದು ಶಂಕಿಸಬಾರದು. ಅದಿತಿದೇವಿಯಲ್ಲಿ ಸೃಷ್ಟಿಕರ್ತೃತ್ವ, ಸಂಹಾರಕರ್ತೃತ್ವವೆಂಬ ಪುಂಶಕ್ತಿಗಳಿರುವುದರಿಂದ ಪುಲ್ಲಿಂಗಪ್ರಯೋಗವು ಅವಳಲ್ಲಿಯೂ ಕೂಡುತ್ತದೆ. ಪುಂಶಕ್ತಿಯಿರುವ ಕಡೆ ಪುಲ್ಲಿಂಗಪ್ರಯೋಗವು ತಪ್ಪಲ್ಲವೆಂದು ಭಾಷ್ಯಾದಿಗಳಲ್ಲೇ ಹೇಳಿದ್ದಾರೆ. ಗ್ರಂಥಕಾರರೂ ಸಹ ಟೀಕೆಯ ಕಠಿಣಪದಾರ್ಥವನ್ನು ಹೇಳುವ ಸಂದರ್ಭದಲ್ಲಿ ಮುಂದೆ ವಿವರಿಸುತ್ತಾರೆ.

**गुरुराजीयम्** – नन्वेवमदितिशब्दस्य प्रसिद्धादितिपरत्वे सर्वात्तृत्वानुपपत्तिरित्यतः सुधानुसारेण सर्वशब्दार्थमाह – **श्रुताविति** ।। सर्वं वा अत्तीति श्रुतावित्यर्थः ।

नन्वेवं सर्वशब्दस्यादित्यदनयोग्यसर्वपरत्वे सङ्कोचितत्वं स्यात् । तच्चायुक्तम् । असङ्कुचितार्थसम्भवे तत्परित्यागेन सङ्कुचितार्थकल्पनस्यायुक्तत्वादित्यत आह – **स्वीकृतश्चेति** । टीकानुसारेण सर्वशब्दार्थमाह –

**यद्वेति** ।। अत्र चाद्यः पक्ष इति । अदित्यदनयोग्यसर्वपर एव श्रुतिस्थः सर्वशब्द इत्याद्यः पक्ष इत्यर्थः ।। **द्वितीय इति** ।। श्रुतिबलाददितेरेवासङ्कुचित-सर्वात्तृत्वमिति द्वितीय इत्यर्थः । आद्यपक्षेऽप्यदित्यदनयोग्यसर्वपर एव सर्वशब्द इति पूर्वपक्षेऽपीत्यर्थः ।। **अदितेरिति** ।। अयं भावः – किमत्र सर्वसंहर्तृत्वमीश्वरलक्षणमुत कतिपयसंहर्तृत्वम् । नाद्यः । अदित्या संहरणीयवस्तुसंहर्त्तृत्वाभावेनासम्भवात् । न द्वितीयः । कतिपय-संहर्तृत्वस्यादितावपि सद्भावेनातिव्याप्तत्वात् । आद्यपक्षेऽप्यति-व्याप्त्युक्तिरुपपद्यत इति ।

ननु टीकायां संहर्तृत्वापरपर्यायवाच्यमत्तृत्वमित्युक्तम् । तत्कथमित्यत स्तदुपपादयितुं शङ्कते – **नचेति** ।। पक्षद्वयं प्रागुक्तम् । द्वितीयसूत्रोक्तं हेतुमन्यथयति – **नैवेहेति** ।। ननु च दर्शपूर्णमासप्रकरणात् पूष्णश्चातुर्मास्येषूत्कर्षः सम्भवति । अत्र च तददितेरदितित्वमित्यादेः कुत्रोत्कर्षः स्थानाभावादित्यत आह – **अथवेति** ।।

नन्वभिक्रमणस्यावान्तरप्रकरणं च तस्य प्रयाजादिविषयैर्वाक्यैः पूर्वं पश्चाच्च सन्दृष्टत्वात् । अत्र तदभावात्कथमवान्तरप्रकरणत्वमित्यरुचेराह – **यद्वेति** ।।




ಸರ್ವಾತ್ತೃತ್ವ ಹಾಗೂ ವಿಷ್ಣುಪ್ರಕರಣ ಎಂಬುದು ವಿಷ್ಣುವೇ ಅದಿತಿಶಬ್ದವಾಚ್ಯನಾಗಿದ್ದಾನೆನ್ನಲು ಪ್ರಮಾಣಗಳಾಗಿವೆಯೆಂದು ಹೇಳಬೇಕು. ಆದರೆ ಸರ್ವಾತ್ತೃತ್ವವೆಂಬ ವಿಷ್ಣುಲಿಂಗ ಅದಿತಿದೇವಿಯಲ್ಲಿ ಸಾವಕಾಶವಾಗಿದೆ. ಪ್ರಕರಣವು ನಿರವಕಾಶವಾದರೂ ಅಥವಾ ಸಾವಕಾಶವಾದರೂ ಅದಿತಿಯೇ ಅದಿತಿಶಬ್ದವಾಚ್ಯಳಾಗುತ್ತಾಳೆ.

ಸರ್ವಾತ್ತೃತ್ವವು ಏಕೆ ಸಾವಕಾಶವೆಂದರೆ ಸರ್ವಶಬ್ದದ ಅರ್ಥಕ್ಕೆ ಸಂಕೋಚ ಮಾಡುವುದು ಅನಿವಾರ್ಯ. ತನಗೆ ಯೋಗ್ಯವಾದ ಸಕಲ ಪದಾರ್ಥಗಳನ್ನು ಅದಿತಿ ದೇವಿ ತಿನ್ನುತ್ತಾಳೆನ್ನಬಹುದು. ಅಥವಾ ಸರ್ವಶಬ್ದದ ಅರ್ಥವನ್ನು ಸಂಕೋಚ ಮಾಡದಿದ್ದರೂ ಸಕಲ ಪದಾರ್ಥಗಳ ಅತ್ತೃತ್ವವನ್ನು ಅದಿತಿದೇವಿಯಲ್ಲಿ ಹೇಳಬಹುದು. ಇದರಿಂದ ಸರ್ವಸಂಹರ್ತೃತ್ವವೆಂಬ ವಿಷ್ಣುವಿನ ಲಕ್ಷಣವು ಅಸಂಭವದೋಷಗ್ರಸ್ತವಾಗಿದೆಯೆಂದು ತಿಳಿಯುತ್ತದೆ.

ಪರಿಪೂರ್ಣಚಂದ್ರಿಕಾ

'ಅದ ಭಕ್ಷಣೇ' ಎಂಬ ಧಾತುವಿನಿಂದ 'ಅತ್ತಾ' ಎಂಬ ರೂಪವು ನಿಷ್ಪನ್ನವಾಗಿದೆ. ಇದರಿಂದ ಎಲ್ಲವನ್ನು ತಿನ್ನುತ್ತಾಳೆಂಬ ಅರ್ಥವನ್ನು ಹೇಳಬಹುದು ಹೊರತು, ಎಲ್ಲವನ್ನು ಸಂಹಾರ ಮಾಡುತ್ತಾಳೆಂಬುದನ್ನು ಹೇಗೆ ಹೇಳುತ್ತೀರಿ? ಎಂಬುದು ಮುಂದಿನ ಪ್ರಶ್ನೆ. ಆದರೆ ಒಂದು ವಸ್ತುವನ್ನು ತಿನ್ನುವುದೆಂದರೆ ಅದನ್ನು ಸಂಹಾರ ಮಾಡುವುದು ಎಂದೇ ಅರ್ಥ. ಆದ್ದರಿಂದ ಅತ್ತೃತ್ವ ಹಾಗೂ ಸಂಹರ್ತೃತ್ವ ಎಂಬೆರಡು ಪದಗಳು ಪರ್ಯಾಯಶಬ್ದಗಳಾಗಿವೆ. ಅಥವಾ ಭಕ್ಷಣಾರ್ಥದಲ್ಲಿ ಅದ ಧಾತುವು ಪ್ರಸಿದ್ಧವಾದಂತೆ ಸಂಹಾರ ಎಂಬರ್ಥದಲ್ಲಿಯೂ ಅದ ಧಾತುವು ಪ್ರಸಿದ್ಧವಾಗಿದೆ.

ಸಮಗ್ರ ಪ್ರಕರಣವು ವಿಷ್ಣು ಪರವಾದ್ದರಿಂದ 'ತತ್ತದತ್ತುಮಧ್ರಿಯತ' ಎಂಬ ವಾಕ್ಯವು ವಿಷ್ಣುವನ್ನೇ ಹೇಳಬೇಕಲ್ಲವೇ? ಎಂಬ ಪ್ರಶ್ನೆಗೂ ಈಗ ಅವಕಾಶವಿಲ್ಲ. ಏಕೆಂದರೆ ಮಹಾಪ್ರಕರಣವು ವಿಷ್ಣುಪರವಾಗಿದ್ದರೂ 'ತತ್ತದತ್ತುಮಧ್ರಿಯತ' ಎಂಬುದು ಅವಾಂತರ ಪ್ರಕರಣವಾಗಿದೆ. ಈ ಅವಾಂತರ ಪ್ರಕರಣವು ಅದಿತಿದೇವಿಯನ್ನು ಪ್ರತಿಪಾದಿಸಲು ತೊಂದರೆ ಇಲ್ಲ. ಏಕೆಂದರೆ ಪ್ರಕರಣ ಪ್ರಮಾಣಕ್ಕಿಂತ ಶ್ರುತಿಲಿಂಗಗಳು ಬಲಿಷ್ಠವಾದ ಪ್ರಮಾಣಗಳಾಗಿವೆ. ಅಥವಾ ಈ ಬಲಿಷ್ಠವಾದ ಶ್ರುತಿಲಿಂಗಪ್ರಮಾಣಗಳಿಂದಲೇ ಸಂಪೂರ್ಣ ಮಹಾಪ್ರಕರಣವೂ ಸಹ ಅದಿತಿದೇವಿಯನ್ನೇ ಪ್ರತಿಪಾದಿಸುತ್ತದೆ.

ಈ ಎಲ್ಲಾ ಕಾರಣಗಳಿಂದ 'ತತ್ತದತ್ತುಮಧ್ರಿಯತ' ಎಂಬ ವಿಷಯವಾಕ್ಯದಿಂದ ಪ್ರತಿಪಾದ್ಯಳಾದವಳು ಅದಿತಿದೇವಿಯೇ ಹೊರತು ಮಹಾವಿಷ್ಣುವಲ್ಲ. ಇಲ್ಲಿಗೆ ಪೂರ್ವಪಕ್ಷವು ಸಮಾಪ್ತವಾಯಿತು.

• • • • •

## ಸರ್ವಾತ್ತೃತ್ವ ವಿಷ್ಣುವಿನಲ್ಲಿ ಮಾತ್ರವೆಂದು ಸಿದ್ಧಾಂತ

### तात्पर्यचन्द्रिका

सिद्धान्तस्तु ॥

सर्वात्तृत्वादिकं नैव विष्णोरन्यस्य युज्यते ।
विष्णावदितिशब्दस्तु श्रुतः श्रुत्यन्तरे स्फुटम् ॥
नच बाधं विना सर्वशब्दस्सङ्कोचमर्हति ।
पूषादिवच्च नात्रास्ति बाधो येनापकर्षणम् ॥
अवान्तरप्रक्रिया तु सन्दंशात्कल्प्यते स च ।
अभिक्रामं जुहोतीति वाक्येऽस्ति प्रकृते तु न ॥

भाष्योक्तश्रुत्यादिना सर्वात्तृत्वं निरवकाशम् । अन्वाख्यानपक्षेऽपि देवमातरि रूढिबाधार्थमिह सर्वात्तृत्वमेवादितिशब्दप्रवृत्तिनिमित्तमिति श्रुत्या स्वयमेवोक्तत्वाद-

दितिश्रुतिरदितित्वलिङ्गं च विष्णावेव मुख्यम् । न चाबाधे श्रुत्युक्तं निमित्तं त्यागार्हम् ।

''अनश्नन्'' इत्यादेस्तूत्तराधिकरणे गतिर्वक्ष्यते ।

''यदेनमधिनोत्तद्धो दधित्वं'' इत्यादि तु यदि प्रसिद्धदधिविषयं, तर्हि जातिनिमित्तकस्य दधिशब्दस्येदमन्वाख्यानमात्रम् । यदि त्वप्रसिद्धविषयं तर्ह्यबाधात् निमित्तपरमेव । युक्ता चादितिशब्दस्य ''अदितिर्हीदं सर्वम् यदिदं किञ्च'' ''अदितिर्देवतामयि'' इत्यादौ ब्रह्मणि प्रयोगात्तत्र निमित्ताकाङ्क्षा । नहि लौकिकप्रयोग एव निमित्ताकाङ्क्षा, ''यदाजिमीयुस्तदाज्यानामाज्यत्वम्'' इत्यादावदर्शनात् ।

ಅನುವಾದ - ಸಿದ್ಧಾಂತ ಹೀಗಿದೆ -

ಸರ್ವಾತ್ಮತ್ವಾದಿಕಂ ನೈವ ವಿಷ್ಣೋರನ್ಯಸ್ಯ ಯುಜ್ಯತೇ ।
ವಿಷ್ಣಾವದಿತಿಶಬ್ದಸ್ತು ಶ್ರುತಃ ಶ್ರುತ್ಯಂತರೇ ಸ್ಫುಟಮ್ ॥

ಸರ್ವಾತ್ಮತ್ವವೆಂಬ ಲಿಂಗವು ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ಯುಕ್ತವಾಗುವುದಿಲ್ಲ. ಮತ್ತು ವಿಷ್ಣುವಿನಲ್ಲಿ ಅದಿತಿಶಬ್ದವು ಪ್ರಯುಕ್ತವಾಗಿದೆಯೆಂದು ಬೇರೊಂದು ಶ್ರುತಿಯಿಂದ ಸ್ಪಷ್ಟವಾಗುತ್ತದೆ.

ನಚ ಬಾಧಂ ವಿನಾ ಸರ್ವಶಬ್ದಸ್ಸಂಕೋಚಮರ್ಹತಿ ।
ಪೂಷಾದಿವಚ್ಚ ನಾತ್ರಾಸ್ತಿ ಬಾಧೋ ಯೇನಾಪಕರ್ಷಣಮ್ ॥

ಬಾಧಕವಿಲ್ಲದೆ ಸರ್ವಶಬ್ದಕ್ಕೆ ಸಂಕೋಚವನ್ನು ಮಾಡಬಾರದು. ಪೂಷಾದಿದೃಷ್ಟಾಂತದಲ್ಲಿ ಬಾಧಕವಿದ್ದಂತೆ ಇಲ್ಲಿ ಬಾಧಕವಿಲ್ಲದ ಕಾರಣ ಮತ್ತೊಂದೆಡೆ ಅಪಕರ್ಷ ಮಾಡಬೇಕಾಗಿಲ್ಲ.

ಅವಾಂತರಪ್ರಕ್ರಿಯಾ ತು ಸಂದಂಶಾತ್ಕಲ್ಪ್ಯತೇ ಸ ಚ ।
ಅಭಿಕ್ರಾಮಂ ಜುಹೋತೀತಿ ವಾಕ್ಯೇಽಸ್ತಿ ಪ್ರಕೃತೇ ತು ನ ॥

ಅವಾಂತರ ಪ್ರಕರಣವೆಂದು ಪೂರ್ವೋತ್ತರ ವಾಕ್ಯಗಳ ಪರಾಮರ್ಶದಿಂದ ನಿರ್ಣಯಿಸಬೇಕು. 'ಅಭಿಕ್ರಾಮಂ ಜುಹೋತಿ' ಎಂಬಲ್ಲಿ ಹಾಗೆ 'ಸಂದಂಶ' ಇರುವುದರಿಂದ ಅವಾಂತರ ಪ್ರಕರಣವೆಂದು ಹೇಳಬಹುದು. ಆದರೆ ಪ್ರಕೃತದಲ್ಲಿ ಸಂದಂಶ ಇರುವುದಿಲ್ಲ.

ಭಾಷ್ಯದಲ್ಲಿ ಉದಾಹರಿಸಿದ ಶ್ರುತ್ಯಾದಿಗಳ ಆಧಾರದಿಂದ ಸರ್ವಾತ್ಮತ್ವವು ನಿರವಕಾಶವೆಂದು ನಿಶ್ಚಯವಾಗುತ್ತದೆ. ಅನ್ವಾಖ್ಯಾನಪಕ್ಷದಲ್ಲಿಯೂ ಸಹ ವಿಷ್ಣುವಿನಲ್ಲೇ ಅದಿತಿಶಬ್ದವು ಮುಖ್ಯವಾಗಿದೆ.

ದೇವಮಾತೆಯಾದ ಅದಿತಿದೇವಿಯಲ್ಲಿರುವ ರೂಢಿಯನ್ನು ಬಾಧಿಸುವುದಕ್ಕಾಗಿಯೇ ಸರ್ವಾತ್ಮತ್ವವೆಂಬ ಅದಿತಿಶಬ್ದದ ಪ್ರವೃತ್ತಿನಿಮಿತ್ತವನ್ನು ಶ್ರುತಿಯು ಸ್ವತಃ ಹೇಳುತ್ತಿದೆ. ಆದ್ದರಿಂದ ಅದಿತಿಶ್ರುತಿ ಹಾಗೂ ಅದಿತಿತ್ವಲಿಂಗಗಳು ವಿಷ್ಣುವಿನಲ್ಲೇ ಮುಖ್ಯವಾಗಿವೆ. ಬಾಧಕವಿಲ್ಲದಿದ್ದರೂ ಶ್ರುತಿಯಲ್ಲಿ ಹೇಳಲ್ಪಟ್ಟ ಪ್ರವೃತ್ತಿನಿಮಿತ್ತವನ್ನು ಬಿಡುವುದು ಯೋಗ್ಯವಲ್ಲ.

ಅದಿತಿಶಬ್ದದಿಂದ ವಿಷ್ಣುವು ವಾಚ್ಯನಾದರೆ 'ಅನಶ್ನನ್' ಎಂಬ ಶ್ರುತಿಯಿಂದ ವಿರೋಧ ಬರುತ್ತದಲ್ಲವೇ? ಎಂಬ ಪೂರ್ವಪಕ್ಷಕ್ಕೆ ಈಗ ಅವಕಾಶವಿಲ್ಲ. ಮುಂದಿನ ಗುಹಾಧಿಕರಣದಲ್ಲಿ 'ಅನಶ್ನನ್' ಎಂಬ ಶ್ರುತಿಗೆ ಗತಿಯನ್ನು ಹೇಳುತ್ತೇವೆ.

''ಯದೇನಮಧಿನೋತ್ತದ್ದಧ್ನೋ ದಧಿತ್ವಂ' ಎಂಬಲ್ಲಿರುವ ದಧಿ ಪದವು ಪ್ರಸಿದ್ಧವಾದ ದಧಿ ವಿಷಯಕವಾದರೆ ಆವಾಗ ಜಾತಿನಿಮಿತ್ತಿಕವಾದ ದಧಿ ಶಬ್ದಕ್ಕೆ ಇದು ಕೇವಲ ಅನ್ವಾಖ್ಯಾನ ರೂಪವಾಗುತ್ತದೆ. ಒಂದುವೇಳೆ ಅಪ್ರಸಿದ್ಧವಾದ ದಧಿವಿಷಯಕವಾದರೆ ಆವಾಗ ಬಾಧವಿಲ್ಲದ ಕಾರಣ ಪ್ರವೃತ್ತಿನಿಮಿತ್ತಪರವಾಗುತ್ತದೆ. ಪ್ರಕೃತ ಅದಿತಿಶಬ್ದಕ್ಕೆ ''ಅದಿತಿರ್ಹೀದಂ ಸರ್ವಮ್ ಯದಿದಂ ಕಿಂಚ'' ''ಅದಿತಿರ್ದೇವತಾಮಯಿ'' ಇತ್ಯಾದಿ ಬ್ರಹ್ಮನಲ್ಲಿ ಪ್ರಯೋಗವಿರುವುದರಿಂದ ಅಲ್ಲಿ ನಿಮಿತ್ತಾಕಾಂಕ್ಷೆಯು ಯುಕ್ತವಾಗುತ್ತದೆ. ಲೌಕಿಕ ಪ್ರಯೋಗವೇ ಆಕಾಂಕ್ಷೆಗೆ ನಿಮಿತ್ತವಲ್ಲ. ''ಯದಾಜಿಮೀಯುಸ್ತದಾಜ್ಯಾನಾಮಾಜ್ಯತ್ವಮ್'' ಇತ್ಯಾದಿ ಸ್ಥಳದಲ್ಲಿ ಈ ವಿಷಯವು ಸ್ಪಷ್ಟವಾಗಿದೆ.

**प्रकाशः —**

''सन्दिग्धश्रुतिलिङ्गाभ्यां निश्चितलिङ्गप्रकरणयोरेव बलवत्त्वम्'' इति न्यायविवरणं हृदि कृत्वा भाष्यटीकयोरुक्ते पूर्वपक्षसिद्धान्तप्रापकयोस्सावकाशत्वनिरवाकशत्वे सङ्गृह्णाति – **सर्वेति** । आदिपदेन प्रकरणम् ।

ಸಿದ್ಧಾಂತವನ್ನು ಮಾಡುತ್ತಿದ್ದಾರೆ. ಸಂದಿಗ್ಧವಾದ ಶ್ರುತಿಲಿಂಗಗಳಿಂದ ನಿಶ್ಚಿತವಾದ ಲಿಂಗಪ್ರಕರಣಗಳೇ ಬಲಿಷ್ಠವಾಗಿವೆ ಎಂಬ ನ್ಯಾಯವಿವರಣವನ್ನು ಮನಸ್ಸಿನಲ್ಲಿಟ್ಟುಕೊಂಡು ಭಾಷ್ಯ ಹಾಗೂ ಟೀಕೆಗಳಲ್ಲಿ ಹೇಳಲ್ಪಟ್ಟ ಪೂರ್ವಪಕ್ಷ ಹಾಗೂ ಸಿದ್ಧಾಂತಗಳಿಗೆ ಸಾವಕಾಶತ್ವ ಮತ್ತು ನಿರವಕಾಶತ್ವಗಳನ್ನು ಶ್ಲೋಕದ ಮೂಲಕ ಸಂಗ್ರಹಿಸುತ್ತಿದ್ದಾರೆ 'ಸರ್ವ' ಇತ್ಯಾದಿಯಾಗಿ. ಆದಿಪದದಿಂದ ಪ್ರಕರಣವನ್ನು ಸ್ವೀಕರಿಸಬೇಕು.

**प्रकाशः** – अत्रैवं ध्येयं – अत्ता विष्णुरेव, ''सर्वं वा अत्ति'' इत्यद्यतया चारचराख्यसर्वस्य ग्रहणात् । ''नैवेह किञ्चन'' इति विष्णुप्रकरणाच्च । ताभ्यामादितिश्रुतिलिङ्गायोर्बाधात् ।

**नच ते सावकाशे, श्रुतिलिङ्गे तु निरवकाशे इत्युक्तमिति वाच्यं, यतस्सर्वात्तृत्वादिकमिति सम्बध्यत इति । श्रुतेः सावकाशत्वोक्त्यैव तच्छब्दप्रवृत्ति-निमित्तस्यादितित्वलिङ्गस्यापि तत्सिद्धमिति 'अदितिशब्दस्तु' इत्येवोक्तम् ।**

ಶ್ಲೋಕದ ಅಭಿಪ್ರಾಯ ಹೀಗಿದೆ - ಅದನ ಕರ್ತೃವಾದವನು ವಿಷ್ಣುವೇ ಆಗಿದ್ದಾನೆ. ''ಸರ್ವಂ ವಾ ಅತ್ತಿ'' ಎಂಬುದಾಗಿ ಚರಾಚರ ಸಕಲ ಪದಾರ್ಥಗಳನ್ನು ತಿನ್ನುತ್ತಾನೆಂದು ಹೇಳಿರುವುದರಿಂದ ಮತ್ತು ''ನೈವೇಹ ಕಿಂಚನ'' ಎಂದು ವಿಷ್ಣುಪ್ರಕರಣವಾಗಿರುವುದರಿಂದ ವಿಷ್ಣುವೇ ಸಕಲಭಕ್ಷಕನು. ಇಂತಹ ಲಿಂಗ ಹಾಗೂ ಪ್ರಕರಣಗಳ ಬಲದಿಂದ ಅದಿತಿಶ್ರುತಿ ಅದಿತಿತ್ವ ಲಿಂಗಗಳು ಬಾಧಿತವಾಗುತ್ತವೆ.

ವಿಷ್ಣುವಿನ ಲಿಂಗ ಹಾಗೂ ಪ್ರಕರಣಗಳು ಸಾವಕಾಶವಾಗಿವೆ. ಅದಿತಿಶ್ರುತಿ ಹಾಗೂ ಅದಿತಿತ್ವ ಲಿಂಗಗಳು ನಿರವಕಾಶವಾಗಿದೆಯೆಂದು ಈ ಹಿಂದೆ ಹೇಳಿದ್ದೇವಲ್ಲವೇ ? ಎಂದು ಹೇಳಬಾರದು. ಏಕೆಂದರೆ ಸರ್ವಾತ್ತೃತ್ವದ ಸಂಬಂಧವು ವಿಷ್ಣುವಿನಲ್ಲಷ್ಟೇ ಕೂಡುತ್ತದೆ. ಅದಿತಿಶ್ರುತಿಗೆ ಸಾವಕಾಶತ್ವವನ್ನು ಹೇಳಿದ್ದರಿಂದಲೇ ಅದಿತಿಶ್ರುತಿಗೆ ಪ್ರವೃತ್ತಿನಿಮಿತ್ತವಾದ ಅದಿತಿತ್ವಲಿಂಗಕ್ಕೂ ಸಹ ಸಾವಕಾಶತ್ವವನ್ನು ಹೇಳಿದಂತಾಗುತ್ತದೆ. ಈ ಅಭಿಪ್ರಾಯದಿಂದಲೇ 'ಅದಿತಿಶಬ್ದಸ್ತು' ಎಂದಷ್ಟೇ ಹೇಳಿದ್ದಾರೆ ಹೊರತು ಲಿಂಗವನ್ನು ಪ್ರತ್ಯೇಕವಾಗಿ ಹೇಳಿರುವುದಿಲ್ಲ.

**प्रकाशः – ननु सर्वशब्दसङ्कोचेन अदितावपि लिङ्गं युक्तमित्यतः, सूत्रे 'चराचर' इति श्रौतसर्वशब्दाथोक्त्या सूचितमाह – नच बाधं विनेति ।**

**या तु प्रकरणदुत्कर्षोक्तिस्तत्राह – पूषादीति । यदप्यभिक्रमणदृष्टान्तेनावान्तर-प्रकरणकल्पनं, तद्वैषम्यमाह – अवान्तरेति । 'स च' सन्दंशः । पूर्वार्धं व्यनक्ति – भाष्येति ।**

ಸರ್ವಶಬ್ದಕ್ಕೆ ಸಂಕೋಚ ಮಾಡುವ ಮೂಲಕ ಲಿಂಗವನ್ನು ಸಾವಕಾಶ ಮಾಡಬಹುದಲ್ಲವೇ? ಎಂಬ ಪ್ರಶ್ನೆಗೆ ಸೂತ್ರದಲ್ಲಿ ಚರಾಚರ ಪದದಿಂದ ಶ್ರುತಿಯಲ್ಲಿರುವ ಸರ್ವಶಬ್ದವನ್ನು ವ್ಯಾಖ್ಯಾನಿಸಿದ್ದಾರೆ. ಇದರಿಂದ ಸರ್ವಾತ್ತೃತ್ವಲಿಂಗವನ್ನು ಸಂಕೋಚ ಮಾಡಲಾಗದೆಂದು ಸೂಚಿಸಿದಂತಾಗುತ್ತದೆ. ಈ ವಿಷಯವನ್ನೇ ಗ್ರಂಥದಲ್ಲಿ 'ನಚ ಬಾಧಂ ವಿನಾ' ಇತ್ಯಾದಿಯಾಗಿ ನಿರೂಪಿಸುತ್ತಿದ್ದಾರೆ.

ಪೂರ್ವಪಕ್ಷ ಮಾಡುವಾಗ ಪ್ರಕರಣಕ್ಕಿಂತ ಶ್ರುತಿಲಿಂಗಗಳಿಗೆ ಉತ್ತಮತ್ವವನ್ನು ಹೇಳಿದ್ದರು. ಅದಕ್ಕೆ ಉತ್ತರಿಸುವುದಕ್ಕಾಗಿ 'ಪೂಷಾದಿವತ್' ಇತ್ಯಾದಿ ವಾಕ್ಯವು ಹೊರಟಿದೆ. ಅಭಿಕ್ರಮಣದ ದೃಷ್ಟಾಂತದಿಂದ ಅವಾಂತರ ಪ್ರಕರಣವೆಂದು ಪೂರ್ವಪಕ್ಷದಲ್ಲಿ ಕಲ್ಪಿಸಿದ್ದರು. ಅದನ್ನು ಪ್ರಕೃತ ವಿಷಮದೃಷ್ಟಾಂತವೆಂದು 'ಅವಾಂತರ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. 'ಸಚ' ಎಂಬ ಪದಕ್ಕೆ 'ಸಂದಂಶ' ಎಂದರ್ಥ. ಶ್ಲೋಕದ ಪೂರ್ವಾರ್ಧವನ್ನೇ ಭಾಷ್ಯ ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ.

ಪರಿಪೂರ್ಣಚಂದ್ರಿಕಾ

**प्रकाशः** – ''एकः पुरस्तात्'' इत्यादिश्रुत्या ''स्रष्टा पाता'' इति स्मृत्या चेत्यर्थः ।

ननूक्तमत्र प्रसिद्धार्थ एवेत्यादि, तत्राह – **अन्वाख्यानेति** । अदितिशब्दव्युत्पादनपक्षेऽपीत्यर्थः । प्रसिद्धादितिपरत्वत्यागेनापूर्वार्थस्वीकारायैव सर्वमत्तीति सर्वात्तृत्वरूपप्रवृत्तिहेतुकथनादित्यर्थः ।

एतेन ''सर्वं वा अत्ति'' इति यतस्सर्वात्तृत्वरूपमदितेरदितिशब्दार्थस्य विष्णोरदितित्वमदितिशब्दप्रवृत्तिनिमित्तमिति श्रुत्यर्थ उक्तो भवति ।

''ಏಕಃ ಪುರಸ್ತಾತ್'' ಎಂಬ ಶ್ರುತಿಯಿಂದ ''ಸ್ರಷ್ಟಾ ಪಾತಾ'' ಎಂಬ ಸ್ಮೃತಿಯಿಂದ ಸರ್ವಾತ್ತೃತ್ವವು ನಿರವಕಾಶವಾದ ವಿಷ್ಣುಲಿಂಗವಾಗಿದೆಯೆಂದು ತಿಳಿಯುತ್ತದೆ.

ಅದಿತಿಶಬ್ದಕ್ಕೆ ಪ್ರಸಿದ್ಧಾರ್ಥವನ್ನೇ ಸ್ವೀಕರಿಸಬೇಕೆಂದು ಈ ಹಿಂದೆ ಉತ್ತರಿಸಿದ್ದೇವಲ್ಲವೇ? ಎಂಬ ಪ್ರಶ್ನೆಗೆ 'ಅನ್ವಾಖ್ಯಾನಪಕ್ಷೇಪಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಅನ್ವಾಖ್ಯಾನಪಕ್ಷೇಪಿ' ಎಂದರೆ ಅದಿತಿ ಶಬ್ದಕ್ಕೆ ವ್ಯುತ್ಪತ್ತಿಯನ್ನು ಹೇಳುವ ಪಕ್ಷದಲ್ಲಿ ಎಂದರ್ಥ. ಅದಿತಿದೇವಿಯಲ್ಲಿ ಲೋಕರೂಢಿಯು ಇರಬಹುದು ಆದರೆ ಅಂತಹ ರೂಢ್ಯರ್ಥವನ್ನು ಬಿಟ್ಟು ಅಪೂರ್ವಾರ್ಥವನ್ನು ಸ್ವೀಕರಿಸಬೇಕೆಂಬ ಕಾರಣದಿಂದಲೇ ಶ್ರುತಿಯಲ್ಲಿ 'ಸರ್ವಂ ವಾ ಅತ್ತಿ' ಎಂಬುದಾಗಿ ಸರ್ವಾತ್ತೃತ್ವರೂಪವಾದ ಪ್ರವೃತ್ತಿನಿಮಿತ್ತವನ್ನು ಹೇಳಲಾಗಿದೆ.

ಹೀಗೆ ಹೇಳಿದ್ದರಿಂದ ''ಸರ್ವಂ ವಾ ಅತ್ತಿ'' ಎಂಬ ಶ್ರುತಿಯನ್ನು ವ್ಯಾಖ್ಯಾನಿಸಿದಂತಾಯಿತು - ಅದಿತಿಶಬ್ದಾರ್ಥನಾದ ವಿಷ್ಣುವಿನಲ್ಲಿ ಅದಿತಿಶಬ್ದದ ಪ್ರವೃತ್ತಿನಿಮಿತ್ತವಾದ ಅದಿತ್ವವು ಇರುತ್ತದೆಂದು.

**प्रकाशः** – ननु श्रुतौ सर्वात्तृत्वरूपनिमित्तोक्तावपि न तन्निमित्तेन विष्णौ यौगिकत्वं युक्तं, किन्तु जातिनिमित्तक एवायं, दधिशब्दे तथा दर्शनेन रूढेर्बलवत्त्वादित्यत आह – **नचेति** । ''कम्पनात् इत्यत्राज्ञरूढितो वैदिकयोगबलवत्ताया वक्ष्यमाणत्वादिति भावः ।

ಆಕ್ಷೇಪ - ಶ್ರುತಿಯಲ್ಲಿ ಸರ್ವಾತ್ತೃತ್ವವೆಂಬ ಪ್ರವೃತ್ತಿನಿಮಿತ್ತವನ್ನು ಹೇಳಿರಬೇಕು. ಈ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿ ವಿಷ್ಣುವಿನಲ್ಲಿ ಅದಿತಿ ಶಬ್ದವು ಯೌಗಿಕವಾಗಿದೆ. ಆದ್ದರಿಂದ ರೂಢ್ಯರ್ಥವನ್ನು ಸ್ವೀಕರಿಸಬಾರದು ಎಂಬುದಾಗಿ ನೀವು ಹೇಳುತ್ತಿದ್ದೀರಿ. ಇದು ಸರಿಯಲ್ಲ. ಹೊರತಾಗಿ ಅದಿತಿಶಬ್ದವು ಅದಿತಿತ್ವ ಎಂಬ ಜಾತಿನಿಮಿತ್ತಿಕವಾದ ಶಬ್ದವಾಗಿದೆ. ಯಾವರೀತಿಯಾಗಿ ದಧಿತ್ವವು ದಧಿ ಶಬ್ದದ ಪ್ರವೃತ್ತಿನಿಮಿತ್ತವೆಂದು ಅಂಗೀಕರಿಸಲಾಗಿದೆಯೋ ಅದರಂತೆ ಇಲ್ಲಿಯೂ ಅದಿತಿತ್ವವೆಂಬ ಜಾತಿಯೇ ಪ್ರವೃತ್ತಿನಿಮಿತ್ತವಾಗಲಿ ಹೀಗೆ

ಹೇಳಿದಾಗ ರೂಢ್ಯರ್ಥವನ್ನು ಸ್ವೀಕರಿಸಿದಂತಾಗುತ್ತದೆ. ಯೋಗಕ್ಕಿಂತ ರೂಢಿಯು ಪ್ರಬಲವಾದ್ದರಿಂದ ಅದಿತಿಶಬ್ದ ವಾಚ್ಯಳಾದವಳು ಅದಿತಿದೇವಿಯೇ ಆಗುತ್ತಾಳೆ.

ಸಮಾಧಾನ - ಈ ಆಕ್ಷೇಪಕ್ಕೆ 'ನಚ ಅಬಾಧೇ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಕಂಪನಾಧಿಕರಣದಲ್ಲಿ ಅಜ್ಞರೂಢಿಗಿಂತ ವೈದಿಕಯೋಗವು ಬಲಿಷ್ಠವಾಗಿದೆಯೆಂದು ಸಮರ್ಥಿಸುತ್ತಾರೆ. ಸರ್ವಾತ್ತೃತ್ವವೆಂಬ ಯೋಗಾರ್ಥವು ಪ್ರಕೃತ ವೈದಿಕವಾದ್ದರಿಂದ ಬಲಿಷ್ಠವಾಗಿದೆಯೆಂದು ತಿಳಿಯಬೇಕು.

**प्रकाशः** – एतेन ''तीरादौ गङ्गादिपदप्रयोगेपि'' इत्यादिनोक्तशङ्का परास्ता । श्रुतिरेव बाधिकेत्यत आह – **अनश्नन्नितीति** । अशुभभोक्तृत्वनिषेधपरतया गतिर्वक्ष्यत इत्यर्थः । ''न तदश्नाति'' इत्यस्याक्षरनये गतिर्वक्ष्यत इत्यपि ध्येयम् । एतेन 'यद्वा' इत्यादिनोक्तलिङ्गनिरवकाशत्वशङ्का प्रत्युक्ता ।

ಆಕ್ಷೇಪ - ತೀರದಲ್ಲಿ ಗಂಗಾಪದವನ್ನು ಪ್ರಯೋಗಿಸಬಹುದೇ ಹೊರತು, ಗಂಗಾತ್ವವೆಂಬ ಪ್ರವೃತ್ತಿನಿಮಿತ್ತವನ್ನು ಪ್ರಯೋಗಿಸಲಾಗದು. ಅದರಂತೆ ವಿಷ್ಣುವಿನಲ್ಲಿ ಅದಿತಿಶ್ರುತಿಯನ್ನು ಕಥಂಚಿತ್ ಪ್ರಯೋಗಿಸಿದರೂ ಸಹ ಅದಿತಿತ್ವವೆಂಬ ಜಾತಿಯನ್ನು ವಿಷ್ಣುವಿನಲ್ಲಿ ಪ್ರಯೋಗಿಸಲು ಸಾಧ್ಯವಿಲ್ಲ. ಈ ಹಿಂದಿನ ಪೂರ್ವಪಕ್ಷಕ್ಕೆ ಏನು ಉತ್ತರಿಸಿದಂತಾಯಿತು ?

ಸಮಾಧಾನ - ಈ ಆಕ್ಷೇಪವೂ ಸಹ ಈಗ ಪರಿಹಾರವಾಯಿತು. ಅದಿತಿಶಬ್ದದಿಂದ ನಾವು ಜಾತಿಯನ್ನಾಗಲೀ ಅಥವಾ ಸ್ವರೂಪವನ್ನಾಗಲೀ ತೆಗೆದುಕೊಳ್ಳುವುದಿಲ್ಲ ಹೊರತಾಗಿ, ಅದಿತಿಶಬ್ದವಾಚ್ಯತ್ವವನ್ನು ಸ್ವೀಕರಿಸುತ್ತೇವೆ. ಶ್ರುತಿಯೇ ಇದನ್ನು ಪ್ರವೃತ್ತಿನಿಮಿತ್ತವೆಂದು ಹೇಳುತ್ತಿರುವುದರಿಂದ ಪರಮಾತ್ಮನಲ್ಲಿ ಅದಿತಿಶ್ರುತಿ ಹಾಗೂ ಅದಿತ್ವಲಿಂಗ ಎರಡೂ ಸಹ ಉಪಪನ್ನವಾಗುತ್ತವೆ.

ಆಕ್ಷೇಪ - ಗ್ರಂಥದಲ್ಲಿ ಶ್ರುತಿಯಲ್ಲಿ ಹೇಳಲ್ಪಟ್ಟ ಪ್ರವೃತ್ತಿನಿಮಿತ್ತಕ್ಕೆ ಯಾವುದೇ ಬಾಧಕವಿಲ್ಲವೆಂದು ಹೇಳಿದರು. ಆದರೆ 'ಅನಶ್ನನ್ನನ್ಯಃ' ಎಂಬ ಶ್ರುತಿಯು ಬಾಧಕವಾಗಿದೆಯಲ್ಲವೇ?

ಸಮಾಧಾನ - 'ಅನಶ್ನನ್ ಇತ್ಯಾದೇಃ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಮುಂದೆ ಗುಹಾಧಿಕರಣದಲ್ಲಿ ಪರಮಾತ್ಮನಿಗೆ ಅಶುಭವಾದ ಭೋಕ್ತೃತ್ವವಿಲ್ಲವೆಂದು ನಿಷೇಧಿಸುತ್ತಾರೆ. ಆದ್ದರಿಂದ 'ಅನಶ್ನನ್' ಎಂಬ ಶ್ರುತಿಗೆ ಏನನ್ನೂ ತಿನ್ನಲಾರನೆಂಬ ವ್ಯಾಖ್ಯಾನವು ಅಸಾಧುವಾಗಿದೆ.

ಆಕ್ಷೇಪ - ಹಾಗಾದರೆ 'ಅನಶ್ನನ್' ಎಂಬ ಶ್ರುತಿಯ ವಿರೋಧವು ಬಾರದಿರಬಹುದು. ಆದರೆ ''ನ ತದಶ್ನಾತಿ ಕಿಂಚನ'' ಎಂಬ ಶ್ರುತಿಯ ವಿರೋಧವು ಬರುತ್ತದೆ. ಏಕೆಂದರೆ ಈ ಶ್ರುತಿಯಲ್ಲಿ ಸ್ಪಷ್ಟವಾಗಿ ಪರಮಾತ್ಮನು ಏನನ್ನೂ ತಿನ್ನಲಾರನೆಂದು ಹೇಳುತ್ತಿದೆಯಲ್ಲವೇ?

ಸಮಾಧಾನ - ಈ ಶ್ರುತಿಗೆ ಅಕ್ಷರಾಧಿಕರಣದಲ್ಲಿ ಗತಿಯನ್ನು ಹೇಳುತ್ತೇವೆ. ಪರಮಾತ್ಮನು ಏನನ್ನು ತಿನ್ನದಿದ್ದರೂ ದುರ್ಬಲನಾಗುವುದಿಲ್ಲ. ಆದ್ದರಿಂದ ಆಹಾರವನ್ನು ಉಪಜೀವಿಸಿಕೊಂಡು ಪರಮಾತ್ಮನು ಇರಲಾರನೆಂಬ ಅರ್ಥದಿಂದ ''ನ ತದಶ್ನಾತಿ ಕಿಂಚನ'' ಎಂಬ ಶ್ರುತಿಯು ಹೊರಟಿದೆ. ಹೀಗೆ ಹೇಳಿದ್ದರಿಂದ

'ಯದ್ವಾ' ಇತ್ಯಾದಿ ವಾಕ್ಯದಿಂದ 'ಅನಶ್ನನ್ನನ್ಯಃ' ಎಂದು ಅದಿತಿಶ್ರುತಿಯು ಬಲಿಷ್ಠವಾಗಿದೆಯೆಂದು ಪೂರ್ವಪಕ್ಷ ಮಾಡಿದ್ದರು. ಇದೂ ಸಹ ಈಗ ನಿರಾಕೃತವಾಯಿತು. ಏಕೆಂದರೆ ಶ್ರುತಿಗೆ ಮುಂದೆ ಗತಿಯನ್ನು ಹೇಳುವುದರಿಂದ ಅದರ ಬೆಂಬಲದಿಂದ ಲಿಂಗಕ್ಕೆ ನಿರವಕಾಶತ್ವವನ್ನು ಸಮರ್ಥಿಸಲು ಸಾಧ್ಯವಿಲ್ಲ.

**प्रकाशः** – प्रागुक्तदधिदृष्टान्तं प्रत्याह – **यदेनमिति** । दर्शपौर्णमासप्रकरणे ऐन्द्रदधिशब्दनिर्वचनार्थोऽयमर्थवादः । 'एनं' इन्द्रं 'अधिनोत्' अप्रीणयदिति यत्तद्ध्नो दधित्वमिति अन्वाख्यानमात्रं अवयवार्थकथनमात्रम् ।

ಹಿಂದೆ ಹೇಳಿದ ದಧಿದೃಷ್ಟಾಂತವನ್ನು 'ಯದೇನಂ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ದರ್ಶಪೂರ್ಣಮಾಸ ಪ್ರಕರಣದಲ್ಲಿ 'ಐಂದ್ರಂ ದಧಿ' 'ಐಂದ್ರಂ ಪಯಃ' ಇತ್ಯಾದಿ ವಾಕ್ಯಗಳು ಕೇಳಿಸುತ್ತಿವೆ. ಅಂದರೆ ಇಂದ್ರನನ್ನು ಕುರಿತು ದಧಿಯಿಂದ ಹೋಮ ಮಾಡಬೇಕೆಂದು ಶ್ರುತಿ ಹೇಳುತ್ತಿದೆ. ಆ ಸಂದರ್ಭದಲ್ಲಿ ದಧಿಯನ್ನು ಪ್ರಶಂಸಿಸುವ ವಾಕ್ಯ 'ಏನಂ ಇಂದ್ರಂ' 'ಅಧಿನೋತ್ ಅಪ್ರೀಣಯತ್' ಎಂಬ ವಾಕ್ಯವು ಪ್ರಸಕ್ತವಾಗಿದೆ. ಈ ವಾಕ್ಯವು ಕೇವಲ ಅವಯವಾರ್ಥವನ್ನು ಹೇಳುತ್ತಿದೆ ಹೊರತು ಪ್ರವೃತ್ತಿನಿಮಿತ್ತವನ್ನು ಹೇಳುತ್ತಿಲ್ಲ. ಅಂದರೆ ದಧಿ ಶಬ್ದದಿಂದ ಪ್ರಸಿದ್ಧಾರ್ಥವನ್ನೇ ತೆಗೆದುಕೊಳ್ಳಬೇಕೆಂಬ ಆಗ್ರಹವಿಲ್ಲದಿದ್ದರೆ ಪೋಷಕವಾದ ತುಪ್ಪ ಮೊದಲಾದ ಯಾವುದೇ ಪದಾರ್ಥವನ್ನು ತೆಗೆದುಕೊಳ್ಳಬಹುದು. ಆವಾಗ ಲೋಕರೂಢಿ ಎಂಬ ಬಾಧಕವಿಲ್ಲದ್ದರಿಂದ ಇದೇ ನಿಮಿತ್ತವೆಂದು ತೆಗೆದುಕೊಳ್ಳಬಹುದು. ಆದರೆ ಪ್ರಸಿದ್ಧ ದಧಿಯನ್ನು ತೆಗೆದುಕೊಂಡರೆ ದಧಿಶಬ್ದವು ಜಾತಿನಿಮಿತ್ತಕವಾಗುತ್ತದೆ; ಜಾತಿಯು ಪ್ರವೃತ್ತಿನಿಮಿತ್ತವಾಗುತ್ತದೆ. ಆ ಸಂದರ್ಭದಲ್ಲಿ ದಧಿಶ್ರುತಿಯು ಕೇವಲ ಅವಯವಾರ್ಥವನ್ನು ಹೇಳುತ್ತದೆ ಹೊರತು ಪ್ರವೃತ್ತಿನಿಮಿತ್ತವನ್ನು ಹೇಳುವುದಿಲ್ಲ.

**प्रकाशः** – ननु पूर्वत्रादितिपदस्य विष्णावप्रयोगान्न तत्र निमित्ताकाङ्क्षा । तथा च विष्ण्वर्थत्वेऽदितिशब्दस्य तत्राप्रसिद्धत्वेनादितेरित्यनुवादो वाऽदितित्वमित्यत्र निमित्तोक्तिर्वा न युक्तेत्यतोऽत्र श्रुतावदितिशब्दस्य पूर्वत्राप्रयोगेऽपि, श्रुत्यन्तरे प्रयोगसत्वेन लोकतो विष्णौ प्रसिद्ध्यभावेऽपि वेदतो विष्णौ प्रसिद्धेस्तत्र निमित्ताकाङ्क्षायामदितेरदितिशब्दवाच्यस्य विष्णोस्तत्सर्वात्तृत्वमदितित्वमदितिशब्दप्रवृत्तिनिमित्तमित्यर्थोपपत्तिरिति भावेनाह – **युक्ता चेति** ।

ಆಕ್ಷೇಪ - ಹಿಂದೆ ಪೂರ್ವಪಕ್ಷ ಮಾಡುವಾಗ ಅದಿತಿಶಬ್ದವು ವಿಷ್ಣುವಿನಲ್ಲಿ ಲೋಕರೂಢಿಯಿಂದ ಪ್ರಸಿದ್ಧವೇ ಆಗಿಲ್ಲ. ಆದ್ದರಿಂದ ಪ್ರವೃತ್ತಿನಿಮಿತ್ತದ ಆಕಾಂಕ್ಷೆಯೇ ಹುಟ್ಟುವುದಿಲ್ಲ. ಆದ್ದರಿಂದ ಅದಿತಿಶಬ್ದಕ್ಕೆ ವಿಷ್ಣು ಎಂಬರ್ಥವನ್ನು ಹೇಳಿದರೆ ಅಪ್ರಸಿದ್ಧವಾದ ಅರ್ಥವನ್ನು ಹೇಳಿದಂತಾಗುತ್ತದೆ. ಹೀಗಿರುವಾಗ ಅದಿತಿ ಎಂಬ ಪದವನ್ನು ಅನುವಾದವೆಂದಾಗಲಿ 'ಅದಿತಿತ್ವಂ' ಎಂಬುದನ್ನು ಪ್ರವೃತ್ತಿನಿಮಿತ್ತವೆಂದಾಗಲಿ ಹೇಗೆ ಹೇಳುತ್ತೀರಿ?

ಹೇಳಿದಾಗ ರೂಢ್ಯರ್ಥವನ್ನು ಸ್ವೀಕರಿಸಿದಂತಾಗುತ್ತದೆ. ಯೋಗಕ್ಕಿಂತ ರೂಢಿಯು ಪ್ರಬಲವಾದ್ದರಿಂದ ಅದಿತಿಶಬ್ದ ವಾಚ್ಯಳಾದವಳು ಅದಿತಿದೇವಿಯೇ ಆಗುತ್ತಾಳೆ.

ಸಮಾಧಾನ - ಈ ಆಕ್ಷೇಪಕ್ಕೆ 'ನಚ ಅಬಾಧೇ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಕಂಪನಾಧಿಕರಣದಲ್ಲಿ ಅಜ್ಞರೂಢಿಗಿಂತ ವೈದಿಕಯೋಗವು ಬಲಿಷ್ಠವಾಗಿದೆಯೆಂದು ಸಮರ್ಥಿಸುತ್ತಾರೆ. ಸರ್ವಾತ್ತೃತ್ವವೆಂಬ ಯೋಗಾರ್ಥವು ಪ್ರಕೃತ ವೈದಿಕವಾದ್ದರಿಂದ ಬಲಿಷ್ಠವಾಗಿದೆಯೆಂದು ತಿಳಿಯಬೇಕು.

**प्रकाशः – एतेन ''तीरादौ गङ्गादिपदप्रयोगेपि'' इत्यादिनोक्तशङ्का परास्ता । श्रुतिरेव बाधिकेत्यत आह – अनश्नन्नितीति । अशुभभोक्तृत्वनिषेधपरतया गतिर्वक्ष्यत इत्यर्थः । ''न तदश्नाति'' इत्यस्याक्षरनये गतिर्वक्ष्यत इत्यपि ध्येयम् । एतेन 'यद्वा' इत्यादिनोक्तलिङ्गनिरवकाशत्वशङ्का प्रत्युक्ता ।**

ಆಕ್ಷೇಪ - ತೀರದಲ್ಲಿ ಗಂಗಾಪದವನ್ನು ಪ್ರಯೋಗಿಸಬಹುದೇ ಹೊರತು, ಗಂಗಾತ್ವವೆಂಬ ಪ್ರವೃತ್ತಿನಿಮಿತ್ತವನ್ನು ಪ್ರಯೋಗಿಸಲಾಗದು. ಅದರಂತೆ ವಿಷ್ಣುವಿನಲ್ಲಿ ಅದಿತಿಶ್ರುತಿಯನ್ನು ಕಥಂಚಿತ್ ಪ್ರಯೋಗಿಸಿದರೂ ಸಹ ಅದಿತಿತ್ವವೆಂಬ ಜಾತಿಯನ್ನು ವಿಷ್ಣುವಿನಲ್ಲಿ ಪ್ರಯೋಗಿಸಲು ಸಾಧ್ಯವಿಲ್ಲ. ಈ ಹಿಂದಿನ ಪೂರ್ವಪಕ್ಷಕ್ಕೆ ಏನು ಉತ್ತರಿಸಿದಂತಾಯಿತು ?

ಸಮಾಧಾನ - ಈ ಆಕ್ಷೇಪವೂ ಸಹ ಈಗ ಪರಿಹಾರವಾಯಿತು. ಅದಿತಿಶಬ್ದದಿಂದ ನಾವು ಜಾತಿಯನ್ನಾಗಲೀ ಅಥವಾ ಸ್ವರೂಪವನ್ನಾಗಲೀ ತೆಗೆದುಕೊಳ್ಳುವುದಿಲ್ಲ ಹೊರತಾಗಿ, ಅದಿತಿಶಬ್ದವಾಚ್ಯತ್ವವನ್ನು ಸ್ವೀಕರಿಸುತ್ತೇವೆ. ಶ್ರುತಿಯೇ ಇದನ್ನು ಪ್ರವೃತ್ತಿನಿಮಿತ್ತವೆಂದು ಹೇಳುತ್ತಿರುವುದರಿಂದ ಪರಮಾತ್ಮನಲ್ಲಿ ಅದಿತಿಶ್ರುತಿ ಹಾಗೂ ಅದಿತ್ವಲಿಂಗ ಎರಡೂ ಸಹ ಉಪಪನ್ನವಾಗುತ್ತವೆ.

ಆಕ್ಷೇಪ - ಗ್ರಂಥದಲ್ಲಿ ಶ್ರುತಿಯಲ್ಲಿ ಹೇಳಲ್ಪಟ್ಟ ಪ್ರವೃತ್ತಿನಿಮಿತ್ತಕ್ಕೆ ಯಾವುದೇ ಬಾಧಕವಿಲ್ಲವೆಂದು ಹೇಳಿದರು. ಆದರೆ 'ಅನಶ್ನನ್ನನ್ಯಃ' ಎಂಬ ಶ್ರುತಿಯು ಬಾಧಕವಾಗಿದೆಯಲ್ಲವೇ?

ಸಮಾಧಾನ - 'ಅನಶ್ನನ್ ಇತ್ಯಾದೇಃ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಮುಂದೆ ಗುಹಾಧಿಕರಣದಲ್ಲಿ ಪರಮಾತ್ಮನಿಗೆ ಅಶುಭವಾದ ಭೋಕ್ತೃತ್ವವಿಲ್ಲವೆಂದು ನಿಷೇಧಿಸುತ್ತಾರೆ. ಆದ್ದರಿಂದ 'ಅನಶ್ನನ್' ಎಂಬ ಶ್ರುತಿಗೆ ಏನನ್ನೂ ತಿನ್ನಲಾರನೆಂಬ ವ್ಯಾಖ್ಯಾನವು ಅಸಾಧುವಾಗಿದೆ.

ಆಕ್ಷೇಪ - ಹಾಗಾದರೆ 'ಅನಶ್ನನ್' ಎಂಬ ಶ್ರುತಿಯ ವಿರೋಧವು ಬಾರದಿರಬಹುದು. ಆದರೆ ''ನ ತದಶ್ನಾತಿ ಕಿಂಚನ'' ಎಂಬ ಶ್ರುತಿಯ ವಿರೋಧವು ಬರುತ್ತದೆ. ಏಕೆಂದರೆ ಈ ಶ್ರುತಿಯಲ್ಲಿ ಸ್ಪಷ್ಟವಾಗಿ ಪರಮಾತ್ಮನು ಏನನ್ನೂ ತಿನ್ನಲಾರನೆಂದು ಹೇಳುತ್ತಿದೆಯಲ್ಲವೇ?

ಸಮಾಧಾನ - ಈ ಶ್ರುತಿಗೆ ಅಕ್ಷರಾಧಿಕರಣದಲ್ಲಿ ಗತಿಯನ್ನು ಹೇಳುತ್ತೇವೆ. ಪರಮಾತ್ಮನು ಏನನ್ನು ತಿನ್ನದಿದ್ದರೂ ದುರ್ಬಲನಾಗುವುದಿಲ್ಲ. ಆದ್ದರಿಂದ ಆಹಾರವನ್ನು ಉಪಜೀವಿಸಿಕೊಂಡು ಪರಮಾತ್ಮನು ಇರಲಾರನೆಂಬ ಅರ್ಥದಿಂದ ''ನ ತದಶ್ನಾತಿ ಕಿಂಚನ'' ಎಂಬ ಶ್ರುತಿಯು ಹೊರಟಿದೆ. ಹೀಗೆ ಹೇಳಿದ್ದರಿಂದ

'ಯದ್ವಾ' ಇತ್ಯಾದಿ ವಾಕ್ಯದಿಂದ 'ಅನಶ್ನನ್ನನ್ಯಃ' ಎಂದು ಅದಿತಿಶ್ರುತಿಯು ಬಲಿಷ್ಠವಾಗಿದೆಯೆಂದು ಪೂರ್ವಪಕ್ಷ ಮಾಡಿದ್ದರು. ಇದೂ ಸಹ ಈಗ ನಿರಾಕೃತವಾಯಿತು. ಏಕೆಂದರೆ ಶ್ರುತಿಗೆ ಮುಂದೆ ಗತಿಯನ್ನು ಹೇಳುವುದರಿಂದ ಅದರ ಬೆಂಬಲದಿಂದ ಲಿಂಗಕ್ಕೆ ನಿರವಕಾಶತ್ವವನ್ನು ಸಮರ್ಥಿಸಲು ಸಾಧ್ಯವಿಲ್ಲ.

**प्रकाशः** – प्रागुक्तदधिदृष्टान्तं प्रत्याह – **यदेनमिति** । दर्शपौर्णमासप्रकरणे ऐन्द्रदधिशब्दनिर्वचनार्थोऽयमर्थवादः । 'एनं' इन्द्रं 'अधिनोत्' अप्रीणयदिति यत्तद्ध्नो दधित्वमिति अन्वाख्यानमात्रं अवयवार्थकथनमात्रम् ।

ಹಿಂದೆ ಹೇಳಿದ ದಧಿದೃಷ್ಟಾಂತವನ್ನು 'ಯದೇನಂ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ದರ್ಶಪೂರ್ಣಮಾಸ ಪ್ರಕರಣದಲ್ಲಿ 'ಐಂದ್ರಂ ದಧಿ' 'ಐಂದ್ರಂ ಪಯಃ' ಇತ್ಯಾದಿ ವಾಕ್ಯಗಳು ಕೇಳಿಸುತ್ತಿವೆ. ಅಂದರೆ ಇಂದ್ರನನ್ನು ಕುರಿತು ದಧಿಯಿಂದ ಹೋಮ ಮಾಡಬೇಕೆಂದು ಶ್ರುತಿ ಹೇಳುತ್ತಿದೆ. ಆ ಸಂದರ್ಭದಲ್ಲಿ ದಧಿಯನ್ನು ಪ್ರಶಂಸಿಸುವ ವಾಕ್ಯ 'ಏನಂ ಇಂದ್ರಂ' 'ಅಧಿನೋತ್ ಅಪ್ರೀಣಯತ್' ಎಂಬ ವಾಕ್ಯವು ಪ್ರಸಕ್ತವಾಗಿದೆ. ಈ ವಾಕ್ಯವು ಕೇವಲ ಅವಯವಾರ್ಥವನ್ನು ಹೇಳುತ್ತಿದೆ ಹೊರತು ಪ್ರವೃತ್ತಿನಿಮಿತ್ತವನ್ನು ಹೇಳುತ್ತಿಲ್ಲ. ಅಂದರೆ ದಧಿ ಶಬ್ದದಿಂದ ಪ್ರಸಿದ್ಧಾರ್ಥವನ್ನೇ ತೆಗೆದುಕೊಳ್ಳಬೇಕೆಂಬ ಆಗ್ರಹವಿಲ್ಲದಿದ್ದರೆ ಪೋಷಕವಾದ ತುಪ್ಪ ಮೊದಲಾದ ಯಾವುದೇ ಪದಾರ್ಥವನ್ನು ತೆಗೆದುಕೊಳ್ಳಬಹುದು. ಆವಾಗ ಲೋಕರೂಢಿ ಎಂಬ ಬಾಧಕವಿಲ್ಲದ್ದರಿಂದ ಇದೇ ನಿಮಿತ್ತವೆಂದು ತೆಗೆದುಕೊಳ್ಳಬಹುದು. ಆದರೆ ಪ್ರಸಿದ್ಧ ದಧಿಯನ್ನು ತೆಗೆದುಕೊಂಡರೆ ದಧಿಶಬ್ದವು ಜಾತಿನಿಮಿತ್ತಕವಾಗುತ್ತದೆ; ಜಾತಿಯು ಪ್ರವೃತ್ತಿನಿಮಿತ್ತವಾಗುತ್ತದೆ. ಆ ಸಂದರ್ಭದಲ್ಲಿ ದಧಿಶ್ರುತಿಯು ಕೇವಲ ಅವಯವಾರ್ಥವನ್ನು ಹೇಳುತ್ತದೆ ಹೊರತು ಪ್ರವೃತ್ತಿನಿಮಿತ್ತವನ್ನು ಹೇಳುವುದಿಲ್ಲ.

**प्रकाशः** – ननु पूर्वत्रादितिपदस्य विष्णावप्रयोगान्न तत्र निमित्ताकाङ्क्षा । तथा च विष्ण्वर्थत्वेऽदितिशब्दस्य तत्राप्रसिद्धत्वेनादितेरित्यनुवादो वाऽदितित्वमित्यत्र निमित्तोक्तिर्वा न युक्तेत्यतोऽत्र श्रुतावदितिशब्दस्य पूर्वत्राप्रयोगेऽपि, श्रुत्यन्तरे प्रयोगसत्वेन लोकतो विष्णौ प्रसिद्ध्यभावेऽपि वेदतो विष्णौ प्रसिद्धेस्तत्र निमित्ताकाङ्क्षायामदितेरदितिशब्दवाच्यस्य विष्णोस्तत्सर्वात्तृत्वमदितित्वमदितिशब्दप्रवृत्तिनिमित्तमित्यर्थोपपत्तिरिति भावेनाह – **युक्ता चेति** ।

ಆಕ್ಷೇಪ - ಹಿಂದೆ ಪೂರ್ವಪಕ್ಷ ಮಾಡುವಾಗ ಅದಿತಿಶಬ್ದವು ವಿಷ್ಣುವಿನಲ್ಲಿ ಲೋಕರೂಢಿಯಿಂದ ಪ್ರಸಿದ್ಧವೇ ಆಗಿಲ್ಲ. ಆದ್ದರಿಂದ ಪ್ರವೃತ್ತಿನಿಮಿತ್ತದ ಆಕಾಂಕ್ಷೆಯೇ ಹುಟ್ಟುವುದಿಲ್ಲ. ಆದ್ದರಿಂದ ಅದಿತಿಶಬ್ದಕ್ಕೆ ವಿಷ್ಣು ಎಂಬರ್ಥವನ್ನು ಹೇಳಿದರೆ ಅಪ್ರಸಿದ್ಧವಾದ ಅರ್ಥವನ್ನು ಹೇಳಿದಂತಾಗುತ್ತದೆ. ಹೀಗಿರುವಾಗ ಅದಿತಿ ಎಂಬ ಪದವನ್ನು ಅನುವಾದವೆಂದಾಗಲಿ 'ಅದಿತಿತ್ವಂ' ಎಂಬುದನ್ನು ಪ್ರವೃತ್ತಿನಿಮಿತ್ತವೆಂದಾಗಲಿ ಹೇಗೆ ಹೇಳುತ್ತೀರಿ?

ಸಮಾಧಾನ - ಈ ಶ್ರುತಿಯಲ್ಲಿ ಅದಿತಿ ಪದವನ್ನು ಮೊದಲು ಪ್ರಯೋಗ ಮಾಡದಿದ್ದರೂ ಬೇರೆ ಶ್ರುತಿಯಲ್ಲಿ ಪ್ರಯೋಗವಿರುವುದರಿಂದ ಲೋಕತಃ ವಿಷ್ಣುವಿನಲ್ಲಿ ಪ್ರಸಿದ್ಧಿ ಇರುವುದರಿಂದ ಪ್ರವೃತ್ತಿನಿಮಿತ್ತದ ಆಕಾಂಕ್ಷೆಯು ಬರುತ್ತದೆ. ಅದಿತಿಶಬ್ದವಾಚ್ಯನಾದ ವಿಷ್ಣುವಿಗೆ ಸರ್ವಾತ್ಮತ್ವವೆಂಬ ಪ್ರವೃತ್ತಿನಿಮಿತ್ತವೂ ಸಹ ಉಪಪನ್ನವಾಗುತ್ತದೆ ಎಂಬ ಅಭಿಪ್ರಾಯದಿಂದ 'ಯುಕ್ತಾ ಚ' ಎಂಬ ಗ್ರಂಥವು ಹೊರಟಿದೆ.

**प्रकाशः** – एतेन ''विष्णावदितिशब्दस्तु'' इत्यर्थ विवृतम्, 'अथवा' इत्यादिनोक्तश्रुतिलिङ्गनिरवकाशत्वशङ्का च निरस्ता, ''अदितिश्रुतेर्विष्णावपि सावकाशत्वात् । लिङ्गस्य चादितिशब्दवाच्यत्वमदितित्वमिति सावकाशत्वात्'' इति टीका च विवृता ।

ಹೀಗೆ ಹೇಳಿದ್ದರಿಂದ ''ವಿಷ್ಣಾವದಿತಿಶಬ್ದಸ್ತು'' ಎಂಬ ಗ್ರಂಥಕಾರರ ಶ್ಲೋಕದಲ್ಲಿರುವ ಅರ್ಧವಾಕ್ಯವನ್ನು ವಿವರಿಸಿದಂತಾಯಿತು. ಮತ್ತು 'ಅಥವಾ' ಇತ್ಯಾದಿಯಾಗಿ ಅದಿತಿಶ್ರುತಿ ಹಾಗೂ ಅದಿತಿತ್ವ ಲಿಂಗಗಳಿಗೆ ಮಾಡಲ್ಪಟ್ಟ ನಿರವಕಾಶತ್ವಶಂಕೆಯೂ ಸಹ ನಿರಾಕೃತವಾಯಿತು. 'ಅದಿತಿಶ್ರುತೇರ್ವಿಷ್ಣಾವಪಿ ಸಾವಕಾಶತ್ವಾತ್ । ಲಿಂಗಸ್ಯ ಚಾದಿತಿಶಬ್ದವಾಚ್ಯತ್ವಮದಿತಿತ್ವಮಿತಿ ಸಾವಕಾಶತ್ವಾತ್' ಎಂಬ ಟೀಕೆಯನ್ನೂ ವಿವರಿಸಿದಂತಾಯಿತು.

**प्रकाशः** – ननु विष्णावादितित्वनिमित्तेनैवादितिशब्दस्य विधित्सितत्वेन निमित्तोक्तेः पूर्वमदितेरिति कथमनुवाद इति चेन्न, ''इग्यणस्सम्प्रसारणं'' ''अग्नये जुष्टं निर्वपामि'' इत्यादाविव भाविसंज्ञोपपत्तेः । यथोक्तं न्यायविवरणटीकायां – ''अदितेरिति भाविनी संज्ञा विज्ञायते । यथा 'अस्य सूत्रस्य शाटकं वय' इति । अन्यथा परस्यापि दुर्घटमेतत् । अविवक्षितनिमित्तां प्रसिद्धिमाश्रित्य ममानुवादः सम्भवतीति चेत्, ममापि तत्समम् ।

ಆಕ್ಷೇಪ - ವಿಷ್ಣುವಿನಲ್ಲಿ ಅದಿತಿತ್ವವೆಂಬ ನಿಮಿತ್ತವನ್ನು ಹೇಳಿದರೆ ಮಾತ್ರ ಅದಿತಿಶಬ್ದವನ್ನು ವಿಧಾನ ಮಾಡಬಹುದು. ಅದಿತಿತ್ವವೆಂಬ ನಿಮಿತ್ತವನ್ನು ಹೇಳುವ ಮೊದಲು 'ಅದಿತೇಃ' ಎಂಬುದಾಗಿ ಅನುವಾದ ಮಾಡಲು ಹೇಗೆ ಸಾಧ್ಯ ?

ಸಮಾಧಾನ - ''ಇಗ್ಯಣಸ್ಸಂಪ್ರಸಾರಣಂ'' ''ಅಗ್ನಯೇ ಜುಷ್ಟಂ ನಿರ್ವಪಾಮಿ'' ಇತ್ಯಾದಿ ಸ್ಥಳಗಳಲ್ಲಿ ಮುಂದೆ ಹೇಳುವ ಸಂಜ್ಞೆಯನ್ನು ಮೊದಲೇ ಅನುವಾದ ಮಾಡಿದ್ದು ಕಂಡಿದೆ. ಅಗ್ನಿಗೋಸ್ಕರ ಜುಷ್ಟಂ = ಪ್ರೀತಿಸಾಧನವಾದ ಅನ್ನವನ್ನು ನಿರ್ವಪಾಮಿ = ಸ್ವಲ್ಪಭಾಗವನ್ನು ತೆಗೆದು ತ್ಯಾಗಮಾಡುತ್ತೇನೆ ಎಂದು ಶ್ರುತಿ ಹೇಳುತ್ತಿದೆ. ವಸ್ತುತಃ ಆಹುತಿ ಕೊಟ್ಟಮೇಲೆ ಅನ್ನವು ಅಗ್ನಿಗೆ ಪ್ರೀತಿಸಾಧನವಾಗುತ್ತದೆ. ಆದರೆ ಮೊದಲೇ ಪ್ರೀತಿಸಾಧನವೆಂದು ಇಲ್ಲಿ ಪರಿಗಣಿಸಲಾಗಿದೆ. ಇದರಂತೆ ಯಣ್ ಸ್ಥಾನದಲ್ಲಿ ಮೊದಲು ಇರುವ ಇಕ್‌ಗೆ ಮತ್ತು ಮುಂದೆ ಬರುವ ಇಕ್‌ಗೆ ಸಂಪ್ರಸಾರಣ ಸಂಜ್ಞೆಯನ್ನು ಪಾಣಿನಿಸೂತ್ರ ವಿಧಿಸಿದೆ. ಯಣ್ ಸ್ಥಾನಕ್ಕೆ ಇಕ್ ಅಕ್ಷರಗಳಿಗೆ ಮುಂದೆ ಬರುವುದಿದ್ದರೂ ಮೊದಲೇ ಸಂಪ್ರಸಾರಣವೆಂದು ಕರೆಯಲಾಗಿದೆ. ಇದನ್ನೇ

ನ್ಯಾಯವಿವರಣಟೀಕೆಯಲ್ಲಿ ''ಅದಿತೇರಿತಿ ಭಾವಿನೀ ಸಂಜ್ಞಾ ವಿಜ್ಞಾಯತೇ। ಯಥಾ 'ಅಸ್ಯ ಸೂತ್ರಸ್ಯ ಶಾಟಕಂ ವಯ'' ಎಂಬುದಾಗಿ ಮುಂದೆ ಹೇಳುವ ಅದಿತಿಸಂಜ್ಞೆಯನ್ನು ಮೊದಲೇ ಅನುವಾದ ಮಾಡಿಕೊಳ್ಳುವುದು ಕಂಡಿದೆ. ಹೀಗೆ ಭಾವಿಸಂಜ್ಞೆಯನ್ನು ಅನುವಾದ ಮಾಡಬಹುದೆಂದು ಒಪ್ಪದಿದ್ದರೆ ಪೂರ್ವಪಕ್ಷಕಾರನಿಗೂ ಉತ್ತರಿಸುವುದು ಕಷ್ಟವಾಗುತ್ತದೆ. ಅವಿವಕ್ಷಿತವಾದ ಪ್ರವೃತ್ತಿನಿಮಿತ್ತವನ್ನು ಮತ್ತು ಪ್ರಸಿದ್ಧಿಯನ್ನು ಆಶ್ರಯಿಸಿ ಅನುವಾದ ಪರವೆಂದು ನಾನು ಊಹಿಸುತ್ತೇನೆಂದು ಪೂರ್ವಪಕ್ಷಿಯು ಉತ್ತರಿಸಿದರೆ ಈ ಉತ್ತರ ನಮಗೂ ಸಹ ಸಮಾನವೇ ಆಗಿದೆ. ಮುಂದೆ ಹೇಳುವ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸದೆ ಕೇವಲ ಶ್ರುತಿ ಹೇಳಿರುವ ಪ್ರಸಿದ್ಧಿಯನ್ನು ಆಶ್ರಯಿಸಿ ಅನುವಾದವನ್ನು ಮಾಡಬಹುದೆಂದು ಸಿದ್ಧಾಂತಿಗಳೂ ಉತ್ತರಿಸಬಹುದು.

**प्रकाशः** – इयांस्तु विशेषः – ''परस्य लौकिकी प्रसिद्धिः, मम वैदिकीति'' इति । **लौकिकेति** । तत्र विप्लुतिसम्भवात् निर्दोषवैदिकप्रयोगे तु तदसम्भवादिति भावः ।

**यदाजिमिति** । छन्दोगब्राह्मणे ज्योतिष्टोमप्रकरणे बहिष्पवमानस्तोत्रनाम-निर्वचनार्थोऽयमर्थवादः । यानि स्तोत्राण्यवष्टभ्य देवाः 'आजिं' युद्धं ईयुः, तदेवाज्यानां स्तोत्राणामाज्यत्वमित्यर्थः । ''तस्योपनिषत्सत्यमिति, सदित्यन्नं तीत्यमृतं ते उभे यच्छति'' इत्यादिरादिपदार्थः ।

ಪೂರ್ವಪಕ್ಷಕಾರರಿಗೂ ಸಿದ್ಧಾಂತಿಗಳಿಗೂ ಇಷ್ಟು ಮಾತ್ರ ವ್ಯತ್ಯಾಸ - ಅದಿತಿ ಶಬ್ದಕ್ಕೆ ಲೌಕಿಕ ಪ್ರಸಿದ್ಧಿಯನ್ನು ಪೂರ್ವಪಕ್ಷಕಾರನು ಹೇಳುತ್ತಾನೆ. ಅದೇ ಅದಿತಿ ಶಬ್ದಕ್ಕೆ ವೈದಿಕ ಪ್ರಸಿದ್ಧಿಯನ್ನು ಸಿದ್ಧಾಂತಿಯು ವಿಷ್ಣುವಿನಲ್ಲಿ ಹೇಳುತ್ತಾನೆ ಎಂದು. ಲೌಕಿಕ ಪ್ರಯೋಗವನ್ನೇ ಆಕಾಂಕ್ಷಾ ನಿಮಿತ್ತವೆಂದು ಹೇಳಿದರೆ ತೊಂದರೆ ಬರುತ್ತದೆಂದು 'ನಹಿ ಲೌಕಿಕಪ್ರಯೋಗಃ' ಎಂಬ ವಾಕ್ಯದಲ್ಲಿ ಪ್ರತಿಪಾದಿಸಿದ್ದಾರೆ.

ನಿರ್ದಿಷ್ಟವಾದ ವೈದಿಕ ಪ್ರಯೋಗದಲ್ಲಿ ಯಾವುದೇ ತೊಂದರೆ ಇಲ್ಲದ ಕಾರಣ ಆಕಾಂಕ್ಷೆಯನ್ನು ನಿಮಿತ್ತವೆನ್ನಬಹುದು. ಇದಕ್ಕೆ 'ಯದಾಜಿಮ್' ಎಂಬ ವಾಕ್ಯದಿಂದ ಉದಾಹರಣೆಯನ್ನು ನೀಡುತ್ತಿದ್ದಾರೆ. ಛಾಂದೋಗ್ಯದ ಬ್ರಾಹ್ಮಣ ಭಾಗದಲ್ಲಿ ಜ್ಯೋತಿಷ್ಟೋಮ ಪ್ರಕರಣವು ಪ್ರಸಕ್ತವಾಗಿದೆ. ಅಲ್ಲಿ ಬಹಿಷ್ಪವಮಾನಸ್ತೋತ್ರವನ್ನು ನಿರ್ವಚನ ಮಾಡುವುದಕ್ಕಾಗಿ ಉಲ್ಲೇಖಿಸಿದ ಅರ್ಥವಾದ ವಾಕ್ಯವಿದು. ದೇವತೆಗಳು ಯಾವ ಸ್ತೋತ್ರವನ್ನು ಅವಲಂಬಿಸಿ ಆಜಿಂ = ಯುದ್ಧವನ್ನು ಕುರಿತು ಈಯುಃ = ತೆರಳುತ್ತಾರೋ, ತದೇವ = ಅದೇ ಆಜ್ಯಾನಾಮ್ = ಸ್ತೋತ್ರಗಳ, ಆಜ್ಯತ್ವಂ = ಆಜ್ಯತ್ವವೆನಿಸುತ್ತದೆ. ಹೀಗೆ 'ಯದಾಜಿಮ್' ಎಂಬ ಶ್ರುತಿಯಲ್ಲಿ ಮಂತ್ರಗಳಲ್ಲಿ ಆಜ್ಯ ಶಬ್ದವನ್ನು ಪ್ರಯೋಗಿಸಲಾಗಿದೆ. ಇಲ್ಲಿರುವ ಸ್ತೋತ್ರ ಪ್ರಯೋಗಕ್ಕೆ ಆಕಾಂಕ್ಷೆಯು ನಿಮಿತ್ತವಾಗಿದೆ. ಆದರೆ ಯುದ್ಧ ಮಂತ್ರಗಳಲ್ಲಿ ಲೌಕಿಕ ಪ್ರಯೋಗವಿಲ್ಲದ ಕಾರಣ ಆಕಾಂಕ್ಷೆ ಹುಟ್ಟದಿರಬೇಕಾದೀತು. 'ಇತ್ಯಾದೌ' ಎಂಬಲ್ಲಿರುವ ಆದಿಪದದಿಂದ 'ತಸ್ಯೋಪನಿಷತ್ಸತ್ಯಮಿತಿ, ಸದಿತ್ಯನ್ನಂ ತೀತ್ಯಮೃತಂ ತೇ ಉಭೇ ಯಚ್ಛತಿ'' ಎಂಬುದಾಗಿ ಸತ್ಯಪದಕ್ಕೆ ಅನ್ನ ಹಾಗೂ ಅಮೃತಗಳಲ್ಲಿರುವ ಶ್ರೌತ ಪ್ರಯೋಗವನ್ನು ವಿವಕ್ಷಿಸಬೇಕು.

ಅತ್ತೃತ್ವಾಧಿಕರಣ (೧-೨-೨)

**गुरुराजीयम् –** तद्धो दधित्वमित्यत्र प्रातिपदिकस्य प्रसिद्धादितिपरत्वस्य त्वप्रत्ययस्य च तद्गतधर्मपरत्वस्य च दर्शनेन प्रकृतेऽपि सर्वं वा अत्तीत्यादावदिति-प्रातिपदिकस्य प्रसिद्धादितिपरत्वात्ततः परत्वप्रत्ययस्य तद्गतधर्मपरत्वमेव किं न स्यादित्यतो दृष्टान्त एवासम्प्रतिपन्न इत्याह – **यदेनमिति** ।।

अन्वाख्यानमात्रं प्रकृतिप्रत्ययोरर्थकथनमात्रमित्यर्थः । अन्वाख्यान-पक्षेऽपि सर्वात्तृत्वमदितिशब्दप्रवृत्तिनिमित्तमित्ययुक्तम् । प्रसिद्ध एवार्थे निमित्तस्याकाङ्क्षितत्वेन ब्रह्मणि चादितिशब्दप्रयोगाभावेन तस्यादितिशब्द-प्रसिद्धार्थत्वाभावेन तत्र निमित्तस्यानाकाङ्क्षितत्वादित्यत आह – **युक्ताचेति** ।।

नन्वेवमदितिशब्दस्य ब्रह्मणि श्रौतप्रयोगसद्भावेऽपि तस्याकाङ्क्षा-निमित्तत्वाभावात् । आकाङ्क्षानिमित्तस्य च लौकिकप्रयोगस्य देवमातरीव ब्रह्मण्यभावान्निमित्ताकाङ्क्षा नोपपद्यत इत्यत आह – **न हीति** ।। **यदेति** ।। तथा सत्याज्यैस्तुवत इत्यत्राज्यशब्दस्य लोकतो घृतमात्रे प्रसिद्धस्य स्तोत्रे लोकतोऽप्रसिद्धत्वादाकाङ्क्षानिमित्तस्य लौकिकप्रयोगस्याभावात् । यदाजिमीयुरिति प्रवृत्तिनिमित्तकथनमनुपपन्नमित्यर्थः ।




ಸಿದ್ಧಾಂತವನ್ನು ಪ್ರಾರಂಭಿಸುತ್ತಿದ್ದಾರೆ - ಸಿದ್ಧಾಂತದ ಸಾರ ಹೀಗಿದೆ - ಸರ್ವಾತ್ತೃತ್ವವೆಂಬ ಲಿಂಗವು ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ಯುಕ್ತವಾಗುವುದಿಲ್ಲ. ಮತ್ತು ವಿಷ್ಣುವಿನಲ್ಲಿ ಅದಿತಿಶಬ್ದವು ಪ್ರಯುಕ್ತವಾಗಿದೆಯೆಂದು ಬೇರೊಂದು ಶ್ರುತಿಯಿಂದ ಸ್ಪಷ್ಟವಾಗುತ್ತದೆ.

ಬಾಧಕವಿಲ್ಲದೆ ಸರ್ವಶಬ್ದಕ್ಕೆ ಸಂಕೋಚವನ್ನು ಮಾಡಬಾರದು. ಪೂಷಾದಿದೃಷ್ಟಾಂತದಲ್ಲಿ ಬಾಧಕವಿದ್ದಂತೆ ಇಲ್ಲಿ ಬಾಧಕವಿಲ್ಲದ ಕಾರಣ ಮತ್ತೊಂದೆಡೆ ಅಪಕರ್ಷ ಮಾಡಬೇಕಾಗಿಲ್ಲ.

ಅವಾಂತರ ಪ್ರಕರಣವೆಂದು ಪೂರ್ವೋತ್ತರ ವಾಕ್ಯಗಳ ಪರಾಮರ್ಶದಿಂದ ನಿರ್ಣಯಿಸಬೇಕು. 'ಅಭಿಕ್ರಾಮಂ ಜುಹೋತಿ' ಎಂಬಲ್ಲಿ ಹಾಗೆ ಸಂದಂಶ ಇರುವುದರಿಂದ ಅವಾಂತರ ಪ್ರಕರಣವೆಂದು ಹೇಳಬಹುದು. ಆದರೆ ಪ್ರಕೃತದಲ್ಲಿ ಸಂದಂಶ ಇರುವುದಿಲ್ಲ.



• • • • •

ಪರಿಪೂರ್ಣಚಂದ್ರಿಕಾ

## ವಿಷ್ಣುವಿನ ಸರ್ವಾತ್ತೃತ್ವಕ್ಕೆ ಅದಿತಿಶಬ್ದವೇ ಹೇತು

### तात्पर्यचन्द्रिका

किञ्च –

पूर्वत्रादितिशब्दस्य प्रयोगान्नानुशासनम् ।
शब्दस्य किन्तु पूर्वोक्तात्तृत्वे हेतुरिहोच्यते ॥

न हीह पूर्ववाक्येऽदितिशब्दः प्रयुक्तः, येन तदनुशासनं युक्तं स्यात् ।

नच "तत्तदत्तुं" इति पूर्वप्रतिज्ञातसर्वात्तृतायां श्रुत्यन्तरे ब्रह्मणि प्रयुक्तस्य सर्वात्तृत्वनिमित्तकस्य अदितिशब्दस्य हेतूकरणे सम्भवति स्थलान्तरस्थादितिशब्दस निर्वचनं युक्तम् । अत एव टीकायां विषयवाक्यार्थोक्तिदशायां हेतुत्वमुक्तम् ।

एवं च न सर्वशब्दस्य सङ्कोचः, बाधकाभावात् ।

पूर्ववाक्ये "स यद्यदेवासृजत तत्तदुत्तम्" इति वीप्सया कृत्स्नोक्तेश्च । "सर्वस्यैतस्यात्ता" इत्यादौ तु सर्वशब्दस्य बाधकवशात्सङ्कोचः । अत एव सूत्रे लाघवाय श्रुत्यनुगमाय च सर्वशब्दे प्रयोक्तव्ये, सर्वशब्दस्य सङ्कोचनिरासाय चराचरशब्दः प्रयुक्तः ।

न चाबाधेऽपि प्रकरणात् उत्कर्षः, अभिक्रमणस्य अवान्तरप्रकरणं च, तस्य प्रयाजविषयैर्वाक्यैः पूर्वं पश्चाच्च सन्दष्टत्वात् । नच अत्तृत्वस्यादितिविषयैर्वाक्यैः सन्दशोऽस्ति ।

अदितेरेव महाप्रकरणमिति तु "नेहासीत्किञ्चन" इत्यादिभाष्योक्तस्मृत्यैव निरस्तम् । तदेतदभिप्रेत्योक्तं न्यायविवरणे – "सन्दिग्धश्रुतिलिङ्गाभ्यां निश्चितयोर्लिङ्गप्रकरणयोरेव बलवत्त्वम्" इति । अत्र चाद्ये सूत्रे लिङ्गोक्ति, द्वितीये तु प्रकरणोक्तिरिति स्फुटः सूत्रक्रमः ॥

ಅತ್ತ್ರಧಿಕರಣ (೧-೨-೨)

ಅನುವಾದ - ಮತ್ತೊಂದು ಕಾರಣದಿಂದ ಅದಿತಿ ಶಬ್ದವು ಹೇತು ಪರವೆಂದು ತಿಳಿಯಬೇಕು.

ಪೂರ್ವತ್ರಾದಿತಿಶಬ್ದಸ್ಯ ಪ್ರಯೋಗಾನ್ನಾನುಶಾಸನಮ್ ।
ಶಬ್ದಸ್ಯ ಕಿಂತು ಪೂರ್ವೋಕ್ತಾಕೃತ್ವೇ ಹೇತುರಿಹೋಚ್ಯತೇ ॥

'ಸಃ ಯದ್ಯದೇವಾ ಸೃಜತ' ಎಂಬುವ ಮೊದಲು ವಿಷ್ಣುವನ್ನು 'ಸರ್ವತ್ತಾ' ಎನ್ನಲಾಗಿದೆ. ಏಕೆ ? ಎಂಬ ಪ್ರಶ್ನೆ ಬಂದರೆ 'ಸರ್ವಂ ವಾ ಅತ್ತಿ' ಎಂಬುದಾಗಿ ಅದಿತಿಶಬ್ದದ ನಿರ್ವಚನದ ಮೂಲಕವಾಗಿ ಹೇತುವನ್ನು ನಿರೂಪಿಸಲಾಗಿದೆ. ಒಂದು ವೇಳೆ ಹಿಂದಿನ ವಾಕ್ಯದಲ್ಲಿ ವಿಷ್ಣುವಿನಲ್ಲಿ ಅಥವಾ ಅದಿತಿದೇವಿಯಲ್ಲಿ ಆ ಅದಿತಿಶಬ್ದವನ್ನು ಪ್ರಯೋಗಿಸಿದ್ದರೆ ಅನುಶಾಸನದ ಆಕಾಂಕ್ಷೆ ಬರುತ್ತಿತ್ತು. ಆದರೆ ಮೊದಲು ಅದಿತಿಶಬ್ದವನ್ನು ಪ್ರಯೋಗಿಸದ ಕಾರಣ ಅನುಶಾಸನದ ಆಕಾಂಕ್ಷೆಯು ಬರುವುದಿಲ್ಲ.

ಈ ಪ್ರಕರಣದ ಹಿಂದಿನ ವಾಕ್ಯದಲ್ಲಿ ಅದಿತಿಶಬ್ದವು ಪ್ರಯುಕ್ತವಾಗಿಲ್ಲ. ಒಂದು ವೇಳೆ ಅದಿತಿಶಬ್ದವನ್ನು ಪ್ರಯೋಗಿಸಿದ್ದರೆ ಅನುಶಾಸನದ ಆಕಾಂಕ್ಷೆಯು ಯುಕ್ತವಾಗುತ್ತಿತ್ತು.

ಮತ್ತು 'ತತ್ತದತ್ತುಂ' ಎಂಬುದಾಗಿ ಸರ್ವಾತ್ತೃತ್ವವು ಹಿಂದೆ ಪ್ರಸಕ್ತವಾಗಿದೆ. ಇಂತಹ ಸರ್ವಾತ್ತೃತ್ವವನ್ನು ಸಾಧಿಸಲು ಅದಿತಿಶಬ್ದವು ಹೇತುರೂಪವಾಗಿ ಪ್ರಯುಕ್ತವಾಗಿದೆ. ಈ ಅದಿತಿಶಬ್ದವು ಶ್ರುತ್ಯಂತರದಲ್ಲಿ ಬ್ರಹ್ಮನಲ್ಲಿ ಪ್ರಯೋಗಿಸಲ್ಪಟ್ಟ ಸರ್ವಾತ್ತೃತ್ವಕ್ಕೆ ನಿಮಿತ್ತವಾಗಿದೆ. ಹೀಗೆ ಹೇಳಲು ಬರುವಾಗ 'ಅದಿತಿರ್ದೇವತಾಮಯಿ' ಎಂಬುದಾಗಿ ಮತ್ತೊಂದು ಸ್ಥಳದಲ್ಲಿ ಪ್ರಯೋಗಿಸಲ್ಪಟ್ಟ ಅದಿತಿಶಬ್ದದ ನಿರ್ವಚನವನ್ನು ಇದು ಮಾಡುತ್ತಿದೆನ್ನುವುದು ಅಪ್ರಸಕ್ತವಾಗುತ್ತದೆ. ಆದ್ದರಿಂದ ಟೀಕೆಯಲ್ಲಿ ವಿಷಯವಾಕ್ಯಾರ್ಥವನ್ನು ಹೇಳುವ ಸಂದರ್ಭದಲ್ಲಿ ಅದಿತಿಶಬ್ದಕ್ಕೆ ಹೇತುತ್ವವನ್ನು ಹೇಳಿದ್ದಾರೆ.

ಆದ್ದರಿಂದ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸಂಕೋಚ ಮಾಡಲು ಯಾವುದೇ ಬಾಧಕವಿಲ್ಲ. ಅದಿತಿಶಬ್ದ ಹಾಗೂ ಅದಿತಿತ್ವಲಿಂಗಗಳನ್ನೇ ಬಾಧಕವೆನ್ನಬೇಕು. ಆದರೆ ಇವುಗಳು ಸಾವಕಾಶಗಳಾದ್ದರಿಂದ ಬಾಧಕವೆಂದು ಪರಿಗಣಿಸಲಾಗದು.

ಮತ್ತು ಹಿಂದಿನ ವಾಕ್ಯದಲ್ಲಿ ''ಸ ಯದ್ಯದೇವಾಸೃಜತ ತತ್ತದತ್ತುಮ್'' ಎಂಬುದಾಗಿ ವೀಪ್ಸಾಗ್ರಹಣ ಮಾಡಿದ್ದರಿಂದ ಸರ್ವಶಬ್ದಕ್ಕೆ ಕಾರ್ತ್ಸ್ನ್ಯ ಎಂಬರ್ಥವನ್ನೇ ಹೇಳಬೇಕು. ಅಧಿಕಾರಿಗೆ ಫಲವನ್ನು ಹೇಳುವಾಗ ''ಸರ್ವಸ್ಯೈತಸ್ಯಾತ್ತಾ ಭವತಿ'' ಎಂದು ಪ್ರಸಕ್ತವಾಗಿತ್ತು. ಇಲ್ಲಿರುವ ಸರ್ವಶಬ್ದಕ್ಕೆ ಪ್ರಮಾಣಗಳ ಬಾಧವು ಬರುವುದರಿಂದ ಅವಶ್ಯವಾಗಿ ಸರ್ವಶಬ್ದಕ್ಕೆ ಸಂಕೋಚವನ್ನು ಮಾಡಬೇಕು. ಹೊರತು 'ಸರ್ವಂ ವಾ ಅತ್ತಿ' ಎಂಬಲ್ಲಿರುವ ಸರ್ವಶಬ್ದಕ್ಕೆ ಸಂಕೋಚ ಮಾಡಬೇಕಾಗಿಲ್ಲ. ಆದ್ದರಿಂದಲೇ ಸೂತ್ರದಲ್ಲಿ ಲಾಘವಕ್ಕಾಗಿ ಮತ್ತು ಶ್ರುತ್ಯನುಗಮಕ್ಕಾಗಿ ಸರ್ವಶಬ್ದವನ್ನೇ ಪ್ರಯೋಗಿಸಬೇಕಿತ್ತು. ಆದರೂ ಸಹ ಚರಾಚರಶಬ್ದವನ್ನು ಪ್ರಯೋಗಿಸಿದ್ದಾರೆ. ಇದರಿಂದ ಸರ್ವಶಬ್ದಕ್ಕೆ ಸಂಕೋಚವನ್ನು ಮಾಡದೆ ಅರ್ಥವನ್ನು ಹೇಳಬೇಕೆಂದು ಸ್ಪಷ್ಟವಾಗಿ ತಿಳಿಯುತ್ತದೆ.

ಪರಿಪೂರ್ಣಚಂದ್ರಿಕಾ

ದರ್ಶಪೂರ್ಣಮಾಸ ಯಾಗದಲ್ಲಿ ಪೂಷಾ ಎಂಬ ದೇವತೆಯೇ ಇಲ್ಲದ ಕಾರಣ 'ಪೂಷಾ ಪ್ರಪಷ್ಟಿಭಾಗಂ' ಎಂಬುದನ್ನು ಮತ್ತೊಂದು ಪ್ರಕರಣದಲ್ಲಿ ಅಪಕರ್ಷ ಮಾಡುವುದು ಅನಿವಾರ್ಯ. ಆದರೆ ಪ್ರಕೃತ ಅದಿತಿಪ್ರಕರಣದಲ್ಲಿ ಅಪಕರ್ಷಣ ಮಾಡಲು ಕಾರಣವಿಲ್ಲ. ಅಲ್ಲಿಯಂತೆ ಇಲ್ಲಿ ಅಪಕರ್ಷಣ ಮಾಡಲು ಬಾಧಕವಿರುವುದಿಲ್ಲ. ಮತ್ತು ಅಭಿಕ್ರಮಣಕ್ಕೆ ಅವಾಂತರಪ್ರಕರಣವನ್ನು ಕಲ್ಪಿಸಿದಂತೆ ಇಲ್ಲಿ ಅದಿತಿಶಬ್ದಕ್ಕೆ ಅವಾಂತರ ಪ್ರಕರಣವನ್ನು ಕಲ್ಪಿಸಲಾಗದು. ಏಕೆಂದರೆ ಪ್ರಯಾಜವಿಷಯಕವಾದ ವಾಕ್ಯಗಳು ಹಿಂದಿನ ಭಾಗದಲ್ಲಿ ಮತ್ತು ಮುಂದಿನ ಭಾಗದಲ್ಲಿ ಸಂದಷ್ಟವಾದ್ದರಿಂದ ಅವಾಂತರ ಪ್ರಕರಣವೆಂದು ಅಭಿಕ್ರಮಣವನ್ನು ಹೇಳಬೇಕಾಗುತ್ತದೆ. ಆದರೆ ಪ್ರಕೃತ ಅತ್ತೃತ್ವಕ್ಕೆ ಅದಿತಿವಿಷಯಕವಾದ ಹಿಂದಿನ ಮುಂದಿನ ವಾಕ್ಯಗಳಿಂದ ಸಂದಂಶವು ಇರುವುದಿಲ್ಲ.

ಪೂರ್ವಪಕ್ಷದಲ್ಲಿ ಅದಿತಿಶ್ರುತಿಯನ್ನೇ ಮಹಾಪ್ರಕರಣವನ್ನಾಗಿ ಪರಿಗಣಿಸಬಹುದೆಂದು ಕೊನೆಯದಾಗಿ ಆಕ್ಷೇಪಿಸಲಾಗಿತ್ತು. ಆದರೆ ಮಹಾಪ್ರಕರಣವನ್ನು ಅದಿತಿಪರವೆಂದು ಹೇಳಿದರೆ "ನೇಹಾಸೀತ್ಕಿಂಚನ" ಎಂಬುದಾಗಿ ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿವಾಕ್ಯಗಳಿಂದ ವಿರೋಧ ಬರುತ್ತದೆ. ಆದ್ದರಿಂದ ಮಹಾಪ್ರಕರಣವೆಂಬ ಆಕ್ಷೇಪವೂ ಸಹ ನಿರಸ್ತವಾಯಿತು. ಈ ಅಭಿಪ್ರಾಯದಿಂದಲೇ ನ್ಯಾಯವಿವರಣದಲ್ಲಿ "ಸಂದಿಗ್ಧಶ್ರುತಿಲಿಂಗಾಭ್ಯಾಂ ನಿಶ್ಚಿತಯೋರ್ಲಿಂಗ ಪ್ರಕರಣಯೋರೇವ ಬಲವತ್ತ್ವಮ್" ಅದಿತಿಶ್ರುತಿ ಹಾಗೂ ಅದಿತಿತ್ವ ಲಿಂಗಗಳು ಸಾವಕಾಶಗಳಾಗಿವೆ. ಸರ್ವಾತ್ತೃತ್ವವೆಂಬ ಲಿಂಗ "ನೇಹಾಸೀತ್ಕಿಂಚನ" ಇತ್ಯಾದಿ ಪ್ರಕರಣ ಇವುಗಳು ನಿರವಕಾಶಗಳಾಗಿವೆ. ಸಾವಕಾಶ ಪ್ರಮಾಣಗಳಿಗಿಂತ ನಿರವಕಾಶ ಪ್ರಮಾಣಗಳು ಬಲಿಷ್ಠವಾಗಿವೆ ಎಂದು.

ಮೊದಲನೆಯ ಸೂತ್ರದಲ್ಲಿ ಸರ್ವಾತ್ತೃತ್ವವೆಂಬ ಲಿಂಗವು ಹೇಳಲ್ಪಟ್ಟಿದೆ. ಎರಡನೆಯ ಸೂತ್ರದಲ್ಲಿ ಪ್ರಕರಣ ಪ್ರಮಾಣವು ಹೇಳಲ್ಪಟ್ಟಿದೆ. ಪ್ರಕರಣಕ್ಕಿಂತ ಲಿಂಗವು ಶ್ರೇಷ್ಠವಾದ್ದರಿಂದ ಸೂತ್ರಕ್ರಮವು ಸ್ಪಷ್ಟವಾಗಿಯೇ ಇದೆ.

**प्रकाशः –**

पूर्वं न्यायविवरणटीकारीत्या अन्यत्रप्रयुक्तादितिशब्दान्वाख्यनपरत्वं विवृतं, इदानीमेतट्टीकोक्तं हेतुपरत्वं विवृणोति – किञ्चेति । पूर्वोक्तात्तृत्व इति । "तत्तदत्तुमध्रियत आदच" इति पूर्ववाक्योक्तात्तृत्व इत्यर्थः । हेतुरिति । यतस्सर्वात्तृत्वादेवादितिशब्दवाच्यत्वमतस्सर्वात्तृत्वनिमित्तकादितिशब्दवाच्यत्वादेव सर्वमाददिति हेतुरुच्यत इत्यर्थः ।

ಇಲ್ಲಿಯ ತನಕ ನ್ಯಾಯವಿವರಣಟೀಕೆಯ ಪ್ರಕಾರ ಅನ್ಯತ್ರಪ್ರಯುಕ್ತವಾದ ಅದಿತಿಶಬ್ದವನ್ನು ಅನ್ವಾಖ್ಯಾನಪರವೆಂದು ವಿವರಿಸಿದರು. ಪ್ರಕೃತ ತತ್ತ್ವಪ್ರಕಾಶಿಕೆಯ ಪ್ರಕಾರ ಇದೇ ಅದಿತಿ ಶಬ್ದವು

ಹೇತುಪರವಾಗಿದೆಯೆಂದು ವಿವರಿಸುತ್ತಿದ್ದಾರೆ 'ಕಿಂಚ' ಇತ್ಯಾದಿ ವಾಕ್ಯದಿಂದ. ಗ್ರಂಥದಲ್ಲಿ 'ಪೂರ್ವೋಕ್ತಾತ್ತೃತ್ವೇ' ಎಂದಿದೆ. ಇದರಿಂದ "ತತ್ತದತ್ತುಮಧ್ರಿಯತ" = ಸೃಷ್ಟಿಮಾಡಿದ್ದಲ್ಲವೆನ್ನು ತಿನ್ನಲು ಬಯಸಿದನು. ಆದಾಚ್ಚ = ತಿಂದನೂ ಕೂಡ ಎಂಬುದಾಗಿ ಹಿಂದಿನ ವಾಕ್ಯದಲ್ಲಿ ಹೇಳಲ್ಪಟ್ಟ ಅತ್ತೃತ್ವವನ್ನು ವಿವಕ್ಷಿಸಬೇಕು. ಕಾರಣವನ್ನು 'ಹೇತುಃ' ಇತ್ಯಾದಿಯಾಗಿ ಹೇಳಿದ್ದಾರೆ. ಯಾವ ಕಾರಣದಿಂದ ಸರ್ವಾತ್ತೃತ್ವವು ಇರುವುದರಿಂದ ಅದಿತಿಶಬ್ದವಾಚ್ಯತ್ವವು ಬರುತ್ತದೋ ಆ ಕಾರಣದಿಂದ ಅಂದರೆ ಸರ್ವಾತ್ತೃತ್ವನಿಮಿತ್ತಕವಾದ ಅದಿತಿವಾಚ್ಯಶಬ್ದ ವಾಚ್ಯತ್ವವು ಇರುವುದರಿಂದಲೇ ಎಲ್ಲವನ್ನು ತಿಂದನು ಎಂಬುದಾಗಿ ಹೇತುವು ಹೇಳಲ್ಪಟ್ಟಿದೆ ಎಂದರ್ಥ.

**प्रकाशः – स्थलान्तरस्येति** । विष्णौ श्रुत्यन्तरे प्रयुक्तस्येत्यर्थः । **हेतुत्वमुक्तमिति** । तत्तदत्तुं मनोऽध्रियत आदच्च कुतस्सर्वात्त्री सा सर्वमत्तीति यत्तदेव ह्यदितेरदितित्वनिमित्तमित्युक्तमित्यर्थः । "नच बाधं विना" इत्यर्थं व्यनक्ति – **एवञ्चेति** । न केवलं बाधकाभावः, असङ्कुचितवृत्तिकत्वे ज्ञापकं चास्तीति भावेन सुधोक्तमाह – **पूर्वेति** ।

यदपि स्वीकृतश्च सिद्धान्तिना सङ्कोच इति, तत्राह – **सर्वस्येति** । असम्भवस्यैव बाधकत्वादिति भावः ।

'ಸ್ಥಲಾಂತರಸ್ಯ' ಎಂದರೆ ವಿಷ್ಣುವಿನಲ್ಲಿ ಪ್ರಯೋಗಿಸಲ್ಪಟ್ಟ ಎಂದರ್ಥ. 'ಹೇತುತ್ವಮುಕ್ತಂ' ಎಂದರೆ 'ತತ್ತದತ್ತು ಮನೋಽಧ್ರಿಯತ ಆದಾಚ್ಚ' ಎಂಬುದಾಗಿ ಶ್ರುತಿಯಲ್ಲಿ ಸರ್ವಾತ್ತೃತ್ವವು ಹೇಳಲ್ಪಟ್ಟಿದೆ. ಈ ಸರ್ವಾತ್ತೃತ್ವವು 'ಸರ್ವಂ ಅತ್ತೀತಿ ಯತ್ ತದೇವ ಹ್ಯದಿತೇರದಿತಿತ್ವ ನಿಮಿತ್ತಮ್' ಎಂಬುದಾಗಿ ಎಲ್ಲವನ್ನೂ ತಿನ್ನುವವನಾದ್ದರಿಂದ ಅದಿತಿ ಎನಿಸಿದ್ದಾನೆಂಬುದಾಗಿ ಅದಿತಿಶಬ್ದವು ಕಾರಣವನ್ನು ಹೇಳುತ್ತಿದೆ. "ನಚ ಬಾಧಂ ವಿನಾ ಸರ್ವಶಬ್ದಸಂಕೋಚಮರ್ಹತಿ" ಎಂಬ ಅರ್ಧ ಶ್ಲೋಕವನ್ನು 'ಏವಂಚ' ಎಂಬುದರಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಏವಂಚ' ಎಂಬುದಕ್ಕೆ ಹೀಗರ್ಥ - ಬಾಧಕವಿಲ್ಲದ್ದರಿಂದ ಸಂಕೋಚ ಮಾಡಬಾರದೆಂದಷ್ಟೇ ಅಲ್ಲ. ಅಸಂಕುಚಿತವಾದ ಅರ್ಥವನ್ನು ಸ್ವೀಕರಿಸಲು ವೀಪ್ಸಾಯಾ ಎಂಬ ಸಾಧಕ ಪ್ರಮಾಣವೂ ಇದೆ ಎಂಬುದಾಗಿ ತಿಳಿಯಬೇಕು. ಇದಕ್ಕೆ ಸುಧಾಕಾರರ ಸಮ್ಮತಿಯೂ ಇದೆ ಎಂಬುದಾಗಿ 'ಪೂರ್ವವಾಕ್ಯೇ' ಎಂಬುದರಿಂದ ನಿರೂಪಿಸುತ್ತಿದ್ದಾರೆ.

ಹಿಂದೆ ಪೂರ್ವಪಕ್ಷ ಮಾಡುವಾಗ ಸರ್ವಶಬ್ದಕ್ಕೆ ಸಂಕೋಚ ಮಾಡುವಿಕೆಯನ್ನು ಸಿದ್ಧಾಂತಿಗಳೂ ಸಹ ಒಪ್ಪಿದ್ದಾರೆಂಬುದಾಗಿ ಆಕ್ಷೇಪಿಸಿದ್ದರು. ಅದಕ್ಕೆ ಈಗ 'ಸರ್ವಸ್ಯ' ಎಂಬುದಾಗಿ ಉತ್ತರಿಸುತ್ತಿದ್ದಾರೆ. ಜೀವರು ಎಲ್ಲವನ್ನೂ ತಿನ್ನುತ್ತಾರೆಂದು ಹೇಳಿದಾಗ ಸರ್ವಶಬ್ದಕ್ಕೆ ಸಂಕೋಚ ಮಾಡದಿದ್ದರೆ 'ಅಸಂಭಾವಿತತ್ವ' ಎಂಬ ಬಾಧಕವು ಬರುತ್ತದೆಂದು ತಿಳಿಯಬೇಕು.

**प्रकाशः** – पूषादिवच्चेत्यर्थं व्यनक्ति – **नचेति** । उक्तरीत्या श्रुतिलिङ्गयोस्सावकाशत्वेनोभयोरबाधकत्वादिति भावः । उक्तं चाऽर्थवादाधिकरणे "प्रकरणे च

ಭಗವಂತನ ಭೋಗದ ವಿಚಾರವನ್ನು ಛಾಂದೋಗ್ಯಭಾಷ್ಯದಲ್ಲಿ 'ಭುಂಕ್ತೇ ಗುಣಾನ್ ಷೋಡಶ ಷೋಡಶಾತ್ಮಕಾನ್‌ಸೋऽಲಂಕೃಷೀಷ್ಟ ಭಗವಾನ್ ವಚಾಂಸಿ ಮೇ' ಇತ್ಯಾದಿಯಾಗಿ ಭಗವಂತನೇ ತನ್ನ ಸ್ವರೂಪ ಇಂದ್ರಿಯಗಳಿಂದಲೇ ಭೋಗವನ್ನು ಮಾಡುತ್ತಾನೆಂದು ಹೇಳಿದ್ದಾರೆ. ಅದರಂತೆ 'ಸ ಏತೈರಿಂದ್ರಿಯೈರ್ವಿಷ್ಣುಃ ಭೋಗಾನನುಭವತ್ಯಜಃ' । ಸ್ವರೂಪೇಣೈವ ಶಕ್ತೋऽಪಿ ಜೀವದೇಹಸ್ಥಿತೋ ಹರಿಃ । ಭುಂಕ್ತೇ ತದಿಂದ್ರಿಯೈಃ ಭೋಗಾನ್ ಭುರಿತೈರಿಂದ್ರಿಯೈಃ ಸ್ವಕೈಃ' ಎಂದು ಅಷ್ಟಮಸ್ಕಂಧದಲ್ಲಿಯೂ ಸಹ ಪಾರ್ಥಿವಶರೀರದ ಇಂದ್ರಿಯಗಳಿಂದಲೇ ಭೋಗವನ್ನು ಅನುಭವಿಸುತ್ತಾನೆ. ಸ್ವರೂಪ ಇಂದ್ರಿಯಗಳಿಂದಲೇ ಭೋಗಿಸಲು ಶಕ್ತನಾಗಿದ್ದರೂ ಸಹ ಜೀವನ ದೇಹದಲ್ಲಿ ನೆಲೆಸಿ ಅವನ ಇಂದ್ರಿಯಗಳಿಂದ ಭೋಗಿಸಲು ತನ್ನ ಇಂದ್ರಿಯಗಳನ್ನು ಉಪಯೋಗಿಸಿಕೊಳ್ಳುತ್ತಾನೆಂದು ಹೇಳಿದ್ದಾರೆ.

**भावदीपः – अशुभभोगेति ।।** कुत एवं सङ्कोचः श्रुतेरित्यतो 'असद्व्यपदेशान्नेति चेन्न धर्मान्तरेण वाक्यशेषाद्' इति वक्ष्यमाणन्यायेन वाक्यशेषोक्तभोगा-न्यथानुपपत्त्या ईशभोगस्याशुभविषयकत्वं नेत्येवानशनश्रुतेरर्थ इति मत्वाऽऽह – **तथाहीति ।।** आथर्वणे अस्याऽश्रुतावपि ऋक्शाखायामस्ति श्रवणं यः अग्रे अग्र्यः श्रेष्ठः तस्यैव स्वादु पिप्पलं कर्मफलमाहुः । यः पितरं विष्णुमुत् उत्कृष्टं न वेद अत एव नशत् नाशवान् तस्य स्वादु पिप्पलं नेति वाक्यशेषार्थो ध्येयः । 'जीवाद्यमेव नाश्नाति नतु नाश्नात्येव तस्येदाहुः पिप्पलं स्वाद्वग्रे' इत्युक्तत्वादित्याथर्वणभाष्ये वाक्यशेषे जीवानद्यस्वाद्वदनोक्त्या 'अन्यः पिप्पलं स्वाद्वत्ति' इति पूर्ववाक्येऽस्वाद्वेव स्वादुत्वेन जीवेनाद्यमानमनश्नन्निति निषिद्ध्यत इति तद्विविक्तसारांशभोक्तृत्वं तु विद्यत एवेत्यर्थान्तरमुक्तम् ।

ಟೀಕೆಯಲ್ಲಿ 'ಅಶುಭಭೋಗ' ಎಂದಿದೆ. ಅಂದರೆ ಅಥರ್ವಣ ಶ್ರುತಿಯಲ್ಲಿ ಕೇಳಿಸುವ 'ಅನಶ್ನನ್' ಎಂಬ ಪದಕ್ಕೆ ಅಶುಭವಾದದ್ದನ್ನು ಪರಮಾತ್ಮನು ಭೋಗ ಮಾಡುವುದಿಲ್ಲವೆಂದು ತಿಳಿಯಬೇಕು. ಇದರ ಮೇಲೆ ಪ್ರಶ್ನೆ ಬರುತ್ತದೆ - ಹೀಗೇಕೆ 'ಅನಶ್ನನ್' ಎಂಬುದಕ್ಕೆ ಸಂಕೋಚ ಮಾಡಿ ಅರ್ಥವನ್ನು ಹೇಳಬೇಕು ? ಏನನ್ನೂ ಭೋಗಿಸುವುದಿಲ್ಲವೆಂದು ಏಕೆ ಹೇಳಬಾರದು? ಎಂದರೆ - 'ಅಸದ್‌ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್' ಎಂಬ ಸೂತ್ರದ ನ್ಯಾಯಾನುಸಾರವಾಗಿ ಮತ್ತು ಇದೇ ಶ್ರುತಿಯಲ್ಲಿ 'ಅಭಿಚಾಕಶೀತಿ' ಅತಿಶಯವಾಗಿ ಪ್ರಕಾಶದಿಂದ ಇದ್ದಾನೆ ಎಂದು ಮುಂದೆ ಇದೆ. ಈ ಅತಿಶಯವಾದ ಪ್ರಕಾಶತ್ವವು ಭೋಗವಿಲ್ಲದೆ ಕೂಡುವುದಿಲ್ಲ. ಆದ್ದರಿಂದ ಪರಮಾತ್ಮನು ಅಶುಭವಾದದ್ದನ್ನು ಭೋಗ ಮಾಡುವುದಿಲ್ಲವೆಂದು ಸಿದ್ಧವಾಗುತ್ತದೆ. ಅಲ್ಲದೆ ಆಥರ್ವಣಭಾಷ್ಯದಲ್ಲಿ ಹೇಳಿರುವ ವಾಕ್ಯಶೇಷವನ್ನು 'ತಥಾ ಹಿ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಈ ವಾಕ್ಯಶೇಷವು ಆಥರ್ವಣೋಪನಿಷತ್ತಿನಲ್ಲಿ ಕೇಳಿಸದಿದ್ದರೂ ಋಕ್‌ಶಾಖೆಯಲ್ಲಿ ಕೇಳಿಸುತ್ತಿದೆ.

ಯಃ = ಯಾರು, ಅಗ್ರೇ = ಶ್ರೇಷ್ಠನಾದವನು, ತಸ್ಸ್ಯೈವ = ಆ ಪರಮಾತ್ಮನೇ, ಸ್ವಾದು ಪಿಪ್ಪಲಂ = ಸಾರ ಕರ್ಮಫಲವನ್ನು ಭೋಗಿಸುತ್ತಾನೆ. ಯಃ = ಯಾವ ಜೀವನು, ಪಿತರಂ = ತಂದೆಯಾದ ವಿಷ್ಣುವನ್ನು, ಉತ್ = ಉತ್ಕೃಷ್ಟನೆಂದು, ನ ವೇದ = ಅರಿಯದೆ, ಆದ್ದರಿಂದಲೇ, ನಶತ್ = ನಾಶಹೊಂದುತ್ತಾನೆ. ತಸ್ಯ = ಆ ಜೀವನಿಗೆ, ಸ್ವಾದು ಪಿಪ್ಪಲಂ = ಸಾರವಾದ ಕರ್ಮಫಲವು ನ = ಉಣಲು ಸಿಗಲಾರದು. ಹೀಗೆ ವಾಕ್ಯಶೇಷದ ಅರ್ಥವನ್ನು ತಿಳಿಯಬೇಕು.

''ಜೀವಾದ್ಯಮೇವ ನಾಶ್ನಾತಿ ಭಗವಾನ್ ನ ತು ನಾಶ್ನಾತ್ಯೇವ । ತಸ್ಯೇದಾಹುಃ ಪಿಪ್ಪಲಂ ಸ್ವಾದ್ವಗ್ರೇ'' । ಎಂದು ಆಥರ್ವಣ ಭಾಷ್ಯದ ವಾಕ್ಯಶೇಷದಲ್ಲಿ, ಜೀವನು ಭೋಗಿಸುವ ಅಸಾರ ಪುಣ್ಯವೆಂದು ಹೇಳದೆ, 'ಅನ್ಯಃ ಪಿಪ್ಪಲಂ ಸ್ವಾದ್ವತ್ತಿ'' ಎಂದು ಹಿಂದಿನ ವಾಕ್ಯದಲ್ಲಿ ಹೇಳಿದಂತೆ ಅಸಾರವಾದದ್ದನ್ನೇ ಸಾರವೆಂದು ಜೀವನು ಭೋಗಿಸುವುದನ್ನು ಪರಮಾತ್ಮನು ಭೋಗಿಸುವುದಿಲ್ಲವೆಂದು ನಿಷೇಧಿಸುತ್ತಿದೆ ಹೊರತು ಪರಮಾತ್ಮನಿಗೆ ಭೋಗವೇ ಇಲ್ಲವೆಂದಲ್ಲ. ಪರಮಾತ್ಮನಿಗೆ ಸತ್ಕರ್ಮಗಳ ಸಾರಭೋಗವನ್ನು ಶ್ರುತಿಯು ಹೇಳಿದೆ.

**भावदीपः** – 'प्रविविक्ताहारभुग् यस्माच्छारीरादात्मनः' इति श्रुतेः । तथा 'स्वातन्त्र्येणैव भोक्तृत्वाद् दुःखाभोगाच्च सर्वदा । अभोक्ता चैव भोक्ता च' इति इति परतन्त्रभोगदुःखरूपाशुभभोगनिषेधरूपार्थान्तरद्वयमुक्तम् । 'एकस्तयोः खादति पिप्पलान्नमन्यो निरन्नोऽपि बलेन भूयान्' इति एकादशस्कन्धतात्पर्ये । 'अत्तिं विनाप्यादौर्बल्यात्तथा नात्तिहरिर्भुजः' इत्यादिना जीववदुपजीवनार्थाशनं नेत्यर्थान्तर मनशनश्रुतेरुक्तम् ।

वक्ष्यते चैतदेव 'स्थित्यतदनाभ्यां च' इति सूत्रे । तथाच गीताभाष्येऽपि स्थूलभोगाभावादिपरतयाऽपि सप्तमे विवृतमेतत् । 'ऋतं पिबन्तौ' इत्यत्र ऋतशब्दः 'ऋतं सत्यं तथा धर्मः' इति गीताभाष्योक्त्या धर्ममात्रपर इति भावः।

''ಪ್ರವಿವಿಕ್ತಾಹಾರಭುಗ್ಯಸ್ಮಾಚ್ಛಾರೀರಾದಾತ್ಮನಃ'' (ಶರೀರದಲ್ಲಿರುವ ಪರಮಾತ್ಮನು ಪ್ರಕೃಷ್ಟವಾದ ಆಹಾರವನ್ನು ಭೋಗಿಸುತ್ತಾನೆ) ಎಂದು ಶ್ರುತಿ ಇದೆ. ಅದರಂತೆ ''ಸ್ವಾತಂತ್ರ್ಯೇಣೈವ ಭೋಕ್ತೃತ್ವಾದ್ ದುಃಖಾಭೋಗಾಚ್ಚ ಸರ್ವದಾ । ಅಭೋಕ್ತಾ ಚೈವ ಭೋಕ್ತಾ ಚ ।'' (ಸ್ವತಂತ್ರವಾಗಿ ಭೋಗ ಮಾಡುವವನಿಗೆ ಯಾವ ಕಾಲಕ್ಕೂ ದುಃಖದ ಭೋಗವು ಇರುವುದಿಲ್ಲ. ಆದ್ದರಿಂದಲೇ ಭೋಕ್ತನಾಗಿದ್ದರೂ ಭೋಕ್ತನಲ್ಲವೆಂದು ಕರೆಯುತ್ತಾರೆ) ಎಂದು ಪರತಂತ್ರಭೋಗವಾದ ದುಃಖರೂಪವಾದ ಅಶುಭಭೋಗವನ್ನು ನಿಷೇಧ ರೂಪವಾದ ಅರ್ಥಾಂತರದ್ವಯವನ್ನು ಹೇಳಿದ್ದಾರೆ. ''ಏಕಃ ತಯೋಃ ಸ್ವಾದ್ವತ್ತಿ ಪಿಪ್ಪಲಾನ್ನಂ ಅನ್ಯೋ ನಿರನ್ನೋಽಪಿ ಬಲೇನ ಭೂಯಾನ್'' (ಅವರಿಬ್ಬರಲ್ಲಿ ಒಬ್ಬನು ಕರ್ಮಫಲವನ್ನು ಭೋಗಿಸುತ್ತಾನೆ,

ಮತ್ತೊಬ್ಬನು ಏನನ್ನು ತಿನ್ನದಿದ್ದರೂ ಬಲದಿಂದ ಇದ್ದಾನೆ) ಎಂದು ಭಾಗವತ ಏಕಾದಶಸ್ಕಂಧದ ತಾತ್ಪರ್ಯದಲ್ಲಿಯೂ ಸಹ ಇದೆ. ''ಅತ್ತಿಂ ವಿನಾಪ್ಯದೌರ್ಬಲ್ಯಾತ್ತಥಾ ನಾತ್ತಿರ್ಹರೇರ್ಭುಜಃ'' (ಏನನ್ನು ತಿನ್ನದಿದ್ದರೂ ದುರ್ಬಲನಾಗಿಲ್ಲ ಆದ್ದರಿಂದಲೇ ಹರಿಯು ಭೋಗ ಮಾಡುವುದಿಲ್ಲ) ಇತ್ಯಾದಿ ಪ್ರಮಾಣಾನುಸಾರಿಯಾಗಿ ಜೀವನಂತೆ ಉಪಜೀವನಕ್ಕಾಗಿ ತಿನ್ನುವುದಿಲ್ಲವೆಂದು ''ಅನಶ್ನನ್'' ಶ್ರುತಿಗೆ ಇನ್ನೊಂದು ಅರ್ಥವನ್ನು ಹೇಳಿದ್ದಾರೆ. ಈ ವಿಷಯವನ್ನೇ ಮುಂದೆ ದ್ಯುಭ್ವಾದ್ಯಧಿಕರಣದ ''ಓಂ ಸ್ಥಿತ್ಯದನಾಭ್ಯಾಂ ಚ ಓಂ ''ಎಂಬ ಸೂತ್ರದಲ್ಲಿ ವಿಸ್ತಾರವಾಗಿ ಹೇಳಲಿದ್ದಾರೆ. ಆದ್ದರಿಂದಲೇ ಗೀತಾಭಾಷ್ಯದ ಏಳನೇ ಅಧ್ಯಾಯದಲ್ಲಿಯೂ ಸಹ ಪರಮಾತ್ಮನಿಗೆ ಭೋಗವಿಲ್ಲವೆಂಬುದನ್ನು ಸ್ಥೂಲ ಭೋಗಾಭಾವಪರವಾಗಿ ವಿವರಣೆ ಮಾಡಿದ್ದಾರೆ. ''ಋತಂ ಪಿಬಂತೌ'' ಎಂಬಲ್ಲಿ ಋತ ಶಬ್ದಕ್ಕೆ ಸತ್ಯವೆಂದು ಮತ್ತು ಧರ್ಮವೆಂದು ಗೀತಾಭಾಷ್ಯದಲ್ಲಿ ಹೇಳಿದ್ದರಿಂದ ಧರ್ಮಮಾತ್ರ ಪರವಾಗಿದೆಯೆಂದು ಅಭಿಪ್ರಾಯ.

**भावदीपः –** ।। **प्रसिद्धमेवेति** ।। शीघ्रमुपस्थितेः । नहि मैथिल इत्युक्ते यः कश्चिन्मिथिलाभवो भासते । किन्तु यस्तद्भवः तदधिपः स एवेति भावः । भाष्ये इत्यादिना प्रसिद्धमित्यस्यान्वयाप्रतीतेरपेक्षितपूर्त्याऽन्वयमाह – **इत्यादिनेति** ।। आदिपदेन 'गुहाहितं गह्वरेष्ठं पुराणम्' 'गुहां प्रविश्य तिष्ठन्तम्' इत्यादि ग्राह्यम् ।।११।।

ಟೀಕೆಯಲ್ಲಿ ''ಪ್ರಸಿದ್ಧಮೇವ'' ಎಂದಿದೆ. ಇದರ ಅಭಿಪ್ರಾಯ ತತ್‌ಕ್ಷಣವೇ ಉಪಸ್ಥಿತವಾಗುತ್ತದೆಂದರ್ಥ. ಹೇಗೆಂದರೆ ಯಾವ ರೀತಿಯಾಗಿ ''ಮೈಥಿಲಃ'' ಎಂದರೆ ಯಾವನೋ ಒಬ್ಬ ಮಿಥಿಲಾಪಟ್ಟಣದ ವಾಸಿಯೆಂಬ ಅರ್ಥ ತೋರದೆ, ಮಿಥಿಲಾ ಪಟ್ಟಣದಲ್ಲಿರುವ ರಾಜನೆಂದು ಅರ್ಥವಾಗುತ್ತದೋ ಅದೇ ರೀತಿಯಾಗೆಂದು ತಿಳಿಯಬೇಕು.

ಭಾಷ್ಯದಲ್ಲಿ ''ಇತ್ಯಾದಿನಾ ಪ್ರಸಿದ್ಧಂ'' ಎಂಬ ವಾಕ್ಯದ ಅನ್ವಯವು ಸ್ಪಷ್ಟವಾಗಿ ತೋರುವುದಿಲ್ಲ. ಅನ್ವಯದ ಅಪೇಕ್ಷೆಯನ್ನು ಪೂರ್ತಿ ಮಾಡಲು ''ಇತ್ಯಾದಿನಾ'' ಎಂದು ಹೇಳಿದ್ದಾರೆ. ಟೀಕೆಯ ''ಗುಹಾನಿವಿಷ್ಟತ್ವಮಿತ್ಯಾದಿನಾ'' ಎಂಬಲ್ಲಿರುವ ಆದಿ ಪದದಿಂದ ''ಗುಹಾಹಿತಂ ಗಹ್ವರೇಷ್ಠಂ ಪುರಾಣಂ । ಗುಹಾಂ ಪ್ರವಿಶ್ಯ ತಿಷ್ಠಂತಂ '' । ಇತ್ಯಾದಿ ಶ್ರುತಿಗಳನ್ನು ಗ್ರಹಣ ಮಾಡಬೇಕು.

**वाक्यार्थमञ्जरी –** एकस्येत्येतद् द्विवचनानुपपत्तिस्फुरणायोक्तं । कर्मफलात्तृत्वं न प्रतीयत इत्यत आह – **पातृत्वशब्दवाच्यमिति** ।। षष्ठ्यर्थो जन्यजनकभावसम्बन्ध इत्याह – **सुकृतनिर्मित इति** ।। आऋद्धः अर्द्धः परेभ्योऽप्यर्द्धः परार्ध इत्याशयेन परार्धशब्दार्थमाह – **अतिपूर्णेति** ।। **पञ्चमहायज्ञेति** ।। देवपितृभूतमनुष्यब्रह्मयज्ञरूप-पञ्चमहायज्ञा इत्यर्थः । यद्वा अग्निहोत्रं दर्शपूर्णमासौ चातुर्मास्यानि पशुः सोम

इति मञ्चमहायज्ञा इत्यर्थः ।। **द्युपर्जन्येति** ।। द्युपर्जन्यपृथिवीपुरुषयोषिद्रूप पञ्चाग्निविद्येत्यर्थः । नाचिकेताः नाचिकेतनामकेष्टिवन्तः । छायातपौ विद्वदविद्वत्सुखदुःखकरौ । अन्यस्यैव द्वयोर्बुद्धिजीवत्वपक्षे न तस्य सर्वात्तृत्वं तथाचासम्भव इति भावः । अन्यस्यापि द्वयोर्जीवेश्वरत्वपक्षे गुहां प्रविष्टत्वादि विष्णुलिङ्गसहचरितकर्मफलभोगवतः सर्वात्तृत्वस्यापि सम्भावयितुं शक्यत्वादिति भावः ।। **विष्णोरन्यस्य वेति** ।। किं विष्णोरेवातोऽन्यस्यापीत्यर्थः ।।

।। **निरवकाशत्वादिति** ।। तद्वाच्यद्वित्वस्य निर्भेदे हरौ कथमपि घटयितुमशक्यत्वादिति भावः । बहुरूपत्वाच्चेत्यानन्दमयनयोक्तरीत्या द्विवचनश्रुतिः सावकाशेत्यतो निमित्तान्तरमाह – **कर्मेति** ।। हरिः कर्मफलाभोक्ता तद्बन्धविधुरत्वाद् घटवदिति युक्तिविरोधमभिधाय श्रुतिविरोधं चाह – **अनश्नन्निति** ।। जीवादन्यो हरिः पिप्पलं कर्मफलम् अनश्नन्नेवाभिचाकशीतीत्यर्थः ।।

**छत्रिन्यायेनेति** ।। छत्र्यछत्रिसमुदाये यथा छत्रिणो गच्छन्तीत्यौपचारिक-प्रयोगः, एवं भोक्त्रभोक्तृसमुदायेऽप्यौपचारिकपिबन्ताविति प्रयोग इत्यर्थः । विरोध ईश्वरस्य भोगानङ्गीकारे को हेतुरिति प्रश्नस्योत्तरमाह – **एकस्येति** ।। न्याय्यत्वात् । अस्य गोरिति वक्ष्यमाणरीत्या ।। **भोक्तृजीवद्वयेति** ।। तच्छरीरजन्यकर्मफलभोक्तृजीव द्वयेत्यर्थः । तेन पिशाचावेशवत् किं न स्यादिति निरस्तम् ।

ननु जीवस्यैव मुख्यतः पातृत्वमीश्वरस्य तूपचारतस्तदङ्गीकारे युगपद् वृत्तिद्वयप्रसङ्ग इत्यत आह – **द्वयोरपीति** ।। द्वित्वावच्छेदेनोभयत्राप्युपचार इत्यर्थः । अत एव पूर्वं तादृश एव छत्रिन्याय उदाहृतः ।।

**ॐ गुहां प्रविष्टावात्मानौ हि तद्दर्शनात् ॐ** ।। कर्मफलभोक्तारावात्मानावेव । आत्मान्तरात्माख्यभगवद्रूपविशेषावेव न जीवेश्वरौ । कुतः? हि यस्माद् गुहां प्रविष्टौ गुहाप्रविष्टत्वं च यो वेद निहितं गुहायामित्यादिना तत्रैव प्रसिद्धमित्यपि हिशब्दार्थः । रूपद्वयस्य गुहास्थत्वं कुतः? इत्यत उक्तम् तद्दर्शनात् । तस्यात्मनो गुहास्थत्वस्य घर्मा समन्तेत्यादिश्रुत्युक्तेरित्यर्थः । वीत्युपसर्गार्थो विशेषेण गुहास्थान इति । आवृत्तिं मत्वाह – **त्रिवृतमिति** ।। आत्मा देहस्थः । अन्तरात्मा जीवस्थः ।

कर्मफलभोगस्येन्द्रियसाध्यत्वाद् हृदयप्रविष्टस्य कथं तदित्यत आह – **तथाचेति** ।। अर्थबाहुल्याद् बहुवचनम् । अधिष्ठाय तत्र स्थित्वा उपसेवते भुङ्क्ते ।। **पूर्णानन्दत्वादिति** ।। पूर्णानन्दत्वेन दुःखावकाशाभावात् । प्राप्तव्यसुखापेक्षाभावाच्चेति भावः । शुभाशुभशब्दौ सुखदुःखपरौ । अन्तरङ्गज्ञापकं चाह – **तथाहीति** ।। यो भगवानग्रे अग्र्यः सर्वतः श्रेष्ठः तस्येत् तस्यैव पिप्पलं कर्मफलं स्वादु शुभमाहुः । यस्तु जीवः पितरं जगज्जनकं भगवन्तम् उत् उत्कृष्टत्वेन न वेद । अत एव न शतनरकाद्यनर्थरूपं नाशं प्राप्नुवानो पुरुषार्थनाशवान् वा तस्य पिप्पलं न स्वाद्वाहुरित्यर्थः । इत्यादिनेत्याद्यनुवादः । विष्णोरेवेत्यादि व्याख्या ।।

****

# ಬ್ರಹ್ಮಮೀಮಾಂಸಾಶಾಸ್ತ್ರ

## ಬ್ರಹ್ಮ ಮೊದಲಾದ ವಿಶೇಷಣಗಳೂ ಕೂಡ ಪೂರಕವಾಗಿವೆ

**ॐ विशोषणाच्च ॐ** ।। १-२-१२ ।।

"ಯಃ ಸೇತುರೀಜಾನಾನಾಂ" ಎಂಬ ಮಂತ್ರದಲ್ಲಿ ಬ್ರಹ್ಮ ಮೊದಲಾದ ವಿಶೇಷಣಗಳಿರುವುದರಿಂದಲೇ ಕರ್ಮಫಲ ಭೋಕ್ತೃ ಪರಮಾತ್ಮನ ಎರಡು ರೂಪಗಳೇ ಆಗಿವೆ.

* * *

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – चः युक्तिसमुच्चये । "यः सेतुः" (कठ. १-३-२) इति एकवचनेन विशेषणात् एक एव पाता स च सेतुत्वब्रह्मत्वादिना विशेषितत्वात् न जीव इत्यर्थः ।

'ಚ' ಶಬ್ದವು ಯುಕ್ತಿಸಮುಚ್ಚಯದಲ್ಲಿದೆ. ''ಯಃ ಸೇತುಃ''ಎಂಬ ಕಠೋಪನಿಷತ್ತಿನ ಮಂತ್ರದಲ್ಲಿ ಏಕವಚನದಿಂದ ವಿಶೇಷಣವನ್ನು ಹೇಳುವುದರಿಂದ ಭೋಕ್ತೃ ಒಬ್ಬನೇ ಆಗಿದ್ದಾನೆ. ಅವನು ಸೇತುತ್ವ ಬ್ರಹ್ಮತ್ವ ಮೊದಲಾದ ವಿಶೇಷಣಗಳಿಂದ ವಿಶಿಷ್ಟನಾದ್ದರಿಂದ ಜೀವನಲ್ಲ.

## सूत्रभाष्यम्

**भाष्यम् - 'यः सेतुरीजानानामक्षरं ब्रह्म तत् परम्' (कठ. १-३- २.) इति ॥**

ಅನುವಾದ - ಶುಭಫಲವನ್ನು ಅನುಭವಿಸುವ ಪರಮಾತ್ಮನಿಗೆ ಮುಂದಿನ 'ಯಃ ಸೇತುಃ' ಎಂಬ ಕಠೋಪನಿಷತ್ತಿನ ಮಂತ್ರದಲ್ಲಿ ಏಕತ್ವವನ್ನು ಬ್ರಹ್ಮತ್ವವನ್ನೂ ಹೇಳಿರುವುದರಿಂದ ವಿಷ್ಣುವೇ ಹೃದಯದಲ್ಲಿ ನೆಲಿಸಿದ್ದಾನೆ.

ಈ ಅಧಿಕರಣದಲ್ಲಿ 'ಋತಂ ಪಿಬಂತೌ' ಎಂಬ ವಾಕ್ಯದ ಸಮನ್ವಯವನ್ನು ಜೀವನಲ್ಲಿ ಮಾಡುವುದು ಯುಕ್ತವಲ್ಲ. ಅದು ಪ್ರಕರಣಕ್ಕೆ ವಿರುದ್ಧವಾಗಿದೆ.

ಪ್ರತಿಪದಾರ್ಥ - ನಿರವಕಾಶವಾದ ಗುಹಾನಿಹತತ್ವವೆಂಬ ಲಿಂಗಕ್ಕೆ ಸಾವಕಾಶವಾದ ದ್ವಿವಚನಶ್ರುತಿಗಿಂತಲೂ ಪ್ರಾಬಲ್ಯವನ್ನು ತೋರಿಸಿ, ಪ್ರಕೃತ್ಯರ್ಥವಾದ ಭೋಕ್ತೃತ್ವವು ವಿಷ್ಣುವಿನಲ್ಲಿ ಕೂಡುವುದರಿಂದ ಅವನೇ ಭೋಕ್ತೃವೆಂದು ಸಾಧಿಸಿದ್ದಾಯಿತು. ಅಷ್ಟೇ ಅಲ್ಲ ನಿರವಕಾಶಶ್ರುತಿಯಿಂದ ಅವನೇ ಭೋಕ್ತೃವಾಗಿದ್ದಾನೆಂದು ಶ್ರುತಿಯನ್ನು ಉದಾಹರಿಸುವ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ -

ಯಃ = ಹಿಂದೆ ಹೇಳಲ್ಪಟ್ಟ ಯಾವ ಪರಮಾತ್ಮನು, ಈಜಾನಾನಾಂ = ತನ್ನ ಸೇವಕರಿಗೆ, ಸೇತುಃ = ರಕ್ಷಕನು, ಅಕ್ಷರಂ = ನಾಶರಹಿತನು, ಪರಃ = ಸರ್ವೋತ್ತಮನು, ಬ್ರಹ್ಮ = ಸಕಲ ಗುಣಪರಿಪೂರ್ಣನು, ಇತಿ = ಹೀಗೆ ಕಾಠಕೋಪನಿಷತ್ತಿನ ಮುಂದಿನ ಭಾಗವು ಹೃದ್ಗುಹಾಸ್ಥಿತನು ವಿಷ್ಣುವೇ ಆಗಿದ್ದಾನೆಂದು ಹೇಳುತ್ತಿದೆ.(१)

(१) **भाष्यदीपिका** – एवं यदा निरवकाशगुहानिहितत्वलिङ्गस्य सावकाशाद् द्विवचनश्रुतितोऽपि प्राबल्याद् विष्णोः प्रकृत्यर्थभोक्तृत्वसम्भवाच्च स एव पातेति सिद्ध्यति । किमु पुनर्निरवकाशश्रुत्याऽपीत्यर्थं प्रतिपादयत्सूत्रं पठित्वा तदभिप्रेतश्रुतिमेवोदाहरति – **विशेषणाच्चेति** ।। इति विशेषणादित्यन्वयः । सूत्रे पिबतोरिति विपरिणामेनानुवर्तते । चो युक्तिसमुच्चये । तथा च 'यः सेतुः' इति श्रुतौ पिबतोरेकवचन बोध्येनैकत्वेन विशेषणादेक एव पाता । स च यजमानसेतुत्वब्रह्मत्वाक्षरत्वादिना विशेषणाद् ब्रह्मणश्च परत्वेन विशेषणाद् विष्णुरेव, न जीव इति सूत्रार्थः । न केवलं लिङ्गात्, किन्तु – सेत्वादिश्रुतितोऽपीति चार्थः ।।

भाष्यम् –

**पृथग् वक्तुं गुणास्तस्य न शक्यन्तेऽमितत्वतः ।**
**यतोऽतो ब्रह्मशब्देन सर्वेषां ग्रहणं भवेत् ॥**

**एतस्माद् ब्रह्मशब्दोऽयं विष्णोरेव विशेषणम् ।**
**अमिता हि गुणा यस्मान्नान्येषां तमृते विभुम्' ॥ इति ब्राह्मे ॥**

ಅನುವಾದ - ಪರಮಾತ್ಮನ ಗುಣಗಳು ಪ್ರತ್ಯೇಕವಾಗಿ ಹೇಳಲು ಸಾಧ್ಯವಿಲ್ಲದ ಕಾರಣ ಯಾರಿಗೂ ಸಹ ಭಗವಂತನನ್ನು ತಿಳಿಯಲಾಗದು. ಆದರೆ ಬ್ರಹ್ಮಶಬ್ದದ ಬಲದಿಂದ ಆ ಎಲ್ಲ ಗುಣಗಳನ್ನು ಸಂಗ್ರಹವಾಗಿ ಹೇಳಬಹುದು. ಆದ್ದರಿಂದ ಬ್ರಹ್ಮಶಬ್ದದಿಂದ ವಿಷ್ಣುವೊಬ್ಬನೇ ವಾಚ್ಯನಾಗುತ್ತಾನೆ. ಏಕೆಂದರೆ ಅನಂತಗುಣಗಳು ಅವನಲ್ಲಿಯೇ ಇರುತ್ತವೆ ಹೊರತು ಬೇರೆಯವರಲ್ಲಿ ಇರುವುದಿಲ್ಲ.

ಪ್ರತಿಪದಾರ್ಥ - ತಸ್ಯ = ಆ ಪರಮಾತ್ಮನ, ಗುಣಾಃ = ಗುಣಗಳು, ಅಮಿತತ್ವತಃ = ಅನಂತವಾಗಿರುವುದರಿಂದ, ಪೃಥಕ್ = ಪ್ರತ್ಯೇಕವಾಗಿ, ವಕ್ತುಂ = ಹೇಳಲು, ನ ಶಕ್ಯಂತೇ = ಸಾಧ್ಯವಿಲ್ಲ, ಯತಃ = ಆದರೆ, ಅತಃ = ಯಾವಕಾರಣದಿಂದ, ಬ್ರಹ್ಮಶಬ್ದೇನ = ಬ್ರಹ್ಮಶಬ್ದದಿಂದ, ಸರ್ವೇಷಾಂ = ಸಮಸ್ತ ಗುಣಗಳ, ಗ್ರಹಣಂ = ಸಂಗ್ರಹವು, ಭವೇತ್ = ಆಗುತ್ತದೆಯೋ, ಆಕಾರಣದಿಂದ ಬ್ರಹ್ಮಶಬ್ದೇನ = ಗುಣಪೂರ್ಣತ್ವವನ್ನು ತಿಳಿಸುವ ಬ್ರಹ್ಮಶಬ್ದದಿಂದ, ಏತಸ್ಮಾದ್ = ಈ ಕಾರಣದಿಂದ, ಬ್ರಹ್ಮಶಬ್ದಃ = ಪೂರ್ಣತ್ವಾರ್ಥದಲ್ಲಿರುವ ಬ್ರಹ್ಮಶಬ್ದವು, ವಿಷ್ಣೋಃ = ವಿಷ್ಣುವಿನಲ್ಲಿಯೇ, ವಿಶೇಷಣಮ್ = ಮುಖ್ಯವೃತ್ತಿಯಿಂದ ಕೊಡುತ್ತದೆ. ಯಸ್ಮಾತ್ = ಯಾವಕಾರಣದಿಂದ, ಗುಣಾಃ = ಕಲ್ಯಾಣಗುಣಗಳು, ಅಮಿತಾ ಹಿ = ವಿಷ್ಣುವಿನಲ್ಲಿ ಅಮಿತವಾಗಿ ಇವೆಯೋ, ತಸ್ಮಾತ್ = ಆಕಾರಣದಿಂದ, ಪ್ರಭುಂ = ಆ ಪರಮಾತ್ಮನನ್ನು, ಋತೇ = ಹೊರತಾಗಿ, ಅನ್ಯೇಷಾಂ = ಬೇರೆಯವರಿಗೆ, ನ = ಬ್ರಹ್ಮಶಬ್ದವು ಇರುವುದಿಲ್ಲ. ಇತಿ = ಹೀಗೆ, ಬ್ರಾಹ್ಮೇ = ಬ್ರಹ್ಮಪುರಾಣದಲ್ಲಿ ಹೇಳಲ್ಪಟ್ಟಿದೆ.(१)

---

'यः' आत्मान्तरात्माख्यो द्विरूपो भगवान् 'ईजानानां' विष्णुमुद्दिश्य यागं कुर्वाणानां 'सेतुः' आश्रयो यदक्षरं परं ब्रह्म, तं ध्यातुं नचिकेतसं प्रति साधनं वक्तुं 'शकेमहि' शक्ताः स्म इति काठकश्रुत्यर्थः ।।

(१) भाष्यदीपिका – ब्रह्मशब्दस्य भगवदेकवाचित्वं स्मारयति – पृथगिति ।। अत्र यत इत्यावर्तते । तथा च यतः 'तस्य' विष्णोर्गुणाः 'अमितत्वतः' असङ्ख्यातत्वतो निमित्तात्

**भाष्यम् – न च जीवे समन्वयोऽभिधीयते ।**

ಪ್ರತಿಪದಾರ್ಥ - ಆದ್ದರಿಂದ ಜೀವೇ = ಜೀವನಲ್ಲಿ, ಸಮನ್ವಯಃ = ಬ್ರಹ್ಮಶಬ್ದದ ಸಮನ್ವಯವು, ನ ಚ ಅಭಿಧೀಯತೇ = ಪ್ರಕರಣದಲ್ಲಿ ಸರ್ವಥಾ ಹೇಳಲ್ಪಟ್ಟಿಲ್ಲ.(१)

**भाष्यम् – 'सत्य आत्मा सत्यो जीव सत्यं भिदा सत्यं भिदा सत्यं भिदा, मैवाऽरुवण्यो मैवाऽरुवण्यो मैवाऽरुवण्यः ॥' इति पैङ्गिश्रुतिः ।**

ಅನುವಾದ - ಪೈಂಗಿಶ್ರುತಿ ಹೀಗೆ ಹೇಳಿದೆ - ಪರಮಾತ್ಮನು ಸತ್ಯನೇ ಆಗಿದ್ದಾನೆ, ಜೀವನೂ ಸಹ ಸತ್ಯನೇ ಆಗಿದ್ದಾನೆ. ಅದರಂತೆ "ಭೇದವು ಸತ್ಯ, ಭೇದವು ಸತ್ಯ, ಭೇದವು ಸತ್ಯ" ಎಂದು ಶ್ರುತಿಯು ಘೋಷಣೆ ಮಾಡುತ್ತಿದೆ. ಆದ್ದರಿಂದ ಯಾರು ಭೇದವನ್ನು ಅಸತ್ಯವೆನ್ನುತ್ತಾರೋ, ಅವರು ಎಂದೂ ಸಹ ವಿಷ್ಣುವನ್ನು ಮೆಚ್ಚಿಸಲು ಸಾಧ್ಯವಿಲ್ಲ. "ವಿಷ್ಣುವನ್ನು ಮೆಚ್ಚಿಸಲು ಸಾಧ್ಯವಿಲ್ಲ, ವಿಷ್ಣುವನ್ನು ಮೆಚ್ಚಿಸಲು ಸಾಧ್ಯವಿಲ್ಲ" ಎಂದು ಪೈಂಗಿಶ್ರುತಿಯು ಘೋಷಣೆ ಮಾಡುತ್ತಿದೆ.

ಪ್ರತಿಪದಾರ್ಥ - ಜೀವನಲ್ಲಿ ಸಮನ್ವಯ ಮಾಡುವುದು ಅಸಂಗತವಲ್ಲ. ಏಕೆಂದರೆ ಜೀವೇಶ್ವರಭೇದವು ಮಿಥ್ಯಾಭೂತವಾಗಿದೆ. ಆದ್ದರಿಂದ ಜೀವೇಶ್ವರರಿಬ್ಬರಿಗೂ ಐಕ್ಯವೇ ಇದೆ. ಜೀವನಲ್ಲಿ ಸಮನ್ವಯ ಮಾಡಿದರೆ ಬ್ರಹ್ಮನಲ್ಲಿಯೂ ಸಹ ಸಮನ್ವಯ

---

'पृथक्' विविच्य वक्तुं न शक्यन्ते । ज्ञातव्याश्च सर्वैरधिकारिभिः सर्वे गुणा इति शेषः । यतो ब्रह्मशब्देन सर्वेषां गुणानां 'ग्रहणं' ज्ञानं भवेद् अतः सर्वगुणज्ञानार्थं तस्मिन् विष्णौ ब्रह्मशब्दः प्रयुज्यत इति शेषः । यतो ब्रह्मशब्देन सर्वेषां गुणानां ग्रहणं भवेत् । एवं च सर्वगुणवाची ब्रह्मशब्दो भवति, तत्र वृत्तिमन्तरेण तज्ज्ञानजनकत्वायोगादिति भावः । यस्माद् विभुं तं विष्णुमृते अन्येषां जीवानां नामिता गुणाः, किन्तु – विष्णोरेव प्रमाणसिद्धम्, एतस्मात् कारणादयं ब्रह्मशब्दो विष्णोरेव 'विशेषणं' मुख्यवाचको नान्येषामित्यर्थः । ब्राह्म इत्यनन्तरं ब्रह्मशब्दस्य भगवदेकवाचित्वमुक्तमिति शेषः ।

(१) भाष्यदीपिका – अत्र परैः पिबन्तौ बुद्धिजीवाविति पूर्वपक्षे प्राप्ते जीवेश्वरावेवेति व्याख्यातं, तन्निराकरोति – न चेति ।। अत्रेति शेषः । अस्मिन्नध्याये इति तदर्थः । हेतौ , स्वव्याख्यनेन सह परव्याख्याननिराकरणस्य समुच्चये वा चशब्दः तथा चासङ्गतिरिति भावः ।

ಮಾಡಿದಂತಾಗುತ್ತದಲ್ಲವೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಆತ್ಮಾ = ಪರಮಾತ್ಮನು, ಸತ್ಯಃ = ಸತ್ಯನು, ಜೀವಃ = ಜೀವನು, ಸತ್ಯಃ = ಸತ್ಯನು, ಭಿದಾ = ಅವರಿಬ್ಬರ ಭೇದವು, ಸತ್ಯಃ = ಸತ್ಯವು, ಸತ್ಯಂ ಭಿದಾ = ಎಂದೆಂದಿಗೂ ಸತ್ಯವೇ ಆಗಿದೆ, ಸತ್ಯಂ ಭಿದಾ = ಅನಾದಿ ಅನಂತಕಾಲದಿಂದಲೂ ಸತ್ಯವೇ ಆಗಿದೆ, ಮೈವಾऽರುವಣ್ಯಃ = ಜೀವಬ್ರಹ್ಮರ ಭೇದವು ಅಸತ್ಯವೆಂದು ಹೇಳಬಾರದು, ಅರಾಃ = ದೋಷಗಳು, ಅರವಃ = ದೋಷವಂತರು, ತೈಃ = ಆ ಜೀವಾಭೇದ ಜ್ಞಾನವೆಂಬ ದೋಷವು, ಇವುಗಳಿಂದ, ವಣ್ಯಃ = ತಿಳಿಯುವವನು, ಮೈವ = ಸರ್ವಥಾ ಆಗಲಾರನು, ಅರಾಃ = ಮಿಥ್ಯಾಜ್ಞಾನ, ಜೀವಾಭೇದವೆಂಬ ದೋಷಗಳು , ಅರವಃ = ಇಂತಹ ದೋಷವುಳ್ಳವರು, ತೈಃ = ಆ ಅದ್ವೈತವನ್ನು ಉಪಾಸನೆ ಮಾಡುವಂತಹ, ವಣ್ಯಃ = ತಿಳಿಯಲು ಯೋಗ್ಯನು, ಮೈವ = ಆಗುವುದಿಲ್ಲ. ಇತಿ = ಈ ರೀತಿಯಾಗಿ, ಪೈಂಗಿಶ್ರುತಿಃ = ಪೈಂಗಿಶ್ರುತಿಯು ಹೇಳುತ್ತಿದೆ. ಹೀಗೆ ಶ್ರುತಿಯಲ್ಲಿ ಜೀವ ಬ್ರಹ್ಮರ ಅಭೇದವನ್ನು ನಿಂದನೆ ಮಾಡಿ ಜೀವ ಬ್ರಹ್ಮರ ಭೇದವನ್ನು ದೃಢಪಡಿಸಲಾಗಿದೆ.(१)

---

(१) **भाष्यदीपिका –** ननु नात्र जीवे समन्वयकथनमसङ्गतम् । जीवेश्वरभेदस्यासत्यत्वेन तयोरैक्यात् । जीवसमन्वयस्यैव ब्रह्मसमन्वयरूपत्वादित्यत आह – **सत्य इति** ।। 'सत्यं' सत्या 'भिदा' भेदः । यद्यप्यत्राऽत्मजीवयोः सत्यत्ववचनेनैव तत्स्वरूपभेदस्यापि सत्यत्वमुक्तं भवति । तथाऽपि पुनः 'सत्यं भिदा' इत्युक्तिर्दर्शनप्रतीताभेद प्रतीतिनिरासतात्पर्यार्था शपथावृत्तिः ।

केचिद् भेदमसत्यमाहुः । तत् कथमेतदित्यतस्तेषां पक्षे श्रुतिरभीक्ष्णं दूषणमभिधत्ते – **मैवेति** ।। 'आरुवण्यः' अरा दोषास्तद्वन्तः, आसमन्तादरशीला वा आरवः तैरसत्यभेदज्ञानिभिः विष्णुः सर्वथा वन्यो भजनीयो नेत्यर्थः । इति पैङ्गिश्रुतिरित्यनन्तरं यत इति शेषः । अस्य नासत्यो भेद इत्युत्तरेणान्वयः । एवं भाल्लवेयश्रुतिरित्यस्यापि ।।

अत्र यद्यपि भागवततात्पर्ये – 'सत्यत्वं च भेदस्योक्तं भाल्लवेयश्रुतौ । स्थाणुर्होच्चक्राम स प्रजापतिमुवाच कोऽसि के स्मः कः स इति । स होवाच योऽस्मि ये स्थ यः स इति । अथैनमुपाक्रोशत् सत्यं भिदा सत्यं भिदा सत्यं भिदा' इत्यादिना 'सत्यम्' इति वाक्यं भाल्लवेयश्रुत्यन्तर्गततया पठ्यते । भाष्यपुस्तकेऽपि क्वचित् 'सत्यम्' इति वाक्यम् 'आत्मा हि' इति वाक्यं च भाल्लवेयश्रुतित्वेन पठ्यते । न तु श्रुतिद्वयस्थत्वेन । तथाऽपि अनयोस्तात्पर्यानुसारेणैकश्रुतिस्थत्वं, बहुतरपाठबलात् 'सत्य आत्मा' इति पैङ्गिश्रुतिः । 'आत्मा हि' इति भाल्लवेयश्रुतिः । तात्पर्योदाहृता त्वन्या तत्समाख्यारूपा चेत्यदोषः ।।

भाष्यम् – 'आत्मा हि परमः स्वतन्त्रोऽधिगुणोजीवोऽल्पशक्तिरस्वतन्त्रोऽवरः' इति च भाल्लवेयश्रुतिः ।

ಪ್ರತಿಪದಾರ್ಥ - ಭಾಲ್ಲವೇಯ ಶ್ರುತಿಯು ಹೀಗೆ ಹೇಳಿದೆ - ಆತ್ಮಾ ಹಿ = ಪರಮಾತ್ಮನೇ, ಸ್ವತಂತ್ರಃ = ಸ್ವತಂತ್ರನು, ಅಧಿಗುಣಃ = ಅನಂತ ಗುಣವುಳ್ಳವನು, ಜೀವಃ = ಜೀವನು, ಅಲ್ಪಶಕ್ತಿಃ = ಅಲ್ಪವಾದ ಶಕ್ತಿವುಳ್ಳವನು, ಅಸ್ವತಂತ್ರಃ = ಪರಮಾತ್ಮನ ಅಧೀನನು, ಅವರಃ = ನೀಚನು, ಇತಿ = ಹೀಗೆ.(१)

भष्यम् – 'यथेश्वरस्य जीवस्य भेदः सत्यो विनिश्चयात्
एवमेव हि मे वाचं सत्यां कर्तुमिहार्हसि ॥', (पद्मपुराणम्)

'यथेश्वरश्च जीवश्च सत्यभेदौ परस्परम् ।
तेन सत्येन मां देवास्त्रायन्तु सहकेशवाः॥' (स्कान्दपुराणम्)
इत्यादेर्नासत्यो भेदः ॥ १२ ॥

## ॥ इति गुहाधिकरणम् ॥ ३ ॥

ಅನುವಾದ - ಯಾವ ರೀತಿಯಾಗಿ ಜೀವೇಶ್ವರರ ಭೇದವು ನಿಶ್ಚಯವಾಗಿಯೂ ಸತ್ಯವೇ ಆಗಿದೆಯೋ, ಅದೇರೀತಿಯಾಗಿ ನನ್ನ ಮಾತನ್ನೂ ಸಹ ಸತ್ಯವನ್ನಾಗಿ ಮಾಡು. ಜೀವ ಮತ್ತು

'स्थाणुः' रुद्रः 'उच्चक्राम' ऊर्ध्वं जगाम । 'सः' रुद्रः 'प्रजापतिं' ब्रह्माणम् उपाक्रोशदुवाच । किमिति ? त्वं 'कः' कीदृशः । वयं 'के' कीदृशाः । सः विष्णुः'कः' कीदृशः । किं भिन्न उताभिन्न इत्याशयः । क्रमेणोत्तरमाह – अहं 'यः' यादृशोऽग्रे सर्वदा तादृशोऽस्मि । यूयं 'ये' यादृशाः तादृशाः स्थ । 'सः' विष्णुर्यादृशो मया भवदादिभिश्च भिन्नस्तादृश एवेति श्रुत्यर्थः ॥

(१) भाष्यदीपिक – अत्रोक्तभेदसाधकप्रमाणत्वेन विरुद्धगुणोपन्यासाय 'आत्मा' इति द्वितीयवाक्यं प्रवृत्तम् । 'आत्मा' परमात्मा 'परमः' स्वतन्त्रः । 'अधिगुणः' पूर्णशक्तिः । अत एवोत्तरत्र परमत्वस्वतन्त्रत्वपूर्णशक्तित्वविरुद्धानां धर्माणाम् अल्पशक्तिरित्यादिपदैर्व्युत्क्रमेणाभिधानं कृतम् ॥

**ಈಶ್ವರರಲ್ಲಿ ಭೇದವು ಪ್ರಾಮಾಣಿಕವಾಗಿರುವುದರಿಂದ ನನ್ನ ಜ್ಞಾನವೂ ಸಹ ಪ್ರಾಮಾಣಿಕವೇ ಆಗಿದೆ. ಅಂತಹ ತತ್ವಜ್ಞಾನವುಳ್ಳ ನನ್ನನ್ನು ಪರಮಾತ್ಮನಿಂದ ಕೂಡಿದ ದೇವತೆಗಳು ರಕ್ಷಿಸಲಿ. ಈ ಪ್ರಮಾಣಗಳಿಂದಲೂ ಭೇದವು ಮಿಥ್ಯಾಭೂತವಲ್ಲವೆಂದು ತಿಳಿಯುತ್ತದೆ.**

ಪ್ರತಿಪದಾರ್ಥ - ಈ ವಿಷಯದಲ್ಲಿ ಪುರಾಣವಾಕ್ಯದ ಪ್ರಮಾಣವನ್ನು ಹೇಳುತ್ತಿದ್ದಾರೆ-

ಯಥಾ = ಯಾವ ರೀತಿಯಾಗಿ, ಈಶ್ವರಸ್ಯ = ಪರಮಾತ್ಮನಿಗೆ, ಜೀವಸ್ಯ = ಜೀವನಿಗೆ, ಇರುವ ಭೇದಃ = ಪರಸ್ಪರ ಭೇದವು, ವಿನಿಶ್ಚಯಾತ್ = ವಿವಿಧ ಪ್ರಮಾಣಗಳಿಂದ ನಿಶ್ಚಯವಾಗಿದೆಯೋ, ಆದ್ದರಿಂದ ಸತ್ಯಃ = ಸತ್ಯವಾಗಿದೆ, ಏವಂ = ಈರೀತಿಯಾಗಿ, ಮೇ = ನನ್ನ, ವಾಚಂ = ಮಾತುಗಳನ್ನು, ಸತ್ಯಾಂ = ಸತ್ಯವನ್ನಾಗಿ, ಕರ್ತುಂ = ಮಾಡುವುದಕ್ಕಾಗಿ, ಇಹ = ಈ ಜಗತ್ತಿನಲ್ಲಿ, ಅರ್ಹಸಿ = ಯೋಗ್ಯನಾಗಿದ್ದಿ, ಇತಿ = ಪದ್ಮಪುರಾಣದಲ್ಲಿ ಹೇಳಲಾಗಿದೆ.

ಹೀಗೆ ಈಶ್ವರಶ್ಚ = ಸರ್ವಸಮರ್ಥನಾದ ಪರಮಾತ್ಮನು, ಜೀವಶ್ಚ = ಅಲ್ಪನಾದ ಜೀವನು, ಯಥಾ = ಯಾವ ರೀತಿಯಾಗಿ, ಪರಸ್ಪರಮ್ = ಪರಸ್ಪರವಾಗಿ, ಸತ್ಯಭೇದೌ = ಸತ್ಯವಾದ ಭೇದವುಳ್ಳವರಾಗಿದ್ದಾರೋ, ತೇನ ಸತ್ಯೇನ = ಅಂತಹ ಸತ್ಯತ್ವದಿಂದಲೇ, ಸಹಕೇಶವಾಃ = ಕೇಶವನಿಂದ ಕೂಡಿರುವ, ದೇವಾಃ = ದೇವತೆಗಳು, ಮಾಂ = ನನನ್ನು, ತ್ರಾಯಂತು = ರಕ್ಷಿಸಲಿ. ಹೀಗೆ ಸ್ಕಾಂಧ ಪುರಾಣವು ಹೇಳಿದೆ.

ಇತ್ಯಾದೇಃ = ಇವೇ ಮೊದಲಾದ ಅನೇಕ ಪ್ರಮಾಣಗಳಿಂದ, ಭೇದಃ = ಜೀವಬ್ರಹ್ಮರ ಭೇದವು, ನಾಽಸತ್ಯಃ = ಸುಳ್ಳಲ್ಲವೆಂದು ಸ್ಪಷ್ಟವಾಗುತ್ತದೆ.

ಆದ್ದರಿಂದ ಸಕಲ ಜೀವಿಗಳ ಹೃದಯ ಗುಹೆಯಲ್ಲಿ ನೆಲಸಿರುವವನು ವಿಷ್ಣುವೇ ಎಂದು ನಿರ್ಣಯವಾಯಿತು.(१)

---

(१) **भाष्यदीपिका** – अत्रैवार्थे पुराणवाक्ये पठति – **यथेति** ।। अत्र षष्ठ्यन्तं वाक्यं पाद्मस्थं, प्रथमान्तं स्कान्दगतमिति तत्त्वप्रदीपोक्तेः । 'मे माम्' इत्याभ्यां तत्प्रकृतो ग्राह्यः । 'विनिश्चयात्' एवार्थोऽयं शब्दः ।।

सत्यभेदाविति बहुव्रीहिः । यथा सत्यभेदौ तथैव विद्यमानानतिक्रमेण ज्ञातेन 'सत्येन' सत्यभेदेन भेदसत्यत्वज्ञानाख्यकारणेनेति यावत् । 'सहकेशवाः' इत्येकं पदं, केशवसहिता देवाः 'त्रायन्तु' अस्मान् रक्षन्त्वित्यर्थः । इत्यादेर्वाक्यान्नासत्यो भेदः, किन्तु – सत्य एवेति ज्ञायत इत्यर्थः ।।

अत्र पूर्ववाक्ये जीवेशभेदस्य दृष्टान्तत्वेनोपादानात् प्रामाणिकत्वं ज्ञायते, तादृशस्यैव दृष्टान्तत्वात् । द्वितीये तु विषयानतिक्रमेण भेदसत्यत्वज्ञानस्य त्राणकारणत्वोक्त्या भेदसत्यत्वमपि ज्ञायत इति प्रकृतसङ्गतिः ।।

आदिपदेन ग्राह्यवचनानि तत्त्वप्रदीपे उदाहृतानि । तथाहि -

## श्रीपद्मनाभतीर्थविरचितसत्तर्कदीपावळिः

### ॐ विशेषणाच्च ॐ ।। १-२-१२ ।।

'अक्षरं ब्रह्म यत्परम्' इति ब्रह्मशब्देन विशेषितत्त्वादपि ऋतपातृत्वं द्विरूप-

'द्वौ भूतसर्गौ लोकेऽस्मिन् दैव आसुर एव च ।
दैवो विस्तरशः प्रोक्त आसुरं पार्थ मे शृणु ।।
असत्यमप्रतिष्ठं ते जगदाहुरनीश्वरम् ।। इत्यारभ्य –
'तानहं द्विषतः क्रूरान् संसारेषु नराधमान् ।
क्षिपाम्यजस्रमशुभानासुरीष्वेव योनिषु ।।' इति भगवद्वचनम् । (भ.गी. १६-६, १९.)
'असत्यमप्रतिष्ठं ते जगदाहुरनीश्वरम् ।
त आसुराः स्वयं नष्टाः जगतः क्षयकारिणः ।।' इति व्यासस्मृतिः ।
'इन्द्रासोमा तपतं रक्ष उब्जतं न्यर्पयतं वृषणा तमोवृधः ।
पराशृणीतमचितो न्योषतं हतं नुदेथां निशिशीतमत्रिणः ।।'(ऋ. ७-१०४-१.)
'इन्द्रासोमा वर्तयतं दिवस्पर्यग्नितप्तेभिर्युवमश्महन्मभिः ।
तपुर्वधेभिरजरेभिरत्रिणः' (ऋ. ७-१०४-५.) इत्यादिका श्रुतिः ।
'येषां भिज्जगदीश्वरजीवानां नास्ति तेऽत्रिणः ।
स्वाज्ञानकल्पितजगत्परमेश्वरस्य
जीवस्य भेदकलुषीकृतभूमभावे ।' (इति हि मायिनो वदन्ति ।)
'आच्छाद्य विक्षिपति संस्फुरदात्मतत्त्वम् ।
जीवेश्वरस्य जगदाकृति तन्मृषैव ।।' इत्यादि च ।
'त्रिर्यातुधानः प्रसितिं तयेत्वृतं यो अग्ने अनृतेन हन्ति ।।' (ऋ. १०-८७-११.)
'वाचा स्तेनं शरव ऋच्छन्तु मर्मन् विश्वस्यैतु प्रसितिं यातुधानः ।' (ऋ.१०-८७-१५.)
'अथ ज्ञानोपसर्गाः' इत्यारभ्य 'ये चान्ये मिथ्यातर्कैर्दृष्टान्तैः कुहकेन्द्रजालैर्वैदिकेषु परिस्थातुमिच्छन्ति तैः सह न संवसेत् । प्रकाश्या ह्येते तस्करा अस्वर्ग्याः' (मैत्री. ७-८) इत्यादिश्रुतिशतैरन्धं तम एव मायिनां गतिरिति निश्चीयते । तथा च स्कान्दे -
'सर्वब्रह्मत्ववेत्तारो जीवब्रह्मत्ववेदिनः ।
अन्यसाम्यविदो विष्णोः विष्णुद्वेष्टार एव च ।
सर्वे यान्ति तमो घोरं न तेषामुत्थितिः क्वचित् ।।' इति ।।

।। इति गुहाधिकरणम् ।। ३ ।।

**विष्णोरित्येतत्प्रतिपादयत्सूत्रमुपन्यस्य व्याचष्टे – विशेषणादित्यादिना ।। ब्रह्मशब्दस्य विष्ण्वेकपरत्वं पुराणवचनेन प्रतिपादयति – पृथगिति ।। गुहां प्रविष्टाविति जीवपरमात्मानावभिधीयेते इति वदन्तं प्रत्याह – न जीवे समन्वय इति ।। ननु जीवस्य परमात्माभिन्नत्वेन परमात्मवज्जीवेऽपि श्रुतिसमन्वयप्रतिपादनं न पूर्वासङ्गतमित्याशङ्क्य श्रुतिपुराणवचनैः परिहरति – सत्य इत्यादिना ।। अरुर्व्रणापरपर्यायः । स्वदोषदर्शिभिः आरुभिः वन्यो वननीयो भजनीयो नैव भवति । विष्णोर्निरवद्यस्य स्वदोषज्ञानिषु प्रीत्यभावात् । अतो दोषिभ्यो जीवेभ्यो अत्यन्तभिन्नतया जानद्भिरेव विष्णुर्भजनीयो नान्यथेत्यर्थः ।।**

**।। इति सत्तर्कदीपावल्याम् गुहाधिकरणम् ।।**

'ಅಕ್ಷರಂ ಬ್ರಹ್ಮ ಯತ್ ಪರಮ್' ಎಂಬ ಶ್ರುತಿಯಲ್ಲಿ ಬ್ರಹ್ಮಶಬ್ದವನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ ವಿಷ್ಣುವಿನ ಎರಡು ರೂಪಗಳೇ ಋತಪಾತೃತ್ವ ಧರ್ಮವನ್ನು ಹೊಂದಿವೆಯೆಂಬ ವಿಷಯವನ್ನು ಪ್ರತಿಪಾದಿಸುತ್ತಾ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನಿಸುತ್ತಿದ್ದಾರೆ ''ವಿಶೇಷಣಾತ್'' ಇತ್ಯಾದಿಯಾಗಿ. ಬ್ರಹ್ಮ ಶಬ್ದವು ಕೇವಲ ವಿಷ್ಣುವನ್ನು ಪ್ರತಿಪಾದಿಸುತ್ತದೆನ್ನಲು ಪ್ರಮಾಣವಚನವನ್ನು ಆಧಾರವನ್ನಾಗಿ ಹೇಳುತ್ತಿದ್ದಾರೆ ''ಪೃಥಕ್'' ಇತ್ಯಾದಿಯಾಗಿ. ಗುಹಾಪ್ರವಿಷ್ಟರಾದವರು ಜೀವ ಹಾಗೂ ಪರಮಾತ್ಮರೆಂದು ಯಾರು ಹೇಳುತ್ತಾರೋ ಅವರನ್ನು ಕುರಿತು ''ನ ಜೀವೇ '' ಎಂದು ಉತ್ತರಿಸುತ್ತಿದ್ದಾರೆ.

ಜೀವನು ಪರಮಾತ್ಮನಿಗಿಂತ ಅಭಿನ್ನನಾಗಿದ್ದಾನೆ. ಆದ್ದರಿಂದ ಪರಮಾತ್ಮನಿಗಿಂತ ಜೀವನಲ್ಲಿ ಮಾಡುವ ಶ್ರುತಿ ಸಮನ್ವಯವು ಅಸಂಗತವಾಗುವುದಿಲ್ಲವೆಂದು ಆಶಂಕಿಸಿ ಶ್ರುತಿ ಹಾಗೂ ಪುರಾಣಗಳ ಮಾತಿನಿಂದ ಪರಿಹರಿಸುತ್ತಿದ್ದಾರೆ ''ಸತ್ಯ'' ಇತ್ಯಾದಿಯಾಗಿ. ''ಆರುವಣ್ಯ'' ಶಬ್ದಕ್ಕೆ ಏನು ಅರ್ಥ ? ವಿಷ್ಣುವಿನಲ್ಲಿರುವ ದೋಷಗಳನ್ನು ಕಾಣುವವರು 'ಆರು' ಎನಿಸುತ್ತಾರೆ. ಅವರಿಂದ ಭಜಿಸಲ್ಪಡುವವನು 'ವಣ್ಯ' ಎನಿಸುತ್ತಾನೆಂಬ ಅರ್ಥವು ಮೇಲ್ನೋಟಕ್ಕೆ ಕಾಣಿಸುತ್ತದೆ. ಆದರೆ ಇದು ತಪ್ಪು. ವಿಷ್ಣುವಿನಲ್ಲಿರುವ ದೋಷಗಳನ್ನು ಕಾಣುವವರಲ್ಲಿ ನಿರವದ್ಯವಾದ ವಿಷ್ಣುವಿಗೆ ಪ್ರೀತಿ ಹುಟ್ಟಲು ಸಾಧ್ಯವಿಲ್ಲ. ಆದ್ದರಿಂದ ದೋಷಿಗಳಾದ ಜೀವರುಗಳಿಂದ ಅತ್ಯಂತ ಭಿನ್ನನಾಗಿ ವಿಷ್ಣುವನ್ನು ಯಾರು ಭಜಿಸುತ್ತಾರೋ ಅಂತಹವರಿಂದ ಮಾತ್ರ ವಿಷ್ಣು ಭಜನೀಯನಾಗಿದ್ದಾನೆ. ಹೀಗೆಯೇ ಆರುವಣ್ಯ ಶಬ್ದಕ್ಕೆ ಅರ್ಥವನ್ನು ಹೇಳಬೇಕು.

ಇಲ್ಲಿಗೆ ಸತರ್ಕದೀಪಾವಳಿಯ ಕನ್ನಡಾನುವಾದದಲ್ಲಿ ಗುಹಾಧಿಕರಣವು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣಮಸ್ತು

ಪರಿಪೂರ್ಣಚಂದ್ರಿಕಾ

**तत्वप्रकाशिका –**

**ॐ विशेषणाच्च ॐ ।। १-२-१२ ।।**

**एवं निरवकाशलिङ्गस्य सावकाशश्रुतितोऽपि प्राबल्याद् विष्णोर्भोक्तृत्वसम्भवाच्च स एव पातेति सिद्ध्यति किमु निरवकाशश्रुत्यापीत्यर्थं प्रतिपादयत् सूत्रं पठित्वा तदभिप्रेतश्रुतिमेवोदाहरति – विशेषणाच्चेति ।। 'यः सेतुः' इति पिबतोरेकवचनेन विशेषणात् । एक एव पाता । स च ब्रह्मत्वविशेषणाच्च विष्णुरेवेति भावः ।**

ಗುಹಾಪ್ರವಿಷ್ಟತ್ವವೆಂಬ ನಿರವಕಾಶಲಿಂಗವು ಸಾವಕಾಶವಾದ "ಪಿಬಂತೌ" ಎಂಬ ಶ್ರುತಿಗಿಂತ ಪ್ರಬಲವಾಗಿರುವುದರಿಂದ ವಿಷ್ಣುವಿಗೆ ಶುಭಕರ್ಮಫಲಭೋಕ್ತೃತ್ವ ಕೂಡುತ್ತದೆ. ಆದ್ದರಿಂದ ವಿಷ್ಣುವೇ ಭೋಕ್ತೃ ಎಂದು ಹಿಂದಿನ ಸೂತ್ರದಿಂದ ಸಿದ್ಧವಾಯಿತು. ವಿಷ್ಣುವಿಗೆ ಭೋಕ್ತೃತ್ವವನ್ನು ದೃಢೀಕರಿಸಲು ನಿರವಕಾಶವಾದ ಶ್ರುತಿಯನ್ನೂ ಸಹ ಪ್ರಮಾಣವಾಗಿ ಪ್ರತಿಪಾದನೆ ಮಾಡಲು ಸೂತ್ರವನ್ನು ಹೇಳಿ, ಸೂತ್ರಕಾರರಿಗೆ ಅಭಿಪ್ರೇತವಾದ ಶ್ರುತಿಯನ್ನು ಉದಾಹರಿಸುತ್ತಿದ್ದಾರೆ "ವಿಶೇಷಣಾಚ್ಚ" ಎಂಬುದರಿಂದ.

"ಋತಂ ಪಿಬಂತೌ" ಎಂಬ ಕಾಠಕದ ಮುಂದಿನ ಮಂತ್ರವು " ಯಃ ಸೇತುಃ" ಎಂದು ಇದೆ. "ಪಿಬಂತೌ" ಎಂದು ಹಿಂದೆ ಪ್ರಸಕ್ತರಾದ ಭೋಕ್ತೃಗಳನ್ನು ಇಲ್ಲಿ "ಯಃ ಸೇತುಃ" ಎಂದು ಏಕವಚನದಿಂದ ವಿವೇಚನೆ ಮಾಡಿದ್ದಾರೆ. ಆದ್ದರಿಂದ ಕರ್ಮಫಲ ಭೋಕ್ತೃ ಒಬ್ಬನೇ ಎಂದು ಶ್ರುತಿಯ ಅಭಿಪ್ರಾಯ. ಅಲ್ಲದೆ ಮುಂದೆ ಆ ಭೋಕ್ತೃವಿಗೆ 'ಬ್ರಹ್ಮ' ಎಂಬ ವಿಶೇಷಣವು ಇದೆ. ಆದ್ದರಿಂದ ಭೋಕ್ತೃನಾದವನು ವಿಷ್ಣುವೇ ಎಂದು ನಿಶ್ಚಯವಾಗುತ್ತದೆ.

**तत्वप्रकाशिका – ब्रह्मशब्दस्य भगवदेकवाचित्वं स्मारयति – पृथगिति ।। तस्य गुणा अमितत्वतो विविच्य यतो वक्तुं न शक्यन्तेऽतस्तस्मिन् ब्रह्मशब्दः प्रयुज्यते । यतो ब्रह्मशब्देन सर्वगुणानां ग्रहणं भवेत् ।**

**एवं सर्वगुणवाची यतो ब्रह्मशब्द एतस्माद् विष्णोरेव वाचको नान्येषां तस्यैवाऽमितगुणत्वात् । तं विनाऽन्येषां तदभावादित्यर्थः ।**

ಬ್ರಹ್ಮಶಬ್ದವು ಕೇವಲ ಪರಮಾತ್ಮವಾಚಕವೆಂಬುದನ್ನು "ಪೃಥಕ್" ಎಂಬ ಬ್ರಹ್ಮಪುರಾಣದ ಮಾತಿನಿಂದ ನೆನಪಿಸುತ್ತಿದ್ದಾರೆ. ಪರಮಾತ್ಮನ ಗುಣಗಳು ಅನಂತವಾಗಿರುವುದರಿಂದ ಪ್ರತ್ಯೇಕವಾಗಿ ಹೇಳಲು ಸಾಧ್ಯವಿಲ್ಲದ ಕಾರಣ ಆ ಗುಣಗಳನ್ನು ಬ್ರಹ್ಮಶಬ್ದದಿಂದ ಪ್ರಯೋಗಿಸುತ್ತಾರೆ. ಆದ್ದರಿಂದ ಬ್ರಹ್ಮಶಬ್ದದ ಬಲದಿಂದ ಆ ಎಲ್ಲಾ ಗುಣಗಳನ್ನು ಗ್ರಹಿಸಲು ಸಾಧ್ಯವಾಗುತ್ತದೆ. ಈ ರೀತಿಯಾಗಿ

ಅನಂತಗುಣಗಳನ್ನು ಹೇಳುವ ಬ್ರಹ್ಮಶಬ್ದವಿರುವುದರಿಂದ ವಿಷ್ಣುವೇ ಕರ್ಮಫಲ ಭೋಕ್ತೃವೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ ಹೊರತು ಅನ್ಯರಲ್ಲ. ಏಕೆಂದರೆ ವಿಷ್ಣು ಅನಂತಗುಣಗಳಿಂದ ಯುಕ್ತನಾಗಿದ್ದಾನೆ. ವಿಷ್ಣುವನ್ನು ಹೊರತು ಅನ್ಯರು ಅನಂತ ಗುಣಗಳನ್ನು ಹೊಂದಿರುವುದಿಲ್ಲ.

**तत्वप्रकाशिका – एवं सूत्रद्वयं व्याख्याय परकृतापव्याख्यां निराकरोति – नचेति ।। अत्र प्रतीतौ पिबन्तौ किं बुद्धिजीवौ जीवेश्वरौ वेति सन्देहे बुद्धिजीवाविति प्राप्ते सिद्धान्तितम् । जीवेश्वरावेतौ भवतोऽन्यतरस्य पातृत्वेन जीवत्वे सिद्धे द्वितीयस्य चेतनतयैव भाव्यत्वात् । 'अस्य गोर्द्वितीयोऽन्वेष्टव्यः' इत्यादौ सजातीयग्रहणस्यैव लोके दर्शनादिति व्याख्यानमयुक्तम्, समन्वयासङ्गतत्वात् । न ह्यस्मिन्नध्याये जीवे समन्वयोऽभिधीयते । येन जीवेश्वरावेताविति साधनं सङ्गतं स्यादतो नासौ व्याख्या युक्तेति भावः।**

ಈ ರೀತಿಯಾಗಿ ಎರಡು ಸೂತ್ರಗಳಿಗೆ ವ್ಯಾಖ್ಯಾನ ಮಾಡಿ, ಇತರರು (ಶಂಕರಾಚಾರ್ಯರು) ಮಾಡಿರುವ ಅಪವ್ಯಾಖ್ಯಾನವನ್ನು "ನಚ" ಇತ್ಯಾದಿ ಮಾತುಗಳಿಂದ ನಿರಾಕರಣೆ ಮಾಡುತ್ತಿದ್ದಾರೆ.

ಶಾಂಕರ ಭಾಷ್ಯದಲ್ಲಿ "ಪಿಬಂತೌ" ಶಬ್ದಕ್ಕೆ ಅರ್ಥವನ್ನು ಹೇಳಬೇಕಾದರೆ ಸಂದೇಹವನ್ನು ಈ ರೀತಿಯಾಗಿ ಹೇಳುತ್ತಾರೆ - "ಪಿಬಂತೌ" ಶಬ್ದದಿಂದ ವಾಚ್ಯರಾದವರು ಬುದ್ಧಿಜೀವರೊ? ಅಥವಾ ಜೀವೇಶ್ವರರೋ? ಎಂದು. ಬುದ್ಧಿಜೀವರೆಂದು ಪೂರ್ವಪಕ್ಷ ಮಾಡಿಕೊಂಡು ಈ ರೀತಿಯಾಗಿ ಸಿದ್ಧಾಂತ ಮಾಡುತ್ತಾರೆ - ಇಲ್ಲಿ ಜೀವೇಶ್ವರರನ್ನೇ ತೆಗೆದುಕೊಳ್ಳಬೇಕು. ಏಕೆಂದರೆ, 'ಪಿಬಂತೌ' ಎಂಬುದರಿಂದ ಪ್ರತೀತವಾಗುವ ಇಬ್ಬರ ಮಧ್ಯದಲ್ಲಿ ಒಬ್ಬನಿಗೆ ಕರ್ಮಫಲ ಭೋಗವನ್ನು ಹೇಳಬಹುದು. ಅವನು ಜೀವನೇ ಆಗಿದ್ದಾನೆ. ಅಂತಹ 'ಪಿಬಂತೌ' ಶಬ್ದದಿಂದ ಇನ್ನೊಬ್ಬನನ್ನು ಗ್ರಹಣ ಮಾಡಲು ಯೋಗ್ಯನಾದವನು ಚೇತನನೇ ಆಗಬೇಕು. ಏಕೆಂದರೆ ಯಾವ ರೀತಿಯಾಗಿ ಲೋಕದಲ್ಲಿಯೂ ಸಹ ಒಂದು ಹಸುವನ್ನು ತೋರಿಸಿ ಇದಕ್ಕೆ ಸಮಾನವಾದ ಮತ್ತೊಂದನ್ನು ಹುಡುಕಿರಿ ಎಂದರೆ ಯಾವ ರೀತಿಯಾಗಿ ಹಸುವಿಗೆ ಸಮಾನವಾದ ಮತ್ತೊಂದು ಹಸುವನ್ನೇ ತರುವುದು ಕಂಡಿದೆಯೋ, ಅದರಂತೆ ಇಲ್ಲಿಯೂ ಸಹ ಜೀವನಿಗೆ ಸಮಾನವಾದ ಮತ್ತೊಬ್ಬ ಚೇತನನನ್ನೇ ಹೇಳಬೇಕು. ಆದ್ದರಿಂದ ನಾವು ಜೀವೇಶ್ವರರೆಂದು ಸಿದ್ಧಾಂತ ಮಾಡಿದ್ದು ಸಮರ್ಪಕವಾಗಿದೆಯೆಂದು ಅವರ ವಾದ.

ಆದರೆ ಈ ರೀತಿಯಾಗಿ ವ್ಯಾಖ್ಯಾನ ಮಾಡುವುದು ಯುಕ್ತವಲ್ಲ. ಏಕೆಂದರೆ ಈ ಅಧ್ಯಾಯದ ಉದ್ದೇಶ ಸಕಲ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುವುದೇ ಹೊರತು ಜೀವನಲ್ಲಿ ಅಲ್ಲ. ಆದ್ದರಿಂದ ನೀವು 'ಪಿಬಂತೌ' ಶಬ್ದದಿಂದ ವಾಚ್ಯರಾದವರು ಜೀವೇಶ್ವರರು ಎಂದು ವ್ಯಾಖ್ಯಾನ ಮಾಡಿದ್ದು ಅಸಂಗತವಾಗುತ್ತದೆ.

तत्वप्रकाशिका – नच छायातपत्त्वविशेषणादेतत् कल्प्यम् । विद्वदविदुषोः सुखदुःखकारणत्वेन तदुपपत्तेः । नहि छायातपशब्दौ विद्याविद्यावद्वाचकौ । किञ्च पिबतोर्बुद्धिजीवत्वे किं छिन्नं किं वा जीवेश्वरत्वे लब्धम् । परेणापि जीवे तदभ्युपगमात् । ईश्वरे समन्वयसिद्धिरिति चेन्न । ईश्वरे लिङ्गस्यौपचारिकत्वाभ्युपगमात् । एवं च जीव एव समन्वयः साधितः स्यात् ततश्च किं पूर्वपक्षिणाऽपराद्धम् । तेनापि पातृत्वस्य बुद्धौ लाक्षणिकत्वाभ्युपगमात् । नात्र जीवे समन्वयकथनमसङ्गतं जीवेशभेदस्यासत्यत्वादित्यत आह – सत्य इति ।। सत्यं सत्या । आरुवण्यो दोषिभिर्भजनीयः । यथा सत्यभेदौ, तथैव ज्ञातेन तेन सत्येन कारणेन । अतो हरिरेव सुकृतफलभोक्तेति न तस्य सर्वात्तृत्वलक्षणायोग इति सिद्धम् ।। १२ ।।

।। इति श्रीमज्जयतीर्थभिक्षुविरचितायां तत्वप्रकाशिकायाम्
गुहाधिकरणम् ।।

"ಛಾಯಾತಪೌ" ಎಂಬುದನ್ನು "ಪಿಬಂತೌ" ಎಂಬುದಕ್ಕೆ ವಿಶೇಷಣವನ್ನಾಗಿ ಹೇಳುತ್ತೇವೆ. ಆದ್ದರಿಂದ ಭೋಗ ಮಾಡುವವರು ಜೀವೇಶ್ವರರೆಂದು ಸಿದ್ಧವಾಗುತ್ತದೆಂದು ಹೇಳಿದರೆ, ಇದು ಸರಿಯಲ್ಲ. ಏಕೆಂದರೆ ಛಾಯತಪತ್ವ ವಿಶೇಷಣವು, ವಿದ್ವಾಂಸರಿಗೆ ಮತ್ತು ಅವಿದ್ವಾಂಸರಿಗೆ ಸುಖದುಃಖ ಕೊಡುವವನೆಂಬರ್ಥದಲ್ಲೇ ಶ್ರುತಿಯು ಹೇಳಿದೆ.

ಅಲ್ಲದೆ - ಭೋಗವನ್ನು ಮಾಡುವವರು ಬುದ್ಧಿಜೀವರು ಎಂದರೆ ಏನು ಹಾನಿ ? ಜೀವೇಶ್ವರರು ಎಂದರೆ ಏನು ಲಾಭ ? ಏಕೆಂದರೆ ಪರಕೀಯರೂ ಸಹ ಪಾನ ಮಾಡುವವನನ್ನು ಜೀವನೇ ಎಂದು ಅಂಗೀಕಾರ ಮಾಡಿದ್ದಾರಲ್ಲವೆ? ನೀನು 'ಪಿಬಂತೌ' ಶಬ್ದವನ್ನು ಈಶ್ವರನಲ್ಲಿ ಸಮನ್ವಯ ಮಾಡಲು ಜೀವೇಶ್ವರೌ ಎಂದು ಹೇಳಿದ್ದೆಂದು ಉತ್ತರವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಈಶ್ವರನಲ್ಲಿ ಲಿಂಗವನ್ನು ಔಪಚಾರಿಕವೆಂದು ಒಪ್ಪಿಕೊಂಡಿರುವುದರಿಂದ ಜೀವನಲ್ಲಿಯೇ ಸಮನ್ವಯ ಮಾಡಿದಂತಾಗುತ್ತದೆ. ಹೀಗಿದ್ದ ಮೇಲೆ ಪೂರ್ವಪಕ್ಷಕಾರನು ಏನು ಅಪರಾಧ ಮಾಡಿದಂತಾಯಿತು ? ಏಕೆಂದರೆ ನಿಮ್ಮ ಪೂರ್ವಪಕ್ಷದವನೂ ಸಹ ಕರ್ಮಫಲಭೋಕ್ತೃವು ಬುದ್ಧಿಯಲ್ಲಿ ಔಪಚಾರಿಕವೆಂದು ಸ್ವೀಕಾರ ಮಾಡಿಯೇ ಇದ್ದಾನೆ.

ಪ್ರಶ್ನೆ - 'ಪಿಬಂತೌ' ಶಬ್ದವನ್ನು ಜೀವನಲ್ಲಿ ಸಮನ್ವಯ ಮಾಡುವುದು ಅಸಂಗತವಲ್ಲ. ಏಕೆಂದರೆ ಜೀವೇಶ್ವರಭೇದವು ಸುಳ್ಳಾಗಿದೆ. ಆದ್ದರಿಂದ ಜೀವನಲ್ಲಿ ಸಮನ್ವಯ ಮಾಡಿದರೆ ಈಶ್ವರನಲ್ಲಿಯೇ ಸಮನ್ವಯ ಮಾಡಿದಂತಾಗುತ್ತದಲ್ಲವೆ ?

ಉತ್ತರ - ಈ ಪ್ರಶ್ನೆಗೆ ಉತ್ತರರೂಪವಾಗಿ ಆಚಾರ್ಯರು ಜೀವೇಶ್ವರರ ಭೇದದ ಸತ್ಯತ್ವವನ್ನು 'ಸತ್ಯ ಆತ್ಮಾ' ಎಂಬ ಪೈಂಗೀಶ್ರುತಿಯ ಪ್ರಮಾಣದಿಂದ ಸ್ಥಾಪನೆ ಮಾಡುತ್ತಿದ್ದಾರೆ. ಶ್ರುತಿಯಲ್ಲಿರುವ 'ಸತ್ಯಂ' ಎಂಬುದು 'ಸತ್ಯಾ' ಎಂಬ ಸ್ತ್ರೀಲಿಂಗದ ರೂಪವಾಗಿದೆ. 'ಆರುವಣ್ಯಃ' ಎಂದರೇ ''ದೋಷವುಳ್ಳ ಪುರುಷರಿಂದ ಸೇವ್ಯ'' ಎಂದರ್ಥ.

ಆದ್ದರಿಂದ ಈ ಶ್ರುತಿಯ ಪ್ರಮಾಣದಿಂದ ಪರಸ್ಪರವಾದ ಜೀವೇಶ್ವರರ ಭೇದವು ಸತ್ಯವೆಂದು ಸಿದ್ಧವಾಗುತ್ತದೆ. ಮತ್ತು ಜೀವೇಶ್ವರ ಭೇದಜ್ಞಾನವು ಸತ್ಯವೇ ಆಗಿದೆ. ಆದ್ದರಿಂದ ಜೀವೇಶ್ವರರ ಭೇದವು ಸುಳ್ಳು ಎಂದು ಕಲ್ಪನೆ ಮಾಡಿದ್ದು ಸರಿಯಲ್ಲ.

ಆದ್ದರಿಂದ ಶ್ರೀಹರಿಯೇ ಸತ್ಕರ್ಮಫಲವನ್ನು ಭೋಗ ಮಾಡುವವನೆಂದು ಸಿದ್ಧವಾಗುತ್ತದೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಹೇಳಿದ ಸರ್ವಾತ್ಮತ್ವಲಕ್ಷಣವು ಯುಕ್ತವೇ ಎಂದು ಸಿದ್ಧವಾಯಿತು.

॥ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಗುಹಾಧಿಕರಣವು ಸಮಾಪ್ತವಾಯಿತು ॥

## ॐ विशेषणाच्च ॐ ।। १-२-१२ ।।

**भावदीपः** – उक्तसमुच्चये सौत्रचशब्द इति व्यञ्जयन्नवतारयति – **एवमिति ।। स एवेति ।।** नतु जीवसहित इत्येवार्थः । द्विवचनान्तं रूपपदं त्यक्त्वा पातेत्युक्तैकवचनान्तस्य तात्पर्यलब्धस्यानुवादस्तु एकवचनेन विशेषणादिति हेत्वन्वयायेति भावः ।

ಸೂತ್ರದಲ್ಲಿರುವ ''ಚ'' ಶಬ್ದವು ಹಿಂದೆ ಹೇಳಿದ ನಿರವಕಾಶವಾದ ಗುಹಾಪ್ರವಿಷ್ಟತ್ವಲಿಂಗವನ್ನು ಮತ್ತು ವಿಷ್ಣುವಿಗೆ ಕರ್ಮಫಲಭೋಕ್ತೃತ್ವವನ್ನು ಸಮುಚ್ಚಯ ಮಾಡುತ್ತದೆಂದು ತಿಳಿಸಲು ಅವತಾರಿಕೆಯನ್ನು ''ಏವಂ'' ಇತ್ಯಾದಿ ವಾಕ್ಯಗಳಿಂದ ಹೇಳುತ್ತಿದ್ದಾರೆ. ಟೀಕೆಯಲ್ಲಿರುವ ''ಸ ಏವ'' ಎಂಬಲ್ಲಿರುವ ಏವಕಾರವು ವಿಷ್ಣುವೇ ಭೋಕ್ತೃವಾಗಿದ್ದಾನೆ ಹೊರತು ಜೀವಸಹಿತನಾಗಿ ಅಲ್ಲವೆಂದು ಸೂಚಿಸುತ್ತದೆ. ಟೀಕೆಯಲ್ಲಿ ದ್ವಿವಚನಾಂತವಾದ ರೂಪಪದವನ್ನು ಹೇಳದೆ, (''ಯಃ ಸೇತುಃ'' ಎಂಬುದರ ತಾತ್ಪರ್ಯದಿಂದ ಲಬ್ಧವಾದ ಏಕವಚನಾಂತವಾದ ''ಪಾತ'' ಎಂದು ಏಕೆ ಹೇಳಿದ್ದಾರೆ ? ಎಂದರೆ ಮುಂದೆ ''ಏಕವಚನೇನ ವಿಶೇಷಣಾತ್'' ಎಂದು ವಿಷ್ಣುವೇ ಭೋಕ್ತೃವೆನ್ನುವ ಕಾರಣಕ್ಕೆ ಅನ್ವಯವನ್ನು ಸೂಚಿಸಲು ಎಂದು ಅಭಿಪ್ರಾಯ.)

ಪರಿಪೂರ್ಣಚಂದ್ರಿಕಾ

**भावदीपः –** भाष्यस्य सूत्रेणान्वयं मत्वा 'यः सेतुः' इति चैकत्ववचनेन विशेषणादित्यनुभाष्यदिशाऽर्थमाह – **यः सेतुरिति** ।। 'पृथग्' इत्यादिस्मृत्यनुरोधाद् 'ब्रह्म तत्परम्' इत्यन्तवाक्योदाहरणाच्चार्थान्तरं चाऽऽह – **ब्रह्मत्वेति** ।। ब्रह्मशब्दस्यान्यथासिद्धिशङ्कया बीजनिरासेनानुदयादत्र भाष्ये केवलब्रह्मशब्दस्यैव स्मृत्या निरवकाशताप्रदर्शनाच्च ब्रह्मशब्दस्य परत्वविशेषणाच्चेत्यपि व्याख्यानं न कृतम् । अत एव स्मारयतीत्युक्तिः, नतु साधयतीति । यद्वोक्तदिशा तदपि व्याख्यानं सुज्ञानमिति भावः ।

ಭಾಷ್ಯಕ್ಕೆ ಸೂತ್ರದಿಂದ ಅನ್ವಯವನ್ನು ತಿಳಿದು "ಯಃ ಸೇತುಃ ಇತಿ ಏಕತ್ವವಚನೇನ ವಿಶೇಷಣಾತ್" ಎಂಬ ಅನುವ್ಯಾಖ್ಯಾನದ ಪ್ರಕಾರ "ಯಃ ಸೇತುಃ" ಇತ್ಯಾದಿ ವಾಕ್ಯಗಳಿಂದ ಸೂತ್ರಕ್ಕೆ ಅರ್ಥವನ್ನು ಹೇಳುತ್ತಿದ್ದಾರೆ. "ಪೃಥಕ್" ಇತ್ಯಾದಿ ಸ್ಮೃತಿಯನ್ನು ಅನುಸರಿಸಿ "ಬ್ರಹ್ಮ ತತ್ಪರಂ"ಎಂಬಲ್ಲಿಯ ತನಕ ವಾಕ್ಯವನ್ನು ಉದಾಹರಿಸಿ ಮತ್ತೊಂದು ಅರ್ಥವನ್ನು "ಬ್ರಹ್ಮತ್ವ" ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಬ್ರಹ್ಮಶಬ್ದವು ಅನ್ಯಥಾಸಿದ್ಧವಾಗುತ್ತದೆಂಬ ಶಂಕೆಯ ಬುಡವನ್ನೇ ತುಂಡರಿಸಿದ್ದರಿಂದ ಬ್ರಹ್ಮಶಬ್ದವು ಬೇರೆಯವರನ್ನು ಪ್ರತಿಪಾದಿಸುತ್ತದೆಂಬ ಶಂಕೆಯು ಹುಟ್ಟುವುದಿಲ್ಲ. ಮತ್ತು ಭಾಷ್ಯದಲ್ಲಿ ಕೇವಲ ಬ್ರಹ್ಮಶಬ್ದಕ್ಕೆ ಸ್ಮೃತಿಯ ಆಧಾರದಿಂದ ನಿರವಕಾಶತ್ವವನ್ನು ತೋರಿಸಿದ್ದರಿಂದ ಬ್ರಹ್ಮ ಶಬ್ದಕ್ಕೆ ಪರತ್ವವನ್ನು ವಿಶೇಷಣವನ್ನಾಗಿ ಹೇಳಿದ್ದರಿಂದಲೂ ಬ್ರಹ್ಮಶಬ್ದವನ್ನು ವ್ಯಾಖ್ಯಾನಿಸುತ್ತಿಲ್ಲ. ಅನ್ಯರೀತಿಯಾಗಿ ಅರ್ಥಮಾಡಲು ಬರುತ್ತದೆಂಬ ಶಂಕೆಗೂ ಅವಕಾಶವಿಲ್ಲ. ಆದ್ದರಿಂದ ಭಾಷ್ಯದಲ್ಲಿ ಬ್ರಹ್ಮಶಬ್ದವು ವಿಷ್ಣುವನ್ನೇ ಹೇಳುತ್ತಿದೆಂಬುದನ್ನು ನಿರವಕಾಶವಾದ ಸ್ಮೃತಿಪ್ರಮಾಣದಿಂದ ತೋರಿಸುತ್ತಿದ್ದಾರೆ. ಬ್ರಹ್ಮಶಬ್ದವು ಅನ್ಯರಿಗೆ ವಿಶೇಷಣವನ್ನಾಗಿಯೂ ಸಹ ಹೇಳಲು ಬರುವುದಿಲ್ಲ. ಆದ್ದರಿಂದ ಟೀಕೆಯಲ್ಲಿ "ಸ್ಮಾರಯತಿ" "ಬ್ರಹ್ಮಶಬ್ದವು ವಿಷ್ಣುವಾಚಿಯಾಗಿದೆಯೆಂದು ನೆನಪಿಸುತ್ತಿದ್ದಾರೆ" ಎಂದು ಹೇಳಿದ್ದಾರೆ ಹೊರತು ಸಾಧಿಸುತ್ತಿದ್ದಾರೆಂದು ಹೇಳಿಲ್ಲ. ಅಥವಾ

**भावदीपः –** स्मारयति, स्मृत्या दर्शयतीत्यर्थः । स्मृतौ यतो वक्तुं न शक्यन्ते, अतः सर्वेषां ब्रह्मशब्देन ग्रहणं भवेदित्यस्य साक्षादनन्वयादेतस्मादित्यनेन परामृश्यमानहेतोरप्रतीतेश्च अत इत्यस्य साध्यमध्याहृत्य योजयति – **तस्येति** ।। पृथक् विविच्य । यत इत्यस्याऽऽवृत्तिं मत्वाऽऽह – **यतो ब्रह्मशब्देनेति** ।। तस्य पर्यवसितार्थमाह – **एवमिति** ।। पृथगित्यादिनोक्तप्रकारेण । एतेन पूर्वार्धमेतस्मादिति हेतूपपादकत्वेन उत्तरार्धैकदेशस्तु एतस्मादित्यस्य विषयं दर्शयितुं प्रवृत्तमिति दर्शितम् ।

ಸ್ಮೃತಿಯಲ್ಲಿ "ಯತೋ ವಕ್ತುಂ ನ ಶಕ್ಯಂತೇ ಅತಃ ಸರ್ವೇಷಾಂ ಬ್ರಹ್ಮಶಬ್ದೇನ ಗ್ರಹಣಂ ಭವೇತ್" ಎಂಬಲ್ಲಿಯ ತನಕ ಸಾಕ್ಷಾತ್ತಾಗಿ ಅನ್ವಯವು ತಿಳಿಯುವುದಿಲ್ಲವಾದ್ದರಿಂದ, ಮತ್ತು "ಏತಸ್ಮಾತ್" ಎಂಬುದರಿಂದ ಪರಾಮರ್ಶ ಮಾಡುವ ಕಾರಣವೂ ತಿಳಿಯುವುದಿಲ್ಲ. ಆದ್ದರಿಂದ "ಅತಃ" ಎಂದು ಸಾಧ್ಯವನ್ನು ಅಧ್ಯಾಹಾರ ಮಾಡಿಕೊಂಡು "ತಸ್ಯ" ಇತ್ಯಾದಿ ವಾಕ್ಯಗಳಿಂದ ಯೋಜನೆ ಮಾಡುತ್ತಿದ್ದಾರೆ. ಸ್ಮೃತಿಯಲ್ಲಿ "ಯತಃ" ಶಬ್ದದ ಅಭಿಪ್ರಾಯವನ್ನು "ಯತೋ ಬ್ರಹ್ಮಶಬ್ದೇನ" ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಸ್ಮೃತಿಗೆ ಅಭಿಪ್ರೇತವಾದ ಅರ್ಥವನ್ನು " ಏವಂ" ಇತ್ಯಾದಿ ವಾಕ್ಯಗಳಿಂದ ಹೇಳುತ್ತಿದ್ದಾರೆ. "ಏವಂ" ಎಂದರೆ "ಪೃಥಕ್" ಇತ್ಯಾದಿಯಾಗಿ ಹೇಳಿದ ಸ್ಮೃತಿಯ ಪ್ರಕಾರವಾಗಿ ಎಂದರ್ಥ. ಈ ಪ್ರಕಾರವಾಗಿ ಶ್ರುತಿಯ ಪೂರ್ವಾರ್ಧವು "ಏತಸ್ಮಾತ್" ಎಂದು ಹೇತುವನ್ನು ಉಪಪಾದನೆ ಮಾಡಿದರೆ, ಉತ್ತರಾರ್ಧದ ಏಕದೇಶವು "ಏತಸ್ಮಾತ್" ಎಂಬುದರ ವಿಷಯವನ್ನು ತೋರಿಸಲು ಪ್ರವೃತ್ತವಾಗಿದೆಯೆಂದು ತೋರಿಸುತ್ತಿದ್ದಾರೆ.

**भावदीपः** – एतस्मादित्यर्थोपपादकत्वेन तदुत्तरार्धमिति भाष्यसूचितयोग्यसाध्य हेतू अभिधाय तदुपपादकतया नचेत्यादिभाष्यं योजयितुमाह – **अत्रेति** ।। **नच च्छायेति** ।। अविद्याश्रयत्वप्रकाशवत्त्वरूपच्छायातपत्वेत्यर्थः ।। **विद्वदिति** ।। 'छायेव विदुषां प्रभुः । आतपः पापिनाम्' इति काठकभाष्योक्तस्मृतेरिति भावः ।। **विद्याविद्येति** ।। यथायोगमन्वयः । यद्यप्यष्टमस्कन्धतात्पर्यनिर्णये पञ्चमेऽध्याये 'छाया त्वविद्या सम्प्रोक्ता जन्यविद्याऽऽतपः स्मृतः' इत्युक्तम्, तथापि तद्वत्त्वार्थकत्वं त्वप्रामाणिकमिति भावः ।

ಟೀಕೆಯಲ್ಲಿ "ನ ಚೇತ್ ಛಾಯಾ" ಎಂದಿದೆ. ಛಾಯಾತಪ ಎಂದರೆ, "ಛಾಯ = ಅವಿದ್ಯಾಯುಕ್ತ ಸಂಸಾರಿಜೀವ, ಆತಪಃ = ಪ್ರಕಾಶ ರೂಪನಾದ ಪರಮಾತ್ಮ ಎಂದರ್ಥ. ಟೀಕೆಯಲ್ಲಿರುವ "ವಿದ್ವತ್" ಎಂದರೆ "ಛಾಯೇವ ವಿದುಷಾಂ ಪ್ರಭುಃ। ಆತಪಃ ಪಾಪಿನಾಂ" ಎಂದು ಕಾಠಕ ಭಾಷ್ಯದಲ್ಲಿ ಉದಾಹರಿಸಿರುವ ಸ್ಮೃತ್ಯನುಸಾರಿಯಾಗಿ ಎಂದು ಅಭಿಪ್ರಾಯ. ಟೀಕೆಯಲ್ಲಿರುವ "ವಿದ್ಯಾವಿದ್ಯ" ಶಬ್ದಗಳಿಗೆ ಛಾಯಾತಪಗಳಲ್ಲಿ ಯಥಾಯೋಗ್ಯವಾಗಿ ಅನ್ವಯವನ್ನು ಮಾಡಿಕೊಳ್ಳಬೇಕು. (ಛಾಯಾ = ವಿದ್ಯಾ, ಆತಪಃ = ಅವಿದ್ಯಾ). ಆದರೆ ಭಾಗವತದ ಅಷ್ಟಮಸ್ಕಂಧದ ಐದನೆಯ ಅಧ್ಯಾಯದ ತಾತ್ಪರ್ಯದಲ್ಲಿ "ಛಾಯಾ ತು ಅವಿದ್ಯಾ ಸಂಪ್ರೋಕ್ತಾ ಜನ್ಯವಿದ್ಯಾಽತಪಃ ಸ್ಮೃತಃ" ಎಂದು ಹೇಳಿದ್ದಾರೆ.

**भावदीपः** – भाष्ये नच जीवेश्वरयोरिति वाच्ये जीव इत्येकवचनोक्त्या सूचितं दोषमाह – **किञ्चेति** ।। ननु भेदस्य सत्त्वे कुतो न जानन्ति केचिदित्यतो भाष्ये मैवारुवण्य इत्युक्तम् । तदर्थमाह – **दोषीति** ।। अरा दोषाः तद्वन्तः आरवः 'वन सम्भक्तौ' इति धातुः । शपथत्वेन त्रिरुक्तिरिति भावः । तेन सत्येन इत्यत्र

तच्छब्दपरामृष्टं दर्शयंस्तस्य तत्र हेतुत्वं घटयति – **यथेति** ।। सत्येन भेदेनेति योज्यम् । सत्येन भेदज्ञानेन कारणेनेत्यर्थः ।

ಒಂದು ವೇಳೆ ಜೀವೇಶ್ವರರ ಭೇದವು ಸತ್ಯವಾಗಿದ್ದ ಪಕ್ಷದಲ್ಲಿ ಕೆಲವರಿಗೆ ಏಕೆ ಅದು ತಿಳಿಯುವುದಿಲ್ಲ ? ಎಂದು ಪ್ರಶ್ನೆ ಬಂದರೆ ಅದಕ್ಕೆ ಉತ್ತರರೂಪವಾಗಿ ಭಾಷ್ಯದಲ್ಲಿ "ಮೈವಾರುವಣ್ಯಃ" ಎಂದು ಹೇಳಿದ್ದಾರೆ. "ಮೈವಾರುವಣ್ಯ" ಎಂದರೆ ದೋಷವುಳ್ಳವನೆಂದರ್ಥ. ಅರಾಃ = ದೋಷಗಳು, ಆರವಃ = ದೋಷಗಳುವುಳ್ಳವನು, "ವನಸಂಭಕ್ತೌ" ಎಂಬ ಧಾತುವಿಗೆ ಅನುಸಾರಿಯಾಗಿ ಈ ಅರ್ಥ ತಿಳಿಯುತ್ತದೆ. "ಮೈವಾರುವಣ್ಯಃ" ಎಂದು ಮೂರು ಬಾರಿ ಶ್ರುತಿಯು ಹೇಳುತ್ತಿರುವ ಉದ್ದೇಶ ಪರಮಾತ್ಮನು ದೋಷಿಗಳಿಂದ ಯಾವಕಾಲಕ್ಕೂ ಸೇವ್ಯನಲ್ಲವೆಂಬುದನ್ನು ಶಪಥ ಮಾಡುತ್ತಿದೆ.

**भावदीपः** – 'ऋतं पिबन्तौ' इत्यत्र विवक्षितऋतशब्दार्थं वदन्नुपसंहरति – **अत इति** ।। अतो निरवकाशश्रुतिलिङ्गभावादनशनश्रुतिद्विवचनश्रुत्यविरोधाच्चेत्यर्थः । ऋतशब्दः सुकृतमात्रपरो नतु सुकृतदुष्कृतसाधारणकर्ममात्रपरः । 'सुकृतस्य लोके' इति सान्निध्यात् । 'ऋतं सत्यं तथा धर्मः सुकृतं चाभिधीयते' इति स्मृतेश्चेति भावेनोक्तम् – **सुकृतफलभोक्तेति** ।। इतिशब्दो हेत्वर्थः ।

"ಋತಂ ಪಿಬಂತೌ" ಎಂಬಲ್ಲಿರುವ ಋತಶಬ್ದಕ್ಕೆ ವಿವಕ್ಷಿತವಾದ ಅರ್ಥವನ್ನು ಹೇಳಿ "ಅತಃ" ಇತ್ಯಾದಿ ವಾಕ್ಯಗಳಿಂದ ಉಪಸಂಹಾರ ಮಾಡುತ್ತಿದ್ದಾರೆ. ನಿರವಕಾಶವಾದ ಶ್ರುತಿ ಮತ್ತು ಲಿಂಗಗಳ ಬಲದಿಂದ "ಅನಶನ" ಮತ್ತು "ಪಿಬಂತೌ" ಎಂಬ ದ್ವಿವಚನಶ್ರುತಿಗಳಿಗೆ ಯಾವ ವಿರೋಧವನ್ನೂ ಹೇಳಲು ಬರುವುದಿಲ್ಲ. ಋತಶಬ್ದವು ಸುಕೃತಮಾತ್ರ ಪರವಾಗಿದೆ ಹೊರತು ಸುಕೃತ ದುಷ್ಕೃತ ಸಾಧಾರಣವಾದ ಕರ್ಮಮಾತ್ರ ಪರವಾಗಿಲ್ಲ. ಏಕೆಂದರೆ "ಸುಕೃತಸ್ಯ ಲೋಕೇ" ಎಂದು ಶ್ರುತಿಯಲ್ಲಿಯೇ ಇರುವುದರಿಂದ. ಅಲ್ಲದೆ "ಋತಂ ಸತ್ಯಂ ತಥಾ ಧರ್ಮಃ ಸುಕೃತಂ ಚಾಭಿಧೀಯತೇ" (ಋತಂ ಶಬ್ದಕ್ಕೆ ಸತ್ಯ, ಧರ್ಮ ಸುಕೃತ ಎಂದು ಅರ್ಥವಿದೆ) ಎಂದು ಸ್ಮೃತಿಯು ಇದೆ. ಆದ್ದರಿಂದಲೇ "ಸುಕೃತ ಫಲ ಭೋಕ್ತಾ" ಎಂದು ಟೀಕೆಯಲ್ಲಿ ಹೇಳಿದ್ದಾರೆ. "ಇತಿ" ಶಬ್ದವು ಕಾರಣಪರವಾಗಿದೆ.

**भावदीपः** – शेषेण फलोक्तिः । यदत्र केनचिदत्तेत्यादिविशेषणाच्चेत्यन्त-सूत्राणामैकाधिकरण्यमुपेत्याधिकरणभेदे दोषोद्भावनं तच्चन्द्रिकायां निरस्तम् । यदपि सूत्राक्षरास्वारस्यवर्णनं तदपि तन्त्रदीपिकायां प्रतिपदं स्वारस्यवर्णनान्निरस्तं ध्येयम् ।। १२ ।।

।। इति राघवेन्द्रयतिकृते भावदीपे गुहाधिकरणम् ।।

ಗುಹಾಧಿಕರಣ (೧-೨-೩)

ಕೊನೆಯಲ್ಲಿ ಒಟ್ಟು ಅಧಿಕರಣದ ಫಲವನ್ನು ಹೇಳಿದ್ದಾರೆ - ಕೆಲವರು "ಅತ್ತಾ ಚರಾಚರಗ್ರಹಣಾತ್" ಎಂಬ ಸೂತ್ರದಿಂದ ಆರಂಭಿಸಿ "ವಿಶೇಷಣಾಚ್ಚ" ಎಂಬ ಸೂತ್ರದ ತನಕ ಒಂದೇ ಅಧಿಕರಣವೆಂದು ಹೇಳಿದ್ದಾರೆ. ಅಲ್ಲದೆ ಎರಡು ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಿದ ಬಗ್ಗೆ ದೋಷಗಳನ್ನೂ ಹೇಳಿದ್ದಾರೆ. ಆ ಎಲ್ಲಾ ದೋಷಗಳನ್ನು ಚಂದ್ರಿಕೆಯಲ್ಲಿ ನಿರಾಕರಣೆ ಮಾಡಿದ್ದಾರೆ. ಕೆಲವರು ಸೂತ್ರಗಳ ಅಕ್ಷರಗಳಿಗೆ ಅಸ್ವಾರಸ್ಯವನ್ನು ವರ್ಣನೆ ಮಾಡಿದ್ದಾರೆ. ಅವುಗಳನ್ನೂ ಸಹ ತಂತ್ರದೀಪಿಕೆಯಲ್ಲಿ ಪ್ರತಿಪದಗಳಿಗೆ ಸ್ವಾರಸ್ಯ ವರ್ಣನೆ ಮಾಡುವ ಮೂಲಕ ನಿರಾಕರಣೆ ಮಾಡಲಾಗಿದೆ. ಅವುಗಳನ್ನು ಅಲ್ಲಿಯೇ ತಿಳಿಯಬೇಕು.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಗುಹಾಧಿಕರಣವು ಸಮಾಪ್ತವಾಯಿತು ॥

**वाक्यार्थमञ्जरी** - ।। **ॐ विशेषणाच्च ॐ** ।। एकवचनसेतुत्वब्रह्मत्वादिना पिबतोर्विशेषितत्वाच्च तावात्मानावेव न जीवेशावित्यर्थः । स्मारयति स्मृत्या दर्शयति । अत इत्यनन्तरमपेक्षितं पूरयति । तस्मिन् ब्रह्मशब्दः प्रयुज्यत इति ।। **यत इति** ।। अनेन यतः शब्दावृत्तिर्दर्शिता । अत्र काठके ।। **समन्वयसङ्गत्वादिति** ।। समन्वयाभिधायकैतदध्यायासङ्गतत्वादित्यर्थः ।। **छायातपत्वविशेषणादिति** ।। तयोः क्रमेण विद्याविद्यावद्वाचकत्वेन तादृशयोश्च जीवेशान्यत्वायोगादिति भावः । विनिगमनाविरहादुक्तमेवास्त्वित्यत आह – **नहीति** ।। अनुशासनाभावाद् अस्मत्पक्षे तु छायेव विदुषां प्रभुः आतपः पापिनामिति विनिगमकमस्त्येवेति भावः । न केवलमेतदसङ्गतं किन्तु व्यर्थं चेत्याह – **किञ्चेति** ।। समन्वयसिद्धिरित्यनन्तरं लब्धेति लिङ्गव्यत्ययेनानुवर्तते । एवम् एवं सति । मयेश्वरे लिङ्गस्यौपचारिकत्वाङ्गीकारेण जीवमात्रे समन्वयसिद्धावपि तन्मते कथमित्यत आह – **तेनापीति** ।। शङ्कते – **नात्रेति** ।। तथाच जीवे समन्वयईश्वर एव सिद्ध्यतीति भावः । अराः दोषाः तद्वन्तः अरवः । स्वरूपसतः कारणत्वायोगादाह – **तथैव ज्ञातेनैवेति** ।।

।। इति श्रीशर्कराश्रीनिवासविचचिता वाक्यार्थमञ्जर्याम् गुहाधिकरणम् ।।

* * *

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ, ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ,ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು

ಗುಹಾಧಿಕರಣ (೧-೨-೩)

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ गुहाधिकरणम्

ಅವಾಂತರ ಸಂಗತಿ ನಿರೂಪಣೆ

**।। ॐ गुहां प्रविशात्मानौ हि तद्दर्शनात् ॐ ।।**

**पूर्वत्रादितिप्रातिपदिकश्रुतिबलादन्यत्रप्रसिद्धक्रियालिङ्गसमन्वय उक्तः, अत्र तु 'पिबन्तौ' इति प्रत्ययश्रुतिबलादन्यत्रप्रसिद्धक्रियालिङ्गसमन्वय उच्यत इत्यवान्तरसङ्गतिः ।**

ಅನುವಾದ - ಹಿಂದಿನ ಅಧಿಕರಣದಲ್ಲಿ ಅದಿತಿಪ್ರಾದಿಪದಿಕವೆಂಬ ಶ್ರುತಿಯ ಬಲದಿಂದ ಅನ್ಯತ್ರಪ್ರಸಿದ್ಧವೆನಿಸಿದ ಕ್ರಿಯಾರೂಪವಾದ ಲಿಂಗವನ್ನು ಸಮನ್ವಯ ಮಾಡಿದ್ದಾಯಿತು. ಈ ಅಧಿಕರಣದಲ್ಲಿ 'ಪಿಬಂತೌ' ಎಂಬ ಶ್ರುತಿಯಲ್ಲಿ ದ್ವಿವಚನವು ಕೇಳಿಸುತ್ತಿದೆ. ದ್ವಿವಚನಪ್ರತ್ಯಯ ಶ್ರುತಿಯ ಬಲದಿಂದ ಅನ್ಯತ್ರಪ್ರಸಿದ್ಧವಾದ ಕರ್ಮಫಲಾತ್ತೃತ್ವವೆಂಬ ಕ್ರಿಯಾರೂಪವಾದ ಲಿಂಗವನ್ನು ಸಮನ್ವಯ ಮಾಡುತ್ತಿದ್ದಾರೆ. ಹೀಗೆ ಅವಾಂತರ ಸಂಗತಿಯನ್ನು ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥವಿರಚಿತ

# ಪ್ರಕಾಶ

**प्रकाशः** – ॐ गुहां प्रविष्टावात्मानौ हि तद्दर्शनात् ॐ ।। पूर्वसङ्गतिमाह – **पूर्वत्रेति** । **क्रियेति** । अदनरूपक्रियेत्यर्थः । **प्रत्ययेति** । द्विवचनरूपेत्यर्थः । **क्रियेति** । कर्मफलभोक्तृत्वरूपेत्यर्थः ।

ಪರಿಪೂರ್ಣಚಂದ್ರಿಕಾ

प्रकृतिप्रत्यययोः पौर्वापर्यात्तन्मूलपूर्वपक्षनिरासकयोरप्यधिकरणयोः पौर्वापर्यमित्युक्तं भवति ।

ವಿವರಣೆ - ಗುಹಾಧಿಕರಣವು ಪ್ರಾರಂಭವಾಗುತ್ತಿದೆ. ಪ್ರಾರಂಭದಲ್ಲಿ ಹಿಂದಿನ ಅಧಿಕರಣದಿಂದ ಅವಾಂತರಸಂಗತಿಯನ್ನು 'ಪೂರ್ವತ್ರ' ಇತ್ಯಾದಿ ವಾಕ್ಯದಿಂದ ನಿರೂಪಿಸುತ್ತಿದ್ದಾರೆ. ಹಿಂದಿನ ಅಧಿಕರಣದಲ್ಲಿ ಕ್ರಿಯಾಲಿಂಗಸಮನ್ವಯವನ್ನು ಮಾಡಿದ್ದಾರೆಂಬುದಕ್ಕೆ ಅದನರೂಪವಾದ ಕ್ರಿಯಾಲಿಂಗವನ್ನು ಸಮನ್ವಯ ಮಾಡಿದ್ದಾರೆಂದರ್ಥ. ಈ ಅಧಿಕರಣದಲ್ಲಿ ಪ್ರತ್ಯಯಶ್ರುತಿ ಸಮನ್ವಯ ಎಂದರೆ 'ಪಿಂಬತೌ' ಎಂಬಲ್ಲಿ ಕೇಳಿಸುತ್ತಿರುವ ದ್ವಿವಚನರೂಪವಾದ ಪ್ರತ್ಯಯ ಎಂದರ್ಥ. ಮತ್ತು ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಕ್ರಿಯೆಯೆಂದರೆ ಕರ್ಮಫಲಭೋಕ್ತೃತ್ವರೂಪವಾದ ಕ್ರಿಯೆಯೆಂದರ್ಥ.

ಹಿಂದಿನ ಅಧಿಕರಣದಲ್ಲಿ ಅದಿತಿಯೆಂಬ ಪ್ರಕೃತಿಶ್ರುತಿಯ ಸಾಮರ್ಥ್ಯದಿಂದ ತಿಳಿಯುವ ಲಿಂಗವನ್ನು ಸಮನ್ವಯ ಮಾಡಲಾಯಿತು. ಈ ಅಧಿಕರಣದಲ್ಲಿ ಪ್ರತ್ಯಯ ಶ್ರುತಿಯಿಂದ ತಿಳಿಯುವ ಲಿಂಗವನ್ನು ಸಮನ್ವಯ ಮಾಡುತ್ತಿದ್ದಾರೆ. ಪ್ರಕೃತಿ ಮತ್ತು ಪ್ರತ್ಯಯಗಳಲ್ಲಿ ಪ್ರಕೃತಿಯು ಮೊದಲು ಉಪಸ್ಥಿತವಾಗಿ ಅನಂತರ ಪ್ರತ್ಯಯದ ಉಪಸ್ಥಿತಿ ಬರುವುದರಿಂದ ಈ ಕ್ರಮದ ಆನುಪೂರ್ವಿಯು ಯುಕ್ತವೇ ಆಗಿದೆ. ಅಂದರೆ ಪ್ರಕೃತಿ ಹಾಗೂ ಪ್ರತ್ಯಯದಿಂದ ನಿರಾಸವಾಗುವ ಪೂರ್ವಪಕ್ಷವನ್ನು ನಿರಾಕರಿಸಿದ್ದಾರೆಂದರ್ಥ.

**प्रकाशः** – ननु कर्मफलभोक्तृत्वं लोकत एवान्यत्रप्रसिद्धं, न द्विवचनश्रुतिसाहित्यमपेक्षते । उक्तञ्च टीकायां – "लोकतोऽन्यत्रप्रसिद्धस्य कर्मफलभोक्तृत्वलिङ्गस्य" इति । तत्कथं "प्रत्ययश्रुतिबलादन्यत्रप्रसिद्ध" इत्युक्तिरिति, चेत्,

ಆಕ್ಷೇಪ - ಕರ್ಮಫಲಭೋಕ್ತೃತ್ವವು ಲೋಕದಿಂದಲೇ ಅನ್ಯತ್ರಪ್ರಸಿದ್ಧವಾಗಿದೆ ಹೊರತು ದ್ವಿವಚನ ಶ್ರುತಿಯ ಸಾಹಿತ್ಯವನ್ನು ಅದು ಅಪೇಕ್ಷಿಸುವುದಿಲ್ಲ. ಇದನ್ನು ಟೀಕೆಯಲ್ಲಿಯೂ ಸಹ "ಲೋಕತೋಽನ್ಯತ್ರಪ್ರಸಿದ್ಧಸ್ಯ ಕರ್ಮಫಲಭೋಕ್ತೃತ್ವಲಿಂಗಸ್ಯ' ಎಂದು ಹೇಳಿದ್ದಾರೆ. ಹೀಗಿರುವಾಗ ಪ್ರತ್ಯಯ ಶ್ರುತಿಯ ಬಲದಿಂದ ಅನ್ಯತ್ರಪ್ರಸಿದ್ಧವೆಂದು ನೀವು ಹೇಗೆ ಹೇಳುತ್ತಿದ್ದೀರಿ?

**प्रकाशः** – उच्यते – अस्मिन् पादे पूर्वत्रोत्तरत्र चान्यसाहित्येनैवान्यत्र-प्रसिद्धेरुक्तत्वादत्रापि तथा भाव्यमिति भावेन वा, पूर्वं सर्वात्तृत्वस्य विष्णावुक्तौ तन्मध्यपतितकर्मफलात्तृत्वस्याऽपि सामन्यत उक्तत्वादन्यत्रप्रसिद्ध्यर्थमन्य-साहित्यमावश्यकम् ।

ಸಮಾಧಾನ - ಹಿಂದಿನ ಮುಂದಿನ ಅಧಿಕರಣಗಳಲ್ಲಿ ಶ್ರುತಿಯ ಅಥವಾ ಲಿಂಗಗಳ ಸಾಹಿತ್ಯದಿಂದಲೇ ಅನ್ಯತ್ರಪ್ರಸಿದ್ಧಿಯನ್ನು ಸಮರ್ಥಿಸಲಾಗಿದೆ. ಆದರಂತೆ ಪ್ರಕೃತ ಈ ಅಧಿಕರಣದಲ್ಲಿಯೂ ಪ್ರತ್ಯಯಶ್ರುತಿಯ ಬಲದಿಂದ ಅನ್ಯತ್ರಪ್ರಸಿದ್ಧಿಯನ್ನು ಹೇಳುತ್ತಿದ್ದೇವೆ.

ಅಥವಾ ಹಿಂದಿನ ಅಧಿಕರಣದಲ್ಲಿ ಸಕಲವನ್ನು ಭಗವಂತನು ತಿನ್ನುತ್ತಾನೆಂದು ಹೇಳಿದಾಗ, ಸಕಲ ಪದಾರ್ಥಗಳ ಮಧ್ಯದಲ್ಲಿ ಕರ್ಮಫಲಾತ್ತೃತ್ವವೂ ಸಹ ಸೇರುತ್ತದೆ. ಆದ್ದರಿಂದ ಈ ಅಧಿಕರಣದಲ್ಲಿ ಸಮನ್ವಯ ಮಾಡಬೇಕಾಗಿರುವ ಕರ್ಮಫಲಾತ್ತೃತ್ವವು ಹಿಂದಿನ ಅಧಿಕರಣದಿಂದಲೇ ಸಾಮಾನ್ಯವಾಗಿ ಭಗವಂತನಲ್ಲಿ ಹೇಳಿದಂತಾಗಿದೆ. ಆದ್ದರಿಂದ ಸಾಮಾನ್ಯವಾಗಿ ಸಿದ್ಧವಾಗಿರುವ ಕರ್ಮಫಲಾತ್ತೃತ್ವವನ್ನು ವಿಷ್ಣುವಿನಲ್ಲಿ ಅಲ್ಲಗಳೆಯುವ ಮೂಲಕ ಪೂರ್ವಪಕ್ಷವನ್ನು ದೃಢಪಡಿಸುವುದಕ್ಕಾಗಿ ಲೋಕಪ್ರಸಿದ್ಧಿಯ ಜೊತೆಗೆ ಪ್ರತ್ಯಯ ಶ್ರುತಿಯನ್ನೂ ಸಹ ಅಪೇಕ್ಷಿಸಲಾಗಿದೆ.

**प्रकाशः** – अत एव टीकायां ''नच सर्वात्तृत्वेन बाधः, श्रुतेर्निरवकाशत्वात्'' इति द्विवचनश्रुत्यैव बाधः शङ्कितः ।

''लोकतः'' इति टीका तु प्राग्विशिष्यानुक्तत्वाशयेति भावेन वा, लोकतोऽन्यत्र-प्रसिद्धत्वेऽन्यसाहित्येनाप्यन्यत्रप्रसिद्धेस्सत्त्वात्तदभिप्रायेण वैतदुक्तिरिति ।

ಆದ್ದರಿಂದಲೇ ಟೀಕೆಯಲ್ಲಿ ''ನಚ ಸರ್ವಾತ್ತೃತ್ವೇನ ಬಾಧಃ, ಶ್ರುತೇರ್ನಿರವಕಾಶತ್ವಾತ್'' ಸರ್ವಾತ್ತೃತ್ವದ ಲಿಂಗದ ಸಮನ್ವಯದಿಂದಲೇ ಕರ್ಮಫಲಾತ್ತೃತ್ವವೂ ಸಹ ವಿಷ್ಣುವಿನಲ್ಲಿ ಸಮನ್ವಯವಾಯಿತು. ಪುನಃ ಇಲ್ಲಿ ಅದರ ಸಮನ್ವಯವು ವ್ಯರ್ಥವೆಂದು ಶಂಕಿಸಬಾರದು. ಪ್ರತ್ಯಯಶ್ರುತಿಯು ನಿರವಕಾಶವಾಗಿದೆ ಎಂದು ಟೀಕೆಯ ಈ ಮಾತಿನಲ್ಲಿ ದ್ವಿವಚನಶ್ರುತಿಯ ಬಲದಿಂದಲೇ ಬಾಧವನ್ನು ಶಂಕಿಸಿದ್ದಾರೆ. ಆದ್ದರಿಂದ ದ್ವಿವಚನ ಶ್ರುತಿಯನ್ನು ಅಪೇಕ್ಷಿಸಿದ್ದು ತಪ್ಪಲ್ಲ.

'ಲೋಕತಃ ಅನ್ಯತ್ರಪ್ರಸಿದ್ಧಸ್ಯ' ಎಂಬ ಟೀಕೆಗೆ ಏನರ್ಥ? ಎಂದರೆ ಎರಡು ಬಗೆಯಲ್ಲಿ ಉತ್ತರಿಸಬಹುದು. ಹಿಂದಿನ ಅಧಿಕರಣದಲ್ಲಿ ಕರ್ಮಫಲಭೋಕ್ತೃತ್ವವನ್ನು ಸಾಮಾನ್ಯವಾಗಿ ಸಮರ್ಥಿಸಿದ್ದಾರೆ ಹೊರತು ವಿಶೇಷವಾಗಿ ವಿಷ್ಣುವಿನಲ್ಲಿ ಸಮರ್ಥಿಸಿಲ್ಲ. ಈ ಕಾರಣದಿಂದ ಲೋಕತಃ ಅನ್ಯತ್ರಪ್ರಸಿದ್ಧವಾಗಿದೆಯೆಂದು ಟೀಕೆಯ ಅಭಿಪ್ರಾಯ. ಅಥವಾ ಲೋಕತಃ ಅನ್ಯತ್ರಪ್ರಸಿದ್ಧವಾಗಿದ್ದರೂ ಪ್ರತ್ಯಯಶ್ರುತಿಸಾಹಿತ್ಯದಿಂದಲೂ ಅನ್ಯತ್ರಪ್ರಸಿದ್ಧಿಯನ್ನು ಹೇಳಿದಾಗ ಪೂರ್ವಪಕ್ಷವು ಮತ್ತಷ್ಟು ದೃಢವಾಗುತ್ತದೆ. ಈ ಅಭಿಪ್ರಾಯದಿಂದಲೂ ಸಹ ಟೀಕೆಯಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವೆಂದು ಹೇಳಿದ್ದಾರೆ.

**प्रकाशः** – यद्यपि पूर्वत्र प्रातिपदिकार्थप्रत्ययार्थयोर्विष्णौ सम्भवेऽपीह तयोरसम्भवादिति पूर्ववैषम्येण पूर्वपक्षप्रवृत्तेः प्रत्युदाहरणरूपाऽपि वक्तुं शक्या । तथाऽपि सा वक्ष्यमाणादिशा सुज्ञानेति नोक्ता ।

ಪ್ರಶ್ನೆ - ವಸ್ತುತಃ ಈ ಅಧಿಕರಣಕ್ಕೆ ಅವಾಂತರ ಸಂಗತಿಯನ್ನು ಹೇಳುವುದಕ್ಕಿಂತ 'ಪ್ರತ್ಯುದಾಹರಣ' ಎಂಬ ಸಂಗತಿಯನ್ನೇ ಹೇಳಬಹುದಿತ್ತು. ಏಕೆಂದರೆ ಹಿಂದಿನ ಅಧಿಕರಣದಲ್ಲಿ 'ಅದಿತಿಪ್ರಾತಿಪದಿಕ' ಮತ್ತು 'ಏಕವಚನ' ಎಂಬ ಪ್ರತ್ಯಯ ಇವೆರಡರ ಅರ್ಥವು ವಿಷ್ಣುವೇ ಆಗಿದ್ದಾನೆಂದು ಹೇಳಲಾಗಿದೆ. ಆದರೆ 'ಪಿಬಂತೌ' ಎಂಬಲ್ಲಿ 'ಪಿಬತ್' ಎಂಬ ಪ್ರಾತಿಪದಿಕದ ಅರ್ಥವಾಗಲೀ, 'ಔ' ಎಂಬ ದ್ವಿವಚನ ಪ್ರತ್ಯಯವಾಗಲೀ ವಿಷ್ಣುವಿನಲ್ಲಿ ಕೂಡುವುದಿಲ್ಲ. ಹೀಗೆ ಹಿಂದಿನ ಅಧಿಕರಣದಿಂದ ವೈಲಕ್ಷಣ್ಯವನ್ನು ತೋರಿಸುವ ಮೂಲಕ ಪೂರ್ವಪಕ್ಷವನ್ನು ಮಾಡಬಹುದು. ಇದರಿಂದ ಪ್ರತ್ಯುದಾಹರಣವೆಂಬ ಸಂಗತಿಯನ್ನು ತೋರಿಸಿದಂತಾಗುತ್ತದಲ್ಲವೇ?

ಉತ್ತರ - ಹೌದು, ಅವಾಂತರ ಸಂಗತಿಯಂತೆ ಪ್ರತ್ಯುದಾಹರಣವೆಂಬ ಸಂಗತಿಯನ್ನೂ ಸಹ ಹೇಳಬಹುದಿತ್ತು. ಆದರೆ ಮುಂದಿನ ವಿಚಾರಗಳನ್ನು ತಿಳಿದಾಗ ಪ್ರತ್ಯುದಾಹರಣ ಸಂಗತಿಯು ಸುಲಭವಾಗಿ ತಿಳಿಯುತ್ತದೆಂಬ ಅಭಿಪ್ರಾಯದಿಂದ ಗ್ರಂಥಕಾರರು ಅದನ್ನು ಉಲ್ಲೇಖಿಸಿಲ್ಲ.

**प्रकाशः** – ननु तथाऽपि ''सर्वात्तैकः पर उक्तः'' इति भाष्ये, ''तद्यदा विष्णोरन्यस्यैव स्यात्तदा न तस्य सर्वात्तृत्वं'' इति टीकायां च पूर्वाक्षेपस्य दर्शितत्वात्तद्विरोधः । नच तत्प्रयोजनमात्रपरं, इहोभयपरत्वेऽपि तस्य बाधकाभावादिति चेत्

ಆಕ್ಷೇಪ - ವ್ಯವಹಿತವಾದ ಅಧಿಕರಣದಿಂದ ಭಾಷ್ಯಕಾರರಾಗಲೀ, ಟೀಕಾಕಾರರಾಗಲೀ ಸಂಗತಿಯನ್ನು ತೋರಿಸಿದರೆ ಆವಾಗ ಗ್ರಂಥಕಾರರು ಅದನ್ನು ಪ್ರಯೋಜನ ಪರವೆಂದು ಎಲ್ಲೆಡೆ ಹೊಂದಿಸುತ್ತಾರೆ. ಆದರೆ ಈ ಅಧಿಕರಣದ ಭಾಷ್ಯದಲ್ಲಿ 'ಸರ್ವಾತ್ತೈಕಃ ಪರ ಉಕ್ತಃ' ಎಂಬುದಾಗಿ ಹಿಂದಿನ ಅಧಿಕರಣದಿಂದಲೇ ಸಂಗತಿಯನ್ನು ತೋರಿಸಿದ್ದಾರೆ. ಮತ್ತು ಟೀಕೆಯಲ್ಲಿಯೂ ಸಹ - 'ತದ್ಯದಾ ವಿಷ್ಣೋರನ್ಯಸ್ಯೈವ ಸ್ಯಾತ್ತದಾ ನ ತಸ್ಯ ಸರ್ವಾತ್ತೃತ್ವಂ' ಒಂದು ವೇಳೆ ಸರ್ವಾತ್ತೃತ್ವವು ವಿಷ್ಣುವನ್ನು ಬಿಟ್ಟು ಬೇರೆಯವರಿಗೆ ಬರುವುದಾದರೆ ಆವಾಗ ವಿಷ್ಣುವಿನಲ್ಲಿ ಸರ್ವಾತ್ತೃತ್ವವು ಸಿದ್ಧವಾಗುವುದಿಲ್ಲ ಎಂದು ಹೇಳಿದ್ದಾರೆ. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪಿಸಿ ಸಂಗತಿಯನ್ನು ಹೇಳಬಹುದಿತ್ತು. ಗ್ರಂಥಕಾರರು ಹಾಗೆ ಹೇಳದೆ ಅವಾಂತರ ಸಂಗತಿಯನ್ನು ಹೇಳಿದ್ದರಿಂದ ಭಾಷ್ಯ ಹಾಗೂ ಟೀಕೆಗಳ ವಿರೋಧವು ಬರುತ್ತದೆ. ಇನ್ನು ಭಾಷ್ಯ ಹಾಗೂ ಟೀಕಾ ಮಾತುಗಳು ಕೇವಲ ಪ್ರಯೋಜನವನ್ನು ಹೇಳುತ್ತಿವೆ ಎಂದು ಉತ್ತರಿಸಬಾರದು. ಪ್ರಯೋಜನ ಪರವಾಗುವಂತೆ ಸಂಗತಿ ಪರವೂ ಆಗುತ್ತದೆಂದು ಹೇಳಿದರೆ ಬಾಧಕವಿಲ್ಲ. ಏಕೆಂದರೆ ಅವ್ಯವಹಿತವಾದ ಹಿಂದಿನ ಅಧಿಕರಣದಿಂದಲೇ ಸಂಗತಿಯನ್ನು ಹೇಳಿರುವುದರಿಂದ ವ್ಯವಹಿತವಾಗಿದೆಯೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

**प्रकाशः** – सत्यं, तस्य वक्ष्यमाणादिशोपपादनसापेक्षत्वे झडिति सुज्ञानत्वाभावेन तदपरित्यागेनैव सङ्गत्यन्तरकथनमेतदित्यदोषः ।

ಆಕ್ಷೇಪಿಕೀ ಸಂಗತಿಯನ್ನೇ ಹೇಳಬಹುದಿತ್ತು. ಹಾಗೇ ಹೇಳಿದಾಗ ಭಾಷ್ಯ ಹಾಗೂ ಟೀಕಾ ಮಾತುಗಳಿಗೆ ಪ್ರಯೋಜನಪರತ್ವವನ್ನು ಮತ್ತು ಸಂಗತಿಪರತ್ವವನ್ನು ಹೇಳಿದಂತೆಯೂ ಆಗುತ್ತಿತ್ತು. ಆದರೆ ಮುಂದೆ ಉಪಪಾದಿಸುವ ಪ್ರಕಾರ ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪಿಸುವುದು ಕ್ಲೇಶಕರವಾಗಿದೆ. ಸುಲಭವಾಗಿ ಆಕ್ಷೇಪಿಕೀಸಂಗತಿಯನ್ನು ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ಅದನ್ನು ಅನಂತರ ತಿಳಿಯಬಹುದೆಂಬ ಅಭಿಪ್ರಾಯದಿಂದ ಪ್ರಾರಂಭದಲ್ಲಿ ಅವಾಂತರಸಂಗತಿಯನ್ನು ಹೇಳಿದ್ದಾರೆ. ಇದರಿಂದ ಭಾಷ್ಯ ಹಾಗೂ ಟೀಕೆಗಳ ವಿರೋಧಕ್ಕೂ ಅವಕಾಶವಿಲ್ಲವೆಂದು ಹೇಳಿದಂತಾಯಿತು.

**प्रकाशः** – ननु न प्रत्ययश्रुतिबलादन्यत्रप्रसिद्धता, प्रत्ययाज्जीव एवेत्यप्रतीतेः, तस्य द्वित्वबोधकत्वेन जीवेश्वरोभयप्रापकत्वादिति चेन्न, सिद्धान्तकोटितोऽन्यत्र-प्रसिद्धेरेवान्यत्रप्रसिद्धशब्दार्थत्वात् । अत्र विष्णोरेव सिद्धान्तकोटित्वेन जीवसहितस्य ततोऽन्यत्वात् ।

ಆಕ್ಷೇಪ - ದ್ವಿವಚನ ಪ್ರತ್ಯಯ ಶ್ರುತಿಯ ಬಲದಿಂದ ಅನ್ಯತ್ರಪ್ರಸಿದ್ಧತ್ವವನ್ನು ಸಮರ್ಥಿಸಲಾಗದು. ಏಕೆಂದರೆ ಪ್ರತ್ಯಯದ ಬಲದಿಂದ ಜೀವನೇ ಕರ್ಮಫಲಭೋಕ್ತ್ಯವೆಂದು ನಿರ್ಣಯಿಸಲಾಗದು. ಪ್ರತ್ಯಯವು ದ್ವಿತ್ವವನ್ನು ತಿಳಿಸುತ್ತಿರುವುದರಿಂದ ಜೀವ ಮತ್ತು ಈಶ್ವರ ಇಬ್ಬರನ್ನು ವಿವಕ್ಷಿಸಬೇಕು ಹೊರತು ಕೇವಲ ಜೀವನನ್ನು ವಿವಕ್ಷಿಸಲು ಸಾಧ್ಯವಿಲ್ಲವಲ್ಲವೇ?

ಸಮಾಧಾನ - ವಿಷ್ಣುವೇ ಕರ್ಮಫಲಭೋಕ್ತ್ಯವಾಗಿದ್ದಾನೆಂಬುದು ಸಿದ್ಧಾಂತ. ಇದಕ್ಕಿಂತ ಭಿನ್ನವಿಚಾರವೆನಿಸಿದ ಅನ್ಯತ್ರಪ್ರಸಿದ್ಧವಾಗಿರುವಿಕೆಯು ಅನ್ಯತ್ರಪ್ರಸಿದ್ಧವೆನಿಸುತ್ತದೆ. ಅಂದರೆ ವಿಷ್ಣುವೇ ಕರ್ಮಫಲಭೋಕ್ತ್ಯ ಎಂದು ಹೇಳಿದಾಗ ಜೀವಸಹಿತನಾದ ವಿಷ್ಣುವು ಕರ್ಮಫಲಭೋಕ್ತ್ಯ ಎಂಬ ವಿಚಾರವು ಭಿನ್ನವೇ ಆಗಿದೆ. ಆದ್ದರಿಂದ ಜೀವ ಹಾಗೂ ಈಶ್ವರ ಇಬ್ಬರನ್ನು ಕರ್ಮಫಲಭೋಕ್ತ್ಯವೆಂದು ಹೇಳುವವನ ಪಕ್ಷವು ಅನ್ಯತ್ರಪ್ರಸಿದ್ಧಪಕ್ಷದಲ್ಲಿಯೇ ಸೇರುತ್ತದೆ.

**प्रकाशः** – अत एव द्विवचनश्रुत्या कर्मफलात्तृत्वमुभयत्रप्रसिद्धमित्यपि चोद्यं परास्तम् । विष्णोरेवेति सिद्धान्तकोटौ कर्मफलात्तृत्वस्य द्विवचनश्रुत्या प्राप्तेः, तथा द्वयोः प्राप्तत्वेऽपि जीवेश्वरावित्यस्य न्यायेनैव व्युत्पाद्यत्वादिति ।

ಇದರಿಂದ ಮತ್ತೊಂದು ಶಂಕೆಯು ನಿರಸ್ತವಾಯಿತು. ದ್ವಿವಚನ ಶ್ರುತಿಯ ಬಲದಿಂದ ಕರ್ಮಫಲಾತ್ತೃತ್ವವು ಜೀವ ಹಾಗೂ ಈಶ್ವರ ಇಬ್ಬರಲ್ಲಿಯೂ ಬರುವ ಕಾರಣ ಉಭಯತ್ರಪ್ರಸಿದ್ಧವಾಯಿತಲ್ಲವೇ? ಎಂಬ ಶಂಕೆಗೆ ಈಗ ಅವಕಾಶವಿಲ್ಲ. ಏಕೆಂದರೆ ಕರ್ಮಫಲಾತ್ತೃತ್ವವು ವಿಷ್ಣುವಿನಲ್ಲಿ ಮಾತ್ರವಿದೆಯೆಂಬ ಸಿದ್ಧಾಂತಕೋಟಿಯು ದ್ವಿವಚನಶ್ರುತಿಯಿಂದ ಪ್ರಾಪ್ತವೇ ಆಗಿಲ್ಲ, ಹೊರತಾಗಿ ಜೀವ ಹಾಗೂ ಈಶ್ವರ ಎಂಬ ಎರಡುವಿಧ ಪಕ್ಷಗಳು 'ಜೀವೇಶ್ವರೌ' ಎಂಬ ಪ್ರತ್ಯಯ ಶ್ರುತಿಯ ನ್ಯಾಯದಿಂದಲೇ ಪ್ರಾಪ್ತವಾಗಿದೆ.



ಗುಹಾಧಿಕರಣದಲ್ಲಿ ಕರ್ಮಫಲಭೋಕ್ತೃತ್ವವೆಂಬ ಲಿಂಗವನ್ನು ಸಮನ್ವಯ ಮಾಡುತ್ತಿದ್ದಾರೆ. ಅತ್ತೃತ್ವದಂತೆ ಇದೂ ಸಹ ಕ್ರಿಯಾರೂಪವೇ ಆಗಿದೆ. ಅಷ್ಟೇ ಅಲ್ಲದೆ ಅತ್ತೃತ್ವದ ವಿಶೇಷಧರ್ಮವೂ ಆಗಿದೆ. ಆದರೆ ಹಿಂದಿನ ಅಧಿಕರಣದಿಂದ ಈ ಲಿಂಗವು ನಿರ್ಣಯವಾಗುವುದಿಲ್ಲ. ಏಕೆಂದರೆ 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ದ್ವಿವಚನವು ಕೇಳಿಸುತ್ತಿದೆ. ಇಬ್ಬರು ವ್ಯಕ್ತಿಗಳು ಭೋಕ್ತೃಗಳಾದರೆ ಮಾತ್ರ ಈ ದ್ವಿವಚನವು ಉಪಪನ್ನವಾಗಲು ಸಾಧ್ಯವೆಂಬ ಆಕ್ಷೇಪ ಬರುತ್ತದೆ. ಇದರ ಪರಿಹಾರಕ್ಕಾಗಿ ಈ ಅಧಿಕರಣ ಹೊರಟಿದೆ.

ಹಿಂದಿನ ಅಧಿಕರಣದಲ್ಲಿ ಅದಿತಿಯೆಂಬ ಪ್ರಕೃತಿಶ್ರುತಿಯ ಬಲದಿಂದ ಪೂರ್ವಪಕ್ಷವು ಪ್ರಾಪ್ತವಾಗಿತ್ತು. ಈ ಅಧಿಕರಣದಲ್ಲಿ ದ್ವಿವಚನವೆಂಬ ಪ್ರತ್ಯಯಶ್ರುತಿಯ ಬಲದಿಂದ ಪೂರ್ವಪಕ್ಷವು ಪ್ರಾಪ್ತವಾಗುತ್ತಿದೆ. ಪ್ರಕೃತಿ ವಿಚಾರದ ಅನಂತರ ಪ್ರತ್ಯಯದ ವಿಚಾರವೂ ಸಂಗತವಾಗಿದೆಯೆಂದು ಅವಾಂತರಸಂಗತಿಯನ್ನು ಈ ಅಧಿಕರಣಕ್ಕೆ ತಿಳಿಯಬೇಕು. ಪ್ರತ್ಯುದಾಹರಣ ರೂಪಸಂಗತಿ ಹಾಗೂ ಆಕ್ಷೇಪಿಕೀಸಂಗತಿಗಳು ಮುಂದಿನ ವಿಷಯಭಾಗದಿಂದ ಸ್ವತಃ ಸ್ಪಷ್ಟವಾಗುತ್ತದೆ.



## ಸಂಶಯ ಪರಂಪರೆ

### तात्पर्यचन्द्रिका

**अत्र पिबन्तौ किं जीवेश्वरौ किं वेश्वररूपविशेषौ इति चिन्ता ? तदर्थं गुहावेशब्रह्मशब्दादिकं किममुख्यम् किं वा मुख्यमिति ? तदर्थं पिबत्प्रतिपदिकार्थभूतं भोक्तृत्वं किं ब्रह्मणि न युक्तमुत युक्तमिति ? तदर्थमभोक्तृत्वश्रुतिः ब्रह्मणि भोक्तृत्वमात्रनिषेधपरा उताशुभभोक्तृत्वनिषेधपरा वा इति ? तथा द्विवचनं किं ब्रह्मणि न युक्तमुत युक्तम् इति ॥**

ಅನುವಾದ - ಈ ಅಧಿಕರಣದ ಸಂಶಯ ಪರಂಪರೆ ಹೀಗಿದೆ -

'ಪಿಬಂತೌ' ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ ಇಬ್ಬರು ವ್ಯಕ್ತಿಗಳು ಜೀವ ಮತ್ತು ಈಶ್ವರರೋ? ಅಥವಾ ಈಶ್ವರನ ಎರಡು ವಿಶೇಷರೂಪವೋ? ಎಂದು ಸಂಶಯ. ಇದಕ್ಕಾಗಿ ಗುಹಾವೇಶ ಮತ್ತು ಬ್ರಹ್ಮ ಮೊದಲಾದ ಶಬ್ದಗಳು ಅಮುಖ್ಯವಾಗಿವೆಯೋ? ಅಥವಾ ಮುಖ್ಯವಾಗಿವೆಯೋ? ಎಂದು ಸಂಶಯ. ಇದಕ್ಕಾಗಿ 'ಪಿಬತ್' ಎಂಬ ಪ್ರಾತಿಪದಿಕದ ಅರ್ಥವೆನಿಸಿರುವ ಭೋಕ್ತೃತ್ವವು ಬ್ರಹ್ಮನಲ್ಲಿ ಕೂಡುವುದಿಲ್ಲವೋ? ಅಥವಾ ಕೂಡುತ್ತದೋ? ಎಂದು ಸಂಶಯ. ಇದಕ್ಕಾಗಿ ಅಭೋಕ್ತೃತ್ವಶ್ರುತಿಯು

ಬ್ರಹ್ಮನಲ್ಲಿ ಸಕಲವಿಧವಾದ ಭೋಕ್ತೃತ್ವವನ್ನು ನಿಷೇಧಿಸುತ್ತಿದೆಯೋ? ಅಥವಾ ಅಶುಭವಾದ ಭೋಕ್ತೃತ್ವವನ್ನು ನಿಷೇಧಿಸುತ್ತಿದೆಯೋ? ಎಂದು ಸಂಶಯ. ಇದರಂತೆ ದ್ವಿವಚನವು ಬ್ರಹ್ಮನಲ್ಲಿ ಅಯುಕ್ತವಾಗಿದೆಯೋ? ಯುಕ್ತವಾಗಿದೆಯೋ ? ಎಂದು ಸಂಶಯ ಪರಂಪರೆ.

**प्रकाशः –**

**विषयसंशयटीकां व्यनक्ति – अत्रेत्यादिना ।**

**ऋतं पिबन्तौ सुकृतस्य लोके गुहां प्रविष्टौ परमे परार्धे ।**
**छायातपौ ब्रह्मविदो वदन्ति पञ्चाग्नयो ये च त्रिनाचिकेताः ।।**

**इत्यत्र काठके ऋतपानकर्तृत्वेनोक्तो विषय इत्यर्थः टीकायां स्पष्टः ।**

ಈ ಅಧಿಕರಣದ ವಿಷಯ ಹಾಗೂ ಸಂಶಯಗಳನ್ನು ನಿರೂಪಿಸುವ ಟೀಕೆಯನ್ನು ವ್ಯಾಖ್ಯಾನಿಸುತ್ತಿದ್ದಾರೆ. 'ಅತ್ರ' ಇತ್ಯಾದಿ ಗ್ರಂಥದಿಂದ.

ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ।
ಛಾಯಾತಪೌ ಬ್ರಹ್ಮವಿದೋ ವದಂತಿ ಪಂಚಾಗ್ನಯೋ ಯೇ ಚ ತ್ರಿನಾಚಿಕೇತಾಃ॥

'ಋತಂ ಪಿಬಂತೌ' ಎಂಬ ಕಾಠಕದ ವಚನವು ಈ ಅಧಿಕರಣದ ವಿಷಯವಾಕ್ಯವಾಗಿದೆ. ಈ ವಾಕ್ಯದಲ್ಲಿ ಋತಪಾನಕರ್ತೃತ್ವವನ್ನು ಹೇಳಲಾಗಿದೆ. ಶ್ರುತಿಯ ಅರ್ಥವು ಟೀಕೆಯಲ್ಲಿ ಸ್ಪಷ್ಟವಾಗಿರುವುದರಿಂದ ಇಲ್ಲಿ ವಿವರಿಸಿಲ್ಲ.

**प्रकाशः – ननु 'गुहां प्रविष्टौ' इत्येतदेव धर्मीकृत्य सन्दिह्यताम् । तथा च सौत्रनिर्देशोऽपि साक्षात्सङ्गतस्स्यात् । अन्यथा 'पिबन्तौ' इत्येव ब्रूयात् ।**

**नच तस्य ब्रह्मलिङ्गत्वेन संशयायोगः, गुहाप्रविष्टत्वस्य ''हृदि ह्येष आत्मा'' इति जीवेऽपि सम्भवात् । द्विवचनश्रुतिबलेन गुहाप्रविष्टत्वं जीवेश्वरयोरिति पूर्वपक्षसम्भवाच्चेति चेत् ,**

ಆಕ್ಷೇಪ - ಸಂದೇಹವನ್ನು ತೋರಿಸುವಾಗ ಕರ್ಮಫಲಭೋಕ್ತೃತ್ವವನ್ನು ವಿಷಯೀಕರಿಸಿದ್ದಾರೆ. ಆದರೆ 'ಗುಹಾಂ ಪ್ರವಿಷ್ಟೌ' (ಹೃದಯ ಗುಹೆಯಲ್ಲಿ ಇಬ್ಬರು ಇದ್ದಾರೆ) ಎಂಬುದನ್ನೇ ಧರ್ಮಿಯನ್ನಾಗಿ ಪರಿಗಣಿಸಿ ಸಂದೇಹವನ್ನು ತೋರಿಸಬಹುದಿತ್ತು. ಹೀಗೆ ಸಂದೇಹವನ್ನು ತೋರಿಸುವುದರಿಂದ ಸೂತ್ರದಲ್ಲಿರುವ ಪದಗಳಿಂದ ಸಂದೇಹವು ನೇರವಾಗಿ ಸಂಗತವಾಗುತ್ತದೆ. ಈ ರೀತಿಯಾದ ಸಂದೇಹವೇ ಸೂತ್ರಕಾರರಿಗೂ ಸಹ ಸಮ್ಮತವಾಗಿದೆ. ಆದ್ದರಿಂದಲೇ ಸೂತ್ರದಲ್ಲಿ 'ಗುಹಾಂ ಪ್ರವಿಷ್ಟೌ' ಎಂಬ ಪದಗಳನ್ನು ಉಲ್ಲೇಖಿಸಿದ್ದಾರೆ. ಇಲ್ಲದಿದ್ದರೆ 'ಪಿಬಂತೌ' ಎಂದೇ ಹೇಳುತ್ತಿದ್ದರು.

ಹೃದಯಗುಹೆಯಲ್ಲಿರುವಿಕೆಯು ಬ್ರಹ್ಮನ ಲಿಂಗವೆಂದು ಹಿಂದಿನ ಅಧಿಕರಣದಿಂದ ಸಿದ್ಧವಾಗಿದೆ. ಆದ್ದರಿಂದ ಸಂಶಯವೇ ಹುಟ್ಟುವುದಿಲ್ಲವಲ್ಲ? ಎಂದು ಪ್ರಶ್ನಿಸಬಾರದು. "ಹೃದಿ ಹ್ಯೇಷ ಆತ್ಮಾ" ಎಂಬ ಶ್ರುತಿಯಂತೆ ಗುಹಾಪ್ರವಿಷ್ಟತ್ವವನ್ನು ಜೀವನಲ್ಲಿಯೂ ಹೇಳಬಹುದು. ಪ್ರಕೃತ ದ್ವಿವಚನವು ಶ್ರುತಿಯಲ್ಲಿ ಕೇಳಿಸುತ್ತಿರುವುದರಿಂದ ಜೀವ ಹಾಗೂ ಈಶ್ವರ ಇಬ್ಬರಲ್ಲಿಯೂ ಗುಹಾಪ್ರವಿಷ್ಟತ್ವಧರ್ಮವು ಇದೆಯೆಂಬುದಾಗಿ ಪೂರ್ವಪಕ್ಷವನ್ನು ಸುಲಭವಾಗಿ ಮಾಡಬಹುದು. ಹೀಗಿರುವಾಗ 'ಪಿಬಂತೌ' ಎಂಬುದನ್ನು ಧರ್ಮಿಯನ್ನಾಗಿ ವಿವಕ್ಷಿಸಿ ಸಂಶಯವನ್ನು ತೋರಿಸಿದ್ದು ತಪ್ಪಲ್ಲವೇ?

**प्रकाशः** – मैवं, गुहाप्रविष्टत्वस्य "सर्वत्र प्रसिद्धोपदेशात्" इति नये विष्णौ सिद्धत्वात्तत्समन्वयेऽपूर्वगुणालाभात्, पातृत्वसमन्वये तु कर्मफलभोक्तृत्वस्यापूर्वगुणस्य लाभात् । प्रागुक्तलक्षणस्य साक्षादाक्षेपसम्भवाच्च ।

तत्र प्रातिपादिकार्थस्य प्रत्ययार्थस्य च द्वयोरप्यनुपपत्त्या पूर्वपक्षे विशेषहेतुसत्त्वाच्च । अत एव सूत्रे आत्मपदेनाऽऽदेयं मातीति व्युत्पत्त्या-पातृत्वमुच्यते । वक्ष्यमाणदिशा गुहाप्रविष्टत्वस्य विष्णावेव प्रसिद्ध्या संशयायोगाच्च । सौत्रनिर्देशस्य तु गतिर्वक्ष्यते ।

ಗುಹಾಪ್ರವಿಷ್ಟತ್ವವನ್ನು ಧರ್ಮಿಯನ್ನಾಗಿ ಸ್ವೀಕರಿಸದಿರಲು ಅನೇಕ ಕಾರಣಗಳಿವೆ. ಹಿಂದಿನ ಅಧಿಕರಣದಲ್ಲಿಯೇ ಸರ್ವಗತತ್ವಧರ್ಮದಿಂದ ಗುಹಾಪ್ರವಿಷ್ಟತ್ವ ಧರ್ಮವು ವಸ್ತುವಿನಲ್ಲಿ ಸಿದ್ಧವಾಗಿದೆ. ಪುನಃ ಆ ಧರ್ಮವನ್ನೇ ಈ ಅಧಿಕರಣದಲ್ಲಿ ಸಮನ್ವಯ ಮಾಡಿದರೆ ಅಪೂರ್ವಗುಣವನ್ನು ಸಮನ್ವಯ ಮಾಡಿದಂತಾಗುವುದಿಲ್ಲ. ಕರ್ಮಫಲಪಾತೃತ್ವವೆಂಬ ಧರ್ಮವನ್ನು ಸಮನ್ವಯ ಮಾಡಿದಾಗ ಅಪೂರ್ವಗುಣವನ್ನು ಸಮನ್ವಯ ಮಾಡಿದಂತಾಗುತ್ತದೆ. ಮತ್ತು ಹಿಂದಿನ ಅಧಿಕರಣದ ಅತ್ತೃತ್ವವನ್ನು ವಿಷ್ಣುವಿನಲ್ಲಿ ನೇರವಾಗಿ ಆಕ್ಷೇಪಿಸಿದಂತಾಗುತ್ತದೆ.

ಮತ್ತು 'ಪಿಬತ್' ಎಂಬ ಪ್ರಾತಿಪದಿಕಾರ್ಥ ಹಾಗೂ 'ಔ' ಎಂಬ ಪ್ರತ್ಯಯದ ಅರ್ಥ ಎರಡೂ ಸಹ ವಿಷ್ಣುವಿನಲ್ಲಿ ಅನುಪಪನ್ನವಾದ್ದರಿಂದ ದೃಢವಾದ ಪೂರ್ವಪಕ್ಷವನ್ನು ಮಾಡಿದಂತಾಗುತ್ತದೆ. ಈ ಪೂರ್ವಪಕ್ಷದ ದಾರ್ಢ್ಯಕ್ಕಾಗಿಯೇ ಸೂತ್ರದಲ್ಲಿ ಆತ್ಮಪದವನ್ನು ಪ್ರಯೋಗಿಸಿದ್ದಾರೆ. ಈ ಪದದಿಂದ 'ಆದೇಯಂ ಮಾತಿ' (ಶುಭಫಲವನ್ನು ತಿನ್ನುತ್ತಾನೆ) ಎಂಬ ವ್ಯುತ್ಪತ್ತಿಯನ್ನು ಅನುಸರಿಸಿ ಪಾತೃತ್ವಧರ್ಮವನ್ನು ಹೇಳಿದ್ದಾರೆ. ಅಷ್ಟೇ ಅಲ್ಲದೆ ಮುಂದೆ ನಿರೂಪಿಸುವ ಪ್ರಕಾರ ಗುಹಾಪ್ರವಿಷ್ಟತ್ವವು ವಿಷ್ಣುವಿನಲ್ಲೇ ಪ್ರಸಿದ್ಧವಾಗಿರುವುದರಿಂದ ಸಂಶಯವೂ ಸಹ ಕೂಡುವುದಿಲ್ಲ. ಹಾಗಾದರೆ ಸೂತ್ರದಲ್ಲಿ 'ಪಿಬಂತೌ' ಎಂದೇಕೆ ನಿರ್ದೇಶಿಸಿಲ್ಲ? ಎಂಬ ಪ್ರಶ್ನೆಗೆ ಮುಂದೆ ಉತ್ತರಿಸುತ್ತೇವೆ.

**प्रकाशः** – जीवेश्वराविति । एतेन "विष्णोरन्यस्य" इति टीका विष्णोरेवान्यस्यापि वेति व्याख्येयेत्युक्तं भवति ।

**ननु बुद्धिजीवौ प्राणजीवौ बुद्धिप्राणौ वा सम्भवतः, कथं जीवेश्वराविति विशिष्योक्तिः ।**

ಗ್ರಂಥದಲ್ಲಿ 'ಜೀವೇಶ್ವರೌ' ಎಂದು ಹೇಳಿದ್ದರಿಂದ "ವಿಷ್ಣೋರನ್ಯಸ್ಯ ವಾ" ಎಂಬ ಟೀಕೆಯನ್ನು 'ವಿಷ್ಣೋರೇವ ವಾ ಅನ್ಯಸ್ಯಾಪಿ ವಾ' ವಿಷ್ಣುವಿಗೆ ಮಾತ್ರ ಬರುತ್ತದೋ ಅಥವಾ ಬೇರೆಯವರಿಗೂ ಬರುತ್ತದೋ ? ಎಂದು ಆಕ್ಷೇಪಿಸಿದಂತಾಯಿತು.

ಆಕ್ಷೇಪ - ದ್ವಿವಚನದಿಂದ ಜೀವೇಶ್ವರರಿಬ್ಬರನ್ನೇ ವಿವಕ್ಷಿಸಬೇಕೆನ್ನಲು ವಿನಿಗಮಕವಿಲ್ಲ. ಬುದ್ಧಿ ಮತ್ತು ಜೀವರನ್ನು ಅಥವಾ ಪ್ರಾಣ ಮತ್ತು ಜೀವರನ್ನು ಅಥವಾ ಬುದ್ಧಿ ಮತ್ತು ಪ್ರಾಣರನ್ನೂ ಸಹ ವಿವಕ್ಷಿಸಬಹುದು. ಹೀಗಿರುವಾಗ 'ಜೀವೇಶ್ವರೌ' ಎಂದು ಗ್ರಂಥಕಾರರು ಇವರಿಬ್ಬರನ್ನೇ ಹೇಗೆ ನಿರ್ದೇಶಿಸಿದರು?

**प्रकाशः – मैवं, पातृत्वेनैकस्य जीवत्वावश्यम्भावेन 'अस्य गोर्द्वितीयेन भाव्यं' इत्यादौ सजातीयस्येवात्रापि सजातीयस्यैव द्वितीयस्येश्वरस्य ग्राह्यत्वात् । नच जीवान्तरमेव ग्राह्यमिति युक्तं, एकस्मिन् देहे भोक्तृजीवद्वयायोगात् ।**

**नच चैद्यादौ जीवद्वयं दृष्टमिति वाच्यं, तस्य प्रबलनिमित्तादिना क्वाचित्कत्वेन प्रतिशरीरं जीवद्वयायोगात्, ब्रह्मप्रकरणाच्च तस्यैव द्वितीयत्वस्योचितत्वादिति भावः ।**

ಸಮಾಧಾನ - ಪಾತೃತ್ವಧರ್ಮವಿರುವ ಒಬ್ಬ ಜೀವನನ್ನಂತು ತೆಗೆದುಕೊಳ್ಳಲೇಬೇಕು. ಇಂತಹ ಜೀವನಿಗೆ ಸಜಾತೀಯನಾದ ಮತ್ತೊಬ್ಬನೆಂದರೆ ಈಶ್ವರನೇ ಆಗುತ್ತಾನೆ. ಹಸುವಿಗೆ ಮತ್ತೊಂದು ಸಜಾತೀಯ ವಸ್ತುವೆಂದರೆ ಹಸುವೇ ಹೇಗಾಗುತ್ತದೋ ಆದರಂತೆ ಜೀವನಿಗೆ ಸಜಾತೀಯನಾದ ಮತ್ತೊಬ್ಬ ವ್ಯಕ್ತಿಯೆಂದರೆ ಈಶ್ವರನೇ ಆಗುತ್ತಾನೆ. ಜೀವನಿಗೆ ಮತ್ತೊಬ್ಬ ಜೀವನೇ ಸಜಾತೀಯನಾಗಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಒಂದೇ ದೇಹದಲ್ಲಿ ಭೋಕ್ತೃಗಳಾದ ಇಬ್ಬರು ಜೀವರು ಇರಲು ಸಾಧ್ಯವಿಲ್ಲ. ಶಿಶುಪಾಲಾದಿಗಳಲ್ಲಿ ಇಬ್ಬರು ಜೀವರು ಭೋಕ್ತೃಗಳಾಗಿರುವುದು ಕಂಡಿದೆಯಲ್ಲವೇ? ಎಂದರೆ ಪ್ರಬಲವಾದ ಕಾರಣವಿದ್ದಾಗ ಮಾತ್ರ ಕೆಲವು ಶರೀರಗಳಲ್ಲಿ ಹಾಗೆ ಜೀವದ್ವಯಗಳನ್ನು ಒಪ್ಪಬಹುದು ಹೊರತು ಎಲ್ಲ ಶರೀರಗಳಲ್ಲಿಯೂ ಜೀವದ್ವಯವನ್ನು ಒಪ್ಪಲಾಗದು. ಅಷ್ಟೇ ಅಲ್ಲದೆ ಇದು ಬ್ರಹ್ಮನ ಪ್ರಕರಣವಾದ್ದರಿಂದ ಬ್ರಹ್ಮನನ್ನೇ ಮತ್ತೊಬ್ಬನೆಂದು ಭಾವಿಸುವುದು ಉಚಿತವಾಗಿದೆ.

**प्रकाशः – रूपविशेषाविति । ईश्वरद्वयाभावेनेश्वरावित्यनुक्त्वा ''रूपविशेषौ'' इत्युक्तम् ।**

ಪರಿಪೂರ್ಣಚಂದ್ರಿಕಾ

**ब्रह्मशब्दादिकमिति ।**

**यस्सेतुरीजानानामक्षरं ब्रह्म तत्परम् ।**

**इत्युक्तसेतुत्वादिरादिशब्दार्थः । मुख्यमितिचिन्तानन्तरं, मुख्यत्वे बाधकमस्त्युत नेति चिन्ता स्फुटत्वान्नोक्ता ।**

ಈಶ್ವರನು ಒಬ್ಬನೇ ಆದ್ದರಿಂದ 'ಈಶ್ವರೌ' ಎಂದು ಪ್ರಯೋಗಿಸದೆ 'ರೂಪವಿಶೇಷೌ' ಎಂದು ಪ್ರಯೋಗಿಸಿದ್ದಾರೆ. ಈಶ್ವರನು ಒಬ್ಬನೇ ಆದರೂ ಅನೇಕ ರೂಪಗಳಿರುವುದರಿಂದ ಎರಡು ರೂಪವೆಂದು ಹೇಳಬಹುದು.

'ಬ್ರಹ್ಮಶಬ್ದಾದಿಕಮ್' ಎಂಬಲ್ಲಿರುವ ಆದಿ ಪದದಿಂದ 'ಯಸ್ಸೇತುರೀಜಾನಾನಾಮಕ್ಷರಂ ಬ್ರಹ್ಮ ತತ್ಪರಮ್ ।' ಎಂಬುದಾಗಿ ಹೇತುತ್ವಾದಿಗಳನ್ನು ವಿವಕ್ಷಿಸಬೇಕು. 'ಮುಖ್ಯಂ' ಎಂಬ ಸಂಶಯದ ಅನಂತರ ಮುಖ್ಯತ್ವದಲ್ಲಿ ಬಾಧಕವಿದೆಯೋ ? ಇಲ್ಲವೋ ? ಎಂಬ ಸಂಶಯವನ್ನು ತಿಳಿಯಬೇಕು. ಇದು ಸ್ಪಷ್ಟವಾಗಿರುವುದರಿಂದ ಗ್ರಂಥಕಾರರು ಹೇಳಿರುವುದಿಲ್ಲ.

**प्रकाशः – श्रुतिरिति । ''अनश्नन्'' इत्यादिश्रुतिर्यदि भोक्तृत्वसामान्यनिषेधपरा, तर्हि प्रातिपदिकार्थभोक्तृत्वाद्योगात्पिबत्प्रातिपदिकार्थरूपबाधकसत्त्वेन ब्रह्मशब्दादेर्मुख्यत्वयोगेन जीवेश्वराविति पूर्वपक्षे फलम् ।**

**यदि विशेषनिषेधपरा, तदा ब्रह्मणि भोक्तृत्वयोगे बाधकाभावाद्ब्रह्मशब्दादेर्मुख्यत्वादीश्वररूपविशेषाविति सिद्धान्ते फलमिति स्फुटत्वान्नोक्तम् ।**

ಗ್ರಂಥದಲ್ಲಿ 'ಶ್ರುತಿಃ' ಎಂದಿದೆ. ಇದರಿಂದ ಪೂರ್ವಪಕ್ಷ ಸಿದ್ಧಾಂತಫಲಗಳನ್ನು ತಿಳಿಯಬೇಕು. ಒಂದು ವೇಳೆ 'ಅನಶ್ನನ್' ಇತ್ಯಾದಿ ಶ್ರುತಿಯು ಭೋಕ್ತೃತ್ವಸಾಮಾನ್ಯವನ್ನು ವಿಷ್ಣುವಿನಲ್ಲಿ ನಿಷೇಧಿಸುವುದಾದರೆ, ಪ್ರಾತಿಪದಿಕಾರ್ಥಭೋಕ್ತೃತ್ವ ಕೂಡುವುದಿಲ್ಲ. ಆದ್ದರಿಂದ 'ಪಿಬತ್' ಎಂಬ ಪ್ರಾತಿಪದಿಕಾರ್ಥರೂಪವಾದ ಬಾಧಕವಿರುವುದರಿಂದ ಬ್ರಹ್ಮಶಬ್ದಾದಿಗಳಿಗೆ ಮುಖ್ಯಾರ್ಥವನ್ನು ಹೇಳಲಾಗದು. ಆದ್ದರಿಂದ ಜೀವೇಶ್ವರರೇ ಕರ್ಮಫಲಭೋಕ್ತೃಗಳಾಗಿದ್ದಾರೆಂಬುದು ಪೂರ್ವಪಕ್ಷದ ಫಲ.

ಒಂದು ವೇಳೆ 'ಅನಶ್ನನ್' ಇತ್ಯಾದಿ ಶ್ರುತಿಯು ಭೋಕ್ತೃತ್ವವಿಶೇಷವನ್ನು ನಿಷೇಧಿಸುವುದಾದರೆ ಆವಾಗ ಬ್ರಹ್ಮನಲ್ಲಿ ಶುಭಫಲಭೋಕ್ತೃತ್ವವು ಯುಕ್ತವಾಗುತ್ತದೆ. ಯಾವುದೇ ಬಾಧಕವಿಲ್ಲದ ಕಾರಣ ಬ್ರಹ್ಮಶಬ್ದಾದಿಗಳಿಗೆ ಮುಖ್ಯಾರ್ಥವನ್ನು ಹೇಳಬಹುದು. ಆದ್ದರಿಂದ 'ಪಿಬಂತೌ' ಎಂಬ ಶ್ರುತಿಯಿಂದ ಭಗವಂತನ ಎರಡು ರೂಪವಿಶೇಷಗಳೇ ಪ್ರತಿಪಾದ್ಯಗಳಾದ್ದರಿಂದ ಭಗವಂತನೇ ಕರ್ಮಫಲಭೋಕ್ತೃವಾಗುತ್ತಾನೆಂಬುದು ಸಿದ್ಧಾಂತದ ಫಲ. ಈ ಪೂರ್ವಪಕ್ಷಸಿದ್ಧಾಂತ ಫಲಗಳು ಸ್ಪಷ್ಟವಾಗಿರುವುದರಿಂದ ಗ್ರಂಥಕಾರರು ಪ್ರತ್ಯೇಕವಾಗಿ ಹೇಳಿರುವುದಿಲ್ಲ.

## ಗುಹಾಧಿಕರಣ (೧-೨-೩)

**प्रकाशः – अत्र द्वौ पूर्वपक्षौ, प्रातिपदिकार्थमुपजीव्य प्रवृत्तः प्रत्ययार्थमुपजीव्य प्रवृत्तश्चेति ।**

**'आत्मानौ'' इति प्रातिपदिकप्रत्ययाभ्यां द्वयोर्गतेर्वक्ष्यमाणत्वात् । तत्राद्योपयुक्तचिन्तापरम्परेयम् । द्वितीयोपयुक्तामाह – तथेति ।**

ಇಲ್ಲಿಯ ತನಕ ಮಾಡಿದ ವಿಚಾರದಿಂದ ಒಟ್ಟು ಎರಡು ಬಗೆಯ ಪೂರ್ವಪಕ್ಷವನ್ನು ತಿಳಿಯಬೇಕು -

೧. ಪ್ರಾತಿಪದಿಕಾರ್ಥವನ್ನು ಉಪಜೀವಿಸಿ ಪ್ರವೃತ್ತವಾಗುವ ಪೂರ್ವಪಕ್ಷ.

೨. ಪ್ರತ್ಯಯಾರ್ಥವನ್ನು ಉಪಜೀವಿಸಿ ಪ್ರವೃತ್ತವಾಗುವ ಪೂರ್ವಪಕ್ಷ ಎಂದು.

'ಆತ್ಮಾನೌ' ಎಂಬಲ್ಲಿ ಪ್ರಾತಿಪದಿಕ ಹಾಗೂ ಪ್ರತ್ಯಯಗಳಿಂದ ಎರಡೂ ಬಗೆಯ ಪೂರ್ವಪಕ್ಷಗಳಿಗೆ ಗತಿಯನ್ನು ಮುಂದೆ ಹೇಳುತ್ತಾರೆ. ಆದಕ್ಕೆ ಉಪಯುಕ್ತವಾದ ಚಿಂತಾಪರಂಪರೆಯನ್ನು ಇಲ್ಲಿ ಹೇಳಿದ್ದಾರೆ. ಎರಡನೆಯ ಪೂರ್ವಪಕ್ಷಕ್ಕೆ ಉಪಯುಕ್ತವಾಗುವ ಸಂಶಯವನ್ನು 'ತಥಾ' ಎಂಬ ವಾಕ್ಯದಿಂದ ಹೇಳಿದ್ದಾರೆ.

**प्रकाशः – किं वा मुख्यमिति चिन्तानन्तरमियं चिन्ता ध्येया । यदि द्विवचनं न युक्तं, तदा बाधकसत्त्वेन ब्रह्मशब्दादेरमुख्यत्वेन जीवेश्वराविति फलिष्यति । यदि तु युक्तं, तदा बाधकाभावाद्ब्रह्मशब्दादेर्मुख्यत्वेनेश्वररूपविशेषाविशेषाविति फलिष्यतीति भावः ।**

'ಕಿಂ ವಾ ಮುಖ್ಯಂ' ಎಂಬ ಸಂಶಯದ ನಂತರ 'ತಥಾ' ಎಂಬ ಚಿಂತನೆಯನ್ನು ತಿಳಿಯಬೇಕು. ಒಂದು ವೇಳೆ ದ್ವಿವಚನವು ಅಯುಕ್ತವಾದರೆ ಆವಾಗ ಬಾಧಕವಿರುವುದರಿಂದ ಬ್ರಹ್ಮಶಬ್ದಾದಿಗಳಿಗೆ ಮುಖ್ಯಾರ್ಥವನ್ನು ಸ್ವೀಕರಿಸಲಾಗದು. ಆವಾಗ ಜೀವೇಶ್ವರರೇ ಕರ್ಮಫಲಭೋಕ್ತೃಗಳೆಂದು ಸಿದ್ಧವಾಗುತ್ತದೆ. ಒಂದು ವೇಳೆ ವಿಷ್ಣುವಿನಲ್ಲಿ ದ್ವಿವಚನವು ಯುಕ್ತವಾಗುವುದಾದರೆ ಆವಾಗ ಬಾಧಕವಿಲ್ಲದ ಕಾರಣ ಬ್ರಹ್ಮ ಶಬ್ದಾದಿಗಳಿಗೆ ಮುಖ್ಯಾರ್ಥವನ್ನು ಹೇಳಬಹುದು. ಆದ್ದರಿಂದ ಭಗವಂತನ ರೂಪವಿಶೇಷವೇ ಕರ್ಮಫಲಭೋಕ್ತೃಗಳೆಂದು ಫಲತಃ ಸಿದ್ಧವಾಗುತ್ತದೆಂದು ತಿಳಿಯಬೇಕು.

**प्रकाशः – नन्वियं चिन्ता प्रातिपदिकार्थभूतं भोक्तृत्वं द्विवचनं च न युक्तमुत युक्तमिति पूर्वत्रैव निवेश्यतामिति चेन्न, तदर्थमभोक्तृत्वश्रुतिरिति वक्ष्यमाणचिन्ताया अनन्वयापत्तेः तस्याः प्रातिपदिकार्थमात्रविषयत्वादिति ॥**

ಮೇಲೆ ಹೇಳಿದ ಸಂಶಯ ಪ್ರಕಾರವನ್ನು 'ಪ್ರಾತಿಪಾದಿಕಾರ್ಥಭೂತಂ ಭೋಕ್ತೃತ್ವಂ ದ್ವಿವಚನಂ ಚ ನ ಯುಕ್ತಮುತ ಯುಕ್ತಮ್' ಪ್ರಾತಿಪದಿಕಾರ್ಥಭೂತವಾದ ಭೋಕ್ತೃತ್ವವು ಮತ್ತು ದ್ವಿವಚನವು ಅಯುಕ್ತವೋ?

ಅಥವಾ ಯುಕ್ತವೋ ? ಎಂಬುದಾಗಿ ಹಿಂದೆಯೆ? ತೋರಿಸಬೇಕಿತ್ತಲ್ಲವೇ? ಇದು ತಪ್ಪು. ಹಾಗಾದಲ್ಲಿ 'ತದರ್ಥಮಭೋಕ್ತೃತ್ವಶ್ರುತಿಃ' ಎಂಬ ಮುಂದೆ ತೋರಿಸುವ ಸಂಶಯದ ಜೊತೆಗೆ ಅನ್ವಯವು ತೋರುವುದಿಲ್ಲ. ಏಕೆಂದರೆ ಆ ಸಂಶಯವು ಪ್ರಾತಿಪದಿಕಾರ್ಥವನ್ನು ಮಾತ್ರ ವಿಷಯೀಕರಿಸಿದೆ.

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम्** – ॐ गुहां प्रविष्टावात्मानौ हि तद्दर्शनात् ॐ ॥ प्रातिपदिकार्थस्य कर्मफलभोक्तृत्वस्य ब्रह्मण्यसम्भवे हेतुः कर्मबन्धरहित इति ।




ಒಂದು ವೇಳೆ 'ಅನಶ್ನನ್' ಇತ್ಯಾದಿ ಶ್ರುತಿಯು ಭೋಕ್ತೃತ್ವಸಾಮಾನ್ಯವನ್ನು ವಿಷ್ಣುವಿನಲ್ಲಿ ನಿಷೇಧಿಸುವುದಾದರೆ, ಪ್ರಾತಿಪದಿಕಾರ್ಥಭೋಕ್ತೃತ್ವ ಕೂಡುವುದಿಲ್ಲ. ಆದ್ದರಿಂದ 'ಪಿಬತ್' ಎಂಬ ಪ್ರಾತಿಪದಿಕಾರ್ಥ ರೂಪವಾದ ಬಾಧಕವಿರುವುದರಿಂದ ಬ್ರಹ್ಮಶಬ್ದಾದಿಗಳಿಗೆ ಮುಖ್ಯಾರ್ಥವನ್ನು ಹೇಳಲಾಗದು. ಆದ್ದರಿಂದ ಜೀವೇಶ್ವರರೇ ಕರ್ಮಫಲಭೋಕ್ತೃಗಳಾಗಿದ್ದಾರೆಂಬುದು ಪೂರ್ವಪಕ್ಷದ ಫಲ.

ಒಂದು ವೇಳೆ 'ಅನಶ್ನನ್' ಇತ್ಯಾದಿ ಶ್ರುತಿಯು ಭೋಕ್ತೃತ್ವ ವಿಶೇಷವನ್ನು ನಿಷೇಧಿಸುವುದಾದರೆ ಆವಾಗ ಬ್ರಹ್ಮನಲ್ಲಿ ಶುಭಫಲಭೋಕ್ತೃತ್ವವು ಯುಕ್ತವಾಗುತ್ತದೆ. ಯಾವುದೇ ಬಾಧಕವಿಲ್ಲದ ಕಾರಣ ಬ್ರಹ್ಮಶಬ್ದಾದಿಗಳಿಗೆ ಮುಖ್ಯಾರ್ಥವನ್ನು ಹೇಳಬಹುದು. ಆದ್ದರಿಂದ 'ಪಿಬಂತೌ' ಎಂಬ ಶ್ರುತಿಯಿಂದ ಭಗವಂತನ ಎರಡು ರೂಪವಿಶೇಷಗಳೇ ಪ್ರತಿಪಾದ್ಯಗಳಾದ್ದರಿಂದ ಭಗವಂತನೇ ಕರ್ಮಫಲಭೋಕ್ತೃವಾಗುತ್ತಾನೆಂಬುದು ಸಿದ್ಧಾಂತದ ಫಲ.



ಪ್ರಬಲವಾದ ಪೂರ್ವಪಕ್ಷ

**तात्पर्यचन्द्रिका**

**पूर्वपक्षस्तु – युक्तं पूर्वोक्तमत्तृत्वं ब्रह्मणि, प्रातिपदिकार्थस्य संहर्तृत्वस्य प्रत्ययार्थस्यैकत्वस्य च सम्भवात् ।**

**इह तु प्रातिपदिकार्थः कर्मफलभोक्तृत्वं प्रत्ययार्थो द्वित्वं च कर्मबन्धरहिते निर्भेदे च ब्रह्मणि न युक्तम् । अन्यथा ''सप्तदश प्राजापत्यान् पशूनालभते'' इत्यादौ सङ्ख्यया कर्मभेदो न स्यात् ।**

**अन्नमयादीनां तु ''स वा एष पुरुषोऽन्नरसमयः'' इत्यादौ यत्र ब्रह्मतोक्ता, तत्रानेकत्वं न श्रुतम् । यत्र च ''अन्नमयप्राणमयमनोमयविज्ञामयानन्दमया मे शुद्ध्यन्ताम्'' इत्यत्रानेकत्वं श्रुतम्, तत्र न ब्रह्मतोक्ता, किन्तु संज्ञाधिकरणन्यायेन अन्नमयप्राणमयेत्यादिसंज्ञाभेदेन अन्नमयादीनां भेदे शङ्किते, दाक्षायणयज्ञादिशब्दवत् प्राणमयादिशब्दाः प्रकृते ब्रह्मणि गुणविधायका नतु संज्ञामात्रम्, ततो न भेदका इत्यादिपरिहारस्तत्राभिप्रेतः ।**

**तथाचान्नमयादीनां ब्रह्मत्वं स्वीकृत्यैव अत्र पूर्वपक्षः ।**

ಅನುವಾದ - ಪೂರ್ವಪಕ್ಷ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಅತ್ತೃತ್ವವನ್ನು ಬ್ರಹ್ಮನ ಧರ್ಮವೆಂದು ಒಪ್ಪೋಣ. ಏಕೆಂದರೆ ಪ್ರಾತಿಪದಿಕಾರ್ಥವೆನಿಸಿದ ಸಂಹರ್ತೃತ್ವವಾಗಲಿ ಪ್ರತ್ಯಯಾರ್ಥವೆನಿಸಿದ ಏಕತ್ವವಾಗಲಿ ಬ್ರಹ್ಮನಲ್ಲಿ ಯುಕ್ತವಾಗುತ್ತದೆ. ಆದರೆ ಈ ಅಧಿಕರಣದಲ್ಲಿ ಹೇಳುತ್ತಿರುವ ಪ್ರಾತಿಪದಿಕಾರ್ಥವೆನಿಸಿದ ಕರ್ಮಫಲಭೋಕ್ತೃತ್ವವಾಗಲಿ, ಪ್ರತ್ಯಯಾರ್ಥವೆನಿಸಿದ ದ್ವಿತ್ವವಾಗಲಿ ಬ್ರಹ್ಮನಲ್ಲಿ ಕೂಡುವುದಿಲ್ಲ. ಸಕಲಕರ್ಮಬಂಧಗಳಿಂದ ರಹಿತನಾಗಿರುವ ಬ್ರಹ್ಮನಲ್ಲಿ ಸುಖದುಃಖಗಳೆಂಬ ಕರ್ಮಫಲಗಳ ಭೋಗವನ್ನು ಹೇಳಲು ಸಾಧ್ಯವಿಲ್ಲ. ಮತ್ತು ಬ್ರಹ್ಮನು ಒಬ್ಬನೇ ಆಗಿರುವುದರಿಂದ ದ್ವಿತ್ವವನ್ನೂ ಸಹ ಹೇಳಲು ಸಾಧ್ಯವಿಲ್ಲ. ಹೀಗೊಪ್ಪದಿದ್ದರೆ ''ಸಪ್ತದಶ ಪ್ರಾಜಾಪತ್ಯಾನ್ ಪಶೂನಾಲಭತೇ'' ಎಂಬುದಾಗಿ ಪೂರ್ವಮೀಮಾಂಸೆಯಲ್ಲಿ ಸಂಖ್ಯಾಭೇದದಿಂದ ಕರ್ಮಭೇದವನ್ನು ಒಪ್ಪಿದ್ದು ತಪ್ಪಾಗಬೇಕಾದೀತು.

ಆನಂದಮಯಾಧಿಕರಣದಲ್ಲಿ ಒಬ್ಬನೇ ಬ್ರಹ್ಮನಲ್ಲಿ ಪಂಚತ್ವಸಂಖ್ಯೆಯನ್ನು ಹೇಳಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಅನ್ನಮಯಾದಿರೂಪಗಳಿಗೆ ''ಸ ವಾ ಏಷ ಪುರುಷೋಽನ್ನರಸಮಯಃ''

ಇತ್ಯಾದಿಯಾಗಿ ಎಲ್ಲಿ ಬ್ರಹ್ಮತ್ವವನ್ನು ಹೇಳಿದ್ದಾರೋ ಅಲ್ಲಿ ಅನೇಕತ್ವವು ಕೇಳಿಸುತ್ತಲೇ ಇಲ್ಲ. ಇನ್ನು "ಅನ್ನಮಯಪ್ರಾಣಮಯಮನೋಮಯವಿಜ್ಞಾನಮಯಾನಂದಮಯಾ ಮೇ ಶುದ್ಧ್ಯಂತಾಮ್" ಎಂಬಲ್ಲಿ ಅನೇಕತ್ವವೇನೋ ಕೇಳಿಸುತ್ತಿದೆ. ಆದರೆ ಬ್ರಹ್ಮತ್ವವು ಕೇಳಿಸುತ್ತಿಲ್ಲ.

ಆದ್ದರಿಂದ ಪೂರ್ವಮೀಮಾಂಸೆಯ ಸಂಜ್ಞಾಧಿಕರಣದ ನ್ಯಾಯದಂತೆ ಅನ್ನಮಯ, ಪ್ರಾಣಮಯ ಮೊದಲಾದ ಸಂಜ್ಞಾಭೇದದಿಂದ ಅನ್ನಮಯಾದಿರೂಪಗಳಿಗೂ ಸಹ ಭೇದವಿರಬೇಕು ಎಂಬ ಶಂಕೆಯು ಪ್ರಾಪ್ತವಾಗುತ್ತದೆ. ಇದನ್ನು ಪರಿಹರಿಸುವುದಕ್ಕಾಗಿ ದಾಕ್ಷಾಯಣಯಜ್ಞ ಮೊದಲಾದ ಶಬ್ದಗಳಂತೆ ಪ್ರಾಣಮಯಾದಿಶಬ್ದಗಳೂ ಸಹ ಬ್ರಹ್ಮನಲ್ಲಿ ಗುಣವಿಧಾಯಕವಾಗಿವೆ. ಹೊರತು ಕೇವಲ ಸಂಜ್ಞಾರೂಪವಾಗಿಲ್ಲ. ಆದ್ದರಿಂದ ಅನ್ನಮಯಾದಿ ರೂಪಗಳು ವಿಷ್ಣುವಿನಲ್ಲಿ ಭೇದವನ್ನುಂಟು ಮಾಡುವುದಿಲ್ಲ. ಈ ಅಭಿಪ್ರಾಯವನ್ನು ಆನಂದಮಯಾಧಿಕರಣದಲ್ಲಿ ವಿವಕ್ಷಿಸಲಾಗಿದೆ. ಆದ್ದರಿಂದ ಅನ್ನಮಯಾದಿಗಳಿಗೆ ಬ್ರಹ್ಮತ್ವವನ್ನು ಸ್ವೀಕರಿಸಿ ಇಲ್ಲಿ ಪೂರ್ವಪಕ್ಷ ಮಾಡಲಾಗಿದೆ.

**प्रकाशः –**

'आत्मनौ' इति सौत्रद्विवचनान्तात्मपदेन 'पिबन्तौ' इति श्रुतप्रकृतिप्रत्ययोर्द्वयोरपि गत्युक्त्या तदनुरोधेन टीकायामुक्तं द्वाभ्यां पूर्वपक्षं टीका-सूचितपूर्ववैषम्योक्तिपूर्वकं व्यनक्ति – **युक्तमिति ।**

ಸೂತ್ರದಲ್ಲಿ 'ಆತ್ಮಾನೌ' ಎಂಬುದಾಗಿ ದ್ವಿವಚನಾಂತವಾದ ಆತ್ಮಪದವಿದೆ. ಇದರಿಂದ 'ಪಿಬಂತೌ' ಎಂಬ ಶ್ರುತಿಯ ಪ್ರಕೃತಿ ಹಾಗೂ ಪ್ರತ್ಯಯಗಳೆರಡಕ್ಕೂ ಗತಿಯನ್ನು ಹೇಳಲಾಗಿದೆ. ಇದಕ್ಕೆ ಅನುಸರಿಸಿ ಟೀಕೆಯಲ್ಲಿ ಎರಡು ಬಗೆಯ ಪೂರ್ವಪಕ್ಷವನ್ನು ಮಾಡಲಾಗಿದೆ. ಪ್ರಕೃತ ಗ್ರಂಥಕಾರರು ಹಿಂದಿನ ಅಧಿಕರಣದ ಪೂರ್ವಪಕ್ಷಕ್ಕಿಂತ ವೈಲಕ್ಷಣ್ಯವನ್ನು ತೋರಿಸುವ ಮೂಲಕ ಟೀಕೆಯ ಎರಡು ಬಗೆಯ ಪೂರ್ವಪಕ್ಷವನ್ನು 'ಯುಕ್ತಂ' ಇತ್ಯಾದಿ ವ್ಯಾಖ್ಯಾನದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – 'अत्ति' इत्यत्र धातुरूपप्रकृत्यर्थस्य तिङ्प्रत्ययार्थस्येति वा, 'अदितेः' इत्यत्रादितिप्रातिपदिकार्थकस्य सुप्रत्ययार्थस्येति वाऽर्थः ।

**इह तु प्रातिपदिकार्थ इति ।** ऋतपिबत्प्रातिपदिकयोरर्थ इत्यर्थः । 'प्रत्ययार्थः' औप्रत्ययार्थः ।

ननु भेदाभावेऽपि ब्रह्मणि द्वित्वं युज्यतां, को दोष इत्यत आह – **अन्यथेति ।**

ಗ್ರಂಥದಲ್ಲಿ 'ಪ್ರಾತಿಪದಿಕಾರ್ಥಸ್ಯ' ಎಂದಿದೆ. ಇದಕ್ಕೆ 'ಅತ್ತಿ' ಎಂಬಲ್ಲಿ ಧಾತುರೂಪವಾದ ಪ್ರಕೃತ್ಯರ್ಥವನ್ನು ತಿಙಪ್ರತ್ಯಯಾರ್ಥವನ್ನು ಭಗವಂತನಲ್ಲಿ ಹೇಳಿದ್ದಾರೆ ಎಂದರ್ಥ. ಅಥವಾ 'ಅದಿತೇಃ' ಎಂಬ ಶ್ರುತಿಯಲ್ಲಿರುವ ಅದಿತಿ ಪ್ರಾತಿಪದಿಕಾರ್ಥವನ್ನು ಮತ್ತು ಸುಪ್ರತ್ಯಯಾರ್ಥವನ್ನು ಹೇಳಿದ್ದಾರೆಂದೂ ಸಹ ತಿಳಿಯಬಹುದು.

ಈ ಅಧಿಕರಣದಲ್ಲಿ ಪ್ರಾತಿಪದಿಕಾರ್ಥವೆಂದರೆ 'ಋತಂ ಪಿಬಂತೌ ಎಂಬ ಶ್ರುತಿಯಲ್ಲಿರುವ ಋತ ಹಾಗೂ ಪ್ರಾತಿಪದಿಕಗಳ ಅರ್ಥ ಎಂದರ್ಥ.

ಬ್ರಹ್ಮನಲ್ಲಿ ಭೇದವಿಲ್ಲದಿದ್ದರೂ ಸಹ ದ್ವಿತ್ವವನ್ನು ಹೇಳಿದರೆ ಏನು ದೋಷ ? ಎಂಬ ಪ್ರಶ್ನೆಗೆ 'ಅನ್ಯಥಾ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – द्वितीये ''पृथत्त्वनिवेशात्सङ्ख्यया कर्मभेदस्स्यात्'' इति द्वितीयपादीयसप्तमाधिकरणे ''सप्तदश प्राजापत्यान्पशूनालभते'' इति वाक्ये किं सप्तदशपशुद्रव्यक एको यागः उतैकपशुद्रव्यका अनेके सप्तदश यागा इति संशये,

प्राजापत्यशब्देन देवतासम्बन्धोपसर्जनकद्रव्यमेवोच्यते । यच्च प्रधानं तस्यैवार्थान्तरेण बहुत्वेनान्वयो नोपसर्जनदेवतासम्बन्धस्य । तथा च बहुभिः पशुभिः व्यासज्यैका देवता सम्बध्यते । द्रव्यदेवतासम्बन्धैक्यादेको याग इति प्राप्ते, प्रथममेव प्रकृतिप्रत्यययोरन्वयाद्देवताविशिष्टमेव द्रयं प्राजापत्यशब्देनाभिहितं पश्चाद्विशिष्टेनैव रूपेण सङ्ख्ययाऽन्वेति । तथा च भिन्नैः द्रव्यदेवतासम्बन्धैर्भिन्ना एव यागाः कल्प्यन्ते । एवञ्च सति चोदकावगतमेकपशुनिष्पन्नैकादशावदानद्रव्यकत्वं यागस्यानुगृहीतं भवति नान्यथेति सिद्धान्तितम् । यदि 'पिबन्तौ' इत्यत्र द्वित्वसङ्ख्यया भेदो न स्यात्तदा तत्रापि सङ्ख्यया कर्मभेदो न स्यादित्यर्थः ।

ಪೃಥಕ್ತ್ವನಿವೇಶಾತ್ಸಂಖ್ಯಯಾ ಕರ್ಮಭೇದಃ ಸ್ಯಾತ್[1] (೨-೨-೭)

---

(१) भाट्टसङ्ग्रहः –

अथ सप्तमं सङ्ख्याकृतकर्मभेदाधिकरणम्

पृथकृत्वनिवेशात् सङ्ख्यया कर्मभेदः स्यात् ॥ २१ ॥

अत्र पूर्वन्यायेन शङ्कनात् **सङ्गतिः** । 'तिस्र आहुतीर्जुहोति' इत्यत्र एको होमो विधीयते, बहवो वेति सन्देहे 'समिधो यजति' इत्यादाविव 'जुहोति' इत्याख्यातस्य अभ्यासाभावेन सकृदेव श्रवणात् तदैक्यात् तद्वाच्यभावनारूपकर्माप्येकमेव । त्रित्वसङ्ख्या तु 'एकादश प्रयाजान् यजति' इति श्रुतसङ्ख्यायाः पञ्चप्रयाजेष्वावृत्त्या निवेशवत् पूर्वत्र सोमयागैक्यैप्यभ्यासात् क्रमसमुच्चयोपपत्तिवदत्रापि कर्मैक्येप्यभ्यासादुपपद्यत इति **प्राप्ते**

'ಸಪ್ತದಶ ಪ್ರಾಜಾಪತ್ಯಾನ್‌ಪಶೂನಾಲಭತೇ' ಎಂಬ ವಾಕ್ಯವನ್ನು ಇಲ್ಲಿ ವಿಚಾರ ಮಾಡಿದ್ದಾರೆ. ಹದಿನೇಳು ಪಶುಗಳೇ ದ್ರವ್ಯವಾಗಿವುಳ್ಳ ಒಂದು ಯಾಗವನ್ನು ವಿಧಿಸುತ್ತಿದೆಯೋ? ಅಥವಾ ಒಂದೊಂದು ಪಶುವೇ ದ್ರವ್ಯವಾಗಿವುಳ್ಳ ಹದಿನೇಳು ಯಾಗಗಳನ್ನು ದ್ರವ್ಯವಾಗಿ ವಿಧಿಸುತ್ತಿದೆಯೋ? ಎಂದು ಸಂಶಯ ಬರುತ್ತಿದೆ.

ಪೂರ್ವಪಕ್ಷ - 'ಪ್ರಾಜಾಪತ್ಯ' ಶಬ್ದವು ಪ್ರಜಾಪತಿ ಸಂಬಂಧವನ್ನು ಹೇಳುತ್ತಿದೆ. 'ಪಶು' ಶಬ್ದವು

---

पदान्तरनिरपेक्षस्य प्रमित्यजनकत्वात् पादान्तरेण 'तिस्रः' इत्यनेन विशेषितेनाऽख्यातेनावगम्यमानं बहुत्वं नाभ्यासेन नेतव्यम् । प्रयाजेषु तु 'पञ्च प्रयाजाः' इति निर्णीतसङ्ख्यावत्त्वेन अभ्यासेन विनैकादशत्वायोगादावृत्त्या तन्नीयते । तथा सोमयागेप्येवं पूर्वोक्तं ध्येयमिति सिद्धान्त इति । तथा च **सूत्रम्, सङ्ख्यया कर्मभेदः स्यात्** । कुतः? तस्याः **पृथक्त्वेन** कर्मभेदेन सहैव **निवेशात्** । न ह्येकत्रानेसङ्ख्या निवेष्टुमलम् । विरोधादिति ।

**(द्रव्यदेवतासम्बन्धसंङ्ख्याभेदस्य कर्मभेदसाधकत्वसमर्थनम्)**

अत्र **वृत्तिकारोक्ते** 'तिस्रः' इति वाक्ये कर्मण्येव सङ्ख्याश्रवणात् पूर्वपक्षाशङ्का मन्देति मत्वा **भाष्यकारो** वाजपेयगतं 'सप्तदश प्राजापत्यान्' इति द्रव्यगतसङ्ख्यायुक्तं वाक्यमुदाहृत्य व्यचारयत् । किं सप्तदशपशुद्रव्यक एको यागो विधीयते उत एकैकपशुद्रव्यकाः सप्तदशयागा इति **सन्देहः** । तत्र 'प्रजापतिर्देवता येषां' इति विगृह्य तद्धितोत्पादने तावतां पशूनां देवतासम्बन्धस्यैक्यात्तावत्पशुद्रव्यक एक एव यागः । पशूनां प्राधान्येन बहुत्वयुक्तानामेव तेषां पश्चादुपसर्जनभूतदेवतासम्बन्धस्तद्धितेनोच्यत इति वाच्यत्वादिति प्राप्ते देवतान्वितद्रव्यवाचिनस्तद्धितान्तप्राजापत्यप्रातिपदिकात् परत्र श्रुतबहुवचनात् देवतासम्बन्धविशिष्टानामेव पशूनां बहुत्वप्रतीत्या 'बहवः प्राजापत्याः सप्तदश' इत्युक्त्या विशेषणीभूतदेवतासम्बन्धानां सप्तदशत्वप्रतीत्या देवतासम्बन्धानेकत्वादनेके यागाः ।

**द्रव्यदेवतासम्बन्धैक्यस्य कर्मैक्यसाधकत्वानङ्गीकारे बाधकोक्तिः**

किञ्च द्रव्यदेवतासम्बन्धैक्येन कर्मैक्येऽङ्गीकृते सति 'प्रकृतिवद्विकृतिः कार्या' इति चोदकमप्येकमेव सत् एकमेवावदानगणं प्रापयेत् । स चैकस्मिन् पशौ कृतार्थः सन् पश्वन्तरे न प्राप्नोतीति सर्वपशूनां प्राजापत्यत्वमसम्पादितं स्यात् । यागबहुत्वे तु प्रतिकर्मावसायिभिश्चोदकैस्तावन्त एवावदानगणाः प्राप्यन्त इति चोदकबलात् कर्मभेदसिद्धिरिति **सिद्धान्तः** । तदुक्तं वार्तिके

**एककर्मत्वपक्षे स्यादेक एव तु चोदकः ।**
**ततश्चैकगणप्राप्त्या न सर्वपशुसङ्ग्रहः ॥ इति**

**सूत्रांशार्थस्तु, पृथक्त्वेन** द्रव्यदेवतासम्बन्धभेदेनेत्यर्थः । शिष्टं प्राग्वत् । **फलन्तु** एकस्मिन् पशौ नष्टे पशुगणावृत्तिः **पूर्वपक्षे** । **सिद्धान्ते** तु एक एव पशुरावर्तत इति ।

इति सप्तमं सङ्ख्याकृतकर्मभेदाधिकरणम्

ಗುಹಾಧಿಕರಣ (೧-೨-೩)

ದ್ರವ್ಯವನ್ನು ಹೇಳುತ್ತಿದೆ. ಇದರಿಂದ ಪ್ರಜಾಪತಿ ಸಂಬಂಧಿಯಾದ ಪಶುಗಳೇ ಯಜ್ಞದಲ್ಲಿ ದ್ರವ್ಯವಾಗಿವೆ ಎಂದು ಹೇಳಿದಂತಾಗುತ್ತದೆ. ಆದ್ದರಿಂದ ದ್ರವ್ಯದೇವತಾಸಂಬಂಧವನ್ನು ಈ ವಾಕ್ಯವು ಹೇಳುತ್ತಿದೆ. ದ್ರವ್ಯದಲ್ಲಿ ದೇವತಾಸಂಬಂಧವನ್ನು ಹೇಳಿದ್ದರಿಂದ ದ್ರವ್ಯವು ಪ್ರಧಾನವಾಯಿತು. ದೇವತಾಸಂಬಂಧವು ಅಪ್ರಧಾನವಾಯಿತು. 'ಪ್ರಾಜಾಪತ್ಯಾನ್' ಎಂಬಲ್ಲಿರುವ ಬಹುವಚನದಲ್ಲಿ ತಿಳಿಯುವ ಬಹುತ್ವವನ್ನು ಪ್ರಧಾನವಾದ ದ್ರವ್ಯದಲ್ಲಿ ಸಂಬಂಧ ಮಾಡಬೇಕೇ ಹೊರತು ಅಪ್ರಧಾನವಾದ ದ್ರವ್ಯದೇವತಾ ಸಂಬಂಧದಲ್ಲಿ ಅನ್ವಯವನ್ನು ಮಾಡಬಾರದು. ಇದರಿಂದ ಅನೇಕ ಪಶುಗಳೇ ದ್ರವ್ಯವಾಗಿವುಳ್ಳ ಒಂದೇ ಯಾಗದಲ್ಲಿ ದೇವತಾ ಸಂಬಂಧವನ್ನು ಹೇಳಿದಂತಾಗುತ್ತದೆ. ಅನೇಕ ಪಶುಗಳೇ ದ್ರವ್ಯವಾಗಿವುಳ್ಳ ಯಾಗದಲ್ಲಿ ಒಂದೇ ದೇವತಾ ಸಂಬಂಧವನ್ನು ಹೇಳಲು ಹೇಗೆ ಸಾಧ್ಯ? ಎಂದು ಪ್ರಶ್ನಿಸಬಾರದು. ಒಂದೇ ದೇವತೆಯು ವ್ಯಾಸಜ್ಯ ವೃತ್ತಿಸಂಬಂಧದಿಂದ ಎಲ್ಲೆಡೆ ಸಂಬಂಧವನ್ನು ಹೊಂದುತ್ತದೆ. ಯಾವರೀತಿಯಾಗಿ ಒಂದೇ ದ್ವಿತ್ವವು ಎರಡು ಪದಾರ್ಥದಲ್ಲಿರುತ್ತದೋ ಅಥವಾ ಒಬ್ಬನೇ ವ್ಯಕ್ತಿಯು ಎರಡು ಕಲ್ಲುಗಳ ಮೇಲೆ ಹೇಗೆ ನಿಲ್ಲುತ್ತಾನೋ ಅದರಂತೆ ಒಂದೇ ದೇವತೆಯು ಅನೇಕ ಪಶುಗಳಲ್ಲಿ ಸಂಬಂಧವನ್ನು ಹೊಂದುತ್ತದೆ. ಹೀಗೆ ದ್ರವ್ಯ ಹಾಗೂ ದೇವತೆಗಳ ಸಂಬಂಧವು ಒಂದೇ ಆಗಿರುವುದರಿಂದ ಯಾಗವೂ ಸಹ ಒಂದೇ ಆಗಿದೆ.

ಸಿದ್ಧಾಂತ - 'ಪ್ರಾಜಾಪತ್ಯಾನ್' ಎಂಬಲ್ಲಿ ಪ್ರಕೃತಿ ಪ್ರತ್ಯಯ ಬಹುವಚನಗಳು ಇವೆ. ಮೊದಲು ಪ್ರಕೃತಿ ಪ್ರತ್ಯಯಗಳು ಉಪಸ್ಥಿತವಾಗಿ ಅನಂತರ ಬಹುತ್ವವು ಉಪಸ್ಥಿತವಾಗುತ್ತದೆ. ಅಂದರೆ ಪ್ರಜಾಪತಿಯೆಂಬ ಪ್ರಾತಿಪದಿಕವು ಹಾಗೂ ಅದರ ಮುಂದಿರುವ 'ತದ್ಧಿತ' ಪ್ರತ್ಯಯವು ಮೊದಲು ಪಶುಗಳಲ್ಲಿ ಸಂಬಂಧವನ್ನು ಹೊಂದಿ ಅನಂತರ ಬಹುವಚನದಿಂದ ತಿಳಿಯುವ ಬಹುತ್ವವು ಸಂಬಂಧವನ್ನು ಹೊಂದುತ್ತದೆ. ಏಕೆಂದರೆ ಪ್ರಕೃತಿ ಪ್ರತ್ಯಯಗಳು ಅಂತರಂಗವಾಗಿವೆ. ಬಹುವಚನವು ಬಹಿರಂಗವಾಗಿದೆ. ಬಹಿರಂಗಕ್ಕಿಂತ ಅಂತರಂಗವೇ ಶ್ರೇಷ್ಠವಾದ್ದರಿಂದ ಪ್ರಕೃತಿಪ್ರತ್ಯಯಗಳ ಅರ್ಥವೇ ಮೊದಲು ಅನ್ವಯ ಹೊಂದುತ್ತದೆ ಹೊರತು ಬಹಿರಂಗವೆನಿಸಿದ ಬಹುತ್ವವು ಅನ್ವಯ ಹೊಂದುವುದಿಲ್ಲ. ಆದ್ದರಿಂದ ದೇವತಾಸಂಬಂಧದಿಂದ ವಿಶಿಷ್ಟವಾದ ಪಶುಗಳ ಜ್ಞಾನವೇ ಮೊದಲು ಬರುತ್ತದೆ. ಅನಂತರ ಬಹುತ್ವದಿಂದ ವಿಶಿಷ್ಟವಾದ ಪಶುಗಳ ಜ್ಞಾನವು ಬರುತ್ತದೆ. ಆದ್ದರಿಂದ ಬೇರೆ ಬೇರೆ ದ್ರವ್ಯಗಳಿಂದ ವಿಶಿಷ್ಟವಾದ ದೇವತಾಸಂಬಂಧವು ಭಿನ್ನಭಿನ್ನವಾದ್ದರಿಂದ ಯಾಗಗಳೂ ಸಹ ಭಿನ್ನಭಿನ್ನವೆಂದು ಸಿದ್ಧವಾಗುತ್ತದೆ.

ಒಂದು ವೇಳೆ ಹದಿನೇಳು ಪಶುಗಳುಳ್ಳ ಒಂದೇ ಯಾಗವೆಂದು ಹೇಳುವುದಾದರೆ ಮತ್ತೊಂದು ಅನುಪಪತ್ತಿ ಬರುತ್ತದೆ - ಈ ವಾಕ್ಯದಲ್ಲಿ ಹೇಳುತ್ತಿರುವ ಯಾಗವು ವಿಕೃತಿಯಾಗವಾಗಿದೆ. 'ಪ್ರಕೃತಿವದ್‌ವಿಕೃತಿಃ ಕರ್ತವ್ಯಾ' ಎಂಬ ಚೋದಕ ಪ್ರಮಾಣದಂತೆ ಈ ಯಾಗವನ್ನು ಅನುಷ್ಠಾನ ಮಾಡಬೇಕು. ಪ್ರಕೃತಿಯಾಗದಲ್ಲಿ ಯಾಗದ್ರವ್ಯವಾದ ಪಶುವನ್ನು ಹನ್ನೊಂದು ಬಾರಿ ಅವಧಾನ ಮಾಡಬೇಕೆಂದು ಹೇಳಿದ್ದಾರೆ. ಅದರಂತೆ ಇಲ್ಲಿಯೂ ಸಹ ಹನ್ನೊಂದು ಬಾರಿ ಪಶುವನ್ನು ಅವಧಾನ ಮಾಡಬೇಕಾಗುತ್ತದೆ. ಆದರೆ ನೀವು ಹೇಳುವಂತೆ ಯಾಗವು ಒಂದೇ ಆದರೆ 'ಪ್ರಕೃತಿವದ್ ವಿಕೃತಿಃ ಕರ್ತವ್ಯಾ' ಎಂಬ ಚೋದಕವೂ ಸಹ ಒಂದೇ ಆಗುತ್ತದೆ. ಚೋದಕವು ಒಂದೇ ಆದ್ದರಿಂದ ಅವಧಾನವೂ ಸಹ ಒಂದೇ ಆಗುತ್ತದೆ ಹೊರತು ಅನೇಕವಾಗುವುದಿಲ್ಲ. ಹದಿನೇಳು ಪಶುಗಳಲ್ಲಿ ಹನ್ನೊಂದು ಬಾರಿ ನಡೆಸುವ ಅವಧಾನ ಗುಣವನ್ನು ಯಾವ ಪ್ರಕಾರದಿಂದಲೂ ಕೂಡಿಸಲು ಸಾಧ್ಯವಿಲ್ಲ. ಒಂದು ಪಶುವಿನಲ್ಲಿ ಹನ್ನೊಂದು ಬಾರಿ ಮಾಡುವ ಅವಧಾನವನ್ನು ಉಪಪಾದಿಸಿದರೆ

ಉಳಿದ ಹದಿನಾರು ಪಶುಗಳಲ್ಲಿ ಪ್ರಜಾಪತಿಯ ಸಂಬಂಧವನ್ನು ಹೇಳಿದಂತಾಗುವುದಿಲ್ಲ. ಈ ಅನುಪಪತ್ತಿಯ ಪರಿಹಾರಕ್ಕಾಗಿ ಅನೇಕ ಯಾಗವೆಂದೇ ಹೇಳಬೇಕು. ಆವಾಗ ಚೋದಕ ಪ್ರಮಾಣವೂ ಸಹ ಅನೇಕವಾಗುತ್ತದೆ. ಆದ್ದರಿಂದಲೇ ಪ್ರತಿಯೊಂದು ಪಶುಗಳಲ್ಲಿಯೂ ಪ್ರಕೃತಿಯಾಗದಂತೆ ಹನ್ನೊಂದು ಬಗೆಯ ಅವಧಾನವನ್ನು ಮಾಡಬಹುದು. ಪ್ರಜಾಪತಿಯ ಸಂಬಂಧವನ್ನೂ ಸಹ ಎಲ್ಲ ದ್ರವ್ಯಗಳಿಗೂ ಹೇಳಿದಂತಾಗುತ್ತದೆ.

ಹೀಗೆ ಈ ಪೂರ್ವಮೀಮಾಂಸಾಧಿಕರಣದಲ್ಲಿ ಹದಿನೇಳು ಪಶುಗಳೆಂಬ ಸಂಖ್ಯಾಭೇದದಿಂದ ಹದಿನೇಳು ಯಾಗಗಳನ್ನು ಮಾಡಬೇಕೆಂದು ನಿರ್ಣಯಿಸಿದ್ದಾರೆ. ಪ್ರಕೃತ 'ಪಿಬಂತೌ' ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ ದ್ವಿತ್ವ ಸಂಖ್ಯೆಯಿಂದ ಭೋಕ್ತೃಗಳಾದ ವ್ಯಕ್ತಿಯಲ್ಲಿ ಭೇದವನ್ನು ಒಪ್ಪದಿದ್ದರೆ ಈ ಪೂರ್ವಮೀಮಾಂಸಾಧಿಕರಣದಲ್ಲಿ ಸಂಖ್ಯಾಭೇದದಿಂದ ಕರ್ಮಭೇದವನ್ನು ಒಪ್ಪಿದ್ದು ತಪ್ಪಾಗಬೇಕಾದೀತು? ಎಂಬುದಾಗಿ ದೃಷ್ಟಾಂತದಾರ್ಷ್ಟಾಂತಿಕಭಾವವನ್ನು ತಿಳಿಯಬೇಕು.

**प्रकाशः** – आदिपदेन ''द्वा सुपर्णा'' ''द्वे ब्रह्मणी वेदितव्ये'' इत्यादौ चेतनभेदो न स्यादिति गृह्यते ।

नन्विदमानन्दमयाधिकरणेनैव परिहृतं, ''बहुरूपत्वाच्च'' इति,

अनन्योऽप्यन्यशब्देन तथैको बहुरूपवान् ।
प्रोच्यते ............... ॥

इति भाष्योक्तेरित्यतः, 'नहि तत्र द्विवचनं बहुवचनं वा शङ्कितं, तदभावात्, किन्नाम शब्दभेदादिना भेदः'' इति न्यायविवरणटीकानुरोधेन तां विशदयन्नेव परिहारमाह – **अन्नमयादीनामिति** । 'यत्र' ब्रह्मवल्ल्यां ।

ಗ್ರಂಥದಲ್ಲಿ 'ಇತ್ಯಾದೌ' ಎಂಬುದಾಗಿ ಪೂರ್ವಮೀಮಾಂಸೆಯ ಉದಾಹರಣೆಯ ಜೊತೆಗೆ ಆದಿಪದವನ್ನು ಹೇಳಿದ್ದಾರೆ. ಇದರಿಂದ 'ದ್ವಾ ಸುಪರ್ಣಾ' 'ದ್ವೇ ಬ್ರಹ್ಮಣೀ ವೇದಿತವ್ಯೇ'' ಇತ್ಯಾದಿ ಸ್ಥಳಗಳಲ್ಲಿ ಸಂಖ್ಯಾಭೇದದಿಂದ ಚೇತನಭೇದವನ್ನು ಸಿದ್ಧಾಂತದಲ್ಲಿಯೂ ಒಪ್ಪಲಾಗಿದೆ. ಇದೂ ಸಹ ಭಗ್ನವಾದೀತೆಂದು ತಿಳಿಯಬೇಕು.

ಒಬ್ಬನೇ ಭಗವಂತನಲ್ಲಿ ಅನೇಕತ್ವವು ಕೂಡುವುದಿಲ್ಲವೆಂಬ ಶಂಕೆಯನ್ನು ಆನಂದಮಯಾಧಿಕರಣ-ದಲ್ಲಿಯೇ ಪರಿಹರಿಸಲಾಗಿದೆ - ಏಕೆಂದರೆ 'ಬಹುರೂಪತ್ವಾಚ್ಚ' ಎಂಬ ಭಾಷ್ಯದಲ್ಲಿ ಮತ್ತು 'ಅನನ್ಯೋऽಪ್ಯನ್ಯಶಬ್ದೇನ ತಥೈಕೋ ಬಹುರೂಪವಾನ್ । ಪ್ರೋಚ್ಯತೇ ...... ॥'' ಎಂಬ ಭಾಷ್ಯದಲ್ಲಿ ಒಬ್ಬನೇ ಭಗವಂತನಿಗೆ ಅನೇಕ ರೂಪಗಳಿರುವುದರಿಂದ ಅನೇಕತ್ವ ಸಂಖ್ಯೆಯನ್ನು ಕೂಡಿಸಬಹುದೆಂದು ಹೇಳಿದ್ದಾರಲ್ಲವೇ? ಎಂದು ಪ್ರಶ್ನಿಸಬಾರದು.

'ನಹಿ ತತ್ರ ದ್ವಿವಚನಂ, ಬಹುವಚನಂ ವಾ ಶಂಕಿತಂ, ತದಭಾವಾತ್, ಕಿನ್ನಾಮ ಶಬ್ದಭೇದಾದಿನಾ ಭೇದಃ' ಭಗವಂತನಲ್ಲಿ ದ್ವಿವಚನವನ್ನಾಗಲಿ, ಬಹುವಚನವನ್ನಾಗಲಿ ಶಂಕಿಸಲಾಗದು. ಏಕೆಂದರೆ ಅವನಲ್ಲಿ ದ್ವಿತ್ವಾದಿಗಳೇ

ಇರುವುದಿಲ್ಲ ಹೊರತಾಗಿ ಶಬ್ದಭೇದದಿಂದಷ್ಟೇ ಭೇದವನ್ನು ತಿಳಿಯಬೇಕು ಎಂಬ ನ್ಯಾಯವಿವರಣೆಯ ಟೀಕೆಯನ್ನು ಅನುಸರಿಸಿ ಪರಿಹಾರವನ್ನು ಹೇಳುತ್ತಿದ್ದಾರೆ 'ಅನ್ನಮಯಾದೀನಾಂ' ಇತ್ಯಾದಿಯಾಗಿ.

**प्रकाशः – यत्र चेति ।** नारायणोपनिषदि । संज्ञाधिकरणं जिज्ञासासूत्रे, दाक्षायणयज्ञाधिकरणं आनन्दमयनय एव विवृतम् । न्यायद्वयस्य शङ्कापरिहारोपयोगः तत्रैव दर्शितः ।

'ಯತ್ರ' ಎಂಬ ಶಬ್ದಕ್ಕೆ ಬ್ರಹ್ಮನಲ್ಲಿ ಎಂದರ್ಥ. 'ಯತ್ರಚ' ಎಂಬ ಶಬ್ದಕ್ಕೆ ನಾರಾಯಣನಲ್ಲಿ ಎಂದರ್ಥ. ಗ್ರಂಥದಲ್ಲಿ ಉಲ್ಲೇಖಿಸಲ್ಪಟ್ಟ ಸಂಜ್ಞಾಧಿಕರಣವು ಪೂರ್ವಮೀಮಾಂಸೆಯಲ್ಲಿದೆ. ಇದನ್ನು ಜಿಜ್ಞಾಸಾಧಿಕರಣದಲ್ಲಿ ವಿವರಿಸಿದ್ದಾಗಿದೆ. ಪೂರ್ವಮೀಮಾಂಸೆಯಲ್ಲಿ ಬರುವ ದಾಕ್ಷಾಯಣಯಜ್ಞಾಧಿಕರಣವನ್ನು ಆನಂದಮಯಾಧಿಕರಣದಲ್ಲಿಯೇ ವಿವರಿಸಿದ್ದಾಗಿದೆ. ಮತ್ತು ಈ ಎರಡು ಅಧಿಕರಣದಿಂದ ತಿಳಿಯುವ ನ್ಯಾಯವು ಪ್ರಕೃತ ಶಂಕಾಪರಿಹಾರಕ್ಕೆ ಹೇಗೆ ಉಪಯೋಗವಾಗುತ್ತದೆಂಬುದನ್ನೂ ಸಹ ಅಲ್ಲಿಯೇ ತೋರಿಸಲಾಗಿದೆ.

**गुरुराजीयम्** – प्रत्ययार्थभूतद्वित्वस्य ब्रह्मण्यसम्भवे हेतुमाह – **निर्भेदेति** ।। ननु च द्वित्वरूप सङ्ख्यानिर्भेद ब्रह्मण्यपि किं न स्यादित्यत आह – **अन्यथेति** ।। द्वित्वादि सङ्ख्यायाभेद साधकत्वमनङ्गीकृत्य निर्भेदेपि ब्रह्मणि सङ्ख्याभ्युपगम इत्यर्थः । नन्वन्नमयादावनेकत्व श्रवणेऽप्यानन्दमयाधिकरणे तस्य ब्रह्मत्वसमर्थनेन तन्न्यायेन द्वित्वश्रवणेऽपि प्रकृते ब्रह्मत्वं किं न स्यादित्यत आह – **अन्नमयादीनां त्विति** ।। **संज्ञाधिकरणन्यायेति** ।। संज्ञाचोत्पत्तिसंयोगादिति संज्ञाधिकरणन्यायेनेत्यर्थः । **गुणविधायकाः** सर्वोपजीव्यत्वमहाप्राणत्वरूपगुणविधायका इत्यर्थः ।




ಈ ಅಧಿಕರಣದ ಪೂರ್ವಪಕ್ಷ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಅತ್ತೃತ್ವವನ್ನು ಬ್ರಹ್ಮನ ಧರ್ಮವೆಂದು ಒಪ್ಪೋಣ. ಏಕೆಂದರೆ ಪ್ರಾತಿಪದಿಕಾರ್ಥವೆನಿಸಿದ ಸಂಹರ್ತೃತ್ವವಾಗಲಿ ಪ್ರತ್ಯಯಾರ್ಥವೆನಿಸಿದ ಏಕತ್ವವಾಗಲಿ ಬ್ರಹ್ಮನಲ್ಲಿ ಯುಕ್ತವಾಗುತ್ತದೆ. ಆದರೆ ಈ ಅಧಿಕರಣದಲ್ಲಿ ಪ್ರಾತಿಪದಿಕಾರ್ಥವೆನಿಸಿದ ಕರ್ಮಫಲಭೋಕ್ತೃತ್ವವಾಗಲಿ, ಪ್ರತ್ಯಯಾರ್ಥವೆನಿಸಿದ ದ್ವಿತ್ವವಾಗಲಿ ಬ್ರಹ್ಮನಲ್ಲಿ ಕೂಡುವುದಿಲ್ಲ. ವಸ್ತುತಃ ಭಗವಂತನಲ್ಲಿ 'ದ್ವಿತ್ವ' 'ಅನೇಕತ್ವ' ಮೊದಲಾದ ಸಂಖ್ಯೆಗಳು

ಅನುಪಪನ್ನವಾಗುವುದಿಲ್ಲ ಎಂಬ ವಿಚಾರವನ್ನು ಆನಂದಮಯಾಧಿಕರಣದಲ್ಲಿಯೇ ಹೇಳಿದ್ದಾಗಿದೆ. ಆದರೆ ನ್ಯಾಯವಿವರಣದಲ್ಲಿ 'ದ್ವಿತ್ವಾದಿ ಸಂಖ್ಯೆಗಳನ್ನು ಆನಂದಮಯಾಧಿಕರಣದಲ್ಲಿ ಸಮರ್ಥನೆ ಮಾಡದ ಕಾರಣ ಈ ಅಧಿಕರಣವು ಹೊರಟಿದೆ' ಎಂದು ಹೇಳಿದ್ದಾರೆ. ಆನಂದಮಯಾಧಿಕರಣದಲ್ಲಿ ಕೇವಲ ಅನ್ನಮಯಾದಿಶಬ್ದಗಳು ಭಿನ್ನಭಿನ್ನವಾದ್ದರಿಂದ ಬ್ರಹ್ಮನೂ ಸಹ ಭಿನ್ನನಾಗಬೇಕಲ್ಲವೇ ? ಎಂಬ ಪೂರ್ವಪಕ್ಷವನ್ನಷ್ಟೇ ನಿರಾಕರಿಸಲಾಗಿದೆ ಹೊರತು ಸಂಖ್ಯಾಭೇದದಿಂದ ಬ್ರಹ್ಮನ ಭೇದವನ್ನು ಆಶಂಕಿಸಿಲ್ಲ. ಪ್ರಕೃತ ಈ ಅಧಿಕರಣದಲ್ಲಿ ಸಂಖ್ಯಾಭೇದದಿಂದ ಬ್ರಹ್ಮನ ಭೇದವು ಆಕ್ಷಿಪ್ತವಾಗುತ್ತಿದೆ ಎಂದು ಪೂರ್ವಪಕ್ಷ ಮಾಡಿದ್ದು ಯುಕ್ತವಾಗಿದೆ.

• • • • •

## ದ್ವಿವಚನಶ್ರುತಿ ನಿರವಕಾಶವೆಂದು ಪೂರ್ವಪಕ್ಷ

### तात्पर्यचन्द्रिका

**अथवा – ब्रह्मावयत्त्वेऽपि ब्रह्मत्वमिति तत्र व्युत्पाद्यम्, अत्र त्वनेकत्वेऽपि ब्रह्मत्वमिति । तथा चान्नमयादीनामनेकत्वादब्रह्मत्वमिति शङ्कया अप्यत्रत्यसिद्धान्तेनैव परिहार्यत्वादत्रत्यपूर्वपक्षेऽन्नमयादीनामपि ब्रह्मत्वाक्षेपः । अत एव न्यायविवरणे ''न चावयवत्वविरोधः'' इति तत्रोक्तं, अत्र 'द्विवचनश्रुतेरपि निरवकाशत्वं नास्ति' इति ।**

**नच 'दाराः' इत्यादौ बहुवचनमिव अत्र द्विवचनं शब्दसाधुत्वेनैव प्रसिद्धम् । नच बाधकं विना 'पिबन्तौ प्रविष्टौ छायातपौ' इति बहूनि द्विवचनानि वचनव्यत्ययेन एकस्मिन्नपि युक्तानि । नच ''ग्रहं सम्मार्ष्टि'' इत्यादाविवोद्देश्य-विशेषणत्वात् सङ्ख्या न विवक्षितेति युक्तम्, ब्रह्मणि ऋतपानस्य अप्राप्तत्वात् ।**

**''ऋतं पिबन्तौ'' इत्यस्योद्देशकत्वेऽपि 'छायातपौ' इत्यादेः विधायकत्वावश्यम्भावाच्च । ग्रहैकत्वस्य वाक्यभेदापत्त्या विध्यसंस्पर्शेऽपि प्रत्येकं ग्रहेष्वेकत्वस्य स्वरूपतः सत्त्वेन अनुवादत्ववत् प्रकृते ब्रह्मणि द्वित्वस्य स्वरूपत एवाभावेन अनुवादत्वासम्भवाच्च ।**

**नच 'पिबन्तौ' इत्यादिकमन्यत्र द्वित्ववाच्येव सदिहातिदेशतः प्राप्तम्, येन ''अग्नये जुष्टं निर्वपामि'' इति मन्त्रस्य सौर्येऽतिदेशतः प्राप्तस्य सूर्यायेत्यूहवत्**

**द्विवचनान्तस्यैकवचानन्ततयोहस्स्यात् । न चैकस्मिन्नेव यागे "समिधो यजति" इत्यादौ बहुवचनान्तसमित्पदमिवैकस्मिन्नैव ब्रह्मणि द्विवचनान्तं पिबत्पदमस्त्विति वाच्यम्, रूढस्य समिच्छब्दस्य बहुवचनप्रतिरूपकनामधेयत्ववत्, यौगिकस्य 'पिबन्तौ' इत्यादेस्तदयोगात् ।**

**छायात्वं च ब्रह्मणो न युक्तम्, जीववदविद्याश्रयत्वासम्भवात् । तस्मादत्र पिबन्तौ जीवेश्वरावेव, ईश्वरस्याभोक्तृत्वेऽपि च्छत्रिन्यायेन पातृत्वव्यपदेशः, गुहाप्रविष्टत्वब्रह्मशब्दौ तु जीवेऽपि युक्ताविति ॥**

ಅನುವಾದ - ಅಥವಾ ಆನಂದಮಯಾಧಿಕರಣದಲ್ಲಿ ಅನ್ನಮಯಾದಿಗಳು ಬ್ರಹ್ಮನ ಅವಯವಗಳಾಗಿದ್ದರೂ ಬ್ರಹ್ಮಸ್ವರೂಪವೇ ಆಗಿವೆಯೆಂಬುದಾಗಿ ಸಮರ್ಥಿಸಲಾಗಿದೆ. ಈ ಅಧಿಕರಣದಲ್ಲಿ ಅನ್ನಮಯಾದಿಗಳು ಅನೇಕವಾಗಿದ್ದರೂ ಬ್ರಹ್ಮಸ್ವರೂಪವಾಗುತ್ತವೆಂದು ಪ್ರತಿಪಾದಿಸಲಾಗಿದೆ. ಆದ್ದರಿಂದ ಅನ್ನಮಯಾದಿಗಳು ಅನೇಕವಾದ್ದರಿಂದ ಒಬ್ಬನೇ ಬ್ರಹ್ಮಸ್ವರೂಪವೆಂದು ಹೇಳಲು ಸಾಧ್ಯವಿಲ್ಲವೆಂಬ ಶಂಕೆಯನ್ನೂ ಸಹ ಈ ಅಧಿಕರಣದ ಸಿದ್ಧಾಂತ ನ್ಯಾಯದಿಂದಲೇ ಪರಿಹರಿಸಬೇಕು. ಆದ್ದರಿಂದ ಈ ಅಧಿಕರಣದ ಪೂರ್ವಪಕ್ಷದಲ್ಲಿ ಅನ್ನಮಯಾದಿಗಳು ಅನೇಕವಾದ್ದರಿಂದ ಒಬ್ಬನೇ ಬ್ರಹ್ಮಸ್ವರೂಪವಾಗಲು ಹೇಗೆ ಸಾಧ್ಯವೆಂಬ ಆಕ್ಷೇಪವನ್ನು ಮಾಡಿಕೊಳ್ಳಬೇಕು. ಆದ್ದರಿಂದ ನ್ಯಾಯವಿವರಣೆಯಲ್ಲಿ 'ನ ಚಾವಯವತ್ವವಿರೋಧಃ' ಎಂಬುದಾಗಿ ಆನಂದಮಯಾಧಿಕರಣದಲ್ಲಿ ಹೇಳಿದ್ದಾರೆ. ಈ ಅಧಿಕರಣದಲ್ಲಿ 'ದ್ವಿವಚನಶ್ರುತೇರಪಿ ನಿರವಕಾಶತ್ವಂ ನಾಸ್ತಿ' ಎಂದು ಹೇಳಿದ್ದಾರೆ.

ಪ್ರಶ್ನೆ - 'ದಾರಾಃ' ಇತ್ಯಾದಿ ಶಬ್ದಗಳಲ್ಲಿ ಶಬ್ದಸಾಧುತ್ವಕ್ಕೋಸ್ಕರ ಬಹುವಚನವನ್ನು ಪ್ರಯೋಗಿಸಲಾಗುತ್ತದೆ. ಅದರಂತೆ 'ಪಿಬಂತೌ' ಎಂಬಲ್ಲಿಯೂ ಶಬ್ದಸಾಧುತ್ವಕ್ಕೋಸ್ಕರ ದ್ವಿವಚನವು ಪ್ರಯುಕ್ತವಾಗಿದೆಯಲ್ಲವೇ?

ಉತ್ತರ - 'ದಾರಾಃ' ಇತ್ಯಾದಿ ಶಬ್ದಗಳಲ್ಲಿ ಬಾಧಕವಿರುವುದರಿಂದ ಬಹುವಚನವು ಶಬ್ದಸಾಧುತ್ವಕ್ಕೋಸ್ಕರವೆಂದು ಹೇಳಬಹುದು. ಆದರೆ ಪ್ರಕೃತ ಅಂತಹ ಬಾಧಕಗಳು ಇರುವುದಿಲ್ಲ. ಮತ್ತು 'ಪಿಬಂತೌ, ಪ್ರವಿಷ್ಟೌ, ಛಾಯಾತಪೌ' ಇತ್ಯಾದಿಯಾಗಿ ಅನೇಕ ಕಡೆ ಇರುವ ದ್ವಿವಚನಗಳಿಗೆ ವಚನ ವ್ಯತ್ಯಾಸದಿಂದ ಒಂದೇ ಪದಾರ್ಥವನ್ನು ಪ್ರತಿಪಾದ್ಯವೆಂದು ಹೇಳುವುದು ತಪ್ಪಾಗುತ್ತದೆ.

ಪ್ರಶ್ನೆ - 'ಗ್ರಹಂ ಸಮ್ಮಾರ್ಷ್ಟಿ' ಎಂಬಲ್ಲಿ ಉದ್ದೇಶದಲ್ಲಿ ವಿಶೇಷಣವಾದ್ದರಿಂದ ಏಕತ್ವ ಸಂಖ್ಯೆಯು ಅವಿವಕ್ಷಿತವಾಗಿದೆ. ಅದರಂತೆ 'ಪಿಬಂತೌ' ಎಂಬಲ್ಲಿಯೂ ದ್ವಿತ್ವಸಂಖ್ಯೆಯು ಉದ್ದೇಶ ವಿಶೇಷಣವಾದ್ದರಿಂದ ಅವಿವಕ್ಷಿತವಾಗಬೇಕಲ್ಲವೇ?

ಉತ್ತರ - ಇದೂ ಸಹ ತಪ್ಪು. ಬ್ರಹ್ಮನಲ್ಲಿ ಋತಪಾನವು ಪ್ರಾಪ್ತವಾದ್ದರಿಂದ 'ಋತಂ ಪಿಬಂತೌ' ಎಂಬುದನ್ನು ಉದ್ದೇಶವೆಂದು ಒಪ್ಪಬಹುದು. ಅಲ್ಲಿರುವ ದ್ವಿತ್ವವು ಉದ್ದೇಶವಿಶೇಷಣವಾಗಬಹುದು. ಆದರೆ 'ಛಾಯಾತಪೌ' ಎಂಬುದು ಮೊದಲು ಪ್ರಾಪ್ತವಾಗದ ಕಾರಣ ಉದ್ದೇಶವೆಂದು ಹೇಳಲಾಗದು. ಹೊರತಾಗಿ ವಿಧೇಯವೆಂದೇ ಅವಶ್ಯವಾಗಿ ಹೇಳಬೇಕು. ಆದ್ದರಿಂದ 'ಛಾಯಾತಪೌ' ಎಂಬಲ್ಲಿರುವ ದ್ವಿತ್ವವು ಉದ್ದೇಶದಲ್ಲಿವಿಶೇಷಣವಾಗದ ಕಾರಣ ಅವಿವಕ್ಷಿತವೆಂದು ಹೇಳಲಾಗದು.

ಮತ್ತು 'ಗ್ರಹಂ ಸಮ್ಮಾರ್ಷ್ಟಿ' ಎಂಬಲ್ಲಿ ವಾಕ್ಯಭೇದದೋಷ ಬರುವ ಕಾರಣ ಏಕತ್ವವನ್ನು ವಿಧೇಯದಲ್ಲಿ ವಿಶೇಷಣವೆಂದು ಹೇಳಲಾಗದು. ಆದರೂ ಸಹ ಪ್ರತ್ಯೇಕವಾಗಿ ಪ್ರತಿಯೊಂದು ಗ್ರಹಗಳಲ್ಲಿ ಏಕತ್ವವು ಸ್ವಾಭಾವಿಕವಾಗಿ ಇರುತ್ತದೆ. ಆದ್ದರಿಂದ ಗ್ರಹಣವು ಮೊದಲೇ ಪ್ರಾಪ್ತವಾದ್ದರಿಂದ ಉದ್ದೇಶವೆನ್ನಬಹುದು. ಆದರೆ ಪ್ರಕೃತದಲ್ಲಿ ದ್ವಿತ್ವವು ಮೊದಲು ಪ್ರಾಪ್ತವೇ ಆಗಿಲ್ಲ. ಏಕೆಂದರೆ ಅದ್ವಿತೀಯನಾದ ಬ್ರಹ್ಮನಲ್ಲಿ ದ್ವಿತ್ವವು ಸ್ವಾಭಾವಿಕವಾಗಿ ಇರಲು ಸಾಧ್ಯವೇ ಇಲ್ಲ. ಹೀಗಿರುವಾಗ ಅನುವಾದಕವೆಂದು ಹೇಳಲಾಗದು. ಆದ್ದರಿಂದಲೇ ಉದ್ದೇಶವೆಂದೂ ಸಹ ಹೇಳಲು ಸಾಧ್ಯವಿಲ್ಲ.

ಪ್ರಶ್ನೆ - 'ಪಿಬಂತೌ' ಎಂಬಲ್ಲಿರುವ ದ್ವಿವಚನ ಪ್ರತ್ಯಯವು ವಿಭಕ್ತಿಪ್ರತಿರೂಪಕವಾದ ಅವ್ಯಯವಾಗಿದೆ. ಆದ್ದರಿಂದ ಬೇರೆಡೆ ದ್ವಿತ್ವವನ್ನು ಪ್ರತಿಪಾದಿಸಿದರೂ ಇಲ್ಲಿ ಅತಿದೇಶದಿಂದ ಪ್ರಾಪ್ತವಾಗಿರುವ ಕಾರಣ ಏಕವಚನವನ್ನು ಊಹಿಸಬಹುದಲ್ಲವೇ?

ಉತ್ತರ - "ಅಗ್ನಯೇ ಜುಷ್ಟಂ" ಎಂಬ ಮಂತ್ರದಲ್ಲಿ ಅತಿದೇಶತಃ ಪ್ರಾಪ್ತವಾದ್ದರಿಂದ 'ಸೂರ್ಯಾಯ' ಎಂದು ಊಹಿಸಿಕೊಳ್ಳುವುದು ಕಂಡಿದೆ. ಅದರಂತೆ 'ಪಿಬಂತೌ' ಎಂಬಲ್ಲಿ ಅತಿದೇಶದಿಂದ ಪ್ರಾಪ್ತವಾಗಿದ್ದರೆ ಏಕತ್ವವನ್ನು ಊಹಿಸಬಹುದಿತ್ತು. ಆದರೆ ಇದೇ ಪ್ರಥಮ ಬಾರಿಯಾಗಿ 'ಪಿಬಂತೌ' ಎಂಬುದಾಗಿ ಪ್ರಸಕ್ತವಾಗುತ್ತಿರುವುದರಿಂದ 'ಅತಿದೇಶತಃ ಪ್ರಾಪ್ತಿ' ಎಂದೂ ಹೇಳಲಾಗದು.

ಪ್ರಶ್ನೆ - ಒಂದೇ ಯಾಗದಲ್ಲಿ 'ಸಮಿಧೋ ಯಜತಿ' ಎಂಬುದಾಗಿ ಬಹುವಚನಾಂತವಾದ 'ಸಮಿತ್' ಪದವನ್ನು ಹೇಗೆ ಪ್ರಯೋಗಿಸುತ್ತೇವೋ, ಅದರಂತೆ ಒಬ್ಬನೇ ಬ್ರಹ್ಮನಲ್ಲಿ ದ್ವಿವಚನಾಂತವಾದ 'ಪಿಬತ್' ಪದವನ್ನು ಪ್ರಯೋಗಿಸಬಹುದಲ್ಲವೇ?

ಉತ್ತರ - 'ಸಮಿತ್' ಶಬ್ದವು ಯಾಗದಲ್ಲಿ ರೂಢವಾಗಿರುವುದರಿಂದ ಬಹುವಚನ ಪ್ರತಿರೂಪಕವಾದ ನಾಮಧೇಯವೆಂದು ಹೇಳಬಹುದು. ಆದರೆ 'ಪಿಬಂತೌ' ಎಂಬ ಪದವು ಯೌಗಿಕವಾದ್ದರಿಂದ ದ್ವಿತ್ವಪ್ರತಿರೂಪಕವಾದ ನಾಮಧೇಯವೆಂದು ಹೇಳಲಾಗದು. ಆದ್ದರಿಂದ ಯಾವುದೇ ಕಾರಣದಿಂದಲೂ 'ಪಿಬಂತೌ' ಎಂಬ ದ್ವಿವಚನಶ್ರುತಿಯನ್ನು ಸಾವಕಾಶವೆಂದು ಹೇಳಲು ಸಾಧ್ಯವಿಲ್ಲ.

'ಛಾಯಾತಪೌ' ಎಂಬಲ್ಲಿರುವ ಆತಪತ್ವವನ್ನು ಬ್ರಹ್ಮನಲ್ಲಿ ಹೇಳಬಹುದಾದರೂ ಛಾಯತ್ವವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಬ್ರಹ್ಮನು ಜೀವನಂತೆ ಅಜ್ಞಾನಕ್ಕೆ ಆಶ್ರಯನಾಗಿರುವುದಿಲ್ಲ. ಆದ್ದರಿಂದ

'ಪಿಬಂತೌ' ಎಂಬ ದ್ವಿವಚನ ಶ್ರುತಿಯಂತೆ ಜೀವ ಹಾಗೂ ಈಶ್ವರ ಇಬ್ಬರೂ ಸಹ ಪ್ರತಿಪಾದ್ಯರಾಗಿದ್ದಾರೆಂದು ಹೇಳಬೇಕು. ಈಶ್ವರನು ವಸ್ತುತಃ ಭೋಕ್ತನಾಗದಿರಬಹುದು ಆದರೆ ಛತ್ರಿನ್ಯಾಯದಿಂದ ಅವನಲ್ಲಿ ಪಾತೃತ್ವವನ್ನು ಶ್ರುತಿಯು ಹೇಳುತ್ತಿದೆ. ಗುಹಾಪ್ರವಿಷ್ಟತ್ವ ಹಾಗೂ ಬ್ರಹ್ಮಶಬ್ದಗಳು ಜೀವನಲ್ಲಿಯೂ ಕೂಡುವುದರಿಂದ ಬಾಧಕಗಳಾಗುವುದಿಲ್ಲ. ಆದ್ದರಿಂದ 'ಋತಂ ಪಿಬಂತೌ' ಎಂಬ ಶ್ರುತಿಯಿಂದ ಜೀವೇಶ್ವರರೇ ಕರ್ಮಫಲಭೋಕ್ತೃಗಳೆಂದು ಪೂರ್ವಪಕ್ಷದ ಅಭಿಪ್ರಾಯವು ದೃಢವಾಯಿತು.

**प्रकाशः –**

**ननु तत्र बहुत्वाश्रवणेन ''बहुरूपत्वाच्च'' इति भाष्ये, ''अत एकस्य पञ्चधा'' इत्यनुव्याख्याने च कथं तत्समाधानोक्तिः । ''न चानन्दमयाधिकरणन्यायेन परिहारः बाधकाभावात्'' इति अत्रत्यसुधावाक्यं च कथमित्यतोऽभ्युपेत्यवादेनेति भावेन परिहारान्तरमाह – अथवेति ।**

ವಿವರಣೆ - ಆನಂದಮಯಾಧಿಕರಣದಲ್ಲಿ ಅನೇಕತ್ವಸಂಖ್ಯೆಯಿಂದ ಬ್ರಹ್ಮನ ರೂಪಗಳಿಗೆ ಭೇದವು ಪ್ರಸಕ್ತವೇ ಆಗಿಲ್ಲ. ಕೇವಲ ಶಬ್ದಗಳ ಭೇದದಿಂದಷ್ಟೇ ರೂಪಗಳ ಭೇದವು ಪ್ರಸಕ್ತವಾಗಿದೆಯೆಂದು ಈ ಹಿಂದೆ ಪ್ರತಿಪಾದಿಸಲಾಯಿತು.

ಆಕ್ಷೇಪ - ಹಾಗಾದರೆ ಆನಂದಮಯಾಧಿಕರಣದ ಭಾಷ್ಯದಲ್ಲಿ ಬಹುತ್ವವು ಪ್ರಸಕ್ತವಾಗದಿದ್ದಾಗ ''ಬಹುರೂಪತ್ವಾಚ್ಚ'' ಎಂಬ ವಾಕ್ಯವು ಏಕೆ ಹೊರಟಿತು? ಮತ್ತು ''ಅತ ಏಕಸ್ಯ ಪಂಚಧಾ'' ಎಂಬುದಾಗಿ ಅನುವ್ಯಾಖ್ಯಾನದಲ್ಲಿಯೂ ಸಹ ಅನೇಕತ್ವಸಂಖ್ಯೆಯಿಂದ ಭೇದವು ಪ್ರಸಕ್ತವಾಗುವುದಿಲ್ಲವೆಂಬ ಸಮಾಧಾನವನ್ನಾದರೂ ಏಕೆ ಹೇಳಿದರು? ಅಷ್ಟೇ ಅಲ್ಲದೆ ಗುಹಾಧಿಕರಣದ ಸುಧೆಯಲ್ಲಿಯೂ ಸಹ ''ನಚ ಆನಂದಮಯಾಧಿಕರಣನ್ಯಾಯೇನ ಪರಿಹಾರಃ ಬಾಧಕಾಭಾವತ್'' ಆನಂದಮಯಾಧಿಕರಣದ ನ್ಯಾಯದಿಂದ ಇದು ಗತಾರ್ಥವಾಗುವುದಿಲ್ಲವೆಂದು ಹೇಳಿದ್ದಾರೆ. ಇದರಿಂದಲೂ ಅನೇಕತ್ವಸಂಖ್ಯೆಯಿಂದ ಭಗವಂತನ ರೂಪಗಳಿಗೆ ಭೇದವು ಆನಂದಮಯಾಧಿಕರಣದಲ್ಲಿ ಪ್ರಸಕ್ತವಾಗಿದೆಯೆಂದು ತಿಳಿಯುತ್ತದಲ್ಲವೇ?

ಸಮಾಧಾನ - ವಾಕ್ಯದಲ್ಲಿ ಬಹುತ್ವಸಂಖ್ಯೆಯು ತೋರದಿದ್ದರೂ ಸಹ ಒಬ್ಬನೇ ಪರಮಾತ್ಮನಿಗೆ ಶಬ್ದಭೇದದಿಂದ ಬಹುತ್ವವು ಬರಬೇಕಾದೀತೆಂದು ಅಭಿಪ್ರಾಯ ಪಡುತ್ತೇವೆ. ಸಿದ್ಧಾಂತಿಗೆ ಅಭಿಪ್ರೇತವಾದ ಇದನ್ನು ಆಕ್ಷೇಪ ಮಾಡಿದರೆ 'ಬಹುರೂಪತ್ವಾಚ್ಚ' ಎಂಬುದಾಗಿ ಭಾಷ್ಯದಲ್ಲಿ ಸಮಾಧಾನ ಹೇಳಿದ್ದಾರೆ. ಹೀಗೆ ಅಭ್ಯುಗಮವಾದದಿಂದ ಭಾಷ್ಯ ಅನುವ್ಯಾಖ್ಯಾನಾದಿಗಳ ಮಾತನ್ನು ಕೂಡಿಸಬೇಕು. ಈ ಅಭಿಪ್ರಾಯದಿಂದ ಪ್ರಕೃತ ಗ್ರಂಥಕಾರರು 'ಅಥವಾ'' ಇತ್ಯಾದಿ ವಾಕ್ಯದಿಂದ ಮತ್ತೊಂದು ಪರಿಹಾರವನ್ನು ಹೇಳುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः – तत्रानेकत्वसङ्ख्यासमाधानं चात्रत्यसिद्धान्तन्यायेनैवेति भावः । द्विवचनेति । निरवकाशततया प्रतीयमानाया अपीत्यर्थः । एतेन ''पिबन्ताविति द्विवचनश्रुतेः'' इति टीका विवृता ।**

ಆನಂದಮಯಾಧಿಕರಣದಲ್ಲಿ ಅನೇಕತ್ವ ಸಂಖ್ಯೆಯಿಂದ ಭಗವಂತನಲ್ಲಿ ಮಾಡಲ್ಪಟ್ಟ ಭೇದದ ಆಕ್ಷೇಪವನ್ನು ಈ ಅಧಿಕರಣದ ಸಿದ್ಧಾಂತ ನ್ಯಾಯದಿಂದಲೇ ಸಮಾಧಾನ ಮಾಡಲಾಗಿದೆ. 'ದ್ವಿವಚನಶ್ರುತೇರಪಿ' ಎಂಬ ನ್ಯಾಯವಿವರಣದಲ್ಲಿರುವ 'ಅಪಿ' ಶಬ್ದದಿಂದ ನಿರವಕಾಶವಾಗಿ ತೋರಿದರೂ ಸಹ ಎಂದರ್ಥ. ಅಂದರೆ ವಸ್ತುತಃ ನಿರವಕಾಶವಲ್ಲವೆಂದು ತಿಳಿಯಬೇಕು. ಇದರಿಂದ ''ಪಿಬಂತಾವಿತಿ ದ್ವಿವಚನಶ್ರುತೇಃ'' ಎಂದು ವ್ಯಾಖ್ಯಾನಿಸಿದಂತಾಯಿತು.

**प्रकाशः – ननु न द्विवचनं निरवकाशं, तस्य शब्दसाधुत्वमात्रार्थत्वेन वा, एकवचनान्तस्यैव च्छान्दसद्विवचनान्तत्वेन वा, द्वित्वबोधनेऽपि तस्योद्देश्यविशेषणत्वेनाविवक्षिततया वा, द्विवचनस्य पूर्वोत्तरवाक्यानुरोधेनैकवचनान्ततयोहेनैकत्वप्रापकत्वेन वा, द्विवचनप्रतिरूपकत्वेन वा द्वित्वप्रपकत्वेनैकस्मिन्नप्युपपत्तेरिति चोद्यानि क्रमेण निरस्यन्नाद्यं निराह – नच दारा इति ।**

ದ್ವಿವಚನವು ನಿರವಕಾಶವೆಂದು ಹೇಳಿದಿರಿ ಇದು ತಪ್ಪು. ಅನೇಕ ಕಾರಣಗಳಿಂದ ಸಾವಕಾಶವೇ ಆಗಿದೆ -

೧. 'ಪಿಬಂತೌ' ಎಂಬಲ್ಲಿರುವ ದ್ವಿವಚನವು ಶಬ್ದಸಾಧುತ್ವ ಮಾತ್ರದಿಂದ ಸೇರಿಸಲಾಗಿದೆಯೆಂದು ಹೇಳಬೇಕು.

೨. ವಸ್ತುತಃ ಏಕವಚನಾಂತ ಶಬ್ದವಾಗಿದ್ದರೂ ಸಹ ಛಾಂದಸವಾದ್ದರಿಂದ ದ್ವಿವಚನವಾಗಿದೆ.

೩. ದ್ವಿತ್ವವನ್ನು ಬೋಧಿಸಿದರೂ ಸಹ ಉದ್ದೇಶದಲ್ಲಿ ವಿಶೇಷಣವಾಗಿದ್ದರಿಂದ ದ್ವಿತ್ವವನ್ನು ವಿವಕ್ಷಿಸಬೇಕಾಗಿಲ್ಲ.

೪. ಹಿಂದಿನ ಮುಂದಿನ ವಾಕ್ಯಗಳಲ್ಲಿ ಏಕವಚನಾಂತವಾದ ಪದಗಳೇ ಪ್ರಸಕ್ತವಾಗಿದ್ದರಿಂದ ಅವುಗಳಿಂದ ಸಂದಷ್ಟವಾದ 'ಪಿಂಬತೌ' ಎಂಬುದೂ ಸಹ ಏಕತ್ವವನ್ನೇ ತಿಳಿಸುತ್ತದೆ. ಹೊರತು ದ್ವಿವಚನವಿರುವುದರಿಂದ ದ್ವಿತ್ವವನ್ನು ತಿಳಿಸುವುದಿಲ್ಲ.

೫. ದ್ವಿವಚನಕ್ಕೆ ಪ್ರತಿರೂಪಕವಾದ ಅವ್ಯವಾಗಿದೆ. ಅಂದರೆ ದ್ವಿವಚನದಂತೆ ಕಾಣಿಸುತ್ತದೆ ಹೊರತು ದ್ವಿವಚನ ಪ್ರತ್ಯಯವಲ್ಲ.

ಹೀಗೆ ಐದು ಕಾರಣಗಳಿಂದ ದ್ವಿವಚನ ಪ್ರತ್ಯಯವು ಸಾವಕಾಶವೆನ್ನಬಹುದು. ಅಂದರೆ ದ್ವಿವಚನ ಪ್ರತ್ಯಯವಿದ್ದರೂ ದ್ವಿತ್ವವನ್ನು ಬೋಧಿಸುವುದಿಲ್ಲ. ಹೀಗಿರುವಾಗ ಇದರ ಪರಿಹಾರಕ್ಕಾಗಿ ನಿಮ್ಮ ಶ್ರಮವು ವ್ಯರ್ಥವಲ್ಲವೇ? ಎಂಬ ಈ ಐದು ಬಗೆಯ ಪ್ರಶ್ನೆಗಳಿಗೆ ಕ್ರಮವಾಗಿ ಉತ್ತರಿಸುತ್ತಿದ್ದಾರೆ. ಮೊದಲನೆಯ ಪ್ರಶ್ನೆಯನ್ನು 'ನಚ ದಾರಾಃ' ಇತ್ಯಾದಿಯಾಗಿ ನಿರಾಕರಿಸುತ್ತಿದ್ದಾರೆ.

**प्रकाशः – प्रसिद्धमिति ।** ''दाराः पुंसि च भूम्न्येवे'' इत्यादिवन्नैघण्टुक-प्रसिद्धेरभावात् तथा कल्पनमयुक्तमित्यर्थः ।

'ದಾರಾಃ' ಮೊದಲಾದ ಶಬ್ದಗಳು ನಿತ್ಯವಾಗಿ ಬಹುವಚನದಲ್ಲಿವೆಯೆಂಬುದು ಪ್ರಸಿದ್ಧವಾಗಿದೆಯೆಂದು ಗ್ರಂಥಕಾರರು ಹೇಳಿದರು. ಅಂದರೆ 'ದಾರಿಃ ಪುಂಸಿ ಚ ಭೂಮ್ನ್ಯೇವೇ' ಇತ್ಯಾದಿಯಾಗಿ ನಿಘಂಟುವಿನಲ್ಲಿ ದಾರಾಶಬ್ದವು ಪುಲ್ಲಿಂಗದಲ್ಲಿ ಮತ್ತು ಬಹುವಚನದಲ್ಲಿರುತ್ತದೆಂದು ಹೇಳಲಾಗಿದೆ. ಆದ್ದರಿಂದ ಒಬ್ಬಳೇ ಹೆಂಡತಿಯಲ್ಲಿಯೂ ಸಹ ಬಹುವಚನಾಂತವಾದ 'ದಾರಾಃ' ಎಂಬ ಶಬ್ದವನ್ನು ಪ್ರಯೋಗಿಸಬಹುದು. ಕೇವಲ ಶಬ್ದಸಾಧುತ್ವಕ್ಕೋಸ್ಕರ ಇಲ್ಲಿ ಬಹುವಚನವಿರುತ್ತದೆ. ಆದರೆ ಪ್ರಕೃತ 'ಪಿಬಂತೌ' ಎಂಬಲ್ಲಿ ಕೇವಲ ಶಬ್ದಸಾಧುತ್ವಕ್ಕೋಸ್ಕರ ದ್ವಿವಚನಪ್ರತ್ಯಯ ಬಂದಿದೆಯೆಂದು ಹೇಳಲಾಗದು. ಹಾಗೆ ಹೇಳಲು ಯಾವುದೇ ನಿಘಂಟುವಿನ ಆಧಾರವಿರುವುದಿಲ್ಲ ಆದ್ದರಿಂದ ಶಬ್ದಸಾಧುತ್ವಕೋಸ್ಕರ ದ್ವಿವಚನಪ್ರತ್ಯಯವೆಂಬ ನಿಮ್ಮ ಕಲ್ಪನೆಯು ಅಯುಕ್ತವಾಗಿದೆ.

**प्रकाशः** – द्वितीयं निराह – **नच बाधकमिति** । ''व्यत्ययो बहुलम्'' इति ''सुपां सुलुक्'' इत्यादिशास्त्रेणैकवचनस्य द्विवचनमिति वचनव्यत्ययकल्पनं ''अहल्यायै जारा'' इत्यादौ विभक्तिव्यत्यय इव सति बाधके । न हीह जीवेश्वर-विषयत्वेनोपपत्तौ किञ्चिद्बाधकमस्तीत्यर्थः । गुहाप्रविष्टत्वादिबाधकं तु निरसिष्यत इति भावः ।

ಎರಡನೇ ಪಕ್ಷವನ್ನು 'ನಚ ಬಾಧಕಂ' ಎಂಬುದರಿಂದ ನಿರಾಕರಿಸುತ್ತಿದ್ದಾರೆ. ಏಕವಚನಶಬ್ದ ಛಾಂದಸವಾದ್ದರಿಂದ ದ್ವಿವಚನಾಂತವೆಂದು ಹೇಳುತ್ತಿದ್ದೀರಿ. ಆದರೆ ಬಾಧಕವಿದ್ದಾಗ ಮಾತ್ರ ಈ ರೀತಿಯಾಗಿ ಛಾಂದಸವೆಂದು ಹೇಳಬೇಕು. ''ವ್ಯತ್ಯಯೋ ಬಹುಲಮ್'' ಮತ್ತು ''ಸುಪಾಂ ಸುಲುಕ್'' ಇತ್ಯಾದಿ ಸೂತ್ರಗಳಿಂದ ಏಕವಚನಶಬ್ದಕ್ಕೆ ದ್ವಿವಚನವನ್ನು ಕಲ್ಪಿಸಬಹುದಿತ್ತು. ಆದರೆ ಯಾವುದೇ ಬಾಧಕವು ಇಲ್ಲಿ ಇರುವುದಿಲ್ಲ.''ಅಹಲ್ಯಾಯೈ ಜಾರಾ'' ಎಂಬಲ್ಲಿ ಛಾಂದಸವಾದ್ದರಿಂದ ಚತುರ್ಥಿವಿಭಕ್ತ್ಯಂತವಾದ 'ಅಹಲ್ಯಾಯೈ' ಎಂಬ ಪದವನ್ನು 'ಅಹಲ್ಯಾಯಾಃ' ಎಂಬುದಾಗಿ ಷಷ್ಠ್ಯಂತವಾಗಿ ವಿಭಕ್ತಿ ವ್ಯತ್ಯಾಸ ಮಾಡುವುದು ಕಂಡಿದೆ. ಏಕೆಂದರೆ ಚತುರ್ಥೀವಿಭಕ್ತ್ಯರ್ಥವಾದ ಸಂಪ್ರದಾನತ್ವವು ಅಹಲ್ಯೆಯಲ್ಲಿ ಬಾಧಿತವಾಗಿದೆ. ಅದಕ್ಕಾಗಿ ಸಂಬಂಧಸಾಮಾನ್ಯದಲ್ಲಿರುವ ಷಷ್ಠೀವಿಭಕ್ತಿಯನ್ನು ಛಾಂದಸವಾದ್ದರಿಂದ ಕಲ್ಪಿಸುತ್ತೇವೆ. ಅದರಂತೆ 'ಪಿಬಂತೌ' ಎಂಬಲ್ಲಿ ದ್ವಿವಚನಕ್ಕೆ ಜೀವೇಶ್ವರರು ವಿಷಯವೆಂದು ಹೇಳಲು ಬರುವುದರಿಂದ ಯಾವುದೇ ಬಾಧಕವು ಕಾಣಿಸುವುದಿಲ್ಲ. ಬಾಧಕವಿಲ್ಲದಿದ್ದಾಗ ವಿಭಕ್ತಿವ್ಯತ್ಯಾಸವನ್ನಾಗಲೀ ವಚನವ್ಯತ್ಯಾಸವನ್ನಾಗಲೀ ಮಾಡುವುದು ತಪ್ಪಾಗುತ್ತದೆ. ಗುಹಾಪ್ರವಿಷ್ಟತ್ವಾದಿ ಬಾಧಕಗಳಿವೆಯಲ್ಲವೇ? ಎಂದು ಪ್ರಶ್ನಿಸಬಾರದು. ಇದನ್ನು ಈ ಮುಂದೆಯೇ ನಿರಾಕರಿಸುವವರಿದ್ದೇವೆ.

**प्रकाशः** – तृतीयमाशङ्क्य निराह – **नच ग्रहमिति** । छन्दोधिकरणे ग्रहाधिकरणं विवृतम् । ''ऐन्द्रवायवं गृह्णाति मैत्रावरुणं गृह्णाति'' इत्यादिनोत्पन्नानां

''ग्रहैर्यजेत'' इति होमसाधनत्वेन प्राप्तानां सम्मार्जरूपसंस्कारविधानार्थं 'ग्रहं' इति ग्रहशब्दस्योद्देश्यत्वात्तद्गता सङ्ख्या न विवक्षितेति वक्तुं युक्तम् । इह तु ऋतपानस्य ब्रह्मण्यप्राप्ततया विधेयत्वान्न तया सम्भवति, किन्तु ''पशुना यजेत'' इत्यादाविव विधेयगतत्वेन विवक्षितैवेत्यर्थः ।

ಉದ್ದೇಶ ವಿಶೇಷಣವಾದ್ದರಿಂದ ದ್ವಿತ್ವವು ಅವಿಕ್ಷಿತವಾಗಿರುವುದರಿಂದ ಮೂರನೆಯ ಪಕ್ಷವನ್ನು ನಿರಾಕರಿಸುತ್ತಿದ್ದಾರೆ 'ನಚ ಗ್ರಹಮ್' ಇತ್ಯಾದಿಯಾಗಿ. ಗ್ರಹಾಧಿಕರಣವನ್ನು ಗಾಯತ್ರ್ಯಧಿಕರಣದಲ್ಲಿಯೇ ವಿವರಿಸಿದ್ದಾಗಿದೆ. ''ಐಂದ್ರವಾಯವಂ ಗೃಹ್ಣಾತಿ ಮೈತ್ರಾವರುಣಂ ಗೃಹ್ಣಾತಿ'' ಇತ್ಯಾದಿಯಾಗಿ ಪ್ರಥಮತಃ ಗ್ರಹವು ಪ್ರಾಪ್ತವಾಗಿದೆ. ಅದನ್ನೇ ''ಗ್ರಹೈರ್ಯಜೇತ'' ಎಂಬುದರಿಂದ ಹೋಮಸಾಧನವೆಂದು ವಿಧಿಸಲಾಗಿದೆ. ಅಂತಹ ಗ್ರಹಗಳಿಗೆ ಸಮ್ಮಾರ್ಜನವೆಂಬ ಸಂಸ್ಕಾರವನ್ನು ವಿಧಿಸಲಾಗಿದೆ. ಅದಕ್ಕಾಗಿ 'ಗ್ರಹಂ' ಎಂದು ಗ್ರಹವನ್ನು ಉದ್ದೇಶ ಮಾಡಲಾಗಿದೆ. ಆದ್ದರಿಂದ ಅದರಲ್ಲಿರುವ ಸಂಖ್ಯೆಯು ಅವಿವಕ್ಷಿತವಾಗಿದೆಯೆಂದು ಹೇಳಬಹುದು. ಆದರಂತೆ ಪ್ರಕೃತದಲ್ಲಿಯು ಋತಪಾನವು ಮೊದಲೇ ಪ್ರಾಪ್ತವಾಗಿರಬೇಕು. ಆದರೆ ಮೊದಲು ಪ್ರಾಪ್ತವಾಗದ ಕಾರಣ ವಿಧೇಯವೇ ಆಗುತ್ತದೆ ಹೊರತು ಉದ್ದೇಶವಾಗುವುದಿಲ್ಲ. ಯಾವರೀತಿಯಾಗಿ ''ಪಶುನಾ ಯಜೇತ'' ಎಂಬಲ್ಲಿ ವಿಧೇಯವಾದ ಪಶುವಿನಲ್ಲಿ ಏಕತ್ವವು ವಿವಕ್ಷಿತವಾಗಿದೆಯೋ ಅದರಂತೆ ''ಋತಂ ಪಿಬಂತೌ'' ಎಂಬುದು ವಿಧೇಯವಾಗಿರುವುದರಿಂದ ಅದರಲ್ಲಿ ವಿಶೇಷಣವಾಗಿರುವ ದ್ವಿತ್ವವು ವಿವಕ್ಷಿತವಾಗುತ್ತದೇ ಹೊರತು ಅವಿವಕ್ಷಿತವಾಗುವುದಿಲ್ಲ.

**प्रकाशः** – ननु टीकायां यौ सुकृतनिर्मितशरीरे हृदयगुहां प्रविष्टौ तत्रापि सर्वजीवोत्तमे अतिपूर्णे वायौ प्रविष्टौ सुकृतफलं भुञ्जानौ तौ ब्रह्मविदः पञ्चमहायज्ञवन्तः द्युपर्जन्यादिपञ्चाग्निनिष्ठा वा, त्रिवारकृतनाचिकेताः छायातपौ वदन्तीति पिबन्तावनूद्य च्छायातपत्वविधेरुक्तत्वात् कथमेवमित्यत आह – ऋतमिति ।

ಟೀಕೆಯಲ್ಲಿ ''ಋತಂ ಪಿಬಂತೌ'' ಎಂಬುದನ್ನು ಉದ್ದೇಶವನ್ನಾಗಿ ವಿವಕ್ಷಿಸಿ ಛಾಯಾತಪತ್ವವನ್ನು ವಿಧಾನ ಮಾಡಿದ್ದಾರೆ. ಶ್ರುತ್ಯರ್ಥ ಹೀಗಿದೆ - 'ಸುಕೃತಸ್ಯ' ಎಂಬಲ್ಲಿರುವ ಷಷ್ಠಿವಿಭಕ್ತಿಯು ಸಂಬಂಧಾರ್ಥದಲ್ಲಿದೆ. ಆದ್ದರಿಂದ ಸುಕೃತಸ್ಯ = ಸುಕೃತದಿಂದ ನಿರ್ಮಿತವಾದ ಶರೀರದಲ್ಲಿ, ಗುಹಾಂಪ್ರವಿಷ್ಟೌ = ಹೃದಯಗುಹೆಯಲ್ಲಿ ಪ್ರವೇಶಿಸಿದ ಇಬ್ಬರು ಚೇತನರಲ್ಲಿ, ಪರಮೇ = ಸರ್ವೋತ್ತಮನಾದ, ಪರಾರ್ಧೇ = ಅತ್ಯಂತ ಪೂರ್ಣರಾದ ವಾಯುದೇವರಲ್ಲಿ, ಪ್ರವಿಷ್ಟೌ = ಪ್ರವೇಶಿಸಿದ, ಋತಂ = ಪುಣ್ಯದ ಫಲವನ್ನು, ಪಿಬಂತೌ = ತಿನ್ನುವ, ತೌ = ಅವರಿಬ್ಬರನ್ನು, ಬ್ರಹ್ಮವಿದಃ = ದೇವಯಜ್ಞ ಋಷಿಯಜ್ಞ ಮೊದಲಾದ ಐದು ಮಹಾಯಜ್ಞಗಳನ್ನು ಅನುಷ್ಠಾನ ಮಾಡುವವರು. ಅಥವಾ ದ್ಯು, ಪರ್ಜನ್ಯ, ಭೂಮಿ, ಪಿತಾ, ಮಾತಾ ಎಂದು ಪಂಚಾಗ್ನಿಗಳ ವಿದ್ಯೆಯನ್ನು ಅರಿತವರು, ತ್ರಿನಾಚಿಕೇತಾಃ = ನಾಚಿಕೇತಾಗ್ನಿಯನ್ನು ಮೂರುಬಾರಿ ಅನುಷ್ಠಾನ ಮಾಡಿದವರು. ಇಂತಹ ಜ್ಞಾನಿಗಳೆಲ್ಲರೂ ಆತ್ಮ ಅಂತರಾತ್ಮ ಎಂಬ ಭಗವಂತನ ಎರಡು ರೂಪಗಳನ್ನು, ಛಾಯಾತಪೌ = ಸಜ್ಜನರಿಗೆ

ಸುಖಕರವೆಂದು ದುರ್ಜನರಿಗೆ ದುಃಖಕರವೆಂದು, ವದಂತಿ = ಹೇಳುತ್ತಾರೆ. ಹೀಗೆ ಶ್ರುತ್ಯರ್ಥವನ್ನು ಗಮನಿಸಿದಾಗ 'ಪಿಬಂತೌ' ಎಂಬುದನ್ನು ಉದ್ದೇಶ ಮಾಡಿ ಛಾಯಾತಪತ್ವವನ್ನು ವಿಧಾನ ಮಾಡಿದ್ದು ಕಾಣುತ್ತದೆ. ಆದರೆ ನೀವು 'ಪಿಬಂತೌ' ಎಂಬುದನ್ನು ಉದ್ದೇಶವೇ ಅಲ್ಲವೆಂದು ಹೇಳುತ್ತಿದ್ದೀರಿ. ಇದು ಹೇಗೆ ಸರಿ ? ಎಂಬ ಪ್ರಶ್ನೆಗೆ ಗ್ರಂಥಕಾರರು 'ಋತಂ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

**प्रकाशः** – गुहाप्रविष्टत्वादिरादिपदार्थः । एकस्यैवोद्देश्यत्वादिति भावः । तथाच 'छायातपौ' इत्यत्र द्विवचनं निरवकाशमित्यर्थः ।

'पिबन्तौ' इति द्विवचनश्रुतेरित्युक्त्वा टीकायां ''श्रुतेर्निरवकाशत्वात्'' इत्युक्तं, तत्स्वारस्यमनुरुध्य 'पिबन्तौ' इत्यस्यानुवाद्यत्वेऽपि ग्रहवैलक्षण्येन तत्रत्य-द्विवचनस्येश्वरेऽनुपपन्नतामाह – ग्रहेति ।

'ಋತಂ ಪಿಬಂತೌ' ಎಂಬುದು ಉದ್ದೇಶವಾದರೂ ಸಹ 'ಛಾಯಾತಪೌ' ಇತ್ಯಾದಿಗಳನ್ನು ವಿಧೇಯವೆಂದು ಅವಶ್ಯ ಒಪ್ಪಬೇಕೆಂದು ಗ್ರಂಥದಲ್ಲಿ ಹೇಳಿದ್ದಾರೆ. 'ಆದಿ' ಪದದಿಂದ ಗುಹಾಪ್ರವಿಷ್ಟತ್ವಾದಿಗಳನ್ನೂ ಸಹ ಆದಿಪದದಿಂದ ಸ್ವೀಕರಿಸಬೇಕು. ಏಕೆಂದರೆ ಯಾವತ್ತೂ ಸಹ ಉದ್ದೇಶ ಒಂದೇ ಆಗಿರುತ್ತದೆ. ಉಳಿದವುಗಳೆನ್ನಲ್ಲಾ ವಿಧೇಯವೆಂದೇ ಹೇಳಬೇಕು. ಆದ್ದರಿಂದ 'ಪಿಬಂತೌ' ಎಂಬಲ್ಲಿರುವ ದ್ವಿವಚನವನ್ನು ಸಾವಕಾಶವೆಂದು ಹೇಳಬಹುದಾದರೂ 'ಛಾಯಾತಪೌ'' ಎಂಬಲ್ಲಿರುವ ದ್ವಿವಚನವನ್ನು ಸಾವಕಾಶವೆಂದು ಹೇಳಲಾಗದು ಹೊರತು ನಿರವಕಾಶವೆಂದು ಹೇಳಬೇಕು.

'ಪಿಬಂತೌ ಇತಿ ದ್ವಿವಚನಶ್ರುತೇಃ' ಎಂಬುದಾಗಿ ಹೇಳಿ 'ಶ್ರುತೇರ್ನಿರವಕಾಶತ್ವಾತ್' ಎಂದು ಹೇಳಿದ್ದಾರೆ. ಇದರಿಂದ 'ಪಿಬಂತೌ' ಎಂಬಲ್ಲಿರುವ ದ್ವಿವಚನಶ್ರುತಿಯನ್ನೇ ನಿರವಕಾಶವೆಂದು ಹೇಳಿದಂತಾಯಿತು. ಟೀಕಾಮಾತಿನ ಸ್ವಾರಸ್ಯವನ್ನನುಸರಿಸಿ 'ಪಿಬಂತೌ' ಎಂಬಲ್ಲಿರುವ ದ್ವಿವಚನವನ್ನು ಅನುವಾದ್ಯವೆಂದು ಒಪ್ಪಿದರೂ ಸಹ 'ಗ್ರಹಂ ಸಮ್ಮಾರ್ಷ್ಟಿ' ಎಂಬಲ್ಲಿ ವೈಲಕ್ಷಣ್ಯವಿರುವುದರಿಂದ 'ಪಿಬಂತೌ' ಎಂಬಲ್ಲಿರುವ ದ್ವಿವಚನವು ಈಶ್ವರನಲ್ಲಿ ಅನುಪಪನ್ನವಾಗಿದೆಯೆಂದು 'ಗ್ರಹೈಕತ್ವಸ್ಯ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – एकत्वस्य विधेयान्वयायोद्देश्यकोटिप्रवेशे ग्रहस्याप्युद्देश्यत्वेन प्रत्युद्देश्यं वाक्यपरिसमास्या, ग्रहं सम्मृज्यादेकं सम्मृज्यादिति वाक्यभेदः । विधेयकोटिप्रवेशे सम्मार्गस्यापि विधेयत्वेन विधेयभेदात्, ग्रहं सम्मृज्यात् स च सम्मार्ग एक इति वाक्यभेदापत्त्येत्यर्थः ।

'ಗ್ರಹಂ ಸಮ್ಮಾರ್ಷ್ಟಿ' ಎಂಬಲ್ಲಿ ಏಕತ್ವವೂ ಅವಿವಕ್ಷಿತವಾಗಿದೆ. ಅವಿವಕ್ಷಿತವಲ್ಲದಿದ್ದರೆ ಉದ್ದೇಶದಲ್ಲಿ ಅನ್ವಯ ಹೊಂದುತ್ತದೋ? ಅಥವಾ ವಿಧೇಯದಲ್ಲಿ ಅನ್ವಯ ಹೊಂದುತ್ತದೋ? ಎಂಬ ಪ್ರಶ್ನೆ ಬರುತ್ತದೆ. ಉದ್ದೇಶದಲ್ಲಿ ಅನ್ವಯ ಹೊಂದುವುದಾದರೆ ಗ್ರಹಣವೇ ಮೊದಲು ಉದ್ದೇಶವಾಗಿರುವುದರಿಂದ, ಪ್ರತಿಯೊಂದು ಉದ್ದೇಶಕ್ಕೂ ವಾಕ್ಯವು ಪರಿಸಮಾಪ್ತಿಯಾಗಬೇಕಾದ್ದರಿಂದ 'ಗ್ರಹಂ ಸಮ್ಮೃಜ್ಯಾತ್' ಎಂಬ

ವಾಕ್ಯಭೇದ ದೋಷ ಬರುತ್ತದೆ. ಒಂದು ವೇಳೆ ವಿಧೇಯಕೋಟಿಯಲ್ಲಿ ಅನ್ವಯ ಹೊಂದುವುದಾದರೆ 'ಸಮ್ಮಾರ್ಜನವು' ಮೊದಲೇ ವಿಧೇಯವಾಗಿರುವುದರಿಂದ ಎರಡು ವಿಧೇಯವನ್ನು ಹೇಳಿದಂತಾಯಿತು. ಆವಾಗ 'ಗ್ರಹಂ ಸಂಮೃಜ್ಯಾತ್ ಸ ಚ ಸಮ್ಮಾರ್ಗ ಏಕಃ' ಎಂಬುದಾಗಿ ಪುನಃ ವಾಕ್ಯಭೇದ ದೋಷವು ಬರುತ್ತದೆ. ಆದ್ದರಿಂದ ಏಕತ್ವವನ್ನು ಅವಿವಕ್ಷಿತವೆಂದೇ ಹೇಳಬೇಕು.

**प्रकाशः – चतुर्थमाशङ्क्य निराह – नच पिबन्तावित्यादिकमिति ।** मन्त्रोहाधिकरणमुक्तं जिज्ञासाऽधिकरणे । "अग्नये जुष्टं निर्वपामि" इति दर्शपौर्णमासिकाग्नेयहविर्निर्वापमन्त्रस्य "सौर्यं चरुं निर्वपेद्ब्रह्मवर्चसकामः" इति विहिते सौर्ययागे "आग्नेयवत्सौर्यः कर्तव्यः" इत्यतिदेशतः प्राप्तस्य यथा 'सूर्याय' इति प्रातिपदिकमात्रे ऊहस्तथा 'पिबन्तौ' इति द्विवचनान्तस्य पिबन्तमित्येकवचनरूपप्रत्ययमात्रोहः स्यात् । न चात्र तथाऽतिदेशतः प्राप्तं, इहैवास्याऽऽम्नानादित्यर्थः ।

ದ್ವಿವಚನಾಂತವಾದ ಶಬ್ದವನ್ನು ಏಕವಚನಾಂತವಾಗಿ ಊಹಿಸಬೇಕೆಂಬ ನಾಲ್ಕನೇ ಪಕ್ಷವನ್ನು 'ನಚ ಪಿಬಂತೌ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಮಂತ್ರೋಹಾಧಿಕರಣವನ್ನು ಜಿಜ್ಞಾಸಾಧಿಕರಣದಲ್ಲಿ ವಿವರಿಸಿದ್ದಾಗಿದೆ. "ಅಗ್ನಯೇ ಜುಷ್ಟಂ ನಿರ್ವಪಾಮಿ" ಎಂಬುದು ದರ್ಶಪೂರ್ಣಮಾಸದ ಆಗ್ನೇಯ ಹವಿಸ್ಸನ್ನು ನಿರ್ವಾಪ ಮಾಡುವ ಮಂತ್ರವಾಗಿದೆ. "ಸೌರ್ಯಂ ಚರುಂ ನಿರ್ವಪೇದ್ಬ್ರಹ್ಮವರ್ಚಸಕಾಮಃ" ಎಂಬುದಾಗಿ ವಿಹಿತವಾದ ಸೌರ್ಯ ಯಾಗದಲ್ಲಿ ಈ ಮಂತ್ರವು ಪ್ರಾಪ್ತವಾಗಿದೆ. ಅಂದರೆ ಆಗ್ನೇಯಯಾಗವೆಂಬುದು ಪ್ರಕೃತಿಯಾಗಿದೆ. ಸೌರ್ಯಯಾಗವೆಂಬುದು ವಿಕೃತಿಯಾಗವಾಗಿದೆ. ಪ್ರಕೃತಿವದ್‌ವಿಕೃತಿಃ ಕರ್ತವ್ಯಾ ಎಂಬ ಚೋದಕದಂತೆ 'ಆಗ್ನೇಯವತ್ ಸೌರ್ಯಃ ಕರ್ತವ್ಯಃ' ಎಂದು ಹೇಳಿದಂತಾಯಿತು. ಆವಾಗ ಆಗ್ನೇಯ ಯಾಗದಲ್ಲಿ ಪ್ರಕೃತವಾದ ಮಂತ್ರವು ಸೌರ್ಯಯಾಗದಲ್ಲಿ ಅತಿದೇಶದಿಂದ ಪ್ರಾಪ್ತವಾಗುತ್ತದೆ. ಆದ್ದರಿಂದ 'ಸೂರ್ಯಾಯ' ಎಂದಷ್ಟೇ ಪ್ರಾತಿಪದಿಕವನ್ನು ಊಹಿಸಬೇಕು. ಅದರಂತೆ ಪ್ರಕೃತದಲ್ಲಿ 'ಪಿಬಂತೌ' ಎಂಬಲ್ಲಿ ದ್ವಿವಚನಾಂತವಾಗಿದ್ದರೂ 'ಪಿಬಂತಂ' ಎಂಬುದಾಗಿ ಏಕವಚನ ಪ್ರತ್ಯಯವನ್ನಷ್ಟೇ ಊಹಿಸಬಹುದಿತ್ತು. ಒಂದು ವೇಳೆ ಅತಿದೇಶದಿಂದ ಪ್ರಾಪ್ತವಾಗಿದ್ದರೆ ಊಹಿಸಬಹುದಿತ್ತು. ಆದರೆ ಕಾಠಕದಲ್ಲಿ ಇದೇ ಮೊದಲು ಪ್ರಾಪ್ತವಾಗುತ್ತಿರುವುದರಿಂದ ಇದಕ್ಕಿಂತ ಮೊದಲು ಪ್ರಸಕ್ತವೇ ಆಗಿರುವುದಿಲ್ಲ.

**प्रकाशः – पञ्चममाशङ्क्याह – न चैकस्मिन्निति ।** समन्वयाधिकरणेऽभ्यासाधिकरणं विवृतम् । तत्र हि समिदादीनां यागानामत्वमुक्तम् । एकसमिदाख्यप्रयाजवाचिनोऽपि समिच्छब्दस्य रूढत्वेन 'उच्चैर्वृक्षः' इत्यादाविव बहुवचनप्रतिरूपकत्वेनोपपत्तावपीह यौगिकत्वात् तथा न वक्तुं युज्यत इत्यर्थः ।

ಐದನೇ ಪಕ್ಷವನ್ನು ಆಶಂಕಿಸಿ 'ನ ಚೈಕಸ್ಮಿನ್' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಪೂರ್ವಮೀಮಾಂಸೆಯ ಅಭ್ಯಾಸಾಧಿಕರಣವನ್ನು ಹಿಂದೆ ಸಮನ್ವಯಾಧಿಕರಣದಲ್ಲಿಯೇ ವಿವರಿಸಿದ್ದಾಗಿದೆ. ಈ ಅಭ್ಯಾಸಾಧಿಕರಣದಲ್ಲಿ

ಸಮಿದಾದಿಗಳನ್ನು ಯಾಗದ ಹೆಸರೆಂದು ಹೇಳಿದ್ದಾರೆ. "ಉಚ್ಚೈರ್ವರ್ಕ್ಷಃ ಎಂದು ಹೇಳಿದಾಗ ಬಹುವಚನವು ಯಾವರೀತಿಯಾಗಿ ವಿಭಕ್ತಿಪ್ರತಿರೂಪಕವಾದ ಅವ್ಯಯವವಾಗಿದೆಯೋ ಅದರಂತೆ 'ಸಮಿದಃ' ಎಂಬಲ್ಲಿರುವ ಬಹುವಚನವೂ ಸಹ ವಿಭಕ್ತಿಪ್ರತಿರೂಪಕವಾದ ಅವ್ಯಯವೇ ಆಗಿದೆ. ಆದ್ದರಿಂದ ಸಮಿದಾಖ್ಯ-ಪ್ರಯಾಜವಾಚಿಯಾದ ಸಮಿಚ್ಛಬ್ದವು ಒಂದೇ ಯಾಗವನ್ನು ಹೇಳುತ್ತಿದೆ. ಏಕೆಂದರೆ 'ಉಚ್ಚೈಃ' ಎಂಬ ಪದವು ಹೇಗೆ ರೂಢವಾಗಿದೆಯೋ ಅದರಂತೆ 'ಸಮಿತ್' ಶಬ್ದವೂ ಸಹ ರೂಢವಾಗಿದೆ. ಆದ್ದರಿಂದ 'ಸಮಿತ್' ಶಬ್ದದ ಮುಂದಿರುವ ಬಹುವಚನವನ್ನು ವಿಭಕ್ತಿಪ್ರತಿರೂಪಕವಾದ ಅವ್ಯಯವೆಂದು ಹೇಳಬಹುದು. ಆದರೆ 'ಪಿಬಂತೌ' ಇತ್ಯಾದಿ ಪದಗಳು ಯೌಗಿಕವಾದ್ದರಿಂದ ದ್ವಿವಚನ ಪ್ರತ್ಯಯವನ್ನು ವಿಭಕ್ತಿಪ್ರತಿರೂಪಕವಾದ ಅವ್ಯಯವೆಂದು ಹೇಳಲು ಸಾಧ್ಯವಿಲ್ಲ ಎಂದರ್ಥ.

**प्रकाशः** – ननु नवमे द्वितीयपादान्तिमाधिकरणे '''प्रयाजेऽपीति चेत्'' इत्यत्र ''समिधो यजति'' इत्यादौ समिदादिकं देवतात्वेनोद्दिश्य तत्संस्कारत्वेन यागा विधीयन्ते अथारादुपकारकतया यागा इति विशये,

सामवायिकत्वलाभात्संस्कारविधिरिति प्राप्ते,

तथात्वे देवतालिङ्गस्य ''यदग्ने सायं जुहोति'' इत्यादाविव चतुर्थ्या निर्देशस्याभावेन चतुर्थ्यर्थे द्वितीयाया उपचारापत्तेः आरादुपकारकत्वेन यागविधिः, समिदादिशब्दास्तु मन्त्रवर्णप्राप्तदेवतां निमित्तीकृत्य नामधेयानि देवता एव वाऽनुवदन्ति,

न चानुवादे उपचारो दोष इति सिद्धान्तितत्वात् श्येनशब्दस्य पक्षिविशेषे रूढस्य तत्सादृश्याद्गौण्या वृत्त्या यागनामत्वमिव, देवतागणविशेषे निरूढस्य समिच्छब्दस्य तत्प्रकाशमन्त्रसम्बन्धापादितदेवतासम्बन्धे यागे लाक्षणिकत्वात् न रूढत्वमस्ति । उक्तं च शाबरभाष्ये ''समिदादिमन्त्रकत्वाद्यजीनां समदादिशब्दा वाचकाः'' इति ।

लक्षणायां लिङ्गव्यत्यय इव वचनव्यत्ययोऽपि न दोष इति चेन्न, पौर्णमास्यधिकरणपूर्वपक्षे फलवाक्यस्य 'दर्शपूर्णमासाभ्यां' इति पदस्य द्विवचनप्रतिरूपकाव्ययत्वमाश्रित्य प्राकरणिकसर्वयागनामधेयत्वमुक्तं, तद्वत्प्रकृतेऽपि वक्तुं शक्यमित्यभिप्रायेणैवमुक्तमित्यविरोधः । देवतायां निरूढत्वाभिप्रायेण वा एवमुक्तिः ।

ಪರಿಪೂರ್ಣಚಂದ್ರಿಕಾ

ಆಕ್ಷೇಪ - ಗ್ರಂಥಕಾರರು 'ಸಮಿತ್' ಶಬ್ದವನ್ನು ರೂಢವೆಂದು ಹೇಳಿದ್ದಾರೆ. ಆದರೆ ಮೀಮಾಂಸಕರು 'ಸಮಿತ್' ಶಬ್ದವನ್ನು ಲಾಕ್ಷಣಿಕವೆಂದು ಹೇಳಿದ್ದಾರೆ -

ಪ್ರಯಾಜೇಽಪೀತಿ ಚೇತ್ [1](೯-೨-೨೦)

ಈ ಸೂತ್ರದಲ್ಲಿ 'ಸಮಿಧೋ ಯಜತಿ' ಇತ್ಯಾದಿ ವಾಕ್ಯಗಳ ಅರ್ಥವನ್ನು ವಿಮರ್ಶಿಸಲಾಗಿದೆ. ಸಮಿದಾದಿ ಪದಗಳಿಂದ ದೇವತೆಗಳು ಪ್ರತಿಪಾದ್ಯರಾಗಿದ್ದಾರೆ. 'ಸಮಿತ್' 'ಇಡಾ' ಮೊದಲಾದ ದೇವತೆಗಳನ್ನು ಅನುವಾದ ಮಾಡಿ ಆ ದೇವತೆಗಳ ಸಂಸ್ಕಾರಕ್ಕಾಗಿ ಯಾಗಗಳನ್ನು ವಿಧಿಸುತ್ತಿದ್ದಾರೋ? ಅಥವಾ ದರ್ಶಪೂರ್ಣಮಾಸ ಯಾಗವೆಂಬ ಪ್ರಧಾನಯಾಗಕ್ಕೆ ಫಲೋಪಕಾರಕವಾಗಿ ಆರಾದುಪಕಾರಕವೆಂದು ಯಾಗವನ್ನು

---

(१) भाट्टसङ्ग्रहः –

**अथ विंशं समिदादीनां यागनामधेयताधिकरणम् सूत्रे (५९-४०)**

**प्रयाजेऽपीति चेत् ॥ ५९ ॥**

**(नाचोदितत्वात् ॥ ६० ॥)**

पूर्वन्यायेन **शङ्कनात्सङ्गतिः** । दर्शपूर्णमासप्रकरणे ''समिधो यजति'' इत्यादिना प्रयाजपञ्चकमाम्नातम् । तत्र किं दर्शपूर्णमाससम्बन्धिनः समित्तनूनपादादीन् देवतात्वेनोद्दिश्य तत्संस्कारार्थतया पञ्च यागा विधीयन्ते, उताऽऽरादुपकारकाः प्रयाजा इति सन्देहे, ''विष्णुं यजति'' ''वरुणं यजति'' इत्यादौ द्वितीयानिर्दिष्टस्यापि देवतात्वदर्शनेनेहापि द्वितीयानिर्दिष्टानामपि समिदादीनां देवतात्वसम्भवेन तत्संस्कारकतया सन्निपातित्वे सम्भवति तद्विधित्वायोगात्पार्वणहोमवद्देवतोद्देशेन तत्संस्कारविधय इति **प्राप्तम्** । तथा च **सूत्रम्**, पार्वणवत् **प्रयाजेऽपि** देवतासंस्कारकत्वेन समावायिकतेति । **सिद्धान्तस्तु**, देवतात्वलिङ्गस्य ''आग्नेयोऽष्टाकपालः'' इत्यादाविव तद्धितेन निर्देशस्य ''यदग्नये सायं जुहोति'' इत्यादाविव चतुर्थ्या वा निर्देशस्याभावेन न समिदादेरत्र देवतात्वम् । ''विष्णुं यजति'' इत्यादौ तु मन्त्रवर्णप्राप्तं विष्णोर्देवतात्वमनूद्यते । अनुवादश्च यथाप्राप्ति । उद्देश्यक्रियाकर्मताया एव प्राप्ततया सैव हविस्त्यागरूपे यागे उपचारादनूद्यते । अनुवादे चोपचारस्यादोषत्वात् । प्रकृते तु समिदादिदेवताविधिपरत्वे विधावुपचारायोगात्केवलं यागविधिरेवाश्रयणीय इति ''समिधोऽग्न आज्यस्य वियन्तु'' इत्यादिमन्त्रवर्णप्राप्तसमिदादि-देवता निमित्तीकृत्य तत्प्रख्यन्यायेन नामधेयानीति तत्तन्नामकाः पञ्च यागाः प्रकरणबलेन दर्शपूर्णमासयोरारादुपकारकतया विधयीन्त इति । द्वितीया तूद्देश्यक्रियाकर्मत्ववादिनीति । तदाह सूत्रे, **नाचोदितत्वादिति** । समिदादेर्देवतात्वेन दर्शपूर्णमासयोचरचोदितत्वात्पूर्वपक्षो न युक्त इत्यर्थः **फलन्तु** विकृतावपि प्रवृत्तिः ।

इति विंशं समिदादीनां यागनामधेयताधिकरणम् (सूत्रे ५९-६०)

ಗುಹಾಧಿಕರಣ (೧-೨-೩)

ವಿಧಿಸುತ್ತಿದ್ದಾರೋ? ಎಂದು ಸಂಶಯ. (ಮೀಮಾಂಸಕ ಮತದಲ್ಲಿ ಶಬ್ದವನ್ನೇ ದೇವತೆಯೆನ್ನುತ್ತಾರೆ. ದ್ರವ್ಯಕ್ಕೆ ಸಂಸ್ಕಾರ ಮಾಡಿದಂತೆ ಈ ದೇವತೆಗೂ ಸಂಸ್ಕಾರ ಮಾಡಬೇಕೆಂದು ಅವರ ಅಭಿಪ್ರಾಯ.)

ಪೂರ್ವಪಕ್ಷ - ಅಂಗಗಳು ಎರಡುವಿಧವಾಗಿವೆ. 'ಆರಾದುಪಕಾರಕ' ಮತ್ತು 'ಸನ್ನಿಪತ್ಯೋಪಕಾರಕ' ಎಂಬುದಾಗಿ. ಯಾಗಸ್ವರೂಪಕ್ಕೆ ಉಪಯೋಗವಾಗುವಂತಹ ಅಂಗಗಳು ಸನ್ನಿಪತ್ಯೋಪಕಾರಕಾಂಗ-ಗಳೆನಿಸುತ್ತವೆ. ಯಾಗಜನ್ಯವಾದ ಫಲಕ್ಕೆ ಉಪಯೋಗವಾಗುವಂತಹ ಅಂಗಗಳನ್ನು ಆರಾದುಪಕಾರಕ ಅಥವಾ ಫಲೋಪಕಾರಕ ಅಂಗಗಳೆನ್ನುತ್ತಾರೆ. ಆರಾದುಪಕಾರಕ್ಕಿಂತ ಸನ್ನಿಪತ್ಯೋಪಕಾರಕಾಂಗಗಳು ಬಲಿಷ್ಠವಾಗಿರುತ್ತವೆ. ಏಕೆಂದರೆ ಯಾಗಸ್ವರೂಪದಲ್ಲಿಯೇ ಸನ್ನಿಪತ್ಯೋಪಕಾರಾಂಗಕ್ಕೆ ಪ್ರಯೋಜನವಿರುತ್ತದೆ. ಆದ್ದರಿಂದ ಪ್ರಕೃತ 'ಸಮಿಧೋ ಯಜತಿ' 'ಇಡೋ ಯಜತಿ' ಇತ್ಯಾದಿಗಳನ್ನು ಸನ್ನಿಪತ್ಯೋಪಕಾರಕಾಂಗಗಳೆಂದೇ ಹೇಳಬೇಕು. ಸಮಿದಾದಿಗಳು ಯಾಗದಲ್ಲಿ ನೇರವಾಗಿ ಸಂಬಂಧವನ್ನು ಹೊಂದಿರುವುದರಿಂದ ಸಾಮವಾಯಿಕತ್ವವು ಲಾಭವಾಗುತ್ತದೆ. ಅಂದರೆ ಯಾಗದಲ್ಲಿ ಸಮವೇತವಾಗಿ ಸಂಬಂಧವನ್ನು ಹೊಂದುತ್ತವೆ ಎಂದರ್ಥ. ಹೀಗೆ ಯಾಗಸ್ವರೂಪದಲ್ಲಿ ಅಂತರ್ಭೂತವಾದ್ದರಿಂದ ಇವುಗಳನ್ನು ಸಂಸ್ಕಾರವಿಧಿಯೆಂದೇ ಹೇಳಬೇಕು. ಅಂದರೆ ದರ್ಶಪೂರ್ಣಮಾಸಯಾಗದಲ್ಲಿ ಉಪಯೋಗವಾಗುವ ದೇವತೆಗಳಿಗೆ ಸಂಸ್ಕಾರ ರೂಪವಾಗಿ ಬೇರೆ ಯಾಗಗಳನ್ನು ವಿಧಿಸುತ್ತಿದ್ದಾರೆ. ಹೀಗೆ ಸಂಸ್ಕೃತರಾದ ದೇವತೆಗಳು 'ದರ್ಶಪೂರ್ಣಮಾಸ' ಎಂಬ ಪ್ರಧಾನ ಯಾಗದಲ್ಲಿ ಅಂಗಗಳಾಗುತ್ತಾರೆಂದು ಪೂರ್ವಪಕ್ಷ.

ಸಿದ್ಧಾಂತ - 'ಆರಾದುಪಕಾರಕ' ಎಂದೇ ಹೇಳಬೇಕು. ಏಕೆಂದರೆ 'ಸಮಿದಾದಿ' ಶಬ್ದಗಳು ದೇವತಾವಾಚಕಗಳೇ ಅಲ್ಲ. ಹೊರತಾಗಿ ಯಾಗವಾಚಕಗಳಾಗಿವೆ. ಏಕೆಂದರೆ ಚತುರ್ಥೀವಿಭಕ್ತಿಯಿಂದ ನಿರ್ದೇಶ ಮಾಡಿದರೆ ಮಾತ್ರ ಆ ಶಬ್ದವು ದೇವತಾವಾಚಕವಾಗುತ್ತದೆ. ಉದಾಹರಣೆ ''ಯದಗ್ನೇ ಸಾಯಂ ಜುಹೋತಿ'' ಎಂಬಲ್ಲಿ ಚತುರ್ಥ್ಯಂತವಾದ 'ಅಗ್ನಯೇ' ಎಂಬ ಪದವು ದೇವತಾವಾಚಕವಾಗಿದೆ. ಅದರಂತೆ 'ಸಮಿಧೋ ಯಜತಿ' ಇತ್ಯಾದಿ ಸ್ಥಳಗಳಲ್ಲಿ ಚತುರ್ಥ್ಯಂತವಾದ ಪದಗಳು ಕಾಣಿಸುತ್ತಿಲ್ಲ. ಇನ್ನು ದ್ವಿತಿಯಾಂತವಾದ 'ಸಮಿದಃ' ಇತ್ಯಾದಿ ಪದಗಳನ್ನು ಚತುರ್ಥ್ಯರ್ಥದಲ್ಲಿ ಔಪಚಾರಿಕವಾಗಿ ಪ್ರಯೋಗಿಸಬೇಕಾಗುತ್ತದೆ. ಆದರೆ ಮುಖ್ಯಾರ್ಥದಿಂದಲೇ ವ್ಯಾಖ್ಯಾನಿಸಲು ಬರುವಾಗ ಗೌಣಾರ್ಥವನ್ನು ಸ್ವೀಕರಿಸಬಾರದು. ಆದ್ದರಿಂದ ದರ್ಶಪೂರ್ಣಮಾಸವೆಂಬ ಪ್ರಧಾನ ಯಾಗಕ್ಕೆ ಈ ಸಮಿದಾದಿಗಳನ್ನು ಫಲೋಪಕಾರಕಾಂಗವೆಂದೇ ಹೇಳಬೇಕು. 'ಸಮಿದಾದಿ' ಶಬ್ದಗಳಾದರೂ ಸಹ ಮಂತ್ರವರ್ಣದಿಂದ ಪ್ರಾಪ್ತರಾದ ದೇವತೆಗಳನ್ನು ನಿಮಿತ್ತೀಕರಿಸಿ ಯಾಗದ ನಾಮಧೇಯವನ್ನು ಹೇಳುತ್ತಿದೆ. ಮತ್ತು ದೇವತೆಗಳನ್ನು ಅನುವಾದ ಮಾಡುತ್ತಿವೆ. ಉದಾಹರಣೆ - ಅಗ್ನಿದೇವತಾಕ ಯಾಗವಾದ್ದರಿಂದ ಆಗ್ನೇಯಾಗವೆಂದು ಹೇಳುತ್ತಾರೆ. ಇಲ್ಲಿ 'ಅಗ್ನಯೇ' ಎಂಬ ಶಬ್ದವು ದೇವತಾಸಂಬಂಧವನ್ನು ನಿಮಿತ್ತವನ್ನಾಗಿಟ್ಟುಕೊಂಡೇ ಯಾಗವನ್ನು ಹೇಳುತ್ತಿದೆ. ಅದರಂತೆ ಪ್ರಕೃತದಲ್ಲಿಯೂ ಸಮಿದಾದಿ ದೇವತೆಗಳನ್ನು ಉದ್ದೇಶಿಸಿ ನಡೆಸುವ ಯಾಗಕ್ಕೆ 'ಸಮಿತ್‌ಯಾಗ' ಎಂದೇ ಕರೆಯಬೇಕು. 'ಸಮಿದಃ' ಎಂಬ ಪದವು ದೇವತೆಯನ್ನು ಉದ್ದೇಶಿಸಿಯೇ ಯಾಗದ ಹೆಸರನ್ನು ಹೇಳುತ್ತದೆ.

## ಪರಿಪೂರ್ಣಚಂದ್ರಿಕಾ

ಪ್ರಶ್ನೆ - ಸಮಿದಾದಿ ಪದಗಳು ಯಾಗದ ನಾಮಧೇಯವಾಗಿದ್ದರೂ ಸಹ ದೇವತೆಗಳನ್ನು ಅನುವಾದ ಮಾಡುತ್ತಿವೆಯೆಂದು ಹೇಳಿದಿರಿ. ಹಾಗೆ ಅನುವಾದ ಮಾಡುವುದಾದರೂ ಚತುರ್ಥೀವಿಭಕ್ತಿಯನ್ನು ಔಪಚಾರಿಕವಾಗಿ ವಿವಕ್ಷಿಸಲೇಬೇಕು. ಆವಾಗ ಗೌಣಾರ್ಥವನ್ನು ಸ್ವೀಕರಿಸಬೇಕೆಂಬ ದೋಷವು ಸಿದ್ಧಾಂತಿಗಳಿಗೂ ಬರುತ್ತದಲ್ಲವೇ?

ಉತ್ತರ - ಹೀಗೆ ಪ್ರಶ್ನಿಸಬಾರದು. ಏಕೆಂದರೆ ಅನುವಾದ ಮಾಡಿದಾಗ ಚತುರ್ಥ್ಯರ್ಥ ಎಂಬ ಔಪಚಾರಿಕ ಪ್ರಯೋಗವು ತಪ್ಪಾಗುವುದಿಲ್ಲ.

ಹೀಗೆ ಪೂರ್ವಮೀಮಾಂಸಾಧಿಕರಣದಲ್ಲಿ ನಿರ್ಣಯಿಸಿರುವುದರಿಂದ 'ಶ್ಯೇನ' ಶಬ್ದವು ಪಕ್ಷಿವಿಶೇಷದಲ್ಲಿ ರೂಢವಾಗಿದ್ದರೂ ಸಹ ಪಕ್ಷಿಸಾದೃಶ್ಯವು ಯಾಗದಲ್ಲಿರುವುದರಿಂದ ಯಾಗವನ್ನೂ ಸಹ 'ಶ್ಯೇನ' ಎಂದೇ ಹೇಳಲಾಗುತ್ತದೆ. ಅಂದರೆ 'ಶ್ಯೇನ' ಶಬ್ದವನ್ನು ಪಕ್ಷಿಯಲ್ಲಿ ಮುಖ್ಯವಾಗಿ ಪ್ರಯೋಗಿಸಿದರೂ ಯಾಗದಲ್ಲಿ ಗೌಣವಾಗಿ ಪ್ರಯೋಗಿಸಲಾಗುತ್ತದೆ. ಅದರಂತೆ ಸಮಿದಾದಿಶಬ್ದಗಳು ದೇವತೆಗಳನ್ನೇ ಮುಖ್ಯವಾಗಿ ಹೇಳಿದರು ಗೌಣವಾಗಿ ಯಾಗದಲ್ಲಿ ಪ್ರಯೋಗಿಸಲಾಗುತ್ತದೆ. ಅಂದರೆ ಸಮಿಚ್ಛಬ್ದಗಳಿಂದ ಪ್ರತಿಪಾದ್ಯರಾದವರು ದೇವತೆಗಳು. ಈ ದೇವತೆಗಳಿಗೆ ಪ್ರಕಾಶಕವಾದದ್ದು ಮಂತ್ರಗಳು ಆ ಮಂತ್ರಗಳ ಸಂಬಂಧವು ಈ ಯಾಗದಲ್ಲಿರುತ್ತದೆ. ಹೀಗೆ ಸಮಿದಾದಿ ಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯರಾದ ದೇವತೆಗಳ ಸಂಬಂಧವು ಯಾಗದಲ್ಲಿರುವುದರಿಂದ ಲಾಕ್ಷಣಿಕ ಪ್ರಯೋಗವೆಂದು ತಿಳಿಯಬೇಕು. ಆದರೆ ಗ್ರಂಥಕಾರರು ಸಮಿದಾದಿಶಬ್ದಗಳನ್ನು ಯಾಗದಲ್ಲಿ ರೂಢವೆಂದು ಹೇಳಿದ್ದಾರೆ. ಇದು ಹೇಗೆ ಸರಿ? ಶಾಬರ ಭಾಷ್ಯದಲ್ಲಿಯೂ ಸಹ "ಸಮಿದಾದಿಮಂತ್ರಕತ್ವಾದ್ಯಜೀನಾಂ ಸಮಿದಾದಿಶಬ್ದಾಃ ವಾಚಕಾಃ" ಸಮಿದಾದಿ ಮಂತ್ರಗಳ ಸಂಬಂಧವಿರುವುದರಿಂದ ಯಾಗಗಳು ಸಮಿದಾದಿ ಶಬ್ದಗಳಿಂದ ವಾಚ್ಯವಾಗಿವೆ ಎಂದು ಹೇಳಲಾಗಿದೆ.

ಲಕ್ಷಣಾ ಮಾಡುವಾಗ ಲಿಂಗ ವ್ಯತ್ಯಾಸವಾಗುವುದು ಕಂಡಿದೆ. 'ಗಂಗಾಯಾಂ ಘೋಷಃ' ಎಂದು ಹೇಳಿದಾಗ 'ಗಂಗಾ' ಶಬ್ದಕ್ಕೆ ತೀರದಲ್ಲಿ ಲಕ್ಷಣಾ ಮಾಡುತ್ತೇವೆ. ಆವಾಗ ಸ್ತ್ರೀಲಿಂಗವು ವ್ಯರ್ಥವೆಂದು ಲಿಂಗವ್ಯತ್ಯಾಸವನ್ನು ಮಾಡಿಕೊಳ್ಳುತ್ತೇವೆ. ಅದರಂತೆ ಸಮಿದಾದಿ ಶಬ್ದಗಳಿಂದ ದೇವತೆಗಳು ಪ್ರತಿಪಾದ್ಯರಾದಾಗ ಬಹುವಚನವು ಕೂಡುತ್ತದೆ. ಆದರೆ ಯಾಗವನ್ನು ಹೇಳಿದಾಗ ಬಹುವಚನವು ತಪ್ಪಾಗುತ್ತದೆಂದು ಏಕವಚನಾಂತವಾಗಿ ವ್ಯತ್ಯಾಸ ಮಾಡಿಕೊಳ್ಳಬೇಕಲ್ಲವೇ? ಇದು ತಪ್ಪು.

ಸಮಾಧಾನ - ಪೂರ್ವಮೀಮಾಂಸಕರೇ ಪೌರ್ಣಮಾಸ್ಯಾಧಿಕರಣದ ಪೂರ್ವಪಕ್ಷದಲ್ಲಿ ಹೀಗೆ ಹೇಳಿದ್ದಾರೆ - 'ದರ್ಶಪೂರ್ಣಮಾಸಾಭ್ಯಾಂ ಯಜೇತ' ಎಂಬ ಫಲವಾಕ್ಯವು ಆರು ಯಾಗಗಳನ್ನು ವಿಧಿಸುತ್ತಿದೆ. ಆದರೆ ಆರು ಯಾಗಗಳನ್ನು ಹೇಳುವ ಬಹುವಚನ ಪ್ರಯೋಗವು ಇಲ್ಲಿ ಕಾಣಸುತ್ತಿಲ್ಲ ಹೊರತಾಗಿ ದ್ವಿವಚನ ಪ್ರಯೋಗವಿದೆ. ಇಲ್ಲಿರುವ ದ್ವಿವಚನವನ್ನು ಮೀಮಾಂಸಕರು ಬಹುತ್ವಾರ್ಥದಲ್ಲಿರುವ ವಿಭಕ್ತಿಪ್ರತಿರೂಪಕವಾದ ಅವ್ಯಯವೆಂದು ಹೇಳುತ್ತಾರೆ. ಅದರಂತೆ ಪ್ರಕೃತ ಗ್ರಂಥಕಾರರೂ ಸಹ ಸಮಿದಾದಿ ಶಬ್ದಗಳು ಲಾಕ್ಷಣಿಕವಾಗಿದ್ದರೂ ರೂಢವೆಂದು ಮತ್ತು ಬಹುವಚನ ಪ್ರತಿರೂಪಕವಾದ ಅವ್ಯಯವೆಂದು ಹೇಳಿದ್ದಾರೆ. ಆದ್ದರಿಂದ ವಿರೋಧವಿಲ್ಲವೆಂದು ತಿಳಿಯಬೇಕು. ಅಥವಾ ಸಮಿದಾದಿ ದೇವತೆಗಳಲ್ಲಿ ನಿರೂಢವಾದ್ದರಿಂದ ಗ್ರಂಥಕಾರರ ಮಾತು ತಪ್ಪಾಗುವುದಿಲ್ಲ.

ಗುಹಾಧಿಕರಣ (೧-೨-೩)

**प्रकाशः – द्विवचनस्य सम्भाविताावकाशनिरासेन ''श्रुतेर्निरवकाशत्वात्'' इति टीकां समर्थ्य तदुपलक्षणमिति भावेन लिङ्गान्तरस्यापि तदाह – छायात्वचेति । आतपत्वस्य विद्यावत्त्वेनोपपत्तावपि इदमयुक्तम् । यद्यपि**

**छाया त्वविद्या सम्प्रोक्ता जन्यविद्याऽऽतपस्स्मृतः ।**
**जीवगृध्रस्य तौ पक्षावधऊर्ध्वपथोः पृथक् ।।**
**तौ विष्णोस्तु न विद्येते नित्यं विद्यास्वरूपिणः ।**

**इत्यष्टमस्कन्धपञ्चमाध्यायतात्पर्योक्त्या द्वयमपीशे न युक्तं, तथाऽपि पररीत्यैवमुक्तमिति ध्येयम् । यथोक्तं न्यायविवरणटीकायां – ''छायातपत्वं चाविद्यावत्त्वेन जीवेश्वरयोरुपपद्यते'' इति ।**

ಇಲ್ಲಿಯ ತನಕ 'ಪಿಬಂತೌ' ಎಂಬಲ್ಲಿರುವ ದ್ವಿವಚನ ಶ್ರುತಿಗೆ ಸಾವಕಾಶ್ವತವನ್ನು ನಿರಾಕರಿಸಿ ''ಶ್ರುತೇರ್ನಿರವಕಾಶತ್ವಾತ್'' ಎಂಬ ಟೀಕೆಯನ್ನು ಸಮರ್ಥಿಸಿದರು. ಪ್ರಕೃತ ಈ ಟೀಕಾ ವಾಕ್ಯವು ಉಪಲಕ್ಷಣವಾಗಿದೆಯೆಂದು ತಿಳಿದು ಮತ್ತೊಂದು ಲಿಂಗಕ್ಕೂ ಸಹ ನಿರವಕಾಶತ್ವವನ್ನು ಸಮರ್ಥಿಸುವುದಕ್ಕಾಗಿ 'ಛಾಯಾತ್ವಂಚ' ಇತ್ಯಾದಿ ವಾಕ್ಯವು ಹೊರಟಿದೆ.

'ಛಾಯಾತಪೋ' ಎಂಬಲ್ಲಿರುವ 'ಆತಪ' ಶಬ್ದಕ್ಕೆ ಜ್ಞಾನವುಳ್ಳವನು ಎಂದರ್ಥ. ಇಂತಹ ಆತಪತ್ವವನ್ನು ಪರಮಾತ್ಮನಲ್ಲಿ ಹೇಳಬಹುದು. ಆದರೆ ಛಾಯತ್ವವು ಕೂಡುವುದಿಲ್ಲವೆಂದು ತಿಳಿಯಬೇಕು.

ವಸ್ತುತಃ ಪರಮಾತ್ಮನಲ್ಲಿ ಆತಪತ್ವವೂ ಸಹ ಕೂಡುವುದಿಲ್ಲ.

ಛಾಯಾ ತ್ವವಿದ್ಯಾ ಸಂಪ್ರೋಕ್ತಾ ಜನ್ಯವಿದ್ಯಾಽಽತಪಃಸ್ಮೃತಃ।
ಜೀವಗೃಧ್ರಸ್ಯ ತೌ ಪಕ್ಷಾವಧಊರ್ಧ್ವಪಥೋಃ ಪೃಥಕ್ ॥
ತೌ ವಿಷ್ಣೋಸ್ತು ನ ವಿದ್ಯೇತೇ ನಿತ್ಯಂ ವಿದ್ಯಾಸ್ವರೂಪಿಣಃ।

'ಛಾಯಾ' ಎಂದರೆ 'ಅವಿದ್ಯಾ' ಎಂದರ್ಥ. 'ಆತಪ' ಎಂದರೆ 'ಜನ್ಯವಾದ ಜ್ಞಾನ' ಎಂದರ್ಥ. ಜೀವನೆಂಬ ಗೃಧ್ರಪಕ್ಷಿಯು ಇಂತಹ ಛಾಯಾತಪಗಳನ್ನು ರೆಕ್ಕೆಯನ್ನಾಗಿ ಮಾಡಿಕೊಂಡು ಮೇಲಿನ ಹಾಗೂ ಕೆಳಗಿನ ಲೋಕಗಳಿಗೆ ಹಾರಿ ಹೋಗುತ್ತಾನೆ. ಆದರೆ ವಿಷ್ಣುವಿನಲ್ಲಿ ಇಂತಹ ಛಾಯಾತಪಗಳು ಇರುವುದಿಲ್ಲ. ಏಕೆಂದರೆ ನಿತ್ಯಜ್ಞಾನಸ್ವರೂಪನಾದ್ದರಿಂದ.

ಹೀಗೆ ಅಷ್ಟಮಸ್ಕಂಧದ ಪಂಚಮಾಧ್ಯಾಯದ ಭಾಗವತ ತಾತ್ಪರ್ಯದಲ್ಲಿ ಛಾಯಾತಪಗಳೆರಡನ್ನೂ ವಿಷ್ಣುವಿನಲ್ಲಿ ಅಲ್ಲಗಳೆದಿದ್ದಾರೆ. ಆದರೂ ಸಹ ಗ್ರಂಥಕಾರರು ಪರರು ಹೇಳುವ 'ಆತಪ' ಶಬ್ದಾರ್ಥವನ್ನು ಸ್ವೀಕರಿಸಿ ವಿಷ್ಣುವಿನಲ್ಲಿ ಆತಪತ್ವವನ್ನು ಇದೆ ಎಂದಿದ್ದಾರೆ ಹೊರತು ನಮ್ಮ ಸಿದ್ಧಾಂತದ ಪ್ರಕಾರ ಹೇಳಿರುವುದಲ್ಲ. ಇದನ್ನು ನ್ಯಾಯವಿವರಣೆಯ ಟೀಕಾದಲ್ಲಿ ''ಛಾಯಾತಪತ್ವಂ ಚಾವಿದ್ಯಾವತ್ತ್ವೇನ

ಜೀವೇಶ್ವರಯೋರುಪಪದ್ಯತೇ'' ಛಾಯಾತಪತ್ವಗಳು ಅಜ್ಞಾನ ಹಾಗೂ ಜ್ಞಾನವಿರುವ ಜೀವೇಶ್ವರರಲ್ಲಿ ಕ್ರಮವಾಗಿ ಉಪಪನ್ನವಾಗುತ್ತವೆಂದು ಹೇಳಿರುತ್ತಾರೆ.

**प्रकाशः – तस्मादिति** । प्रातिपदिकार्थप्रत्ययार्थयोर्विष्णुमात्रेऽनवकाशत्वादित्यर्थः । ''नचैवं जीवेशग्रहणेऽप्यनुपपत्तिः'' इत्यादिटीकां व्यनक्ति – **ईश्वरस्येति।**

एकस्य च्छत्रित्वेऽपि तत्साहित्यादन्येष्वपि 'छत्रिणो गच्छन्ति' इति यथा व्यपदेशस्तथा भोक्तृजीवसन्निधानादीश्वरोऽपि तथोपचर्यत इत्यर्थः । निरवकाशविष्णुलिङ्गादिबाध इत्यत आह – **गुहेति** ।

जीवस्यापि ''हृदि ह्येष आत्मा'' इति गुहास्थत्वात् ब्रह्मशब्दस्य ''बृह जातिजीवकमलासन'' इति जीवेऽपि प्रयोगादिति भावः ।।

'ತಸ್ಮಾತ್' ಎಂಬ ಪದಕ್ಕೆ ಪ್ರಾತಿಪದಿಕಾರ್ಥ ಹಾಗೂ ಪ್ರತ್ಯಯಾರ್ಥಗಳಿಗೆ ವಿಷ್ಣುವಿನಲ್ಲಿ ಅವಕಾಶವಿಲ್ಲದ್ದರಿಂದ ಎಂದರ್ಥ. ''ನಚೈವಂ ಜೀವೇಶಗ್ರಹಣೇऽಪ್ಯನುಪಪತ್ತಿಃ'' ಇತ್ಯಾದಿ ಟೀಕೆಯನ್ನು 'ಈಶ್ವರಸ್ಯ' ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

ಒಬ್ಬನು ಛತ್ರಿಯನ್ನು ಹಿಡಿದು ಹೊರಟಾಗ ಅವನ ಜೊತೆಗಿರುವ ಉಳಿದವರು ಛತ್ರಿಯನ್ನು ಧಾರಣೆ ಮಾಡದಿದ್ದರೂ 'ಛತ್ರಿಣೋ ಗಚ್ಛಂತಿ' ಎಂಬ ಪ್ರಯೋಗವು ಲೋಕದಲ್ಲಿ ಕಾಣಸುತ್ತಿದೆ. ಅದರಂತೆ ಭೋಕ್ತೃವಾದ ಜೀವನ ಜೊತೆಗಿರುವ ಈಶ್ವರನು ಅಭೋಕ್ತೃವಾಗಿದ್ದರೂ ಸಹ ಗೌಣವಾಗಿ 'ಭೋಕ್ತಾರೌ' ಎಂದು ಪ್ರಯೋಗಿಸಬಹುದು. ನಿರವಕಾಶವಾದ ವಿಷ್ಣುಲಿಂಗಾದಿಗಳಿಂದ ಶ್ರುತಿಯು ಬಾಧಿತವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಗುಹಾಪ್ರವಿಷ್ಟತ್ವಾತ್' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಜೀವನೂ ಸಹ ಹೃದಯಗುಹಾನಿಹಿತನಾಗಿದ್ದಾನೆಂದು 'ಹೃದಿ ಹ್ಯೇಷ ಆತ್ಮಾ' ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಮತ್ತು 'ಬೃಹಜಾತಿಜೀವ' ಇತ್ಯಾದಿ ಕೋಶದಿಂದ ಬ್ರಹ್ಮಶಬ್ದವು ಜೀವನಲ್ಲಿಯೂ ಪ್ರಸಿದ್ಧವಾಗಿದೆ. ಆದ್ದರಿಂದ ವಿಷ್ಣುವಿನ ಲಿಂಗಗಳು ಜೀವಪಕ್ಷಕ್ಕೆ ಬಾಧಕಗಳಾಗಲಾರವು.

**गुरुराजीयम्** – ननु तथापि अनन्योऽप्यन्यशब्देन तथैको बहुरूपवान् । बहुरूपत्वाच्च न विकारित्वमविरोधश्चेति भाष्ये तच्च वाधूलशाखायामष्टरूपमुदाहृतमित्यादिनाऽनुव्याख्याने च तत्प्रकरणे साक्षादश्रुताया अप्यार्थिकानेकत्वसङ्ख्याया रूपबाहुल्याभिप्रायेण गतिकथनात् । अत्रान्नमयादीनां पूर्वपक्षिणा ब्रह्मत्वाङ्गीकार इदं व्यर्थमेव स्यात् । न चानश्नन्नित्यादेः कर्मफलात्तृत्वं स्वत एवान्यत्रप्रसिद्धमिति। तर्हि द्विवचनश्रुतिसाहित्योक्तिवैयर्थ्यात् । पूर्वाधिकरणेऽत्तृत्वस्यापि प्रतिपादनेनानशनोक्तेर्गतेरपि पूर्वाधिकरणसिद्धान्ताङ्गीकारेणैव पूर्वपक्षिणं प्रति सिद्धत्वात् ।

अद्यतेऽत्तिच भूतानीति श्रुतेः महाभोक्ता महाभोग्य इत्यर्थोऽन्नमये भवेदित्यनुव्याख्यानाच्चात्रान्नमयशब्देनापि ब्रह्मत्वाङ्गीकारे तदनुपपत्तिशङ्काया अनुदयाच्च । अत एव टीकायां पिबन्तावित्येतदुद्देश्यकोटौ निवेशितमित्याद्यरुच्याह – **अथ वेति** ।। **तथाचेति** ।। अन्नमये भोक्तृत्वमप्युपलक्षणीयम् ।

ननु गुरोर्दारा आगता इत्यत्र दारा इति बहुवचनवत् ऋतं पिबन्तावित्यत्र द्विवचनमपि शब्दसाधुत्वेनैव किं न स्यादित्याशङ्क्य दारादिशब्देषु बहुवचनादेशशब्दसाधुतैव नत्वर्थसाधुता । न चार्थसाधुत्वे सम्भवति शब्दसाधुत्वमात्रं युक्तम् । प्रकृते चास्माद्रीत्या जीवेश्वरपरत्वेऽर्थसाधुत्वमपि सम्भवतीति भावेनाह – **नच दारा इत्यादाविति** ।। देवदत्तः पिबन्तावित्यप्रयोगादिति भावः ।

ननु द्विवचनस्य वचनव्यत्ययेन ब्रह्मणि सम्भवात्कथं द्वित्वस्य ब्रह्मपक्षे बाधकतेत्यत आह – **नचेति** ।। बहूनि द्विवचनानि अभ्यसाद्वित्वे निश्चिततात्पर्यकाणीत्यर्थः । अनेकेषामपि द्विवचानां वचनव्यत्ययः सति बाधके सम्भवत्येवेत्यतो बाधकं विनेत्युक्तम् । नच ग्रहं सम्मार्ष्टीत्यत्रोद्देश्यविशेषणभूतस्यैकत्वस्य विवक्षायां सोमगतद्वादश ग्रहणामपि सम्मार्जनाभावापत्त्याऽविवक्षितत्ववत्प्रकृतेऽपि द्वित्वस्याद्देश्यविशेषणत्वेन विवक्षा किं नस्यादित्यतो वैषम्येण परिहरति – **नचेति** ।। **ब्रह्मणीति** ।। तथाच विधेयविशेषणत्वेनोद्देश्य विशेषणत्वमेव नास्तीत्यविवक्षानुपपत्तिरिति ।

ननु सर्वात्तृत्वेन ऋतपानस्यापि प्राप्तत्वेन विधेयत्वानुपपत्त्योद्देश्य-विशेषणत्वमेव वक्तव्यमित्यरुचेराह – **ऋतं पिबन्तावितीति** ।।

किञ्च ग्रहं सम्मार्ष्टीत्यत्र ग्रहं सम्मृज्यात् तच्चैकं कुर्यादित्युभयविधाने वाक्यभेदापत्त्या ग्रहगतैकत्वस्य विधिसंस्पर्शाभावेऽपि ग्रहेष्वेकत्वस्य सत्त्वेनोद्देश्यत्वसम्भवेऽपि प्रकृते ब्रह्मणि द्वित्वस्य स्वरूपत एवाभावान्नोद्देश्यत्वमित्य ाभिप्रेत्य दोषान्तरमाह – **ग्रहैकत्वस्येति** ।।

ननु सूर्यदेवताकयागे अग्नय इत्यादेस्सूर्यायेत्यादिरूपेणोहवत्प्रकृतेऽपि पिबन्ताविति द्विवचनान्तस्याप्येकवचनान्ततयोहः किं न स्यादित्यतो वैषम्येण परिहरति – **नचेति** ।।

**छत्रिन्यायेनेति ॥ छत्र्यच्छात्रसमुदाये छत्रिण इति व्यपदेश-वत्पिबदपिबत्समुदाये पातृत्वव्यपदेशो युक्त इत्यर्थः । साधकमुक्त्वा बाधकं परिहरति – गुहाप्रविष्टत्वेति ॥**




ಆನಂದಮಯಾಧಿಕರಣದಿಂದ ಗುಹಾಧಿಕರಣವು ಗತಾರ್ಥವಾಗುವುದಿಲ್ಲವೆಂದು ಮತ್ತೊಂದು ಬಗೆಯಲ್ಲಿಯೂ ತಿಳಿಯಬಹುದು - ಅನ್ನಮಯಾದಿ ಶಬ್ದಗಳೆಲ್ಲವು ಬ್ರಹ್ಮನ ಅವಯವಗಳನ್ನು ಪ್ರತಿಪಾದಿಸುತ್ತಿವೆ. ಆದ್ದರಿಂದ ಬ್ರಹ್ಮನನ್ನು ಅನ್ನಮಯಾದಿ ಶಬ್ದಗಳಿಂದ ಕರೆಯಲಾಗದೆಂಬ ಪೂರ್ವಪಕ್ಷವನ್ನು ಆನಂದಮಯಾಧಿಕರಣದಲ್ಲಿ ಪರಿಹರಿಸಲಾಗಿದೆ. ಆದರೆ ಈ ಅಧಿಕರಣದಲ್ಲಿ ಅನೇಕತ್ವ ಸಂಖ್ಯೆಯಿಂದ ಒಬ್ಬನೇ ಬ್ರಹ್ಮನು ಅನ್ನಮಯಾದಿಶಬ್ದಗಳಿಂದ ಪ್ರತಿಪಾದ್ಯನಾಗಲಾರನೆಂಬ ಆಕ್ಷೇಪವನ್ನು ಪರಿಹರಿಸಲಾಗಿದೆ. ಆದ್ದರಿಂದ ಈ ಅಧಿಕರಣದಲ್ಲಿ ದ್ವಿತ್ವ ಅನೇಕತ್ವ ಮೊದಲಾದ ಸಂಖ್ಯೆಗಳಿಂದ ಬ್ರಹ್ಮನು ಶ್ರುತಿಪ್ರತಿಪಾದ್ಯನಲ್ಲ ಎಂಬ ಪೂರ್ವಪಕ್ಷವು ನಿರವಕಾಶವಾಗಿದೆಯೆಂದು ಸಿದ್ಧವಾಯಿತು.

೧. 'ಪಿಬಂತೌ' ಎಂಬಲ್ಲಿರುವ ದ್ವಿವಚನವು ಶಬ್ದಸಾಧುತ್ವ ಮಾತ್ರದಿಂದ ನಿವಿಷ್ಟವಾಗಿದೆಯೆಂದು ಹೇಳಬೇಕು.

೨. ವಸ್ತುತಃ ಏಕವಚನಾಂತ ಶಬ್ದವಾಗಿದ್ದರೂ ಸಹ ಛಾಂದಸವಾದ್ದರಿಂದ ದ್ವಿವಚನವಾಗಿದೆ.

೩. ದ್ವಿತ್ವವನ್ನು ಬೋಧಿಸಿದರೂ ಸಹ ಉದ್ದೇಶದಲ್ಲಿ ವಿಶೇಷಣವಾಗಿದ್ದರಿಂದ ದ್ವಿತ್ವವನ್ನು ವಿವಕ್ಷಿಸಬೇಕಾಗಿಲ್ಲ.

೪. ಹಿಂದಿನ ಮುಂದಿನ ವಾಕ್ಯಗಳಲ್ಲಿ ಏಕವಚನಾಂತವಾದ ಪದಗಳೇ ಪ್ರಸಕ್ತವಾಗದ್ದರಿಂದ ಅವುಗಳಿಂದ ಸಂದಷ್ಟವಾದ 'ಪಿಂಬತೌ' ಎಂಬುದೂ ಸಹ ಏಕತ್ವವನ್ನೇ ತಿಳಿಸುತ್ತದೆ. ಹೊರತು ದ್ವಿವಚನವಿರುವುದರಿಂದ ದ್ವಿತ್ವವನ್ನು ತಿಳಿಸುವುದಿಲ್ಲ.

೫. ದ್ವಿವಚನಕ್ಕೆ ಪ್ರತಿರೂಪಕವಾದ ಅವ್ಯವಾಗಿದೆ. ಅಂದರೆ ದ್ವಿವಚನದಂತೆ ಕಾಣಿಸುತ್ತದೆ ಹೊರತು ದ್ವಿವಚನ ಪ್ರತ್ಯಯವಲ್ಲ.

ಈ ಐದು ಕಾರಣಗಳಿಂದ ದ್ವಿವಚನಶ್ರುತಿಯನ್ನು ಸಾವಕಾಶವೆನ್ನಬಹುದು. ಆದರೆ ಬಾಧಕವಿಲ್ಲದ ಕಾರಣ ಶಬ್ದಸಾಧುತ್ವಕ್ಕೋಸ್ಕರ ದ್ವಿವಚನ ಪ್ರತ್ಯಯವೆಂಬ ಮೊದಲನೆಯ ಪಕ್ಷವು ನಿರಾಕರಣವಾಗುತ್ತದೆ. ಮತ್ತು ಬಾಧಕವಿಲ್ಲದೇ ವಿಭಕ್ತಿವ್ಯತ್ಯಾಸವನ್ನು ಮಾಡಬಾರದು. ಆದ್ದರಿಂದ ಎರಡನೇ ಪಕ್ಷವು ನಿರಾಕೃತವಾಗುತ್ತದೆ. 'ಪಿಬಂತೌ' ಎಂಬುದನ್ನು ಉದ್ದೇಶವೆಂದೇ ಹೇಳಲಾಗದ ಕಾರಣ ಉದ್ದೇಶವಿಶೇಷಣವಾದ್ದರಿಂದ ದ್ವಿತ್ವವು ಅವಿವಕ್ಷಿತವೆಂಬ ಮೂರನೇ ಪಕ್ಷವು ನಿರಾಕೃತವಾಗುತ್ತದೆ. ಅತಿದೇಶದಿಂದ ಪ್ರಾಪ್ತವಾಗಿದ್ದರೆ ಮಾತ್ರ ಏಕತ್ವ ಸಂಖ್ಯೆಯನ್ನು ಊಹಿಸಬಹುದಿತ್ತು. ಆದರೆ ಇದೇ ಮೊದಲು

ಶ್ರುತಿಯಲ್ಲಿ 'ಪಿಬಂತೌ' ಎಂದು ಪ್ರಸಕ್ತವಾಗುತ್ತಿರುವುದರಿಂದ ನಾಲ್ಕನೇ ಪಕ್ಷವು ನಿರಾಕೃತವಾಗುತ್ತದೆ. 'ಪಿಬಂತೌ' ಎಂಬ ಪದವು ಯೌಗಿಕವಾದ್ದರಿಂದ ದ್ವಿವಚನ ಪ್ರತಿರೂಪಕವಾದ ಅವ್ಯಯವೆಂದು ಹೇಳಲಾಗದ ಕಾರಣ ಐದನೇ ಪಕ್ಷವು ನಿರಾಕೃತವಾಗುತ್ತದೆ. ಆದ್ದರಿಂದ 'ಋತಂ ಪಿಬಂತೌ' ಎಂಬ ಶ್ರುತಿಯು ಜೀವೇಶ್ವರರನ್ನೇ ಪ್ರತಿಪಾದಿಸುತ್ತದೆ. ಗುಹಾಪ್ರವಿಷ್ಟತ್ವ ಬ್ರಹ್ಮಶಬ್ದಾದಿಗಳು ಜೀವವಿಷಯದಲ್ಲಿ ಬಾಧಕವಾಗಿರುವುದಿಲ್ಲ.

• • • • •

## ಸಂದಂಶ ನ್ಯಾಯದಿಂದ ವಿಷ್ಣುವೇ ದ್ವಿವಚನಶ್ರುತಿ ಪ್ರತಿಪಾದ್ಯನೆಂದು ಸಿದ್ಧಾಂತ

### तात्पर्यचन्द्रिका

सिद्धान्तस्तु –

गुहावेशाद्ब्रह्मशब्दात् सेतुत्वादक्षरत्वतः ।
पारत्वादभयत्वाच्च ब्रह्मैवात्र निगद्यते ॥

गुहानिहितत्वं यद्यपि जीवेऽप्यस्ति तथाऽपि "यो वेद निहितं गुहायाम्" "गुहाहितं गह्वरेष्ठं पुराणं" "गुहां प्रविश्य तिष्ठन्तं" इत्यादिश्रुतिषु ब्रह्मण्येव तस्य प्रसिद्धत्वात्, तेन ब्रह्मत्वसिद्धिः । नहि 'मैथिलः' इत्युक्ते यः कश्चिन्मिथिलाभवो भासते, किन्तु यस्तत्र प्रसिद्धस्तदधीश्वरः ।

यस्सेतुरीजानानामक्षरं ब्रह्म तत्परम् ।
अभयं तितीर्षतां पारं .............. ॥

इत्युत्तरवाक्ये च परत्वेन विशेषणात् परब्रह्मण्येव ब्रह्मशब्दः । सेतुत्वादिकं तु "एष सेतुः" इत्यादिश्रुतिभिः ब्रह्मलिङ्गत्वेन निश्चितम् । न चोत्तरत्र "यस्सेतुः" इत्यादिभिः पूर्वत्र च "यस्य ब्रह्म च क्षत्रं च" इत्यादिभिः ब्रह्ममात्रविषयैर्वाक्यैः सन्दष्टं "ऋतं पिबन्तौ" इत्यादिकं बाधकाभावेऽप्यब्रह्मविषयमिति युक्तम् ।

ಅನುವಾದ -

ಗುಹಾವೇಶಾದ್ಬ್ರಹ್ಮಶಬ್ದಾತ್ ಸೇತುತ್ವಾದಕ್ಷರತ್ವತಃ ।
ಪಾರತ್ವಾದಭಯತ್ವಾಚ್ಚ ಬ್ರಹ್ಮೈವಾತ್ರ ನಿಗದ್ಯತೇ ॥

ಹೃದಯದಲ್ಲಿ ಗುಹಾಪ್ರವಿಷ್ಟನಾದ್ದರಿಂದ ಬ್ರಹ್ಮಶಬ್ದಪ್ರತಿಪಾದ್ಯನಾದ್ದರಿಂದ ಸಕಲರಿಗೂ ಆಶ್ರಯನಾದ್ದರಿಂದ ನಾಶರಹಿತನಾದ್ದರಿಂದ ಸರ್ವೋತ್ತಮನಾದ್ದರಿಂದ ಭಯರಹಿತನಾದ್ದರಿಂದ ಬ್ರಹ್ಮನೇ ದ್ವಿವಚನಶ್ರುತಿಯಿಂದ ಪ್ರತಿಪಾದ್ಯನಾಗಿದ್ದಾನೆ.

ವಸ್ತುತಃ ಗುಹಾನಿಹಿತತ್ವವು ಜೀವಧರ್ಮವಾಗಿದೆ. ಆದರೆ "ಯೋ ವೇದ ನಿಹಿತಂ ಗುಹಾಯಾಮ್" "ಗುಹಾನಿಹಿತಂ ಗುಹ್ವರೇಷ್ಠಂ ಪುರಾಣಂ" "ಗುಹಾಂ ಪ್ರವಿಶ್ಯ ತಿಷ್ಠಂತೀ" ಇತ್ಯಾದಿ ಶ್ರುತಿಯಲ್ಲಿ ಬ್ರಹ್ಮನಲ್ಲಿಯೇ ಹೃದಯಗುಹಾನಿಹಿತತ್ವವು ಮುಖ್ಯವಾಗಿ ಪ್ರಸಿದ್ಧವಾಗಿದೆ. ಆದ್ದರಿಂದ ಬ್ರಹ್ಮನೇ ಗುಹಾನಿಹಿತನೆಂದು ಸಿದ್ಧವಾಗುತ್ತದೆ. 'ಮೈಥಿಲಃ' ಎಂಬ ಶಬ್ದಕ್ಕೆ ಮಿಥಿಲಾನಗರದಲ್ಲಿ ಹುಟ್ಟಿದವನೆಂದು ಅರ್ಥ. ಆದರೆ ಮಿಥಿಲಾನಗರದಲ್ಲಿ ಹುಟ್ಟಿದ ಎಲ್ಲರಲ್ಲಿಯೂ 'ಮೈಥಿಲಃ' ಎಂಬ ಶಬ್ದವನ್ನು ಪ್ರಯೋಗಿಸುವುದಿಲ್ಲ ಹೊರತಾಗಿ ಮಿಥಿಲಾನಗರದಲ್ಲಿ ಪ್ರಸಿದ್ಧನಾದ ರಾಜನಲ್ಲಿ ಮಾತ್ರ ಅವನನ್ನೇ 'ಮೈಥಿಲಃ' ಎಂದು ಪ್ರಯೋಗಿಸಲಾಗುತ್ತದೆ. ಅದರಂತೆ ಜೀವ ಹಾಗೂ ಈಶ್ವರರಿಬ್ಬರೂ ಹೃದಯಗುಹಾನಿಹಿತರಾಗಿದ್ದರೂ ಶ್ರುತಿಪ್ರಸಿದ್ಧನಾದ ಈಶ್ವರನೇ ಗುಹಾನಿಹಿತನೆಂದು ಪರಿಗಣಿಸಬೇಕು.

ಯಸ್ಸೇತುರೀಜಾನಾನಾಮಕ್ಷರಂ ಬ್ರಹ್ಮ ತತ್ಪರಮ್ ।
ಅಭಯಂ ತಿತೀರ್ಷತಾಂ ಪಾರಂ ................ ॥

ಎಂಬುದಾಗಿ ಮುಂದಿನ ಶ್ರುತಿಯಲ್ಲಿ ಬ್ರಹ್ಮನಲ್ಲಿ ಪರತ್ವವು ವಿಶೇಷಣವಾಗಿರುವುದರಿಂದ ಪರಬ್ರಹ್ಮನನ್ನೇ ಬ್ರಹ್ಮಶಬ್ದದಿಂದ ವಿವಕ್ಷಿಸಬೇಕು. ಹೇತುತ್ವಾದಿಗಳೂ ಸಹ "ಏಷ ಸೇತುಃ" ಇತ್ಯಾದಿಗಳ ಬಲಗಳಿಂದ ಬ್ರಹ್ಮನ ಲಿಂಗಗಳೆಂದೇ ನಿಶ್ಚಯವಾಗಿದೆ. 'ಯಸ್ಸೇತುಃ' ಇತ್ಯಾದಿಯಾದ ಮುಂದಿನ ವಾಕ್ಯಗಳಿಂದ "ಯಸ್ಯ ಬ್ರಹ್ಮ ಚ ಕ್ಷತ್ರಂ ಚ" ಎಂಬ ಹಿಂದಿನ ವಾಕ್ಯಗಳಿಂದ ಬ್ರಹ್ಮನೊಬ್ಬನೇ ಪ್ರತಿಪಾದ್ಯನಾಗುತ್ತಿರುವಾಗ ಇವುಗಳಿಂದ ಸಂದಷ್ಟನಾದ "ಋತಂ ಪಿಬಂತೌ" ಎಂಬ ಮಧ್ಯದಲ್ಲಿರುವ ದ್ವಿವಚನ ಶ್ರುತಿಯು ಬ್ರಹ್ಮನನ್ನೇ ಪ್ರತಿಪಾದಿಸಬೇಕು. ಯಾವುದೇ ಬಾಧಕವಿಲ್ಲದಿದ್ದರೂ ಬ್ರಹ್ಮನನ್ನು ಪ್ರತಿಪಾದಿಸುವುದಿಲ್ಲವೆಂದು ಹೇಳುವುದು ಅಯುಕ್ತವಾಗುತ್ತದೆ.

**प्रकाशः –**

निरवकाशभगवल्लिङ्गैः प्रकृतिप्रत्ययार्थौ कथञ्चिन्नेयाविति भावेन सूत्रोक्तान् सिद्धान्तहेतून् सङ्गृह्णाति – **गुहावेशादिति** ।

आद्यसूत्रोक्तोऽयं हेतुः । द्वितीयसूत्रोक्तानाह – **ब्रह्मेति** । टीकोपलक्षणं, भाष्ये "परं" इत्यन्तोक्तेः तत्त्वप्रदीपे "अक्षरशब्देन विशेषणाच्च" इत्युक्तेरिति भावः ।

ವಿವರಣೆ - 'ಋತಂ ಪಿಬಂತೌ' ಎಂಬ ಶ್ರುತಿಯಿಂದ ಪ್ರತಿಪಾದ್ಯನಾದವನು ಭಗವಂತನೇ ಆಗಿದ್ದಾನೆಂದು ಸಿದ್ಧಾಂತ ಮಾಡುತ್ತಿದ್ದಾರೆ. ನಿರವಕಾಶವಾಗಿರುವ ಅನೇಕ ಲಿಂಗಗಳು ವಿಷ್ಣುವಿನಲ್ಲಿ ಕೇಳಿಸುತ್ತಿವೆ. ಆದ್ದರಿಂದ 'ಪಿಬಂತೌ' ಎಂಬಲ್ಲಿರುವ ಪ್ರಕೃತಿಪ್ರತ್ಯಯಾರ್ಥಗಳನ್ನು ವಿಷ್ಣುವಿನಲ್ಲಿ ಹೇಗಾದರೂ ಸಮನ್ವಯ ಮಾಡಬಹುದೆಂಬ ಅಭಿಪ್ರಾಯದಿಂದ ಸೂತ್ರದಲ್ಲೇ ಹೇಳಿದ ಸಿದ್ಧಾಂತ ಹೇತುಗಳನ್ನು 'ಗುಹಾವೇಶಾತ್' ಇತ್ಯಾದಿ ವಾಕ್ಯದಿಂದ ಸಂಗ್ರಹಿಸುತ್ತಿದ್ದಾರೆ.

ಮೊದಲನೆಯ ಸೂತ್ರದಲ್ಲಿ ಹೇಳಲ್ಪಟ್ಟ ಹೇತುವನ್ನು 'ಗುಹಾವೇಶಾತ್' ಎಂಬುದರಿಂದ ಹೇಳಿದ್ದಾರೆ. ಎರಡನೆಯ ಸೂತ್ರದಲ್ಲಿ ಹೇಳಲ್ಪಟ್ಟ ಅನೇಕ ಹೇತುಗಳನ್ನು 'ಬ್ರಹ್ಮಶಬ್ದಾತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಟೀಕೆಯಲ್ಲಿಯೂ ಸಹ ಉಪಲಕ್ಷಣಯಾ ಎಲ್ಲ ಹೇತುಗಳನ್ನು ವಿವಕ್ಷಿಸಬೇಕು. ಏಕೆಂದರೆ ಭಾಷ್ಯದಲ್ಲಿ 'ಪರಂ' ಎಂಬಲ್ಲಿಯ ತನಕ ಶ್ರುತಿಯನ್ನು ಉಲ್ಲೇಖಿಸಿದ್ದಾರೆ. ತತ್ತ್ವಪ್ರದೀಪದಲ್ಲಿಯೂ "ಅಕ್ಷರ ಶಬ್ದೇನ ವಿಶೇಷಣಾಚ್ಚ" ಅಕ್ಷರ ಶಬ್ದವು ಬ್ರಹ್ಮನಲ್ಲಿ ವಿಶೇಷಣವಾದ್ದರಿಂದ ಎಂದು ಹೇಳಿದ್ದಾರೆ. ಆದ್ದರಿಂದ ಗ್ರಂಥಕಾರರು ಇಲ್ಲಿ ಹೇಳಿರುವ ಹೇತುಗಳೆಲ್ಲವು ಭಾಷ್ಯಕಾರರಿಗೆ ಸಮ್ಮತವಾದ್ದರಿಂದ ಟೀಕೆಯಲ್ಲಿಯೂ ಉಪಲಕ್ಷಣಯಾ ಇಟ್ಟುಕೊಳ್ಳಬೇಕು.

**प्रकाशः – 'अत्र'** पिबन्तावित्यत्र । ननूक्तं गुहाप्रविष्टत्वं जीवेऽपि युक्तमित्यतः प्रसिद्धवाचकसौत्रहिशब्दसूचितं तन्निरवकाशत्वं न्यायविवरणटीकोक्तरीत्या साधयति **– गुहेति । यो वेदेति ।** "ब्रह्मविदाप्नोति परं" इति पूर्वत्र ब्रह्मण एव तत्र प्रस्तुतत्वादिति भावः ।

'ಅತ್ರ' ಎಂಬ ಪದಕ್ಕೆ 'ಪಿಬಂತೌ ಎಂಬಲ್ಲಿ' ಎಂದರ್ಥ.

ಶಂಕೆ - ಗುಹಾಪ್ರವಿಷ್ಟತ್ವವನ್ನು ಜೀವನಲ್ಲಿಯೂ ಸಹ ಪೂರ್ವಪಕ್ಷದ ಸಂದರ್ಭದಲ್ಲಿ ನಾವು ಸಮರ್ಥಿಸಿದ್ದೇವಲ್ಲವೇ?

ಸಮಾಧಾನ - ಜೀವ ಹಾಗೂ ಪರಮಾತ್ಮ ಇಬ್ಬರು ಗುಹಾವಿಷ್ಟರಾಗಿದ್ದರೂ ಪರಮಾತ್ಮನಲ್ಲೇ ಗುಹಾವಿಷ್ಟತ್ವವು ಶ್ರುತಿಪ್ರಸಿದ್ಧವಾಗಿದೆ. ಪ್ರಸಿದ್ಧವಾದ ಅರ್ಥವನ್ನೇ ಸ್ವೀಕರಿಸಬೇಕಾದ್ದರಿಂದ ಗುಹಾವಿಷ್ಟತ್ವವು ವಿಷ್ಣುವಿನ ನಿರವಕಾಶಲಿಂಗವೇ ಆಗಿದೆ. ಈ ವಿಷಯವನ್ನು ಸೂತ್ರದಲ್ಲಿ 'ಹಿ' ಶಬ್ದವು ಸೂಚಿಸುತ್ತದೆ. ಮತ್ತು ನ್ಯಾಯವಿವರಣಟೀಕೆಯಲ್ಲಿಯೂ ಇದನ್ನೇ ಸಾಧಿಸಿದ್ದಾರೆ. ಅದನ್ನೇ ಪ್ರಕೃತ ಗ್ರಂಥಕಾರರು 'ಗುಹಾನಿಹಿತತ್ವಂ' ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಯೋ ವೇದ ನಿಹಿತಂ' ಎಂಬ ಶ್ರುತಿಯಿಂದ ಪ್ರಸಿದ್ಧನಾದವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ "ಬ್ರಹ್ಮವಿದಾಪ್ನೋತಿ ಪರಂ" ಎಂಬುದಾಗಿ ಹಿಂದೆ ಪರಬ್ರಹ್ಮನೇ ಪ್ರಸಕ್ತನಾಗಿದ್ದಾನೆ.

**प्रकाशः –** ननु 'ब्रह्मशब्दात्' इत्ययुक्तं, तस्यापि प्राक् सावकाशत्वादित्यतो "विशेषणाच्च" इत्यस्यार्थान्तरमुपेत्य तस्य निरवकाशत्वमाह **– यस्सेतुरिति ।**

यद्यपि ''ब्रह्म यत्परं'' इत्येतावदेवोपयुक्तं, तथाऽपि सेतुत्वादिस्फोरणाय कृत्स्नवाक्योक्तिः ।

ಪ್ರಶ್ನೆ - ಬ್ರಹ್ಮಶಬ್ದವನ್ನು ವಿಷ್ಣುವಿನ ನಿರವಕಾಶಲಿಂಗವೆಂದು ಹೇಳಿದ್ದೂ ಸಹ ತಪ್ಪು. ಪೂರ್ವಪಕ್ಷ ಮಾಡುವಾಗ ಇದನ್ನು ಜೀವನಲ್ಲಿ ಸಾವಕಾಶವೆಂದು ಹೇಳಲಾಗಿದೆಯಲ್ಲವೇ?

ಉತ್ತರ - ಬ್ರಹ್ಮಶಬ್ದವು ವಿಷ್ಣುವಿನ ನಿರವಕಾಶಲಿಂಗವೇ ಆಗಿದೆಯೆಂಬುದನ್ನು 'ಯಸ್ಸೇತುಃ' ಇತ್ಯಾದಿ ವಾಕ್ಯಗಳಿಂದ ಸಮರ್ಥಿಸುತ್ತಿದ್ದಾರೆ. ''ವಿಶೇಷಣಾಚ್ಚ'' ಎಂಬ ಎರಡನೆಯ ಸೂತ್ರಕ್ಕೆ ಬ್ರಹ್ಮನಲ್ಲಿ ಪರತ್ವವನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ ಎಂಬುದಾಗಿ ಮತ್ತೊಂದು ಅರ್ಥವನ್ನು ಅಂಗೀಕರಿಸಿ ವ್ಯಾಖ್ಯಾನಿಸುತ್ತಿದ್ದಾರೆ. ವಸ್ತುತಃ ಗ್ರಂಥದದಲ್ಲಿ ''ಬ್ರಹ್ಮ ಯತ್ಪರಂ'' ಎಂದಷ್ಟೇ ಶ್ರುತಿಯಲ್ಲಿ ಉಲ್ಲೇಖಿಸಿದ್ದರೆ ಸಾಕಾಗುತ್ತಿತ್ತು. ಆದರೂ ಸಹ ಹೇತುತ್ವವೇ ಮೊದಲಾದ ಲಿಂಗಗಳು ಬ್ರಹ್ಮನಲ್ಲಿವೆ ಎಂದು ತೋರಿಸುವುದಕ್ಕಾಗಿ ಸಂಪೂರ್ಣ ಶ್ರುತಿಯನ್ನು ಉಲ್ಲೇಖಿಸಿದ್ದಾರೆ.

**प्रकाशः** – यद्यपि भाष्यादौ केवलब्रह्मशब्द एव निरवकाश इत्युक्तं, तथाऽपि तदपरित्यागेन

ब्रह्मवित्परमाप्नोतीति यत्प्रथमसूचितम् ।

इत्यानन्दमयनयानुभाष्यसुधयोरुक्तरीत्योपायान्तरप्रदर्शनमेतदित्यदोषः ।

ವಸ್ತುತಃ ಭಾಷ್ಯಾದಿಗಳಲ್ಲಿ ಕೇವಲ ಬ್ರಹ್ಮಶಬ್ದವನ್ನೇ ನಿರವಕಾಶವೆಂದು ಹೇಳಿದಂತೆ ಕಾಣಿಸುತ್ತದೆ. ಆದರೂ ಸಹ ಇದನ್ನು ಬಿಡದೆ ''ಬ್ರಹ್ಮವಿತ್ಪರಮಾಪ್ನೋತೀತಿ ಯತ್ಪ್ರಥಮಸೂಚಿತಮ್'' ಎಂಬ ಆನಂದಮಯಾಧಿಕರಣದ ಅನುವ್ಯಾಖ್ಯಾನ ಹಾಗೂ ಸುಧೆಗಳಲ್ಲಿ ಹೇಳಿದ ಪ್ರಕಾರ ಇವುಗಳನ್ನು ಬೇರೆ ಕಾರಣಗಳೆಂದು ತಿಳಿಯಬೇಕು. ಆದ್ದರಿಂದ ಟೀಕಾಕಾರರಿಗೆ ಮತ್ತು ಭಾಷ್ಯಕಾರರಿಗೆ ಈ ಹೇತುಗಳು ಸಮ್ಮತವೇ ಆಗಿವೆ.

**प्रकाशः** – सेतुत्वादेर्निरवकाशत्वं व्यनक्ति – सेतुत्वेति । ''धृतेश्च'' इति दहरनयगुणसूत्रे ''एष सेतुर्विधृतिरेषां लोकानां असम्भेदाय'' इति सर्वाश्रयत्वरूपसेतुत्वस्य, उत्तराधिकरणे ''एतदमृतमभयमेतद्ब्रह्म'' इत्यभयत्वस्य, अदृश्यत्वाद्यधिकरणे ''यया तदक्षरमधिगम्यते इत्यक्षरत्वस्य विष्णौ सेत्स्यमानत्वाद्विष्णोरन्यत्रानवकाशमित्यर्थः ।

अक्षयाद्रतिरूपत्वादक्षेषु रमणादपि ।
अक्षरं भगवान् विष्णुरोमित्युच्चत्वहेतुतः ।।

इति स्मृतेश्चेति ।

ವಿವರಣೆ - 'ಋತಂ ಪಿಬಂತೌ' ಎಂಬ ಶ್ರುತಿಯಿಂದ ಪ್ರತಿಪಾದ್ಯನಾದವನು ಭಗವಂತನೇ ಆಗಿದ್ದಾನೆಂದು ಸಿದ್ಧಾಂತ ಮಾಡುತ್ತಿದ್ದಾರೆ. ನಿರವಕಾಶವಾಗಿರುವ ಅನೇಕ ಲಿಂಗಗಳು ವಿಷ್ಣುವಿನಲ್ಲಿ ಕೇಳಿಸುತ್ತಿವೆ. ಆದ್ದರಿಂದ 'ಪಿಬಂತೌ' ಎಂಬಲ್ಲಿರುವ ಪ್ರಕೃತಿಪ್ರತ್ಯಯಾರ್ಥಗಳನ್ನು ವಿಷ್ಣುವಿನಲ್ಲಿ ಹೇಗಾದರೂ ಸಮನ್ವಯ ಮಾಡಬಹುದೆಂಬ ಅಭಿಪ್ರಾಯದಿಂದ ಸೂತ್ರದಲ್ಲೇ ಹೇಳಿದ ಸಿದ್ಧಾಂತ ಹೇತುಗಳನ್ನು 'ಗುಹಾವೇಶಾತ್' ಇತ್ಯಾದಿ ವಾಕ್ಯದಿಂದ ಸಂಗ್ರಹಿಸುತ್ತಿದ್ದಾರೆ.

ಮೊದಲನೆಯ ಸೂತ್ರದಲ್ಲಿ ಹೇಳಲ್ಪಟ್ಟ ಹೇತುವನ್ನು 'ಗುಹಾವೇಶಾತ್' ಎಂಬುದರಿಂದ ಹೇಳಿದ್ದಾರೆ. ಎರಡನೆಯ ಸೂತ್ರದಲ್ಲಿ ಹೇಳಲ್ಪಟ್ಟ ಅನೇಕ ಹೇತುಗಳನ್ನು 'ಬ್ರಹ್ಮಶಬ್ದಾತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಟೀಕೆಯಲ್ಲಿಯೂ ಸಹ ಉಪಲಕ್ಷಣಯಾ ಎಲ್ಲ ಹೇತುಗಳನ್ನು ವಿವಕ್ಷಿಸಬೇಕು. ಏಕೆಂದರೆ ಭಾಷ್ಯದಲ್ಲಿ 'ಪರಂ' ಎಂಬಲ್ಲಿಯ ತನಕ ಶ್ರುತಿಯನ್ನು ಉಲ್ಲೇಖಿಸಿದ್ದಾರೆ. ತತ್ತ್ವಪ್ರದೀಪದಲ್ಲಿಯೂ "ಅಕ್ಷರ ಶಬ್ದೇನ ವಿಶೇಷಣಾಚ್ಚ" ಅಕ್ಷರ ಶಬ್ದವು ಬ್ರಹ್ಮನಲ್ಲಿ ವಿಶೇಷಣವಾದ್ದರಿಂದ ಎಂದು ಹೇಳಿದ್ದಾರೆ. ಆದ್ದರಿಂದ ಗ್ರಂಥಕಾರರು ಇಲ್ಲಿ ಹೇಳಿರುವ ಹೇತುಗಳೆಲ್ಲವು ಭಾಷ್ಯಕಾರರಿಗೆ ಸಮ್ಮತವಾದ್ದರಿಂದ ಟೀಕೆಯಲ್ಲಿಯೂ ಉಪಲಕ್ಷಣಯಾ ಇಟ್ಟುಕೊಳ್ಳಬೇಕು.

**प्रकाशः – 'अत्र' पिबन्तावित्यत्र । ननूक्तं गुहाप्रविष्टत्वं जीवेऽपि युक्तमित्यतः प्रसिद्धवाचकसौत्रहिशब्दसूचितं तन्निरवकाशत्वं न्यायविवरणटीकोक्तरीत्या साधयति – गुहेति । यो वेदेति । "ब्रह्मविदाप्नोति परं" इति पूर्वत्र ब्रह्मण एव तत्र प्रस्तुतत्वादिति भावः ।**

'ಅತ್ರ' ಎಂಬ ಪದಕ್ಕೆ 'ಪಿಬಂತೌ ಎಂಬಲ್ಲಿ' ಎಂದರ್ಥ.

ಶಂಕೆ - ಗುಹಾಪ್ರವಿಷ್ಟತ್ವವನ್ನು ಜೀವನಲ್ಲಿಯೂ ಸಹ ಪೂರ್ವಪಕ್ಷದ ಸಂದರ್ಭದಲ್ಲಿ ನಾವು ಸಮರ್ಥಿಸಿದ್ದೇವಲ್ಲವೇ?

ಸಮಾಧಾನ - ಜೀವ ಹಾಗೂ ಪರಮಾತ್ಮ ಇಬ್ಬರು ಗುಹಾವಿಷ್ಟರಾಗಿದ್ದರೂ ಪರಮಾತ್ಮನಲ್ಲೇ ಗುಹಾವಿಷ್ಟತ್ವವು ಶ್ರುತಿಪ್ರಸಿದ್ಧವಾಗಿದೆ. ಪ್ರಸಿದ್ಧವಾದ ಅರ್ಥವನ್ನೇ ಸ್ವೀಕರಿಸಬೇಕಾದ್ದರಿಂದ ಗುಹಾವಿಷ್ಟತ್ವವು ವಿಷ್ಣುವಿನ ನಿರವಕಾಶಲಿಂಗವೇ ಆಗಿದೆ. ಈ ವಿಷಯವನ್ನು ಸೂತ್ರದಲ್ಲಿ 'ಹಿ' ಶಬ್ದವು ಸೂಚಿಸುತ್ತದೆ. ಮತ್ತು ನ್ಯಾಯವಿವರಣಟೀಕೆಯಲ್ಲಿಯೂ ಇದನ್ನೇ ಸಾಧಿಸಿದ್ದಾರೆ. ಅದನ್ನೇ ಪ್ರಕೃತ ಗ್ರಂಥಕಾರರು 'ಗುಹಾನಿಹಿತತ್ವಂ' ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಯೋ ವೇದ ನಿಹಿತಂ' ಎಂಬ ಶ್ರುತಿಯಿಂದ ಪ್ರಸಿದ್ಧನಾದವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ "ಬ್ರಹ್ಮವಿದಾಪ್ನೋತಿ ಪರಂ" ಎಂಬುದಾಗಿ ಹಿಂದೆ ಪರಬ್ರಹ್ಮನೇ ಪ್ರಸಕ್ತನಾಗಿದ್ದಾನೆ.

**प्रकाशः – ननु 'ब्रह्मशब्दात्' इत्ययुक्तं, तस्यापि प्राक् सावकाशत्वादित्यतो "विशेषणाच्च" इत्यस्यार्थान्तरमुपेत्य तस्य निरवकाशत्वमाह – यस्सेतुरिति ।**

यद्यपि "ब्रह्म यत्परं" इत्येतावदेवोपयुक्तं, तथाऽपि सेतुत्वादिस्फोरणाय कृत्स्नवाक्योक्तिः ।

ಪ್ರಶ್ನೆ - ಬ್ರಹ್ಮಶಬ್ದವನ್ನು ವಿಷ್ಣುವಿನ ನಿರವಕಾಶಲಿಂಗವೆಂದು ಹೇಳಿದ್ದೂ ಸಹ ತಪ್ಪು. ಪೂರ್ವಪಕ್ಷ ಮಾಡುವಾಗ ಇದನ್ನು ಜೀವನಲ್ಲಿ ಸಾವಕಾಶವೆಂದು ಹೇಳಲಾಗಿದೆಯಲ್ಲವೇ?

ಉತ್ತರ - ಬ್ರಹ್ಮಶಬ್ದವು ವಿಷ್ಣುವಿನ ನಿರವಕಾಶಲಿಂಗವೇ ಆಗಿದೆಯೆಂಬುದನ್ನು 'ಯಸ್ಸೇತುಃ' ಇತ್ಯಾದಿ ವಾಕ್ಯಗಳಿಂದ ಸಮರ್ಥಿಸುತ್ತಿದ್ದಾರೆ. "ವಿಶೇಷಣಾಚ್ಚ" ಎಂಬ ಎರಡನೆಯ ಸೂತ್ರಕ್ಕೆ ಬ್ರಹ್ಮನಲ್ಲಿ ಪರತ್ವವನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ ಎಂಬುದಾಗಿ ಮತ್ತೊಂದು ಅರ್ಥವನ್ನು ಅಂಗೀಕರಿಸಿ ವ್ಯಾಖ್ಯಾನಿಸುತ್ತಿದ್ದಾರೆ. ವಸ್ತುತಃ ಗ್ರಂಥದದಲ್ಲಿ "ಬ್ರಹ್ಮ ಯತ್ಪರಂ" ಎಂದಷ್ಟೇ ಶ್ರುತಿಯಲ್ಲಿ ಉಲ್ಲೇಖಿಸಿದ್ದರೆ ಸಾಕಾಗುತ್ತಿತ್ತು. ಆದರೂ ಸಹ ಹೇತುತ್ವವೇ ಮೊದಲಾದ ಲಿಂಗಗಳು ಬ್ರಹ್ಮನಲ್ಲಿವೆ ಎಂದು ತೋರಿಸುವುದಕ್ಕಾಗಿ ಸಂಪೂರ್ಣ ಶ್ರುತಿಯನ್ನು ಉಲ್ಲೇಖಿಸಿದ್ದಾರೆ.

**प्रकाशः** – यद्यपि भाष्यादौ केवलब्रह्मशब्द एव निरवकाश इत्युक्तं, तथाऽपि तदपरित्यागेन

ब्रह्मवित्परमाप्नोतीति यत्प्रथमसूचितम् ।

इत्यानन्दमयनयानुभाष्यसुधयोरुक्तरीत्योपायान्तरप्रदर्शनमेतदित्यदोषः ।

ವಸ್ತುತಃ ಭಾಷ್ಯಾದಿಗಳಲ್ಲಿ ಕೇವಲ ಬ್ರಹ್ಮಶಬ್ದವನ್ನೇ ನಿರವಕಾಶವೆಂದು ಹೇಳಿದಂತೆ ಕಾಣಿಸುತ್ತದೆ. ಆದರೂ ಸಹ ಇದನ್ನು ಬಿಡದೆ "ಬ್ರಹ್ಮವಿತ್ಪರಮಾಪ್ನೋತೀತಿ ಯತ್ಪ್ರಥಮಸೂಚಿತಮ್" ಎಂಬ ಆನಂದಮಯಾಧಿಕರಣದ ಅನುವ್ಯಾಖ್ಯಾನ ಹಾಗೂ ಸುಧೆಗಳಲ್ಲಿ ಹೇಳಿದ ಪ್ರಕಾರ ಇವುಗಳನ್ನು ಬೇರೆ ಕಾರಣಗಳೆಂದು ತಿಳಿಯಬೇಕು. ಆದ್ದರಿಂದ ಟೀಕಾಕಾರರಿಗೆ ಮತ್ತು ಭಾಷ್ಯಕಾರರಿಗೆ ಈ ಹೇತುಗಳು ಸಮ್ಮತವೇ ಆಗಿವೆ.

**प्रकाशः** – सेतुत्वादेर्निरवकाशत्वं व्यनक्ति – **सेतुत्वेति** । "धृतेश्च" इति दहरनयगुणसूत्रे "एष सेतुर्विधृतिरेषां लोकानां असम्भेदाय" इति सर्वाश्रयत्वरूपसेतुत्वस्य, उत्तराधिकरणे "एतदमृतमभयमेतद्ब्रह्म" इत्यभयत्वस्य, अदृश्यत्वाद्यधिकरणे "यया तदक्षरमधिगम्यते इत्यक्षरत्वस्य विष्णौ सेत्स्यमानत्वाद्विष्णोरन्यत्रानवकाशमित्यर्थः ।

अक्षयाद्रतिरूपत्वादक्षेषु रमणादपि ।
अक्षरं भगवान् विष्णुरोमित्युच्चत्वहेतुतः ।।

इति स्मृतेश्चेति ।

ಗುಹಾಧಿಕರಣ (೧-೨-೩)

ಸೇತುತ್ವಾದಿ ಲಿಂಗಗಳಿಗೆ ನಿರವಕಾಶತ್ವವನ್ನು 'ಸೇತುತ್ವಾದಿಕಂ ತು' ಎಂದು ದಹರಾಧಿಕರಣದ 'ಧೃತೇಶ್ಚ' ಎಂಬ ಗುಣಸೂತ್ರದಲ್ಲಿ "ಏಷ ಸೇತುರ್ವಿಧೃತಿರೇಷಾಂ ಲೋಕಾನಾಂ ಅಸಂಭೇದಾಯ" ಎಂಬುದಾಗಿ ಸರ್ವಾಶ್ರಯತ್ವರೂಪವಾದ ಸೇತುತ್ವವನ್ನು ಪರಮಾತ್ಮನಲ್ಲಿ ಸಮರ್ಥಿಸುವವರಿದ್ದಾರೆ. ಮುಂದಿನ ಅಧಿಕರಣದಲ್ಲಿ "ಏತದಮೃತಮಭಯಮೇತದ್ಬ್ರಹ್ಮ" ಎಂಬುದಾಗಿ ಅಭಯತ್ವವನ್ನು ಅದೃಶ್ಯತ್ವಾಧಿಕರಣದಲ್ಲಿ "ಯಯಾ ತದಕ್ಷರಮಧಿಗಮ್ಯತೇ" ಎಂಬುದಾಗಿ ಅಕ್ಷರತ್ವವನ್ನು ವಿಷ್ಣುವಿನಲ್ಲಿ ಸಮರ್ಥಿಸುವವರಿದ್ದಾರೆ ಆದ್ದರಿಂದ ಇವೆಲ್ಲವು ವಿಷ್ಣುವಿನ ನಿರವಕಾಶಲಿಂಗಗಳೇ ಆಗಿವೆ.

ಅಕ್ಷಯಾದ್ರತಿರೂಪತ್ವಾದಕ್ಷೇಷು ರಮಣಾದಪಿ।
ಅಕ್ಷರಂ ಭಗವಾನ್ ವಿಷ್ಣುರೋಮಿತ್ಯುಚ್ಚತ್ವಹೇತುತಃ॥

ನಾಶರಹಿತನಾದ್ದರಿಂದ ರತಿರೂಪನಾದ್ದರಿಂದ ಇಂದ್ರಿಯಗಳಲ್ಲಿ ರಮಿಸುವವನಾದ್ದರಿಂದಲೂ ಭಗವಂತನು ಅಕ್ಷರ ಎನಿಸುತ್ತಾನೆ. ಅತ್ಯಂತ ಶ್ರೇಷ್ಠನಾದ್ದರಿಂದ ಇವನೇ 'ಓಂ' ಎನಿಸುತ್ತಾನೆ. ಎಂಬ ಶ್ರುತಿಯಿಂದಲೂ ಅಕ್ಷರತ್ವವು ವಿಷ್ಣುವಿನ ಲಿಂಗವೆಂದು ತಿಳಿಯುತ್ತದೆ.

**प्रकाशः** – नन्वस्तु "यस्सेतुः" इत्यादिवाक्यं ब्रह्ममात्रपरं, "ऋतं" इति वाक्यं तूभयपरमस्तु, कर्मफलात्तृत्वद्विवचनश्रुत्योर्भावादित्यत आह – **नचेति** । 'अब्रह्मविषयमपीति युक्तं' इत्यन्वयः ।

ಪ್ರಶ್ನೆ - 'ಯಸ್ಸೇತುಃ' ಇತ್ಯಾದಿ ವಾಕ್ಯಗಳು ವಿಷ್ಣುವಿನ ನಿರವಕಾಶಲಿಂಗವೆಂದು ಒಪ್ಪೋಣ. ಆದರೆ 'ಋತಂ ಪಿಬಂತೌ' ಎಂಬ ದ್ವಿವಚನ ಶ್ರುತಿಯು ಜೀವೇಶ್ವರರಿಬ್ಬರನ್ನೂ ಪ್ರತಿಪಾದಿಸಬಹುದು. ಏಕೆಂದರೆ 'ಕರ್ಮಫಲಾತ್ತೃತ್ವ' ಹಾಗೂ ದ್ವಿವಚನಶ್ರುತಿಗಳೆಂಬ ಆಧಾರಗಳಿರುವುದರಿಂದ.

ಉತ್ತರ - ಈ ಪ್ರಶ್ನೆಗೆ 'ನಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಹಿಂದಿನ ಮುಂದಿನ ವಾಕ್ಯಗಳಂತು ಕೇವಲ ವಿಷ್ಣುಪರವಾಗಿದೆಯೆಂದು ನಿರ್ಣಯವಾಗಿವೆ. ಇವುಗಳಿಂದ ಸಂದಷ್ಟವಾದ ಮಧ್ಯದಲ್ಲಿರುವ 'ಋತಂ ಪಿಬಂತೌ' ಎಂಬ ವಾಕ್ಯವೂ ಸಹ ವಿಷ್ಣುವನ್ನೇ ಪ್ರತಿಪಾದಿಸಬೇಕು. ಅಬ್ರಹ್ಮವಿಷಯವೆಂದು ಹೇಳಬಾರದು.




ಸಿದ್ಧಾಂತವನ್ನು ಮಾಡುತ್ತಿದ್ದಾರೆ. ಹೃದಯಗುಹಾವಿಷ್ಟತ್ವ, ಬ್ರಹ್ಮಶಬ್ದ, ಸೇತುತ್ವ, ಅಕ್ಷರತ್ವ, ಪರತ್ವ, ಅಭಯತ್ವ ಮೊದಲಾದ ಅನೇಕ ಲಿಂಗಗಳು ವಿಷ್ಣುವಿನಲ್ಲಿ ನಿರವಕಾಶವಾಗಿರುವುದರಿಂದ ವಿಷ್ಣುವೇ ದ್ವಿವಚನಶ್ರುತಿಯಿಂದ ಪ್ರತಿಪಾದ್ಯನಾಗುತ್ತಾನೆ.

ಜೀವ ಹಾಗೂ ಈಶ್ವರ ಇಬ್ಬರಲ್ಲಿಯೂ ಹೃದಯಗುಹಾನಿಹಿತತ್ವವನ್ನು ಹೇಳಬಹುದು. ಆದರೆ ಮಿಥಿಲಾ ಪಟ್ಟಣದಲ್ಲಿ ಹುಟ್ಟಿದ ರಾಜನಲ್ಲಿ ಮಾತ್ರ 'ಮೈಥಿಲಃ' ಎಂಬ ಪ್ರಯೋಗವಿರುತ್ತದೆ ಹೊರತು ಉಳಿದ ಸಾಮಾನ್ಯ

ಪ್ರಜೆಗಳನ್ನು 'ಮೈಥಿಲಃ' ಎಂದು ಯಾರೂ ಸಹ ಹೇಳುವುದಿಲ್ಲ. ಅದರಂತೆ ಜೀವೇಶ್ವರರಿಬ್ಬರು ಹೃದಯದಲ್ಲಿದ್ದರೂ ಈಶ್ವರನನ್ನೇ ಹೃದಯಗುಹಾನಿಹಿತನೆಂದು ಹೇಳಬೇಕು.

ಮತ್ತು ಮುಂದಿನ ವಾಕ್ಯದಲ್ಲಿ ಬ್ರಹ್ಮನಲ್ಲಿ ಪರತ್ವವನ್ನು ವಿಶೇಷಣವನ್ನಾಗಿ ಹೇಳಲಾಗಿದೆ. 'ಏಷ ಸೇತುಃ' ಇತ್ಯಾದಿ ಶ್ರುತಿಗಳು ಸೇತುತ್ವವೇ ಮೊದಲಾದ ವಿಷ್ಣುವಿನ ಲಿಂಗಗಳನ್ನೇ ಹೇಳುತ್ತಿವೆ. ಆದ್ದರಿಂದ ವಿಷ್ಣುವೇ ದ್ವಿವಚನಶ್ರುತಿ ಪ್ರತಿಪಾದ್ಯನೆನ್ನಬೇಕು.

ಮತ್ತೊಂದು ಪ್ರಬಲ ಕಾರಣ - 'ಋತಂ ಪಿಬಂತೌ' ಎಂಬ ಶ್ರುತಿಯು ಯಾವ ಪ್ರಕರಣದಲ್ಲಿದೆಯೋ ಅದರ ಹಿಂದಿನ ಮುಂದಿನ ವಾಕ್ಯಗಳಲ್ಲಿ 'ಯಃ ಸೇತುಃ' 'ಯಸ್ಯ ಬ್ರಹ್ಮ ಕ್ಷತ್ರಂಚ' ಕೇವಲ ವಿಷ್ಣುವೊಬ್ಬನೇ ಪ್ರತಿಪಾದ್ಯನಾಗಿದ್ದಾನೆ. 'ಸಂದಂಶ' ನ್ಯಾಯದಿಂದ ಮಧ್ಯದಲ್ಲಿರುವ ಈ ದ್ವಿವಚನಶ್ರುತಿಯಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂದು ಸುಲಭವಾಗಿ ತಿಳಿಯುವ ವಿಚಾರ.




## ಭೋಕ್ತೃ ಶ್ರೀಹರಿಯೇ ಹೊರತು ಜೀವನಲ್ಲ

### तात्पर्यचन्द्रिका

**न चेश्वरस्य अभोक्तृत्वमेव बाधकम्, ''एतत्सर्वं परे आत्मनि सम्प्रतिष्ठते'' इति प्रस्तुत्य ''एष हि द्रष्टा स्प्रष्टा श्रोता घ्राता रसयिता'' इत्यादि श्रुतेः ।**

**अहं हि सर्वयज्ञानां भोक्ता च प्रभुरेव च ।**
**श्रोत्रं चक्षुः स्पर्शनं च रसनं घ्राणमेव च ।**
**अधिष्ठाय मनश्चायं विषयानुपसेवते ।।**

**इत्यादिस्मृतेश्च ।**

**नच ''श्रोत्रं'' इत्यादिकं जीवविषयं, पूर्वत्र ''यच्चाप्युत्क्रामतीश्वरः'' इत्यादेः, उत्तरत्र ''पश्यन्ति ज्ञानचक्षुषः'' इत्यादेर- योगात् । ''अनश्नन्नन्यः'' इत्यादिकं तु ''तस्येदाहुः पिप्पलं स्वाद्वग्रे'' इतीश्वरस्य स्वादुभोक्तृत्वोक्तेः,**

**तथा 'प्रविविक्ताहारतर इवैव भवत्यस्माच्छारीरादात्मनः'' इति श्रुत्यन्तरे भगवदाहारस्य जीवाहाराद्विविक्तत्वोक्तेः, तथा ''शुभं पिबत्यसौ'' इत्यादिभाष्योक्त-स्मृतिभिरशुभभोगस्यैव निषेधात्,**

तथा –

अन्यूनानधिकत्वाच्च पूर्णस्वानन्दभोजनात् ।
विरागाच्च परस्यास्य भोक्तृत्वप्रतिषेधनम् ॥

इत्यादिस्मृतिभिरभोक्तृत्वश्रुतेर्गतिकथनात्, "क्रीडा भोगो न चान्यथा" इत्यादिस्मृत्या क्रीडारूपभोगसम्भवस्योक्तत्वाच्च अशुभभोगाभावविषयम् । प्रत्युत जीवपक्ष एव "ऋतं सत्यं तथा धर्मः" इति स्मृतेर्द्धर्मफलवाचि ऋतपदं न युक्तम्, तस्याधर्मफलं प्रत्यपि भोक्तृत्वात् । ईशपक्षे तु तद्युक्तम्, "पुण्यमेवामुं गच्छति" इति श्रुतेः ।

ಅನುವಾದ - ಈಶ್ವರನಲ್ಲಿ ಭೋಕ್ತೃತ್ವವೇ ಇರುವುದಿಲ್ಲವೆಂಬ ಬಾಧಕವಿರುವುದರಿಂದ 'ಪಿಬಂತೌ' ಎಂಬ ಶ್ರುತಿಯಿಂದ ಈಶ್ವರನನ್ನು ವಿವಕ್ಷಿಸಲು ಸಾಧ್ಯವಿಲ್ಲವೆಂದು ಹೇಳಬಾರದು. ಏಕೆಂದರೆ "ಏತತ್ಸರ್ವಂ ಪರೇ ಆತ್ಮನಿ ಸಂಪ್ರತಿಷ್ಠತೇ" ಸಮಸ್ತವು ಪರಬ್ರಹ್ಮನಲ್ಲಿಯೇ ನೆಲೆಗೊಂಡಿವೆ ಎಂಬುದಾಗಿ ಪರಬ್ರಹ್ಮನೇ ಪ್ರಸ್ತುತನಾಗಿದ್ದಾನೆ. ಮತ್ತು 'ಏಷ ಹಿ ದ್ರಷ್ಟಾ ಸ್ಪ್ರಷ್ಟಾ ಶ್ರೋತಾ, ಘ್ರಾತಾ, ರಸಯಿತಾ' ಎಂಬ ಶ್ರುತಿಯಿಂದ ಪರಮಾತ್ಮನು ಸಕಲ ಇಂದ್ರಿಯಗಳಿಂದಲೂ ಭೋಗ ಮಾಡುತ್ತಾನೆಂದು ತಿಳಿಯುತ್ತದೆ. ಗೀತೆಯಲ್ಲಿಯೂ ಸಹ 'ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ' ನಾನೇ ಸಕಲ ಯಜ್ಞಗಳ ಭೋಕ್ತೃವಾಗಿದ್ದೇನೆಂದು ಪರಮಾತ್ಮನೇ ಹೇಳಿಕೊಂಡಿದ್ದಾನೆ. ಮತ್ತು

'ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥

ಎಂಬ ಮತ್ತೊಂದು ಗೀತಾಮಾತೂ ಸಹ ಭಗವಂತನಿಗೆ ಸಕಲ ಇಂದ್ರಿಯಗಳಿಂದ ಭೋಗವನ್ನು ಹೇಳುತ್ತಿದೆ.

ಗೀತಾ ವಾಕ್ಯದಲ್ಲಿರುವ 'ಶ್ರೋತ್ರಂ ಚಕ್ಷುಃ' ಎಂಬ ಮಾತು ಜೀವವಿಷಯಕವಾಗಿದೆ ಹೊರತು ಪರಬ್ರಹ್ಮವಿಷಯಕವಲ್ಲವೆಂದು ಹೇಳಬಾರದು. ಏಕೆಂದರೆ "ಶ್ರೋತ್ರುಂ ಚಕ್ಷುಃ" ಎಂಬ ಶ್ಲೋಕದ ಹಿಂದೆ "ಯಚ್ಚಾಪ್ಯುತ್ಕ್ರಾಮತಿ" ಎಂಬುದಾಗಿ ಈಶ್ವರನು ಪ್ರಸಿದ್ಧನಾಗಿದ್ದಾನೆ. ಮುಂದೆಯೂ ಸಹ "ಪಶ್ಯಂತಿ ಜ್ಞಾನಚಕ್ಷುಷಃ" ಎಂಬುದಾಗಿ ಜ್ಞಾನಿಗಳಿಂದ ಗೋಚರನಾಗುತ್ತಾನೆಂದು ಹೇಳಿದ್ದರಿಂದ ಪರಮಾತ್ಮನೇ ಪ್ರಸಕ್ತನಾಗಿದ್ದಾನೆ.

"ಅನಶ್ನನ್ನನ್ಯಃ" ಎಂಬ ಶ್ರುತಿಯೇ ಬಾಧಕವೆಂದು ಹೇಳಬಹುದಲ್ಲವೇ? ಎಂದೂ ಸಹ ಶಂಕಿಸಲಾಗದು. ಏಕೆಂದರೆ "ತಸ್ಯೇದಾಹುಃ ಪಿಪ್ಪಲಂ ಸ್ವಾದ್ವಗ್ರೇ" ಎಂಬುದಾಗಿ ಈಶ್ವರನು ಸ್ವಾದು

ಪದಾರ್ಥದ ಭೋಕ್ತೃವಾಗಿದ್ದಾನೆಂದು ಹೇಳಲಾಗಿದೆ. ಅದರಂತೆ 'ಪ್ರವಿವಿಕ್ತಾಹಾರತರ ಇವೈವ ಭವತ್ಯಸ್ಮಾಚ್ಛರೀರಾದಾತ್ಮನಃ'' ಜೀವನು ಉಪಭೋಗಿಸುವ ಆಹಾರಕ್ಕಿಂತ ವಿಲಕ್ಷಣವಾದ ಆಹಾರವನ್ನು ಪರಮಾತ್ಮನು ಉಪಭೋಗಿಸುತ್ತಾನೆಂದು ಶ್ರುತ್ಯಂತರದಲ್ಲಿ ಹೇಳಲಾಗಿದೆ. ಆದ್ದರಿಂದ ''ಶುಭಂ ಪಿಬತ್ಯಸೌ'' ಎಂಬ ಭಾಷ್ಯದಲ್ಲಿ ಹೇಳಲ್ಪಟ್ಟ ಶ್ರುತಿಗಳ ಆಧಾರದಿಂದ 'ಅನಶ್ನನ್ನನ್ಯಃ' ಎಂಬ ಶ್ರುತಿಯು ಅಶುಭಭೋಗವನ್ನಷ್ಟೇ ನಿಷೇಧಿಸುತ್ತಿದೆ.

''ಅನಶ್ನನ್ನನ್ಯಃ'' ಎಂಬ ಶ್ರುತಿಗೆ ಅಶುಭಭೋಗವಿಲ್ಲವೆಂದು ವ್ಯಾಖ್ಯಾನಿಸಬೇಕೆಂದು ಮತ್ತೊಂದು ಪ್ರಕಾರದಲ್ಲಿ ತಿಳಿಯಬೇಕು.

ಅನ್ಯೂನಾನಾಧಿಕತ್ವಾಚ್ಚ ಪೂರ್ಣಸ್ವಾನಂದಭೋಜನಾತ್ ।
ವಿರಾಗಾಚ್ಚ ಪರಸ್ಯಾಸ್ಯ ಭೋಕ್ತೃತ್ವಪ್ರತಿಷೇಧನಮ್ ॥

ಭಗವಂತನು ಭೋಗಿಸುವುದರಿಂದ ಕಮ್ಮಿಯೂ ಆಗಲಾರ ಜಾಸ್ತಿಯೂ ಆಗಲಾರ. ಏಕೆಂದರೆ ಪೂರ್ಣವಾದ ಆನಂದಸ್ವರೂಪನಾದ್ದರಿಂದ. ಆದ್ದರಿಂದಲೇ ವಿರಕ್ತನಾದ ಇವನಿಗೆ ಶ್ರುತಿಯು ಭೋಕ್ತೃತ್ವವನ್ನು ನಿಷೇಧಿಸುತ್ತಿದೆ. ಇವೇ ಮೊದಲಾದ ಶ್ರುತಿಗಳಿಂದ ''ಅನಶ್ನನ್ನನ್ಯಃ' ಎಂಬ ಶ್ರುತಿಗೆ ವ್ಯಾಖ್ಯಾನಿಸಬೇಕು. ಮತ್ತು ''ಕ್ರೀಡಾ ಭೊಗೋ ನಾ ಚಾನ್ಯಥಾ'' ಭಗವಂತನಿಗೆ ಕ್ರೀಡೆಯೇ ಭೋಗ ಹೊರತು ಬೇರೆಯದ್ದಲ್ಲವೆಂದು ಹೇಳಿದ್ದರಿಂದ ಅಶುಭಭೋಗವು ಇಲ್ಲವೆಂದೇ ಶ್ರುತಿಗೆ ಅರ್ಥೈಸಬೇಕು.

ಅಷ್ಟೇ ಅಲ್ಲದೆ ಜೀವಪಕ್ಷದಲ್ಲಿ 'ಋತಂ ಸತ್ಯಂ ತಥಾ ಧರ್ಮಃ' ಎಂಬ ಶ್ರುತಿಯ ಆಧಾರದಿಂದ ಧರ್ಮಫಲವನ್ನು ಹೇಳುವ 'ಋತ' ಪದವು ಅಹಿತವಾಗುತ್ತದೆ. ಏಕೆಂದರೆ ಜೀವನು ಅಧರ್ಮಫಲಭೋಕ್ತೃವೂ ಆಗಿದ್ದಾನೆ. ಆದರೆ ಈಶ್ವರ ಪಕ್ಷದಲ್ಲಿ ಈ ಸಮಸ್ಯೆ ಬರುವುದಿಲ್ಲ. ''ಪುಣ್ಯಮೇವಾಮುಂ ಗಚ್ಛತಿ'' ಎಂಬ ಶ್ರುತಿಯಂತೆ ಭಗವಂತನು ಪುಣ್ಯಫಲವನ್ನಷ್ಟೇ ತಿನ್ನುತ್ತಾನೆ.

**प्रकाशः –**

ननु हरेरभोक्तृत्वं वा द्विवचनोक्तद्वित्वं वा छायात्वं वा बाधकमित्यतः ''तस्य कर्मफलभोगाभावान्नैतद्वाक्यप्रतिपाद्यत्वं'' इत्यादिटीकां विवृण्वन्, अभोक्तृत्वं तावन्निराह – **न चेत्यादिना पुण्यमेवामुं गच्छतीत्यन्तेन ।**

'ಋತಂ ಪಿಬಂತೌ' ಎಂಬ ಶ್ರುತಿಯಿಂದ ಬ್ರಹ್ಮನೇ ಪ್ರತಿಪಾದ್ಯನೆನ್ನಲು ಯಾವುದೇ ಬಾಧಕವಿಲ್ಲವೆಂದು ಈ ಹಿಂದೆಯೇ ಹೇಳಲಾಯಿತು. ಆದರೆ ಹಿಂದೆ ಪೂರ್ವಪಕ್ಷಿಯು ಅಭೋಕ್ತೃತ್ವ, ದ್ವಿವಚನೋಕ್ತದ್ವಿತ್ವ ಛಾಯಾತ್ವಗಳನ್ನು ಬಾಧಕಗಳನ್ನಾಗಿ ಹೇಳಿದ್ದನು. ಆ ಬಾಧಕಗಳನ್ನು ನಿರಾಕರಿಸುವುದಕ್ಕಾಗಿ ಮತ್ತು 'ತಸ್ಯ

ಕರ್ಮಫಲಭೋಗಾಭಾವನ್ನೈತದ್ವಾಕ್ಯಪ್ರತಿಪಾದ್ಯತ್ವಂ' ಇತ್ಯಾದಿ ಟೀಕೆಯನ್ನು ವಿವರಿಸುವುದಕ್ಕಾಗಿ 'ನಚ' ಎಂಬಲ್ಲಿಂದ ಪ್ರಾರಂಭಿಸಿ "ಪುಣ್ಯಮೇವಾಮುಂ ಗಚ್ಛಂತಿ" ಎಂಬಲ್ಲಿಯ ತನಕದ ಗ್ರಂಥವು ಹೊರಟಿದೆ. ಮೊದಲು ಅಭೋಕ್ತೃತ್ವ ಪಕ್ಷವನ್ನು ನಿರಾಕರಿಸಿದ್ದಾರೆ.

**प्रकाशः – एतदिति** । षट्प्रश्नोपनिषदि चतुर्थप्रश्ने ''परे आत्मनि'' इति परत्वविशेषणेन परमात्मानमेव परामृश्य द्रष्टृत्वादेरुक्तेरित्यर्थः । ''अहं हि'' इति वाक्ये अहमिति कृष्णेन प्रयुक्तत्वात् ब्रह्मविषयत्वं सिद्धमिति टीकोक्तद्वितीयस्मृतेस्तत्साधयति – **नचेति** । उभयत्राऽऽदिपदेन,

गृहीत्वैतानि संयाति वायुर्गन्धानिवाऽऽशयात् ।

इति ''यतन्तोऽप्यकृतात्मनो नैनं पश्यन्ति'' इत्यादेर्ग्रहः ।

'ಏತತ್' ಎಂದರೆ ಷಟ್‌ಪ್ರಶ್ನೋಪನಿಷತ್ತಿನ ಚತುರ್ಥ ಪ್ರಶ್ನೆಯಲ್ಲಿ 'ಪರೇ ಆತ್ಮನಿ' ಎಂಬುದಾಗಿ ಆತ್ಮನನ್ನು ಪರತ್ವವನ್ನು ವಿಶೇಷಣತ್ವವನ್ನು ಹೇಳಿದ್ದರಿಂದ ಪರಮಾತ್ಮನನ್ನೇ ವಿವಕ್ಷಿಸಬೇಕು. ಇಂತಹ ಪರಮಾತ್ಮನನ್ನೇ ಪರಾಮರ್ಶಿಸಿ ಶ್ರುತಿಯು ದ್ರಷ್ಟೃತ್ವ, ಸ್ರಷ್ಟೃತ್ವ ಮೊದಲಾದವುಗಳನ್ನು ಹೇಳುತ್ತಿದೆ. 'ಅಹಂ ಹಿ ಸರ್ವಯಜ್ಞಾನಾಂ' ಎಂಬುದಾಗಿ ಶ್ರೀಕೃಷ್ಣಪರಮಾತ್ಮನೇ ಹೇಳಿದ್ದರಿಂದ ಈ ವಾಕ್ಯವು ಬ್ರಹ್ಮವಿಷಯಕವೆಂದು ಸಿದ್ಧವಾಗುತ್ತದೆ. ಆದ್ದರಿಂದಲೇ 'ಶ್ರೋತ್ರಂ ಚಕ್ಷುಃ' ಎಂಬ ಮತ್ತೊಂದು ಗೀತಾ ವಾಕ್ಯವೂ ಸಹ ಪರಬ್ರಹ್ಮವಿಷಯಕವಾಗಿದೆ ಎಂದು ವಿವಕ್ಷಿಸಿ 'ನಚ ಶ್ರೋತ್ರಂ' ಇತ್ಯಾದಿ ವಾಕ್ಯವು ಹೊರಟಿದೆ. ಎರಡೂ ಕಡೆ ಇರುವ ಆದಿಪದದಿಂದ 'ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಽಽಶಯಾತ್' ಎಂಬುದನ್ನು ಮತ್ತು "ಯತಂತೋಽಪ್ಯಕೃತಾತ್ಮನೋ ನೈನಂ ಪಶ್ಯಂತಿ" ಎಂಬುದನ್ನೂ ಸಹ ಸ್ವೀಕರಿಸಬೇಕು.

**प्रकाशः** – एतद्वाक्योक्तिस्तु भोगस्येन्द्रियसाध्यत्वात्कथमीश्वरस्य भोग इति शङ्काव्युदासायेति बोध्यम् । उक्तञ्च च्छान्दोग्यभाष्येऽष्टमाध्यायान्ते –

''भूतैर्महद्भिर्य इमाः पुरो विभुर्निर्माय शेते यदमूषु पूरुषः ।
भुङ्क्ते गुणान् षोडश षोडशात्मकस्सोऽलङ्कृषीष्ट भगवान्वचांसि मे ।।

इत्यादौ भगवत एवेन्द्रियैर्भोगोक्तेश्च ।

ऋतं पिबन्तौ सुकृतस्य लोके गुहां प्रविष्टौ परमे परार्धे ।।

इति च'' इत्यादि ।

**ಭೂತೈರ್ಮಹದ್ಭಿರ್ಯ ಇಮಾಃ ಪುರೋ ವಿಭುರ್ನಿರ್ಮಾಯ ಶೇತೇ ಯದಮೂಷು ಪೂರುಷಃ।**
**'ಭುಂಕ್ತೇ ಗುಣಾನ್ ಷೋಡಶ ಷೋಡಶಾತ್ಮಕಸ್ಸೋऽಲಂಕೃಷೀಷ್ಟ ಭಗವಾನ್ವಚಾಂಸಿ ಮೇ ॥**

ಸರ್ವಸಮರ್ಥನಾದ ಪರಮಾತ್ಮನು ಪಂಚ ಮಹಾಭೂತಗಳಿಂದ ಸಕಲಜೀವರ ಶರೀರಗಳನ್ನು ಸೃಷ್ಟಿ ಮಾಡಿದನು. ಅನಂತರ ಅವರ ಶರೀರದಲ್ಲಿ ಸುಖವಾಗಿ ವಾಸ ಮಾಡುವುದರಿಂದ 'ಪುರುಷಃ' ಎಂದು ಪ್ರಸಿದ್ಧನಾದನು. ಇಂತಹ ಪರಮಾತ್ಮನು ಹತ್ತು ಬಾಹ್ಯೇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಚೇತನಗಳೆಂಬ ಐದು ಅಂತಃಕರಣಗಳು ಹಾಗೂ ಸಾಕ್ಷಿ ಹೀಗೆ ಒಟ್ಟು ಹದಿನಾರು ಇಂದ್ರಿಯಗಳನ್ನು ವ್ಯಾಪಿಸಿ ಅವುಗಳಿಂದ ಗ್ರಾಹ್ಯವಾದ ಹದಿನಾರು ವಿಧವಾದ ವಿಷಯಗಳನ್ನು ಉಪಭೋಗಿಸುತ್ತಾನೆ. ಈ ಪರಮಾತ್ಮನು ನನ್ನ ಮಾತುಗಳನ್ನು ಆಕರ್ಷಕವನ್ನಾಗಲಿ ಮಾಡಲಿ.

ಈ ಭಾಗವತದಲ್ಲಿ ಶುಕಮುನಿಗಳು ಹೇಳುವ ಮಾತಿನಲ್ಲಿ ಪರಮಾತ್ಮನಿಗೂ ಸಹ ಇಂದ್ರಿಯಗಳ ಮೂಲಕ ವಿಷಯಭೋಗವಿದೆಯೆಂದು ತಿಳಿಯುತ್ತದೆ. ಆದ್ದರಿಂದ ಪರಮಾತ್ಮನಿಗೆ ವಿಷಯಭೋಕ್ತೃತ್ವವನ್ನು ಹೇಳಲು ಬಾಧಕವಿರುವುದಿಲ್ಲ.

ಮತ್ತು 'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ ಇತಿ ಚ' ಪುಣ್ಯದಿಂದ ನಿರ್ಮಾಣಗೊಂಡ ಜೀವನ ಶರೀರದ ಹೃದಯಗುಹೆಯಲ್ಲಿ 'ಆತ್ಮ' ಹಾಗೂ 'ಅಂತರಾತ್ಮ' ಎಂಬ ಎರಡು ಪರಮಾತ್ಮನ ರೂಪಗಳು ನೆಲೆಸಿವೆ. ಈ ರೂಪಗಳು ಜೀವೋತ್ತಮರಾದ ಪ್ರಾಣದೇವರಲ್ಲಿದ್ದು ಪುಣ್ಯದ ಫಲವನ್ನು ಉಪಭೋಗಿಸುತ್ತಿವೆಯೆಂದು ಶ್ರುತಿಯು ಸಾರುತ್ತಿದೆ. ಈ ಕಾರಣದಿಂದಲೂ ಭಗವಂತನಿಗೆ ವಿಷಯಭೋಗವಿದೆಯೆಂದು ಸಿದ್ಧವಾಗುತ್ತದೆ.

**प्रकाशः** – ईश्वरस्य भोक्तृत्वोक्तावनशनश्रुतिविरोध इत्यत आह – **अनश्नन्निति** । 'अशुभभोगाभावविषयं'' इत्यन्वयः । कुतः सङ्कोच ? इत्यतः ''असद्व्यपदेशान्नेति चेन्न धर्मान्तरेण वाक्यशेषात्'' इति न्यायेन टीकोक्तवाक्यशेषबलादिति भावेन तमाह – **तस्येति** ।

ಈ ಎಲ್ಲಾ ಪ್ರಮಾಣಗಳ ಆಧಾರದಿಂದ ಈಶ್ವರನಿಗೆ ಭೋಕ್ತೃತ್ವವನ್ನು ಹೇಳಿದರೆ 'ಅನಶ್ನನ್ನನ್ಯಃ' ಎಂಬ ಶ್ರುತಿವಿರೋಧವು ಬರುತ್ತದೆ ಅಲ್ಲವೇ? ಎಂಬ ಪ್ರಶ್ನೆಗೆ 'ಅನಶ್ನನ್ನನ್ಯಃ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಅನಶ್ನನ್ನನ್ಯಃ' ಎಂಬುದಕ್ಕೆ 'ಅಶುಭಭೋಗಾಭಾವವಿಷಯಂ' ಎಂಬಲ್ಲಿ ಅನ್ವಯ. ಹೀಗೆ ಶ್ರುತಿಗೆ ಸಂಕೋಚ ಮಾಡಲು ಏನು ಕಾರಣ ? ಎಂಬ ಪ್ರಶ್ನೆಗೆ ''ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್'' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ನ್ಯಾಯದಿಂದ ಮತ್ತು ಟೀಕೆಯಲ್ಲಿ ಉಕ್ತವಾದ ವಾಕ್ಯಶೇಷದ ಬಲದಿಂದ ಸಂಕೋಚ ಮಾಡಬೇಕೆಂದು 'ತಸ್ಯ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – आथर्वणेऽस्याश्रवणेऽपि ऋक्शाखायामस्ति श्रवणामिति भावः ।

तस्येदाहुः पिप्पलं स्वाद्वग्रे तन्नो नशद्यः पितरं न वेद ।

ಗುಹಾಧಿಕರಣ (೧-೨-೩)

ಕರ್ಮಫಲಭೋಗಾಭಾವನ್ನೈತದ್ವಾಕ್ಯಪ್ರತಿಪಾದ್ಯತ್ವಂ' ಇತ್ಯಾದಿ ಟೀಕೆಯನ್ನು ವಿವರಿಸುವುದಕ್ಕಾಗಿ 'ನಚ' ಎಂಬಲ್ಲಿಂದ ಪ್ರಾರಂಭಿಸಿ ''ಪುಣ್ಯಮೇವಾಮುಂ ಗಚ್ಛಂತಿ'' ಎಂಬಲ್ಲಿಯ ತನಕದ ಗ್ರಂಥವು ಹೊರಟಿದೆ. ಮೊದಲು ಅಭೋಕ್ತೃತ್ವ ಪಕ್ಷವನ್ನು ನಿರಾಕರಿಸಿದ್ದಾರೆ.

**प्रकाशः – एतदिति** । षट्प्रश्नोपनिषदि चतुर्थप्रश्ने ''परे आत्मनि'' इति परत्वविशेषणेन परमात्मानमेव परामृश्य द्रष्टृत्वादेरुक्तेरित्यर्थः । ''अहं हि'' इति वाक्ये अहमिति कृष्णेन प्रयुक्तत्वात् ब्रह्मविषयत्वं सिद्धमिति टीकोक्तद्वितीयस्मृतेस्तत्साधयति – **नचेति** । उभयत्राऽऽदिपदेन,

गृहीत्वैतानि संयाति वायुर्गन्धानिवाऽऽशयात् ।

इति ''यतन्तोऽप्यकृतात्मनो नैनं पश्यन्ति'' इत्यादेर्ग्रहः ।

'ಏತತ್' ಎಂದರೆ ಷಟ್‌ಪ್ರಶ್ನೋಪನಿಷತ್ತಿನ ಚತುರ್ಥ ಪ್ರಶ್ನೆಯಲ್ಲಿ 'ಪರೇ ಆತ್ಮನಿ' ಎಂಬುದಾಗಿ ಆತ್ಮನನ್ನು ಪರತ್ವವನ್ನು ವಿಶೇಷಣತ್ವವನ್ನು ಹೇಳಿದ್ದರಿಂದ ಪರಮಾತ್ಮನನ್ನೇ ವಿವಕ್ಷಿಸಬೇಕು. ಇಂತಹ ಪರಮಾತ್ಮನನ್ನೇ ಪರಾಮರ್ಶಿಸಿ ಶ್ರುತಿಯು ದ್ರಷ್ಟೃತ್ವ, ಸ್ರಷ್ಟೃತ್ವ ಮೊದಲಾದವುಗಳನ್ನು ಹೇಳುತ್ತಿದೆ. 'ಅಹಂ ಹಿ ಸರ್ವಯಜ್ಞಾನಾಂ' ಎಂಬುದಾಗಿ ಶ್ರೀಕೃಷ್ಣಪರಮಾತ್ಮನೇ ಹೇಳಿದ್ದರಿಂದ ಈ ವಾಕ್ಯವು ಬ್ರಹ್ಮವಿಷಯಕವೆಂದು ಸಿದ್ಧವಾಗುತ್ತದೆ. ಆದ್ದರಿಂದಲೇ 'ಶ್ರೋತ್ರಂ ಚಕ್ಷುಃ' ಎಂಬ ಮತ್ತೊಂದು ಗೀತಾ ವಾಕ್ಯವೂ ಸಹ ಪರಬ್ರಹ್ಮವಿಷಯಕವಾಗಿದೆ ಎಂದು ವಿವಕ್ಷಿಸಿ 'ನಚ ಶ್ರೋತ್ರಂ' ಇತ್ಯಾದಿ ವಾಕ್ಯವು ಹೊರಟಿದೆ. ಎರಡೂ ಕಡೆ ಇರುವ ಆದಿಪದದಿಂದ 'ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಽಽಶಯಾತ್' ಎಂಬುದನ್ನು ಮತ್ತು ''ಯತಂತೋಽಪ್ಯಕೃತಾತ್ಮನೋ ನೈನಂ ಪಶ್ಯಂತಿ'' ಎಂಬುದನ್ನೂ ಸಹ ಸ್ವೀಕರಿಸಬೇಕು.

**प्रकाशः** – एतद्वाक्योक्तिस्तु भोगस्येन्द्रियसाध्यत्वात्कथमीश्वरस्य भोग इति शङ्कान्युदासायेति बोध्यम् । उक्तञ्च च्छान्दोग्यभाष्येऽष्टमाध्यायान्ते –

''भूतैर्महद्भिर्य इमाः पुरो विभुर्निर्माय शेते यदमूषु पूरुषः ।
भुङ्क्ते गुणान् षोडश षोडशात्मकस्सोऽलङ्क्षीष्ट भगवान्वचांसि मे ।।

इत्यादौ भगवत एवेन्द्रियैर्भोगोक्तेश्च ।

ऋतं पिबन्तौ सुकृतस्य लोके गुहां प्रविष्टौ परमे परार्धे ।।

इति च'' इत्यादि ।

ಭೂತೈರ್ಮಹದ್ಭಿರ್ಯ ಇಮಾಃ ಪುರೋ ವಿಭುರ್ನಿರ್ಮಾಯ ಶೇತೇ ಯದಮೂಷು ಪೂರುಷಃ।
'ಭುಂಕ್ತೇ ಗುಣಾನ್ ಷೋಡಶ ಷೋಡಶಾತ್ಮಕಸ್ಸೋಽಲಂಕೃಷೀಷ್ಟ ಭಗವಾನ್ವಚಾಂಸಿ ಮೇ ॥

ಸರ್ವಸಮರ್ಥನಾದ ಪರಮಾತ್ಮನು ಪಂಚ ಮಹಾಭೂತಗಳಿಂದ ಸಕಲಜೀವರ ಶರೀರಗಳನ್ನು ಸೃಷ್ಟಿ ಮಾಡಿದನು. ಅನಂತರ ಅವರ ಶರೀರದಲ್ಲಿ ಸುಖವಾಗಿ ವಾಸ ಮಾಡುವುದರಿಂದ 'ಪುರುಷಃ' ಎಂದು ಪ್ರಸಿದ್ಧನಾದನು. ಇಂತಹ ಪರಮಾತ್ಮನು ಹತ್ತು ಬಾಹ್ಯೇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಚೇತನಗಳೆಂಬ ಐದು ಅಂತಃಕರಣಗಳು ಹಾಗೂ ಸಾಕ್ಷಿ ಹೀಗೆ ಒಟ್ಟು ಹದಿನಾರು ಇಂದ್ರಿಯಗಳನ್ನು ವ್ಯಾಪಿಸಿ ಅವುಗಳಿಂದ ಗ್ರಾಹ್ಯವಾದ ಹದಿನಾರು ವಿಧವಾದ ವಿಷಯಗಳನ್ನು ಉಪಭೋಗಿಸುತ್ತಾನೆ. ಈ ಪರಮಾತ್ಮನು ನನ್ನ ಮಾತುಗಳನ್ನು ಆಕರ್ಷಕವನ್ನಾಗಲಿ ಮಾಡಲಿ.

ಈ ಭಾಗವತದಲ್ಲಿ ಶುಕಮುನಿಗಳು ಹೇಳುವ ಮಾತಿನಲ್ಲಿ ಪರಮಾತ್ಮನಿಗೂ ಸಹ ಇಂದ್ರಿಯಗಳ ಮೂಲಕ ವಿಷಯಭೋಗವಿದೆಯೆಂದು ತಿಳಿಯುತ್ತದೆ. ಆದ್ದರಿಂದ ಪರಮಾತ್ಮನಿಗೆ ವಿಷಯಭೋಕ್ತೃತ್ವವನ್ನು ಹೇಳಲು ಬಾಧಕವಿರುವುದಿಲ್ಲ.

ಮತ್ತು 'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ ಇತಿ ಚ' ಪುಣ್ಯದಿಂದ ನಿರ್ಮಾಣಗೊಂಡ ಜೀವನ ಶರೀರದ ಹೃದಯಗುಹೆಯಲ್ಲಿ 'ಆತ್ಮ' ಹಾಗೂ 'ಅಂತರಾತ್ಮ' ಎಂಬ ಎರಡು ಪರಮಾತ್ಮನ ರೂಪಗಳು ನೆಲೆಸಿವೆ. ಈ ರೂಪಗಳು ಜೀವೋತ್ತಮರಾದ ಪ್ರಾಣದೇವರಲ್ಲಿದ್ದು ಪುಣ್ಯದ ಫಲವನ್ನು ಉಪಭೋಗಿಸುತ್ತಿವೆಯೆಂದು ಶ್ರುತಿಯು ಸಾರುತ್ತಿದೆ. ಈ ಕಾರಣದಿಂದಲೂ ಭಗವಂತನಿಗೆ ವಿಷಯಭೋಗವಿದೆಯೆಂದು ಸಿದ್ಧವಾಗುತ್ತದೆ.

**प्रकाशः** – ईश्वरस्य भोक्तृत्वोक्तावनशनश्रुतिविरोध इत्यत आह – **अनश्नन्निति** । 'अशुभभोगाभावविषयं'' इत्यन्वयः । कुतः सङ्कोच ? इत्यतः ''असद्व्यपदेशान्नेति चेन्न धर्मान्तरेण वाक्यशेषात्'' इति न्यायेन टीकोक्तवाक्यशेषबलादिति भावेन तमाह – **तस्येति** ।

ಈ ಎಲ್ಲಾ ಪ್ರಮಾಣಗಳ ಆಧಾರದಿಂದ ಈಶ್ವರನಿಗೆ ಭೋಕ್ತೃತ್ವವನ್ನು ಹೇಳಿದರೆ 'ಅನಶ್ನನ್ನನ್ಯಃ' ಎಂಬ ಶ್ರುತಿವಿರೋಧವು ಬರುತ್ತದೆ ಅಲ್ಲವೇ? ಎಂಬ ಪ್ರಶ್ನೆಗೆ 'ಅನಶ್ನನ್ನನ್ಯಃ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಅನಶ್ನನ್ನನ್ಯಃ' ಎಂಬುದಕ್ಕೆ 'ಅಶುಭಭೋಗಾಭಾವವಿಷಯಂ' ಎಂಬಲ್ಲಿ ಅನ್ವಯ. ಹೀಗೆ ಶ್ರುತಿಗೆ ಸಂಕೋಚ ಮಾಡಲು ಏನು ಕಾರಣ ? ಎಂಬ ಪ್ರಶ್ನೆಗೆ ''ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್'' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ನ್ಯಾಯದಿಂದ ಮತ್ತು ಟೀಕೆಯಲ್ಲಿ ಉಕ್ತವಾದ ವಾಕ್ಯಶೇಷದ ಬಲದಿಂದ ಸಂಕೋಚ ಮಾಡಬೇಕೆಂದು 'ತಸ್ಯ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – आथर्वणेऽस्याश्रवणेऽपि ऋक्शाखायामस्ति श्रवणामिति भावः ।

तस्येदाहुः पिप्पलं स्वाद्वग्रे तन्नो नशद्यः पितरं न वेद ।
ಗುಹಾಧಿಕರಣ (೧-೨-೩)

इति वाक्यशेषे, यः 'अग्रे' अग्र्यः श्रेष्ठः तस्यैव स्वादु 'पिप्पलं' कर्मफलमाहुः, यः पितरं न वेद, अत एव 'नशत्' नाशवान् तस्य स्वादु पिप्पलं नेति हरेरेव सुखभोक्तृत्वोक्तेरित्यर्थः ।

ಆಥರ್ವಣದಲ್ಲಿಯೂ ಸಹ ಋಕ್‌ಶಾಖೆಯಲ್ಲಿ ಭೋಕ್ತೃತ್ವ ಕೇಳಿಸುತ್ತಿದೆ ಎಂದು ಹೇಳಲಾಗಿದೆ.

ತಸ್ಯೇದಾಹುಃ ಪಿಪ್ಪಲಂ ಸ್ವಾದ್ವಗ್ರೇ ತನ್ನೋ ನಶದ್ಯಃ ಪಿತರಂ ನ ವೇದ ।

ಸರ್ವೋತ್ತಮನಾದ ಪರಮಾತ್ಮನೇ ಜೀವನು ಮಾಡುವ ಸತ್ಕರ್ಮಗಳ ಸಾರಕ್ಕೆ ಭೋಕ್ತೃವಾಗಿದ್ದಾನೆ. ''ತಂದೆಯಾದ ಪರಮಾತ್ಮನನ್ನು ತಿಳಿಯದೆ ಜೀವನು ನಾಶ ಹೊಂದುತ್ತಿದ್ದಾನೆ'' ಎಂಬ ವಾಕ್ಯಶೇಷದಲ್ಲಿ ಯಾರು ಶ್ರೇಷ್ಠನಾಗಿದ್ದಾನೋ ಅವನಿಗೆ ಶುಭಕರ್ಮಫಲಭೋಗವನ್ನು ಹೇಳಲಾಗಿದೆ. ಮತ್ತು ಯಾರು ತಂದೆಯನ್ನು ತಿಳಿಯಲಾರನೋ ಅಂತಹ ಜೀವನು ನಾಶಹೊಂದುತ್ತಾನೆಂದು ಹೇಳಿದ್ದರಿಂದ ಭಗವಂತನಿಗೆ ಮಾತ್ರ ಸುಖಭೋಕ್ತೃತ್ವವನ್ನು ಹೇಳಿದಂತಾಗುತ್ತದೆ.

**प्रकाशः** – ननु श्रुतित्वाविशेषाद्भोक्तृत्वश्रुतेरेवार्थान्तरमस्त्वित्यतो गीताभाष्योक्तमाह – **तथेति** । 'श्रुत्यन्तरे' वाजसनेये षष्ठाध्याये द्वितीयब्राह्मणे ''इन्धो ह वै नामैष योऽयं दक्षिणेऽक्षन् पुरुषः'' इति प्रकृतस्य परमात्मनः ''तस्मादेष प्रविविक्ताहारतर इवैव भवत्यस्माच्छारीरादात्मनः'' इति शारीरशब्दित-जीवाहाराद्विभक्ताहारवत्त्वोक्तेरित्यर्थः ।

अवतारेषु स्थूलमपि भुङ्क्ष इतीवशब्दः ।

'ಅನಶ್ನನ್ನನ್ಯಃ' ಎಂಬುದು ಮತ್ತು ಭೋಕ್ತೃತ್ವ ಎಂಬುದು ಎರಡೂ ಶ್ರುತಿಯೇ ಆಗಿರುವುದರಿಂದ ಭೋಕ್ತೃತ್ವ ಶ್ರುತಿಗೆ ಸಂಕೋಚಾರ್ಥವನ್ನು ಮಾಡಿ 'ಅನಶ್ನನ್' ಎಂಬ ಶ್ರುತಿಗೆ ನೇರವಾದ ಅರ್ಥವನ್ನು ಹೇಳಬಹುದಲ್ಲವೆ ? ಎಂಬ ಪ್ರಶ್ನೆಗೆ ಗೀತಾಭಾಷ್ಯದಲ್ಲಿ ಹೇಳಿದ ವಿಚಾರವನ್ನು ಉತ್ತರವನ್ನಾಗಿ 'ತಥಾ' ಇತ್ಯಾದಿ ವಾಕ್ಯದಿಂದ ನಿರೂಪಿಸುತ್ತಿದ್ದಾರೆ. 'ಶ್ರುತ್ಯಂತರೇ' ಎಂದರೆ ಬೃಹದಾರಣ್ಯೋಕೋಪನಿಷತ್ತಿನಲ್ಲಿ ಎಂದರ್ಥ. ಬೃಹದಾರಣ್ಯಕದ ಆರನೇ ಅಧ್ಯಾಯದ ಎರಡನೇ ಬ್ರಾಹ್ಮಣದಲ್ಲಿ ''ಇಂಧೋ ಹ ವೈ ನಾಮೈಷ ಯೋಽಯಂ ದಕ್ಷಿಣೇಽಕ್ಷನ್ ಪುರುಷಃ'' ಎಂದು ಪ್ರಕೃತನಾದ ಪರಮಾತ್ಮನಿಗೆ ''ತಸ್ಮಾದೇಷ ಪ್ರವಿವಿಕ್ತಾಹಾರತರ'' ಎಂದು ಶಾರೀರಶಬ್ದದಿಂದ ಪ್ರಕೃತನಾದ ಜೀವನ ಆಹಾರಕ್ಕಿಂತ ವಿಲಕ್ಷಣವಾದ ಆಹಾರವನ್ನು ಭಗವಂತನಿಗೆ ಹೇಳಲಾಗಿದೆ. ಅವತಾರ ರೂಪಗಳಲ್ಲಿ ಸ್ಥೂಲಪದಾರ್ಥಗಳನ್ನೂ ಸಹ ಭೋಗಿಸುವಂತೆ ನಟಿಸುತ್ತಾನೆಂದು ತಿಳಿಸಲು ಇವ ಶಬ್ದವನ್ನು ಪ್ರಯೋಗಿಸಲಾಗಿದೆ.

**प्रकाशः** – नच प्रविविक्ताहारो जीव एवेति वाच्यं, तस्य 'शारीरात्' इति जीवाद्भेदोक्तेः । नच शारीराज्जागरावस्थाज्जीवात्स्वप्नसुषुप्त्यवस्थस्य एव

प्रविविक्ताहार इत्यवस्था भेदोपाधिकं जीवस्य भेदमङ्गीकृत्य व्याख्यायतामिति वाच्यं, स्वप्नसुषुप्त्यवस्थितस्यापि शारीरत्वेन शारीरशब्देनैव गृहीततया ततो भेदायोगात् ।

शारीरस्य त्रिधा भिन्नो जाग्रदादिष्ववस्थितेः ।

इति गारुडोक्तेः ।

ಪ್ರಶ್ನೆ - ಜೀವನ ಆಹಾರಕ್ಕಿಂತ ವಿಲಕ್ಷಣವಾದ ಆಹಾರವನ್ನು ಪರಮಾತ್ಮನು ತಿನ್ನುತ್ತಾನೆಂದು ಹೇಳುವುದಕ್ಕಿಂತ ಪರಮಾತ್ಮನ ಆಹಾರಕ್ಕಿಂತ ವಿಲಕ್ಷಣವಾದ ಆಹಾರವನ್ನು ಜೀವನೇ ತಿನ್ನುತ್ತಾನೆಂದು ಏಕೆ ಹೇಳಬಾರದು?

ಉತ್ತರ - ಹೀಗೆ ಪ್ರಶ್ನಿಸಬಾರದು. ಶ್ರುತಿಯಲ್ಲಿ 'ಶಾರೀರಾತ್' ಎಂಬ ಪದವನ್ನು ಹೇಳುವ ಮೂಲಕ ಜೀವನಿಗಿಂತ ಭೇದವು ತಿಳಿಯುತ್ತದೆ. ಆದ್ದರಿಂದ ಪರಮಾತ್ಮನಲ್ಲಿಯೇ ವಿಲಕ್ಷಣ ಆಹಾರವನ್ನು ಹೇಳಬೇಕು.

ಪ್ರಶ್ನೆ - 'ಶಾರೀರಾತ್' ಎಂಬ ಪದಕ್ಕೆ ಜಾಗ್ರದವಸ್ಥೆಯಲ್ಲಿರುವ ಜೀವನೆಂದರ್ಥ. ಆದ್ದರಿಂದ ಜಾಗ್ರದವಸ್ಥೆಯಲ್ಲಿರುವ ಜೀವನು ಉಪಭೋಗಿಸುವ ಆಹಾರಕ್ಕಿಂತ ವಿಲಕ್ಷಣವಾದ ಆಹಾರವನ್ನು ಸ್ವಪ್ನಾವಸ್ಥೆಯಲ್ಲಿರುವ ಜೀವನು ಉಪಭೋಗಿಸುತ್ತಾನೆಂದು ಅರ್ಥೈಸಬಹುದಲ್ಲವೇ?

ಉತ್ತರ - ಇದೂ ಸಹ ತಪ್ಪು. ಸ್ವಪ್ನಾವಸ್ಥೆಯಲ್ಲಿರುವ ಜೀವನೂ ಸಹ ಶಾರೀರನೇ ಆಗಿದ್ದಾನೆ. ಆದ್ದರಿಂದ ಶಾರೀರ ಶಬ್ದದಿಂದ ಜಾಗ್ರತಾವಸ್ಥೆಯಲ್ಲಿರುವ ಜೀವನು ವಿವಕ್ಷಿತನಾದಂತೆ ಸ್ವಪ್ನಾವಸ್ಥೆಯಲ್ಲಿರುವ ಜೀವನೂ ಸಹ ವಿವಕ್ಷಿತನಾಗುತ್ತಾನೆ. ಇಂತಹ ಜೀವನಲ್ಲಿ ತನ್ನಿಂದ ಭೇದವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ 'ಶಾರೀರಸ್ಯ ತ್ರಿಧಾ ಭಿನ್ನೋ ಜಾಗ್ರದಾದಿಷ್ವವಸ್ಥಿತೇಃ ।' ಎಂಬುದಾಗಿ ಜಾಗ್ರದಾದಿವಸ್ಥೆಯಲ್ಲಿರುವ ಜೀವನು ಒಬ್ಬನೇ ಆಗಿದ್ದಾನೆಂದು ಗರುಡಪುರಾಣದ ಮಾತಿನಿಂದ ತಿಳಿಯುತ್ತದೆ.

**प्रकाशः** – नन्ववस्थात्रयवतः शारीरत्वेऽपि 'अस्मात्' इति विशेषणादत्र जागरावस्थो गृह्यते । तस्माच्च भेदः स्वप्नावस्थस्योक्तविधया सम्भवति । अन्यथा 'अस्मात्' इति व्यर्थमिति चेन्न,

शारीरौ तावुभौ ज्ञेयौ जीवेश्चेश्वरसंज्ञितौ ।

इत्यादिस्मृत्येश्वरस्यापि शारीरत्वेन तद्व्यावृत्त्यर्थत्या 'अस्मात्' इत्यस्य सार्थक्यादिति । व्यक्तमेतद्गीताभाष्ये सप्तमेऽध्याये – "न चात्र जीव उच्यते" इत्यादिनेति भावः ।

ಗರುಡಪುರಾಣದ ಮಾತಿನಂತೆ ಮೂರು ಅವಸ್ಥೆಯಲ್ಲಿರುವ ಜೀವನನ್ನು ಶಾರೀರನೆಂದು ಹೇಳಿದರೆ 'ಅಸ್ಮಾತ್' ಎಂಬ ವಿಶೇಷಣವು ವ್ಯರ್ಥವಾಗುತ್ತದೆ. ಆದ್ದರಿಂದ ಜಾಗ್ರದವಸ್ಥೆಯಲ್ಲಿರುವ ಜೀವನನ್ನೇ 'ಅಸ್ಮಾತ್'

ಎಂಬ ವಿಶೇಷಣದಿಂದ ಸ್ವೀಕರಿಸಬೇಕು. ಆದ್ದರಿಂದ ಸ್ವಪ್ನಾವಸ್ಥೆಯಲ್ಲಿರುವ ಜೀವನು ಜಾಗ್ರದವಸ್ಥಾದಲ್ಲಿರುವ ಜೀವನಿಗಿಂತ ವಿಲಕ್ಷಣವಾದ ಆಹಾರವನ್ನು ಸೇವಿಸುತ್ತಾನೆಂದು ಹೇಳಬಹುದು. ಇಲ್ಲದಿದ್ದರೆ 'ಅಸ್ಮಾತ್' ಎಂಬ ವಿಶೇಷಣವೇ ವ್ಯರ್ಥವಾಗುದತ್ತಲ್ಲವೆ?

ಉತ್ತರ - 'ಅಸ್ಮಾತ್' ಎಂಬ ವಿಶೇಷಣವನ್ನು ಉಲ್ಲೇಖಿಸಲು ಬೇರೆ ಕಾರಣವಿದೆ. "ಶಾರೀರೌ ತಾವುಭೌ ಜ್ಞೇಯೌ ಜೀವಶ್ಚೇಶ್ವರಸಂಜ್ಞಿತೌ" ಎಂಬ ಸ್ಮೃತಿಯಿಂದ ಈಶ್ವರನೂ ಸಹ ಶಾರೀರನೆಂದು ಹೇಳಲ್ಪಟ್ಟಿದ್ದಾನೆ. ಇಂತಹ ಈಶ್ವರನನ್ನು ವ್ಯಾವೃತ್ತಿ ಮಾಡುವುದಕ್ಕಾಗಿ 'ಅಸ್ಮಾತ್' ಎಂಬ ವಿಶೇಷಣವು ಸಾರ್ಥಕವಾಗಿದೆ. ಗೀತಾ ಭಾಷ್ಯದ ಸಪ್ತಮಾಧ್ಯಾಯದಲ್ಲಿ "ನ ಚಾತ್ರ ಜೀವ ಉಚ್ಯತೇ" ಜೀವನು ಇಲ್ಲಿ ಪ್ರತಿಪಾದ್ಯನಾಗಿಲ್ಲ ಎಂಬುದಾಗಿ ಈ ವಿಷಯವು ಸ್ಪಷ್ಟವಾಗಿದೆ.

**प्रकाशः** – नन्वानन्दमयनयाद्युक्तदिशा पूर्णानन्दस्य हरेः किं कर्मफलभोगेनेत्यतः, श्रुत्यर्थसङ्कोचबीजस्मृतीराह – **तथेति** ।

शुभं पिबत्यसौ नित्यं नाशुभं स हरिः पिबेत् ।
पूर्णानन्दमयस्यास्य चेष्टा न ज्ञायते क्वचित् ।
आत्माऽन्तरात्मेति हरिः एक एव द्विधा स्थितः ।
निविष्टो हृदये नित्यं रसं पिबति कर्मजम् ।।
शुभान् पिबति भोगान् स च्छायेव विदुषां प्रभुः ।

इत्यादिस्मृतिभिरित्यर्थः ।

ಪ್ರಶ್ನೆ - ಆನಂದಮಯಾಧಿಕರಣದಲ್ಲಿ ಹೇಳಿದ ಪ್ರಕಾರ ಪೂರ್ಣಾನಂದಸ್ವರೂಪಿಯಾದ ಶ್ರೀಹರಿಗೆ ಕರ್ಮಫಲಭೋಗದಿಂದ ಆಗಬೇಕಾದದ್ದು ಏನೂ ಇಲ್ಲ. ಆದ್ದರಿಂದ ಪ್ರಕೃತ ಕರ್ಮಫಲಭೋಗವನ್ನು ಹೇಳುವುದರಿಂದ ಏನು ಪ್ರಯೋಜನ ?

ಉತ್ತರ - ಪೂರ್ಣಾನಂದ ಸ್ವರೂಪಿಯಾದರೂ ಸಹ ಕರ್ಮಫಲಭೋಗವನ್ನು ಅವನಿಗೆ ಹೇಳಿ 'ಅನಶ್ನನ್' ಎಂಬ ಶ್ರುತ್ಯರ್ಥವನ್ನು ಸಂಕೋಚ ಮಾಡಬೇಕು. ಈ ವಿಷಯದಲ್ಲಿ ಇದಕ್ಕೆ ಪೂರಕವಾದ ಸ್ಮೃತಿಗಳನ್ನು 'ತಥಾ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್ ।
ಪೂರ್ಣಾನಂದಮಯಸ್ಯಾಸ್ಯ ಚೇಷ್ಟಾ ನ ಜ್ಞಾಯತೇ ಕ್ವಚಿತ್ ।
ಆತ್ಮಾऽಂತರಾತ್ಮೇತಿ ಹರಿಃ ಏಕ ಏವ ದ್ವಿಧಾ ಸ್ಥಿತಃ ।
ನಿವಿಷ್ಟೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಮ್ ॥
ಶುಭಾನ್ ಪಿಬತಿ ಭೋಗಾನ್ ಸ ಚ್ಛಾಯೇವ ವಿದುಷಾಂ ಪ್ರಭುಃ ।

ಪರಿಪೂರ್ಣಚಂದ್ರಿಕಾ

ಶ್ರೀಹರಿಯು ಶುಭಕರ್ಮಫಲವನ್ನಷ್ಟೇ ತಿನ್ನುತ್ತಾನೆ. ಅಶುಭಫಲವನ್ನು ಎಂದೂ ತಿನ್ನಲಾರ. ಪೂರ್ಣಾನಂದ ಸ್ವರೂಪಿಯಾದವನ ಚೇಷ್ಟೆಯನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ಇಂತಹ ಪರಮಾತ್ಮನು 'ಆತ್ಮಾ' ಹಾಗೂ 'ಅಂತರಾತ್ಮ' ಎಂಬ ಎರಡು ರೂಪಗಳನ್ನು ಧರಿಸಿ ಪ್ರತಿಯೊಬ್ಬ ಜೀವರ ಶರೀರದಲ್ಲಿ ಪ್ರವೇಶಿಸಿದ್ದಾನೆ. ಮತ್ತು ಜೀವರು ಮಾಡುವ ಸತ್ಕರ್ಮಗಳ ಫಲವನ್ನು ಸ್ವತಃ ತಾನೇ ಉಣ್ಣುತ್ತಾನೆ. ಇವೇ ಮೊದಲಾದ ಸ್ಮೃತಿಗಳಿಂದ ಎಂದರ್ಥ.

**प्रकाशः** – श्रुतेः **प्रथमस्कन्धतात्पर्योक्तविषयान्तरं** चाह – **अन्यूनेति** । भोगेऽभोगे चेत्यर्थः । **इत्यादिस्मृतिभिरिति** ।।

प्रविविक्तभुग्यतो ह्यस्माच्छारीरात्पुरुषोत्तमः ।
अतोऽभोक्ता च भोक्ता च स्थूलाभोगात्स एव तु ।।

इत्यादिस्मृतिरादिपदार्थः । **अशुभेति** । जीववद्रागपूर्वकोपजीवनार्थं भोगाभावविषयं चेत्यपि बोध्यम् ।

'ಅನಶ್ನನ್' ಎಂಬ ಶ್ರುತಿಗೆ ಸಂಕೋಚಮಾಡಿ ಅರ್ಥೈಸಲು ಮತ್ತೊಂದು ಕಾರಣವಿದೆಯೆಂದು ಪ್ರಥಮಸ್ಕಂಧ ತಾತ್ಪರ್ಯದಲ್ಲಿ ಹೇಳಲ್ಪಟ್ಟ ವಿಷಯಾಂತರವನ್ನು 'ಅನ್ಯೂನ' ಇತ್ಯಾದಿ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. ಭಗವಂತನು ಭೋಗ ಮಾಡುವುದುದರಿಂದ ಅವನಲ್ಲಿ ಆಧಿಕ್ಯವು ಬರುವುದಿಲ್ಲ. ಭೋಗ ಮಾಡದಿರುವುದರಿಂದ ನ್ಯೂನತೆಯೂ ಬರುವುದಿಲ್ಲವೆಂದು ತಿಳಿಯಬೇಕು. 'ಇತ್ಯಾದಿಸ್ಮೃತಿಭಿಃ' ಎಂಬಲ್ಲಿರುವ ಆದಿಪದದಿಂದ

ಪ್ರವಿವಿಕ್ತಭುಗ್ಯತೋ ಹ್ಯಸ್ಮಾಚ್ಛಾರಿರಾತ್ಪುರುಷೋತ್ತಮಃ।
ಅತೋಽಭೋಕ್ತಾ ಚ ಭೋಕ್ತಾ ಚ ಸ್ಥೂಲಾಭೋಗಾತ್ಸ ಏವ ತು॥

ಜೀವನಿಗಿಂತ ವಿಲಕ್ಷಣವಾದ ಆಹಾರವನ್ನು ಭೋಗಿಸುವುದರಿಂದ 'ಭೋಕ್ತಾ' ಎನಿಸಿದ್ದಾನೆ. ಸ್ಥೂಲವಾದ ಆಹಾರವನ್ನು ಭೋಗಮಾಡದೇ ಇರುವುದರಿಂದ 'ಅಭೋಕ್ತ' ಎನಿಸಿದ್ದಾನೆ ಎಂಬ ಸ್ಮೃತಿಯನ್ನು ವಿವಕ್ಷಿಸಬೇಕು, 'ಅಶುಭಭೋಗಸ್ಯೈವ ನಿಷೇಧಾತ್' ಎಂಬ ಗ್ರಂಥಕ್ಕೆ ಜೀವನಂತೆ ಭಗವಂತನು ರಾಗಪೂರ್ವಕವಾಗಿ ಉಪಜೀವನಕ್ಕೋಸ್ಕರ ಭೋಗವನ್ನು ಹೊಂದಲಾರ ಎಂದೂ ಸಹ ತಿಳಿಯಬೇಕು.

**प्रकाशः – ऋतमिति** ।

ऋतं सत्यं तथा धर्मः सुकृतं चाभिधीयते ।

इति सप्तमगीताभाष्योक्तस्मृतेरित्यर्थः । **पुण्यमिति** । "पुण्यमेवामुं गच्छति । न ह वै देवान्पापं गच्छति" इति बृहदारण्यकश्रुतौ पुण्यफलभोगस्यैवोक्तेरित्यर्थः ।

ಗ್ರಂಥದಲ್ಲಿ 'ಋತಂ ಸತ್ಯಂ' ಎಂಬ ಶ್ರುತಿಯನ್ನು ಉಲ್ಲೇಖಿಸಿದ್ದಾರೆ. 'ಋತಂ ಸತ್ಯಂ ತಥಾ ಧರ್ಮಃ ಸುಕೃತಂ ಚಾಭಿಧೀಯತೇ' ಎಂಬ ಗೀತಾಭಾಷ್ಯದಲ್ಲಿ ಹೇಳಲ್ಪಟ್ಟ ಸಂಪೂರ್ಣ ಸ್ಮೃತಿಯನ್ನು ವಿವಕ್ಷಿಸಬೇಕು. ಈ ಸ್ಮೃತಿವಾಕ್ಯದಲ್ಲಿ 'ಋತ' ಶಬ್ದಕ್ಕೆ ಪುಣ್ಯಫಲವೆಂಬ ಅರ್ಥವನ್ನು ಹೇಳಲಾಗಿದೆ. ಇದು ಜೀವನಲ್ಲಿ ಕೂಡುವುದಿಲ್ಲವೆಂದು ತಿಳಿಯಬೇಕು. ಮತ್ತು 'ಪುಣ್ಯಮೇವಾಮುಂ ಗಚ್ಛತಿ । ನ ಹ ವೈ ದೇವಾನ್‌ಪಾಪಂ ಗಚ್ಛತಿ' ಎಂಬುದಾಗಿ ಬೃಹದಾರಣ್ಯಕದ ಶ್ರುತಿಯಲ್ಲಿ ಈಶ್ವರನಿಗೆ ಪುಣ್ಯಫಲ ಭೋಗವು ಹೇಳಲ್ಪಟ್ಟಿದೆ ಎಂದು ತಿಳಿಯಬೇಕು.

**प्रकाशः** – यद्यप्यमुं सप्तान्नविद्यावेदितारं पुण्यमेवाप्नोति न पापमित्येवार्थः । उक्तञ्च –

सप्तान्नोपासने योग्या देवा एव ततो हि यत् ।
देवांश्च पापं नाप्नोति तस्मात्पापं न तस्य तु ।।

इति । तथा ज्ञानपादे –

पुण्यमेवामुमाप्नोति न देवान्पापमाप्नुयात् ।।

इत्यनुव्याख्यानसुधायां – ''अमुं सप्तान्नविद्योपासनेन प्रेरकतया परपुरप्रवेशिनं परकृतं पुण्यमेवाप्नोति, न पापं, कुतः, देवो ह्यसौ जातः । नहि देवान् पापं प्राप्नोतीत्यर्थः'' इत्युक्तम् ।

ಪ್ರಶ್ನೆ - ಗ್ರಂಥಕಾರರು 'ಪುಣ್ಯಮೇವಾಮುಂ' ಎಂಬ ಶ್ರುತಿಯನ್ನು ಪರಮಾತ್ಮನ ಪರವಾಗಿ ಉದಾಹರಿಸಿದ್ದಾರೆ. ಆದರೆ ಸಪ್ತಾನ್ನವಿದ್ಯೆಯನ್ನು ಉಪಾಸನೆ ಮಾಡುವ ಬಗ್ಗೆ ಈ ಶ್ರುತಿಯು ಹೊರಟಿದೆ. ಯಾರು ಸಪ್ತಾನ್ನವಿದ್ಯೆಯನ್ನು ಉಪಾಸನೆ ಮಾಡುತ್ತಾರೋ ಅವರು ಪುಣ್ಯವನ್ನೇ ಹೊಂದುತ್ತಾರೆ ಹೊರತು ಪಾಪವನ್ನು ಹೊಂದಲಾರರೆಂದು ಈ ಶ್ರುತಿಯು ಹೇಳುತ್ತಿದೆ.

ಸಪ್ತಾನ್ನೋಪಾಸನೇ ಯೋಗ್ಯಾ ದೇವಾ ಏವ ತತೋ ಹಿ ಯತ್ ॥

ಸಪ್ತಾನ್ನವಿದ್ಯೆಯನ್ನು ಉಪಾಸನೆ ಮಾಡುವ ಅಧಿಕಾರ, ದೇವತೆಗಳಿಗೆ ಮಾತ್ರವಿರುತ್ತದೆ. ದೇವತೆಗಳಿಗೆ ಎಂದೂ ಸಹ ಪಾಪವು ಬರುವುದಿಲ್ಲ. ಆದ್ದರಿಂದ ಶರೀರದ ಒಳಗಡೆ ಪ್ರವೇಶಿಸಿದ ದೇವತೆಗಳಿಗೆ ಪಾಪಲೇಪವಿಲ್ಲವೆಂದು ಶ್ರುತಿಯು ಹೇಳುತ್ತಿದೆ.

ಮತ್ತು ಜ್ಞಾನ ಪಾದದ ಅನುವ್ಯಾಖ್ಯಾನದಲ್ಲಿ ''ಪುಣ್ಯಮೇವಾಮುಮಾಪ್ನೋತಿ ನ ದೇವಾನ್ ಪಾಪಮಾಪ್ನುಯಾತ್'' ಅಂತರ್ಗತರಾದ ದೇವತೆಗಳು ಪುಣ್ಯವನ್ನಷ್ಟೇ ಹೊಂದುತ್ತಾರೆ ಹೊರತು ಪಾಪವನ್ನು ಹೊಂದಲಾರರೆಂದು ಹೇಳಿದ್ದಾರೆ. ನ್ಯಾಯಸುಧೆಯಲ್ಲಿಯೂ ಸಹ ''ಅಮುಂ ಸಪ್ತಾನ್ನವಿದ್ಯೋಪಾಸನೇನ ಪ್ರೇರಕತಯಾ ಪರಪುರಪ್ರವೇಶಿನಂ ಪರಕೃತಂ ಪುಣ್ಯಮೇವಾಪ್ನೋತಿ, ನ ಪಾಪಂ, ಕುತಃ, ದೇವೋ ಹ್ಯಸೌ

ಜಾತಃ । ನಹಿ ದೇವಾನ್ ಪಾಪಂ ಪ್ರಾಪ್ನೋತೀತ್ಯರ್ಥಂ'' ಸಪ್ತಾನ್ನ ವಿದ್ಯೆಯನ್ನು ಉಪಾಸನೆ ಮಾಡಿದ್ದರಿಂದ ದೇವತೆಗಳು ಮತ್ತೊಬ್ಬರ ದೇಹದಲ್ಲಿ ಪ್ರೇರಕರಾಗಿ ಪ್ರವೇಶಿಸುತ್ತಾರೆ. ಆದರೆ ಜೀವರು ನಡೆಸುವ ಪುಣ್ಯಪಾಪಗಳಿಗೆಲ್ಲಾ ದೇವತೆಗಳೇ ಹೊಣೆಯಾಗಲಾರರು. ಹೊರತಾಗಿ ಪುಣ್ಯವನ್ನಷ್ಟೇ ಹೊಂದಿ ಪಾಪದಿಂದ ದೂರರಾಗಿಯೇ ಇರುತ್ತಾರೆ. ಏಕೆಂದರೆ ಇವರು ದೇವತೆಗಳ ವರ್ಗದಲ್ಲಿ ಹುಟ್ಟಿದ್ದರಿಂದ ದೇವತೆಗಳನ್ನು ಪಾಪವು ಎಂದೂ ಸಹ ಮುಟ್ಟುವುದಿಲ್ಲ ಎಂದು ಹೇಳಿದ್ದಾರೆ. ಹೀಗಿರುವಾಗ ಗ್ರಂಥಕಾರರು 'ಪುಣ್ಯಮೇವ' ಎಂಬ ಶ್ರುತಿಯನ್ನು ಭಗತ್ಪರವೆಂದು ಹೇಳಿದ್ದು ತಪ್ಪಲ್ಲವೇ?

**प्रकाशः** – तथाऽप्यमुं सप्तान्नोपासकं देवमित्यर्थकत्वेन देवत्वस्य हेतुत्वोक्तेर्देवोत्तमं हरिं पुण्यं गच्छति, पापं तु नेति किमु वाच्यमित्याशयेनैतदुक्तिः । अत एव गीताभाष्ये सप्तमे – ''पुण्यो गन्धः इति भोगापेक्षया । तथा च श्रुतिः पुण्यमेवामुम्'' इत्यादिना ब्रह्मपरतयेयं श्रुतिरुदाहृता, व्याख्याता च प्रमेयदीपिकायां – ''अमुं उपासकम् । कुतः । तस्य देवत्वात् । तथाऽपि कुतः । न ह वै देवमात्रस्य पुण्यभोगनियमे देवोत्तमस्य सुतरां तत्सिद्धिः'' इति ।

ಉತ್ತರ - ಸಪ್ತಾನ್ನವಿದ್ಯೆಯನ್ನು ಉಪಾಸನೆ ಮಾಡುವವನನ್ನೇ ಈ ಶ್ರುತಿ ಪ್ರತಿಪಾದಿಸುತ್ತಿದೆ ಎಂದು ಹೇಳಿದ್ದು ತಪ್ಪು. ಸಪ್ತಾನ್ನವಿದ್ಯೆಯನ್ನು ಯಾರು ಉಪಾಸನೆ ಮಾಡುತ್ತಾನೋ ಅವನು ದೇವತೆಯೇ ಆಗಿರುತ್ತಾನೆಂಬುದಾಗಿ ದೇವತ್ವಕ್ಕೆ ಹೇತುರೂಪವಾಗಿ ಈ ವಾಕ್ಯವು ಹೊರಟಿದೆ - ದೇವತೆಯನ್ನೇ ಪಾಪಗಳು ಮುಟ್ಟದಿರುವಾಗ ದೇವೋತ್ತಮನಾದ ಶ್ರೀಹರಿಯನ್ನು ಪುಣ್ಯವು ಮುಟ್ಟುತ್ತದೆ ಹೊರತು ಪಾಪವು ಮುಟ್ಟುವುದಿಲ್ಲವೆಂದು ಪ್ರತ್ಯೇಕ ಹೇಳಬೇಕೇನು ! ಎಂಬ ಅಭಿಪ್ರಾಯದಿಂದ ಈ ಮಾತು ಹೊರಟಿದೆ. ಆದ್ದರಿಂದಲೇ ಗೀತಾಭಾಷ್ಯದ ಏಳನೇ ಅಧ್ಯಾಯದಲ್ಲಿರುವ 'ಪುಣ್ಯೋ ಗಂಧಃ' ಎಂಬ ಶ್ಲೋಕವನ್ನು ವ್ಯಾಖ್ಯಾನಿಸುವಾಗ ಶ್ರೀಮದಾಚಾರ್ಯರು 'ಭೋಗಾಪೇಕ್ಷಯಾ' ಎಂದು ಹೇಳಿದ್ದಾರೆ. ಆ ಸಂದರ್ಭದಲ್ಲಿ 'ಪುಣ್ಯಮೇವಾಮುಮ್' ಎಂಬ ಶ್ರುತಿಯನ್ನೇ ಬ್ರಹ್ಮಪರವಾಗಿ ಉದಾಹರಿಸಿದ್ದಾರೆ. ಅಷ್ಟೇ ಅಲ್ಲದೆ ಪ್ರಮೇಯದೀಪಿಕೆಯಲ್ಲಿಯೂ ಸಹ ಟೀಕಾಕಾರರು ಹೀಗೆ ವ್ಯಾಖ್ಯಾನಿಸಿದ್ದಾರೆ - ''ಅಮುಂ ಉಪಾಸಕಮ್ । ಕುತಃ । ತಸ್ಯ ದೇವತ್ವಾತ್ । ತಥಾಽಪಿ ಕುತಃ । ನ ಹ ವೈ ದೇವಮಾತ್ರಸ್ಯ ಪುಣ್ಯಭೋಗನಿಯಮೇ ದೇವೋತ್ತಮಸ್ಯ ಸುತರಾಂ ತತ್ಸಿದ್ಧಿಃ'' ಈ ಉಪಾಸಕನನ್ನು ಪಾಪವು ಏಕೆ ಸಂಪರ್ಕ ಮಾಡುವುದಿಲ್ಲವೆಂದರೆ ದೇವತೆಯಾದ್ದರಿಂದ. ಆದರೂ ಸಹ ಏಕೆ? ಎಂಬ ಪ್ರಶ್ನೆಗೆ ದೇವತೆಯಾದ ಮಾತ್ರದಿಂದಲೇ ಪುಣ್ಯವನ್ನು ಮಾತ್ರ ಭೋಗಿಸುವ ಅಧಿಕಾರವಿರುವಾಗ ದೇವೋತ್ತಮನಾದ ಶ್ರೀಹರಿಗೆ ಪುಣ್ಯಭೋಗನಿಯಮವು ಖಂಡಿತವಾಗಿಯೂ ಸಿದ್ಧವಾಗುತ್ತದೆ.

**गुरुराजीयम्** – अनश्नन्न्य इत्यादिकं त्वशुभभोगाभावविषयमिति सम्बन्धः । एवं प्रकृत्यर्थकर्मफलभोक्तृत्वस्य ब्रह्मणि सावकाशत्वमुपपाद्य

प्रत्ययार्थस्यापि सावकाशत्वमुपपादयितुं शङ्कते – नचेति ।। कथञ्चिन्नेयत्वादिति ।। अवयवभेदादिनेत्यर्थः ।।




ಪೂರ್ವಪಕ್ಷವನ್ನು ಮಾಡುವಾಗ ಶ್ರೀಹರಿಯಲ್ಲಿ ಭೋಕ್ತೃತ್ವ ಇಲ್ಲವೆಂದು ಸಮರ್ಥಿಸಿದ್ದರು. ಆದರೆ ಅನೇಕ ಸ್ಮೃತಿ ಶ್ರುತಿಗಳು ಭಗವಂತನನ್ನು ಭೋಕ್ತೃವೆಂದೇ ಪ್ರತಿಪಾದಿಸುತ್ತಿವೆ. ಅಷ್ಟೇ ಅಲ್ಲದೆ ಕಣ್ಣು, ಕಿವಿ ಮೊದಲಾದ ಎಲ್ಲ ಇಂದ್ರಿಯಗಳಿಂದಲೂ ಭಗವಂತನು ಸುಖವನ್ನು ಅನುಭವಿಸುತ್ತಾನೆಂದು ಶ್ರುತಿಗಳು ಪ್ರತಿಪಾದಿಸುತ್ತಿವೆ. ಸಾಕ್ಷಾತ್ ಶ್ರೀಕೃಷ್ಣನೇ ಭಗವದ್ಗೀತೆಯಲ್ಲಿ 'ಶ್ರೋತ್ರಂ ಚಕ್ಷುಃ ಸ್ಪರ್ಶನಂಚ' ಎಂಬ ಶ್ಲೋಕದಲ್ಲಿ ಎಲ್ಲಾ ಇಂದ್ರಿಯಗಳಿಂದ ತಾನು ಸುಖವನ್ನು ಅನುಭವಿಸುತ್ತೇನೆಂದು ಹೇಳಿಕೊಂಡಿದ್ದಾನೆ.

ಹಾಗಾದರೆ 'ಅನ್ನಶ್ನನ್ನನ್ಯಃ' ಎಂಬ ಶ್ರುತಿಯು ಭಗವಂತನು ಏನನ್ನೂ ತಿನ್ನಲಾರನೆಂದು ಹೇಳುತ್ತಿದೆಯಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಅನೇಕ ಶ್ರುತಿಸ್ಮೃತಿಗಳು ಸ್ಪಷ್ಟವಾಗಿ ಭೋಕ್ತೃತ್ವವನ್ನು ಪರಮಾತ್ಮನಲ್ಲಿ ಪ್ರತಿಪಾದಿಸುತ್ತಿರುವುದರಿಂದ 'ಅನಶ್ನನ್ನನ್ಯಃ' ಎಂಬ ಒಂದು ಶ್ರುತಿಗೆ ಗೌಣಾರ್ಥವನ್ನು ಮಾಡಬೇಕಾಗುತ್ತದೆ. ಅಂದರೆ ಶುಭಫಲಗಳನ್ನಷ್ಟೇ ಭಗವಂತನು ತಿನ್ನುತ್ತಾನೆ ಹೊರತು, ಅಶುಭ ಕರ್ಮಗಳನ್ನು ಎಂದೂ ಸಹ ತಿನ್ನಲಾರನು. ಅಶುಭಫಲವನ್ನು ತಿನ್ನದ ಕಾರಣ ಶ್ರುತಿಯು 'ಅನಶ್ನನ್' ಎಂದು ಹೇಳುತ್ತಿದೆ.

ಅಥವಾ ಪೂರ್ಣಾನಂದಸ್ವರೂಪಿಯಾದ ಭಗವಂತನು ಆಹಾರದಿಂದ ಉಪಜೀವನ ಮಾಡಲಾರ. ಆಹಾರವನ್ನು ತಿನ್ನುವುದರಿಂದ ಅವನಲ್ಲಿ ಆಧಿಕ್ಯವಾಗಲಿ ತಿನ್ನದಿರುವುದರಿಂದ ನ್ಯೂನತೆಯಾಗಲಿ ಉಂಟಾಗುವುದಿಲ್ಲ. ಹೀಗೆ ವಿಷಯಪದಾರ್ಥಗಳ ಭೋಗದಲ್ಲಿ ರಾಗವಿಲ್ಲದ್ದರಿಂದ ಶ್ರುತಿಯು 'ಅನಶ್ನನ್' ಎಂದು ಹೇಳುತ್ತಿದೆ. ವಿಚಾರ ಮಾಡಿದರೆ 'ಋತಂ ಪಿಬಂತೌ' ಎಂಬ ಶ್ರುತಿಯು ಜೀವನ ಭೋಕ್ತೃತ್ವಕ್ಕೆ ಮಾರಕವಾಗಿದೆ. ಏಕೆಂದರೆ 'ಋತ' ಶಬ್ದಕ್ಕೆ ಪುಣ್ಯಫಲವೆಂದರ್ಥ. ಜೀವನು ಪಾಪದ ಫಲವನ್ನೂ ಸಹ ಉಣ್ಣುವುದರಿಂದ ಕೇವಲ ಪುಣ್ಯದ ಫಲವನ್ನು ತಿನ್ನಲು ಅವನಿಗೆ ಸಾಮರ್ಥ್ಯವಿಲ್ಲ. ಇಂತಹ ಜೀವನನ್ನು 'ಋತಂ ಪಿಬಂತೌ' ಎಂಬ ಶ್ರುತಿಯು ಪ್ರತಿಪಾದಿಸಲು ಹೇಗೆ ಸಾಧ್ಯ ? ಈ ಎಲ್ಲ ಕಾರಣಗಳಿಂದ 'ಋತಂ ಪಿಬಂತೌ' ಎಂಬ ಶ್ರುತಿಯಿಂದ ಪರಮಾತ್ಮನೇ ಪ್ರತಿಪಾದ್ಯನೆಂಬ ವಿಚಾರವು ಮನದಟ್ಟಾಗುತ್ತದೆ.



• • • • •

## ದ್ವಿವಚನವೂ ಸಹ ಬಾಧಕವಲ್ಲ

**तात्पर्यचन्द्रिका**

**नापीशपक्षे द्विवचनानुपपत्तिः,**

**यतः –**

**यथैकस्मिन्नेव पाशेऽदितिः पाशानिति श्रुतिः ।**
**तथैकस्मिन्नीश्वरेऽस्तु पिबन्ताविति वागपि ॥**

**यथा नवमे द्विबहुपत्नीकेष्वपि प्रयोगेषु "पत्नीं सन्नह्य" इत्येकवचनान्तो मन्त्रः, यथा वाऽग्नीषोमीयपशुसम्बन्धिन्येकस्मिन्नेव पाशे "अदितिः पाशान्" इत्यग्नीषोमीयपशुप्रकरणस्थमन्त्रगतं बहुवचनम् । अन्यथा हि बहुपाशयुक्तेषु पशुगणेषु पाशमन्त्रस्योत्कर्षः स्यात् । स च नेष्टः, गुणभूतप्रत्ययार्थबहुत्वस्यानुसरणाय तदाश्रयत्वेन प्रधानभूतप्रातिपदिकार्थोत्कर्षायोगेन एकस्मिन्नपि बहुवचनस्य कथञ्चिन्नेयत्वात् । तथेहापि एकस्मिन्नपि ब्रह्मणि द्विवचनमन्येन सह द्वित्वादस्तु, अस्यापि ब्रह्मप्रकरणस्थत्वात् ।**

ಅನುವಾದ - ಈಶ್ವರಪಕ್ಷದಲ್ಲಿ ದ್ವಿವಚನದ ಅನುಪಪತ್ತಿದೋಷವು ಬರುವುದಿಲ್ಲ

ಯಥೈಕಸ್ಮಿನ್ನೇವ ಪಾಶೇऽದಿತಿಃ ಪಾಶಾನಿತಿ ಶ್ರುತಿಃ ।
ತಥೈಕಸ್ಮಿನ್ನೀಶ್ವರೇऽಸ್ತು ಪಿಬಂತಾವಿತಿ ವಾಗಪಿ ॥

ಯಾವ ರೀತಿಯಾಗಿ ಒಂದೇ ಹಗ್ಗದಲ್ಲಿ 'ಅದಿತಿಃ ಪಾಶಾನ್' ಎಂಬುದಾಗಿ ಬಹುವಚನ ಪ್ರಯೋಗವಿದೆಯೋ ಅದೇ ರೀತಿಯಾಗಿ ಒಬ್ಬನೇ ಈಶ್ವರನಲ್ಲಿ 'ಪಿಬಂತೌ' ಎಂಬುದಾಗಿ ದ್ವಿವಚನ ಪ್ರಯೋಗವು ತಪ್ಪಾಗುವುದಿಲ್ಲ.

ಪೂರ್ವಮೀಮಾಂಸೆಯ ನವಮಾಧ್ಯಾಯದಲ್ಲಿ ಇಬ್ಬರು ಅಥವಾ ಅನೇಕ ಮಂದಿ ಪತ್ನಿಯರಿದ್ದಾಗಲೂ 'ಪತ್ನೀಂ ಸನ್ನಹ್ಯ' ಎಂಬ ಏಕವಚನಾಂತವಾದ ಪ್ರಯೋಗವು ಮಂತ್ರದಲ್ಲಿ ಕಾಣಸುತ್ತಿದೆ.

ಮತ್ತೊಂದು ಪೂರ್ವಮೀಮಾಂಸಾಧಿಕರಣದಲ್ಲಿಯೂ ಅಗ್ನಿಷೋಮೀಯಪಶುವಿಗೆ ಸಂಬಂಧಿಸಿದ ಒಂದೇ ಹಗ್ಗದಲ್ಲಿ 'ಅದಿತಿಃ ಪಾಶಾನ್' ಎಂಬುದಾಗಿ ಅಗ್ನಿಷೋಮೀಯ ಪಶುಪ್ರಕರಣದಲ್ಲಿರುವ

ಮಂತ್ರವು ಬಹುವಚನವನ್ನು ಪ್ರಯೋಗಿಸಿದೆ. ಒಂದು ವೇಳೆ ಒಂದು ಹಗ್ಗದಲ್ಲಿ ಬಹುವಚನ ಪ್ರಯೋಗವನ್ನು ಒಪ್ಪಿಕೊಳ್ಳದಿದ್ದರೆ ಅನೇಕ ಹಗ್ಗಗಳಿಂದ ಕೂಡಿರುವ ಪಶುಗಣ ಎಂಬ ಇಷ್ಟಿ ಪ್ರಕರಣದಲ್ಲಿ ಅನೇಕ ಹಗ್ಗಗಳಿರುವುದರಿಂದ 'ಪಾಶ' ಮಂತ್ರವನ್ನು ಅಲ್ಲಿ ಎಳೆದು ಮಾಡಬೇಕಾಗುವ ಪ್ರಸಂಗ ಬರುತ್ತದೆ. ಆದರೆ ಇದು ಪೂರ್ವಮೀಮಾಂಸಕರಿಗೆ ಇಷ್ಟವಿಲ್ಲ. ಏಕೆಂದರೆ ಪ್ರಕೃತಿ ಪ್ರತ್ಯಯಗಳಲ್ಲಿ ಪ್ರತ್ಯಯಾರ್ಥವು ಗೌಣವಾಗಿರುತ್ತದೆ. ಗೌಣವಾಗಿರುವ ಬಹುತ್ವವೆಂಬ ಅರ್ಥವನ್ನು ಅನುಸರಿಸುವುದಕ್ಕಾಗಿ ಅದಕ್ಕೆ ಆಶ್ರಯವಾಗಿ ಪ್ರಧಾನವಾಗಿರುವ ಪ್ರಾತಿಪದಿಕಾರ್ಥವನ್ನು ಗೌಣವಾಗಿ ಅರ್ಥೈಸುವುದು ತಪ್ಪಾಗುತ್ತದೆ. ಆದ್ದರಿಂದ ಒಂದೇ ಹಗ್ಗವಾಗಿದ್ದರೂ ಬಹುವಚನವನ್ನು ಹೇಗಾದರೂ ಹೊಂದಿಸಬೇಕು.

ಈ ಪೂರ್ವಮೀಮಾಂಸಾದೃಷ್ಟಾಂತದಂತೆ ಪ್ರಕೃತದಲ್ಲಿಯೂ ಒಬ್ಬನೇ ಬ್ರಹ್ಮನಲ್ಲಿ ದ್ವಿವಚನ ಪ್ರಯೋಗವನ್ನು ಕೂಡಿಸಬೇಕು. ವಸ್ತುತಃ ಬ್ರಹ್ಮನು ಒಬ್ಬನೇ ಆಗಿದ್ದರೂ ಜೀವನನ್ನು ಸೇರಿಸಿಕೊಂಡಾಗ ದ್ವಿತ್ವವನ್ನು ಅವನಲ್ಲಿ ಹೇಳಬಹುದೆಂದರ್ಥ. ಏಕೆಂದರೆ ಇದೂ ಸಹ ಬ್ರಹ್ಮಪ್ರಕರಣವೇ ಆಗಿರುವುದರಿಂದ

**प्रकाशः –**

**एवमभोक्तृत्वं बाधकं नेत्युपपादनेन ''तस्य कर्मफलभोगाभावात्'' इत्यादिटीका विवृता । अधुना द्विवचनमपि न बाधकमित्याह – नापीत्यादिना विष्णोरेव द्विरूपत्वादित्यन्तेन ।**

ವಿವರಣೆ - 'ಋತಂ ಪಿಬಂತೌ' ಎಂಬ ಶ್ರುತಿಯಿಂದ ವಿಷ್ಣುವು ಪ್ರತಿಪಾದ್ಯನಲ್ಲವೆನ್ನಲು ಯಾವುದೇ ಬಾಧಕವಿಲ್ಲವೆಂದು ಹೇಳಿದಾಗ ಪೂರ್ವಪಕ್ಷಿಯು ಅಭೋಕ್ತೃತ್ವವನ್ನು ಬಾಧಕವನ್ನಾಗಿ ಹೇಳಲು ಪ್ರಯತ್ನಿಸಿದನು. ಅದನ್ನು ಇಲ್ಲಿಯತನಕ ನಿರಾಕರಿಸಿದ್ದಾಯಿತು. ಮತ್ತು 'ಕರ್ಮಫಲಭೋಗಾಭಾವಾತ್' ಎಂಬ ಟೀಕೆಯನ್ನೂ ಸಹ ವ್ಯಾಖ್ಯಾನಿಸಿದ್ದಾಯಿತು. ಪ್ರಕೃತ ದ್ವಿವಚನವನ್ನು ಬಾಧಕವನ್ನಾಗಿ ಪೂರ್ವಪಕ್ಷಿಯು ಹೇಳಲು ಪ್ರಯತ್ನಿಸಿದರೆ ಅದನ್ನೂ ಸಹ ನಿರಾಕರಿಸುತ್ತಿದ್ದಾರೆ. 'ನಾಪಿ' ಇತ್ಯಾದಿ ಗ್ರಂಥದಿಂದ 'ವಿಷ್ಣೋರೇವ ದ್ವಿರೂಪತ್ವಾತ್' ಎಂಬಲ್ಲಿಯ ತನಕ ಇದರ ಸಮರ್ಥನೆಯನ್ನು ಮಾಡುತ್ತಿದ್ದಾರೆ.

**प्रकाशः** – द्विवचनानुपपत्तेश्चतुर्धा परिहारं विवरिष्यन्, द्विवचनमनुपपन्नमिति वदतो यदभिप्रेतं द्विवचनबोध्यस्य द्वित्वस्यैकस्मिन् ब्रह्मण्ययोगात्तदनुरोधेन पिबत्प्रातिपदिकं छत्रिन्यायेन भोक्त्रभोक्तृसमुदाये लक्षणया वर्तत इति, तत्तावदयुक्तं, गुणभूतप्रत्ययार्थानुरोधेन प्रधानभूतप्रातिपदिके लक्षणाया अन्याय्यत्वात् । किन्तु प्रातिपदिकस्य मुख्यार्थं भोक्तारमुपेत्यैव तदनुरोधेन प्रत्ययार्थद्वित्वमेव

**कथञ्चिन्नेयमित्येकं परिहारं ''अभेदैकत्ववत्येव घटे द्रव्यान्तरसहिते द्वित्वदर्शनात्'' इति सुधावाक्यानुसारेण सदृष्टान्तमाह – यत इत्यादिना किञ्चेत्यन्तेन ।**

ವಿಷ್ಣುವಿನಲ್ಲಿ ದ್ವಿವಚನವು ಅನುಪಪನ್ನವಾಗಿದೆಯೆಂಬ ಆಕ್ಷೇಪಕ್ಕೆ ನಾಲ್ಕು ಬಗೆಯಲ್ಲಿ ಪರಿಹಾರವನ್ನು ಹೇಳುತ್ತಿದ್ದಾರೆ. ಮೊದಲು ಯಾವ ಪೂರ್ವಪಕ್ಷಿಯು ದ್ವಿವಚನವು ಅನುಪಪನ್ನವಾಗಿದೆಯೆಂದು ಹೇಳುತ್ತಿದ್ದಾನೋ ಅವನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಯಬೇಕು. ದ್ವಿವಚನದಿಂದ 'ದ್ವಿತ್ವವು' ಬೋಧಿತವಾಗುತ್ತದೆ. ಇಂತಹ ದ್ವಿತ್ವವು ಒಬ್ಬನೇ ಬ್ರಹ್ಮನಲ್ಲಿ ಬರಲು ಸಾಧ್ಯವಿಲ್ಲ. ಆದ್ದರಿಂದ 'ಪಿಬತ್' ಎಂಬ ಪ್ರಾತಿಪದಿಕಕ್ಕೆ ಛತ್ರಿನ್ಯಾಯದಿಂದ ಭೋಕ್ತೃ ಹಾಗೂ ಅಭೋಕ್ತೃಗಳ ಸಮುದಾಯದಲ್ಲಿ ಲಕ್ಷಣಾವನ್ನು ಮಾಡಬೇಕೆಂಬುದು ಪೂರ್ವಪಕ್ಷಿಯ ಅಭಿಪ್ರಾಯ.

ಇದು ತಪ್ಪು. ಏಕೆಂದರೆ ಪ್ರಕೃತಿ ಪ್ರತ್ಯಯಾರ್ಥಗಳಲ್ಲಿ ಪ್ರಕೃತ್ಯರ್ಥವು ಪ್ರಧಾನವಾಗಿರುತ್ತದೆ. ಪ್ರತ್ಯಯಾರ್ಥವು ಗೌಣವಾಗಿರುತ್ತದೆ. ಪೂರ್ವಪಕ್ಷಿಗಳು ಗೌಣವಾದ ಪ್ರತ್ಯಯಾರ್ಥಕ್ಕೆ ಅನುಸಾರಿಯಾಗಿ ಪ್ರಕೃತ್ಯರ್ಥಕ್ಕೆ ಲಕ್ಷಣಾ ಮಾಡಬೇಕೆಂದು ಹೇಳುತ್ತಿದ್ದಾರೆ ಇದು ಅನ್ಯಾಯ. ಹೊರತಾಗಿ ಪ್ರಕೃತಿಗೆ ಮುಖ್ಯಾರ್ಥವಾದ ಭೋಕ್ತೃವನ್ನು ಅಂಗೀಕರಿಸಿ ಈ ಭೋಕ್ತೃವಿಗೆ ಅನುಸಾರಿಯಾಗಿ ಗೌಣವಾದ ಪ್ರತ್ಯಯಾರ್ಥವೆನಿಸಿದ ದ್ವಿತ್ವವನ್ನು ಹೇಗಾದರೂ ಹೊಂದಿಸಬೇಕಾಗುತ್ತದೆ. ಇದು ಮೊದಲನೆಯ ಪರಿಹಾರ. ಈ ವಿಷಯದಲ್ಲಿ 'ಅಭೇದೈಕತ್ವವತ್ಯೇವ ಘಟೇ ದ್ರವ್ಯಾಂತರಸಹಿತೇ ದ್ವಿತ್ವಾದರ್ಶನಾತ್' ಘಟವು ಒಂದೇ ಆಗಿದ್ದರೂ ಸಹ ಮತ್ತೊಂದು ಪದಾರ್ಥವು ಅದರ ಜೊತೆಗೆ ಸೇರಿದಾಗ ಏಕತ್ವವಿರುವ ಘಟದಲ್ಲಿ ದ್ವಿತ್ವವು ಬರುವುದು ಕಂಡಿದೆ ಎಂಬ ಸುಧಾವಾಕ್ಯದ ಸಮ್ಮತಿಯೂ ಇದೆ. ಇದಕ್ಕೆ ಅನುಸಾರಿಯಾಗಿ ಉದಾಹರಣೆಯ ಮೂಲಕ ಪ್ರಥಮ ಪಕ್ಷವನ್ನು 'ಯತಃ' ಎಂಬಲ್ಲಿಂದ ಪ್ರಾರಂಭಿಸಿ 'ಕಿಂಚ' ಎಂಬಲ್ಲಿಯ ತನಕ ಸಮರ್ಥಿಸುತ್ತಿದ್ದಾರೆ.

**प्रकाशः** – 'यतः' इत्यस्य श्लोकेनान्वयः, यस्मात्, 'पाशान्' इति बहुवचनमिवैकस्मिन्नपि द्विवचनं युज्यते, तस्मान्न द्विवचनानुपपत्तिरिति । 'पाशान्' इति श्रुतिरित्येतदुपलक्षणमिति भावेन पूर्वार्धं व्यनक्ति – **यथा नवम इति ।**

तृतीये पादे ''अपूर्वे त्वविकारोऽप्रदेशात्प्रतीयते'' इति पञ्चमेऽधिकरणे दर्शपूर्णमासप्रकरणे ''पत्नीं सन्नह्य'' इति मन्त्रः किमेकद्विबहुपत्नीकेष्वविकारेण प्रयोक्तव्य उत द्विबहु-पत्नीकप्रयोगयोर्द्विबहुवचनाभ्यां ऊहितव्य इति विशये, एकपत्नीके समवेताभिधायित्व-सम्भवान्नैकवचनमन्याय्यनिगदम् । अतो द्विवचनबहुवचनयोरूहितव्य इति प्राप्ते, स्यादेवं, यद्येकपत्नीकाभिप्रायकमिदमाम्नानं स्यात्, न चैवं, सर्वप्रयोगाणां समान-विधानत्वात्सर्वाभिप्रायेणेदमाम्नानम् । तस्मात्सर्वेष्वविकारेणैकवचनान्त एव प्रयोज्य इति सिद्धान्तितम् । तत्र

**यथैकत्वाभावेऽप्येकवचनान्तो मन्त्रो निविशते, तथेहापि ब्रह्मणि द्वित्वाभावेऽपि द्विवचनान्तवागस्त्वित्यर्थः ।**

'ಯತಃ' ಎಂಬ ಪದಕ್ಕೆ ಶ್ಲೋಕದ ಜೊತೆಗೆ ಅನ್ವಯ ಮಾಡಬೇಕು. ಯಾವ ಕಾರಣದಿಂದ 'ಪಾಶಾನ್' ಎಂಬಲ್ಲಿ ಬಹುವಚನವನ್ನು ಗೌಣವನ್ನಾಗಿ ಕೂಡಿಸಬೇಕೋ ಅದರಂತೆ ಒಬ್ಬನೇ ವಿಷ್ಣುವಿನಲ್ಲಿ ದ್ವಿವಚನವನ್ನು ಗೌಣವಾಗಿ ಕೂಡಿಸಬೇಕು. ಆದ್ದರಿಂದ ದ್ವಿವಚನದ ಅನುಪಪತ್ತಿಯು ಬರುವುದಿಲ್ಲವೆಂದು ಅನ್ವಯ. 'ಪಾಶಾನ್' ಎಂಬ ಶ್ರುತಿಯು ಉಪಲಕ್ಷಣವಾಗಿದೆ ಎಂಬ ಅಭಿಪ್ರಾಯದಿಂದ ಶ್ಲೋಕದ ಪೂರ್ವಾರ್ಧವನ್ನು 'ಯಥಾ ನವಮೇ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

'ಅಪೂರ್ವೇ ತ್ವವಿಕಾರೋಽಪ್ರದೇಶಾತ್ಪ್ರತೀಯತೇ'[1] (೯-೩-೫)

ದರ್ಶಪೂರ್ಣಮಾಸಪ್ರಕರಣದಲ್ಲಿ 'ಪತ್ನೀಂ ಸನ್ನಹ್ಯ' ಎಂಬ ಮಂತ್ರವು ಕೇಳಿಸುತ್ತಿದೆ. ಈ ಮಂತ್ರವನ್ನು ಕೇಳಿದಾಗ ಹೀಗೆ ಸಂಶಯ ಬರುತ್ತದೆ. ಒಬ್ಬಳು ಹೆಂಡತಿ ಇದ್ದಾಗ ಅಥವಾ ಇಬ್ಬರು ಅಥವಾ ಮೂವರು ಹೆಂಡಂದಿರಿದ್ದಾಗ ಮಂತ್ರವನ್ನು ವ್ಯತ್ಯಾಸ ಮಾಡದೆ 'ಪತ್ನೀಂ ಸನ್ನಹ್ಯ' ಎಂದೇ ಹೇಳಬೇಕು. ಅಥವಾ ಇಬ್ಬರು ಅಥವಾ ಅನೇಕ ಹೆಂಡಂದಿರಿದ್ದಾಗ ದ್ವಿವಚನವನ್ನು ಅಥವಾ ಬಹುವಚನವನ್ನು ಊಹಿಸಿಕೊಂಡು (ಪತ್ನೌ, ಪತ್ನೀಃ) ಎಂದು ಮಂತ್ರವನ್ನು ಹೇಳಬೇಕೋ ? ಎಂದು ಸಂಶಯ.

---

(१) भाट्टसङ्ग्रहः –

**अथ षष्ठं दर्शपूर्णमासयोर्द्विपत्नीके प्रयोगे ''पत्नीं सन्नह्य'' इति मन्त्रस्यानूहाधिकरणम्**

**अपूर्वे त्वविकारोऽप्रदेशात्प्रतीयेत ॥ २० ॥**

पूर्ववैषम्येणात्र शङ्कनात्सङ्गतिः । दर्शपूर्णमासयोः ''पत्नीं सन्नह्य'' इति श्रुतो मन्त्रः किं द्विबहुपत्नीकर्तृककप्रयोगेष्वनूहेन प्रयोज्यः, उतोहेनेति सन्देहे, पूर्वत्र पाशानिति बहुवचनस्यागत्यौपचारिकत्वेपीहैकवचनस्यैकपत्नीकयजमानकर्तृकप्रयोगे समवेतार्थत्वसम्भवाद्द्विबहुपत्नीकयजमानकर्तृकप्रयोगेपि दृष्टार्थत्वलाभायोहितव्यो मन्त्र इति प्राप्ते **सिद्धान्तः** । स्यादेवं यद्येकपत्नीकप्रयोगाभिप्राय एतन्मन्त्रपाठः । न चैवम् । किन्तु सर्वप्रयोगसाधारण्येनैवाऽम्नातः । सर्वत्रोपदेशत एव मन्त्रस्य प्राप्तेः । अदृष्टार्थमेकवचनं सत्सर्वप्रयोगेष्वविकारेणैव प्रयोगं सम्पादयतीत्यनूहो मन्त्रस्येति । तदाह सूत्रे, **अपूर्वे** प्रकृतिभूते द्विबहुपत्नीकप्रयोगे ''पत्नीम्'' इति मन्त्रस्या**विकारो**ऽनूहः **प्रतीयते** । कुतः ? **अप्रदेशा**दनतिदेशात् । सर्वप्रयोगाणां प्रकृतिविकृतिभावाभावेन समप्रधानत्वादित्यर्थः । **फलन्तु** अनूहेन सर्वत्र प्रयोगः ।

इति षष्ठं दर्शपूर्णमासयोर्द्विबहुपत्नीके प्रयोगे ''पत्नीं सन्नह्य'' इति मन्त्रस्यानूहाधिकरणम्

(सूत्रम् २०)

ಪರಿಪೂರ್ಣಚಂದ್ರಿಕಾ

ಪೂರ್ವಪಕ್ಷ - ಇಬ್ಬರು ಅಥವಾ ಮೂವರು ಹೆಂಡಂದಿರಿದ್ದಾಗ ದ್ವಿವಚನ, ಬಹುವಚನಗಳನ್ನು ಊಹಿಸಿಕೊಳ್ಳಬೇಕು. ಏಕೆಂದರೆ ಒಬ್ಬಳು ಹೆಂಡತಿ ಇದ್ದಾಗ ಮಾತ್ರ ಪ್ರತ್ಯಯಾರ್ಥವೆನಿಸಿದ ಏಕತ್ವವು ಅವಳಲ್ಲಿ ಸಂಭಾವಿತವಾಗುತ್ತದೆ. ಆದರೆ ಅನೇಕ ಪತ್ನಿಯರಲ್ಲಿ ಏಕತ್ವವು ಬಾಧಿತವಾದ್ದರಿಂದ ಏಕವಚನ ಪ್ರಯೋಗವು ತಪ್ಪಾಗುತ್ತದೆ.

ಸಿದ್ಧಾಂತ - ಅನೇಕ ಪತ್ನಿಯರಿದ್ದರೂ ಸಹ ಏಕವಚನವನ್ನೇ ಪ್ರಯೋಗಿಸಬೇಕು. ಒಂದು ವೇಳೆ ಒಬ್ಬಳೇ ಹೆಂಡತಿ ಎಂಬ ವಿವಕ್ಷೆಯು ಶ್ರುತಿಗೆ ಇರುವುದಾದರೆ ನೀವು ಹೇಳಿದ್ದನ್ನು ಒಪ್ಪಬಹುದಿತ್ತು. ಆದರೆ ಅನೇಕಮಂದಿ ಹೆಂಡಂದಿರಿದ್ದರೂ ಸಹ 'ಪತ್ನೀಂ ಸನ್ನಹ್ಯ' ಎಂದೇ ಪ್ರಯೋಗಿಸಬೇಕೆಂದು ಶ್ರುತಿಯ ಅಭಿಪ್ರಾಯ. ಆದ್ದರಿಂದ ಒಬ್ಬಳೇ ಪತ್ನಿಯಿರಲಿ ಅನೇಕ ಪತ್ನಿಯಂದಿರಿರಲಿ ವ್ಯತ್ಯಾಸ ಮಾಡದೆ ಒಂದೇ ಕ್ರಮದಲ್ಲಿ 'ಪತ್ನೀಂ ಸನ್ನಹ್ಯ' ಎಂದು ಪ್ರಯೋಗಿಸಬೇಕು.

ಈ ಪೂರ್ವಮೀಮಾಂಸಾಧಿಕರಣದಲ್ಲಿ ಅನೇಕ ಪತ್ನಿಯರಿದ್ದಾಗ ಏಕತ್ವವು ಬಾಧಿತವಾಗಿದ್ದರೂ ಏಕವಚನಾಂತವಾದ ಪ್ರಯೋಗವನ್ನೇ ಮಾಡಬೇಕೆಂದು ಸಿದ್ಧಾಂತ ಮಾಡಲಾಗಿದೆ. ಅದರಂತೆ ಪ್ರಕೃತ ಬ್ರಹ್ಮನಲ್ಲಿ ದ್ವಿತ್ವವು ಬಾಧಿತವಾಗಿದ್ದರೂ ದ್ವಿವಚನಾಂತ ಪ್ರಯೋಗವನ್ನು ಮಾಡಬಹುದು.

**प्रकाशः – यथा वेति** । तत्रैव ''विप्रतिपत्तौ विकल्पः स्याद्गुणे त्वन्याय्य-कल्पनैकदेशत्वात्'' इति चतुर्थेऽधिकरणेऽग्नीषोमीयपशौ ''अदितिः पाशान् प्रमुमोक्तु देवः'' इति बहुवचनान्तपाशमन्त्रः श्रुतः । स किं प्रकृतावेव निविशतेऽथ बहुपाशकेषु ''आग्नेयं कृष्णग्रीवमालभेत'' इत्यादिना विहितेषु पशुगणेषूत्कृष्यत इति संशये, एकस्मिन् बहुवचनस्यायोगादुत्कर्ष इति प्राप्ते, पाशप्रातिपादिकार्थान्वितं विभक्त्यभिहितं कर्मकारकं प्रकृतावपि पाशकर्मकमोचानभिधानेन सम्भवन्निवेशं नोत्कर्षं सहते, सङ्ख्यामात्रं त्वसम्भवदपि गुणात्वान्न प्रातिपदिकं प्रधानभूतं कारकं वाऽलमुत्क्रुष्टम्, अतो न सङ्ख्यावशेन मन्त्रस्योत्कर्षः, बहुवचनस्य त्वेकस्मिन्नपि पाशे योगोऽवयवबहुत्वाभिप्रायेण च्छान्दस इति सिद्धान्तितम् ।

तथेहाप्येकस्मिन्नेव ब्रह्मण्यन्येन सह द्वित्वादस्तु द्विवचनमित्यर्थः । एकवचनस्याद्यं बहुवचनस्य द्वितीयमिति विवेकः ।

ವಿಪ್ರತಿಪತ್ತೌ ವಿಕಲ್ಪಃ ಸ್ಯಾದ್ಗುಣೇ ತ್ವನ್ಯಾಯ್ಯ ಕಲ್ಪನೈಕದೇಶತ್ವಾತ್[1] (೯-೩-೪)

(१) भाट्टसङ्ग्रहः –

**अथ पञ्चममग्नीषोमीयपशौ पाशैक वपाशबहुत्वाभिधायिमन्त्रयोर्विकल्पाधिकरणम् (सूत्राणि (१५-१९)**

**विप्रतिपत्तौ विकल्पः स्यात्समत्वाद्गुणे त्वन्याय्यकल्पनैकदेशत्वात् ॥ १५ ॥**

ಅಗ್ನಿಷೋಮೀಯಪಶುವನ್ನು ವಿಧಿಸುವಾಗ "ಅದಿತಿಃ ಪಾಶಾನ್ ಪ್ರಮುಮೋಕ್ತುದೇವಃ" ಎಂಬ ಬಹುವಚನಾಂತವಾದ ಪಾಶಮಂತ್ರವು ಕೇಳಿಸುತ್ತಿದೆ. ಈ ಮಂತ್ರವು ಒಂದೇ ಹಗ್ಗವಿರುವ ಪ್ರಕೃತ ಯಾಗದಲ್ಲಿ ಉಪಯುಕ್ತವಾಗುತ್ತದೋ ಅಥವಾ ಅನೇಕ ಹಗ್ಗಗಳಿರುವ "ಆಗ್ನೇಯಂ ಕೃಷ್ಣಗ್ರೀವಮಾಲಭೇತ' ಇತ್ಯಾದಿ ವಾಕ್ಯದಿಂದ ವಿಧಿಸಲ್ಪಟ್ಟ ಪಶುಗಣ ಎಂಬ ಇಷ್ಟಿಯಲ್ಲಿ ಎಳೆದು ಅನ್ವಯಿಸುವುದರಿಂದ ಅಲ್ಲಿ ಉಪಯುಕ್ತವಾಗುತ್ತದೋ? ಎಂದು ಸಂಶಯ.

ಪೂರ್ವಪಕ್ಷ - ಒಂದೇ ಹಗ್ಗದಲ್ಲಿ ಬಹುವಚನವು ಬಾಧಿತವಾದ್ದರಿಂದ ಈ ಮಂತ್ರವು ಪ್ರಕೃತವಾದ ಯಾಗದಲ್ಲಿ ಉಪಯುಕ್ತವಾಗುವುದಿಲ್ಲ ಹೊರತಾಗಿ ಪಶುಗಣವೆಂಬ ಮತ್ತೊಂದು ಇಷ್ಟಿಯಲ್ಲಿ ಉಪಯುಕ್ತವಾಗುತ್ತದೆಂದು ತಿಳಿಯಬೇಕು.

ಸಿದ್ಧಾಂತ - ಪ್ರಕೃತವಾದ ಯಾಗದಲ್ಲಿಯೇ ಈ ಮಂತ್ರವು ಉಪಯುಕ್ತವಾಗುತ್ತದೆ. ಒಂದೇ ಹಗ್ಗವುಳ್ಳ ಈ ಯಾಗದಲ್ಲಿ ಬಹುವಚನಾಂತವಾದ 'ಪಾಶಾನ್' ಎಂಬ ಮಂತ್ರವನ್ನು ಹೇಳಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. 'ಪಾಶ' ಎಂಬ ಪ್ರಾತಿಪದಿಕಾರ್ಥದಲ್ಲಿ ವಿಭಕ್ತ್ಯರ್ಥವಾದ ಕರ್ಮಕಾರಕವು ಅನ್ವಯವನ್ನು ಹೊಂದಿದೆ. ಆದ್ದರಿಂದ ಪ್ರಕೃತಿ ಯಾಗದಲ್ಲಿ ಪಾಶಕರ್ಮಕವಾದ ಮೋಚವನ್ನು ಹೇಳಿರುವುದರಿಂದ ವಿಕೃತಿಯಾಗದಲ್ಲಿಯೂ ಅದನ್ನೇ ಹೇಳಬೇಕು. ಹೊರತಾಗಿ ಬೇರೆ ಯಾಗದಲ್ಲಿ ಇದರ ಉಪಯೋಗವನ್ನು ಹೇಳಿದರೆ ಚೋದಕ ಪ್ರಮಾಣದ ವಿರೋಧವು ಬರುತ್ತದೆ. ವಸ್ತುತಃ ಬಹುತ್ವ ಎಂಬ ಸಂಖ್ಯೆಯು ಪಾಶದಲ್ಲಿ ಅಸಂಭಾವಿತವಾಗಿದೆ. ಆದರೆ ಪ್ರಾತಿಪದಿಕಾರ್ಥ ಹಾಗೂ ಕಾರಕಗಳಿಗಿಂತ ಬಹುತ್ವಸಂಖ್ಯೆಯು ಗೌಣವಾಗಿದೆ.

---

**(प्रकरणविशेषाच्च ॥ १६ ॥ अर्थाभावात्तु नैवं स्याद्गुणमात्रमितरत् ॥ १७ ॥ द्यावोस्तथेति चेत् ॥ १८ ॥ नोत्पत्तिशब्दत्वात् ॥ १९ ॥)**

पूर्वाक्षेपेणात्र शङ्कात्सङ्गतिः । अग्नीषोमीयपशौ द्वौ पाशमन्त्रावित्युक्तम् । तत्र बहुवचनानन्तो मन्त्रः किं प्रकरणे निविशते, किं वा बहुपाशके पशुगणे उत्कृष्यत इति सन्देहे, बहुवचनस्यैकस्मिन्नयोगाद्बहुवचनोक्तबहुत्वलिङ्गेन प्रकरणं बाधित्वोत्कृष्यत इति प्रकृतावनिवेशे विकृतौ चोदकेनाप्राप्तेः प्राक्तनचिन्ता न युक्तेति **प्राप्ते सिद्धान्तः**, प्रधानभूत-प्रातिपदिकार्थस्य पाशस्य विभक्त्यर्थस्य च कर्मत्वस्य प्रकरणे निवेशसम्भवेन गुणभूत-वचनोक्तबहुत्वानुरोधेनोत्कर्षस्यायुक्तत्वादवयवबहुत्वाभिप्रायेण बहुवचनमपि प्रकरण एव कथञ्चिन्निवेशीयमिति नोत्क्रष्टव्यो मन्त्रः । एवञ्चैकवचनान्तबहुवचनान्तयोर्द्वयोरपि प्रकरण एव निवेशाद्विकल्प इति । तदाह **सूत्रे, विप्रतिपत्तौ** पाशमन्त्रयोः प्रकृतौ कः प्रयोज्य इति विशये **विकल्पः स्यात्** । **कुतः**? पाशप्रकाशनसामर्थ्यरूपलिङ्गस्य **प्रकरणस्य** च **समत्वात्** । **गुणे तु** बहुवचने **तु अन्याय्यनिगदत्वकल्पनात्तस्यैकदेशत्वादप्रधानत्वादिति** । फलन्तु विकृतौ प्रवृत्तिर्मन्त्रस्य ।

इति पञ्चममग्नीषोमीयपशौ पाशैकत्वपाशबहुत्वभिधायिमन्त्रयोर्विकल्पाधिकरणम्

ಪರಿಪೂರ್ಣಚಂದ್ರಿಕಾ

ಪ್ರಧಾನವಾದ ಪ್ರಾತಿಪದಿಕ ಹಾಗೂ ಕಾರಕಗಳನ್ನೇ ಸ್ವೀಕರಿಸಿ ಅಪ್ರಧಾನವಾದ ಶಂಕೆಯನ್ನು ಹೇಗಾದರು ಅರ್ಥೈಸಬೇಕು. ಅಂದರೆ ಒಂದೇ ಪಾಶದಲ್ಲಿ ಅದರ ಅವಯವಗಳು ಬಹಳವಿರುವುದರಿಂದ ಬಹುತ್ವಸಂಖ್ಯೆಯು ಉಪಪನ್ನವಾಗುತ್ತದೆಂದು ಕೂಡಿಸಬೇಕು. ಛಾಂದಸ ಪ್ರಯೋಗವಾದ್ದರಿಂದ ಈ ತರಹದ ಪ್ರಯೋಗವು ತಪ್ಪಾಗುವುದಿಲ್ಲ.

ಪೂರ್ವಮೀಮಾಂಸೆಯ ಈ ದೃಷ್ಟಾಂತದಿಂದ ಬ್ರಹ್ಮನು ಒಬ್ಬನೇ ಆಗಿದ್ದರು ಜೀವನಿಂದ ಕೂಡಿಸಿದಾಗ ದ್ವಿತ್ವವನ್ನು ಹೇಳಬಹುದು. ಆವಾಗ ದ್ವಿವಚನ ಪ್ರಯೋಗವೂ ಸಹ ತಪ್ಪಾಗುವುದಿಲ್ಲ. ಮೊದಲನೆಯ ದೃಷ್ಟಾಂತವು ಏಕವಚನವನ್ನು ಸಮರ್ಥಿಸುತ್ತಿದೆ. ಎರಡನೆಯ ದೃಷ್ಟಾಂತವು ಬಹುವಚನವನ್ನು ಸಮರ್ಥಿಸುತ್ತಿದೆಯೆಂಬ ಭೇದವನ್ನು ತಿಳಿಯಬೇಕು.

**प्रकाशः** – ''अन्यथा'' इति । तदधिकरणपूर्वपक्षापादनम् । अस्त्वित्यत आह – **स चेति** । उक्तञ्च शाबरभाष्ये – 'गुणे त्वन्याय्यकल्पना स्यान्न प्रधाने, गुणश्च विभक्त्यर्थः, प्रधानं प्रातिपदिकार्थः'' इत्यादि ।

नन्वस्याग्नीषोमीयप्रकरणस्थत्वात्तत्प्रकरणानुग्रहाय तत्र कथञ्चिन्निवेश उक्तः । अत एव तत्र ''प्रकरणविशेषाच्च'' इति गुणसूत्रमित्यत आह – **अस्यापीति** ।

ಬಹುಪಾಶಯುಕ್ತಿಯಲ್ಲಿ ಈ ಮಂತ್ರವನ್ನು ಉತ್ಕರ್ಷ ಮಾಡುವುದು ನಮಗೆ ಇಷ್ಟಾಪತ್ತಿ ಎಂಬ ಪ್ರಶ್ನೆಗೆ 'ಸ ಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಪ್ರಧಾನವಾದ ವಿಭಕ್ತ್ಯರ್ಥವನ್ನು ಮುಖ್ಯವಾಗಿ ಸ್ವೀಕರಿಸಿ ಪ್ರಾತಿಪದಿಕಾರ್ಥವನ್ನು ಅಮುಖ್ಯವಾಗಿ ಸ್ವೀಕರಿಸುವುದು ತಪ್ಪಾಗುತ್ತದೆಂದು ಅಭಿಪ್ರಾಯ. ಇದನ್ನು ಶಾಬರ ಭಾಷ್ಯದಲ್ಲಿವೂ ಸಹ ಸಮ್ಮತಿಸಿದೆ - "ಗುಣೇ ತ್ವನ್ಯಾಯ್ಯಕಲ್ಪನಾ ಸ್ಯಾನ್ನ ಪ್ರಧಾನೇ ಗುಣಶ್ಚ ವಿಭಕ್ತ್ಯರ್ಥಃ, ಪ್ರಧಾನಂ ಪ್ರಾತಿಪದಿಕಾರ್ಥಃ" ವಿಭಕ್ತ್ಯರ್ಥವು ಗೌಣವಾಗಿರುತ್ತದೆ. ಪ್ರಾತಿಪದಿಕಾರ್ಥವು ಪ್ರಧಾನವಾಗಿರುತ್ತದೆ. ಗೌಣವಾದ ವಿಭಕ್ತ್ಯರ್ಥವನ್ನು ಪ್ರಧಾನವಾಗಿ ಸ್ವೀಕರಿಸುವುದು ಅನ್ಯಾಯವೆಂದು ಹೇಳಲಾಗಿದೆ.

'ಅದಿತಿ ಪಾಶಾಂ' ಎಂಬ ವಾಕ್ಯವು ಅಗ್ನಿಷೋಮಿಯ ಪ್ರಕರಣದಲ್ಲಿರುವುದರಿಂದ ಪ್ರಕರಣದ ಅನುಗ್ರಹಕ್ಕಾಗಿ ಬೇರೆ ಕಡೆ ಉತ್ಕರ್ಷ ಮಾಡುವುದು ಅನಿವಾರ್ಯವಾಗಿದೆ. ಆದ್ದರಿಂದಲೇ 'ಪ್ರಕರಣ-ವಿಶೇಷಾಚ್ಚ' ಎಂಬ ಗುಣಸೂತ್ರವು ಆ ಅಧಿಕರಣದಲ್ಲಿ ಪ್ರಾಪ್ತವಾಗಿದೆ. ಆದರೆ ಪ್ರಕೃತದಲ್ಲಿ ಬ್ರಹ್ಮ ಪ್ರಕರಣವು ಇರುವುದಿಲ್ಲವೇ? ಎಂಬ ಪ್ರಶ್ನೆಗೆ 'ಅಸ್ಯಾಪಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – उत्तरत्र ''यस्सेतुः'' इत्यादिभिः, पूर्वत्र ''यस्य ब्रह्म च क्षत्रं च'' इत्यादिभिर्ब्रह्मविषयैर्वाक्यैः सन्दष्टत्वेन गुहाविष्टत्वादिना लिङ्गेन च ब्रह्मप्रकरणस्थत्वावगमात् । एवञ्चान्येन सह द्वित्वादेव द्विवचनोपपत्तौ न तदनुरोधेन लक्षणया प्रकृत्यर्थो बाधनीय इति ।

ಗುಹಾಧಿಕರಣ (೧-೨-೩)

'ಋತಂ ಪಿಬಂತೌ' ಎಂಬ ಮುಂದಿನ ಭಾಗದಲ್ಲಿ 'ಯಸ್ಸೇತುಃ' ಇತ್ಯಾದಿಯಾದ ಬ್ರಹ್ಮಪರವಾಕ್ಯಗಳೇ ಇರುತ್ತವೆ. ಹಿಂದೆಯೂ ಸಹ "ಯಸ್ಯ ಬ್ರಹ್ಮಚ ಕ್ಷತ್ರಂ ಚ" ಇತ್ಯಾದಿಯಾಗಿ ಬ್ರಹ್ಮಪರವಾಕ್ಯಗಳೇ ಇರುತ್ತವೆ. ಹೀಗೆ ಬ್ರಹ್ಮಪರವಾದ ಹಿಂದಿನ ಮುಂದಿನ ವಾಕ್ಯಗಳಿಂದ 'ಋತಂ ಪಿಬಂತೌ' ಎಂಬ ಶ್ರುತಿಯು ಸಂದಷ್ಟವಾಗಿದೆ. ಅಷ್ಟೇ ಅಲ್ಲದೇ 'ಗುಹಾವಿಷ್ಟತ್ವಾದಿ' ಬ್ರಹ್ಮನ ಅಸಾಧಾರಣ ಲಿಂಗಗಳಿಂದ ಯುಕ್ತವಾಗಿದೆ. ಆದ್ದರಿಂದ ಇದನ್ನು ಬ್ರಹ್ಮಪ್ರಕರಣವೆಂದು ನಿರ್ಧರಿಸಬಹುದು. ಬ್ರಹ್ಮಪ್ರಕರಣವಾದ್ದರಿಂದಲೇ ಇಲ್ಲಿರುವ ಪ್ರಕೃತ್ಯರ್ಥವನ್ನು ಲಕ್ಷಣಾವೃತ್ತಿಯಿಂದ ಸ್ವೀಕರಿಸಿ ಗೌಣಾರ್ಥ ಮಾಡಬಾರದು, ಹೊರತಾಗಿ ಪ್ರಕೃತ್ಯರ್ಥವನ್ನು ಅನುಸರಿಸಿ ದ್ವಿವಚನ ಲಿಂಗ ತಿಳಿಯುವ ದ್ವಿತ್ವವನ್ನು ಅನ್ಯಪದಾರ್ಥದ ಜೊತೆಗೆ ಸ್ವೀಕರಿಸಿ ಹೇಗಾದರು ಕೂಡಿಸಬೇಕು.

**प्रकाशः** – ननु विषमोऽयमुपन्यासः, तत्र प्रकृत्यर्थस्योत्कर्षभिया प्रत्ययार्थस्य बाध उक्तः, इह तूक्तरीत्या ईश्वरस्य भोक्तृत्वाज्जीवस्य च भोक्तृत्वस्य प्रत्यक्षादिसिद्धत्वात्, पिबत्प्रातिपदिकेन जीवेश्वरयोर्ग्रहणे प्रातिपदिकार्थस्य भोक्तृत्वस्य प्रत्ययार्थस्य द्वित्वस्य च मुख्यस्यैव सम्भवादिति चेत् ।

ಆಕ್ಷೇಪ - ಪೂರ್ವಮೀಮಾಂಸೆಯ ದೃಷ್ಟಾಂತವೇ ವಿಷಮವಾಗಿದೆ. ಏಕೆಂದರೆ 'ಅದಿತಿಃಪಾಶಾನ್' ಎಂಬಲ್ಲಿ ಅನೇಕ ಪಾಶಗಳಾಗಬಾರದೆಂಬ ಉದ್ದೇಶದಿಂದ 'ಸ ಚ' ಎಂಬ ಪ್ರತ್ಯಯದ ಅರ್ಥವನ್ನು ಗೌಣವಾಗಿ ಸ್ವೀಕರಿಸುವುದು ಅನಿವಾರ್ಯ. ಆದರೆ ಪ್ರಕೃತ 'ಪಿಬಂತೌ' ಎಂಬಲ್ಲಿ ಪ್ರಕೃತ್ಯರ್ಥವು ಬಾಧಿತವಾಗಿಲ್ಲ. ಏಕೆಂದರೆ ಈಶ್ವರನು ಭೋಕ್ತ್ಯವಾಗಿದ್ದಾನೆಂದು ಅನೇಕ ಶ್ರುತಿ ಸ್ಮೃತಿಗಳಿಂದ ಸಾಧಿಸಿದ್ದೀರಿ. ಜೀವನೂ ಸಹ ಭೋಕ್ತೃವಾಗಿದ್ದಾನೆಂಬುದು ಪ್ರತ್ಯಕ್ಷದಿಂದಲೇ ಸಿದ್ಧವಾಗಿದೆ. ಆದ್ದರಿಂದ 'ಪಿಬತ್' ಪ್ರಾತಿಪದಿಕವು ಜೀವೇಶ್ವರರನ್ನು ಪ್ರತಿಪಾದಿಸಿದರೆ ಪ್ರಾತಿಪದಿಕಾರ್ಥವು ಬಾಧಿತವಾಗುವುದಿಲ್ಲ. ಹೀಗೆ ಪ್ರಾತಿಪದಿಕಾರ್ಥವೆನಿಸಿದ ಭೋಕ್ತೃತ್ವವನ್ನು ಪ್ರತ್ಯಯಾರ್ಥವೆನಿಸಿದ ದ್ವಿತ್ವವನ್ನು ಮುಖ್ಯವಾಗಿ ಸ್ವೀಕರಿಸಬಹುದಲ್ಲವೇ?

**प्रकाशः** – मैवं, ऋतशब्दितधर्मफलभोक्तृत्वस्य च जीवेऽनुपपत्त्या तस्य लक्षणीयत्वात् । अत एव टीकादौ पूर्वं द्विवचनस्येश्वरे सावकाशत्वोक्तावप्यत्र पूर्वमृतपानकर्तृत्वस्येश्वरैकनिष्ठत्वमुक्तम् ।

ಸಮಾಧಾನ - ಇದು ತಪ್ಪು. 'ಪಿಬತ್' ಪ್ರಾತಿಪದಿಕಕ್ಕೆ ಕೇವಲ 'ಭೋಕ್ತೃತ್ವ' ಎಂಬ ಅರ್ಥವನ್ನು ಸ್ವೀಕರಿಸಬಾರದು. 'ಋತ' ಶಬ್ದಕ್ಕೆ ಧರ್ಮಫಲ ಎಂದರ್ಥವಿರುವುದರಿಂದ 'ಪಿಬತ್' ಪ್ರಾತಿಪದಿಕವು ಧರ್ಮಫಲಭೋಕ್ತೃತ್ವವನ್ನೇ ಹೇಳುತ್ತದೆ. ಆದರೆ ಜೀವನಲ್ಲಿ ಅಧರ್ಮಫಲಭೋಕ್ತೃತ್ವವೂ ಸಹ ಇರುವುದರಿಂದ ಕೇವಲ ಧರ್ಮಫಲ ಭೋಕ್ತೃತ್ವವು ಬಾಧಿತವಾಗಿವೆ. ಆದ್ದರಿಂದ 'ಪಿಬತ್' ಪ್ರಾತಿಪದಿಕಕ್ಕೆ ಜೀವೇಶ್ವರರೆಂಬ ಅರ್ಥವನ್ನು ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದಲೇ ಟೀಕೆಯಲ್ಲಿ ದ್ವಿವಚನಕ್ಕೆ ಈಶ್ವರನಲ್ಲಿ ಸಾವಕಾಶವನ್ನಷ್ಟೇ ಮಾಡಿದ್ದರೂ, ಈ ಹಿಂದೆ ಗ್ರಂಥಕಾರರು ಋತಪಾನಕರ್ತೃತ್ವವನ್ನು ಕೇವಲ ಈಶ್ವರನಲ್ಲಿ ಮಾತ್ರವಿದೆಯೆಂದು ಸಾಧಿಸಿದ್ದಾರೆ.

**गुरुराजीयम्** – **अन्येन सह द्वित्वादस्त्विति** ।। पाशानन्वयेऽपि द्वित्वस्योपपत्त्यर्थमेवान्यसाहित्यस्योपयोगाद्विवचनं छान्दसमस्मिन्पक्ष इति भावः ।

ननु च दृष्टान्तदार्ष्टान्तिकयोर्वैषम्यम् । दृष्टान्ते अदितिः पाशानिति बहुवचनस्याग्नीषोमीय प्रकरणस्थमन्त्रगतत्वेन बहुपाशयुक्तेषूत्कर्षा सम्भवेन तत्र गुणभूतप्रत्ययार्थबाहुल्यस्यानुसरणाय प्रधानभूतप्रातिपदिकार्थोत्कर्षायोगेनैकस्मिन्नपि बहुवचनस्यास्वारस्यसम्भवेऽपि प्रकृते पिबन्तावित्यादि द्विवचनस्य ब्रह्मप्रकरणस्थत्वाभावेनान्यत्रोत्कर्षसम्भवेन प्रकृत्यर्थस्वारस्यानुसारेण प्रत्ययास्वारस्य कल्पनस्यासम्भवादित्यत आह – **अस्यापीति** ।।




ಭೋಕ್ತೃತ್ವವು ಈಶ್ವರನಲ್ಲಿರುವುದರಿಂದ ಅಭೋಕ್ತೃತ್ವವು ಬಾಧಕವಾಗುವುದಿಲ್ಲವೆಂದು ಸಮರ್ಥಿಸಿದ್ದಾಯಿತು. ಅದರಂತೆ ದ್ವಿವಚನವೂ ಸಹ ಬಾಧಕವಾಗುವುದಿಲ್ಲ. ಏಕೆಂದರೆ ಪೂರ್ವಮೀಮಾಂಸೆಯಲ್ಲಿ ಅನೇಕ ಹೆಂಡಂದಿರಿರುವ ಯಾಗದಲ್ಲಿಯೂ 'ಪತ್ನೀಂ ಸನ್ನಹ್ಯ'' ಎಂಬುದಾಗಿ ಏಕವಚನದಲ್ಲಿಯೇ ಪ್ರಯೋಗಿಸಿರುವುದು ಕಂಡಿದೆ. ಮತ್ತು 'ಅದಿತಿಃ ಪಾಶಾನ್' ಎಂಬುದಾಗಿ ಒಂದೇ ಹಗ್ಗವಿರುವ ಯಾಗದಲ್ಲಿ ಬಹುವಚನ ಪ್ರಯೋಗ ಮಾಡುವುದು ಕಂಡಿದೆ. ಅದರಂತೆ ಒಬ್ಬನೇ ಈಶ್ವರನಲ್ಲಿ 'ಪಿಬಂತೌ' ಎಂಬುದಾಗಿ ದ್ವಿವಚನ ಪ್ರಯೋಗವನ್ನು ಮಾಡಬಹುದು.





## ಪ್ರಾತಿಪದಿಕಾರ್ಥವಾದ ಸಂಖ್ಯೆಗೆ ಅನ್ವಯ ಮಾಡಬಹುದು

### तात्पर्यचन्द्रिका

**"युवं हि स्थः स्वर्पती इति द्वयोर्यजमानयोः प्रतिपदं कुर्यात्" इति श्रुतं यजमानद्वित्वादि तु द्व्यादिप्रातिपदिकार्थत्वात् सङ्ख्यानभिधानेऽपि कारकाभिधानेन प्रत्ययस्य सार्थक्यवत् प्रातिपदिकस्य सार्थक्याभावात्, रामकृष्णावित्यादाविव च प्रकृते रूपविशेषेणेव यजमाने रूपविशेषेण द्वित्वासम्भवाच्च एकयजमानकदर्शपूर्णमासप्रकरणादुत्कृष्टम् । "यस्मिन् पञ्च पञ्च जनाः" इत्यत्र तु बहुत्वस्य प्रातिपदिकार्थत्वेऽपि ब्रह्मणो बहुरूपत्वाददोषः ।**

ಗುಹಾಧಿಕರಣ (೧-೨-೩)

ಅನುವಾದ - 'ಯುವಂ ಹಿ ಸ್ಥಃ ಸ್ವರ್ಪತೀ ಇತಿ ದ್ವಯೋರ್ಯಜಮಾನಯೋಃ ಪ್ರತಿಪದಂ ಕುರ್ಯಾತ್'' ಎಂಬ ಸೂತ್ರದಲ್ಲಿ 'ದ್ವಿತ್ವ' ಸಂಖ್ಯೆಯ ಅನ್ವಯವು ಯಜಮಾನನಲ್ಲಿ ಕೇಳಿಸುತ್ತಿದೆ. ಈ 'ದ್ವಿತ್ವ' ಸಂಖ್ಯೆಯು 'ದ್ವಿ' ಎಂಬ ಪ್ರಾತಿಪದಿಕದ ಅರ್ಥವಾಗಿದೆ. ಹೊರತು 'ಯಜಮಾನಯೋಃ' ಎಂಬಲ್ಲಿರುವ ಪ್ರತ್ಯಯದ ಅರ್ಥವಾಗಿಲ್ಲ. ಹಾಗಾದರೆ ಪ್ರತ್ಯಯವು ನಿರರ್ಥಕವಾಯಿತಲ್ಲವೇ? ಎಂದು ಶಂಕಿಸಬಾರದು. ಸಂಖ್ಯೆಯನ್ನು ಹೇಳದಿದ್ದರೂ ಕರ್ಮಕಾರಕವನ್ನು ಹೇಳುವ ಪ್ರಯುಕ್ತ ಸಾರ್ಥಕವಾಗುತ್ತದೆ. ಆದರೆ 'ದ್ವಯೋಃ' ಎಂಬಲ್ಲಿರುವ 'ದ್ವಿ' ಎಂಬ ಪ್ರಾತಿಪದಿಕಕ್ಕೆ ದ್ವಿತ್ವವೆಂಬ ಸಂಖ್ಯೆಯನ್ನು ಅರ್ಥವನ್ನಾಗಿ ಹೇಳದಿದ್ದರೆ ಬೇರೆ ಅರ್ಥವಿಲ್ಲದ ಕಾರಣ ನಿರರ್ಥಕವಾಗುವ ಪರಿಸ್ಥಿತಿ ಬರುತ್ತದೆ. ಆದ್ದರಿಂದ ದ್ವಿತ್ವವನ್ನು ಪ್ರಾತಿಪಾದಿಕಾರ್ಥವೆಂದೇ ಹೇಳಬೇಕು ಹೊರತು ಪ್ರತ್ಯಯಾರ್ಥವೆಂದು ಹೇಳಬಾರದು. ಪ್ರತ್ಯಯಾರ್ಥವಾಗದ ಕಾರಣ ಇಬ್ಬರು ಯಜಮಾನರಿರುವ ಯಾಗದಲ್ಲಿ ಉತ್ಕರ್ಷ ಮಾಡುವುದು ತಪ್ಪಾಗುವುದಿಲ್ಲ. 'ರಾಮಕೃಷ್ಣೌ' ಎಂಬಲ್ಲಿ ದ್ವಿತ್ವವು ಕೇಳಿಸುತ್ತಿದೆ. ಒಬ್ಬನೇ ಭಗವಂತನಲ್ಲಿ ದ್ವಿತ್ವವು ಅಸಂಭಾವಿತವಾದ್ದರಿಂದ ಭಗವಂತನ ಎರಡು ರೂಪಗಳಿವೆಯೆಂಬ ಅಭಿಪ್ರಾಯದಿಂದ ದ್ವಿತ್ವವನ್ನು ಕೂಡಿಸುವಂತೆ ಪ್ರಕೃತ ಯಜಮಾನನಿಗೆ ಎರಡು ರೂಪಗಳಿಲ್ಲದ ಕಾರಣ ದ್ವಿತ್ವದ ಅನ್ವಯವು ಅಸಂಭಾವಿತವಾಗುತ್ತದೆ. ಆದ್ದರಿಂದ ಒಬ್ಬನೇ ಯಜಮಾನನಿರುವ ಜ್ಯೋತಿಷ್ಟೋಮ ಪ್ರಕರಣದಿಂದ ಇದನ್ನು ಎಳೆದು ಮತ್ತೊಂದೆಡೆ ಯಾಗದಲ್ಲಿ ಅನ್ವಯ ಮಾಡಬೇಕು.

'ಯಸ್ಮಿನ್ ಪಂಚ ಪಂಚಜನಾಃ' ಎಂಬಲ್ಲಿಯೂ ಸಹ ಪಂಚತ್ವ ಸಂಖ್ಯೆಯು ಪ್ರಾತಿಪದಿಕಾರ್ಥವಾದ್ದರಿಂದ ಮತ್ತೊಂದು ಪ್ರಕರಣದಲ್ಲಿ ಅನ್ವಯ ಮಾಡಿರಿ? ಎಂದು ಪ್ರಶ್ನಿಸಬಾರದು. ಬ್ರಹ್ಮನಿಗೆ ಅನೇಕ ರೂಪಗಳಿರುವುದರಿಂದ ಪಂಚತ್ವ ಸಂಖ್ಯೆಯ ಅನ್ವಯವು ಬಾಧಿತವಾಗುವುದಿಲ್ಲ. ಆದರೆ 'ದ್ವಯೋಃ ಯಜಮಾನಯೋಃ' ಎಂಬಲ್ಲಿ ಪ್ರಾತಿಪದಿಕಾರ್ಥವಾದ ದ್ವಿತ್ವಕ್ಕೆ ಯಜಮಾನನಲ್ಲಿ ಅನ್ವಯ ಮಾಡಿದರೆ ಬಾಧಿತವಾಗುತ್ತದೆ.

**प्रकाशः –**

ननु कथं तर्हि तृतीयाध्यायतृतीयपादे ''द्वित्वबहुत्वयुक्तं वा चोदनात्तस्य'' इति चतुर्दशोऽधिकरणे ''युवं हि स्थः स्वर्पती इति द्वयोर्यजमानयोः प्रतिपदं कुर्यात्'' ''एते असृग्रमिन्दवः इति बहुभ्यो यजमानेभ्यः'' इत्यत्र प्रत्ययर्थासङ्ख्यानुरोधेन प्रातिपादिकमुत्कृष्यत इत्यतस्तद्वैषम्यामाह – युवं हि स्थ इति । स्तोत्रस्यादौ पठनीया ऋक् प्रतिपदित्युज्यते ।। एतामृचं प्रतिपदं प्रथमां कुर्यादित्यर्थः ।

ಆಕ್ಷೇಪ - ಪೂರ್ವಮೀಮಾಂಸೆಯಲ್ಲಿಯೂ ಸಹ ವಿಭಕ್ತ್ಯರ್ಥವನ್ನು ಪ್ರಧಾನವಾಗಿ ಸ್ವೀಕರಿಸಿ ಪ್ರಕೃತ್ಯರ್ಥವನ್ನು ಗೌಣವಾಗಿ ಅರ್ಥೈಸಿದ್ದು ಕಾಣಿಸುತ್ತದೆ.

"ದ್ವಿತ್ವಬಹುತ್ವಯುಕ್ತಂ ವಾ ಚೋದನಾತ್ತಸ್ಯ"[1](೩-೩-೧೪)

" 'ಯುವಂ ಹಿ ಸ್ಥಃ ಸ್ವರ್ಪತೀ' ಇತಿ ದ್ವಯೋರ್ಯಜಮಾನಯೋಃ ಪ್ರತಿಪದಂ ಕುರ್ಯಾತ್ । ಏತೇ ಅಸೃಗ್ರಮಿಂದವಃ ಇತಿ ಬಹುಭ್ಯೋ ಯಜಮಾನೇಭ್ಯಃ" ಎಂಬುದು ಬ್ರಾಹ್ಮಣವಾಕ್ಯವಾಗಿದೆ. 'ಯುವಂ ಹಿ ಸ್ಥಃ ಸ್ವರ್ಪತೀ' ಎಂಬ ಮಂತ್ರವನ್ನು ಇಬ್ಬರು ಯಜಮಾನರು ಇದ್ದರೆ ಮೊದಲು ಉಚ್ಚರಿಸಬೇಕೆಂದು ಇದರಿಂದ ತಿಳಿಯುತ್ತದೆ. ಆದರೆ ದರ್ಶಪೂರ್ಣಮಾಸಯಾಗದಲ್ಲಿ ಒಬ್ಬನೇ ಯಜಮಾನನಿರುವುದರಿಂದ ಈ ಮಂತ್ರಕ್ಕೆ ಪ್ರಸಕ್ತಿಯೇ ಇರುವುದಿಲ್ಲ. ಆದ್ದರಿಂದ ಪ್ರತ್ಯಯಾರ್ಥವಾದ ದ್ವಿತ್ವಸಂಖ್ಯೆಯನ್ನು ಅನುಸರಿಸಿ

---

(१) भाट्टसङ्ग्रहः –

अथ चतुर्दशं कुलायादौ प्रतिपदोरुत्कर्षाधिकरणम् (सूत्राणि १७-१९)

**द्वित्वबहुत्वयुक्तं वाऽचोदनात्तस्य ॥ १७ ॥**

**(पक्षेणार्थकृतस्येति चेत् ॥ १८ ॥ न प्रकृतेरेकसंयोगात् ॥ १९ ॥)**

अत्र पूर्ववैषम्येण शङ्कात्सङ्गतिः । ज्योतिष्टोमे श्रुतं 'युवं हि स्थः स्वर्पती इति द्वयोर्यजमानयोः प्रतिपदं कुर्यात्, एते असृग्रमिन्द्रव इति बहुभ्यो यजमानेभ्यः' इति । 'युवं हि' इत्यादिकामृचं द्विकर्तृके यागे प्रतिपदं शस्त्रप्रथमां कुर्यात्, 'एते' इति मन्त्रं बहुयजमानके यागे शस्त्रस्यादिभूतां कुर्यादिति तदर्थः । तत्र सन्देहः, किमेतन्मन्त्रद्वयस्य प्राथम्यं ज्योतिष्टोमप्रयोगे कार्यं, उत द्विबहुयजमानकेषु कुलायाहीनादिषूत्कृष्टव्यमिति । पूर्वपक्षस्तु, पूर्वत्राहीनस्येति श्रुत्या प्रकरणबाधेनोत्कर्षेपीह द्वयोरित्यादिद्विबहुश्रुतिभ्यां न प्रकरणस्य बाधेन प्रतिपत्त्वस्य कुलायादिषूत्कर्षो युक्तः । 'सर्वशक्तौ प्रवृत्तिः स्यात्' इति षष्ठतृतीयपादीयाद्यनये नित्ये कर्मणि अशक्तिकृताङ्गत्यागस्य वक्ष्यमाणत्वात् ज्योतिष्टोमस्य च 'वसन्ते वसन्ते ज्योतिषा यजेत' इति वीप्सया नित्यत्वेन द्वादशशतदक्षिणादानादावसामर्थ्येनैको यदि न शक्नुयात्तदा अङ्गान्तरवदेकत्वं विहाय द्वौ बहवो वा यजेरन्निति, तदाश्रयणेन प्रतिपद्विधानस्य ज्योतिष्टोम एव युक्तत्वादिति । सिद्धान्तस्तु, अशक्याङ्गत्यागेप्युपादेयस्य त्यागो नानुपादेयस्य देशकालादेरिति षष्ठ एव वक्ष्यमाणत्वेनैकत्वस्याप्यनुपादेयतया त्यागायोगाद्यजमानद्वित्वादेर्ज्योतिष्टोमे अभावेन द्विबहुश्रुतिभ्यां प्रकरणबाधेन कुलायादिषु प्रतिपत्त्वस्योत्कर्षः । श्रूयते च 'एतेन राजपुरोहितौ सायुज्यकामौ यजेयाताम्' इति 'एको द्वौ बहवो वा अहीनेन यजेरन्' इति कुलायाहीनयोः द्विबहुकर्तृकत्वम् । तथा 'एतेनैव द्वौ याजयेत्, त्रीन् याजयेत्' इति यागान्तरे द्व्यादिकर्तृकत्वमिति । तथा च सूत्रम्, द्वित्वबहुत्वयुक्तं प्रतिपद्विधानमृत्कृष्यते । तस्य द्वित्वस्य बहुत्वस्य च प्रकृतावाचोदनादिति । फलन्तु, कुलायादौ मन्त्रप्राथम्यस्य निवेशो न ज्योतिष्टोम इति ।

इति चतुर्दशं कुलायादौ प्रतिपदोरुत्कर्षाधिकरणम् (सूत्राणि १७-१९)

ಗುಹಾಧಿಕರಣ (೧-೨-೩)

ಪ್ರಾತಿಪದಿಕಾರ್ಥವಾದ ಯಜಮಾನನ್ನು ಮತ್ತೊಂದು ಯಾಗದಲ್ಲಿ ಉತ್ಕರ್ಷ ಮಾಡುವುದು ಕಂಡಿದೆಯಲ್ಲವೇ?

ಸಮಾಧಾನ - ಈ ದೃಷ್ಟಾಂತವು ವಿಷಮವಾಗಿದೆ. ದ್ವಿತ್ವವು ಇಲ್ಲಿ ಪ್ರತ್ಯಯಾರ್ಥವೇ ಆಗಿರುವುದಿಲ್ಲ. ಹೊರತಾಗಿ 'ದ್ವಯೋಃ' ಎಂಬಲ್ಲಿರುವ 'ದ್ವಿ' ಎಂಬ ಪ್ರಾತಿಪದಿಕದಿಂದಲೇ ದ್ವಿತ್ವವು ತಿಳಿಯುತ್ತಿದೆ. ಆದರೆ 'ಪಿಬಂತೌ' ಎಂಬಲ್ಲಿ ದ್ವಿತ್ವವು ಪ್ರಾತಿಪದಿಕದಿಂದ ತಿಳಿಯುತ್ತಿಲ್ಲ ಎಂಬ ವ್ಯತ್ಯಾಸವನ್ನು ಗಮನಿಸಬೇಕು.

ಸ್ತೋತ್ರದ ಮೊದಲು ಪಠಿಸುವ 'ಋಜ್' ಮಂತ್ರವನ್ನು 'ಪ್ರತಿಪತ್' ಎನ್ನುತ್ತಾರೆ. ಅಂದರೆ ಈ 'ಋಜ್' ಮಂತ್ರವನ್ನು ಮೊದಲು ಹೇಳಬೇಕೆಂದರ್ಥ.

**प्रकाशः** – नन्विदं सूत्रकृदेव पर्यहार्षीत्, यदाह – ''अर्थाभावात्तु नैवं स्याद्गुणमात्रमितरत्'' इति, सत्यं, तस्य प्रत्ययार्थाधीनोत्कर्षभ्रमनिरासाय स्पष्टीकरणमेतत् ।

ಈ ಶಂಕೆಯನ್ನು ಸೂತ್ರಕಾರರೇ 'ಅರ್ಥಾಭಾವಾತ್ತು ನೈವಂ ಸ್ಯಾದ್ಗುಣಮಾತ್ರಮಿತರತ್' ಎಂಬಲ್ಲಿ ಪರಿಹರಿಸಿದ್ದಾರಲ್ಲವೇ? ಆದರೆ ಸೂತ್ರವನ್ನು ನೋಡಿದಾಗ ಪ್ರತ್ಯಯಾರ್ಥಾಧೀನವಾಗಿ ಪ್ರಾತಿಪದಿಕದ ಉತ್ಕರ್ಷವು ಪ್ರಾಪ್ತವಾಗುತ್ತದೆಂಬ ಭ್ರಾಂತಿ ಬರುತ್ತದೆ. ಅದನ್ನು ಪರಿಹರಿಸುವುದಕ್ಕಾಗಿ ಇಲ್ಲಿ ಗ್ರಂಥಕಾರರು 'ಅರ್ಥಾಭಾವಾತ್' ಎಂಬ ಸೂತ್ರವನ್ನೇ ಸ್ಪಷ್ಟಪಡಿಸಿದ್ದಾರೆ.

**प्रकाशः** – तत्र किं प्रतिपदावेकयजमानकज्योतिष्टोमेऽथ द्विबहुयजमानकेषु कुलायाहीनादिषूत्क्रष्टव्ये इति संशये, नित्ये कर्मण्यशक्तिकृताङ्गत्यागाङ्गीकाराद्यदैको यजमानो ज्योतिष्टोममनुष्ठातुं न शक्नुयात्तदा ''वसन्ते वसन्ते ज्योतिषा यजेत'' इत्याख्यातोपातगुणभूतोपादेयकर्तृगतमेकत्वं क्रत्वङ्गमपि त्यक्त्वा द्वौ बहवो वा यजेरन्निति ज्योतिष्टोम एव प्रतिपन्निवेशसम्भवान्नोत्कर्ष इति प्राप्ते, अशक्तिन्यायस्योपादेयाङ्गविषयत्वाद्यजमानगतैकत्वस्य कालादिवदनुपादेयत्वात्त-त्यागायोगेन प्रकृतौ निवेशासम्भवात्कुलायादिषूत्कर्ष इति सिद्धान्तितम् ।

'ಅರ್ಥಾಭಾವಾತ್ ನೈವಂ ಸ್ಯಾದ್ಗುಣಮಾತ್ರಮಿತರತ್'

ಒಬ್ಬನೇ ಯಜಮಾನನಿರುವ ಜ್ಯೋತಿಷ್ಟೋಮಯಾಗದಲ್ಲಿ ಈ ಮಂತ್ರವನ್ನು ಮೊದಲು ಹೇಳಬೇಕೋ? ಅಥವಾ ಇಬ್ಬರು ಅಥವಾ ಅನೇಕ ಯಜಮಾನರುಗಳಿರುವ 'ಕುಲಾಯಾಹೀನ' ಮೊದಲಾದ ಯಾಗಗಳಲ್ಲಿ ಈ ಮಂತ್ರವನ್ನು ಉತ್ಕರ್ಷಮಾಡಿ ಮೊದಲು ಪಠಿಸಬೇಕೋ? ಎಂದು ಸಂಶಯ.

ಪೂರ್ವಪಕ್ಷ - ಜ್ಯೋತಿಷ್ಟೋಮಯಾಗದಲ್ಲಿಯೂ ಇಬ್ಬರು ಯಜಮಾನರಿರಲು ಪ್ರಸಕ್ತಿಯಿದೆ. ನಿತ್ಯಕರ್ಮದಲ್ಲಿ ಹೇಗೆಂದರೆ ಯಾವ ಯಜಮಾನನು ಜ್ಯೋತಿಷ್ಟೋಮಯಾಗವನ್ನು ಪ್ರಾರಂಭಿಸಿರುತ್ತಾನೋ

ಅವನಿಗೆ ದೌರ್ಬಲ್ಯದಿಂದ ಸಂಪೂರ್ಣವಾಗಿ ಮುಗಿಸಲು ಸಾಮರ್ಥ್ಯವಿಲ್ಲದಿದ್ದಾಗ ಯಾಗವನ್ನು ಮಾಡದೇ ಇರಬಾರದು. ಹೊರತಾಗಿ ಮತ್ತೊಬ್ಬ ಯಜಮಾನನ್ನು ಅನುಷ್ಠಾನ ಮಾಡಲು ಯೋಜನೆ ಮಾಡಬೇಕು. ಆದ್ದರಿಂದ ''ವಸಂತೇ ವಸಂತೇ ಜ್ಯೋತಿಷಾ ಯಜೇತ'' ಎಂಬಲ್ಲಿ ಆಖ್ಯಾತಪ್ರತ್ಯಯದಿಂದ ಗುಣಭೂತವಾದ ಮತ್ತು ಉಪಾದೇಯವಾದ ಕರ್ತೃಗತ ಏಕತ್ವವು ಕೇಳಿಸುತ್ತಿದೆ. ಈ ಏಕತ್ವವು ಯಜಮಾನನಿಗೆ ಸಾಮರ್ಥ್ಯವಿಲ್ಲದ ಪಕ್ಷದಲ್ಲಿ ಗೌಣವಾಗುತ್ತದೆ. ಅಂದರೆ ಬೇರೆ ಯಜಮಾನನನ್ನು ನಿಯೋಜಿಸಬೇಕಾದ್ದರಿಂದ ದ್ವಿತ್ವ ಬಹುತ್ವಾದಿಗಳನ್ನೇ ವಿವಕ್ಷಿಸಿ ಏಕತ್ವವನ್ನು ಬಿಡಬೇಕು. ಆದ್ದರಿಂದ ಯಾವ ಜ್ಯೋತಿಷ್ಟೋಮಯಾಗದಲ್ಲಿ ಈ ರೀತಿಯಾಗಿ ಅನೇಕ ಮಂದಿ ಯಜಮಾನರು ಸೇರುತ್ತಾರೋ ಅಂತಹ ಯಾಗದಲ್ಲಿ 'ಯುವಂ ಹಿ ಸ್ಥಃ' ಎಂಬ ಮಂತ್ರವನ್ನು ಪ್ರಾರಂಭದಲ್ಲಿ ಪಠಿಸಬೇಕು.

ಸಿದ್ಧಾಂತ - ಉಪಾದೇಯವಾದ ಅಂಗವನ್ನು ತ್ಯಾಗಮಾಡಬಹುದೇ ಹೊರತು ಅನುಪಾದೇಯವಾದ ಅಂಗವನ್ನು ತ್ಯಾಗ ಮಾಡಲು ಬರುವುದಿಲ್ಲ. ವಸಂತಕಾಲವು ಅನುಪಾದೇಯವಾದ ಅಂಗವಾಗಿದೆ. ನಾವು ಮಾಡಬಹುದಾದ ಕಾರ್ಯಗಳು ಅನುಷ್ಠೇಯವಾದ್ದರಿಂದ ಉಪಾದೇಯಾಂಗಗಳಾಗಿವೆ. ಪ್ರಕೃತ ''ವಸಂತೇ ವಸಂತೇ ಜ್ಯೋತಿಷಾ ಯಜೇತ'' ಎಂಬಲ್ಲಿ ಆಖ್ಯಾತ ಪ್ರತ್ಯಯದಿಂದ ಯಾವ ಏಕತ್ವವು ಕೇಳಿಸುತ್ತಿದೆಯೋ ಆ ಏಕತ್ವವು ಅನುಪಾದೇಯವಾಗಿರುವುದರಿಂದ ಬಿಡಲು ಸಾಧ್ಯವಿಲ್ಲ. ಯಜಮಾನನ ಏಕತ್ವವು ಯಾಗದ ಅಂಗವೇ ಆಗಿದೆ. ಯಾವರೀತಿಯಾಗಿ ವಸಂತ ಕಾಲವು ಅನುಪಾದೇಯವಾದ ಅಂಗವಾಗಿದೆಯೋ ಅದರಂತೆ ಯಜಮಾನನ ಏಕತ್ವವೂ ಸಹ ಅನುಪಾದೇಯವಾದ ಅಂಗವೇ ಆಗಿದೆ. ಅಂದರೆ ಯಾವ ಯಜಮಾನನು ಯಾಗವನ್ನು ಪ್ರಾರಂಭಿಸಿರುತ್ತಾನೋ ಅವನೇ ಸಂಪೂರ್ಣವಾದ ಜ್ಯೋತಿಷ್ಟೋಮಯಾಗವನ್ನು ಆಚರಿಸಬೇಕು. ಇನ್ನೊಬ್ಬ ಯಜಮಾನನಿಗೆ ಅವಕಾಶವಿರುವುದಿಲ್ಲ. ಆದ್ದರಿಂದ ಈ ಯಾಗದಲ್ಲಿ ಇಬ್ಬರು ಯಜಮಾನರಿಗೆ ಅವಕಾಶವಿರಲು ಸಾಧ್ಯವಿಲ್ಲದ ಕಾರಣ 'ಯುವಂ ಹಿ ಸ್ಥಃ ಸ್ವರ್ಪತೀ' ಎಂಬ ಮಂತ್ರವನ್ನು ಇಬ್ಬರು ಯಜಮಾನರು ಇರುವ 'ಕುಲಾಯ' ಎಂಬ ಅಥವಾ ಅನೇಕ ಯಜಮಾನರಿರುವ 'ಅಹೀನ' ಎಂಬ ಯಾಗದಲ್ಲಿಯಾಗಲೀ ಉತ್ಕರ್ಷ ಮಾಡಬೇಕು.

**प्रकाशः** – तत्र प्रकृतौ यजमानद्वित्वाभावादुत्कर्ष इति सत्यं, तथाऽपि प्रत्ययार्थाभावान्नोत्कर्षः, तस्य कारकाभिधानेनापि चारितार्थ्यात्, किन्तु प्रातिपदिकार्थाभावेनैवेति, प्रातिपदिकार्थस्य प्रकृतेऽनवकाशं द्वेधाऽऽह – सङ्ख्येति ।

'ದ್ವಯೋಃ ಯಜಮಾನೋಃ' ಎಂಬ ವಾಕ್ಯದಲ್ಲಿ ದ್ವಿತ್ವವನ್ನು 'ಯಜಮಾನಯೋಃ' ಎಂಬಲ್ಲಿರುವ ಪ್ರತ್ಯಯಾರ್ಥವೆಂದೂ ಸಹ ಹೇಳಬಹುದು. 'ದ್ವಯೋಃ' ಎಂಬಲ್ಲಿರುವ 'ದ್ವಿ' ಎಂಬ ಪ್ರಾತಿಪದಿಕದ ಅರ್ಥವೆಂದೂ ಸಹ ಹೇಳಬಹುದು. ಆದರೆ ಮತ್ತೊಂದೆಡೆ ಉತ್ಕರ್ಷ ಮಾಡಲು ಪ್ರತ್ಯಯಾರ್ಥವಾಗಿಲ್ಲವೆಂಬುದು ಕಾರಣವಲ್ಲ. ಹೊರತಾಗಿ ಪ್ರಾತಿಪದಿಕಾರ್ಥವಾದ ದ್ವಿತ್ವವು ಕೂಡದ ಕಾರಣ ಉತ್ಕರ್ಷ ಮಾಡುತ್ತಿದ್ದೇವೆಂದು ತಿಳಿಯಬೇಕು. ದ್ವಿತ್ವವು ಪ್ರತ್ಯಯಾರ್ಥವೆಂದು ಹೇಳಿದ್ದಲ್ಲಿ ಅದನ್ನು

ಗೌಣ ಮಾಡಬಹುದಿತ್ತು. ಆದರೆ ಪ್ರಾತಿಪದಿಕಾರ್ಥವಾಗಿರುವುದರಿಂದ ಮತ್ತೊಂದೆಡೆ ಉತ್ಕರ್ಷ ಮಾಡಬೇಕು.

ಪ್ರಾತಿಪದಿಕಾರ್ಥಕ್ಕೆ ಪ್ರಕೃತ ಅವಕಾಶವಿಲ್ಲವೆಂಬುದನ್ನು ಗ್ರಂಥಕಾರರು 'ಸಂಖ್ಯಾನಭಿಧಾನೇಪಿ' ಎಂಬ ವಾಕ್ಯದಿಂದ ಎರಡು ಬಗೆಯಲ್ಲಿ ಸಮರ್ಥಿಸುತ್ತಿದ್ದಾರೆ.

**प्रकाशः** – **'दर्शपूर्णमासप्रकरणात्' इति लेखकदोषमूलः पाठोऽयं, ज्योतिष्टोमप्रकरणस्थत्वात् स्तोत्रप्रतिपद्विधानस्येत्याहुः ।**

**ननु प्रातिपदिकार्थसङ्ख्यायाः प्रकृतावसम्भवेन यद्युत्कर्षस्तर्हि "न सङ्ख्योपसङ्ग्रहात्" इति नये "यस्मिन् पञ्च पञ्च जनाः" इति प्रातिपदिकार्थस्य बहुत्वस्यैकस्मिन्नसम्भवेऽपि कथं तत्रैव निवेशोऽभ्युपगत इत्यत आह – यस्मिन्निति । नच यजमाने तथा सम्भवतीत्युक्तमिति भावः ।**

'ದರ್ಶಪೂರ್ಣಮಾಸಪ್ರಕರಣಾತ್' ಎಂಬುದು ಲೇಖಕದೋಷವಾಗಿದೆ. ಏಕೆಂದರೆ ಇದು ಜ್ಯೋತಿಷ್ಟೋಮ ಪ್ರಕರಣದಲ್ಲಿದೆಯೆಂದು ಸೂತ್ರದಲ್ಲಿ 'ಪ್ರತಿಪದ್' ವಿಧಾನವನ್ನು ಮಾಡಿದ್ದಾರೆ.

ಪ್ರಾತಿಪದಿಕಾರ್ಥವಾದ ಸಂಖ್ಯೆಯು 'ಯಜಮಾನಯೋಃ' ಎಂಬಲ್ಲಿ ಅಸಂಭಾವಿತವಾದ್ದರಿಂದ ಮತ್ತೊಂದೆಡೆ ಉತ್ಕರ್ಷ ಮಾಡಬೇಕೆಂದು ಹೇಳಿದಿರಿ. ಹಾಗಾದರೆ "ನ ಸಂಖ್ಯೋಪಸಂಗ್ರಹಾತ್" ಎಂಬ ಅಧಿಕರಣದಲ್ಲಿ "ಯಸ್ಮಿನ್ ಪಂಚ ಪಂಚಜನಾಃ" ಎಂಬ ವಾಕ್ಯವು ಪ್ರಸಕ್ತವಾಗಿದೆ. ಇಲ್ಲಿರುವ ಬಹುತ್ವವು ಪ್ರಾತಿಪದಿಕವಾದ ಪಂಚಶಬ್ದದಿಂದಲೇ ತಿಳಿಯುತ್ತಿದೆ. ಆದರೆ ಒಬ್ಬನೇ ಬ್ರಹ್ಮನಲ್ಲಿ ಈ ಪಂಚತ್ವ ಸಂಖ್ಯೆಯು ಅಸಂಭಾವಿತವಾಗಿದೆ. ಆದರೂ ಸಹ ಮತ್ತೊಂದೆಡೆ ಉತ್ಕರ್ಷವನ್ನು ಮಾಡದೆ ಅಲ್ಲಿಯೇ ವಾಕ್ಯಕ್ಕೆ ಸಾರ್ಥಕ್ಯವನ್ನು ಹೇಳುತ್ತೀರಿ ಇದು ಹೇಗೆ ಸರಿ ? ಎಂಬ ಪ್ರಶ್ನೆಗೆ ಗ್ರಂಥಕಾರರು 'ಯಸ್ಮಿನ್' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಬ್ರಹ್ಮನಿಗೆ ಅನೇಕ ರೂಪಗಳಿರುವುದರಿಂದ ಪಂಚತ್ವ ಸಂಖ್ಯೆಗೆ ಬ್ರಹ್ಮನಲ್ಲಿ ಅನ್ವಯವನ್ನು ಹೇಳಬಹುದು. ಆದರೆ ಯಜಮಾನನು ಒಬ್ಬನೇ ಆಗಿರುವುದರಿಂದ ದ್ವಿತ್ವ ಸಂಖ್ಯೆಗೆ ಅನ್ವಯವನ್ನು ಹೇಳಲಾಗದು.

**गुरुराजीयम्** – नन्वदितिः पाशानित्यत्र प्रकृत्यर्थस्वारस्यानुसारेण प्रत्ययार्थास्वारस्यादर्शनात् । यदि तु ऋतं पिबन्तावित्यत्र प्रकृत्यर्थस्वारस्यानुसारेण प्रत्ययार्थास्वारस्यं चेत्कल्प्यते तर्हि दर्शपूर्णमासप्रकरणस्थस्य युवं हि स्थः स्वर्पतीति द्वयोर्यजमानयोः प्रतिपदं कुर्यादिति श्रुतस्य यजमानादिद्वित्वस्य प्रकरणान्तर उत्कर्षस्य दर्शनात्प्रकृतेऽपि ऋतं पिबन्तावित्यस्य प्रकरणान्तर ऊत्कर्षोऽपि किं न स्यादित्यतस्तद्वैषम्यमुपपादयति – **युवं हीति** ।। श्रुतं यजमानद्वित्वादित्तु कयजमान कदर्शपूर्णमासप्रकरणादुत्कृष्टमित्यर्थः ।

तत्र हेतुमाह – **द्व्यादीति** ।। तथाच तत्र प्रकरणादुत्कर्षाभावे प्रकृत्यर्थस्यैवास्वारस्यापत्त्या प्रकरणादुत्कर्षः । ननु प्रत्ययार्थास्वारस्यवत्प्रकृत्यर्थस्या-स्वारस्यं भवत्वित्याशङ्क्य प्रत्ययार्थो द्विविधः । सङ्ख्यारूपः कारकरूपश्चेति । तत्र सङ्ख्यारूपार्थानभिधानेऽपि कारकरूपप्रत्ययार्थस्याभिधानेन प्रत्ययस्य सार्थक्यं सम्भवतीत्याह – **सङ्ख्येति** ।। **रामकृष्णावित्यादाविति** ।। रामकृष्णयोर्द्विरूपत्वेन सर्वत्र प्रसिद्धत्वादृतपानकर्तुर्द्वित्वस्योपपादयिष्यमाणत्वाद्यद्याप्यसिद्धत्वेऽपि रामकृष्णादिवत् सम्भावनामात्रस्य कर्तुं शक्यत्वाद्यजमानद्वित्वस्य रूपभेदेनाप्यसम्भावितत्वात्तस्योत्कर्षेऽपि न प्रकृत उत्कर्ष इति भावः ।

ननु श्रुतस्य यजमानद्वित्वस्येव यस्मिन्पञ्चपञ्चजना इत्यत्र बहुत्वस्यापि प्रकृत्यर्थत्वात्तस्य चैकस्मिन्ब्रह्मण्यसम्भवात्तस्मात्प्रकरणादन्यत्रोत्कर्षः स्यादित्यत आह – **यस्मिन्निति** ।। दृष्टान्तदार्ष्टान्तिकयोर्वैषम्यमात्रप्रदर्शनार्थं पूर्वं द्वयोर्यजमानयोरित्यत्र द्वित्वस्य प्रातिपादिकार्थतोक्तिः । अत एव तत्र रामकृष्णावित्यादिना रूपविशेषेणैवेत्यादिना वस्तुस्थितिरुक्तेति हृदयम् ।।




'ದ್ವಯೋಃ ಯಜಮಾನಯೋಃ ಪ್ರತಿಪದಮ್ ಕುರ್ಯಾತ್' ಎಂಬುದು ಕರ್ಮಮೀಮಾಂಸೆಯ ಸೂತ್ರ. ಯಾವ ಜ್ಯೋತಿಷ್ಟೋಮಯಾಗದಲ್ಲಿ 'ಯುವಂ ಹಿ ಸ್ಥಃ ಸ್ವರ್ಪತಿ' ಎಂಬ ಮಂತ್ರವನ್ನು ಮೊದಲು ಉಚ್ಚರಿಸಬೇಕೆಂದು ಹೇಳುತ್ತಿದ್ದಾರೋ ಆ ಜ್ಯೋತಿಷ್ಟೋಮಯಾಗದಲ್ಲಿ ಇಬ್ಬರು ಯಜಮಾನರಿಗೆ ಅವಕಾಶವೇ ಇರುವುದಿಲ್ಲ. ಆದರೆ 'ದ್ವಯೋಃ ಯಜಮಾನಯೋಃ' ಎಂಬ ಇಬ್ಬರು ಯಜಮಾನರನ್ನು ಕರ್ತೃವನ್ನಾಗಿ ಸೂತ್ರವು ಹೇಳುತ್ತಿದೆ. ಆದ್ದರಿಂದ ಅನಿವಾರ್ಯವಾಗಿ ಮತ್ತೊಂದು ಯಾಗದಲ್ಲಿ ಇದರ ಸಾರ್ಥಕ್ಯವನ್ನು ಸಂಪಾದಿಸಬೇಕು. ಆದರೆ 'ಋತಂ ಪಿಬಂತೌ' ಎಂಬಲ್ಲಿ ಮತ್ತೊಂದೆಡೆ ದ್ವಿತ್ವದ ಅನ್ವಯ ಮಾಡುವ ಅವಶ್ಯಕತೆ ಇರುವುದಿಲ್ಲ. ಏಕೆಂದರೆ ಇಬ್ಬರು ಯಜಮಾನರು ಜ್ಯೋತಿಷ್ಟೋಮ ಯಾಗದಲ್ಲಿ ಇರಲು ಸಾಧ್ಯವಿಲ್ಲ. ಆದ್ದರಿಂದ 'ದ್ವಿತ್ವ' ಸಂಖ್ಯೆಗೆ ಅನ್ವಯ ಮಾಡಲು ಅಲ್ಲಿ ಅವಕಾಶವಿಲ್ಲ. ಆದರೆ 'ಋತಂ ಪಿಬಂತೌ' ಎಂಬಲ್ಲಿ ಬ್ರಹ್ಮನ ಎರಡು ರೂಪಗಳಲ್ಲಿ ಅನ್ವಯ ಮಾಡಬಹುದಾದ್ದರಿಂದ ದೋಷವಿಲ್ಲ.





ಗುಹಾಧಿಕರಣ (೧-೨-೩)

## ನಿರ್ಜ್ಞಾತ ವಿರುದ್ಧವಿಶೇಷಣತ್ವವೇ ಅವಿವಕ್ಷೆಗೆ ಪ್ರಯೋಜಕ

### तात्पर्यचन्द्रिका

ननु "प्रोद्गातॄणां" इत्यत्रेव विभक्त्यर्थानेकत्वानुग्रहाय प्रकृतेऽपि च्छत्रिवत्प्रातिपदिकलक्षणैव युक्तेति चेत्,

न, तत्रैव प्रकरणे उद्गातृशब्दलक्षणीयानां प्रस्तोत्रादिनां छन्दोगानामिवात्र ब्रह्मप्रकरणे लक्षणीयस्यान्यस्याभावात् । अत एव 'पाशान्' इत्यत्र बहुत्वाय प्रातिपदिकलक्षणानाश्रिता । उद्गातृपदेन च्छन्दोगानामिव पाशशब्देन बन्धकद्रव्यलक्षणायां प्रकरणे बन्धकबहुत्वस्याभावात्, यागसाधनद्रव्यमात्रलक्षणायां च पाशमन्त्रस्थस्य 'प्रमुमोक्तुः' इत्यस्यानन्वयात् ।

किञ्च – यद्यपि टीकायां 'यौ गुहां प्रविष्टौ तौ छायातपौ वदन्ति' इत्युक्तत्वेन 'छायातपौ' इत्यनेनोक्तं द्वित्वं विधेयविशेषणम्; तथापि "अग्नीनादधीत" इत्यादौ बहुत्वस्य उद्देश्यविशेषणत्वेऽपि विविक्षादर्शनेन "सत्रादुदवसाय पृष्ठशमनीयेन यजेरन्" इत्यत्र च बहुत्वस्य विधेयविशेषणत्वेऽपि अविवक्षादर्शनेन निर्ज्ञात-विशेषणत्वमेवाविवक्षायां तन्त्रमिति ग्रहैकत्वनये स्थितत्वादिह च "यस्य ब्रह्म च क्षत्रं च" इत्यादिपूर्ववाक्ये 'यस्य' इत्येकवचनेनैकत्वसङ्ख्याया निर्ज्ञातत्वात् द्वित्वस्य अविवक्षास्तु । "सप्तदश प्राजापत्यान्" "द्वा सुपर्णा" इत्यादौ तु प्रागेकत्वस्यानवधृतत्वात् "अनश्नन्नन्यः" इत्यादिवाक्यशेषाद्यनुसाराच्च भेद आश्रितः । न ह्यौत्सर्गिकस्य क्वचिदपवादेनान्याथात्वे सर्वत्रापि तथात्वं युक्तम् ।

उक्तं ह्यनुव्याख्याने -

उत्सर्गतोऽपि यत्प्राप्तमपवादविवर्जितम् ।<br>
व्यभिचार्यपवादेन मानमेव भविष्यति ।

इति ।

ಅನುವಾದ - ಆಕ್ಷೇಪ - ಪೂರ್ವಮೀಮಾಂಸೆಯಲ್ಲಿ 'ಪ್ರೋದ್ಗಾತೃಣಾಂ' ಎಂಬುದಾಗಿ ಬಹುವಚನ ಪ್ರಯೋಗವಿದೆ. ಬಹುವಚನಕ್ಕೆ ಅನೇಕತ್ವವೆಂಬ ಅರ್ಥವನ್ನು ಸ್ವೀಕರಿಸುವುದಕ್ಕಾಗಿ ಉದ್ಗಾತೃ

ಪ್ರಾತಿಪದಿಕಕ್ಕೆ ಹೋತೃ ಮೊದಲಾದವರಲ್ಲಿ ಛತ್ರಿನ್ಯಾಯದಿಂದ ಲಕ್ಷಣಾ ಮಾಡುವುದು ಕಂಡಿದೆ. ಆದರಂತೆ 'ಋತಂ ಪಿಬಂತೌ' ಎಂಬಲ್ಲಿಯೂ ದ್ವಿವಚನಪ್ರಯೋಗವನ್ನು ಕೂಡಿಸುವುದಕ್ಕಾಗಿ 'ಪಿಬತ್' ಪ್ರಾತಿಪದಿಕಕ್ಕೆ ಛತ್ರಿನ್ಯಾಯದಂತೆ ಜೀವೇಶ್ವರರಲ್ಲಿ ಜಹದಜಹಲಕ್ಷಣವನ್ನೇಕೆ ಮಾಡಬಾರದು ?

ಸಮಾಧಾನ - ದೃಷ್ಟಾಂತದಲ್ಲಿ ವೈಷಮ್ಯವಿದೆ. ಯಾವಪ್ರಕರಣದಲ್ಲಿ 'ಪ್ರೋದ್ಗಾತ್ತೃಣಾಂ' ಎಂಬ ಶ್ರುತಿಯಿದೆಯೋ ಅದೇ ಪ್ರಕರಣದಲ್ಲಿ 'ಉದ್ಗಾತೃ' ಶಬ್ದಕ್ಕೆ ಲಕ್ಷಣೀಯರಾದ ಯಾವ ಪ್ರಸ್ತೋತ್ರಾದಿಗಳು ಪ್ರಸಕ್ತರಾಗಿದ್ದಾರೆ. ಮತ್ತು ಅಂತಹ ಪ್ರಸ್ತೋತ್ರಾದಿಗಳು ಸಾಮವೇದವನ್ನು ಅಧ್ಯಯನ ಮಾಡಿ ಛಂದೋಗರೆಂದು ಪ್ರಸಿದ್ಧರಾಗಿದ್ದಾರೆ. ಆದ್ದರಿಂದ 'ಉದ್ಗಾತೃ' ಶಬ್ದಕ್ಕೆ ಹೋತೃ ಪ್ರಸ್ತೋತೃಗಳಲ್ಲಿ ಜಹದಜಹಲ್ಲಕ್ಷಣಾವನ್ನು ಮಾಡಬಹುದು. ಆದರೆ 'ಋತಂ ಪಿಬಂತೌ' ಎಂಬ ಶ್ರುತಿಯು ಬ್ರಹ್ಮಪ್ರಕರಣದಲ್ಲಿದೆ. ಈ ಪ್ರಕರಣದಲ್ಲಿ ಯಾರಲ್ಲಿ ಲಕ್ಷಣಾ ಮಾಡಬೇಕೋ ಅಂತಹ ಜೀವಾದಿಗಳು ಪ್ರಸಕ್ತರೇ ಆಗಿರುವುದಿಲ್ಲ. ಮತ್ತು ಆ ಜೀವನಲ್ಲಿ ಋತಪಾತೃತ್ವವೂ ಸಹ ಇರುವುದಿಲ್ಲ. ಹೀಗಿರುವಾಗ 'ಪ್ರೋದ್ಗಾತ್ತೃಣಾಂ' ಎಂಬ ದೃಷ್ಟಾಂತದಂತೆ ಇಲ್ಲಿ ಜಹದಜಹಲ್ಲಕ್ಷಣಾವನ್ನು ಮಾಡಲು ಸಾಧ್ಯವಿಲ್ಲ.

ಲಕ್ಷಣಾ ಮಾಡಲು ಉಪಯೋಗಿಯಾದ ಧರ್ಮವು ಇಲ್ಲದ ಕಾರಣದಿಂದಲೇ 'ಅದಿತಿಃ ಪಾಶಾನ್' ಎಂಬಲ್ಲಿ ಬಹುವಚನವನ್ನು ಕೂಡಿಸುವುದಕ್ಕಾಗಿ ಪ್ರಾತಿಪದಿಕಕ್ಕೆ ಲಕ್ಷಣಾವನ್ನು ಮಾಡಿರುವುದಿಲ್ಲ. ಲಕ್ಷಣೀಯವಾದ ವಸ್ತು ಅದೇ ಪ್ರಕರಣದಲ್ಲಿರಬೇಕಾದ್ದರಿಂದ. ಆದರೆ 'ಪ್ರೋದ್ಗಾತ್ತೃಣಾಂ' ಎಂಬಲ್ಲಿ ಉದ್ಗಾತೃ ಪದದಿಂದ ಪ್ರಸ್ತೋತ್ರಾದಿಗಳನ್ನು ಲಕ್ಷಣಯಾ ಸ್ವೀಕರಿಸಲು ಉಪಯೋಗಿಯಾದ ಛಂದೋಗತ್ವವು ಸಾಧಾರಣವಾಗಿರುತ್ತದೆ. ಪಾಶಶಬ್ದಕ್ಕೆ ಲಕ್ಷಣಾ ಮಾಡಲು ಉಪಯೋಗಿಯಾದ ಇಂತಹ ಯಾವುದೇ ಬಂಧಕದ್ರವ್ಯಗಳು ಸಮಗ್ರ ಪ್ರಕರಣದಲ್ಲಿ ಕಾಣಿಸದ ಕಾರಣ, ಬಂಧಕಬಹುತ್ವವನ್ನು ಹೇಳಲು ಸಾಧ್ಯವಿಲ್ಲ.

ಇನ್ನು ಯಾಗಸಾಧನದ್ರವ್ಯತ್ವವನ್ನು ಲಕ್ಷಣಕ್ಕೆ ಉಪಯೋಗಿಯಾದ ಧರ್ಮವೆನ್ನಬೇಕು. ಹಾಗೇ ಉಳಿದ ಯಾಗಸಾಧನ ದ್ರವ್ಯಗಳಲ್ಲಿ ಲಕ್ಷಣಾ ಮಾಡುವುದಾದರೆ ಪಾಶ ಮಂತ್ರದಲ್ಲಿರುವ 'ಪ್ರಮುಮೋಕ್ತು' (ಬಂಧನದಿಂದ ಬಿಡಿಸಲಿ) ಎಂಬ ಕ್ರಿಯಾಪದಕ್ಕೆ ಅನ್ವಯವೇ ಇಲ್ಲದಂತಾಗುತ್ತದೆ.

ವಸ್ತುತಃ ಟೀಕೆಯಲ್ಲಿ 'ಯೌ ಗುಹಾಂ ಪ್ರವಿಷ್ಟೌ ತೌ ಛಾಯಾತಪೌ ವದಂತಿ' ಎಂದು ಹೇಳಿರುವುದರಿಂದ ಗುಹಾಪ್ರವಿಷ್ಟತ್ವಾದಿಗಳೆಲ್ಲವು ಉದ್ದೇಶ್ಯವಾಗಬಹುದು. ಆದರೆ ಛಾಯಾತಪತ್ವವನ್ನು ವಿಧಾನ ಮಾಡುತ್ತಿರುವುದರಿಂದ 'ಛಾಯಾತಪೌ' ಎಂಬಲ್ಲಿರುವ ದ್ವಿತ್ವವು ವಿಧೇಯವಿಶೇಷಣವಾಗುತ್ತದೆ. ಉದ್ದೇಶವಿಶೇಷಣವನ್ನು ಅವಿವಕ್ಷಿತವೆಂದು ಹೇಳಬಹುದಾದರೂ ವಿಧೇಯವಿಶೇಷಣವನ್ನು ಅವಿವಕ್ಷಿತವೆನ್ನಲು ಸಾಧ್ಯವಿಲ್ಲವೆಂದು ಪೂರ್ವಪಕ್ಷಕಾರರು ಹೇಳಬಹುದು.

ಆದರೆ ಯಾವುದು ಉದ್ದೇಶವಿಶೇಷಣವೋ? ಅದೆಲ್ಲವೂ ಅವಿವಕ್ಷಿತವಾಗಿರುತ್ತದೆ. ವಿಧೇಯವಿಶೇಷಣವಾದದ್ದೆಲ್ಲ ಅವಿವಕ್ಷಿತವಾಗಿರುತ್ತದೆಂಬ ವ್ಯಾಪ್ತಿಯು ವ್ಯಭಿಚರಿತವಾಗಿದೆ. 'ಅಗ್ನೀನಾದಧೀತ' ಎಂಬ ಸ್ಥಳದಲ್ಲಿ ಬಹುತ್ವವು ಉದ್ದೇಶವಿಶೇಷಣವಾಗಿದ್ದರೂ ವಿವಕ್ಷಿತವಾಗಿದೆಯೆಂದೇ ಪೂರ್ವಮೀಮಾಂಸಕರು ಒಪ್ಪಿದ್ದಾರೆ. ಆದ್ದರಿಂದ ಉದ್ದೇಶವಿಶೇಷಣವಾದದ್ದು ಅವಿವಕ್ಷಿತ-ವಾಗಿರುತ್ತದೆಂಬ ವ್ಯಾಪ್ತಿಯು ವ್ಯಭಿಚರಿತವಾಯಿತು. ''ಸತ್ರಾದುದವಸಾಯ ಪೃಷ್ಠಶಮನೀಯೇನ ಯಜೇರನ್'' ಎಂಬಲ್ಲಿ ಬಹುತ್ವವು ವಿಧೇಯವಿಶೇಷಣವಾಗಿದ್ದರೂ ಸಹ ಅವಿವಕ್ಷಿತವಾಗಿದೆಯೆಂದು ಮೀಮಾಂಸಕರು ಒಪ್ಪಿದ್ದಾರೆ. ಆದ್ದರಿಂದ ವಿಧೇಯವಿಶೇಷಣವಾದದ್ದು ವಿವಕ್ಷಿತವಾಗಿರುತ್ತದೆಂಬ ವ್ಯಾಪ್ತಿಯು ವ್ಯಭಿಚರಿತವಾಗಿದೆ.

ಆದ್ದರಿಂದ ಅವಿವಕ್ಷಿತವಾಗಲು ನಿರ್ಜ್ಞಾತವಿಶೇಷಣತ್ವವನ್ನೇ ತಂತ್ರವನ್ನಾಗಿ ಹೇಳಬೇಕು. ಹೀಗೆ ಪೂರ್ವಮೀಮಾಂಸರು ಗ್ರಹೈಕತ್ವಾಧಿಕರಣದಲ್ಲಿ ನಿರ್ಣಯಿಸಿದ್ದಾರೆ - 'ಗ್ರಹಂ ಸಮ್ಮಾರ್ಷ್ಟಿ' ಎಂಬಲ್ಲಿ ಗ್ರಹವು ಉದ್ದೇಶವಾಗಿದೆ. ಆದರಲ್ಲಿ ವಿಶೇಷಣವಾದ ಏಕತ್ವವು ಏಕೆ ಅವಿವಕ್ಷಿತವಾಗಿದೆಯೆಂದರೆ ಏಕತ್ವಕ್ಕೆ ವಿರುದ್ಧವಾದ ಬಹುತ್ವವು 'ಗ್ರಹೈಃ' ಎಂಬ ಹಿಂದಿನ ವಾಕ್ಯದಲ್ಲಿ ಕೇಳಿಸುತ್ತಿರುವುದರಿಂದ ನಿರ್ಜ್ಞಾತವಾಗಿದೆ (ಚೆನ್ನಾಗಿ ತಿಳಿದಿದೆ) ಎಂದು. ಆದರಂತೆ 'ಗುಹಾಂ ಪ್ರವಿಷ್ಟೌ' ಎಂಬಲ್ಲಿಯೂ ದ್ವಿತ್ವವು ಅವಿವಕ್ಷಿತವಾಗಿದೆ. ಏಕೆಂದರೆ ಹಿಂದಿನ ವಾಕ್ಯದಲ್ಲಿ ''ಯಸ್ಯ ಬ್ರಹ್ಮ ಚ ಕ್ಷತ್ರಂ ಚ'' ಎಂಬುದಾಗಿ ಏಕವಚನದಿಂದ ಏಕತ್ವಸಂಖ್ಯೆಯು ನಿರ್ಜ್ಞಾತವಾಗಿದೆ. ಈ ಕಾರಣದಿಂದಷ್ಟೇ ದ್ವಿತ್ವವು ಅವಿವಕ್ಷಿತವಾಗಿದೆಯೆಂದು ಸ್ಪಷ್ಟವಾಗಿ ತಿಳಿಯಬೇಕು.

''ಸಪ್ತದಶ ಪ್ರಾಜಾಪತ್ಯಾನ್'' ಎಂಬಲ್ಲಿ ಬಹುತ್ವ ಸಂಖ್ಯೆಯನ್ನು ವಿವಕ್ಷಿಸಿ ಅನೇಕ ಪ್ರಜಾಪತಿಗಳನ್ನು ಸ್ವೀಕರಿಸುವುದು ಕಂಡಿದೆಯಲ್ಲವೇ? ಮತ್ತು ''ದ್ವಾ ಸುಪರ್ಣಾ'' ಇತ್ಯಾದಿ ಶ್ರುತಿಯಲ್ಲಿ ದ್ವಿತ್ವವನ್ನು ಸಿದ್ಧಾಂತಿಗಳೂ ಸಹ ವಿವಕ್ಷಿಸುವುದು ಕಂಡಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಸಪ್ತದಶ ಪ್ರಾಜಾಪತ್ಯಾನ್'' ಎಂಬ ಸ್ಥಳದಲ್ಲಿ ಸಪ್ತದಶತ್ವ ಸಂಖ್ಯೆಗೆ ವಿರುದ್ಧವಾದ ಏಕತ್ವ ಮೊದಲಾದ ಸಂಖ್ಯೆಗಳು ಪೂರ್ವದಲ್ಲಿ ಎಲ್ಲಿಯೂ ಸಹ ಕೇಳಿಸುತ್ತಿಲ್ಲ. ಆದ್ದರಿಂದ ಸಪ್ತದಶತ್ವ ಸಂಖ್ಯೆಯನ್ನು ವಿವಕ್ಷಿಸಬಹುದು. ಅದರಂತೆ ದ್ವಾ ಸುಪರ್ಣಾ ಇತ್ಯಾದಿ ಸ್ಥಳದಲ್ಲಿಯೂ ದ್ವಿತ್ವಕ್ಕೆ ವಿರುದ್ಧವಾದ ಏಕತ್ವಾದಿಸಂಖ್ಯೆಗಳು ಮೊದಲು ಕೇಳಿಸುತ್ತಿಲ್ಲ. ಅಷ್ಟೇ ಅಲ್ಲದೆ ಮುಂದಿನ ವಾಕ್ಯಶೇಷದಲ್ಲಿ ''ಅನಶ್ನನ್ನನ್ಯಃ'' ಇತ್ಯಾದಿಯಾಗಿ ಭೇದವೇ ಕೇಳಿಸುತ್ತಿರುವುದರಿಂದ ದ್ವಿತ್ವವನ್ನು ಆಶ್ರಯಿಸುವುದು ಯುಕ್ತವಾಗಿದೆ. ಆದರೆ 'ಋತಂ ಪಿಬಂತೌ' ಎಂಬಲ್ಲಿ ದ್ವಿತ್ವಕ್ಕೆ ವಿರುದ್ಧವಾದ ಏಕತ್ವವು ಕೇಳಿಸುತ್ತಿರುವುದರಿಂದ ದ್ವಿತ್ವವನ್ನು ಅವಿವಕ್ಷಿತವೆಂದು ಹೇಳಬಹುದು. ಔತ್ಸರ್ಗಿಕನ್ಯಾಯವು ಕೆಲವೆಡೆ ವ್ಯಭಿಚರಿತವಾದ್ದರಿಂದ ಬಿಡಬೇಕಾಗುತ್ತದೆ. ಹಾಗಂದ ಮಾತ್ರದಿಂದ ಎಲ್ಲೆಡೆ ಬಿಡಬೇಕೆಂದೇನು ನಿಯಮವಿಲ್ಲ. ಇದನ್ನೇ ಅನುವ್ಯಾಖ್ಯಾನದಲ್ಲಿಯೂ ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

ಉತ್ಸರ್ಗತೋಽಪಿ ಯತ್ಪ್ರಾಪ್ತಮಪವಾದವಿವರ್ಜಿತಮ್ ।
ವ್ಯಭಿಚಾರ್ಯಪವಾದೇನ ಮಾನಮೇವ ಭವಿಷ್ಯತಿ ॥

ಔತ್ಸರ್ಗಿಕನ್ಯಾಯವು ಅಪವಾದ ಸ್ಥಳದಲ್ಲಿ ವ್ಯಭಿಚಾರಿಯಾಗಿದ್ದರೂ ಅಪವಾದ ಇಲ್ಲದ ಸ್ಥಳದಲ್ಲಿ ಪ್ರಮಾಣವೇ ಆಗುತ್ತದೆ.

**प्रकाशः –**

**ननूक्तं ''उद्गातृचमसमेकस्य श्रुतिसंयोगात्'' इत्यधिकरणे ''प्रैतु होतुश्चमसः प्र ब्रह्मणः प्रोद्गातृणां इति मन्त्रगतबहुवनानुग्रहाय प्रातिपदिक-लक्षणाश्रयणादिहापि तथा स्यादित्याशङ्क्यं वैषम्येण समाधत्ते – नन्वित्यादिना ।**

ವಿವರಣೆ - 'ಉದ್ಗಾತೃಚಮಸಮೇಕಸ್ಯ ಶ್ರುತಿಸಂಯೋಗಾತ್'' ''ಪ್ರೈತು ಹೋತುಶ್ಚಮಸಃ ಪ್ರ ಬ್ರಹ್ಮಣಃ'' 'ಪ್ರೋದ್ಗಾತೃಣಾಂ' ಎಂಬ ಮಂತ್ರವನ್ನು ವಿಚಾರ ಮಾಡಿದ್ದಾರೆ. 'ಪ್ರೋದ್ಗಾತೃಣಾಂ' ಎಂಬಲ್ಲಿರುವ ಬಹುವಚನವನ್ನು ಕೂಡಿಸುವುದಕ್ಕಾಗಿ 'ಉದ್ಗಾತೃ' ಶಬ್ದಕ್ಕೆ ಪ್ರಸ್ತೋತ್ರಾದಿಗಳಲ್ಲಿ ಲಕ್ಷಣಾ ಮಾಡುವುದು ಕಂಡಿದೆ. ಅದರಂತೆ ಇಲ್ಲಿಯೂ ಸಹ 'ಪಿಬತ್'' ಪ್ರಾತಿಪದಿಕಕ್ಕೆ ಜೀವೇಶ್ವರರಲ್ಲಿ ಲಕ್ಷಣಾ ಮಾಡಿದರೆ ದ್ವಿತ್ವವು ಯುಕ್ತವಾಗುತ್ತದಲ್ಲವೇ? ಎಂಬ ಆಶಂಕೆಗೆ ದೃಷ್ಟಾಂತವು ವಿಷಮವಾಗಿದೆಯೆಂದು 'ನನು' ಇತ್ಯಾದಿ ಗ್ರಂಥದಿಂದ ಸಮಾಧಾನ ಮಾಡುತ್ತಿದ್ದಾರೆ.

**प्रकाशः – विवृतमेतज्जन्मादिसूत्रे । छन्दोगत्वरूपधर्मस्येवेह कस्यचिदभावादित्यर्थः । नच जीवादिस्तथा, ब्रह्मप्रकरणत्वव्याघातादिति भावः ।**

'ಉದ್ಗಾತೃ ಚಮಸಂ' ಎಂಬ ಅಧಿಕರಣವನ್ನು 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ವಿವರಿಸಿದ್ದಾಗಿದೆ. 'ಉದ್ಗಾತೃ' ಶಬ್ದಕ್ಕೆ ಪ್ರಸ್ತೋತ್ರಾದಿಗಳಲ್ಲಿ ಲಕ್ಷಣಾ ಮಾಡಲು ಛಾಂದೋಗತ್ವವೆಂಬ ನಿಮಿತ್ತವಿದೆ. ಆದರೆ 'ಪಿಬತ್'' ಪ್ರಾತಿಪದಿಕಕ್ಕೆ ಲಕ್ಷಣಾ ಮಾಡಲು ಅಂತಹ ನಿಮಿತ್ತಗಳು ಇರುವುದಿಲ್ಲ. ಏಕೆಂದರೆ ಇದು ಬ್ರಹ್ಮಪ್ರಕರಣವಾಗಿದೆ. ಒಂದು ವೇಳೆ ಜೀವಾದಿಗಳಲ್ಲಿ ಸಾಧಾರಣವಾದ ನಿಮಿತ್ತವೇನಾದರೂ ಇದ್ದಲ್ಲಿ ಬ್ರಹ್ಮ ಪ್ರಕರಣವೆಂಬ ಮಾತೇ ವ್ಯಾಹತವಾಗುತ್ತದೆ.

**प्रकाशः – अत एवेति । लक्षणोपयोगिधर्माक्रान्तस्य कस्यचिदभावादेवेत्यर्थः । तादृशो धर्मो बन्धकद्रव्यत्वं वा, यागसाधनत्वं वा, न द्वयमपि युज्यते इत्याह – उद्गात्रिति ।**

'ಅತ ಏವ' ಎಂಬ ಶಬ್ದಕ್ಕೆ ಜಹದಜಹಲ್ಲಕ್ಷಣಕ್ಕೆ ಉಪಯೋಗಿಯಾದ ಯಾವುದೇ ಧರ್ಮಗಳು ಇಲ್ಲದಿರುವುದರಿಂದಲೇ ಎಂದರ್ಥ. 'ಪಾಶಾನ್' ಎಂಬಲ್ಲಿ ಅಂತಹ ಯಾವುದಾದರು ಧರ್ಮವನ್ನು

ಹೇಳುವುದಾದರೆ ಬಂಧಕದ್ರವ್ಯತ್ವವನ್ನಾಗಲೀ ಅಥವಾ ಯಾಗಸಾಧನತ್ವವನ್ನಾಗಲೀ ಹೇಳಬೇಕು. ಎರಡೂ ಸಹ ಕೂಡುವುದಿಲ್ಲವೆಂದು 'ಉದ್ಗಾತ್ರ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – नन्वेवं तर्हि ब्रह्मप्रकरणेऽन्यस्याभावेनान्येन सह द्वित्वमस्त्विति कथमिति चेदप्राकरणिकेन येनकेनचिदस्तु । श्रौतस्य कथमेवं निर्वाह इति चेत्, उक्तानुपपत्तिबलादेवेत्यवेहि ।

ಪ್ರಶ್ನೆ - 'ಋತಂ ಪಿಬಂತೌ' ಎಂಬ ವಾಕ್ಯವು ಪೂರ್ವೋತ್ತರ ವಾಕ್ಯಗಳ ಬಲದಿಂದ ಬ್ರಹ್ಮಪ್ರಕರಣವೆಂದು ನಿರ್ಣಯವಾಗಿದೆ. ಆದ್ದರಿಂದ ಲಕ್ಷಣಯಾ ಜೀವನನ್ನು ಸ್ವೀಕರಿಸಲು ಬರುವುದಿಲ್ಲ. ಆದರೆ ಜೀವನನ್ನು ಪ್ರತಿಪಾದ್ಯನೆಂದು ನಾವು ಹೇಳಲು ಹೊರಟಿಲ್ಲ ಹೊರತಾಗಿ ದ್ವಿತ್ವವನ್ನು ಕೂಡಿಸುವುದಕ್ಕಾಗಿ ಮಾತ್ರ ಬ್ರಹ್ಮನ ಜೊತೆಗೆ ಜೀವನನ್ನು ವಿವಕ್ಷಿಸುತ್ತೇವೆಂದು ಹೇಳುತ್ತಿದ್ದೇವೆ. ಹೀಗೆ ಹೇಳಿದರೆ ಏನು ತಪ್ಪು?

ಉತ್ತರ - ಹಾಗಾದರೆ ಪ್ರಕರಣದಲ್ಲಿಲ್ಲದ ಜೀವನನ್ನೇ ವಿವಕ್ಷಿಸಿ ದ್ವಿತ್ವವನ್ನು ಕೂಡಿಸಲು ಬರುವಾಗ ಜೀವನನ್ನು ಪ್ರಕರಣಪ್ರತಿಪಾದ್ಯನೆನ್ನುವುದು ತಪ್ಪಾಗುತ್ತದೆ.

ಪ್ರಶ್ನೆ - ಪ್ರಕರಣದಲ್ಲಿಲ್ಲದ ಜೀವನನ್ನು ಸ್ವೀಕರಿಸಿ ಶ್ರುತಿಯಲ್ಲಿ ಪ್ರಾಪ್ತವಾದ ದ್ವಿತ್ವವನ್ನು ಕೂಡಿಸುವುದು ತಪ್ಪಲ್ಲವೇ?

ಉತ್ತರ - ಈ ಹಿಂದೆ ಹೇಳಿದ ಪ್ರಕಾರ ಸಂಪೂರ್ಣ ಪ್ರಕರಣವು ಬ್ರಹ್ಮನನ್ನೇ ಪ್ರತಿಪಾದಿಸುತ್ತಿದೆ. ಜೀವಾದಿಗಳು ಪ್ರತಿಪಾದ್ಯರೆನ್ನಲು ಅನೇಕ ಅನುಪಪತ್ತಿಗಳಿರುತ್ತವೆ. ಆದ್ದರಿಂದ ಪ್ರಕರಣದಲ್ಲಿಲ್ಲದ ಜೀವನನ್ನು ವಿವಕ್ಷಿಸಿ ದ್ವಿತ್ವವನ್ನು ಕೂಡಿಸುತ್ತೇವೆ.

**प्रकाशः** – वस्तुतः श्रुतितात्पर्यविषयत्वमेव द्वित्वस्य नास्ति, पूर्वोत्तरैकवचनान्तवाक्यविरोधादिति भावेन,

यस्सेतुरिति चैकत्ववचनेन विशेषणात् ।

इत्यनुव्याख्यानसूचितं परिहारान्तरमाह – **किञ्चेति** । 'द्वित्वस्याविवक्षाऽस्तु' इत्यन्वयः ।

ವಸ್ತುತಃ ದ್ವಿತ್ವಕ್ಕೆ ಶ್ರುತಿತಾತ್ಪರ್ಯ ವಿಷಯತ್ವವೇ ಇರುವುದಿಲ್ಲ. ಏಕೆಂದರೆ ಹಿಂದಿನ ಮುಂದಿನ ವಾಕ್ಯಗಳಲ್ಲಿರುವ ಏಕವಚನ ವಿರೋಧವೂ ಬರುತ್ತದೆ. ಈ ಅಭಿಪ್ರಾಯದಿಂದ 'ಯಸ್ಸೇತುರಿತಿ ಚೈಕತ್ವ-ವಚನೇನ ವಿಶೇಷಣಾತ್'' ಎಂಬ ಅನುವ್ಯಾಖ್ಯಾನದಿಂದ ಸೂಚಿತವಾದ ಮತ್ತೊಂದು ಪರಿಹಾರವನನ್ನು 'ಕಿಂಚ' ಇತ್ಯಾದಿ ವಾಕ್ಯಗಳಿಂದ ಹೇಳುತ್ತಿದ್ದಾರೆ. 'ದ್ವಿತ್ವ' ಎಂಬ ಪದಕ್ಕೆ 'ಅವಿವಕ್ಷಾಸ್ತು' ಎಂಬುದಾಗಿ ಅನ್ವಯ.

**प्रकाशः** – ननूक्तं विधेयगतमित्यतस्तदनूद्याह – **यद्यपीति** । **विवेक्षेति** । ''वसन्ते ब्राह्मणोऽग्नीनादधीत ग्रीष्मे राजन्यश्शरदि वैश्यः'' इति वाक्ये 'अग्नीन्'

इत्यत्र बहुत्वस्याविवक्षायां गार्हपत्याहवनीयान्वाहार्यपचनरूपाग्नित्रयाधीनसिद्धिर्न स्यादिति भावः ।

ದ್ವಿತ್ವವು ವಿಧೇಯವಿಶೇಷಣವಾದ್ದರಿಂದ ವಿವಕ್ಷಿತವಾಗಿದೆಯೆಂದು ಈ ಹಿಂದೆ ಪೂರ್ವಪಕ್ಷ ಮಾಡಿದ್ದೇವಲ್ಲವೇ ? ಎಂಬ ಪ್ರಶ್ನೆಗೆ ಪೂರ್ವಪಕ್ಷವನ್ನು ಅನುವಾದ ಮಾಡಿ ಉತ್ತರಿಸುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ "ವಸಂತೇ ಬ್ರಾಹ್ಮಣೋऽಗ್ನೀನಾಧೀತ ಗ್ರೀಷ್ಮೇ ರಾಜನ್ಯಶ್ಶರದಿ ವೈಶ್ಯಃ' ಎಂಬ ವಾಕ್ಯದಲ್ಲಿ 'ಅಗ್ನೀನ್' ಎಂಬುದಾಗಿ ಬಹುವಚನವಿದೆ. ಒಂದು ವೇಳೆ ಇಲ್ಲಿ ಬಹುತ್ವವನ್ನು ವಿವಕ್ಷಿಸದಿದ್ದರೆ ಗಾರ್ಹಪತ್ಯಾಹವನೀಯನ್ವಾಹಾರ್ಯಪಚನವೆಂಬ ಮೂರು ಅಗ್ನಿಗಳ ಆಧಾನವು ಸಿದ್ಧವಾಗದಿರಬೇಕಾದೀತೆಂದು 'ವಿವಕ್ಷಾ' ಎಂಬ ವಾಕ್ಯದ ಅಭಿಪ್ರಾಯ.

**प्रकाशः – सत्रादिति** । दशमस्य द्वितीये पादे "तेषां तु वचनाद्द्वियज्ञवत् सह प्रयोगस्स्यात्" इति त्रयोदशोऽधिकरणे "सत्रात्" इति वाक्यविहितः पृष्ठशमनीय-उदवसायिभिस्संहत्य प्रयोक्तव्य उत्तैकेनेति संशये, 'यजेरन्' इत्याख्यातोपात्त-बहुत्वस्योपादेयकर्तृगामित्वेन विवक्षितत्वात् संहत्येति प्राप्ते, स्यादेवं, यदि बहुत्वं विधीयेत । 'उदवसाय' इति क्त्वाप्रत्ययादुदवसानसमानकर्तृकत्वावगमात्, तत्र बहूनां कर्तृत्वात्प्राप्तमेव बहुत्वं न विधेयम् । न चाविहितमङ्गं भवति, उदवसानेन गम्यमानमपि बहुत्वमविवक्षितं, तस्मादैकैकश्येन प्रयुञ्जीरन् इति सिद्धान्तितम् ।

ತೇಷಾಂ ತು ವಚನಾದ್ ದ್ವಿಯಜ್ಞವತ್ ಸಹ ಪ್ರಯೋಗಸ್ಸ್ಯಾತ್ (೧೦-೨-೧೩)

---

(१) भाट्टसङ्ग्रहः –

अथ त्रयोदशमुदवसानीये सत्रिभ्योऽन्येषामृत्विक्त्वाधिकरणम् (सूत्रे ४१-४२))

**तेषां तु वचनाद्द्वियज्ञवत्सहप्रयोगः स्यात् ॥४१॥**

**(तत्रान्यानृत्विजो वृणीरन् ॥ ४२ ॥)**

**प्रासङ्गिकी सङ्गतिः** । पृष्ठशमनीय उदवसानकर्तृभिरेव कार्य इति ल्यप्प्रत्ययेन समान-कर्तृकत्वार्थकक्त्वादेशभूतेन सिद्धे सति किं तैः सर्वैर्मिलित्वा कार्यः, उतैकैकश्येनेति सन्देहे, यथा ऋद्धिकामाः सत्रमासीरन्" इत्यत्राख्यातोपात्तस्य बहुत्वस्योपादेयकर्तृगामित्वेन विवक्षिततया बहुभिः संहत्य सत्रं क्रियते तथा "सत्रादुदवसाय" इत्यादिवाक्ये यजेरन्नित्याख्यातोपात्तस्य बहुत्वस्य विवक्षितत्वात्संहत्यैव सर्वैः कर्तव्य इति प्राप्तम् । तदाह सूत्रे, तेषां सत्रिणां यजेरन्निति **वचनात्संहत्य प्रयोगः स्याद्द्वियज्ञवत्** यथा "राजपुरोहितौ यजेयाताम्" इत्यत्र राजपुरोहितयोः संहत्य प्रयोगस्तद्वदिति । अस्य पूर्वपक्षस्य **एकशस्त्वविप्रतिषेधात्प्रकृतेश्चैकसंयोगात्** इति सूत्रेण सिद्धान्तं चिकीर्षुर्मध्ये

ಗುಹಾಧಿಕರಣ (೧-೨-೩)

ಈ ಅಧಿಕರಣದಲ್ಲಿ "ಸತ್ರಾದುದವಸಾಯ ಪೃಷ್ಠಶಮನೀಯೇನ ಯಜೇರನ್" ಎಂಬ ಶ್ರುತಿವಾಕ್ಯವನ್ನು ವಿಚಾರ ಮಾಡಲಾಗಿದೆ. ಸತ್ರಯಾಗ ಮುಗಿದ ಮೇಲೆ ಪೃಷ್ಠಶಮನ ಎಂಬ ಯಾಗವನ್ನು ಮಾಡಬೇಕು. ಇದು ಜ್ಯೋತಿಷ್ಟೋಮದ ಅಂಗಯಾಗ. 'ಉದವಸಾಯ' ಎಂಬುದಾಗಿ 'ಲಟ್' ಪ್ರತ್ಯಯವಿರುವುದರಿಂದ ಸಮಾನಕರ್ತೃಕತ್ವವು ತಿಳಿಯುತ್ತದೆ. ಆದ್ದರಿಂದ ಸತ್ರಯಾಗವನ್ನು ಮಾಡಿದ ವ್ಯಕ್ತಿಯೇ ಪೃಷ್ಠಶಮನ ಯಾಗವನ್ನು ಮಾಡಬೇಕು. ಸತ್ರಯಾಗವನ್ನು ಮಾಡಿ ಮುಗಿದ ಋತ್ವಿಜರೇ ಪ್ರತಿಯೊಬ್ಬರೂ ಸೇರಿ ಈ ಪೃಷ್ಠಶಮನಯಾಗವನ್ನು ಮಾಡಬೇಕೋ? ಅಥವಾ ಒಬ್ಬೊಬ್ಬರೂ ಪ್ರತ್ಯೇಕವಾಗಿ ಈ ಪೃಷ್ಠಶಮನಯಾಗವನ್ನು ಮಾಡಬೇಕೋ? ಎಂಬ ಸಂಶಯ ಬರುತ್ತದೆ.

ಪೂರ್ವಪಕ್ಷ- 'ಯಜೇರನ್' ಎಂಬಲ್ಲಿ ಆಖ್ಯಾತದಿಂದ ಯಾಗಕರ್ತೃಗಳಲ್ಲಿ ಬಹುವಚನವು ಕೇಳಿಸುತ್ತಿದೆ. ಆದ್ದರಿಂದ ಸತ್ರಯಾಗವನ್ನು ಅನುಷ್ಠಾನ ಮಾಡಿದ ಎಲ್ಲಾ ಋತ್ವಿಜರು ಸೇರಿ ಪೃಷ್ಠಶಮನಯಾಗವನ್ನು ಆಚರಿಸಬೇಕು.

ಸಿದ್ಧಾಂತ - ಪ್ರತಿಯೊಬ್ಬರೂ ಪ್ರತ್ಯೇಕ ಪ್ರತ್ಯೇಕವಾಗಿಯೇ ಪೃಷ್ಠಶಮನಯಾಗವನ್ನು ಮಾಡಬೇಕು. ಒಂದು ವೇಳೆ ಬಹುತ್ವವು ವಿಧೇಯವಾಗಿದ್ದಲ್ಲಿ ಎಲ್ಲರೂ ಸೇರಿ ನಡೆಸಬೇಕಾಗಿತ್ತು. ಏಕೆಂದರೆ 'ಉದವಸಾಯ' ಎಂಬಲ್ಲಿ ಸ್ವಪ್ರತ್ಯಯದ ಅರ್ಥದಲ್ಲಿರುವ 'ಲೇಟ್' ಪ್ರತ್ಯಯದಿಂದ ಸತ್ರಯಾಗವನ್ನು ಆಚರಿಸಿದವರೇ ಪೃಷ್ಠಶಮನಯಾಗವನ್ನು ಆಚರಿಸಬೇಕೆಂದು ಸಮಾನಕರ್ತೃಕತ್ವವು ತಿಳಿಯುತ್ತದೆ. ಸತ್ರಯಾಗವು ಬಹುಕರ್ತೃಕವಾಗಿರುವುದರಿಂದ ಬಹುತ್ವವು ಮೊದಲೇ ತಿಳಿದಿದೆ. ಇಂತಹ ಬಹುತ್ವವನ್ನು ಪುನಃ ಪ್ರತ್ಯೇಕವಾಗಿ ಪೃಷ್ಠಶಮನಯಾಗದಲ್ಲಿ ವಿಧಾನ ಮಾಡಬೇಕಾಗಿಲ್ಲ. ವಿಧಾನ ಮಾಡದೇ ಇರುವ ಬಹುತ್ವವು ಯಾಗದ ಅಂಗವೂ ಸಹ ಆಗುವುದಿಲ್ಲ. ಯಾವಕಾರಣದಿಂದ ಬಹುತ್ವವು ಅವಿಧೇಯವಾಗಿದೆಯೋ? ಅದೇ ಕಾರಣದಿಂದಲೇ ಸತ್ರಯಾಗವನ್ನು ಮುಗಿಸಿದ ಋತ್ವಿಜರಲ್ಲಿ ಬಹುತ್ವವು ತಿಳಿದರೂ ಸಹ ಅದನ್ನು ವಿವಕ್ಷಿಸಬಾರದು. ಆದ್ದರಿಂದ ಪ್ರತಿಯೊಬ್ಬ ಋತ್ವಿಜರು ಪ್ರತ್ಯೇಕ ಪ್ರತ್ಯೇಕವಾಗಿ ಪೃಷ್ಠಶಮನಯಾಗವನ್ನು ಆಚರಿಸಬೇಕು.

---

तत्रान्यानृत्विजो वृणीरन् इति सूत्रेण चिन्तान्तरं कृतवान् । तथा हि, संहत्य कर्तव्यः पृष्ठशमनीय इति स्थिते सति, किं यजमानैरेव मिलित्वा कर्तव्यः, उत ऋत्विग्भिरिति सन्देहे, उदवसाने यजमानानामेव कर्तृत्वात्तत्समानकर्तृकत्वस्यक्त्वादेशल्यपा प्रतीतेर्यजमाना एव संहत्य कुर्युरिति प्राप्ते सिद्धान्तः, यजेरन्नित्याख्यातेन यो व्यापारो विधीयते तस्यैवोदवसानकर्तृसमानकर्तृकता क्त्वादेशल्यप्प्रत्ययेनोच्यते । यजिना यागक्रियैव यजमानव्यापारोऽभिधीयत इति यजमानव्यापारस्यैव ल्यपोदवसानसमानकर्तृकत्वावगते-श्चोदकाबाधेन प्रकृताविव ऋत्विजो वरणीया इति । तदाह सूत्रे, तत्रान्यानृत्विजो वृणीरन्निति ।

इति त्रयोदशमुदवसानीये सत्रिभ्योऽन्येषामृत्विक्त्वाधिकरणम् (सूत्रे ४१-४२)

ಪರಿಪೂರ್ಣಚಂದ್ರಿಕಾ

ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ ಬಹುತ್ವವು ವಿಧೇಯವಿಶೇಷವಾಗಿದ್ದರೂ ಸಹ ಅವಿವಕ್ಷಿತವೆಂದು ನಿರ್ಣಯಿಸಿದ್ದಾರೆ. ಆದ್ದರಿಂದ ವಿಧೇಯವಿಶೇಷಣವಾದದ್ದೆಲ್ಲಾ ವಿವಕ್ಷಿತವಾಗಬೇಕೆಂಬ ವ್ಯಾಪ್ತಿಗೆ ಈ ಸ್ಥಳದಲ್ಲಿ ವ್ಯಭಿಚಾರ ಬರುತ್ತದೆ.

**प्रकाशः – निर्ज्ञातेति** । निर्णीतविरुद्धविशेषणत्वमेवेत्यर्थः । **ग्रहैकत्वेति** । तत्र हि 'दशैतानध्वर्युः प्रातस्सवने गृह्णाति'' इति ग्रहाणां निर्ज्ञातैकत्वविरुद्ध-सङ्ख्याकत्वादेकत्वस्याविवक्षोक्तेरित्यर्थः । **यस्येतीति** । ''यस्सेतुरिति चैकत्ववचनेन'' इत्युपलक्षणमिति भावः ।

'ನಿರ್ಜ್ಞಾತವಿರುದ್ಧವಿಶೇಷಣತ್ವಮೇವ' ಎಂಬ ಪದಕ್ಕೆ ನಿರ್ಣೀತವಾದ ವಿರುದ್ಧವಿಶೇಷಣತ್ವವೇ ಎಂದರ್ಥ. 'ಗ್ರಹೈಕತ್ವನಯೇ' ಅಂದರೆ ಪೂರ್ವಮೀಮಾಂಸೆಯ ಗ್ರಹೈಕತ್ವಾಧಿಕರಣದಲ್ಲಿ 'ದಶೈತಾನಧ್ವರ್ಯುಃ ಪ್ರಾತಸ್ಸವನೇ ಗೃಹ್ಣಾತಿ'' ಎಂಬುದಾಗಿ ದಶತ್ವಸಂಖ್ಯೆಯು 'ಗ್ರಹಂ ಸಮ್ಮಾರ್ಷ್ಟಿ' ಎಂಬ ವಾಕ್ಯಕ್ಕಿಂತ ಮೊದಲೇ ನಿರ್ಣೀತವಾಗಿದೆ. 'ಗ್ರಹಂ ಸಮ್ಮಾರ್ಷ್ಟಿ ' ಎಂಬಲ್ಲಿರುವ ಏಕತ್ವಸಂಖ್ಯೆಗೆ ಈ ದಶತ್ವಸಂಖ್ಯೆಯು ವಿರುದ್ಧವಾಗಿದೆ. ಆದ್ದರಿಂದ 'ಗ್ರಹಂ ಸಮ್ಮಾರ್ಷ್ಟಿ' ಎಂಬಲ್ಲಿರುವ ಏಕತ್ವಸಂಖ್ಯೆಯು ಅವಿವಕ್ಷಿತವಾಗಿದೆಯೆಂದು ತಿಳಿಯಬೇಕು.

ಗ್ರಂಥದಲ್ಲಿ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬಲ್ಲಿ ಏಕವಚನವು ಮೊದಲೇ ಪ್ರಾಪ್ತವಾಗಿದೆಯೆಂದು ಹೇಳಿರುತ್ತಾರೆ. ಇದು 'ಯಸ್ಸೇತುರಿತಿ ಚೈಕತ್ವವಚನೇನ' ಎಂಬ ಅನುವ್ಯಾಖ್ಯಾನದ ಮಾತಿನಿಂದ ಉಪಲಕ್ಷಣಯಾ ತಿಳಿದಿದೆ.

**प्रकाशः** – कथं तर्हि क्वचित्सङ्ख्यया भेदोक्तिरित्यत आह – **सप्तदशेति** । प्राग्विवृतमेतदधिकरणम् । **वाक्यशेषादीति** । ''स्थित्यदनाभ्यां च'' इत्यत्र वक्ष्यमाणदिशा साशनानशनत्वरूपभेदकधर्मप्रतिपादनात् ''तयोरन्यः पिप्पलं स्वाद्वत्त्यनश्नन्योऽभिचाकशीति'' इति वाक्यशेषानुसारात् ''द्वा सुपर्णा'' इत्यत्र द्वित्वसङ्ख्यया व्यक्तिभेद आश्रित इत्यर्थः ।

ಹಾಗಾದರೆ ಕೆಲವೆಡೆ ಸಂಖ್ಯಾಪ್ರಯುಕ್ತವಾಗಿ ಪ್ರಾತಿಪದಿಕದಲ್ಲಿ ಭೇದವನ್ನು ಹೇಳಿದ್ದು ಕಾಣಿಸುತ್ತಿದೆಯಲ್ಲವೇ? ಎಂಬ ಪ್ರಶ್ನೆಗೆ 'ಸಪ್ತದಶ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಪೂರ್ವಮೀಮಾಂಸೆಯ ಈ ಅಧಿಕರಣವನ್ನು ಹಿಂದೆಯೇ ವಿವರಿಸಿದ್ದೇವೆ. 'ವಾಕ್ಯಶೇಷಾತ್' ಎಂಬುದರ ಅಭಿಪ್ರಾಯ ಹೀಗಿದೆ - 'ಸ್ಥಿತ್ಯದನಾಭ್ಯಾಂ ಚ' ಎಂಬುದಾಗಿ ಮುಂದಿನ ಸೂತ್ರದಲ್ಲಿ ಜೀವಬ್ರಹ್ಮರ ತಿನ್ನುವಿಕೆ ಮತ್ತು ತಿನ್ನದಿರುವಿಕೆಯೆಂಬುದನ್ನು ಜೀವಬ್ರಹ್ಮರ ಭೇದಕಧರ್ಮವೆಂದು ಪ್ರತಿಪಾದಿಸಿದ್ದಾರೆ. ಆದ್ದರಿಂದ ''ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನ್ಯೋಽಭಿಚಾಕಶೀತಿ'' ಎಂಬ ವಾಕ್ಯಶೇಷಕ್ಕೆ ಅನುಸಾರಿಯಾಗಿ ''ದ್ವಾ ಸುಪರ್ಣಾ'' ಎಂಬ ಶ್ರುತಿಯಿಂದ ತಿಳಿಯುವ ದ್ವಿತ್ವಸಂಖ್ಯೆಯಿಂದ ವ್ಯಕ್ತಿಭೇದವನ್ನು ಆಶ್ರಯಿಸಲಾಗಿದೆ.

ಗುಹಾಧಿಕರಣ (೧-೨-೩)

**प्रकाशः** – **तथा** प्राजापत्यशब्दाभिहितदेवताविशिष्टद्रव्यस्यैव सप्तदशत्वसङ्ख्यान्वयानुसाराच्च यागेषु भेद आश्रित इत्यादिशब्दार्थः । अन्यथा सङ्ख्यया कर्मभेदो न स्यादिति प्रागुक्तदोषमुद्धरति – **न हीति** ।

ಮತ್ತು 'ಸಪ್ತದಶಪ್ರಾಜಾಪತ್ಯಾಂ' ಎಂಬಲ್ಲಿ ಪ್ರಾಜಾಪತ್ಯಶಬ್ದದಿಂದ ದೇವತಾವಿಶಿಷ್ಟವಾದ ದ್ರವ್ಯವು ತಿಳಿಯುತ್ತದೆ. ಈ ದ್ರವ್ಯವು ಸಪ್ತದಶತ್ವಸಂಖ್ಯೆಯಿಂದ ಅನ್ವಯವಾಗುವ ಪ್ರಯುಕ್ತ ಯಾಗಗಳಲ್ಲಿಯೂ ಸಹ ಭೇದವನ್ನು ಆಶ್ರಯಿಸಲಾಗಿದೆ ಎಂಬುದನ್ನು ಆದಿಶಬ್ದದಿಂದ ವಿವಕ್ಷಿಸಬೇಕು.

ಹಿಂದೆ ಪೂರ್ವಪಕ್ಷ ಮಾಡುವಾಗ 'ಅನ್ಯಥಾ ಸಂಖ್ಯಯಾ ಕರ್ಮಭೇದೋ ನ ಸ್ಯಾತ್' ಎಂಬಲ್ಲಿ ಹೇಳಿದ ದೋಷವನ್ನು 'ನಹಿ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಿದ್ದಾರೆ.

**प्रकाशः** – **'औत्सर्गिकस्य'** सङ्ख्यया भेद इत्यस्य । **क्वचिदिति** । **'पिबन्तौ'** इत्यादौ । **'अपवादेन'** निरवकाशलिङ्गप्रकरणनिर्ज्ञातविरुद्धविशेषणत्वादिनेत्यर्थः । **उक्तं हीति** । भक्तिपादे । अपवादेन व्यभिचार्यपीत्यर्थः ।

ಸಂಖ್ಯಾಪ್ರಯುಕ್ತವಾದ ಭೇದವು ಔತ್ಸರ್ಗಿಕಭೇದವೆಂದು ಅಭಿಪ್ರಾಯ. 'ಕ್ವಚಿತ್' ಎಂದರೆ 'ಋತಂ ಪಿಬಂತೌ' ಇತ್ಯಾದಿ ಕೆಲವು ಸ್ಥಳಗಳಲ್ಲಿ ಎಂದರ್ಥ. 'ಅಪವಾದೇನ' ಎಂದರೆ ನಿರವಕಾಶವಾದ ಲಿಂಗ ಪ್ರಕರಣಗಳಿಂದ ನಿರ್ಣೀತವಾದ ವಿರುದ್ಧವಿಶೇಷಣತ್ವಾದಿಗಳಿಂದ ಎಂದರ್ಥ. 'ಉಕ್ತಂ ಹಿ' ಭಕ್ತಿಪಾದದಲ್ಲಿ ಹೇಳಿದ್ದಾರೆಂದರ್ಥ. 'ಅಪವಾದೇನ' ಎಂದರೆ ವ್ಯಭಿಚಾರಿಯಾದರೂ ಸಹ ಎಂದರ್ಥ.

**गुरुराजीयम्** – **तत्रेति** ।। उपलक्षणं चैतत् । छत्रिण इत्यत्रानेकेषामेकत्र गमनलक्षणक्रियासम्बन्धवत्प्रकृते उभयोरेकत्र क्रियासम्बन्धाभावाच्चेत्यपि द्रष्टव्यम् । लक्षणीयस्यान्यस्याभावादिति ।। ब्रह्मलक्षणभूतऋतपानयोग्यस्येत्यर्थः । द्वा सुपर्णेत्यादेर्जीवेन सह द्वित्वोपपत्तावपि न तस्य पानम् । लक्ष्यस्य क्रियान्वयापत्तेर्न लक्ष्यत्वमिति भावः । दृष्टान्तदार्ष्टान्तिकयोर्वैषम्यमात्रप्रदर्शनार्थं पूर्वम् ।

ननु ब्रह्मप्रकरणे लक्षणीयस्याभावेऽप्युभयोरेकक्रियासम्बन्धाभावेऽपि प्रातिपदिकलक्षणा भवत्वित्यत आह – **अत एवेति** ।।

तत्प्रकरणे लक्षणीयस्यान्यस्याभावे एकक्रियासम्बन्धाभावे च लक्षणाया असम्भवादेवेत्यर्थः । अन्यथाऽदितिः पाशानित्यत्रापि प्रत्ययार्थबहुत्वापत्त्या प्रातिपदिकलक्षणा स्यादिति भावः । अस्तु तत्रापि लक्षणेत्यत आह – **उद्गातृपदेनेति** ।। एवं प्रकरणानुसारेण प्रत्ययार्थभूतद्वित्वस्यैवास्वारस्यमङ्गी-

कर्तव्यमित्युक्तम् । इदानीं तु यस्य ब्रह्म च क्षत्रं चेत्यादिपूर्ववाक्ये यस्येत्येकवचनेनैकत्त्वस्य निर्ज्ञातत्वात् । द्वित्वस्याविवक्षायामेकस्यैव बोधनं स्यात्तचानिष्टमिति भावः । **बहुत्वस्येति** ।। तत्रानेकेषामधिकाराभावादित्यर्थः ।

नन्वेवं विधेयगतविशेषणत्वाद्वित्वस्याविवक्षायां सप्तदशप्राजापत्यानित्यत्रापि भेदो न स्यात् । तत्रापि बहुत्वस्य द्वित्वस्य वा विधेयविशेषणत्वेनाविवक्षितत्वादित्यत आह – **सप्तदशेति** ।। नच सप्तदशप्राजापत्यानित्यत्राप्येकत्वस्यावधृतत्वात्कथमेतदिति वाच्यम् । प्रत्येकमेकत्वावधारणेऽपि प्रत्येकं सप्तदशत्वाविधानात् । यत्र च समुदाये सप्तदशत्वं विधीयते तत्रैकत्वस्यानवगतत्वादिति ।। **औत्सर्गिकस्येति** ।। द्वित्वमविवक्षितमिति नियमस्यौत्सर्गिकत्वे सप्तदशप्राजापत्यानित्यादावेकत्वानवधारणादिरूपापवादकेनाविवक्षाया अभावेऽप्यपवादकाभावेऽविवक्षायास्सम्भवादिति भावः ।



ಪೂರ್ವಮೀಮಾಂಸೆಯಲ್ಲಿ 'ಪ್ರೋದ್ಗಾತೃಣಾಂ' ಎಂಬ ಶ್ರುತಿಯನ್ನು ವ್ಯಾಖ್ಯಾನಿಸುವಾಗ ಬಹುವಚನದ ಅರ್ಥವನ್ನು ಬಿಡಬಾರದೆಂದು ವಿವಕ್ಷಿಸಿ 'ಉದ್ಗಾತೃ' ಶಬ್ದಕ್ಕೆ ಹೋತೃ ಪ್ರಸ್ತೋತ್ರಾದಿಗಳಲ್ಲಿ ಲಕ್ಷಣಾ ಮಾಡುವುದು ಕಂಡಿದೆ. ಅದರಂತೆ 'ಋತಂ ಪಿಬಂತೌ' ಎಂಬಲ್ಲಿಯೂ ದ್ವಿವಚನದಿಂದ ತಿಳಿಯುವ ದ್ವಿತ್ವವನ್ನು ಕೂಡಿಸುವುದಕ್ಕಾಗಿ 'ಪಿಬತ್' ಪ್ರಾತಿಪದಿಕಕ್ಕೆ ಲಕ್ಷಣಾ ಮಾಡಬಹುದಲ್ಲವೇ ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ.

ಆದರೆ 'ಉದ್ಗಾತೃ' ಶಬ್ದವಿರುವ ಪ್ರಕರಣದಲ್ಲಿಯೇ ಪ್ರಸ್ತೋತ್ರಾದಿಗಳು ಪ್ರಸ್ತುತರಾದ್ದರಿಂದ ಅವರಲ್ಲಿ ಲಕ್ಷಣಾವನ್ನು ಮಾಡಬಹುದು. ಮತ್ತು 'ಉದ್ಗಾತೃ' ಶಬ್ದಕ್ಕೆ ಸಾಮಗಾನ ಮಾಡುವವರು ಎಂದರ್ಥ. ಪ್ರಸ್ತೋತ್ರಾದಿಗಳೂ ಸಹ ಸಾಮವೇದವನ್ನು ಅಧ್ಯಯನ ಮಾಡಿರುವ ಪ್ರಯುಕ್ತ ಅವರಲ್ಲಿ ಲಕ್ಷಣಾ ಮಾಡಬಹುದು. ಆದರೆ 'ಪಿಬತ್' ಪ್ರಾತಿಪದಿಕಕ್ಕೆ ಜೀವನಲ್ಲಿ ಲಕ್ಷಣಾ ಮಾಡಲು ಸಾಧ್ಯವಿಲ್ಲ. ಏಕೆಂದರೆ ಬ್ರಹ್ಮಪ್ರಕರಣವಾಗಿರುವುದರಿಂದ ಜೀವನ ಪ್ರಸಕ್ತಿಯೇ ಇರುವುದಿಲ್ಲ. ಮತ್ತು ಲಕ್ಷಣಾ ಮಾಡಲು ಉಪಯೋಗಿಯಾದ ಅಸಾಧಾರಣವಾದ ಯಾವುದೇ ಧರ್ಮಗಳೂ ಸಹ ಜೀವನಲ್ಲಿ ಇರುವುದಿಲ್ಲ. ಈ ಕಾರಣದಿಂದ ಪೂರ್ವಮೀಮಾಂಸಾದೃಷ್ಟಾಂತವು ವಿಷಮವಾಗಿದೆ.

ಮತ್ತು ಪೂರ್ವಪಕ್ಷ ಮಾಡುವಾಗ ಉದ್ದೇಶವಿಶೇಷಣವು ಅವಿವಕ್ಷಿತವಾಗಿರುತ್ತದೆ. ವಿಧೇಯವಿಶೇಷಣವು ವಿವಕ್ಷಿತವಾಗಿರುತ್ತದೆಂದು ಹೇಳಿದ್ದರು. ಇದೂ ಸಹ ತಪ್ಪು. 'ಅಗ್ನೀನಾದಧೀತ' ಎಂಬಲ್ಲಿ ಉದ್ದೇಶವಿಶೇಷಣವನ್ನೂ ಸಹ ಪೂರ್ವಮೀಮಾಂಸಕರು ವಿವಕ್ಷಿಸಿದ್ದಾರೆ. 'ಸತ್ರಾದುದವಸಾಯ

ಪೃಷ್ಠಶಮನೀಯೇನ ಯಜರೇನ್' ಎಂಬಲ್ಲಿ ಹೃದಯವಿಶೇಷಣವನ್ನು ಅವಿವಕ್ಷಿತವೆಂದಿದ್ದಾರೆ. ಆದ್ದರಿಂದ ನಿರ್ಜ್ಞಾತವಿರುದ್ಧವಿಶೇಷಣವಾಗಿದ್ದನ್ನೇ ಅವಿವಕ್ಷಿತವೆಂದು ಹೇಳಬೇಕು. ಅಂದರೆ ವಿರುದ್ಧವಾದ ಸಂಖ್ಯೆಯು ಮೊದಲೇ ತಿಳಿದಿದ್ದರೆ ಅವಿವಕ್ಷಿತವಾಗುತ್ತದೆಂದು ಅಭಿಪ್ರಾಯ. 'ಗುಹಾಂ ಪ್ರವಿಷ್ಟೌ' ಎಂಬಲ್ಲಿ ದ್ವಿತಸಂಖ್ಯೆಯು ತಿಳಿಯುವ ಮೊದಲೇ ಬ್ರಹ್ಮನಲ್ಲಿ ಏಕತ್ವ ಸಂಖ್ಯೆಯು ನಿರ್ಣೀತವಾಗಿದೆ. ಆದ್ದರಿಂದ 'ಗುಹಾಂ ಪ್ರವಿಷ್ಟೌ' ಎಂಬಲ್ಲಿ ದ್ವಿವಚನದಿಂದ ತಿಳಿಯುವ ದ್ವಿತ್ವಸಂಖ್ಯೆಯನ್ನು ವಿವಕ್ಷಿಸಬಾರದು.



## ಮೊದಲು ನಿರ್ಣೀತವಾದದ್ದನ್ನು ಎಂದೂ ಬಿಡಬಾರದು

**तात्पर्यचन्द्रिका**

**अत्र तु गुहाप्रवेशादिना ब्रह्मत्वेन निश्चितस्य पातुः पूर्वत्र ''यस्य ब्रह्म च क्षत्रं च'' इति, ''मृत्युर्यस्य'' इति, ''क इत्था'' इति, उत्तरत्र च ''यस्सेतुः'' इत्याद्येकवचनाच्चैकत्वमवधृतम् । अत एव ''एकादश प्रयाजान् यजति'' इत्यत्र पञ्चप्रयाजानमेवावृत्त्या एकदशत्वमित्युक्तं पञ्चमे । नवमेऽपि ''अतिजगतीषु स्तुवन्ति'' इति बहुवचनं 'विश्वा पृतना'' इत्येकस्यामेव अतिजगत्यां ऋचि सप्तकृत्वोऽभ्यासमात्रेण, नतु जगतीव्यक्तिबहुत्वेनेत्युक्तम् ।**

ಅನುವಾದ - ಪ್ರಕೃತದಲ್ಲಿ ದ್ವಿತ್ವವನ್ನು 'ಋತಂ ಪಿಬಂತೌ' ಎಂಬಲ್ಲಿ ದ್ವಿತ್ವವನ್ನು ವಿವಕ್ಷಿಸದಿರಲು ಅಪವಾದವಿದೆ. ಗುಹಾಪ್ರವಿಷ್ಟಾತ್ವಾದಿ ಧರ್ಮಗಳಿಂದ ಈ ಶ್ರುತಿಪ್ರತಿಪಾದ್ಯನು ಬ್ರಹ್ಮನೇ ಎಂದು ನಿರ್ಣಯವಾಗಿದೆ. ಭೋಕ್ತೃವಾದ ಇಂತಹ ಬ್ರಹ್ಮನಲ್ಲಿ ಏಕತ್ವವು ಮೊದಲೇ ಪ್ರಸಕ್ತವಾಗಿದೆ - 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂದು ಮತ್ತು 'ಮೃತ್ಯುರ್ಯಸ್ಯ' 'ಕ ಇತ್ಥಾ' ಇತ್ಯಾದಿಯಾಗಿ ಹಿಂದಿನ ವಾಕ್ಯದಲ್ಲಿ ಏಕತ್ವವೇ ಕೇಳಿಸುತ್ತಿದೆ. ಮತ್ತು ಮುಂದಿನ ವಾಕ್ಯಗಳಲ್ಲಿ 'ಯಸ್ಸೇತುಃ' ಇತ್ಯಾದಿಯಾಗಿ ಏಕವಚನಪ್ರಯೋಗದಿಂದ ಏಕತತ್ವವೇ ಕೇಳಿಸುತ್ತಿದೆ.

ಪೂರ್ವದಲ್ಲಿ ನಿರ್ಣೀತವಾಗಿರುವುದನ್ನೇ ಅಪವಾದವೆಂದು ಹೇಳಿದ್ದರಿಂದ ಪೂರ್ವಮೀಮಾಂಸೆಯ ಪಂಚಮಾಧ್ಯಾಯದಲ್ಲಿ 'ಏಕಾದಶಪ್ರಯಾಜಾನ್ ಯಜತಿ' ಪಂಚ ಪ್ರಯಾಜಗಳನ್ನೇ ಆವೃತ್ತಿ ಮಾಡಿ ಏಕಾದಶತ್ವವನ್ನು ವಿಧಿಸಿದ್ದಾರೆ. ಒಂಭತ್ತನೇ ಅಧ್ಯಾಯದಲ್ಲಿಯೂ ಸಹ 'ಅತಿಜಗತೀಷು ಸ್ತುವಂತಿ' ಎಂಬಲ್ಲಿಯೂ ಸಹ ಬಹುವಚನವನ್ನು 'ವಿಶ್ವಾಪೃತನಾ' ಎಂಬ ಒಂದೇ ಅತಿಜಗತೀ ಛಂದಸ್ಸಿನಲ್ಲಿರುವ ಮಂತ್ರದಲ್ಲಿ ಏಳು ಬಾರಿ ಅಭ್ಯಾಸದಿಂದ ಕೂಡಿಸಿದ್ದಾರೆ ಹೊರತು ಜಗತೀ ಎಂಬ ಛಂದಸ್ಸಿನಲ್ಲಿಯೇ ಬಹುತ್ವವನ್ನು ಹೇಳಿರುವುದಿಲ್ಲ.

**प्रकाशः –**

प्रकृते किमपवादकमित्यत आह – **अत्र त्विति** । एकत्वावधारणमेवापवादकमित्यर्थः । **अत एवेति** । ''पञ्च प्रयाजा इज्यन्ते'' इति प्रयाजानां निर्ज्ञातसङ्ख्याकत्वादित्यर्थः ।

ವಿವರಣೆ - 'ಘುತಂ ಪಿಬಂತೌ' ಎಂಬಲ್ಲಿ ದ್ವಿತ್ವವನ್ನು ವಿವಕ್ಷಿಸಲು ಯಾವ ಅಪವಾದವಿದೆ? ಎಂಬ ಪ್ರಶ್ನೆಗೆ 'ಅತ್ರ ತು' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಏಕತ್ವದ ನಿರ್ಧಾರವೇ ಅಪವಾದಕವೆಂದು ತಿಳಿಯಬೇಕು. 'ಅತ ಏವ' ಎಂಬ ಶಬ್ದಕ್ಕೆ 'ಪಂಚ ಪ್ರಯಾಜಾ ಇಜ್ಯಂತೇ' ಎಂಬಲ್ಲಿ ಪ್ರಯಾಜಗಳ ಸಂಖ್ಯೆಯು ಮೊದಲು ನಿರ್ಣಯವಾಗಿರುವುದರಿಂದಲೇ ಎಂದು ಅರ್ಥ.

**प्रकाशः – पञ्चमे तृतीयपादे ''विवृद्धिःकर्मभेदात्पृषदाज्यवत्तस्य तस्योपदिश्यते''** इत्याद्याधिकरणे 'एकादश प्रयाजान्यजति षडुपसदः' इति श्रुतसङ्ख्या प्रत्येकं भवति किं वा सर्वसंवादिनीति संशये, प्रयाजानुपसदश्चोद्दिश्य सङ्ख्याविधानादुद्देश्यानां च साहित्यस्याविवक्षासम्भवात्प्रतिप्रयाजं प्रत्युपसदं सङ्ख्या स्यादिति प्राप्ते, एकैकशस्समुदितानां वा स्वरूपेण सङ्ख्यान्वयो न सम्भवति, एकस्य पञ्चानां चैकादशत्वायोगात् । अतः सङ्ख्यान्वयसिद्धये प्रयाजाः प्रयोगं लक्षयन्ति, तं लक्षयन्तस्तन्त्राभिधानात्सहावगतास्तथैव लक्षयन्ति, सङ्ख्या चेयमनेकवृत्तिस्वभावा समस्तलक्षितप्रयोगगतापि शक्नोति सर्वेषां प्रयाजानां उपकर्तुम्, अतस्सर्वसंवादिनी स्यादिति सिद्धान्तितम् । प्रयोगाऽऽवृत्त्या दशसङ्ख्यासम्पत्तौ तत्रैकस्य चरमस्याऽऽवृत्त्या एकादशत्वमिति ध्येयम् ।

ವಿವೃದ್ಧಿಃ ಕರ್ಮಭೇದಾತ್ಪೃಷದಾಜ್ಯವತ್ತಸ್ಯ ತಸ್ಯೋಪದಿಶ್ಯತೇ[1] (೫-೩-೧)

(१) भाट्टसङ्ग्रहः –

**अथ प्रथमं प्रयाजादीनामेकादशादिसङ्ख्यायाः सर्वसम्पाद्यताधिकरणम् (सूत्रे १-२)**

**विवृद्धिः कर्मभेदात्पृषदाज्यवत्तस्य तस्योपदिश्येत ॥ १ ॥**

**(अपि वा सर्वसङ्ख्यत्वाद्विकारः प्रतीयेत ॥२॥)**

उत्तराधिकरणचिन्तोपयुक्ततयेदमारभ्यत इत्यौपाद्घातिकी सङ्गतिरस्य ध्येया । अग्नीयषोमीयपशौ चोदकप्राप्तेषु पञ्चसु प्रयाजेषु ''एकादश प्रयाजान् यजति'' इति सङ्ख्याविवृद्धिः श्रूयते । तत्र किमेकैकस्य एकादशत्वसङ्ख्या सम्पाद्या किं वा प्रत्येकं द्विर्द्विरावृत्तिश्चरमस्य त्रिरित्येवमेकादशत्वसङ्ख्या सम्पाद्येति सन्देहः । **पूर्वपक्षस्तु,** प्रयाजोद्देशेन हि सङ्ख्या विधीयते ''ये प्रयाजास्ते एकादश भवन्ति'' इति । उद्देश्यविशेषाच

ಗುಹಾಧಿಕರಣ (೧-೨-೩)

ಈ ಅಧಿಕರಣದಲ್ಲಿ "ಏಕಾದಶ ಪ್ರಯಾಜಾನ್ಯಜತಿ ಷಡುಪಸದಃ" ಎಂಬ ಶ್ರುತಿ ಕೇಳಿಸುತ್ತಿದೆ. ಈ ಶ್ರುತಿಗಿಂತ ಮೊದಲು ಪಂಚಪ್ರಯಾಜ ಯಾಗಗಳು ಪ್ರಸಕ್ತವಾಗಿವೆ. ಅಂದರೆ 'ಇಡೋ ಯಜತಿ' 'ಬರ್ಹಿರ್ಯಜತಿ' ಇತ್ಯಾದಿಯಾಗಿ ಐದು ಪ್ರಯಾಜ ಯಾಗಗಳು ಮೊದಲೇ ಪ್ರಸಕ್ತವಾಗಿವೆ. ಪ್ರಕೃತ 'ಏಕಾದಶ ಪ್ರಯಾಜಾನ್' ಎಂಬ ಶ್ರುತಿಯು ಪಂಚಪ್ರಯಾಜಗಳಲ್ಲಿ ಸೇರಿರುವ ಪ್ರತಿಯೊಂದು ಯಾಗಗಳನ್ನು ಹನ್ನೊಂದು ಬಾರಿ ಹೇಳುತ್ತಿದೆಯೋ? ಅಥವಾ ಪಂಚಪ್ರಯಾಜಗಳಲ್ಲಿ ಮೊದಲಿರುವ ನಾಲು ಯಾಗಗಳನ್ನು ಎರಡು ಬಾರಿ ಮಾಡಿ ಕೊನೆಯ ಯಾಗವನ್ನು ಮೂರು ಬಾರಿ ಮಾಡುವ ಮೂಲಕ ಹಿಂದಿನದ್ದನ್ನು ಸೇರಿಸಿ ಏಕಾದಶತ್ವ ಸಂಖ್ಯೆಯನ್ನು ವಿಧಿಸುತ್ತಿದೆಯೋ? ಎಂದು ಸಂಶಯ.

ಪೂರ್ವಪಕ್ಷ - ಪ್ರಯಾಜಗಳನ್ನು ಹಾಗೂ ಉಪಸದಗಳನ್ನು ಉದ್ದೇಶಿಸಿ ಏಕಾದಶತ್ವಸಂಖ್ಯೆಯನ್ನು ಶ್ರುತಿಯು ವಿಧಿಸುತ್ತಿದೆ. ಉದ್ದೇಶ್ಯದಲ್ಲಿ ವಿಶೇಷಣವಾದ ಐದು ಪ್ರಯಾಜಗಳ ಸಾಹಿತ್ಯವು ಅವಿವಕ್ಷಿತವಾಗಿದೆಯೆಂದು ಹೇಳಬಹುದು. ಆದ್ದರಿಂದ ಪ್ರತಿಯೊಂದು ಪ್ರಯಾಜಗಳಲ್ಲಿ ಮತ್ತು ಪ್ರತಿಯೊಂದು ಉಪಸದಗಳಲ್ಲಿ ಏಕಾದಶತ್ವ ಸಂಖ್ಯೆಯು ಪ್ರತ್ಯೇಕವಾಗಿ ಅನ್ವಯವನ್ನು ಹೊಂದುತ್ತದೆ. ಆದ್ದರಿಂದ ಪ್ರತಿಯೊಂದು ಪ್ರಯಾಜಯಾಗಗಳನ್ನು ಹನ್ನೊಂದು ಬಾರಿ ಆಚರಿಸಬೇಕು.

---

साहित्यं ग्रहैकत्ववदविवक्षितमिति प्रतिप्रधानं गुणस्याङ्गीकार्यत्वात्प्रत्येकमेव तावती सङ्ख्या सम्पाद्येति । तदाह **सूत्रकारः, कर्मणां भिन्नत्वात्** उद्देश्यसाहित्यस्य चाविवक्षितत्वात्तस्य **तस्य प्रत्येकमेव विवृद्धिः** सङ्ख्याभिवृद्धिरुपदिश्येत । **पृषदाज्यवत्** यथा "पृषदाज्येनानुयाजान् यजति" इति पृषदाज्यमनुयाजानां प्रत्येकमेवोपदिश्यते । न समुदाये । तद्वदिति । **सिद्धान्तस्तु,** नात्र प्रयाजानां स्वरूपोद्देश्येन सङ्ख्या विधीयते । एकैकशः समुदितानां वैकादशत्वसम्पादनायोगात् । किन्तु प्रयाजलक्षितप्रयोगोद्देशेन । ते च तन्त्राभिधानेन सहावगताः सहिता एव प्रयोगं लक्षयन्ति । न प्रत्येकम् । तावतापि सङ्ख्यान्वयसिद्धेः । तस्मात्पञ्चप्रयाजान् द्विरावृत्त्य पुनश्चरमस्य सकृदावृत्तावेकादशत्वं सम्पाद्यते इति, सर्वसम्पादिनी सङ्ख्या न प्रत्येकम् । न चैवं पृषदाज्येप्येवं स्यादिति शङ्क्यम् । सङ्ख्याया अनेकवृत्तिस्वाभावतया समस्तोपलक्षितैकप्रयोगद्वारा समस्तोपकारकत्वसम्भवात् पृषदाज्यस्यानेकवृत्तिस्वभावत्वाभावेन तन्त्रेण समस्तोपकारकत्वासम्भवादिति । एवं "एकादशानुयाजान् यजति" इत्यत्रापि ध्येयम् । तथा "चातुर्मास्येषु नव प्रयाजान् यजति । नवानुयाजान् यजति" इत्यत्र । तथा अग्नौ श्रुते "षडुपसदः" इत्यत्रापि चोदकप्राप्तानां तिसृणामुपसदां षट्कङ्ख्या द्विर्द्विरावृत्त्या समुदायसम्पाद्या, न प्रत्येकश इति ध्येयम् । **फलन्तु,** प्रयाजानां प्रत्येकं एकादशकृत्वोऽभ्यासः **पूर्वपक्षे** । **सिद्धान्ते** तु समस्तानामेवेति ।

इति प्रथमं प्रयाजादीनामेकादशादिसङ्ख्यायाः सर्वसम्पाद्यताधिकरणम् (सूत्रे १-२)

ಪರಿಪೂರ್ಣಚಂದ್ರಿಕಾ

ಸಿದ್ಧಾಂತ - ಏಕಾದಶತ್ವ ಸಂಖ್ಯೆಯನ್ನು ಪ್ರತ್ಯೇಕವಾಗಿ ಪ್ರಯಾಜಗಳ ಸ್ವರೂಪದಲ್ಲಾಗಲಿ ಅಥವಾ ಅವುಗಳ ಸಮುದಾಯದಲ್ಲಾಗಲೀ ಅನ್ವಯ ಮಾಡಲು ಸಾಧ್ಯವಿಲ್ಲ. ಏಕೆಂದರೆ ಪ್ರಯಾಜವೆಂಬ ಒಂದು ಸ್ವರೂಪಕ್ಕೆ ಏಕಾದಶತ್ವ ಸಂಖ್ಯೆಯು ಬಾಧಿತವಾಗಿದೆ. ಅಥವಾ ಪ್ರಯಾಜಗಳ ಐದರ ಗುಂಪಿನಲ್ಲಿಯೂ ಸಹ ಏಕಾದಶತ್ವಸಂಖ್ಯೆಯು ಬಾಧಿತವಾಗಿದೆ. ಆದ್ದರಿಂದ ಏಕಾದಶತ್ವ ಸಂಖ್ಯೆಯಿಂದ ಅನ್ವಯವನ್ನು ಹೊಂದುವುದಕ್ಕಾಗಿ ಪ್ರಯಾಜಗಳ ಪ್ರಯೋಗವನ್ನು ಲಕ್ಷಣಯಾ ತಿಳಿಯಬೇಕು. ಪ್ರಯೋಗಗಳನ್ನು ಲಕ್ಷಣಯಾ ತಿಳಿಯಬೇಕಾದರೆ ಎಲ್ಲಾ ಪ್ರಯಾಜಗಳನ್ನು ಒಟ್ಟಿಗೆ ಹೇಳಿರುವ ಕಾರಣ ಎಲ್ಲವೂ ಸಹ ಒಟ್ಟಿಗೆ ತಿಳಿಯುತ್ತವೆ. ಆದ್ದರಿಂದ ಸಂಖ್ಯೆಯು ಅನೇಕ ಪದಾರ್ಥಗಳಲ್ಲಿ ಇರುವಿಕೆಯೆಂಬ ಸ್ವಭಾವವನ್ನು ಹೊಂದಿದ ಕಾರಣ ಲಕ್ಷಿತವಾದ ಪ್ರಯೋಗಗಳಲ್ಲಿಯೂ ಅನ್ವಯವನ್ನು ಹೊಂದಲು ಸಮರ್ಥವಾಗುತ್ತದೆ. ಆದ್ದರಿಂದ ಏಕಾದಶತ್ವ ಸಂಖ್ಯೆಗೆ ಒಟ್ಟಿಗೆ ಅನ್ವಯವನ್ನು ಮಾಡಬೇಕು. ಆವಾಗ ಪಂಚಪ್ರಯಾಜಗಳಲ್ಲಿ ಮೊದಲ ನಾಲ್ಕು ಯಾಗಗಳನ್ನು ಎರಡು ಬಾರಿ ಅನುಷ್ಠಾನ ಮಾಡಬೇಕು. ಐದನೆಯ ಪ್ರಯಾಜವನ್ನು ಮೂರು ಬಾರಿ ಅನುಷ್ಠಾನ ಮಾಡಬೇಕೆಂದು ತಿಳಿಯುತ್ತದೆ.

ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ ಮೊದಲೇ ನಿರ್ಣೀತವಾದ ಪಂಚತ್ವ ಸಂಖ್ಯೆಯನ್ನೇ ವಿವಕ್ಷಿಸಿ ಅನಂತರ ಪ್ರಸಕ್ತವಾಗುವ ಏಕಾದಶತ್ವ ಸಂಖ್ಯೆಯನ್ನು ಕೂಡಿಸಿದ್ದಾರೆ. ಆದ್ದರಿಂದ ಮೊದಲು ನಿರ್ಣೀತವಾದ ಸಂಖ್ಯೆಯನ್ನೇ ಅನಂತರವೂ ವಿವಕ್ಷಿಸಬೇಕೆಂದು ತಿಳಿಯುತ್ತದೆ. ಅದರಂತೆ ಪ್ರಕೃತದಲ್ಲಿ ಬ್ರಹ್ಮನಲ್ಲಿ ಮೊದಲು ಏಕತ್ವಸಂಖ್ಯೆಯು ನಿರ್ಣೀತವಾದ್ದರಿಂದ ದ್ವಿತ್ವಸಂಖ್ಯೆಯು ಮುಂದೆ ಪ್ರಸಕ್ತವಾದರೂ ಬಿಡಬಾರದೆಂದು ತಿಳಿಯುತ್ತದೆ.

**प्रकाशः** – तथा नवमे द्वितीयपादे ''नैमित्तिकं तूत्तरोत्तरत्वमानन्तर्यात्प्रतीयेत'' इति चतुर्थेऽधिकरणे द्वितीयवर्णके चिन्तितम् । द्वादशाहे चतुर्थऽहनि त्रैशोकनामकं साम विहितम् । तच ''अतिजगतीषु स्तुवन्ति'' इत्यतिजगत्यामुत्पन्नम् । पूर्वत्र हि समच्छन्दस्के तृचे सामगानं कार्यमिति विचारितम् । इह च तृचमध्ये आद्या ''विश्वा पृतना अभिभूतं'' इत्यतिजगती । उत्तरमृग्द्वयं च ''नेमिं नमन्ति चक्षसा मेषं'' इति, ''समीरे भासो अस्वरन्'' इति बृहतीछन्दस्कं पठ्यते । तत्र तृचगाने कर्तव्ये किं बृहत्योस्त्यागेनातिजगत्यौ द्वे आनीय समच्छन्दस्कासु तिसृषु ऋक्षु गानं कार्यमुत विषमास्वेवेति संशये, समासु गानं इति पूर्वत्र निर्णीतत्वात् ''अतिजगतीषु स्तुवन्ति'' इति बहुवचनानुग्रहाय च समासु गानमिति प्राप्ते, उत्तरयोर्बृहत्योः पाठस्य क्रत्वर्थत्वात्तत्परित्यागे च तयोरानर्थक्यात् ''एकविंशः षोडशो वैराजं'' इति श्रुतैकविंशत्वसङ्ख्यासम्पत्त्यै चैकस्यामृचि सप्तकृत्वोऽभ्यस्यामानायां अभ्यासापेक्षयाऽतिजगतीबहुत्वस्योपपत्तेः

विषमच्छन्दस्कासु गानमिति सिद्धान्त इति ।

'नतु' इति तदधिकरणपूर्वपक्षनिरासः ।

ನೈಮಿತ್ತಿಕಂತೂತ್ತರೋತ್ತರತ್ವಮಾನಂತರ್ಯಾತ್ಪ್ರತೀಯೇತ (೯-೨-೪)[1]

ಈ ಅಧಿಕರಣದ ಎರಡನೆಯ ವ್ಯಾಖ್ಯಾನ ಹೀಗಿದೆ - ಒಟ್ಟು ಹನ್ನೆರಡು ದಿವಸ ಮಾಡಬೇಕಾದ ಈ ಯಾಗದಲ್ಲಿ ನಾಲ್ಕನೆಯ ದಿವಸದಂದು ತ್ರೈಶೋಕವೆಂಬ ಸಾಮವೇದವನ್ನು ಗಾನ ಮಾಡಬೇಕು. ಈ ತ್ರೈಶೋಕವೆಂಬ ಸಾಮವನ್ನು 'ಅತಿಜಗತೀಷು ಸ್ತುವಂತಿ' ಎಂಬುದಾಗಿ 'ಅತಿಜಗತೀ' ಎಂಬ ಛಂದಸ್ಸಿನಲ್ಲಿ ಹಾಡಬೇಕು. ಹಿಂದಿನ ಅಧಿಕರಣದಲ್ಲಿ ಮೂರು ಮಂತ್ರಗಳಿಂದ ಮಾಡಬೇಕಾದ ಸಾಮಗಾನವನ್ನು ಒಂದೇ

(१) भाट्टसङ्ग्रहः –

**नैमित्तिकन्तूत्तरोक्तरत्वमानन्तर्यात्प्रतीयेत ॥२३॥**

**(ऐकार्थ्याच्च तदभ्यासः ॥ २४॥)**

**प्रथमं वर्णकम् । पूर्वाक्षेपेणात्र शङ्कनात्सङ्गतिः ।** सामगानां छन्दोनामके ग्रन्थे उत्तराग्रन्थे च सामाश्रयभूता ऋचः पठिताः । छन्दोग्रन्थे रथन्तरबृहदादिसाम्नां योनिभूता ऋच एव पठिताः । उत्तराग्रन्थे तु रथन्तरयोनिं ''अभि त्वा शूर'' इत्यृचं पठित्वा साम्नः कस्यचियोदप्ययोनिभूते ''न त्वा वां'' इत्यादिकं द्वे ऋचौ पठिते । एवं बृहदादिसाम्नो योनिपाठान्तरं द्वे द्वे ऋचावयोनिभूते पठिते । एवं स्थिते सति ''यद्योन्यां तदुत्तरयोर्गायति'' इत्यत्रोत्तराशब्दः किं योन्युत्तरपरः, उतोत्तराग्रन्थस्थपर इति **सन्देहे,** उत्तराशब्दस्य सम्बन्धिशब्दत्वेन पूर्वपठितयोन्युत्तरदेशपठितऋक्पर एवात्रोत्तराशब्दः । तथा च रथन्तरयोनेः परतो बृहदादियोनेः पाठात्तयोः ''त्वामिद्धि हवामहे'' इत्यादिकयो रथन्तरसा गानम् । उत्तराग्रन्थे तु रथाम्नोन्तरयोनेरुत्तरत्र ''न त्वा त्वाम्'' इत्यादिक्योः पाठात्तत्र गानमिति, कदाचिद्बृहदादियोनिभूतयो ऋचो रथन्तरस्य गानं, कदाचित्तु ''न त्वा वाम्'' इत्याद्युत्तराग्रन्थस्थयो ऋचोर्गानमित्यनियमः । द्वयोरपि रथन्तरयोन्यत्तुरत्वात् । एवं च पूर्वत्रोक्तं समास्वेव गानमित्ययुक्तम् । विषमछन्दस्कयोरपि योन्युत्तरयोर्गानस्यावर्जनीयत्वादिति **प्राप्ते सिद्धान्तः,** उत्तराशब्दस्य सम्बन्धिशब्दत्वेपीह न तस्य ग्रहणम् । उत्तराग्रन्थे सञ्ज्ञाशब्दत्वात् । तस्य निरपेक्षस्य सापेक्षसम्बन्धिशब्दादपि बलवत्त्वान्निरपेक्षस्यैव ग्रहणमत्रेत्युत्तराग्रन्थस्थयोः ''न त्वा वाम्'' इत्यादिकयोरेव गानमिति । तदाह **सूत्रे, नैमित्तिकन्तु** सञ्ज्ञानिमित्तिकमेवोत्तरात्वं **प्रतीयेत** ज्ञातव्यम् । कुतः? **आनन्तर्यात्** अन्याव्यवधानेनार्थबोधकत्वात्सञ्ज्ञाया इत्यर्थः । **फलं** व्यक्तम् ।

इति पञ्चमं ''उत्तरयोर्गायति'' इत्यत्रोत्तराग्रन्थसमधीतीयोरेव ऋचोर्ग्रहणाधिकरणम्

(सूत्रे २३-२३)

ಪರಿಪೂರ್ಣಚಂದ್ರಿಕಾ

ಛಂದಸ್ಸಿನಲ್ಲಿ ಹೇಳಬೇಕೆಂದು ವಿಚಾರ ಮಾಡಲಾಗಿದೆ. ಆದರೆ ಈ ಅಧಿಕರಣದಲ್ಲಿ ಮೂರು ಮಂತ್ರಗಳಲ್ಲಿ ಮೊದಲನೆಯ 'ವಿಶ್ವಾಪೃತನಾ ಅಭಿಭೂತಂ' ಎಂಬುದನ್ನು 'ಅತಿಜಗತೀ' ಛಂದಸ್ಸಿನಲ್ಲಿ ಹಾಡಬೇಕು. 'ನೇಮಿಂ ನಮಂತಿ' ಮತ್ತು 'ಸಮೀರೇ ಭಾಸೋ ಅಸ್ವರನ್' ಎಂಬ ಮಂತ್ರಗಳನ್ನು ಬೃಹತೀಛಂದಸ್ಸಿನಲ್ಲಿ ಹಾಡಬೇಕು. ಒಟ್ಟಿಗೆ ಮೂರು ಮಂತ್ರಗಳನ್ನು ಹಾಡಬೇಕಾದರೆ ಬೇರೆ ಬೇರೆ ಛಂದಸ್ಸಿನಲ್ಲಿ ಹಾಡುವುದು ತಪ್ಪಾಗುತ್ತದೆ. ಆದ್ದರಿಂದ ಬೃಹತೀಛಂದಸ್ಸಿರುವ ಮಂತ್ರಗಳಲ್ಲಿ ಎರಡು ಅತಿಜಗತೀಗಳನ್ನು ಅಪಕರ್ಷ ಮಾಡಿ ಮೂರನ್ನೂ ಒಂದೇ ಛಂದಸ್ಸಿನಲ್ಲಿ ಹಾಡುವುದು ಸೂಕ್ತ ಅಥವಾ ಯಥಾಸ್ಥಿತಿಯಲ್ಲಿ ಮೊದಲನೆಯದ್ದನ್ನು ಅತೀಜಗತ್ತಿನಲ್ಲಿ, ಉಳಿದೆರಡನ್ನು ಬೃಹತೀಛಂದಸ್ಸಿನಲ್ಲೇ ಹಾಡಬೇಕೋ? ಎಂದು ಸಂಶಯ.

ಪೂರ್ವಪಕ್ಷ - ಹಿಂದಿನ ಅಧಿಕರಣದಲ್ಲಿ 'ಸಮಾಸು ಗಾನಂ' ಒಂದೇ ಛಂದಸ್ಸಿನಲ್ಲಿ ಹಾಡಬೇಕೆಂದು ನಿರ್ಣಯಿಸಿದ್ದಿರಿಂದ ಮತ್ತು 'ಅತಿಜಗತೀಷು ಸ್ತುವಂತಿ' ಎಂಬಲ್ಲಿ ಬಹುವಚನವನ್ನು ಪ್ರಯೋಗಿಸಿರುವುದರಿಂದ ಮೂರನ್ನೂ ಅತಿಜಗತೀಛಂದಸ್ಸಿನಲ್ಲೇ ಹಾಡಬೇಕು.

ಸಿದ್ಧಾಂತ - ಮುಂದಿನ ಎರಡು ಬೃಹತೀಮಂತ್ರಗಳು ಕ್ರತುವಿಗೋಸ್ಕರ ನಿಷ್ಪನ್ನವಾಗಿವೆ. ಅದನ್ನು ಬಿಟ್ಟರೆ ಆ ಮಂತ್ರಗಳೇ ವ್ಯರ್ಥವಾಗುತ್ತವೆ. ಆದ್ದರಿಂದ ಹಾಡಬೇಕಾದ ಮೂರು ಮಂತ್ರಗಳಲ್ಲಿ ಮೊದಲನೆಯದ್ದನ್ನು 'ಅತಿಜಗತೀ' ಛಂದಸ್ಸಿನಲ್ಲಿ ಉಳೆರದಡನ್ನು 'ಬೃಹತೀ' ಛಂದಸ್ಸಲ್ಲೇ ಪಠಿಸಬೇಕು. 'ಅತಿಜಗತೀಷು' ಎಂಬ ಬಹುವಚನ ಪ್ರಯೋಗವೂ ಸಹ ತಪ್ಪಲ್ಲ. ಏಕೆಂದರೆ "ಏಕವಿಂಶಃ ಷೋಡಶೋ ವೈರಾಜಂ" ಎಂಬಲ್ಲಿ ಇಪ್ಪತ್ತೊಂದು ಬಾರಿ ಮಂತ್ರವನ್ನು ಪಠಿಸಬೇಕೆಂದು ಹೇಳಲಾಗಿದೆ. ಪ್ರಕೃತವಾದ ಈ ಮೂರು ಮಂತ್ರಗಳನ್ನು ಏಳು ಬಾರಿ ಪಠಿಸಿದಾಗ ಮೂರನ್ನೂ ಸೇರಿಸಿ ಇಪ್ಪತ್ತೊಂದು ಬಾರಿ ಪಠಿಸಿದಂತಾಗುತ್ತದೆ. ಹೀಗೆ ವಿವಕ್ಷಿಸಿದಾಗ ಒಂದೊಂದು ಮಂತ್ರಗಳನ್ನೂ ಏಳುಬಾರಿ ಆವೃತ್ತಿ ಮಾಡುವ ಕಾರಣ 'ಅತಿಜಗತೀ' ಮಂತ್ರದಲ್ಲಿಯೂ ಬಹುತ್ವವೂ ಉಪಪನ್ನವಾಗುತ್ತದೆ. ಆದ್ದರಿಂದ ಅತಿಜಗತೀ ಛಂದಸ್ಸನ್ನು ಪಠಿಸುವಂತೆ ವಿಷಮ ಛಂದಸ್ಸಿನಲ್ಲಿರುವ ಬೃಹತೀಛಂದಸ್ಸಿನ ಮಂತ್ರಗಳನ್ನೂ ಸಹ ಪಠಿಸಬೇಕು.

ಪೂರ್ವಮೀಮಾಂಸೆಯ ಅಧಿಕರಣದಲ್ಲಿ ಮೊದಲೇ ಪ್ರಾಪ್ತವಾದ ಏಳು ಬಾರಿ ಪಠಿಸಬೇಕೆಂಬ ಸಂಖ್ಯೆಯನ್ನು ಅನಂತರವೂ ವಿವಕ್ಷಿಸಲಾಗಿದೆ. ಗ್ರಂಥಕಾರರು 'ನತು' ಎಂಬ ವಾಕ್ಯದಲ್ಲಿ ಪೂರ್ವಮೀಮಾಂಸಾಧಿಕರಣದ ಪೂರ್ವಪಕ್ಷವನ್ನು ನಿರಾಕರಿಸಿದ್ದಾರೆ.

**गुरुराजीयम्** – ननु सप्तदशप्राजपत्यानित्यादाविव प्रकृतेऽप्येकत्वाव-धारणोपायाभावेन तदनवधारणादविवक्षाप्रयोजकीभूतस्य निर्ज्ञातविशेषणत्वस्याभावात्पिबन्तावित्यत्र द्वित्वस्याविवक्षा न सम्भवतीति ब्रह्मपक्षे द्वित्वानुपपत्तिरेवेत्यत आह – **अत्र त्विति** ।। निर्ज्ञातविशेषणत्वस्यापि विवक्षा किं न स्यादित्यत आह – **अत एवेति** ।।



ಪೂರ್ವಮೀಮಾಂಸೆಯಲ್ಲಿ 'ಏಕಾದಶಪ್ರಯಾಜಂ ಯಜತೇ' ಎಂಬಲ್ಲಿ ಮೊದಲೇ ಪ್ರಾಪ್ತವಾದ ಪಂಚತ್ವ ಸಂಖ್ಯೆಯನ್ನು ಆವೃತ್ತಿ ಮಾಡಿಯೇ ಏಕಾದಶತ್ವ ಸಂಖ್ಯೆಯನ್ನು ಕೂಡಿಸಿದ್ದಾರೆ. ಅದರಂತೆ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬುದರಿಂದ ಮೊದಲೇ ನಿರ್ಣೀತವಾದ ಏಕತ್ವಸಂಖ್ಯೆಯನ್ನೇ 'ಋತಂ ಪಿಬಂತೌ' ಎಂಬಲ್ಲಿಯೂ ಬಿಡಬಾರದೆಂದು ತಿಳಿಯಬೇಕು.



## ಒಬ್ಬನೇ ಪರಮಾತ್ಮನಲ್ಲಿ ದ್ವಿತ್ವಾದಿಸಂಖ್ಯೆಗಳಿವೆ

### तात्पर्यचन्द्रिका

**किञ्च –**

**सम्बन्धादि यथैकस्मिंस्तथाऽनेकत्वमिष्यताम् ।**
**प्रमितत्वाद्विरोधं तु विशेषो वारयिष्यति ।।**

**दृश्यते हि 'प्रमेयत्वं प्रमेयम्' ''आनन्द ब्रह्मणः'' 'भेदो भिन्नः' इत्यादावेकस्मिन्नेव विशेषणविशेष्यभावेन सम्बन्धः ।**

**''नेह नाना'' इत्यादिना तु ब्रह्मणि भेद एव निषिद्धः न त्वनेकत्वसङ्ख्या । प्रत्युत ''अयं वै हरयोऽयं वै दश च सहस्राणि च बहूनि चानन्तानि च तदेतद्ब्रह्मापूर्वमनपरमनन्तम्'' इत्यादिश्रुत्या हि सा विहिता । विरोधं तु भेदप्रतिनिधिर्विशेषो वारयिष्यति ।**

ಅನುವಾದ - ಮತ್ತು ದ್ವಿತ್ವಸಂಖ್ಯೆಯೂ ಒಬ್ಬನೇ ಪರಮಾತ್ಮನಲ್ಲಿ ಹೇಳಬಹುದು.

ಸಂಬಂಧಾದಿ ಯಥೈಕಸ್ಮಿಂಸ್ತಥಾಽನೇಕತ್ವಮಿಷ್ಯತಾಮ್ ।
ಪ್ರಮಿತತ್ವಾದ್ವಿರೋಧಂ ತು ವಿಶೇಷೋ ವಾರಯಿಷ್ಯತಿ ।

ಸಂಬಂಧವೇ ಮೊದಲಾದವು ಒಂದೇ ಪದಾರ್ಥದಲ್ಲಿ ಇರುವುದು ಕಂಡಿದೆ. ಅದರಂತೆ ಒಂದೇ ಪದಾರ್ಥದಲ್ಲಿ ಅನೇಕತ್ವ ಸಂಖ್ಯೆಯನ್ನೂ ಸಹ ಹೇಳಬಹುದು. ಇದು ಪ್ರಮಿತವಾದ್ದರಿಂದ ವಿರೋಧ ಬಂದರೆ ವಿಶೇಷವು ಪರಿಹರಿಸುತ್ತಿದೆ.

### ಪರಿಪೂರ್ಣಚಂದ್ರಿಕಾ

'ಪ್ರಮೇಯತ್ವಂ ಪ್ರಮೇಯಮ್' ಎಂಬಲ್ಲಿ ತನ್ನ ಸಂಬಂಧವೇ ತನ್ನಲ್ಲಿದೆ. 'ಆನಂದೋ ಬ್ರಹ್ಮಣಃ' ಎಂಬಲ್ಲಿ ಆನಂದದ ಸಂಬಂಧವು ಆನಂದಸ್ವರೂಪಿಯಾದ ಬ್ರಹ್ಮನಲ್ಲೇ ಇದೆ. 'ಭೇದೋ ಭಿನ್ನಃ' ಎಂಬಲ್ಲಿ ಭೇದದ ಸಂಬಂಧವು ತನ್ನಲ್ಲೇ ಇದೆ. ಇವೆಲ್ಲವನ್ನೂ ವಿಶೇಷಣವಿಶೇಷ್ಯಭಾವದಿಂದ ಒಂದೇ ಪದಾರ್ಥದಲ್ಲಿ ಹೇಳುವುದು ಕಂಡಿದೆ. ಅದರಂತೆ ಒಬ್ಬನೇ ಬ್ರಹ್ಮನಲ್ಲಿ ದ್ವಿತ್ವ, ಅನೇಕತ್ವ ಸಂಖ್ಯೆಗಳನ್ನು ಹೇಳಬಹುದು.

'ನೇಹ ನಾನಾ' ಎಂಬ ಶ್ರುತಿಯು ಬ್ರಹ್ಮನಲ್ಲಿ ಭೇದವನ್ನಷ್ಟೇ ನಿಷೇಧಿಸುತ್ತಿದೆ ಹೊರತು ಅನೇಕತ್ವ ಸಂಖ್ಯೆಯನ್ನು ನಿಷೇಧಿಸುತ್ತಿಲ್ಲ. ಹೊರತಾಗಿ "ಅಯಂ ವೈ ಹರಯೋಽಯಂ ವೈ ದಶ ಚ ಸಹಸ್ರಾಣಿ ಚ ಬಹೂನಿ ಚಾನಂತಾನಿ ಚ ತದೇತದ್ಬ್ರಹ್ಮಾಪೂರ್ವಮನಪರಮನಂತಮ್" ಇತ್ಯಾದಿ ಶ್ರುತಿಯಿಂದ ಅನೇಕತ್ವ ಸಂಖ್ಯೆಯೇ ವಿಹಿತವಾಗಿದೆ.

ಒಬ್ಬನಲ್ಲಿ ಅನೇಕತ್ವಸಂಖ್ಯೆಯನ್ನು ಹೇಳುವುದು ವಿರುದ್ಧವಲ್ಲವೇ? ಎಂದು ಪ್ರಶ್ನಿಸಬಾರದು. ಭೇದದ ಪ್ರತಿನಿಧಿಯಾದ ವಿಶೇಷವು ಆ ವಿರೋಧವನ್ನು ಪರಿಹರಿಸುತ್ತದೆ.

**प्रकाशः –**

एवं प्रत्ययार्थानुगुण्येन प्रातिपदिकबाधायोगात् तदनुरोधेन प्रत्ययार्थ एवान्यसाहित्येन वाऽविवक्षितत्वेन वा कथञ्चिन्नेय इति प्रौढ्या परिहारद्वयमुक्तम् । इदानीं नन्वत्रान्यस्याश्रयणात्तत्साहित्येन कथं द्वित्वमिति शङ्कां, ग्रहेष्वेकत्वस्य स्वरूपतः सत्त्वेनानुवादत्ववत्प्रकृते ब्रह्मणि दित्वस्य स्वरूपत एवाभावेन अनुवादत्वमपि न सम्भवतीति प्रागुक्ताशङ्कां च निरसितुं,

....... द्वित्वं चैकस्य युज्यते ।
यस्सेतुरिति चैकत्ववचनेन विशेषणात् ।।

इत्यनुव्याख्यानानुरोधेन द्वित्वस्य विवक्षामुपेत्य द्वित्वैकत्वयोस्समावेशमाह – **किञ्चेति** । दृष्टान्तविवरणपूर्वं श्लोकं व्याचष्टे – **दृश्यते हीति** । **एकस्मिन्नेवेति** । "विज्ञानमानन्दं ब्रह्म" इत्यादावानन्दब्रह्मणोरेकत्वं सिद्धमिति भावः । 'सम्बन्धः' इत्यनन्तरं 'तथेहाप्येकस्मिन् ब्रह्मण्यनेकत्वमस्तु' इति योज्यम् ।

ವಿವರಣೆ - ಇಲ್ಲಿಯ ತನಕ 'ಪಿಬಂತೌ' ಎಂಬಲ್ಲಿರುವ ದ್ವಿವಚನ ಪ್ರತ್ಯಯಾರ್ಥವಾದ ದ್ವಿತ್ವಕ್ಕೆ ಅನುಗುಣವಾಗಿ ಪ್ರಾತಿಪದಿಕದ ಅರ್ಥಕ್ಕೆ ಬಾಧವು ಬರುವುದಿಲ್ಲವೆಂದು ಹೇಳಿ ಪ್ರಾತಿಪದಿಕಕ್ಕೆ

ಅನುಸಾರಿಯಾಗಿಯೇ ಪ್ರತ್ಯಯಾರ್ಥವನ್ನು ಅನ್ಯಸಾಹಿತ್ಯದಿಂದ ಕೂಡಿಸಬೇಕೆಂದು ಉಪಪಾದಿಸಿದರು. ಅಥವಾ ಪ್ರಾತಿಪದಿಕಾರ್ಥವನ್ನು ಬಿಡಬಾರದ ಕಾರಣ ಪ್ರತ್ಯಯಾರ್ಥವೆನಿಸಿದ ದ್ವಿತ್ವವನ್ನು ವಿವಕ್ಷಿಸಬಾರದೆಂದು ಹೇಳಿದರು. ಈ ಎರಡು ಪರಿಹಾರಗಳು ಕೇವಲ ಪ್ರೌಢಿವಾದ ಹೊರತು ಸಿದ್ಧಾಂತವಲ್ಲ. ಆದರೆ ಪ್ರಕೃತ ಸಿದ್ಧಾಂತವನ್ನು ಹೇಳುತ್ತಿದ್ದಾರೆ. ಬ್ರಹ್ಮ ಪ್ರಕರಣವಾದ್ದರಿಂದ ಬ್ರಹ್ಮನೊಬ್ಬನೇ ಪ್ರಸಕ್ತನಾಗಿದ್ದಾನೆ. ಬೇರೆ ಜೀವಾದಿಗಳು ಕೇಳಿಸುತ್ತಿಲ್ಲ. ಆದ್ದರಿಂದ ಅನ್ಯಸಾಹಿತ್ಯದಿಂದ ದ್ವಿತ್ವವನ್ನು ಬ್ರಹ್ಮನಲ್ಲಿ ಹೇಗೆ ಕೂಡಿಸುತ್ತೀರಿ? 'ಗ್ರಹಂ ಸಮ್ಮಾರ್ಷ್ಟಿ' ಎಂಬಲ್ಲಿ ಗ್ರಹಗಳಲ್ಲಿ ಏಕತ್ವವು ಸ್ವರೂಪತಃ ಇರುವುದರಿಂದ ಅದನ್ನು ಅನುವಾದವೆಂದು ಹೇಳಬಹುದು. ಆದರೆ 'ಬ್ರಹ್ಮನಲ್ಲಿ ದ್ವಿತ್ವವು ಸ್ವರೂಪದಿಂದಲೇ ಇಲ್ಲದ ಕಾರಣ ಅನುವಾದವೆಂದೂ ಸಹ ಹೇಳಲಾಗದು ; ಎಂಬ ಹಿಂದಿನ ಆಶಂಕೆಯನ್ನು ಪರಿಹರಿಸುತ್ತಾ. ''.... ದ್ವಿತ್ವಂ ಚೈಕಸ್ಯ ಯುಜ್ಯತೇ । ಯಸ್ಮೇತುರಿತಿ ಚೈಕತ್ವವಚನೇನ ವಿಶೇಷಣಾತ್ ॥'' ಎಂಬ ಅನುವ್ಯಾಖ್ಯಾನಕ್ಕೆ ಅನುಸಾರಿಯಾಗಿ ದ್ವಿತ್ವವನ್ನು ವಿವಕ್ಷಿಸಿ ಒಬ್ಬನೇ ಬ್ರಹ್ಮನಲ್ಲಿ ದ್ವಿತ್ವ ಹಾಗೂ ಏಕತ್ವಗಳ ಸಮಾವೇಶವನ್ನು 'ಕಿಂಚ' ಎಂಬ ಗ್ರಂಥದಿಂದ ಉಪಪಾದಿಸುತ್ತಿದ್ದಾರೆ.

ದೃಷಾಂತಪುರಸ್ಸರವಾಗಿ ಶ್ಲೋಕವನ್ನು ಸ್ವತಃ ವ್ಯಾಖ್ಯಾನಿಸುತ್ತಿದ್ದಾರೆ. ದೃಶ್ಯತೇ ಹಿ ಇತ್ಯಾದಿಯಾಗಿ. 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ ಸ್ಥಳಗಳಲ್ಲಿ ಆನಂದ ಹಾಗೂ ಬ್ರಹ್ಮರಲ್ಲಿ ಏಕತ್ವವು ಸಿದ್ಧವಾಗಿದೆಯೆಂದು 'ಏಕಸ್ಮಿನ್' ವಾಕ್ಯದ ಅಭಿಪ್ರಾಯ. 'ಸಂಬಂಧಃ' ಎಂಬುದರ ಅನಂತರ 'ಅದರಂತೆ ಪ್ರಕೃತ ಬ್ರಹ್ಮನಲ್ಲಿಯೂ ಅನೇಕತ್ವ ಸಂಖ್ಯೆಯು ಯುಕ್ತವಾಗುತ್ತದೆಂಬುದನ್ನು ಯೋಜನೆ ಮಾಡಿಕೊಳ್ಳಬೇಕು.

**प्रकाशः** – ननु श्रुत्याऽनेकत्वनिषेधान्नैवमित्यत आह – **नेह नानेति** । 'किञ्चन' गुणकर्मादिकं 'नाना' भिन्नं नेति भेदस्यैव निषेध इत्यर्थः । **इत्यादिश्रुत्येति** । चतुर्थबृहदारण्यकश्रुत्येत्यर्थः ।

ಶ್ರುತಿಯು ಪರಮಾತ್ಮನಲ್ಲಿ ಅನೇಕತ್ವ ಸಂಖ್ಯೆಯನ್ನು ನಿಷೇಧಿಸಲಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ನೇಹ ನಾನಾ' ಎಂಬುದರಿಂದ ಉತ್ತರಿಸುತ್ತಿದ್ದಾರೆ. 'ನೇಹ ನಾನಾ' ಎಂಬ ಶ್ರುತಿಯು ಕಿಂಚನ = ಗುಣಕರ್ಮಾದಿಗಳು , ನಾನಾ = ಭಿನ್ನವಾಗಿ, ಇಹ = ಬ್ರಹ್ಮನಲ್ಲಿ, ನ = ಇರುವುದಿಲ್ಲ ಎಂಬುದಾಗಿ ಗುಣಕರ್ಮಾದಿಭೇದಗಳನ್ನಷ್ಟೇ ನಿಷೇಧಿಸುತ್ತಿದೆ ಎಂದರ್ಥ. 'ಇತ್ಯಾದಿಶ್ರುತ್ಯಾ' ಎಂದರೆ ಬೃಹದಾರಣ್ಯಕದ ನಾಲ್ಕನೆಯ ಶ್ರುತಿಯಿಂದ.

**प्रकाशः** – आदिपदेन "युक्ता ह्यस्य हरयः शता दश" इति, "तस्य ह वा एतस्य परमस्य त्रीणि रूपाणि कृष्णो रामः कपिलः" इति, "तस्य ह वा एतस्य परमस्य पञ्च रूपाणि दशरूपाणि शतरूपाणि सहस्ररूपाणि अमितरूपाणि" इत्यादि गृह्यते । एतेन 'प्रमितत्वात्' इत्येतद्विवृतं भवति । **भेदेति** । घटपटयोर्भेदः द्वित्वनिर्वाहकः ।

"ಯುಕ್ತಾ ಹ್ಯಸ್ಯ ಹರಯಃ ಶತಾ ದಶ" ಎಂದು ಮತ್ತು 'ತಸ್ಯ ಹ ವಾ ಏತಸ್ಯ ಪರಮಸ್ಯ ತ್ರೀಣಿ ರೂಪಾಣಿ ಕೃಷ್ಣೋ ರಾಮಃ ಕಪಿಲಃ'' ಎಂದು ಮತ್ತು "ತಸ್ಯ ಹ ವಾ ಏತಸ್ಯ ಪರಮಸ್ಯ ಪಂಚರೂಪಾಣಿ

ದಶರೂಪಾಣಿ ಶತರೂಪಾಣಿ ಸಹಸ್ರರೂಪಾಣಿ ಅಮಿತರೂಪಾಣಿ''. ಇವೇ ಮೊದಲಾದ ಶ್ರುತಿಗಳನ್ನು ಆದಿಪದದಿಂದ ಸ್ವೀಕರಿಸಬೇಕು. ಇದರಿಂದ 'ಪ್ರಮಿತತ್ವಾತ್' ಎಂಬುದನ್ನು ವಿವರಿಸಿದಂತಾಯಿತು. 'ಭೇದ' ಎಂಬುದರಿಂದ ಘಟಪಟಾಗಳಲ್ಲಿರುವ ಭೇದವು ದ್ವಿತ್ವನಿರ್ವಾಹಕವಾಗಿದೆ. ಆದರೆ ಪರಮಾತ್ಮನಲ್ಲಿರುವ ದ್ವಿತ್ವ ಅನೇಕತ್ವಗಳನ್ನು ಭೇದಪ್ರತಿನಿಧಿಯಾದ ವಿಶೇಷವು ನಿರ್ವಹಿಸುತ್ತದೆ.

**प्रकाशः** – इह तु भेदस्य ''नेह नाना'' इति निषेधात् ''अयं वै दश च'' इत्यादिना एकत्वानेकत्वयोः प्रमितत्वात् यथा सोमकार्यनिर्वाहकेण सोमप्रतिनिधिना पूतीकेन सोमकार्यं, तथेहापि भेदकार्यं अविरोधकेन भेदप्रतिनिधिता स्वरूपसामथर्चापरपर्यायेण विशेषेण भविष्यतीत्यर्थः । समर्थितश्च विशेषपदार्थो मूलग्रन्थेषु तत्र तत्र, न्यायामृते द्वितीयपरिच्छेदे चेति भावः ।

ಏಕೆಂದರೆ ದ್ವಿತ್ವ ಅನೇಕತ್ವಗಳನ್ನು ನಿರ್ವಹಿಸುವ ಭೇದವನ್ನು 'ನೇಹ ನಾನಾ' ಎಂಬ ಶ್ರುತಿಯು ನಿರಾಕರಿಸಿದೆ. 'ಅಯಂ ವೈ ದಶ ಚ' ಎಂಬ ಶ್ರುತಿಯಂತೆ ಒಬ್ಬನೇ ಪರಮಾತ್ಮನಲ್ಲಿ 'ಏಕತ್ವ' ಮತ್ತು 'ಅನೇಕತ್ವ' ಸಂಖ್ಯೆಗಳು ಪ್ರಮಿತವೆಂದು ನಿರ್ಣಯವಾಗಿವೆ. ಆದ್ದರಿಂದ ಹೋಮದಲ್ಲಿ ಸೋಮಲತೆಯನ್ನು ಸಂಪಾದಿಸಲು ಸಾಧ್ಯವಾಗದಿದ್ದರೆ ಪೂತಿಕಾಲತೆಯಿಂದ ಸೋಮದ ಕಾರ್ಯವನ್ನು ನಿರ್ವಹಿಸುವಂತೆ ಪ್ರಕೃತ ಪರಮಾತ್ಮನಲ್ಲಿ ಭೇದವಿಲ್ಲದ ಕಾರಣ ಭೇದದ ಕಾರ್ಯವನ್ನು ನಿರ್ವಹಿಸುವ ಭೇದ ಪ್ರತಿನಿಧಿಯಾದ ವಿಶೇಷದ ಬಲದಿಂದಲೇ ವಿರೋಧವನ್ನು ಪರಿಹರಿಸಬೇಕು.

ಭಾಷ್ಯಕಾರರು ಅನೇಕ ಗ್ರಂಥಗಳಲ್ಲಿ ಈ ವಿಶೇಷಪದಾರ್ಥಗಳನ್ನು ಸಮರ್ಥಿಸಿದ್ದಾರೆ. ನ್ಯಾಯಾಮೃತದ ದ್ವಿತೀಯಪರಿಚ್ಛೇದದಲ್ಲಿಯೂ ಇದರ ಸಮರ್ಥನೆಯನ್ನು ಕಾಣಬಹುದು.

**प्रकाशः** – यद्यप्यनुभाष्यसुधयोः ''ऋतं पिबन्ताविति द्विवचविषयतया प्रकृतयोर्द्वित्वाधारयो ''यस्सेतुः'' इत्येकवचनेन विशेषणादभेदैकत्वाधारतावगमादिति यावत्'' इत्यादिना प्रकृतवाक्य एव द्वित्वैकत्वयोरैकाधिकरण्यं प्रमितमित्यविरोध उक्तः । तथाऽपि तस्य स्पष्टत्वाद्वा विचारहीनवाक्यान्तरेऽपि प्रमितत्वमस्तीति भावेन वा ''अयं वै हरयः'' इत्यादिश्रुत्यन्तरोक्तिः ।

ವಸ್ತುತಃ ಅನುವ್ಯಾಖ್ಯಾನ ಹಾಗೂ ಸುಧೆಗಳಲ್ಲಿ 'ಋತಂ ಪಿಬಂತೌ' ಎಂಬ ಶ್ರುತಿಯು ದ್ವಿವಚನ ವಿಷಯವಾಗಿರುವುದರಿಂದ ದ್ವಿತ್ವಕ್ಕೆ ಬ್ರಹ್ಮನು ಆಧಾರನಾಗಿದ್ದಾನೆಂದು ಹೇಳುತ್ತಿದೆ. ''ಯಸ್ಸೇತುಃ'' ಇತ್ಯೇಕವಚನೇನ ವಿಶೇಷಣಾದಭೇದೈಕತ್ವಾಧಾರತಾವಗಮಾದಿತಿ ಯಾವತ್'' 'ಆದರೆ 'ಯಸ್ಸೇತುಃ' ಎಂಬಲ್ಲಿ ಏಕವಚನವನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ ಬ್ರಹ್ಮನು ಏಕತ್ವಕ್ಕೆ ಆಧಾರನಾಗಿಯೂ ತಿಳಿಯುತ್ತಾನೆ' ಇತ್ಯಾದಿಯಾಗಿ 'ಋತಂ ಪಿಬಂತೌ' ಎಂಬ ವಾಕ್ಯದಲ್ಲಿಯೇ ದ್ವಿತ್ವ ಏಕತ್ವಗಳಿಗೆ ಸಾಮಾನಾಧಿಕರಣ್ಯವು ಪ್ರಮಿತವಾದ್ದರಿಂದ ವಿರೋಧವಿಲ್ಲವೆಂದು ಹೇಳಿದ್ದಾರೆ. ಆದರೂ ಸಹ ಪ್ರಕೃತ ಗ್ರಂಥಕಾರರು ಬೇರೆ

ವಾಕ್ಯಗಳಲ್ಲಿ ಹೆಚ್ಚು ಸ್ಪಷ್ಟವಾಗಿರುವುದರಿಂದ ವಿಚಾರ ಮಾಡಲು ಅವಶ್ಯಕತೆಯಿಲ್ಲದ ವಾಕ್ಯಗಳಲ್ಲಿಯೂ ವಿರುದ್ಧವಾದ ದ್ವಿತ್ವ ಮತ್ತು ಏಕತ್ವಗಳು ಪ್ರಮಿತವಾಗಿದೆಯೆಂಬ ಅಭಿಪ್ರಾಯದಿಂದ 'ಅಯಂ ವೈ ಹರಯಃ' ಇತ್ಯಾದಿ ಶ್ರುತಿಗಳನ್ನು ಉಲ್ಲೇಖಿಸಿದ್ದಾರೆ.

**गुरुराजीयम्** – इदानीं प्रत्ययार्थभूतमनेकत्वमविवक्षितमिति न तस्यास्वारस्यं न वा विवक्षितत्वमित्याह – **किञ्चेति** ।।



ಇಲ್ಲಿಯ ತನಕ ಮಾಡಿದ್ದೆಲ್ಲವೂ ಪ್ರೌಢಿವಾದ. ನಿಜವಾದ ಸಿದ್ಧಾಂತದ ಪ್ರಮೇಯವೇನೆಂದರೆ ಒಬ್ಬನೇ ಬ್ರಹ್ಮನಲ್ಲಿ ದ್ವಿತ್ವಾದಿ ಸಂಖ್ಯೆಗಳನ್ನು ಹೇಳಬಹುದು. ಸಂಬಂಧ ಭೇದ ಮೊದಲಾದವು ಅನೇಕ ಪದಾರ್ಥಗಳಲ್ಲಿರುವುದೆಂದು ಲೋಕಸಿದ್ಧವಾದ ವಿಚಾರ. ಆದರೆ 'ಪ್ರಮೇಯತ್ವಂ ಪ್ರಮೇಯಂ' 'ಆನಂದಂ ಬ್ರಹ್ಮಣಃ' ಇತ್ಯಾದಿ ಸ್ಥಳಗಳಲ್ಲಿ ತನ್ನಲ್ಲಿಯೇ ಇರುವುದು ಕಂಡಿದೆ. 'ಭೇದೋ ಭಿನ್ನಃ' ಎಂಬಲ್ಲಿ ಭೇದವು ತನ್ನಲ್ಲೇ ಇರುವುದು ಕಂಡಿದೆ. ಅದರಂತೆ ದ್ವಿತ್ವವಿದ್ದಲ್ಲಿ ಏಕತ್ವವು ವಿರುದ್ಧವೆಂಬುದು ಲೋಕಸಿದ್ಧವಿಚಾರ. ಆದರೆ ಸಂಬಂಧಾದಿಗಳಂತೆ ಏಕತ್ವವಿದ್ದಲ್ಲಿ ದ್ವಿತ್ವ ಏಕೆ ಇರಬಾರದು? ಒಬ್ಬನೇ ಬ್ರಹ್ಮನಲ್ಲಿ ಏಕತ್ವ, ದ್ವಿತ್ವ, ಬಹುತ್ವಾದಿ ಸಂಖ್ಯೆಗಳನ್ನು ಉಪಪಾದಿಸಲು ಏನೂ ಆತಂಕಗಳಿಲ್ಲವೆನ್ನಲು ಅನೇಕ ಶ್ರುತಿ ಸ್ಮೃತಿಗಳು ಆಧಾರವಾಗಿವೆ.

'ನೇಹ ನಾನಾ' ಎಂಬ ಶ್ರುತಿಯು ಗುಣಕರ್ಮಾದಿಗಳಿಂದ ಬ್ರಹ್ಮನಲ್ಲಿ ಭೇದವಿಲ್ಲವೆಂದು ಸಮರ್ಥಿಸುತ್ತಿದೆ, ಹೊರತು ಭೇದವನ್ನೇ ಇಲ್ಲವೆಂದು ಹೇಳುತ್ತಿಲ್ಲ. ಆದ್ದರಿಂದ 'ಅಯಂ ವೈ ಹರಯಃ' ಇತ್ಯಾದಿ ಶ್ರುತಿಗಳ ಆಧಾರದಂತೆ ಅನೇಕತ್ವ ಸಂಖ್ಯೆಯನ್ನು ಪರಮಾತ್ಮನಲ್ಲಿ ಹೇಳುವುದು ತಪ್ಪಲ್ಲ. ಏಕತ್ವ ಮತ್ತು ಅನೇಕತ್ವಗಳಿಗೆ ವಿರೋಧ ಬಂದರೆ ಭೇದಪ್ರತಿನಿಧಿಯಾಗಿರುವ ವಿಶೇಷವು ಅದನ್ನು ಪರಿಹರಿಸುತ್ತದೆ.



ದೃಷ್ಟಾಂತಪುರಸ್ಸರವಾಗಿ ಬ್ರಹ್ಮನಲ್ಲಿ ದ್ವಿತ್ವ ಏಕತ್ವಗಳ ಸಮರ್ಥನೆ

## तात्पर्यचन्द्रिका

**किञ्च – ब्रह्मण आनन्दमात्रात्मकत्वे तत्स्फुरणाभावः, ज्ञानमात्रात्मकत्वे आनन्दाभावः इत्युभयथाऽपि मोक्षस्यापुरुषार्थत्वं स्यात्, परमतेऽपि सुखप्रकाशस्य पुरुषार्थत्वात्, ज्ञानानन्दोभयात्मकत्वे तु सिद्धमेकस्याप्यनेकत्वम् ।**

**एवञ्च यथा नवमे ''मेधपतये मेधं मेधपतिभ्यां मेधम्'' इत्यत्र मेधपति-शब्दार्थयोरग्नीषोमयोरकवचननिर्वाहाय देवतात्वेनैकत्वम्, देवतात्वस्य**

व्यासक्तत्वात्, द्विवचननिर्वाहाय तु देवतात्वाधिष्ठानरूपेण द्वित्वमिति द्वित्वैकत्वयोस्समुच्चयः, तथेहापि ब्रह्मणस्स्वरूपेणैकत्वं, रूपविशेषेण तु द्वित्वमिति श्रौतयोर्द्वित्वैकत्वयोः समुच्चयोऽस्तु, ''इन्द्रो मायाभिः पुरुरूप ईयते'' ''यदेकमव्यक्तमनन्तरूपम्'' ''एकं रूपं बहुधा यः करोति''

पश्य मे पार्थ रूपाणि शतशोऽथ सहस्रशः ।

इत्यादिश्रुतिस्मृतिभिरेव समुच्चयावगतेः । तदेतदभिप्रेत्योक्तमनुव्याख्याने – ''द्वित्वं चैकस्य युज्यते'' इति । न्यायविवरणे च – ''द्विवचनश्रुतेरपि न निरवकाशत्वं, विष्णोरेव द्विरूपत्वात्'' इति ।

ಅನುವಾದ - ನಾವಷ್ಟೇ ಅಲ್ಲ, ಅದ್ವೈತಿಗಳೂ ಸಹ ಬ್ರಹ್ಮನಲ್ಲಿ ದ್ವಿತ್ವವನ್ನು ಒಪ್ಪಬೇಕಾಗುತ್ತದೆ. ಏಕೆಂದರೆ ಬ್ರಹ್ಮನು ಕೇವಲ ಆನಂದಸ್ವರೂಪನಾದರೆ ಆನಂದ ಸ್ಫುರಣವು (ಆನಂದದ ಜ್ಞಾನವು) ಉಂಟಾಗದಿರಬೇಕಾದೀತು. ಕೇವಲ ಜ್ಞಾನಸ್ವರೂಪನೆಂದು ಹೇಳಿದರೆ ಆನಂದವೇ ಇಲ್ಲದಿರಬೇಕಾದೀತು. ಹೀಗೆ ಎರಡರಲ್ಲಿ ಒಂದು ಪಕ್ಷವನ್ನು ಬಿಟ್ಟರೂ ಮೋಕ್ಷವು ಪುರುಷಾರ್ಥರೂಪವಾಗುವುದಿಲ್ಲ. ಆದ್ದರಿಂದ ಸುಖಪ್ರಕಾಶವನ್ನೇ (ಸುಖದ ಜ್ಞಾನವನ್ನೇ) ಅದ್ವೈತಿಗಳು ಪುರುಷಾರ್ಥವೆಂದು ಒಪ್ಪಿರುವುದರಿಂದ ಬ್ರಹ್ಮನಿಗೆ ಆನಂದ ಜ್ಞಾನವೆಂಬ ಉಭಯಸ್ವರೂಪವನ್ನು ಒಪ್ಪಲೇಬೇಕು. ಉಭಯಸ್ವರೂಪವನ್ನು ಒಪ್ಪಿದಾಗ ಅನೇಕತ್ವವನ್ನು ಒಪ್ಪಿದಂತಾಯಿತು.

ಆದ್ದರಿಂದ ಪೂರ್ವಮೀಮಾಂಸೆಯ ನವಮಾಧ್ಯಾಯದಲ್ಲಿ "ಮೇಧಪತಯೇ ಮೇಧಂ ಮೇಧಪತಿಭ್ಯಾಂ ಮೇಧಮ್'' ಎಂಬ ಶ್ರುತಿಯಲ್ಲಿ ಏಕವಚನ ಹಾಗೂ ದ್ವಿವಚನಗಳು ಕೇಳಿಸುತ್ತಿವೆ. 'ಮೇಧಪತಿ' ಶಬ್ದಕ್ಕೆ ಅಗ್ನಿಷೋಮರೆಂದರ್ಥ. ಇವರಿಬ್ಬರಲ್ಲಿ ಏಕವಚನವನ್ನು ನಿರ್ವಹಿಸಲು ದೇವತಾತ್ವ ಧರ್ಮದಿಂದ ಐಕ್ಯವನ್ನು ಹೇಳಬೇಕು. ದೇವತಾತ್ವವು ಒಂದೇ ಆಗಿದ್ದರೂ ವ್ಯಾಸಜ್ಯ ವೃತ್ತಿಧರ್ಮವಾದ್ದರಿಂದ ಇಬ್ಬರಲ್ಲಿಯೂ ಬರುತ್ತದೆ. ಹೀಗೆ ಏಕವಚನವು ಉಪಪನ್ನವಾಗುತ್ತದೆ. ದೇವತಾತ್ವ ಧರ್ಮಕ್ಕೆ ಅಧಿಷ್ಠಾನರಾದವರು ಇಬ್ಬರಾದ್ದರಿಂದ ದ್ವಿತ್ವವೂ ಸಹ ಉಪಪನ್ನವಾಗುತ್ತದೆ. ಹೀಗೆ ದ್ವಿತ್ವ ಹಾಗೂ ಏಕತ್ವಗಳ ಸಮುಚ್ಚಯವನ್ನು ಒಂದೇ ಸ್ಥಳದಲ್ಲಿ ನಿರ್ವಹಿಸಲಾಗಿದೆ.

ಈ ದೃಷ್ಟಾಂತದಂತೆ ಪ್ರಕೃತದಲ್ಲಿಯೂ ಬ್ರಹ್ಮನಲ್ಲಿ ಸ್ವರೂಪತಃ ಏಕತ್ವವಿದ್ದರೂ ರೂಪವಿಶೇಷಗಳ ವಿವಕ್ಷೆಯಿಂದ ದ್ವಿತ್ವ ಅನೇಕತ್ವ ಸಂಖ್ಯೆಗಳನ್ನು ಕೂಡಿಸಬಹುದು. ಇದು ಶ್ರುತಿಸಿದ್ಧವಾದ್ದರಿಂದ ದ್ವಿತ್ವ ಹಾಗೂ ಏಕತ್ವಗಳ ಸಮುಚ್ಚಯವು ಪ್ರಮಿತವಾಗಿದೆ.

ಗುಹಾಧಿಕರಣ (೧-೨-೩)

"ಇಂದ್ರೋ ಮಾಯಾಭಿಃ ಪುರುರೂಪ ಈಯತೇ" "ಯದೇಕಮವ್ಯಕ್ತಮನಂತರೂಪಮ್" "ಏಕಂ ರೂಪಂ ಬಹುಧಾ ಯಃ ಕರೋತಿ" ಪಶ್ಯ ಮೇ ಪಾರ್ಥ ರೂಪಾಣಿ ಶತಶೋऽಥ ಸಹಸ್ರಶಃ" ಇವೇ ಮೊದಲಾದ ಶ್ರುತಿ ಸ್ಮೃತಿಗಳ ಆಧಾರದಿಂದ ದ್ವಿತ್ವ ಹಾಗೂ ಏಕತ್ವಗಳ ಸಮುಚ್ಚಯವು ಒಬ್ಬನೇ ಬ್ರಹ್ಮನಲ್ಲಿ ಸಿದ್ಧವಾಗಿದೆ. ಈ ಅಭಿಪ್ರಾಯದಿಂದಲೇ ಅನುವ್ಯಾಖ್ಯಾನದಲ್ಲಿ "ದ್ವಿತ್ವಂ ಚೈಕಸ್ಯ ಯುಜ್ಯತೇ" ಒಬ್ಬನಲ್ಲಿಯೇ ದ್ವಿತ್ವವು ಯುಕ್ತವಾಗುತ್ತದೆಂದು ಹೇಳಿದ್ದಾರೆ. ನ್ಯಾಯವಿವರಣದಲ್ಲಿಯೂ ಸಹ 'ದ್ವಿವಚನಶ್ರುತೇರಪಿ ನ ನಿರವಕಾಶತ್ವಂ, ವಿಷ್ಣೋರೇವ ದ್ವಿರೂಪತ್ವಾತ್" ದ್ವಿವಚನ ಶ್ರುತಿಯು ನಿರವಕಾಶವಲ್ಲ. ವಿಷ್ಣುವಿಗೆ ಎರಡು ರೂಪಗಳಿರುವುದರಿಂದ ಎಂದು ಹೇಳಿದ್ದಾರೆ.

**प्रकाशः –**

सुधायां प्रमितत्वोक्तावपि कथं निर्वाह इति शङ्कापि, "विरोधं तु" इत्यादिनाऽपाकृता । इदानीं

आत्माऽन्तरात्मेति हरिरेक एव द्विधा स्थितः ।

इति भाष्यानुरोधेन 'आत्मानौ' इति सौत्रपदसूचितपरिहारमाह – **किञ्चेति ।**

ವಿವರಣೆ - ನ್ಯಾಯಸುಧೆಯಲ್ಲಿ ಪರಮಾತ್ಮನಲ್ಲಿ ಏಕತ್ವ ಅನೇಕತ್ವಗಳು ಪ್ರಮಿತವಾಗಿವೆ ಎಂದು ಹೇಳಿದ್ದರು. ಹೇಗೆ ನಿರ್ವಹಿಸಬೇಕೆಂಬ ಶಂಕೆಯನ್ನು 'ವಿರೋಧಂ ತು' ಇತ್ಯಾದಿ ವಾಕ್ಯದಿಂದ ಪರಿಹರಿಸಿದರು. ಈಗ 'ಆತ್ಮಾಂತರಾತ್ಮೇತಿ ಹರಿರೇಕ ಏವ ದ್ವಿಧಾ ಸ್ಥಿತಃ ।' ಎಂಬ ಭಾಷ್ಯಕ್ಕೆ ಅನುಸಾರಿಯಾಗಿ ಸೂತ್ರದಲ್ಲಿರುವ 'ಆತ್ಮಾನೌ' ಎಂಬ ಪದದಿಂದ ಸೂಚಿತವಾದ ಪರಿಹಾರವನ್ನು 'ಕಿಂಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः – सिद्धमेकस्याप्यनेकत्वमिति सत्यं, कथं निर्वाह इति चेद्विशेषबलादित्येको निर्वाहः प्रागुक्तः । अन्यमपि दृष्टान्तपूर्वकमाह – एवञ्चेति । एकस्यानेकत्वे प्रमिते सतीत्यर्थः ।**

ಒಂದೇ ವಸ್ತುವಿಗೆ ಅನೇಕತ್ವವು ಬರುತ್ತದೆಂದು ಒಪ್ಪೋಣ. ಆದರೆ ಅವುಗಳನ್ನು ನಿರ್ವಹಿಸುವ ಬಗೆ ಹೇಗೆ ? ಎಂಬ ಪ್ರಶ್ನೆಗೆ ವಿಶೇಷದ ಬಲದಿಂದ ಎಂದು ಹಿಂದೆ ಉತ್ತರಿಸಿದರು. ಈಗ ಮತ್ತೊಂದು ಉತ್ತರವನ್ನು ದೃಷ್ಟಾಂತ ಪೂರ್ವಕವಾಗಿ ಹೇಳುತ್ತಿದ್ದಾರೆ 'ಏವಂಚ' ಇತ್ಯಾದಿ ಗ್ರಂಥದಿಂದ. 'ಏವಂಚ' ಎಂದರೆ ಒಂದೇ ಪದಾರ್ಥಕ್ಕೆ ಅನೇಕತ್ವವು ಪ್ರಮಿತವಾಗಿರಲು ಸಿದ್ಧವಾಗುತ್ತಿದೆ ಎಂದು ಅರ್ಥ.

**प्रकाशः** – नवमे तृतीयपादे "मेधपतित्वं स्वामिदेवतस्य समवायात्सर्वत्र च प्रयुक्तत्वात्तस्य चान्याय्यनिगदत्वात्सर्वत्रैवाविकारः स्यात्" इति द्वादशोऽधिकरणे चिन्तितम् । अग्नीषोमीये पशावध्रिगुप्रैषे "आशासानां मेधपतिभ्यां मेधं" इति

क्वचिच्छाखायां श्रुतम् । क्वचित्तु "मेधपतये मेधं" इति । तत्र किमुभयोर्विकृतिष्वविकारः, उत द्विवचनस्य देवतापर उहः, एकवचनस्य तु यजमानपर ऊहः, अथवोभयोः यजमानपर ऊहः, किं वोभयोर्देवतापर ऊह इति चतुर्धा संशये मेधपतिशब्देन मेधस्य पशोः स्वामी यजमानः देवताभूतौ चाग्नीषोमौ चेत्युभयेऽप्युच्यन्ते, तेन द्विवचनमेकवचनं चान्याय्यनिगदमित्यनूह इत्येकः पक्षः ।

सम्भवत्यर्थपरत्वे अन्याय्यनिगदत्वायोगात्प्रकृतौ द्विवचनान्तो देवतावचनः, तेनासौ देवताविवृद्धावूहितव्य, एकवचनान्तस्तु यजमानवचनः, तेन तद्विवृद्धावूहितव्य इति द्वितीयः । एकोऽयं मन्त्रः शाखाभेदेन किञ्चिद्भिन्नः श्रुतः, तेन यजमानपरत्वे मेधपतये यो मेधः पशुस्तमाशासाना इति सम्बन्धः, देवतापरत्वे मेधपतिभ्यामाशासना इति । न चैकस्य वाक्यस्य वचनव्यक्तिद्वयं सम्भवतीत्युभाभ्यां । यजमानस्य वा देवताया वाऽनियमेनाभिधानं, तत्र देवतापरत्वेऽग्नीषोमयोर्द्वित्वादेकवचनमयुक्तं, यजमानपक्षे तु द्वित्वं पत्न्यभिप्रायत्वेन अवकल्पत इति, प्रकृतौ स्वामिपरावुभावपि स्वामिवशादूहितव्याविति तृतीय इति प्राप्ते, मेधमाशासाना इत्युक्ते किमर्थमाशासाना इत्यपेक्षा भवति, तत्र मेधपतिभ्यामाशासाना इत्यपेक्षितार्थपूरणाय सम्बध्यते, नच यजमानायासावाशास्यते, तस्यैव स हि देवताभ्यामाशास्यते, अतो देवतावचनं, एकवचनं त्वग्नीषोमयोरुभयोर्व्यासक्तं देवतात्वं, तेन देवतात्मना तयोरेकत्वात् तदभिप्रायम्, द्विवचनं तु 'अग्नीषोमौ देवते' इतिवदधिष्ठानापेक्षं, तेन द्विवचनमधिष्ठानसङ्ख्यावशात्, एकवचनं तु देवतासङ्ख्यावशाद्विकृतिषूहितव्यमिति सिद्धान्त इति ।

ಮೇಧಪತಿತ್ವಂ ಸ್ವಾಮಿದೇವತಸ್ಯ ಸಮವಾಯಾತ್ಸರ್ವತ್ರ ಚ ಪ್ರಯುಕ್ತತ್ವಾತ್ತಸ್ಯ
ಚಾನ್ಯಾಯ್ಯನಿಗದತ್ವಾತ್ ಸರ್ವತ್ರೈವಾವಿಕಾರಃ ಸ್ಯಾತ್[1] (೯-೩-೧೨)

(१) भाट्टसङ्ग्रहः –

अथ द्वादशं द्विपश्वादिपशुविकृतौ मेधपतिशब्दस्य देवतानुसारेणोहाधिकरणम् (सूत्राणि ३२-४०)

मेधपतित्वं स्वामिदेवतस्य समवायात्सर्वत्र च प्रयुक्तत्वात्तस्य
चान्याय्यनिगदत्वात्सर्वत्रैवाविकारः स्यात् ॥३२॥

(अपि वा द्विसमवायोऽर्थान्यत्वे यथासङ्ख्यं प्रयोगः स्यात् ॥ ३३ ॥ स्वामिनो वैकशब्द्यादुत्कर्षो देवतायां स्यात्पत्न्यां द्वितीयशब्दः स्यात् ॥ ३४ ॥ देवता तु

**तदाशीष्ट्वात्सम्प्राप्तत्वात्स्वामिन्यनार्थिका स्यात् ॥ ३५ ॥ उत्सर्गाच्च भक्त्या तस्मिन् पतित्वं स्यात् ॥ ३६ ॥ उत्कृष्येतैकसंयुक्तो द्विदेवते सम्भवात् ॥ ३७ ॥ एकस्तु समवायात्तस्य तल्लक्षणत्वात् ॥ ३८ ॥ संसर्गित्वाच्च तस्मात्तेन विकल्पः स्यात् ॥ ३९ ॥ एकत्वेपि गुणानपायात् ॥ ४० ॥)**

पूर्ववैषम्येणात्र शङ्कनात्सङ्गतिः । अध्रिगुप्रैषनिगदे "उपनयत मेध्या उर आशासाना मेधपतिभ्यां मेधम्" इति, शाखान्तरे "मेधपतये मेधम्" इति च श्रूयते । हे मेध्या ऋत्विजः, मेधं पशुं मेधपतिभ्यां पशुपतिभ्यां, मेधपतये पशुपतये वा, आशासाना आशंसमानाः, उरो यज्ञस्य द्वारं चात्वालोत्करमध्यदेशम्, उपनयतेत्यर्थः । तत्र मन्त्रद्वयं ज्योतिष्टोमे प्रकृतावग्नीषोमीये देवतायजमानरूपोभयपरम्, उतैकवचनान्तो यजमानपरो द्विवचनान्तो देवतापरः, किं वोभयं यजमानपरं, यद्वोभयं देवतापरमिति चतुर्धा सन्देहः । **पूर्वपक्षस्तु,** द्विदैवत्ये एकयजमानके अग्नीषोमीयपशौ देवताभूतावग्नीषोमौ द्वौ । यजमान एकः । त्रयोपि मेधपतिप्रातिपदिकार्थः । यजमानस्य पशुस्वामित्वात् । तेन च देवतायै दीयमानत्वाच्च । तथा च तेषु त्रिष्वर्थेष्वेकवन्निगदस्य द्विवन्निगदस्य च प्रकृतावसमवेतार्थकत्वात्पूर्वत्रैकधेत्यस्य विकृतावूहेपीह विकृतिभूते पशुगणे बहुयजमानके च तयोरुभयोरपि मन्त्रयोः प्रकृताविवानूहेनैव प्रयोग इत्याद्यः । तदाह सूत्रे, **स्वामिनो देवतायाश्च मेधपतित्वम्** । यजमानस्य स्वामित्वेन देवताया उद्देश्यत्वेनोभयोरपि मेध**समवायात्** । यज्ञपतिमित्यादौ तत्सम्बन्धिनि पतिशब्दस्य **प्रयुक्तत्वात्** । **तस्य** मन्त्रद्वयस्यान्याय्य**निगदत्वात्** विकृतिषु **सर्वत्राविकारः स्यादिति** । प्रकृतौ समवेतार्थत्वसम्भवे अन्याय्यनिगदत्वायोगादेकवन्निगदो यजमानपरो द्विवन्निगदोऽ-ग्नीषोमाख्यदेवताद्वयपर इति **द्वितीयः** । एक एवायं मन्त्रः शाखाभेदेन किञ्चिद्भिन्नः । अत एकवन्निगदवद् द्विवन्निगदोपि यजमानपरः सन् पत्न्यभिप्रायेणोपपन्न एकवन्निगदवत्समवेतार्थ एव । **लिङ्गविशेषनिर्देशात्पुंयुक्तमैतिशायन** इति षष्ठस्याद्यपादे दम्पत्योरधिकारोक्तेरिति **तृतीयः** । **सिद्धान्तस्तु,** मेधपतिशब्दस्य यजमानमात्रार्थत्वे यजमानाय यजमानाभ्यां वा यो मेधस्तमाशासाना उपनयतेत्यन्वयः स्यात् । तदा तु "किमर्थमाशासानाः" इत्याकाङ्क्षोदयादपूर्णं वाक्यं स्यात् । देवतापरत्वे तु "यजमानसम्बन्धिमेधं अग्नीषोमाभ्यामाशासानाः" इति वाक्यं परिपूर्णं भवतीति द्वयमपि देवतापरमेव । द्वयोर्देवताकारकमेकं व्यासज्यवृत्तीति तदभिप्रायेण मेधपतये अग्नीषोमाख्यदेवतायै इत्येकवन्निगदस्य, देवताकारकाधिष्ठानयोर्द्वित्वात्तदभिप्रायेण अग्नीषोमाभ्यां मेधपतिभ्यामिति द्विवन्निगदस्य चार्थवत्त्वेन समवेतार्थत्वमस्तीति देवतापरावेव मन्त्राविति । **फलं त्वाद्यपक्षे** बहुपशुके बहुयजमानके च विकृतियागे मन्त्रयोरनूहः । **द्वितीयपक्षे** द्वयोरपि मन्त्रयोरूहः ।

ಈ ಅಧಿಕರಣದಲ್ಲಿ ಅಗ್ನಿಷೋಮೀಯ ಪಶುವಿನಲ್ಲಿ ಅಧ್ರಿಗುಪ್ರೈಷವನ್ನು ವಿಧಿಸುವಾಗ 'ಆಶಾಸಾನಾ ಮೇಧಪತಿಭ್ಯಾಂ' ಎಂಬುದಾಗಿ ದ್ವಿವಚನ ಪ್ರಯೋಗವು ಕೇಳಿಸುತ್ತಿದೆ. ಮತ್ತೊಂದೆಡೆ 'ಮೇಧಪತೆಯೇ ಮೇಧಂ' ಎಂಬುದಾಗಿ ಏಕವಚನ ಪ್ರಯೋಗವು ಕೇಳಿಸುತ್ತಿದೆ. ಇಲ್ಲಿ ದ್ವಿವಚನ ಬಹುವಚನ ಪ್ರಯೋಗಗಳನ್ನು ವಿಕೃತಿ ಯಾಗದಲ್ಲಿ ಊಹೆ ಮಾಡದೆ ಪ್ರಯೋಗಿಸಬೇಕೋ ? ಅಥವಾ ದ್ವಿವಚನ ಪ್ರಯೋಗವನ್ನು ದೇವಾತಪರವೆಂದು ಊಹಿಸಿ ಏಕವಚನ ಪ್ರಯೋಗವನ್ನು ಯಜಮಾನಪರವೆಂದು ಊಹಿಸಬೇಕೋ? ಅಥವಾ ದ್ವಿವಚನಪ್ರಯೋಗ ಏಕವಚನಪ್ರಯೋಗ ಎರಡನ್ನೂ ಸಹ ಯಜಮಾನಪರವೆಂದು ಊಹಿಸಬೇಕೋ? ಅಥವಾ ಎರಡೂ ಪ್ರಯೋಗಗಳನ್ನು ದೇವತಾಪರವೆಂದು ಊಹಿಸಬೇಕೋ? ಎಂಬುದಾಗಿ ನಾಲ್ಕು ಬಗೆಯಲ್ಲಿ ಸಂಶಯವು ಬರುತ್ತದೆ.

ಪ್ರಥಮ ಪೂರ್ವಪಕ್ಷ - ಮೇಧಾಪತಿ ಶಬ್ದಕ್ಕೆ ಮೇಧವೆಂಬ ಪಶುವಿನ ಸ್ವಾಮಿಯೆಂದರ್ಥ. ಅಗ್ನಿ ಹಾಗೂ ಸೋಮದೇವತೆಗಳು ಮೇಧವೆಂಬ ಪಶುವಿಗೆ ಸ್ವಾಮಿಯಾಗಿದ್ದಾರೆ. ಅದರಂತೆ ಯಜಮಾನನೂ ಸಹ ಸ್ವಾಮಿಯಾಗಿದ್ದಾನೆ. ಹೀಗೆ ಒಟ್ಟು ಮೂರು ಮಂದಿಯಲ್ಲಿಯೂ ಮೇಧಾಪತಿತ್ವವು ಇರುವಾಗ ಏಕವಚನಕ್ಕಾಗಲೀ, ದ್ವಿವಚನಕ್ಕಾಗಲೀ ಅರ್ಥವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಪ್ರಕೃತಿಯಾಗದಲ್ಲಿಯೇ ಏಕವಚನ, ದ್ವಿವಚನ ಪ್ರಯೋಗಗಳು ನಿರರ್ಥಕವಾಗುತ್ತವೆ. ಆದ್ದರಿಂದಲೇ ವಿಕೃತಿಯಾಗದಲ್ಲಿಯೂ ಸಹ ಊಹೆಯು ಅನಾವಶ್ಯಕವೆಂದು ತಿಳಿಯುತ್ತದೆ.

ದ್ವಿತೀಯ ಪೂರ್ವಪಕ್ಷ - ಏಕವಚನ ಹಾಗೂ ದ್ವಿವಚನಗಳಿಗೆ ಸಾರ್ಥಕ್ಯವನ್ನು ಹೇಳಲು ಬರುವಾಗ ಪ್ರಕೃತಿಯಾಗದಲ್ಲಿ ಇವುಗಳನ್ನು ನಿರರ್ಥಕವೆಂದು ಹೇಳಬಾರದು. ಏಕವಚನಾಂತವಾದ 'ಮೇಧಪತಿ' ಶಬ್ದವು ಯಜಮಾನನನ್ನು ಹೇಳುತ್ತದೆ. ದ್ವಿವಚನಾಂತವಾದ 'ಮೇಧಾಪತಿ' ಶಬ್ದವು ದೇವತೆಗಳನ್ನು ಹೇಳುತ್ತದೆ. ಹೀಗೆ ವಿಕೃತಿಯಾಗದಲ್ಲಿ ಯಜಮಾನರು ಅಧಿಕವಾದಲ್ಲಿ ಬಹುವಚನ ಪ್ರಯೋಗವನ್ನು ಊಹಿಸಿಕೊಳ್ಳಬೇಕು. ದೇವತೆಗಳು ಅಧಿಕವಾದಲ್ಲಿ ಅದಕ್ಕೆ ತಕ್ಕಂತೆ ಬಹುವಚನವನ್ನು ಊಹಿಸಿಕೊಳ್ಳಬೇಕು.

ತೃತೀಯ ಪೂರ್ವಪಕ್ಷ - ಏಕವಚನ ಹಾಗೂ ದ್ವಿವಚನ ಪ್ರಯೋಗಗಳೆರಡೂ ಸಹ ಯಜಮಾನಪರವೇ ಹೊರತು ದೇವತಾಪರವಲ್ಲ. ಒಂದೇ ಮಂತ್ರವು ಶಾಖಾಪ್ರಭೇದದಿಂದ ಬೇರೆ ಬೇರೆ ವಿಭಕ್ತಿಗಳಲ್ಲಿ ಕೇಳಿಸುತ್ತಿದೆ. ಆದ್ದರಿಂದ ಯಜಮಾನ ಪರವಾದರೆ ''ಮೇಧಾಪತಯೇ ಆಶಾಸಾನಾಃ'' ಎಂದು ಏಕವಚನದ ಅನ್ವಯವನ್ನು ತಿಳಿಯಬೇಕು. ಒಂದು ವೇಳೆ ದೇವತಾಪರವಾದರೆ 'ಮೇಧಪತಿಭ್ಯಾಂ' ಎಂಬ ದ್ವಿವಚನಪ್ರಯೋಗದ ಅನ್ವಯವನ್ನು ಕೂಡಿಸಬೇಕು. ಒಂದೇ ವಾಕ್ಯವು ಎರಡು ವಿರುದ್ಧವಾದ ವಚನಗಳಿಂದ ಒಬ್ಬನೇ ವ್ಯಕ್ತಿಯನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ದೇವತಾ ಪರತ್ವವನ್ನು ಒಪ್ಪಿದಾಗ ಯಜಮಾನನ್ನು ಬಿಡಬೇಕು. ಯಜಮಾನಪರವೆಂದು ಒಪ್ಪಿದಾಗ ದೇವತಾಪರತ್ವವನ್ನು ಬಿಡಬೇಕು. ಹೊರತಾಗಿ ಎರಡನ್ನೂ ಸಹ ಒಟ್ಟಿಗೆ ಸ್ವೀಕರಿಸಬಾರದು. ದೇವತಾಪರವೆಂದು ಒಪ್ಪಿದಾಗ ಅಗ್ನೀಷೋಮರೆಂಬ ದೇವತೆಗಳಲ್ಲಿ ದ್ವಿತ್ವವು

तृतीयपक्षेपि कुलाये सत्रे वा अनेकयजमानकविकृतौ स्वामिप्रकाशनार्थतयोहितव्यौ ।
सिद्धान्ते तु देवताविवृद्धियुक्तविकृतौ देवतापरतयोहितव्यौ मन्त्राविति ।

इति द्वादशं द्विपश्वादिपशुविकृतौ मेधपतिशब्दस्य देवतानुसारेणोहाधिकरणम्

सूत्राणि (३२-४०)

ಗುಹಾಧಿಕರಣ (೧-೨-೩)

ಇರುವುದರಿಂದ ಏಕವಚನವು ಅಯುಕ್ತವಾಗುತ್ತದೆ. ಆದ್ದರಿಂದ ದೇವತಾಪರತ್ವವನ್ನು ಒಪ್ಪಬಾರದು. ಹೊರತಾಗಿ ಯಜಮಾನಪರತ್ವವನ್ನೇ ಒಪ್ಪಬೇಕು. ಯಜಮಾನನು ಒಬ್ಬನೇ ಆದ್ದರಿಂದ ಏಕವಚನ ಪ್ರಯೋಗವು ಸಾಧುವಾಗುತ್ತದೆ. ಅದರಂತೆ ಯಜಮಾನನ ಪತ್ನಿಯನ್ನು ಯಜಮಾನನ ಜೊತೆಗೆ ವಿವಕ್ಷಿಸಿದಾಗ ದ್ವಿವಚನ ಪ್ರಯೋಗವೂ ಸಹ ಸಾಧುವಾಗುತ್ತದೆ. ಹೀಗೆ ಏಕವಚನ ದ್ವಿವಚನ ಪ್ರಯೋಗಗಳೆರಡನ್ನೂ ಯಜಮಾನಪರತ್ವ ಪಕ್ಷವನ್ನು ಒಪ್ಪಿದಾಗ ಪ್ರಕೃತಿ ಯಾಗದಲ್ಲಿ ಕೂಡಿಸಬಹುದು.

ಸಿದ್ಧಾಂತ - ಏಕವಚನಪ್ರಯೋಗ ಹಾಗೂ ದ್ವಿವಚನಪ್ರಯೋಗಗಳೂ ಸಹ ದೇವತಾಪರವಾಗಿದೆ. ಅದು ಹೀಗೆ - 'ಮೇಧಮಾಶಾಸಾನಾಃ' ಮೇಧವನ್ನು ಆಹುತಿಯಾಗಿ ಕೊಡಲು ಅಪೇಕ್ಷಿಸುತ್ತಾರೆಂದು ಹೇಳಿದಾಗ ಯಾರಿಗೋಸ್ಕರ ಆಶಾಸಾನ ಎಂಬ ಅಪೇಕ್ಷೆ ಉಂಟಾಗುತ್ತದೆ. ಆವಾಗ ''ಮೇಧಪತಿಭ್ಯಾಂ ಆಶಾಸಾನಾಃ'' ಎಂದು ಹೇಳಿದಾಗ ಅಪೇಕ್ಷಿತವಾದ ಅರ್ಥವನ್ನು ಪೂರೈಸುವುದಕ್ಕಾಗಿ 'ದೇವತಾಭ್ಯಾಂ' ಎಂದು ಹೇಳಬೇಕು. ಯಜಮಾನನಿಗೋಸ್ಕರ ಆಹುತಿ ಎಂಬ ಆಶಾಸಾನವು ತಪ್ಪಾಗುತ್ತದೆ. ಏಕೆಂದರೆ ಯಜಮಾನನೇ ದೇವತೆಗಳಿಗೋಸ್ಕರ ಆಹುತಿಯನ್ನು ನೀಡಬೇಕೆಂದು ಅಪೇಕ್ಷಿಸುತ್ತಿದ್ದಾನೆ. ಆದ್ದರಿಂದ 'ದೇವತಾಭ್ಯಾಂ' ಎಂಬ ದ್ವಿವಚನಪ್ರಯೋಗವು ಆಕಾಂಕ್ಷೆಯ ಪೂರಣೆಗಾಗಿ ಸಾರ್ಥಕವಾಗಿದೆ. ಏಕವಚನಪ್ರಯೋಗವೂ ಸಹ ತಪ್ಪಾಗುವುದಿಲ್ಲ. ಏಕೆಂದರೆ ಅಗ್ನಿ ಮತ್ತು ಸೋಮದೇವತೆಗಳಲ್ಲಿ ದೇವತಾತ್ವವು ವ್ಯಾಸಜ್ಯವೃತ್ತಿಧರ್ಮದಿಂದ ಇರುತ್ತದೆ. ಆದ್ದರಿಂದ ಇಬ್ಬರು ದೇವತೆಗಳು ಒಂದೇ ದೇವತಾತ್ವಧರ್ಮಕ್ಕೆ ಆಶ್ರಯರಾಗಿದ್ದಾರೆಂಬ ಅಭಿಪ್ರಾಯದಿಂದ ಏಕವಚನವು ಯುಕ್ತವಾಗುತ್ತದೆ. ದ್ವಿವಚನಪ್ರಯೋಗವು ದೇವತಾತ್ವಕ್ಕೆ ಅಧಿಷ್ಠಾನರಾದವರು ಇಬ್ಬರಾಗಿರುವುದರಿಂದ ಯುಕ್ತವಾಗುತ್ತದೆ. ಆದ್ದರಿಂದ ಪ್ರಕೃತಿ ಯಾಗದಲ್ಲಿ ಏಕವಚನ ದ್ವಿವಚನ ಪ್ರಯೋಗದ ಶ್ರುತಿಯು ಸಾರ್ಥಕ್ಯವನ್ನು ಹೊಂದುತ್ತದೆ. ಆದ್ದರಿಂದಲೇ ವಿಕೃತಿ ಯಾಗದಲ್ಲಿಯೂ ಸಹ ದ್ವಿವಚನಪ್ರಯೋಗವು ದೇವತಾತ್ವಧರ್ಮಕ್ಕೆ ಅಧಿಷ್ಠಾನ ಭೂತವಾದ ವಸ್ತುವಿನ ಸಂಖ್ಯೆಗೆ ಅಧೀನವಾಗಿ ಯುಕ್ತವಾಗುತ್ತದೆ. ಎಷ್ಟು ದೇವತೆಗಳು ಪ್ರಸಕ್ತರಾಗುತ್ತಾರೋ ಅದಕ್ಕೆ ಸರಿಯಾದ ವಚನವನ್ನು ವ್ಯತ್ಯಾಸ ಮಾಡಿಕೊಂಡು ಊಹಿಸಿಕೊಳ್ಳಬೇಕು.

**प्रकाशः – एवञ्च यथा ब्रह्मणः स्वरूपेणैकत्वेऽपि ज्ञानानन्दोभयात्मकत्वे-नानेकत्वं मायिनां मते, यथा च मीमांसकमते 'मेधपतये' इत्यादौ द्वित्वैकत्वयो-र्देवतात्वादिरूपभेदेनोपपत्तिस्तथेहापीत्यर्थः । ननु तत्र वचनद्वयेन द्वित्वमेकत्वं चावगतमित्यत आह – इन्द्र इति ।**

ಆದ್ದರಿಂದ ಬ್ರಹ್ಮನೂ ಸ್ವರೂಪತಃ ಒಬ್ಬನೇ ಆಗಿದ್ದರೂ ಜ್ಞಾನಾನಂದಾತ್ಮಕತ್ವವೆಂಬ ಉಭಯಸ್ವರೂಪವನ್ನು ಹೊಂದಿದ ಕಾರಣ ಅನೇಕತ್ವವನ್ನು ಹೊಂದುತ್ತಾನೆಂದು ಮಾಯಾವಾದಿಗಳು ಹೇಗೆ ಹೇಳಬೇಕೋ? ಅಥವಾ ಮೀಮಾಂಸಕಮತದಲ್ಲಿ 'ಮೇಧಪತಯೇ' ಇತ್ಯಾದಿಯಾದ ದ್ವಿತ್ವ ಮತ್ತು ಏಕತ್ವಗಳು ದೇವತ್ವಾದಿರೂಪಗಳ ಭೇದದಿಂದ ಕೂಡಿಸುತ್ತಾರೋ ಅದರಂತೆ ಒಬ್ಬನೇ ಬ್ರಹ್ಮನಲ್ಲಿ ದ್ವಿತ್ವ ಬಹುತ್ವಾದಿಗಳನ್ನು ಕೂಡಿಸಬಹುದೆಂದು ಅಭಿಪ್ರಾಯ.

ಪೂರ್ವಮೀಮಾಂಸಾದೃಷ್ಟಾಂತದಲ್ಲಿ ಏಕವಚನ ದ್ವಿವಚನ ಪ್ರಯೋಗಗಳಿಂದ ದ್ವಿತ್ವ ಮತ್ತು ಏಕತ್ವಗಳು ತಿಳಿಯುತ್ತಿವೆ. ಆದರೆ ಪ್ರಕೃತದಲ್ಲಿ ದ್ವಿತ್ವ ಏಕತ್ವಗಳ ಸಮುಚ್ಚಯವು ಕಾಣಸುತ್ತಿಲ್ಲವಲ್ಲ? ಎಂಬ ಪ್ರಶ್ನೆಗೆ 'ಇಂದ್ರಃ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः – तदेतदिति ।** प्राचीनमिदं चेति मतद्वयमभिप्रेत्येत्यर्थः । अन्त्यपक्षं मूलारूढं करोति – **न्यायविवरणे चेति** । एतेन "द्विवचनं द्विरूपत्वाभिप्रायेण" इति टीका न्यायविवरणमूलेति सूचितम् ।

'ತದೇತತ್' ಎಂದರೆ ಮೊದಲು ಹಾಗೂ ಈಗ ಹೇಳಲ್ಪಟ್ಟ ಎರಡು ಪಕ್ಷಗಳ ಅಭಿಪ್ರಾಯದಿಂದ ಎಂದರ್ಥ. ಎರಡನೆಯ ಪಕ್ಷವನ್ನು ಮೂಲಾರೂಢ ಮಾಡುವುದಕ್ಕಾಗಿ 'ನ್ಯಾಯವಿವರಣೇ ಚ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಹೀಗೆ ಹೇಳಿದ್ದರಿಂದ 'ದ್ವಿವಚನಂ ದ್ವಿರೂಪಾಭಿಪ್ರಾಯೇಣ' ಎಂಬ ಟೀಕೆಯು ನ್ಯಾಯವಿವರಣದ ವ್ಯಾಖ್ಯಾನವಾಗಿದೆಯೆಂದು ಸೂಚಿಸಿದಂತಾಯಿತು.

**गुरुराजीयम् –** नन्वेवं वस्तुगत्याऽनेकत्वसङ्ख्याभ्युपगमे वस्तुगत्याऽऽनन्दादिसम्बन्धोऽभ्युपेयः आनन्दं ब्रह्मण इति सम्बन्धव्यवहारस्य तत्रापि सत्त्वात् । यदि सम्बन्धाभावेऽपि विशेषबलाद्व्यवहारमात्रं तर्हि प्रकृतेऽप्यनेकत्वसङ्ख्याभावेऽपि विशेषबलादेव व्यवहार इति समानमित्यपरितोषादाह **– किञ्चेति ।।** व्यासक्तत्वात् । व्यासज्यवृत्तित्वादित्यर्थः ।




ಒಬ್ಬನೇ ಬ್ರಹ್ಮನಲ್ಲಿ ದ್ವಿತ್ವ ಬಹುತ್ವಾದಿಗಳನ್ನು ಹೇಳುವುದು ಅದ್ವೈತಿಗಳಿಗೂ ಅನಿವಾರ್ಯ. ಬ್ರಹ್ಮನಲ್ಲಿರುವ ಆನಂದವು ಸ್ಫುರಣವಾಗುತ್ತದೆಂದರೆ ಆನಂದಾತ್ಮಕ ಹಾಗೂ ಜ್ಞಾನಾತ್ಮಕತ್ವಗಳನ್ನು ಒಪ್ಪಿದಂತಾಯಿತು. ಉಭಯಸ್ವರೂಪನಾದ ಬ್ರಹ್ಮನನ್ನು ಒಬ್ಬನೇ ಎಂದು ಹೇಳಿದಾಗ ಏಕತ್ವ ದ್ವಿತ್ವವನ್ನು ಅದ್ವೈತಿಗಳೂ ಸಹ ಒಪ್ಪಿದಂತಾಯಿತು. ಪೂರ್ವಮೀಮಾಂಸಕರೂ ಸಹ ಅಗ್ನಿಷೋಮರಲ್ಲಿ ಪ್ರಯೋಗಿಸಿದ ಏಕವಚನವನ್ನು ನಿರ್ವಹಿಸುವುದಕ್ಕಾಗಿ ದೇವತಾತ್ವ ಧರ್ಮದಿಂದ ಐಕ್ಯವನ್ನು ಹೇಳುತ್ತಾರೆ. ದ್ವಿವಚನವನ್ನು ನಿರ್ವಹಿಸುವುದಕ್ಕಾಗಿ ಅಧಿಷ್ಠಾನ ರೂಪದಿಂದ ದ್ವಿತ್ವವನ್ನು ಹೇಳುತ್ತಾರೆ. ಹೀಗೆ ದ್ವಿತ್ವ ಏಕತ್ವಗಳ ಸಮುಚ್ಚಯವು ಪೂರ್ವಮೀಮಾಂಸಕರಿಗೂ ಸಹ ಸಮ್ಮತವಾಗಿದೆ. ಆದರಂತೆ ಬ್ರಹ್ಮನಲ್ಲಿ ಸ್ವರೂಪತಃ ಐಕ್ಯವಿದ್ದರೂ ರೂಪವಿಶೇಷದಿಂದ ದ್ವಿತ್ವವನ್ನು ಹೇಳಬಹುದು. ಬ್ರಹ್ಮನಲ್ಲಿರುವ ಈ ದಿತ್ವೈಕತ್ವಗಳ ಸಮುಚ್ಚಯ ವಿಷಯದಲ್ಲಿ "ಏಕಂ ರೂಪಂ ಬಹುಧಾ ಯಃ ಕರೋತಿ" ಇತ್ಯಾದಿ ಶ್ರುತಿ ಸ್ಮೃತಿಗಳ ಆಧಾರವೂ ಇರುತ್ತದೆ.



ನ ಸಂಖ್ಯೋಪಸಂಗ್ರಹಾಧಿಕರಣದಿಂದ ಪುನರುಕ್ತಿ ಬರುವುದಿಲ್ಲ

**तात्पर्यचन्द्रिका**

**"न सङ्ख्योपसङ्ग्रहादपि नानाभावात्" इत्यत्र तु निर्भेदस्य ब्रह्मणः आधाराधेय-भावानुपपत्त्याशङ्क्य निर्भेदत्वेऽप्यनेकत्वस्यापि सत्त्वात् तन्मात्रेणाधाराधेय-भावोपपत्तिरिति समाधास्यते, नतु अत्रेव एकस्यानेकत्वानुपपत्त्याशङ्क्य, येन पुनरुक्तिः स्यात् । अत एव तत्र टीका "आधाराधेयत्वादिलिङ्गेन अन्यत्रैवप्रसिद्धानां पञ्चजनादिशब्दानां" इति ।**

**यद्वा एकस्यानेकत्वमपि तत्र सिद्धान्ते व्युत्पाद्यम् । अत एव तत्र "बहुरूपत्वादधिकरणाधेयत्वादिकं तस्यैव युज्यते" इति न्यायविवरणे अनेकत्वसङ्ख्योक्त्यर्थ आदिशब्दः । अत्र तु कर्मबन्धरहितस्यापि भोक्तृत्वमात्रमिति भेदः । तत्राऽऽद्यपक्षे, 'न सङ्ख्या' इति सूत्रे सङ्ख्योपसङ्ग्रहशब्दोक्ता एकस्यानेकत्वानुपपत्तिः पूर्वपक्षेऽभ्युच्चययुक्तिः, अपिशब्दोक्ताधाराधेयभावानुपपत्तिस्तु मूलयुक्तिः । द्वितीयपक्षे तु "गुहां प्रविष्टौ" इति सूत्रे "आत्मनौ हि" इति द्विवचनेन आत्मान्तरात्माख्यरूपद्वयोक्तिः सिद्धान्तेऽभ्युच्चययुक्तिः, आदेयं मातीति व्युत्पत्तया आत्मशब्दोक्तं शुभभोक्तृत्वं मूलयुक्तिः ।**

ಅನುವಾದ - 'ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾತ್' ಎಂಬ ಸೂತ್ರದಲ್ಲಿ ಪರಮಾತ್ಮನಲ್ಲಿ ಅನೇಕತ್ವ ಸಂಖ್ಯೆಯನ್ನು ನಿಷೇಧಿಸಿಲ್ಲ ಹೊರತಾಗಿ ಒಬ್ಬನೇ ಬ್ರಹ್ಮನಲ್ಲಿ ಆಧಾರಧೇಯಭಾವವು ಹೇಗೆ ಉಪಪನ್ನವಾಗುತ್ತದೆಂದು ಆಶಂಕಿಸಿ ಬ್ರಹ್ಮನು ಒಬ್ಬನೇ ಆಗಿದ್ದರೂ ಅನೇಕತ್ವಸಂಖ್ಯೆಯನ್ನೂ ಸಹ ಅವನಲ್ಲಿ ಹೇಳಬಹುದಾದ್ದರಿಂದ ಅಧಾರಾಧೇಯಭಾವವು ಉಪಪನ್ನವಾಗುತ್ತದೆಂದು ಸಮರ್ಥಿಸಿದ್ದಾರೆ. ಹೊರತು ಈ ಅಧಿಕರಣದಲ್ಲಿ ಸಮರ್ಥಿಸಿರುತ್ತಿರುವಂತೆ ಒಬ್ಬನೇ ಬ್ರಹ್ಮನಲ್ಲಿ ಅನೇಕತ್ವ ಸಂಖ್ಯೆಯಿಂದ ವಿರೋಧವನ್ನು ಆಶಂಕಿಸಿ ಸಮಾಧಾನವನ್ನು ಹೇಳಿರುವುದಿಲ್ಲ. ಹಾಗೇ ಹೇಳಿದ್ದರೆ ಈ ಅಧಿಕರಣದಿಂದ ಪುನರುಕ್ತಿ ದೋಷವು ಬರುತ್ತಿತ್ತು. ಆದ್ದರಿಂದಲೇ ಆ ಅಧಿಕರಣದ ಟೀಕೆಯಲ್ಲಿ "ಆಧಾರಾಧೇಯತ್ವಾದಿಲಿಂಗೇನ ಅನ್ಯತ್ರೈವ ಪ್ರಸಿದ್ಧಾನಾಂ ಪಂಚಜನಾದಿಶಬ್ದಾನಾಂ" 'ಆಧಾರಾಧೇಯತ್ವ ಮೊದಲಾದ ಲಿಂಗಗಳಿಂದ ಅನ್ಯತ್ರೈವಪ್ರಸಿದ್ಧ ಶಬ್ದಗಳಿಂದ 'ಪಂಚಜನಶಬ್ದ' ಮೊದಲಾದ ಶಬ್ದಗಳ ಸಮನ್ವಯ' ಇತ್ಯಾದಿಯಾಗಿ ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

ಅಥವಾ ಒಬ್ಬನೇ ಬ್ರಹ್ಮನಲ್ಲಿ ಅನೇಕತ್ವ ಸಂಖ್ಯೆಯ ಸಮರ್ಥನೆಯನ್ನು "ನ ಸಂಖ್ಯೋಪಸಂಗ್ರಾಹಾತ್" ಎಂಬ ಅಧಿಕರಣದ ಸಿದ್ಧಾಂತದಲ್ಲಿ ಸಮರ್ಥಿಸುತ್ತಾರೆಂದು ಹೇಳಬಹುದು. ಆದ್ದರಿಂದಲೇ ಆ ಅಧಿಕರಣದ ನ್ಯಾಯವಿವರಣದಲ್ಲಿ "ಬಹುರೂಪತ್ವಾದಧಿಕರಣಾಧೇಯತ್ವಾಧಿಕಂ ತಸ್ಯೈವ ಯುಜ್ಯತೇ" ಬಹುರೂಪವಾದ್ದರಿಂದ ಅಧಿಕರಣತ್ವ ಆಧೇಯತ್ವಗಳು ಬ್ರಹ್ಮನಲ್ಲಿ ಯುಕ್ತವಾಗುತ್ತವೆಂಬುದಾಗಿ ಅನೇಕತ್ವಸಂಖ್ಯೆಯನ್ನು ಸಂಗ್ರಹಿಸುವುದಕ್ಕಾಗಿಯೇ ಆದಿಪದವನ್ನು ಹೇಳಿದ್ದಾರೆ. ಈ ಅಧಿಕರಣದಲ್ಲಾದರೂ ಬ್ರಹ್ಮನು ಕರ್ಮಬಂಧರಹಿತನಾದರೂ ಸಹ ಭೋಕ್ತ್ರವಾಗಿದ್ದಾನೆಂದಷ್ಟೇ ಸಮರ್ಥಿಸಲಾಗಿದೆ. ಹೀಗೆ ಎರಡು ಅಧಿಕರಣಗಳ ವೈಲಕ್ಷಣ್ಯವನ್ನು ತಿಳಿಯಬೇಕು.

ಹೀಗೆ ಎರಡು ಪಕ್ಷಗಳಲ್ಲಿ ಮೊದಲನೆಯ ಪಕ್ಷದ ಪ್ರಕಾರ "ನ ಸಂಖ್ಯೋಪಸಂಗ್ರಹಾತ್" ಎಂಬ ಸೂತ್ರದಲ್ಲಿ 'ಸಂಖ್ಯೋಪಸಂಗ್ರಹ' ಶಬ್ದದಿಂದ ಹೇಳಲ್ಪಟ್ಟ ಒಂದರಲ್ಲಿ ಅನೇಕತ್ವವು ಬರುವುದಿಲ್ಲವೆಂಬ ಅನುಪಪತ್ತಿಯು ಪೂರ್ವಪಕ್ಷದ ಅಭ್ಯುಚ್ಚಯಯುಕ್ತಿಯಾಗಿದೆ. 'ಅಪಿ' ಶಬ್ದದಿಂದ ಹೇಳಲ್ಪಟ್ಟ ಆಧಾರಾಧೇಯಭಾವದ ಅನುಪಪತ್ತಿಯು ಪ್ರಧಾನವಾದ ಮೂಲಯುಕ್ತಿಯಾಗಿದೆ. ಎರಡನೆಯ ಪಕ್ಷದಲ್ಲಿ 'ಗುಹಾಂ ಪ್ರವಿಷ್ಟೌ' ಎಂಬ ಸೂತ್ರದಲ್ಲಿ "ಆತ್ಮಾನೌ ಹಿ" ದ್ವಿವಚನದಿಂದ ಆತ್ಮಅಂತರಾತ್ಮವೆಂಬ ಎರಡು ಪರಮಾತ್ಮನ ರೂಪಗಳ ವಚನವು ಸಿದ್ಧಾಂತದ ಅಭ್ಯುಚ್ಚಯಯುಕ್ತಿಯಾಗಿದೆ. "ಆಧೇಯಂ ಮಾತೀತಿ" ಎಂಬ ವ್ಯುತ್ಪತ್ತಿಯಿಂದ ಆತ್ಮಶಬ್ದದಿಂದ ಹೇಳಲ್ಪಟ್ಟ ಶುಭಭೋಕ್ತೃತ್ವವು ಪ್ರಧಾನಯುಕ್ತಿಯಾಗಿದೆ.

**प्रकाशः –**

नन्वत्रैव द्वित्वस्य भगवति व्युत्पाद्यत्वेऽत्रैव चतुर्थपादे ''न सङ्ख्योपसङ्ग्रहादपि नानाभावादतिरेकाच्च'' इति तृतीयेऽधिकरणे ।

यस्मिन् पञ्च पञ्च जना आकाशश्च प्रतिष्ठितः ।
तमेव मन्य आत्मानं विद्वान् ब्रह्मामृतोऽमृतम् ।।

इति वाक्ये 'पञ्च पञ्च' इति वीप्सया प्रतिशरीरं पञ्चत्वसङ्ख्या विशिष्टतया जनशब्देनोक्तः किं विष्णुरन्यो वेति संशये, पञ्चजनशब्दस्य बहुत्वसङ्ख्याविशिष्टवस्तु-वाचित्वाद्बहुत्वस्येश्वरे विरुद्धत्वादन्य इति प्राप्ते, स्वगतभेदशून्यस्यापि नानारूपत्वेन बहुत्वसङ्ख्योपसङ्ग्रहाविरोधाद्विष्णुरेवेति सिद्धान्तितत्वेन तेन गतार्थमिदमित्यत आह – न सङ्ख्येति ।

ವಿವರಣೆ – ಈ ಅಧಿಕರಣದಲ್ಲಿ ಏಕತ್ವಕ್ಕೆ ಆಶ್ರಯನಾದ ಬ್ರಹ್ಮನಲ್ಲಿ ದ್ವಿತ್ವ ಬಹುತ್ವಾದಿ ಸಂಖ್ಯೆಗಳನ್ನು ಸಮರ್ಥಿಸುತ್ತಿದ್ದಾರೆಂದು ಹೇಳಿದಿರಿ. ಹಾಗಾದರೆ ಇದೇ ಅಧ್ಯಾಯದ ನಾಲ್ಕನೇ ಪಾದದಲ್ಲಿ ಬರುವ "ನ ಸಂಖ್ಯೋಪಸಂಗ್ರಹಣಾಧಿಕರಣ"ದಲ್ಲಿಯೂ ಇದೇ ವಿಚಾರವು ಬರುತ್ತಿರುವುದರಿಂದ ಪುನರುಕ್ತಿ ಬರುತ್ತದೆ-

ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ (೧-೪-೩)

ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ।
ತಮೇವ ಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಮ್ ॥

ಎಂಬ ಶ್ರುತಿಯು ಈ ಅಧಿಕರಣದ ವಿಷಯವಾಕ್ಯವಾಗಿದೆ. ಇದರಲ್ಲಿ 'ಪಂಚ ಪಂಚ' ಎಂಬುದಾಗಿ ಎರಡು ಬಾರಿ 'ಪಂಚ' ಶಬ್ದವನ್ನು ಹೇಳಿದ್ದರಿಂದ ಪ್ರತಿಯೊಬ್ಬರ ಶರೀರದಲ್ಲಿಯೂ ಪಂಚತ್ವಸಂಖ್ಯೆಯಿಂದ ವಿಶಿಷ್ಟನಾದ ಜನಶಬ್ದದಿಂದ ಪ್ರತಿಪಾದ್ಯನಾದವನು ಶ್ರುತನಾಗಿದ್ದಾನೆ. ಇವನು ವಿಷ್ಣುವೋ? ಅಥವಾ ಬೇರೆಯವನೋ? ಎಂದು ಸಂದೇಹ.

ಪೂರ್ವಪಕ್ಷ – 'ಪಂಚಜನ' ಶಬ್ದವು ಬಹುತ್ವಸಂಖೆಯಿಂದ ವಿಶಿಷ್ಟವಾದ ವಸ್ತುವನ್ನು ಪ್ರತಿಪಾದಿಸುತ್ತಿದೆ. ಆದರೆ ಒಬ್ಬನೇ ಈಶ್ವರನಲ್ಲಿ ಬಹುತ್ವ ಸಂಖ್ಯೆಯು ವಿರುದ್ಧವಾಗಿರುವುದರಿಂದ ಬೇರೆಯವನೇ 'ಪಂಚಜನ' ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

ಸಿದ್ಧಾಂತ - ಒಬ್ಬನೇ ಭಗವಂತನಲ್ಲಿ ಪಂಚತ್ವ ಸಂಖ್ಯೆಯನ್ನೂ ಸಹ ಹೇಳಬಹುದು. ವಸ್ತುತಃ ಭಗವಂತನು ಸ್ವಗತಭೇದ ಶೂನ್ಯನಾಗಿದ್ದಾನೆ. ಆದರೂ ಸಹ ಅನೇಕ ರೂಪಗಳನ್ನು ತಾಳಿರುವುದರಿಂದ ಬಹುತ್ವ ಸಂಖ್ಯೆಯು ಅವನಲ್ಲಿ ಉಪಪನ್ನವಾಗುತ್ತದೆ. ಈ ಕಾರಣದಿಂದ 'ಪಂಚಜನ' ಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

ಹೀಗೆ ಸಿದ್ಧಾಂತ ಮಾಡಿದ್ದರಿಂದ 'ನ ಸಂಖ್ಯೋಪಸಂಗ್ರಹಾಧಿಕರಣ'ದಲ್ಲಿಯೂ ಬಹುತ್ವ ಸಂಖ್ಯೆಗೆ ಭಗವಂತನನ್ನು ಆಶ್ರಯನೆಂದು ಪ್ರತಿಪಾದಿಸಿದಂತಾಯಿತು. ಈ ಅಧಿಕರಣದಲ್ಲಿಯೂ ಅದೇ ವಿಚಾರವನ್ನು ಪ್ರತಿಪಾದಿಸಿದರೆ ಪುನರುಕ್ತಿ ದೋಷವು ಬರುತ್ತದಲ್ಲವೇ? ಈ ಪ್ರಶ್ನೆಗೆ 'ನ ಸಂಖ್ಯೋಪಸಂಗ್ರಹಾತ್' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – तत्र न बहुत्वानुपपत्तिः पूर्वपक्षयुक्तिः, किन्तु 'यस्मिन्' इति सप्तम्या निर्दिष्टस्य "तमेव" इति वाक्यशेषबलेन विष्णुत्वात्तदाधेयतयोक्तानां पञ्चजनाकाशशब्दोक्तानां न विष्णुत्वमेकस्यैवाधाराधेयभावायोगादिति प्राप्ते, अत्र सिद्धेनानेकत्वेन तत्समाधानं तत्र करिष्यते । अत एव तत्र टीका "न ह्येकस्यैवाधाराधेयभावो युज्यते" इत्यादि । न त्वनेकत्वं व्युत्पाद्यते येन पौनरुक्त्यमित्यर्थः ।

**एतेन न्यायविवरणटीकायां आनन्दमयनयेन गतार्थत्वशङ्का स्यादिति तु दिक्प्रदर्शनपरमिति भावः ।**

'ನ ಸಂಖ್ಯೋಪಸಂಗ್ರಹಾಧಿಕರಣ'ದಲ್ಲಿ ಬಹುತ್ವವು ಅನುಪಪನ್ನವಾಗುತ್ತದೆಂದು ಪೂರ್ವಪಕ್ಷದ ಅಭಿಪ್ರಾಯವಲ್ಲ, ಹೊರತಾಗಿ 'ಯಸ್ಮಿನ್' ಎಂಬ ಸಪ್ತಮಿವಿಭಕ್ತಿಯಿಂದ ಅಧಿಕರಣತ್ವವು ತಿಳಿಯುತ್ತದೆ. "ತಮೇವ" ಎಂಬ ವಾಕ್ಯದ ಬಲದಿಂದ ಸಪ್ತಮ್ಯಂತಪದದಿಂದ ನಿರ್ದಿಷ್ಟನಾದವನು ವಿಷ್ಣುವೆಂದು ನಿರ್ಣಯವಾಗುತ್ತದೆ. ಇಂತಹ ವಿಷ್ಣುವಿನಲ್ಲಿ ಆಧೇಯವಾಗಿ ಹೇಳಲ್ಪಟ್ಟ ಪಂಚಜನವಾಗಲಿ ಆಕಾಶವಾಗಲಿ ವಿಷ್ಣುವಾಗಲು ಸಾಧ್ಯವಿಲ್ಲ. ಏಕೆಂದರೆ ತನ್ನಲ್ಲಿಯೇ ಆಧಾರಾಧೇಯಭಾವವು ಕೂಡುವುದಿಲ್ಲವೆಂದು ಪೂರ್ವಪಕ್ಷ ಮಾಡಿ ಈ ಅಧಿಕರಣದ ಸಿದ್ಧಾಂತನ್ಯಾಯವನ್ನು ಅನುಸರಿಸಿ ಅನೇಕ ರೂಪಗಳಿರುವ ಒಬ್ಬನೇ ವಿಷ್ಣುವಿನಲ್ಲಿ ಆಧಾರಾಧೇಯಭಾವವನ್ನು ಹೇಳಬಹುದೆಂದು ನಿರ್ಣಯಿಸಿದ್ದಾರೆ. ಆದ್ದರಿಂದಲೇ ಆ ಅಧಿಕರಣದ ಟೀಕೆಯಲ್ಲಿ "ನ ಹ್ಯೇಕಸ್ಯೈವಾಧಾರಾಧೇಯಭಾವೋ ಯುಜ್ಯತೇ" ಒಬ್ಬನೇ ವಿಷ್ಣುವಿನಲ್ಲಿ ಅಧಾರಾಧೇಯಭಾವವು ಯುಕ್ತವಾಗುವುದಿಲ್ಲ. ಇತ್ಯಾದಿಯಾಗಿ ಹೇಳಿದ್ದಾರೆ, ಹೊರತು ಅನೇಕತ್ವವನ್ನು ಈ ಅಧಿಕರಣದಲ್ಲಿ ಸಮರ್ಥಿಸಿರುವಂತೆ 'ನ ಸಂಖ್ಯೋಪಸಂಗ್ರಹಣಾಧಿಕರಣ'ದಲ್ಲಿ ಸಮರ್ಥಿಸಿಲ್ಲ. ಹಾಗೇ ಸಮರ್ಥಿಸಿದ್ದಲ್ಲಿ ಪುನರುಕ್ತಿ ದೋಷವನ್ನು ಹೇಳಬಹುದಿತ್ತು.

ಹೀಗೆ ಹೇಳಿದ್ದರಿಂದ ನ್ಯಾಯವಿವರಣದ ಟೀಕೆಯಲ್ಲಿ ಹೇಳಲ್ಪಟ್ಟ ಆನಂದಮಯಾಧಿಕರಣದಿಂದ ಮಾಡಲ್ಪಟ್ಟ ಗತಾರ್ಥತ್ವ ಶಂಕೆಯು ದಿಕ್‌ಪ್ರದರ್ಶನವೆಂದು ತಿಳಿಯುತ್ತದೆ.

**प्रकाशः** – ननु तत्र टीकायां न्यायविवरणे च 'आधाराधेयत्वादि' इत्यादिपदास्वारस्यं,

टीकायां बहुत्वानुपपत्त्या पूर्वपक्षकरणं चास्वरसमित्यतः, सर्वस्वारस्याचाह – **यद्वेति** । कथं तर्ह्यपौनरुक्त्यमित्यत आह – **अत्र त्विति** । पक्षद्वयेऽप्युभयत्रानेकत्वोक्तेरपौनरुक्त्यं स्पष्टयति – **तत्राद्य इति** ।

ಅಥವಾ ಮತ್ತೊಂದು ಬಗೆಯಲ್ಲಿ ಪುನರುಕ್ತಿಯನ್ನು ಪರಿಹರಿಸಬಹುದು - ಹಿಂದೆ ಹೇಳಿದ ಪ್ರಕಾರ ಅನೇಕತ್ವ ಸಂಖ್ಯೆಯನ್ನು 'ನ ಸಂಖ್ಯೋಪಾಸಂಗ್ರಹಾಧಿಕರಣವು' ಸಮರ್ಥಿಸಿದಲ್ಲಿ 'ನ ಸಂಖ್ಯೋಪಾಸಂಗ್ರಹಾಧಿಕರಣದ' ಟೀಕೆಯಲ್ಲಿ ಮತ್ತು ನ್ಯಾಯವಿವರಣೆಯಲ್ಲಿ 'ಆಧಾರಾಧೇಯತ್ವಾದಿ' ಎಂಬ ಪದವು ಅಸ್ವರಸವಾಗುತ್ತದೆ.

ಮತ್ತು ಟೀಕೆಯಲ್ಲಿ ಬಹುತ್ವದ ಅನುಪಪತ್ತಿಯಿಂದ ಪೂರ್ವಪಕ್ಷ ಮಾಡಿದ್ದೂ ಸಹ ಅಸ್ವರಸವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ಎಲ್ಲವನ್ನು ಸ್ವಾರಸ್ಯಗೊಳಿಸಲು 'ಯದ್ವಾ' ಇತ್ಯಾದಿಯಾಗಿ

ಮತ್ತೊಂದು ಪಕ್ಷವನ್ನು ಹೇಳುತ್ತಿದ್ದಾರೆ. ಹಾಗಾದರೆ ಪುನರುಕ್ತಿಯು ಹೇಗೆ ಪರಿಹಾರವಾಯಿತು? ಎಂಬ ಪ್ರಶ್ನೆಗೆ 'ಅತ್ರ್ಯತ್ವ' ಎಂಬ ವಾಕ್ಯವನ್ನು ಉತ್ತರಿಸಿದ್ದಾರೆ. ಎರಡು ಪಕ್ಷಗಳಲ್ಲಿಯೂ ಎರಡೂ ಕಡೆ ಅನೇಕತ್ವ ಸಂಖ್ಯೆಯನ್ನು ಹೇಳುತ್ತಿರುವುದರಿಂದ ಪುನರುಕ್ತಿಯು ಹೇಗೆ ಬರುವುದಿಲ್ಲವೆಂಬುದನ್ನು 'ತತ್ರಾದ್ಯೇ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**प्रकाशः** – **सङ्ख्योपसङ्ग्रहादपि न विरोध इत्युक्तया पूर्वपक्षे सङ्ख्यानुपपत्तिरर्थादुक्तेत्यर्थः । अभ्युच्चयेति । यथा परमते ईक्षतिनये प्रायपाठे निरस्तेऽप्यभ्युच्चयत्वेन ''अत एव प्राणः'' इत्यत्र तदुक्तिः, यथा वा ''सर्वत्र'' इति नये स्वमते हेत्वन्तरेण पूर्वपक्षे चक्षुर्मयत्वादेरभ्युच्चयत्वेनोक्तिः, तथैव सुधायामुक्तेः तथेहापीत्यर्थः ।**

ಸಂಖ್ಯೋಪಸಂಗ್ರಹದಿಂದಲೂ ವಿರೋಧ ಬರುವುದಿಲ್ಲವೆಂದು ಹೇಳಿದ್ದರಿಂದ ಪೂರ್ವಪಕ್ಷದಲ್ಲಿ ಸಂಖ್ಯಾನುಪಪತ್ತಿಯು ಅರ್ಥಾತ್ ಹೇಳಿದಂತಾಯಿತು. 'ಅಭ್ಯುಚ್ಚಯಯುಕ್ತಿ' ಎಂಬುದರ ಅಭಿಪ್ರಾಯ ಹೀಗಿದೆ - ಯಾವರೀತಿಯಾಗಿ ಅದ್ವೈತಿಗಳು ಈಕ್ಷತ್ಯಧಿಕರಣದಲ್ಲಿ ಪ್ರಾಯಪಾಠವನ್ನು ನಿರಾಸ ಮಾಡಿದ್ದರೂ ಸಹ ಪುನಃ ಅಭ್ಯುಚ್ಚಯಯುಕ್ತಿಯಿಂದ 'ಅತ ಏತ ಪ್ರಾಣಃ' ಎಂಬಲ್ಲಿ ಆಶಂಕಿಸಿದ್ದಾರೊ; ಅಥವಾ ನಮ್ಮ ಮತದಲ್ಲಿ ಸರ್ವಗತತ್ವಾಧಿಕರಣದಲ್ಲಿ 'ಸರ್ವಪುರುಷಾಭಿಮುಖ್ಯ' 'ಆದಿತ್ಯೇ ಅನುಕ್ತತ್ವ' ಮೊದಲಾದ ಲಿಂಗಗಳಿಂದಲೇ ಪೂರ್ವಪಕ್ಷವು ದೃಢವಾಗುತ್ತಿದ್ದರೂ ಸಹ ಪುನಃ ಚಕ್ಷುರ್ಮಯತ್ವಲಿಂಗವನ್ನು ಅಭ್ಯುಚ್ಚಯ ಯುಕ್ತಿಯನ್ನಾಗಿ ಉಪಯೋಗಿಸಿದ್ದು ಕಾಣಸುತ್ತಿದೆ. ಸುಧೆಯಲ್ಲಿ ಹಾಗೆ ಹೇಳಿದ್ದಾರೆ - ಅದರಂತೆ ಪ್ರಕೃತದಲ್ಲಿಯೂ ಅನೇಕತ್ವಾನುಪಪತ್ತಿಯನ್ನು ಗುಹಾಧಿಕರಣದಲ್ಲಿ ನಿರಾಸ ಮಾಡಿದ್ದರೂ ಪುನಃ 'ನ ಸಂಖ್ಯೋಪಾಸಂಗ್ರಹಾಧಿಕರಣದಲ್ಲಿ' ಅಭ್ಯುಚ್ಚಯಯುಕ್ತಿಯನ್ನಾಗಿ ಉಪಯೋಗಿಸಿಕೊಳ್ಳುವುದು ತಪ್ಪಾಗುವುದಿಲ್ಲ.

**गुरुराजीयम्** – ननु न सङ्ख्योपसङ्ग्रहादपीत्यधिकरणे एकस्यानेकत्वानुपपत्तिशङ्कया रूपबहुत्वाभिप्रायेणापरिहृतत्वातदत्रापि तत्प्रतिपादने पौनरुक्त्यमित्यत आह – **नेति** ।।

नन्वेतदयुक्तम् । तथा सति न सङ्ख्योपसङ्ग्रहादपीति सूत्रोक्ताया एकस्यानेकत्वानुपपत्तिरूपयुक्तेरुक्तिस्तत्र न स्यात् । किञ्च बहुरूपत्वादधिकरणाधेयत्वादिकमिति न्यायविवरणेऽनेकत्वसङ्ख्योक्त्यर्थादिशब्दानुपपत्तिश्च स्यादित्यस्वरसादाह – **यद्वेति** ।।




ಈ ಅಧಿಕರಣದಲ್ಲಿ ಭಗವಂತನಲ್ಲಿ ಅನೇಕತ್ವಸಂಖ್ಯೆಯು ಅನುಪಪನ್ನವಾಗುತ್ತದೆಂಬ ಆಕ್ಷೇಪವನ್ನು ಪರಿಹರಿಸಲಾಗಿದೆ. ಆದರೆ ಚತುರ್ಥಪಾದದಲ್ಲಿರುವ 'ನ ಸಂಖ್ಯೋಪಸಂಗ್ರಹಾಧಿಕರಣ'ದಲ್ಲಿಯೂ ಸಹ ಅನೇಕತ್ವವು ಬರುವುದಿಲ್ಲವೆಂಬ ಅನುಪಪತ್ತಿಯನ್ನೇ ಪರಿಹರಿಸಲಾಗಿದೆ. ಆದ್ದರಿಂದ ಒಂದೇ ವಿಚಾರವನ್ನು ಎರಡು ಅಧಿಕರಣದಲ್ಲಿ ಹೇಳಿದಂತಾಗುವುದರಿಂದ ಪುನರುಕ್ತಿ ಬರುತ್ತದಲ್ಲವೆ ? ಎಂಬ ಪ್ರಶ್ನೆಯು ಸಹಜವಾಗಿ ಬರುತ್ತದೆ. ಆದರೆ ಈ ಪ್ರಶ್ನೆಗೆ ಗ್ರಂಥಕಾರರು ಅನೇಕ ಬಗೆಯಲ್ಲಿ ಸಮಾಧಾನವನ್ನು ನೀಡಿದ್ದಾರೆ. 'ನ ಸಂಖ್ಯೋಪಸಂಗ್ರಹಾಧಿಕರಣ'ದಲ್ಲಿ ಆಧಾರಾಧೇಯಭಾವವು ಒಬ್ಬನೇ ಭಗವಂತನಲ್ಲಿ ಬರಲಾರದೆಂದು ಪೂರ್ವಪಕ್ಷ ಮಾಡಿದ್ದಾರೆ ಹೊರತು, ಅನೇಕತ್ವ ಸಂಖ್ಯೆಯು ಬರುವುದಿಲ್ಲವೆಂದು ಪೂರ್ವಪಕ್ಷ ಮಾಡಿರುವುದಿಲ್ಲ. ಆದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲವೆಂಬುದು ಮೊದಲನೆಯ ಸಮಾಧಾನ.

ಅಥವಾ ಅನೇಕತ್ವಸಂಖ್ಯೆಯ ಅನುಪಪತ್ತಿಯನ್ನೇ 'ನ ಸಂಖ್ಯೋಪಸಂಗ್ರಹಾಧಿಕರಣ'ದಲ್ಲಿ ಪರಿಹರಿಸಿಕೊಳ್ಳುತ್ತಾರೆಂದು ಇಟ್ಟುಕೊಳ್ಳೋಣ, ಆವಾಗ ಈ ಗುಹಾಧಿಕರಣದಲ್ಲಿ ಕರ್ಮಬಂಧರಹಿತನಾದ ಭಗವಂತನಿಗೆ ಭೋಕ್ತೃತ್ವವನ್ನಷ್ಟೇ ಸಮರ್ಥಿಸಲಾಗಿದೆ ಎಂದು ವಿವಕ್ಷಿಸಬೇಕು. ಈ ಕಾರಣದಿಂದಲೂ ಪುನರುಕ್ತಿ ಬರುವುದಿಲ್ಲವೆಂಬುದು ಮತ್ತೊಂದು ಬಗೆಯ ಸಮಾಧಾನ.



• • • • •

ವಿಷ್ಣುಪರವೆನ್ನಲು ಛಾಯಾತಪ ಶಬ್ದವೆನ್ನಲು ಬಾಧಕವಲ್ಲ

**तात्पर्यचन्द्रिका**

**यद्वा – अत्र भोक्तृत्ववदनेकत्वे व्युत्पादितेऽपि न तत्र केवलं आधाराधेयभावानुपपत्तिशङ्का, किन्तु द्वित्वयुक्तस्यास्तु ब्रह्मत्वं, गुहाप्रविष्टत्वादिलिङ्गात्, पञ्चत्वयुक्ते तु न ब्रह्मलिङ्गाद्यस्ति, इत्येकस्यानेकत्वानुपपत्तिरूपसामान्यन्यायस्य अनपवाद इति शङ्का, ''प्राणस्य प्राणम्'' इत्यादि ब्रह्मलिङ्गानि सन्तीत्यादि समाधानं चेत्याद्यूह्यम् ।**

**''नाणुरतच्छ्रुतेः'' इत्यत्र तु ''व्याप्ता ह्यात्मानश्चेतनाः'' इति वाक्ये ब्रह्मलिङ्गाभावादानपोदितेन बहुत्वेन जीवस्य प्राप्तत्वात् व्याप्त्यणुत्वश्रुत्योर्विरोधे**

शङ्किते, "स आत्मेदँ सृजति" इत्यादिपूर्ववाक्ये ब्रह्मलिङ्गसद्भावात्" तदयं प्राणोऽधितिष्ठति" इत्यत्रैकवचनेन निर्दिष्टे "आ तेन यातं" इति द्विवचनवदत्रापि "स आत्मा" इत्येकवचननिर्दिष्टे "व्याप्ता ह्यात्मानः" इति बहुवचनं, ततो न विरोध इति वक्ष्यत इति न तेनापि गतार्थता । सुखदुःखहेतुत्वरूपं गौणं छायाऽऽतपत्वं च प्रतियोगिभेदेन अविरुद्धम् ।

अत्र च सूत्रे यद्यपि समन्वेतव्यं ऋतपातृत्वं "ऋतं पिबन्तौ" इति साक्षादेव वक्तव्यम्, तथाऽपि गुहाप्रविष्टत्वरूपहेतुमपि वक्तुं ऋतपातृत्वसमानाधिकरण-गुहाप्रविष्टत्वोक्तिद्वारा तदुक्तिः ।

यद्यपि चात्र "तत्तु समन्वयात्" इत्यतोऽनुषक्तस्य तच्छब्दस्य पूर्वत्राऽऽनन्दमयस्तद्ब्रह्मेत्यादिरूपेण अन्वयवत् उत्तरत्राप्यन्तरस्तद्ब्रह्मेत्यादिरूपेण अन्वयवच्च अत्राप्यन्वयस्सिद्धः, तथाऽपि सूत्रे श्रौतद्विवचनस्य गतिं वक्तुं आत्मान्त-रात्माख्यरूपद्वयवाचिद्विवचनान्तात्मशब्दप्रयोगः ।

अत्र च विषयवाक्यक्रमात्सूत्रक्रमः ।।

ಅನುವಾದ - ಅಥವಾ ಈ ಗುಹಾಧಿಕರಣದಲ್ಲಿ ಭೋಕ್ತೃತ್ವವನ್ನು ಪರಮಾತ್ಮನಲ್ಲಿ ಸಮರ್ಥಿಸುವಂತೆ ಅನೇಕತ್ವ ಸಂಖ್ಯೆಯನ್ನು ಸಮರ್ಥಿಸುತ್ತಿದ್ದಾರೆಂದೇ ಹೇಳೋಣ. ಆದರೂ ಸಹ ಮುಂದಿನ ನ ಸಂಖ್ಯೋಪಸಂಗ್ರಹಾಧಿಕರಣದಲ್ಲಿ ಕೇವಲ ಆಧಾರಾಧೇಯಭಾವದ ಅನುಪಪತ್ತಿಯನ್ನಷ್ಟೇ ಮಾಡುತ್ತಿಲ್ಲ ಹೊರತಾಗಿ ಗುಹಾಪ್ರವಿಷ್ಟತ್ವಾದಿಲಿಂಗಗಳಿಂದ ದ್ವಿತ್ವಸಂಖ್ಯೆಯಿಂದ ವಿಶಿಷ್ಟನಾದವನು ಬ್ರಹ್ಮನೆಂದು ನಿರ್ಣಯಿಸಲಾಗಿದೆ. ಆದರೆ 'ನ ಸಂಖ್ಯೋಪಸಂಗ್ರಹಾತ್' ಎಂಬ ಅಧಿಕರಣದಲ್ಲಿ ಪಂಚತ್ವಸಂಖ್ಯೆಯಿಂದ ವಿಶಿಷ್ಟನಾದವನು ಬ್ರಹ್ಮನೆಂದು ನಿರ್ಣಯಿಸಲಾಗದು. ಏಕೆಂದರೆ ಇಲ್ಲಿಯಂತೆ ಅಲ್ಲಿ ಬ್ರಹ್ಮನ ಲಿಂಗಗಳು ಕೇಳಿಸುತ್ತಿಲ್ಲ. ಆದ್ದರಿಂದ ಒಬ್ಬನೇ ಬ್ರಹ್ಮನಲ್ಲಿ ಅನೇಕತ್ವ ಶಂಕೆಯು ಅನುಪಪನ್ನವಾಗುತ್ತದೆಂಬ ಸಾಮಾನ್ಯನ್ಯಾಯಕ್ಕೆ ಅಪವಾದವೆನಿಸಿದ ಬ್ರಹ್ಮನ ಲಿಂಗಗಳು ಇಲ್ಲದ ಕಾರಣ ಬ್ರಹ್ಮನಲ್ಲಿ ಪಂಚತ್ವ ಸಂಖ್ಯೆಯು ಕೂಡುವುದಿಲ್ಲವೆಂಬ ಶಂಕೆಯು ಪ್ರಾಪ್ತವಾಗುತ್ತದೆ. ಈ ಶಂಕೆಯನ್ನು 'ಪ್ರಾಣಸ್ಯ ಪ್ರಾಣಮ್' ಇವೇ ಮೊದಲಾದ ಬ್ರಹ್ಮನ ಲಿಂಗಗಳಿರುವುದರಿಂದ ಅನೇಕತ್ವ ಸಂಖ್ಯೆಯು ಯುಕ್ತವಾಗುತ್ತದೆಂದು ನಿರಾಕರಿಸಿದ್ದಾರೆ. ಹೀಗೆ ಎರಡೂ ಅಧಿಕರಣಗಳಲ್ಲಿ ಅನೇಕತ್ವ ಸಂಖ್ಯೆಯನ್ನೇ ಪರಿಹರಿಸಿದ್ದಾರೆಂದು ಹೇಳಬಹುದು. ಇದರಂತೆ ಇನ್ನೂ ಅನೇಕ ಬಗೆಯ ಪರಿಹಾರಗಳನ್ನು ಸ್ವತಃ ಊಹಿಸಿಕೊಳ್ಳಬೇಕು.

ಪರಿಪೂರ್ಣಚಂದ್ರಿಕಾ

'ನಾಣುರತತ್ ಶ್ರುತೇಃ' ಎಂಬ ಸೂತ್ರದಲ್ಲಿ ಪ್ರಸಕ್ತವಾಗಿ ''ವ್ಯಾಪ್ತಾ ಹ್ಯಾತ್ಮಾನಶ್ಚೇತನಾಃ' ಎಂಬ ವಾಕ್ಯದಲ್ಲಿ ಯಾವುದೇ ಬ್ರಹ್ಮನ ಲಿಂಗಗಳು ಕೇಳಸುತ್ತಿಲ್ಲ. ಆದ್ದರಿಂದ ಅಪವಾದವಿಲ್ಲದ ಅನೇಕ ಜೀವಲಿಂಗಗಳಿಂದ ಜೀವನೇ ಪ್ರಾಪ್ತನಾಗುತ್ತಾನೆ. ಆದ್ದರಿಂದ ವ್ಯಾಪ್ತತ್ವವನ್ನು ಹಾಗೂ ಅಣುತ್ವವನ್ನು ಹೇಳುವ ಎರಡು ಶ್ರುತಿಗಳಿಗೆ ಪರಸ್ಪರ ವಿರೋಧ ಬರುತ್ತದೆ ಎಂದು ಆಶಂಕಿಸಿ 'ಸ ಆತ್ಮೇದಂ ಸೃಜತಿ' ಹಿಂದಿನ ವಾಕ್ಯದಲ್ಲಿ ಬ್ರಹ್ಮಲಿಂಗಗಳಿರುವುದರಿಂದ 'ತದೇಯಂ ಪ್ರಾಣೋಽಧಿತಿಷ್ಠತಿ'' ಎಂಬಲ್ಲಿ ಏಕವಚನದಿಂದ ನಿರ್ದಿಷ್ಟನಾದವನಲ್ಲೇ 'ಅ ತೇನ ಯಾತಂ' ಎಂಬಲ್ಲಿ ದ್ವಿವಚನ ಪ್ರಯೋಗವನ್ನು ಹೇಗೆ ಮಾಡಲಾಗಿದೆಯೋ? ಅದರಂತೆ ಇಲ್ಲಿಯೂ ಸಹ 'ಸ ಆತ್ಮಾ' ಎಂಬಲ್ಲಿರುವ ಏಕವಚನದಿಂದ ನಿರ್ದೇಶಿಸಲ್ಪಟ್ಟಿರುವವನಲ್ಲಿ 'ವ್ಯಾಪ್ತಾ ಹ್ಯಾತ್ಮಾನಃ' ಎಂಬುದಾಗಿ ಬಹುವಚನವನ್ನು ಪ್ರಯೋಗಿಸಲಾಗಿದೆ. ಇದೇನೂ ತಪ್ಪಾಗುವುದಿಲ್ಲ.

ಆದ್ದರಿಂದ ವಿರೋಧವು ಬರುವುದಿಲ್ಲವೆಂದು ಮುಂದೆ ಹೇಳುವಂತೆ ಗತಾರ್ಥತ್ವ ಶಂಕೆಯನ್ನು ಪರಿಹರಿಸಬೇಕು. 'ಛಾಯಾ ಮತ್ತು ಆತಪ' ಶಬ್ದಗಳಿಗೆ 'ಸುಖಹೇತು' ಮತ್ತು 'ದುಃಖ ಹೇತು' ಎಂಬರ್ಥವನ್ನು ಅಂಗೀಕರಿಸುವುದು ಪ್ರತಿಯೋಗಿ ಭೇದದಿಂದ ವಿರುದ್ಧವಾಗುವುದಿಲ್ಲ.

ವಸ್ತುತಃ ಈ ಅಧಿಕರಣದ ಸೂತ್ರದಲ್ಲಿ ಸಮನ್ವಯ ಮಾಡಬೇಕಾದ ಋತಪಾತೃತ್ವವನ್ನು 'ಋತಂ ಪಿಬಂತೌ' ಎಂಬುದರಿಂದ ನೇರವಾಗಿ ಸೂತ್ರದಲ್ಲಿ ಹೇಳಬೇಕಿತ್ತು. ಆದರೂ ಸಹ 'ಗುಹಾಪ್ರವಿಷ್ಟತ್ವ' ಎಂಬ ಮತ್ತೊಂದು ಹೇತುವನ್ನು ಹೇಳುವುದಕ್ಕಾಗಿ ಋತಪಾತೃತ್ವಕ್ಕೆ ಸಮಾನಾಧಿಕರಣವಾದ ಗುಹಾಪ್ರವಿಷ್ಟತ್ವವನ್ನು ಹೇಳುವ ಮೂಲಕ ಸಾರ್ಥಕವಾಗಿದೆ.

ವಸ್ತುತಃ ಈ ಅಧಿಕರಣದಲ್ಲಿ 'ತತ್ತು ಸಮನ್ವಯಾತ್ ಎಂಬ ಸೂತ್ರದಿಂದ 'ತತ್' ಶಬ್ದವು ಹಿಂದೆ 'ಆನಂದಮಯಃ ತದ್ಬ್ರಹ್ಮ' ಎಂಬಲ್ಲಿ ಅನ್ವಯವಾದಂತೆ ಅಥವಾ ಮುಂದೆ 'ಅಂತರಃ ತದ್ಬ್ರಹ್ಮ' ಎಂಬಲ್ಲಿ ಅನ್ವಯವಾಗುವಂತೆ ಇಲ್ಲಿಯೂ ಸಹ ಅನ್ವಯವನ್ನೂ ಹೊಂದುತ್ತದೆ. ಆದರೂ ಸಹ ಸೂತ್ರದಲ್ಲಿ ಶ್ರುತಿಯಲ್ಲಿರುವ ದ್ವಿವಚನಕ್ಕೆ ಗತಿಯನ್ನು ಹೇಳುವುದಕ್ಕಾಗಿ, ಆತ್ಮ ಅಂತರಾತ್ಮ ಎಂಬ ಭಗವಂತನ ಎರಡು ರೂಪಗಳನ್ನು ಹೇಳುವ ದ್ವಿವಚನಾಂತವಾದ ಆತ್ಮಶಬ್ದವನ್ನು ಪ್ರಯೋಗಿಸಲಾಗಿದೆ.

ಈ ಅಧಿಕರಣದಲ್ಲಿಯೂ ವಿಷಯವಾಕ್ಯದ ಕ್ರಮದಂತೆ ಸೂತ್ರದ ಜೋಡಣೆಯನ್ನು ಗಮನಿಸಬೇಕು.

**प्रकाशः –**

''प्राणादयो वाक्यशेषात्'' इति तत्रत्यगुणसूत्रव्यावर्त्यपूर्वपक्षानुरोधेन पक्षान्तरमाह – **यद्वात्र भोक्तृत्ववदिति ।** 'किन्तु' इत्यस्य 'अनपवादः' इत्यन्वयः । अत एव तत्र टीकायां ''ऋतं पिबन्तावित्यादाविव स्वगतभेदशून्यस्यापि परमात्मनो

बहुरूपत्वेन बहुत्वोक्तिः किन्नस्यादिति चेन्न, प्रतिशरीरमात्माऽन्तरात्मेतिवद् बहुत्वे मानाभावात्'' इत्युक्तमिति भावः । **ब्रह्मलिङ्गानीति** । प्राणादीनां प्राणत्वादि-प्रदत्वलिङ्गानीत्यर्थः ।

ವಿವರಣೆ - ನ ಸಂಖ್ಯೋಪಸಂಗ್ರಹಾಧಿಕರಣದಲ್ಲಿ ''ಪ್ರಾಣಾದಯೋ ವಾಕ್ಯಶೇಷಾತ್'' ಎಂಬುದು ಗುಣಸೂತ್ರವಾಗಿದೆ. ಆ ಗುಣಸೂತ್ರದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ಅನುಸರಿಸಿ ಮತ್ತೊಂದು ಪಕ್ಷವನ್ನು 'ಯದ್ವಾ' ಇತ್ಯಾದಿ ವಾಕ್ಯದಿಂದ ನಿರೂಪಿಸುತ್ತಿದ್ದಾರೆ. ಈ ಗುಹಾಧಿಕರಣದಲ್ಲಿ ಅನೇಕತ್ವ ಸಂಖ್ಯೆಯ ಅನುಪಪತ್ತಿಯನ್ನು ಪರಿಹರಿಸಿದಂತೆ ಮುಂದಿನ 'ನ ಸಂಖ್ಯೋಪಸಂಗ್ರಹಾಧಿಕರಣ'ದಲ್ಲಿಯೂ ಅನೇಕತ್ವಸಂಖ್ಯೆಯ ಅನುಪಪತ್ತಿಯನ್ನೇ ಪರಿಹರಿಸುತ್ತಿದ್ದಾರೆಂದು ಹೇಳಬಹುದು. ಎರಡು ಅಧಿಕರಣಗಳಲ್ಲಿಯೂ ಒಂದೇ ವಿಷಯವನ್ನು ಹೇಳಿದಂತೆ ಕಾಣಿಸಿದರೂ ಪುನರುಕ್ತಿ ದೋಷವು ಬರುವುದಿಲ್ಲ. ಏಕೆಂದರೆ ಈ ಅಧಿಕರಣದಲ್ಲಿ ಬ್ರಹ್ಮನ ಲಿಂಗವು ಸ್ಪಷ್ಟವಾಗಿ ಕಾಣಿಸುತ್ತಿರುವುದರಿಂದ ಅನೇಕತ್ವಸಂಖ್ಯೆ ಬ್ರಹ್ಮನಲ್ಲಿ ಉಪಪನ್ನವಾದರೂ 'ಯಸ್ಮಿನ್ ಪಂಚ ಪಂಚಜನಾಃ' ಎಂಬ ಶ್ರುತಿಯಲ್ಲಿ ಬ್ರಹ್ಮನ ಲಿಂಗವು ಕೇಳಿಸದ ಕಾರಣ ಅನೇಕತ್ವ ಸಂಖ್ಯೆಯು ಅನುಪನ್ನವಾಗುತ್ತದೆಂಬ ಆಶಂಕೆಯು ಪುನಃ ಪ್ರಾಪ್ತವಾಗುತ್ತದೆ. ಅದರ ಪರಿಹಾರಕ್ಕಾಗಿ 'ನ ಸಂಖ್ಯೋಪಸಂಗ್ರಹಣಾಧಿಕರಣ' ಹೊರಟಿದೆ.

ಗ್ರಂಥದಲ್ಲಿರುವ 'ಕಿಂತು' ಎಂಬ ಪದಕ್ಕೆ 'ಅನಪವಾದಃ' ಎನ್ನುವಲ್ಲಿ ಅನ್ವಯ ಮಾಡಬೇಕು. ಆದ್ದರಿಂದಲೇ ಟೀಕೆಯಲ್ಲಿ ''ಋತಂ ಮಾನಾಭಾವಾತ್'' 'ಋತಂ ಪಿಬಂತೌ' ಎಂಬಲ್ಲಿ ಸ್ವಗತಭೇದವಿವರ್ಜಿತನಾದ ಪರಮಾತ್ಮನಿಗೆ ಅನೇಕ ರೂಪಗಳಿರುವುದರಿಂದಲೇ ಬಹುತ್ವವನ್ನು ಹೇಳಲಾಗಿದೆ. ಅದರಂತೆ 'ನ ಸಂಖ್ಯೋಪಸಂಗ್ರಹಾತ್' ಎಂಬಲ್ಲಿ ಸ್ವಗತಭೇದವಿವರ್ಜಿತನಾದ ಪರಮಾತ್ಮನಲ್ಲಿ ಅನೇಕತ್ವ ಸಂಖ್ಯೆಯನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಭಗವಂತನು ಪ್ರತಿಯೊಂದು ಶರೀರಗಳಲ್ಲಿಯೂ 'ಅತ್ಮ ಅಂತರಾಂತ್ಮ' ಎಂಬೆರಡು ರೂಪಗಳಿಂದ ನೆಲೆಸಿರುತ್ತಾನಾದ್ದರಿಂದ ಬಹುತ್ವವನ್ನು ಹೇಳಲು ಪ್ರಮಾಣವಿದೆ. ಆದರೆ 'ಯಸ್ಮಿನ್ ಪಂಚ ಪಂಚಜನಾಃ' ಎಂಬ ಶ್ರುತಿಯಲ್ಲಿ ಅಂತಹ ಲಿಂಗಗಳು ಕಾಣಿಸದ ಕಾರಣ ಪರಮಾತ್ಮನಲ್ಲಿ ಬಹುತ್ವವು ಸಿದ್ಧವಾಗುವುದಿಲ್ಲವೆಂದು ಹೇಳಿದ್ದಾರೆ. 'ಬ್ರಹ್ಮಲಿಂಗಾನಿ' ಎಂಬ ಪದಕ್ಕೆ ಪ್ರಾಣಾದಿಗಳಿಗೆ ಪ್ರಾಣತ್ವಾದಿಗಳನ್ನು ನೀಡುವ ಲಿಂಗಗಳೆಂದರ್ಥ.

**प्रकाशः** – इत्यादीत्यादिपदेनाधाराधेयभावोऽपि रूपभेदाद्युज्यत इति समाधानं गृह्यते । **इत्याद्यूह्यमिति** । अत्रैकस्यानेकत्वे आत्मान्तरात्मेतिवत्तत्र प्रतिशरीरं बहुत्वे मानं नेति शङ्कायां शरीरान्तर्गताकाशप्राणादिपञ्चजननियामकत्वेन तेषु नानाभावस्य न्यायप्राप्तत्वाद्बहुत्वं सिद्धमिति समाधानमूह्यमित्यर्थः ।

'ಇತ್ಯಾದಿ' ಎಂಬಲ್ಲಿರುವ 'ಆದಿ' ಪದದಿಂದ ಆಧಾರಾಧೇಯಭಾವವೂ ಸಹ ರೂಪಭೇದದಿಂದ ಯುಕ್ತವಾಗುತ್ತದೆಂಬ ಸಮಾಧಾನವನ್ನು ತಿಳಿಯಬೇಕು. 'ಇತ್ಯಾದ್ಯೂಹ್ಯಂ' ಎಂಬುದಾಗಿ ಗ್ರಂಥಕಾರರು ದಿಕ್‌ಪ್ರದರ್ಶನ ಮಾಡಿದ್ದಾರೆ - ಒಬ್ಬನೇ ಪರಮಾತ್ಮನಲ್ಲಿ ಅನೇಕತ್ವ ಸಂಖ್ಯೆಯಿರಲು 'ಆತ್ಮಾಂತರಾತ್ಮೇತಿ'

ಎಂಬ ಪ್ರಮಾಣವಿದ್ದಂತೆ 'ಯಸ್ಮಿನ್ ಪಂಚ ಪಂಚಜನಾಃ' ಎಂಬಲ್ಲಿ ಪ್ರತಿ ಶರೀರದಲ್ಲಿಯೂ ಭಗವಂತನು ಬಹುರೂಪದಿಂದ ಇದ್ದಾನೆನ್ನಲು ಪ್ರಮಾಣವು ಕೇಳಿಸುತ್ತಿಲ್ಲವಲ್ಲ? ಎಂಬ ಶಂಕೆಗೆ ಶರೀರಾಂತರ್ಗತವಾದ ಆಕಾಶ ಪ್ರಾಣ ಮೊದಲಾದ ಪಂಚಜನ ನಿಯಾಮಕನಾಗಿ ಭಗವಂತನಲ್ಲಿ ಅನೇಕ ರೂಪಗಳು ಯುಕ್ತವಾಗುತ್ತವೆಂಬ ಯುಕ್ತಿಯಿಂದ ಪರಮಾತ್ಮನಲ್ಲಿ ಬಹುತ್ವವು ಸಿದ್ಧವಾಗುತ್ತದೆಂಬ ಸಮಾಧಾನವನ್ನು ಊಹಿಸಿಕೊಳ್ಳಬೇಕು.

**प्रकाशः** – ननु द्वितीयस्य तृतीयपादे ''उत्क्रान्तिगत्यागतीनां'' इति नये जीवः किं व्याप्तोऽथाणुरिति संशये ''व्याप्ता ह्यात्मानश्चेतना निर्गुणाश्च'' इति श्रुतेर्बहुवचनावरुद्धाया ईश्वरविषयत्वायोगेन जीवविषयत्वावश्यम्भावेन श्रुतिबलाद्व्याप्ता इत्याशङ्क्य तन्निरासयोः ''नाणुरतच्छ्रुतेरिति चेन्नेतराधिकारात्'' इति गुणसूत्रेण कृतत्वात्तेन पौनरुक्त्यमित्यत आह – **नाणुरिति** ।

ಆಕ್ಷೇಪ - ಎರಡನೇ ಅಧ್ಯಾಯದ ಮೂರನೇ ಪಾದದಲ್ಲಿರುವ "ಉತ್ಕ್ರಾಂತಿಗತ್ಯಾಗತೀನಾಂ' ಎಂಬ ಅಧಿಕರಣದಲ್ಲಿ ಹೀಗೆ ವಿಚಾರ ಮಾಡಿದ್ದಾರೆ - ಜೀವನು ವ್ಯಾಪ್ತನಾಗಿದ್ದಾನೋ ಅಥವಾ ಅಣುವಾಗಿದ್ದಾನೋ ? ಎಂದು ಸಂಶಯ ಬಂದರೆ "ವ್ಯಾಪ್ತಾ ಹ್ಯಾತ್ಮಾನಶ್ಚೇತನಾ ನಿರ್ಗುಣಾಶ್ಚ" ಎಂಬ ಶ್ರುತಿಯಲ್ಲಿ ಬಹುವಚನವು ಕೇಳಿಸುತ್ತಿದೆ. ಆದ್ದರಿಂದ ಒಬ್ಬನೇ ಈಶ್ವರನನ್ನು ಈ ಶ್ರುತಿಯು ವಿಷಯೀಕರಿಸಲು ಸಾಧ್ಯವಿಲ್ಲ. ಅನೇಕ ಜೀವರನ್ನೇ ವಿಷಯೀಕರಿಸುತ್ತದೆಂದು ಒಪ್ಪಬೇಕು. ಆದ್ದರಿಂದ ಜೀವನು ವ್ಯಾಪ್ತನಾಗಿದ್ದಾನೆಂದು ಶ್ರುತಿಪ್ರಮಾಣದಿಂದ ಸಿದ್ಧವಾಗುತ್ತದೆಂಬ ಆಶಂಕೆಯನ್ನು 'ನಾಣುರತಚ್ಛ್ರುತೇರಿತಿ ಚೇನ್ನೇತರಾಧಿಕಾರಾತ್' ಎಂಬ ಗುಣಸೂತ್ರದಿಂದ ಪರಿಹರಿಸಿದ್ದಾರೆ. ಜೀವನು ಅಣುವಾಗಿರುವುದರಿಂದ ವ್ಯಾಪ್ತನಾಗಲು ಸಾಧ್ಯವಿಲ್ಲವೆಂದು ತೀರ್ಮಾನಿಸಿದ್ದಾರೆ. ಆದ್ದರಿಂದ ಈ ಸೂತ್ರದಿಂದ ಪುನರುಕ್ತಿ ಬರುತ್ತದಲ್ಲವೇ?

**प्रकाशः** – **अनपोदितेनेति** । अत एव तत्र टीका ''न चेश्वररूपबाहुल्यार्थाः, बाधकं विना श्रुतेर्बाधायोगात्'' इतीति भावः ।

ಆದ್ದರಿಂದಲೇ ಆ ಅಧಿಕರಣದ ಟೀಕೆಯಲ್ಲಿ "ನ ಚೇಶ್ವರರೂಪಬಾಹುಲ್ಯಾರ್ಥಾಃ, ಬಾಧಕಂ ವಿನಾ ಶ್ರುತೇರ್ಬಾಧಾಯೋಗಾತ್' ಈಶ್ವರನೆಂಬ ಬಾಹುಲ್ಯಾರ್ಥವನ್ನು ಹೇಳಲಾಗದು. ಬಾಧಕವಿಲ್ಲದೆ ಶ್ರುತಿಯು ಬಾಧಿತವಾಗುವುದಿಲ್ಲವೆಂದು 'ಅನಪೋದಿತೇನ' ಎಂಬ ಗ್ರಂಥದಿಂದ ಹೇಳಿದ್ದಾರೆ.

''अणुर्ह्येष आत्मा यं वा एते सिनीतः पुण्यं चापुण्यं'' इत्यणुत्वश्रुतिर्ज्ञेया । ऐतरेयके ''अथ देवरथः'' इत्युपक्रम्य ''तदयं प्राणोऽधितिष्ठति'' इत्युक्त्वा ''तदुक्तमृषिणा – आ तेन यातं मनसो जवीयसा'' इति द्विवचनान्तो मन्त्र उदाहृतः । स यथा तद्विषयस्तद्वदित्यर्थः ।

"ಅಣುರ್ಹ್ಯೇಷ ಆತ್ಮಾ ಯಂ ವಾ ಏತೇ ಸಿನೀತಃ ಪುಣ್ಯಂ ಚಾಪುಣ್ಯಂ" ಎಂಬುದನ್ನು ಅಣುತ್ವ ಪ್ರತಿಪಾದಕಶ್ರುತಿಯೆಂದು ತಿಳಿಯಬೇಕು. ಐತರೇಯೋಪನಿಷತ್ತಿನಲ್ಲಿ "ಅಥ ದೇವರಥಃ" ಎಂದು ಪ್ರಾರಂಭಿಸಿ "ತದಯಂ ಪ್ರಾಣೋಽಧಿತಿಷ್ಠತಿ" ಎಂದು ಪ್ರಾರಂಭವಾಗಿ "ತದುಕ್ತಮೃಷಿಣಾ - ಆ ತೇನ ಯಾತಂ ಮನಸೋ ಜವೀಯಸಾ" ಎಂದು ದ್ವಿವಚನಾಂತವಾದ ಮಂತ್ರವನ್ನು ಉದಾಹರಿಸಲಾಗಿದೆ. ಈ ಮಂತ್ರವು ಹೇಗೆ ವಿಷ್ಣುವಿಷಯಕವಾಗಿದೆಯೋ ಅದರಂತೆ ತಿಳಿಯಬೇಕು.

**एवं द्विवचनं न बाधकमित्युक्तं, तत्प्रसङ्गप्राप्तपौनरुक्त्यं च व्युदस्तम् । अधुना प्रागुक्तच्छायात्वमपि न बाधकं, तस्याविद्याश्रयत्वरूपत्वाभावात्, किन्तु यथा छाया प्राणिनां सुखहेतुस्तथा विदुषां सुखहेतुत्वादातपवदज्ञानां दुःखहेतुत्वाच्छायातपावित युच्येते रूपविशेषावित्याशयेन टीकोक्तमेवाह – सुखेति ।**

ಇದುವರೆಗೂ ದ್ವಿವಚನವು ಬಾಧಕವಾಗುವುದಿಲ್ಲವೆಂದು ಹೇಳಿದ್ದಾಯಿತು. ಮತ್ತು ಪ್ರಸಂಗತಃ ಪ್ರಾಪ್ತವಾದ ಪುನರುಕ್ತಿಯನ್ನೂ ಸಹ ಪರಿಹರಿಸಿದಂತಾಯಿತು. ಈಗ ಹಿಂದೆ ಹೇಳಲ್ಪಟ್ಟ ಛಾಯಾತ್ವವೂ ಸಹ ಬಾಧಕವಾಗುವುದಿಲ್ಲವೆಂದು ಸಮರ್ಥಿಸುತ್ತಿದ್ದಾರೆ. ಏಕೆಂದರೆ ಛಾಯತ್ವವು ಅವಿದ್ಯಾಶ್ರಯರೂಪವೆಂದು ನಾವು ಹೇಳುವುದಿಲ್ಲ ಹೊರತಾಗಿ ಯಾವರೀತಿಯಾಗಿ ನೆರಳು ಪ್ರಾಣಿಗಳಿಗೆ ಸುಖಹೇತುವಾಗಿದೆಯೋ? ಅದರಂತೆ ಪರಮಾತ್ಮನು ಜ್ಞಾನಿಜನರಿಗೆ ಸುಖಹೇತು ಆಗಿದ್ದಾನೆ. ಬಿಸಿಲು ಪ್ರಾಣಿಗಳ ದುಃಖಕ್ಕೆ ಕಾರಣವಾದಂತೆ ಪರಮಾತ್ಮನು ಅಜ್ಞಾನಿಗಳಿಗೆ ದುಃಖಪ್ರದನಾಗಿದ್ದಾನೆ. ಹೀಗೆ ಸುಖದುಃಖಕಾರಣನಾದ ಪರಮಾತ್ಮನು ಛಾಯಾ ಮತ್ತು ಆತಪ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ. ಇಂತಹ ಪರಮಾತ್ಮನ ಎರಡು ರೂಪವಿಶೇಷಗಳನ್ನು 'ಛಾಯಾತಪೌ' ಎಂಬ ಶ್ರುತಿಯು ಪ್ರತಿಪಾದಿಸುತ್ತಿದೆ. ಈ ಅಭಿಪ್ರಾಯದಿಂದ ಟೀಕೆಯಲ್ಲಿ ಹೇಳಿದ್ದನ್ನೇ 'ಸುಖ' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

**"सच्छायेव विदुषां प्रभुः । आतपः पापिनां" इति तद्भाष्योक्तस्मृतेः, परपक्षेऽपि च्छायातपाविति शब्दयोरविद्याविद्यावद्वाचकत्वादिति भावः ।**

"ಸಃ ಛಾಯೇವ ವಿದುಷಾಂ ಪ್ರಭುಃ । ಆತಪಃ ಪಾಪಿನಾಂ" "ಪರಮಾತ್ಮನು ಜ್ಞಾನಿಗಳಿಗೆ ಛಾಯಾ ಎನಿಸಿದ್ದಾನೆ, ಪಾಪಿಗಳಿಗೆ ಆತಪನೆನಿಸಿದ್ದಾನೆ" ಎಂಬುದಾಗಿ ಆ ಶ್ರುತಿಯ ಭಾಷ್ಯದಲ್ಲಿ ವ್ಯಾಖ್ಯಾನಿಸಿದ್ದಾರೆ. ಅದ್ವೈತಮತದಲ್ಲಿಯೂ ಸಹ ಛಾಯತಪ ಶಬ್ದಗಳು ಅವಿದ್ಯಾ ಹಾಗೂ ವಿದ್ಯಾವಾಚಕಗಳಾಗಿವೆ.

**तदुक्तं तत्त्वप्रदीपे – "अमरासुराणां छायाऽऽतपरूपाविति योजनायोगाद-मराणामाह्लादकावसुराणां तापकावित्यर्थः" इति ।**

ಇದನ್ನೇ ತತ್ತ್ವಪ್ರದೀಪದಲ್ಲಿ "ಅಮರಾಸುರಾಣಾಂ ಛಾಯಾಽಽತಪರೂಪಾವಿತಿ ಯೋಜನಾಯೋಗಾದ ಮರಣಾಮಾಹ್ಲಾದಕಾವಸುರಾಣಾಂ ತಾಪಕಾವಿತ್ಯರ್ಥಃ" ದೇವತೆಗಳಿಗೆ ಮತ್ತು ಅಸುರರಿಗೆ ಭಗವಂತನು ಛಾಯಾ ಆತಪಗಳಾಗಿದ್ದಾನೆ ಎಂಬರ್ಥವು ಸ್ವರಸವಾಗುವುದಿಲ್ಲ. ಆದ್ದರಿಂದ ದೇವತೆಗಳಿಗೆ ಸುಖಪ್ರದನಾಗಿದ್ದಾನೆ. ಅಸುರರಿಗೆ ದುಃಖಪ್ರದನಾಗಿದ್ದಾನೆಂದು ವ್ಯಾಖ್ಯಾನಿಸಬೇಕು ಎಂದು ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

एतेन "च्छायाऽऽतपत्वं चान्यत्र व्याख्यातम्" इति न्यायविवरणटीका विवृता । अतो बाधकाभावाद्गुहाविष्टत्वादिसाधकभावात् पिबन्तावीश्वरूप-विशेषावेवेति स्थितम् ।

ಹೀಗೆ ಹೇಳಿದ್ದರಿಂದ "ಛಾಯಾತಪತ್ವಂ ಚಾನ್ಯತ್ರ ವ್ಯಾಖ್ಯಾತಮ್" 'ಛಾಯಾ ಮತ್ತು ಆತಪ' ಶಬ್ದಗಳ ಅರ್ಥವನ್ನು ಬೇರೆ ಕಡೆ ವ್ಯಾಖ್ಯಾನಿಸಲಾಗಿದೆ ಎಂಬ ನ್ಯಾಯವಿವರಣಾ ಟೀಕೆಯನ್ನು ವಿವರಿಸಿದಂತಾಯಿತು. ಆದ್ದರಿಂದ ಬಾಧಕವಿಲ್ಲದ ಕಾರಣ ಮತ್ತು ಗುಹಾವಿಷ್ಟತ್ವಾದಿ ಸಾಧಕವಿರುವ ಕಾರಣ 'ಪಿಬಂತೌ' ಎಂಬ ಶ್ರುತಿಯು ಈಶ್ವರನ ಎರಡು ರೂಪವಿಶೇಷಗಳನ್ನೇ ಪ್ರತಿಪಾದಿಸುತ್ತಿದೆಯೆಂದು ಹೇಳಬೇಕು.

सूत्राक्षरासामाञ्जस्यामाशङ्क्याह – अत्रेति । 'ऋतं पिबन्तौ' इत्येवोक्तौ न लिङ्गोक्तिस्स्यादिति भावः ।

ಸೂತ್ರಾಕ್ಷರದ ಅರ್ಥದಲ್ಲಿ ಅಸಾಮಂಜಸ್ಯವಿದೆಯೆಂದು ಆಶಂಕಿಸಿ 'ಅತ್ರ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಋತಂ ಪಿಬಂತೌ' ಎಂದಷ್ಟೇ ಹೇಳಿದ್ದಲ್ಲಿ ಲಿಂಗವನ್ನು ಹೇಳಿದಂತಾಗುತ್ತಿರಲಿಲ್ಲವೆಂದು ತಿಳಿಯಬೇಕು.

यद्यपि 'ऋतं पिबन्तौ' इत्युक्तावृतपातृत्वद्वित्वरूपपूर्वपक्षयुक्तयोस्सूचनमस्ति, तथाऽपि पूर्वपक्षयुक्तितोऽपि सिद्धान्तयुक्तिसूचनस्य ज्यायस्त्वादिति भावः ।

ವಸ್ತುತಃ 'ಋತಂ ಪಿಬಂತೌ' ಎಂಬಲ್ಲಿ ಋತಪಾತೃತ್ವ, 'ದ್ವಿತ್ವ' ಎಂಬ ಪೂರ್ವಪಕ್ಷ ಯುಕ್ತಿಗಳನ್ನು ಸೂಚಿಸಿದಂತಾಗುತ್ತಿತ್ತು. ಆದರೆ ಪೂರ್ವಪಕ್ಷಯುಕ್ತಿಗಿಂತಲೂ ಸಿದ್ಧಾಂತಯುಕ್ತಿ ಶ್ರೇಷ್ಠವಾದ್ದರಿಂದ 'ಋತಂ ಪಿಬಂತೌ' ಎಂದಷ್ಟೇ ಉಲ್ಲೇಖಿಸದೇ ಮುಂದಿನ ಭಾಗವನ್ನೂ ಸಹ ಉಲ್ಲೇಖಿಸಿದ್ದಾರೆ.

धर्मिनिर्देशे प्रयोजनमुक्त्वा साध्यनिर्देशस्यापि तदाह – यद्यपीति । विच्छेदशङ्कानिवृत्त्यर्थमुक्तं – पूर्वत्रोत्तरापीति ।

ಧರ್ಮಿಯನ್ನು ನಿರ್ದೇಶಿಸಲು ಪ್ರಯೋಜನವನ್ನು ಹೇಳಿದ್ದಾಯಿತು. ಈಗ ಸಾಧ್ಯನಿರ್ದೇಶನದ ಪ್ರಯೋಜನವನ್ನು 'ಯದ್ಯಪಿ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಪ್ರಾಪ್ತವಾದ ಶಂಕೆಯನ್ನು ಪರಿಹಾರ ಮಾಡುವುದಕ್ಕೋಸ್ಕರ 'ಪೂರ್ವತ್ರೋತ್ತರಾಪೀತಿ' ಎಂದು ಹೇಳುತ್ತಿದ್ದಾರೆ.

"द्विवचनस्य गतिं वक्तु" इत्युपलक्षणम् । 'आदेयमुपादेयं सुखं मात्यनुभवति' इत्युत्तरनयसुधोक्तनिर्वचनेन 'ऋतं पिबन्तौ' इति प्रातिपादिकार्थोक्तिद्वाराऽनशन-श्रुतेर्गतिं वक्तुं चेत्यपि बोध्यम् ।

'ದ್ವಿವಚನಸ್ಯ ಗತಿಂ ವಕ್ತು' ಎಂಬುದು ಉಪಲಕ್ಷಣವಾಗಿದೆ. 'ಆದೇಯಮುಪಾದೇಯಂ ಸುಖಂ ಮಾತ್ಮನುಭವತಿ' ಎಂಬ ಮುಂದಿನ ಅಧಿಕರಣದ ಸುಧೆಯಲ್ಲಿ ಆತ್ಮ ಎಂಬ ಶಬ್ದವನ್ನು ನಿರ್ವಚನ ಮಾಡಿದ್ದಾರೆ. ಅದನ್ನು ಉಲ್ಲೇಖಿಸುತ್ತಾ 'ಋತಂ ಪಿಬಂತೌ' ಎಂಬಲ್ಲಿರುವ ಪ್ರಾತಿಪದಿಕದ ಅರ್ಥವನ್ನು ಹೇಳುವ ಮೂಲಕ ಅನಶನ ಶ್ರುತಿಗೆ ಗತಿಯನ್ನು ಹೇಳುವುದಕ್ಕಾಗಿಯೂ ಆತ್ಮ ಶಬ್ದವನ್ನು ಪ್ರಯೋಗಿಸಿದ್ದಾರೆಂದು ತಿಳಿಯಬೇಕು.

**अत्रेति । पूर्वं ''ऋतं पिबन्तौ'' इति वाक्यं, उत्तरं तु ''यस्सेतुः'' इति वाक्यमिति तत्क्रमात्क्रमः । यद्यपि श्रुतिरूपसाधकोक्तिपरत्वाद् द्वितीयस्य प्राथम्यमुचितम्, तथाऽपि तस्योत्तरवाक्यगत्वेन विषयवाक्यगतत्वाभावात्क्रम इति भावः ।**

'ಅತ್ರ' ಎಂಬ ವಾಕ್ಯದಿಂದ ಸೂತ್ರ ಜೋಡಣೆಯ ಕ್ರಮವನ್ನು ಹೇಳುತ್ತಿದ್ದಾರೆ. ಮೊದಲು 'ಋತಂ ಪಿಬಂತೌ' ಎಂಬ ವಾಕ್ಯವಿರುವುದರಿಂದ ಅದನ್ನು ವ್ಯಾಖ್ಯಾನಿಸುವ 'ಗುಹಾಂ ಪ್ರವಿಷ್ಟೌ' ಎಂಬ ಸೂತ್ರವನ್ನು ಮೊದಲು ಹೇಳಿದ್ದಾರೆ. 'ಯಸ್ಸೇತುಃ' ಎಂಬ ಶ್ರುತಿಯು ಅನಂತರ ಇರುವುದರಿಂದ 'ವಿಶೇಷಣಾಚ್ಚ' ಎಂಬ ಸೂತ್ರವನ್ನು ಅನಂತರ ಹೇಳಿದ್ದಾರೆ. ವಸ್ತುತಃ ಶ್ರುತಿಯೆಂಬ ಸಾಧಕ ಪ್ರಮಾಣವನ್ನು ಹೇಳುವ ಕಾರಣ 'ವಿಶೇಷಣಾಚ್ಚ' ಎಂಬ ಸೂತ್ರವು ಮೊದಲು ಬರಬೇಕು. ಆದರೆ ಆ ಸಾಧಕವು ವಿಷಯವಾಕ್ಯದಲ್ಲಿಲ್ಲದ ಕಾರಣ ವಿಷಯವಾಕ್ಯಕ್ಕೆ ಅನುಗುಣವಾಗಿಯೇ ಮಾಡಿದ ಸೂತ್ರದ ಕ್ರಮವು ಸ್ವರಸವಾಗಿದೆ.

**गुरुराजीयम् – ननु प्रथमपक्षे न सङ्ख्योपसङ्ग्रहादित्यस्यास्वारस्यमुक्तरीत्या द्वितीये तु गुहां प्रविष्टावित्यस्येत्यत उभयानुसाराय पक्षान्तरमाह – यद्वेति ।।**

## ಸಾರ

ಹಿಂದೆ 'ಋತಂ ಪಿಬಂತೌ' ಎಂಬ ಶ್ರುತಿಯು ಪರಮಾತ್ಮಪರವೆನ್ನಲು ದ್ವಿವಚನಶ್ರುತಿಯು ಬಾಧಕವಾಗುವುದಿಲ್ಲವೆಂದು ಹೇಳಿದ್ದರು. ಈಗ ಛಾಯಾತಪಶಬ್ದಗಳೂ ಸಹ ಬಾಧಕವಲ್ಲವೆಂದು ಹೇಳುತ್ತಿದ್ದಾರೆ. ಹೃದಯಗುಹೆಯಲ್ಲಿ ನೆಲೆಸಿರುವ ಪರಮಾತ್ಮನು ಜ್ಞಾನಿಗಳಿಗೆ ಸುಖಪ್ರದನಾದ್ದರಿಂದ 'ಛಾಯಾ' ಎನಿಸಿದ್ದಾನೆ. ಅಜ್ಞಾನಿಗಳಿಗೆ ದುಃಖಪ್ರದನಾದ್ದರಿಂದ ಆತಪನೆನಿಸಿದ್ದಾನೆ.

ಸೂತ್ರದಲ್ಲಿ 'ಋತಂ ಪಿಬಂತೌ' ಎಂದು ಹೇಳಬಹುದಿತ್ತಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಗುಹಾಪ್ರವಿಷ್ಟತ್ವವೆಂಬ ಲಿಂಗವನ್ನು ಹೇಳುವುದಕ್ಕಾಗಿ 'ಗುಹಾಂ ಪ್ರವಿಷ್ಟೌ' ಎಂದೇ ಹೇಳಿದ್ದಾರೆ.

ಮೊದಲು 'ಋತಂ ಪಿಬಂತೌ' ಎಂಬ ವಾಕ್ಯವಿರುವುದರಿಂದ ಅದನ್ನು ವ್ಯಾಖ್ಯಾನಿಸುವ 'ಗುಹಾಂ ಪ್ರವಿಷ್ಟೌ' ಎಂಬ ಸೂತ್ರವನ್ನು ಮೊದಲು ಹೇಳಿದ್ದಾರೆ. 'ಯಸ್ಸೇತುಃ' ಎಂಬ ಶ್ರುತಿಯು ಅನಂತರ ಇರುವುದರಿಂದ

'ವಿಶೇಷಣಾಚ್ಚ' ಎಂಬ ಸೂತ್ರವನ್ನು ಅನಂತರ ಹೇಳಿದ್ದಾರೆ. ವಸ್ತುತಃ ಶ್ರುತಿಯೆಂಬ ಸಾಧಕಪ್ರಮಾಣವನ್ನು ಹೇಳುವ ಕಾರಣ 'ವಿಶೇಷಣಾಚ್ಚ' ಎಂಬ ಸೂತ್ರವು ಮೊದಲು ಬರಬೇಕು. ಆದರೆ ಆ ಸಾಧಕವು ವಿಷಯವಾಕ್ಯದಲ್ಲಿಲ್ಲದ ಕಾರಣ ವಿಷಯವಾಕ್ಯಕ್ಕೆ ಅನುಗುಣವಾಗಿಯೇ ಮಾಡಿದ ಸೂತ್ರದ ಕ್ರಮವು ಸ್ವರಸವಾಗಿದೆ.

• • • • •

## ಶಂಕರಭಾಷ್ಯದಲ್ಲಿ ಗುಹಾಧಿಕರಣ

### तात्पर्यचन्द्रिका

**अन्ये – ऋतं पिबन्तौ बुद्धिजीवौ, गुहाप्रविष्टत्वादेस्तत्र सम्भवात्सर्वगते ब्रह्मण्यसम्भवाद्बुद्धेरपातृत्वेऽपि छत्रिन्यायेन पिबच्छब्द इति प्राप्ते,**

**ऋताख्यकर्मफलपानलिङ्गेन एकस्य जीवत्वे निश्चिते द्वितीयस्तज्जातीयश्चेतनः परमात्मैव, न त्वचेतना बुद्धिः, 'अस्य गोर्द्वितीयेन भाव्यम्' इत्युक्ते गवान्तरेणेव अश्वादिना सद्वितीयत्वाप्रतीतेः । एवं च प्रथमावगतऋतपानेन पिबतोर्जीवात्म-परमात्मत्वे निश्चिते चरमं गुहाप्रविष्टत्वादिकं कथञ्चिन्नेयम् । ब्रह्मणोऽपातृत्वेऽपि च्छत्रिन्यायेन पिबच्छब्द इति सिद्धान्त इत्याहुः ।**

ಅನುವಾದ - ಅದ್ವೈತಿಗಳ ಅಧಿಕರಣ ರಚನೆ ಹೀಗಿದೆ - 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ಬುದ್ಧಿಜೀವರನ್ನು ಹೃದಯಗುಹಾಪ್ರವಿಷ್ಟರೆಂದು ಹೇಳಲಾಗಿದೆ. ಬ್ರಹ್ಮನು ಸರ್ವಗತನಾದ್ದರಿಂದ ಕೇವಲ ಹೃದಯಗುಹೆಯಲ್ಲಿರುವಿಕೆಯು ಅಸಂಭಾವಿತವಾಗಿದೆ. ಆದ್ದರಿಂದ ಬುದ್ಧಿಜೀವರೇ ವಿಷಯವಾಕ್ಯದಿಂದ ಪ್ರತಿಪಾದ್ಯರೆನ್ನಬೇಕು. ವಸ್ತುತಃ 'ಪಿಬತ್' ಶಬ್ದದಿಂದ ಪ್ರತಿಪಾದ್ಯವಾದ ಪಾತೃತ್ವಧರ್ಮವು ಜೀವನಲ್ಲಷ್ಟೇ ಇದೆ ಹೊರತು ಬುದ್ಧಿಯಲ್ಲಿಲ್ಲ. ಆದರೂ ಸಹ ಛತ್ರಿನ್ಯಾಯದಿಂದ ಪಿಬತ್‌ಪ್ರಾತಿಪದಿಕಕ್ಕೆ ಬುದ್ಧಿ ಹಾಗೂ ಜೀವರಲ್ಲಿ ಜಹದಜಹಲ್ಲಕ್ಷಣವನ್ನು ಮಾಡಬೇಕೆಂದು ಪೂರ್ವಪಕ್ಷ.

'ಋತ' ಶಬ್ದವು ವಿಶೇಷಣವಾಗಿರುವುದರಿಂದ ಕರ್ಮಫಲಪಾತೃತ್ವವನ್ನೇ ಪಿಬತ್‌ಪ್ರಾತಿಪದಿಕವು ಪ್ರತಿಪಾದಿಸುತ್ತದೆ. ಈ ಕರ್ಮಫಲ ಪಾತೃತ್ವವೆಂಬ ಲಿಂಗದಿಂದ ಒಬ್ಬರು ಜೀವರೆಂದು ನಿಶ್ಚಯವಾಗುತ್ತದೆ. ಇವನಿಗೆ ಸಜಾತೀಯನಾದ ಮತ್ತೊಬ್ಬನೆಂದರೆ ಚೇತನನಾದ ಪರಮಾತ್ಮನೇ ಆಗಬೇಕು ಹೊರತು ಅಚೇತನವಾದ ಬುದ್ಧಿಯಾಗಲು ಸಾಧ್ಯವಿಲ್ಲ. ಏಕೆಂದರೆ ಎತ್ತಿಗೆ ಸರಿಯಾದ ಜೋಡಿಯನ್ನು ಹುಡುಕಬೇಕು ಎಂದು ಹೇಳಿದಾಗ, ಮತ್ತೊಂದು ಎತ್ತನ್ನು ಹುಡಕಬೇಕೆಂದೇ ತಿಳಿಯುತ್ತಾರೆ ಹೊರತು ಕುದುರೆ ಮೊದಲಾದವುಗಳನ್ನು ತಿಳಿಯುವುದಿಲ್ಲ. ಇದರಂತೆ ಮೊದಲು ತಿಳಿಯುತ್ತಿರುವ ಋತಪಾತೃತ್ವದಿಂದ ಪಿಬತ್ ಪ್ರಾತಿಪದಿಕವು ಜೀವ ಹಾಗೂ ಪರಮಾತ್ಮನ ಪರವೆಂದು ನಿಶ್ಚಯವಾಗುತ್ತದೆ.

ಇದಕ್ಕನುಸಾರಿಯಾಗಿ ಗುಹಾಪ್ರವಿಷ್ಟತ್ವಾದಿಗಳನ್ನು ಜೀವ ಪರಮಾತ್ಮಪರವಾಗಿಯೇ ಹೊಂದಿಸಿ ಅರ್ಥೈಸಬೇಕು. ವಸ್ತುತಸ್ತು ಬ್ರಹ್ಮನು ಕರ್ಮಫಲಭೋಕ್ತೃವಾಗಿಲ್ಲ. ಆದರೂ ಸಹ ಛತ್ರಿನ್ಯಾಯದಿಂದ ಜೀವನ ಜೊತೆಗೆ ಬ್ರಹ್ಮನನ್ನು ವಿವಕ್ಷಿಸಬೇಕೆಂದು ಸಿದ್ಧಾಂತ. ಇಷ್ಟು ಅದ್ವೈತಿಗಳ ಅಧಿಕರಣಶರೀರ.

**प्रकाशः –**

**अन्ये त्विति ।** ऋतं पिबन्तौ बुद्धिजीवौ जीवेश्वरौ वेति संशये, बुद्धिजीवावेव, गुहाविष्टत्वलिङ्गात्, नियतहृदयगुहाविष्टत्वस्य परिच्छिन्नयोर्बुद्धि-जीवयोरेव युक्तत्वात्, सर्वगते ब्रह्मणि तदयोगात्,

''सुकृतस्य लोके'' इति सुकृतलोकावस्थानेन कर्मगोचरानतिक्रमस्य जीवस्य भोक्तृतया बुद्धेस्तुर्भोगसाधनतया तयोरेवोपपत्तेः । छायात्वरूपतमस्त्वस्य जडतया बुद्धौ, प्रकाशत्वरूपातपत्वस्य जीवे च सम्भवाच्च बुद्धेरपातृत्वेऽपि पातृजीव-साहचर्याच्छत्रिवदुपपत्तेः तावेव पिबन्ताविति प्राप्त इत्यर्थः । तदुक्तं भामत्यां –

नियताधारता बुद्धिजीवसंवेशिनी नहि ।
क्लेशात्कल्पयितुं युक्ता सर्वगे परमात्मनि ।।

इति ।

ऋतपानेन जीवात्मा निश्चितोऽस्य द्वितीयता ।
ब्रह्मणैव सरूपेण नतु बुद्ध्या विरूपया ।।
प्रथमं सद्वितीयत्वे प्रमाणावसिते सति ।
गुहाश्रयत्वं चरमं व्याख्येयमविरोधतः ।।

इति भामतीं हृदि कृत्वा सिद्धान्तमनुवदति – **ऋताख्येति । कथञ्चिदिति ।**

**प्रकाशः –** 'सालिग्रामे हरिः' इतिवदुपलब्ध्यर्थो देशविशेषोपदेशः ।

सुकृतलोकवृत्तित्वमपीश्वरे छत्रिन्यायेन नेयम्, छायातपत्वं च जीवस्याविद्याश्रयतया ब्रह्मणस्तदनाश्रयतया नेयमित्यर्थः ।

ವಿವರಣೆ - ಇಲ್ಲಿಯ ತನಕ ಸ್ವಮತದಲ್ಲಿ ಗುಹಾಧಿಕರಣವನ್ನು ಸಮರ್ಥಿಸಿದ್ದಾಯಿತು. ಪ್ರಕೃತ ಅದ್ವೈತಿಗಳ ಅಧಿಕರಣಶರೀರವನ್ನು ಅನುವಾದ ಮಾಡಿ ವಿಮರ್ಶಿಸುತ್ತಿದ್ದಾರೆ. ಶಾಂಕರಭಾಷ್ಯದಲ್ಲಿ

'ಋತಂ ಪಿಬಂತೌ' ಎಂಬ ಶ್ರುತಿಯಿಂದ ಪ್ರತಿಪಾದ್ಯರಾದವರು ಬುದ್ಧಿಜೀವರೋ? ಅಥವಾ ಜೀವೇಶ್ವರರೋ? ಎಂದು ಸಂಶಯ. ಬುದ್ಧಿಜೀವರೆಂದು ಪೂರ್ವಪಕ್ಷ. ಗುಹಾಪ್ರವಿಷ್ಟತ್ವವೇ ಪೂರ್ವಪಕ್ಷದ ಲಿಂಗ. ನಿಯತವಾದ ಹೃದಯಗುಹಾಪ್ರವೇಶವು ಪರಿಚ್ಛಿನ್ನಪ್ರಮಾಣವುಳ್ಳ ಬುದ್ಧಿಜೀವರಲ್ಲಷ್ಟೇ ಯುಕ್ತವಾಗುತ್ತದೆ. ಬ್ರಹ್ಮನು ಸರ್ವಗತನಾದ್ದರಿಂದ ಅಪರಿಚ್ಛಿನ್ನನಾಗಿದ್ದಾನೆ. ಅವನಲ್ಲಿ ವಿಹಿತವಾದ ಹೃದಯಗುಹಾಪ್ರವೇಶವನ್ನು ಹೇಳಲು ಸಾಧ್ಯವಿಲ್ಲ. ಆದರೆ ಬುದ್ಧಿಜೀವರಲ್ಲಿ ಇದನ್ನು ಸುಲಭವಾಗಿ ಹೇಳಬಹುದು. ಏಕೆಂದರೆ ''ಸುಕೃತಸ್ಯ ಲೋಕೇ'' ಎಂಬುದಾಗಿ ಜೀವನು ಶುಭವಾದ ಕರ್ಮಗಳನ್ನು ಮಾಡುವುದರಿಂದ ಪುಣ್ಯಲೋಕವನ್ನು ಹೊಂದುತ್ತಾನೆಂದು ಸಿದ್ಧವಾಗಿದೆ. ಆದ್ದರಿಂದ ಜೀವನು ಭೋಕ್ತೃವಾಗಿದ್ದಾನೆ. ಬುದ್ಧಿಯಾದರೂ ಸಹ ಭೋಗಕ್ಕೆ ಸಾಧನವಾಗಿದೆ. ಮತ್ತು 'ಛಾಯಾ' ಪದಕ್ಕೆ ತಮಸ್ಸೆಂದು 'ಆತಪ' ಶಬ್ದಕ್ಕೆ ಪ್ರಕಾಶವೆಂದು ಅರ್ಥ. ಬುದ್ಧಿ ಜಡವಾದ್ದರಿಂದ ತಮಸ್ತ್ವವು ಕೂಡುತ್ತದೆ. ಜೀವನು ಚೇತನನಾದ್ದರಿಂದ ಪ್ರಕಾಶತ್ವವು ಕೂಡುತ್ತದೆ. ವಸ್ತುತಃ ಜೀವನು ಭೋಕ್ತೃವಾಗಿದ್ದಾನೆ ಹೊರತು ಬುದ್ಧಿಯು ಭೋಕ್ತೃವಲ್ಲ. ಆದರೂ ಸಹ ಭೋಕ್ತೃವಾದ ಜೀವನ ಜೊತೆಗೆ ಸಾಹಚರ್ಯವನ್ನು ಹೊಂದಿದ ಕಾರಣ ಛತ್ರಿನ್ಯಾಯದಿಂದ ಭೋಕ್ತೃವೆನಿಸುತ್ತಾನೆ. ಹೀಗೆ ಬುದ್ಧಿ ಹಾಗೂ ಜೀವರಿಬ್ಬರೇ 'ಋತಂ ಪಿಬಂತೌ' ಎಂಬ ಶ್ರುತಿಯಿಂದ ಪ್ರತಿಪಾದ್ಯರಾಗುತ್ತಿದ್ದಾರೆ. ಈ ವಿಷಯವನ್ನೇ ಭಾಮತಿಯಲ್ಲಿಯೂ ಹೇಳಲಾಗಿದೆ.

ನಿಯತಾಧಾರತಾ ಬುದ್ಧಿಜೀವಸಂವೇಶಿನೀ ನಹಿ।
ಕ್ಲೇಶಾತ್ಕಲ್ಪಯಿತುಂ ಯುಕ್ತಾಸ್ಸರ್ವಗೇ ಪರಮಾತ್ಮನಿ॥

ಇತಿ ।

ಋತಪಾನೇನ ಜೀವಾತ್ಮಾ ನಿಶ್ಚಿತೋಽಸ್ಯ ದ್ವಿತೀಯತಾ।
ಬ್ರಹ್ಮಣೈವ ಸರೂಪೇಣ ನತು ಬುದ್ಧ್ಯಾ ವಿರೂಪಯಾ॥
ಪ್ರಥಮಂ ಸದ್ವಿತೀಯತ್ವೇ ಪ್ರಮಾಣಾವಸಿತೇ ಸತಿ।
ಗುಹಾಶ್ರಯತ್ವಂ ಚರಮಂ ವ್ಯಾಖ್ಯೇಯಮವಿರೋಧತಃ॥

ನಿಯತವಾದ ಹೃದಯಗುಹೆಯಲ್ಲಿರುವಿಕೆಯು ಬುದ್ಧಿಜೀವರಲ್ಲಿ ಸುಲಭವಾಗಿ ಕೂಡುತ್ತದೆ. ಹೀಗಿರುವಾಗ ಸರ್ವತ್ರ ವ್ಯಾಪ್ತನಾದ ಪರಮಾತ್ಮನಲ್ಲಿ ಕಷ್ಟದಿಂದ ಹೃದಯಗುಹಾನಿಹಿತತ್ವವನ್ನು ಹೇಳುವುದು ಅಯುಕ್ತವಾಗಿದೆ ಎಂದು ಪೂರ್ವಪಕ್ಷ. ಋತಪಾತೃತ್ವದಿಂದ ಜೀವಾತ್ಮನು ನಿಶ್ಚಿತನಾಗಿದ್ದಾನೆ. ಇವನಿಗೆ ಸದ್ವಿತೀಯನಾದವನು ಚೇತನತ್ವದಿಂದ ಸಾಮ್ಯವಿರುವ ಬ್ರಹ್ಮನೇ ಆಗುತ್ತಾನೆ ಹೊರತು, ವಿರೂಪವಾದ ಬುದ್ಧಿ ಸದ್ವಿತೀಯವಾಗುವುದಿಲ್ಲ. ಹೀಗೆ ಮೊದಲೇ ಸದ್ವಿತೀಯನೆಂದು ನಿರ್ಣಯವಾದ ಮೇಲೆ ಕೊನೆಯಲ್ಲಿ ಕೇಳಿಸುತ್ತಿರುವ ಗುಹಾಶ್ರಯತ್ವವನ್ನು ವಿರೋಧವಿಲ್ಲದಂತೆ ವ್ಯಾಖ್ಯಾನಿಸಬೇಕು. ಭಾಮತಿಯ ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು 'ಋತಾಖ್ಯ' ಇತ್ಯಾದಿ ಗ್ರಂಥದಿಂದ ಸಿದ್ಧಾಂತ ಮಾಡುತ್ತಿದ್ದಾರೆ.

ಗುಹಾಧಿಕರಣ (೧-೨-೩)

'ಕಥಂಚಿತ್' ಎಂಬುದಕ್ಕೆ ಹೀಗರ್ಥ - ಭಗವಂತನು ಎಲ್ಲೆಡೆ ವ್ಯಾಪ್ತನಾಗಿದ್ದರೂ 'ಸಾಲಗ್ರಾಮೇ ಹರಿಃ' ಸಾಲಗ್ರಾಮದಲ್ಲಿದ್ದಾನೆಂದೇ ಎಲ್ಲರೂ ಪ್ರಯೋಗಿಸುತ್ತಾರೆ. ಏಕೆಂದರೆ ಎಲ್ಲೆಡೆ ಅವನಿದ್ದರೂ ಸಾಲಗ್ರಾಮದಲ್ಲಿ ಸಾನ್ನಿಧ್ಯವಿಶೇಷದಿಂದ ಗೋಚರಿಸುವ ಕಾರಣ 'ಸಾಲಗ್ರಾಮ' ಎಂಬ ದೇಶವಿಶೇಷದಲ್ಲಿ ಅವನ ಇರುವಿಕೆಯನ್ನು ಹೇಳಲಾಗುತ್ತದೆ. ಅದರಂತೆ ಪರಬ್ರಹ್ಮನು ಎಲ್ಲೆಡೆ ವ್ಯಾಪ್ತನಾಗಿದ್ದರೂ ಹೃದಯಗುಹೆಯಲ್ಲಿ ಗೋಚರಿಸುವ ಕಾರಣ ಶ್ರುತಿಯು ಗುಹಾನಿಹಿತನೆಂದು ಹೇಳುತ್ತಿದೆ. ಆದ್ದರಿಂದ ಸರ್ವಗತನಾದ ಪರಬ್ರಹ್ಮನಲ್ಲಿ ಗುಹಾನಿಹಿತತ್ವ ಧರ್ಮವು ವಿರುದ್ಧವಾಗುವುದಿಲ್ಲ.

'ಸುಕೃತಸ್ಯ ಲೋಕೇ' ಎಂಬಲ್ಲಿ ಹೇಳಲ್ಪಟ್ಟ ಪುಣ್ಯಲೋಕದ ಪ್ರಾಪ್ತಿಯನ್ನೂ ಸಹ ಈಶ್ವರನಲ್ಲಿ ಹೇಳಬಹುದು. ವಸ್ತುತಃ ಈ ಜೀವನೇ ಪುಣ್ಯಲೋಕವನ್ನು ಹೊಂದುತ್ತಾನೆ. ಆದರೆ ನಿರಂತರವಾಗಿ ಜೀವನ ಜೊತೆಗಿರುವ ಕಾರಣ ಪರಬ್ರಹ್ಮನನ್ನೂ ಸಹ ಛತ್ರಿನ್ಯಾಯದಿಂದ ಪುಣ್ಯಲೋಕದಲ್ಲಿದ್ದಾನೆಂದು ಹೇಳಿದ್ದಾನೆ. ಛಾಯಾತಪತ್ವವನ್ನೂ ಸಹ ಹೀಗೆಯೇ ಕೂಡಿಸಬೇಕು. ಜೀವನು ಅವಿದ್ಯೆಗೆ ಆಶ್ರಯನಾದ್ದರಿಂದ 'ಛಾಯಾ' ಎನಿಸಿದ್ದಾನೆ. ಬ್ರಹ್ಮನು ಅವಿದ್ಯೆಗೆ ಆಶ್ರಯನಾಗದ ಕಾರಣ ಆತಪನೆನಿಸಿದ್ದಾನೆಂದು. ಹೀಗೆ ಜೀವಬ್ರಹ್ಮರೇ 'ಋತಂ ಪಿಬಂತೌ' ಎಂಬ ಶ್ರುತಿಯಿಂದ ಪ್ರತಿಪಾದ್ಯರಾಗಿದ್ದಾರೆನ್ನಲು ಯಾವುದೇ ಆತಂಕವಿಲ್ಲವೆಂದು ತಿಳಿಯಬೇಕು.




ಅದ್ವೈತಿಗಳು ಗುಹಾಧಿಕರಣವನ್ನು ಹೀಗೆ ರಚಿಸಿದ್ದಾರೆ -

ಪೂರ್ವಪಕ್ಷ - ಕಾಠಕೋಪನಿಷತ್ತಿನಲ್ಲಿ 'ಋತಂ ಪಿಬಂತೌ' ಎಂಬ ಶ್ರುತಿಯು ಕೇಳಿಸುತ್ತಿದೆ. ಈ ಶ್ರುತಿಯು ಜೀವ ಹಾಗೂ ಬುದ್ಧಿತತ್ವವನ್ನು ಪ್ರತಿಪಾದಿಸುತ್ತಿದೆಯೋ? ಅಥವಾ ಜೀವಬ್ರಹ್ಮರನ್ನು ಪ್ರತಿಪಾದಿಸುತ್ತಿದೆಯೋ ? ಎಂದು ಸಂಶಯ.

ಜೀವ ಹಾಗೂ ಬುದ್ಧಿತತ್ವಗಳೇ ಪ್ರತಿಪಾದ್ಯರೆಂದು ಪೂರ್ವಪಕ್ಷ. ಏಕೆಂದರೆ ಭೋಗವು ಜೀವನಿಗೆ ಮಾತ್ರವಿದ್ದರೂ ಸಹ ಛತ್ರಿನ್ಯಾಯದಿಂದ ಬುದ್ಧಿಯಲ್ಲೂ ಸಹ ಕರ್ತೃತ್ವವು ಪ್ರಾಪ್ತವಾಗುತ್ತದೆ. ವ್ಯಾಪ್ತನಾದ ಬ್ರಹ್ಮನನ್ನು ಸಂಕುಚಿತವಾದ ಹೃದಯಪ್ರದೇಶದಲ್ಲಿ ಇರಲು ಸಾಧ್ಯವಿರದ ಕಾರಣ 'ಗುಹಾಪ್ರವಿಷ್ಟೌ' ಎಂಬಲ್ಲಿರುವ ವಿಶೇಷಣವು ಬ್ರಹ್ಮನಲ್ಲಿ ಬರುವುದಿಲ್ಲ. ಮತ್ತು 'ಛಾಯಾತಪೌ' ಎಂಬಲ್ಲಿ ಹೇಳಲ್ಪಟ್ಟ ನೆರಳು ಹಾಗೂ ಬೆಳಕುಗಳು ಬುದ್ಧಿಜೀವರಲ್ಲಿ ಬರುತ್ತದೇ ಹೊರತು ಜೀವೇಶ್ವರರಲ್ಲಿ ಬರುವುದಿಲ್ಲ. ಆದ್ದರಿಂದ ಈ ಶ್ರುತಿಯಿಂದ ಪ್ರತಿಪಾದ್ಯರಾದವರು ಬುದ್ಧಿತತ್ವ ಹಾಗೂ ಜೀವರೆಂದೇ ಹೇಳಬೇಕು.

ಸಿದ್ಧಾಂತ - ಈ ಎತ್ತಿಗೆ ಸರಿಯಾದ ಜೊತೆಯನ್ನು ಹುಡುಕಬೇಕು ಎಂದು ಹೇಳಿದಾಗ, ಮತ್ತೊಂದು ಎತ್ತನ್ನು ಹುಡುಕಬೇಕೆಂದೇ ತಿಳಿಯುತ್ತಾರೆಯೇ ಹೊರತು ಕುದುರೆಯನ್ನು ಹುಡುಕಬೇಕೆಂದು ಯಾರೂ

अत्र "अत्ता" इत्यादिसूत्रद्वयविषयभूतं "यस्य ब्रह्म" इत्यादिवाक्यं, "गुहाम्" इत्यादिसूत्रद्वयविषयभूतं "ऋतं पिबन्तौ" इत्यादिवाक्यं च एकप्रकरणस्थं उपजीव्योपजीवकभावेनान्वितार्थं च ।

तथा हि – "ऋतं" इत्यादिवाक्यं यदि पूर्वपक्षरीत्या बुद्धिजीवविषयं स्यात्, तदा "ऋतं" इत्यादेरब्रह्मविषयतया "महान्तं विभुमात्मानं" इति प्रस्तुतब्रह्मप्रकरणविच्छेदात् "ऋतं" इत्यनेन अव्यवहितपूर्वं "यस्य" इत्यादिवाक्यमपि व्यवहितेन "महान्तम्" इत्यादिना एकप्रकरणतां त्यक्त्वा, "ऋतं" इत्यादिना एकप्रकरणतामापन्नं सत् "ऋतं" इत्यादिवत् कर्मफलभोक्तृत्व रूपात्तृत्वप्रतिपादकतया जीवविषयं स्यात् ।

यदा तु "ऋतम्" इत्यादिकं सिद्धान्तरीत्या जीवब्रह्मविषयं, तदा तस्य ब्रह्मविषयतया ब्रह्म प्रकरणाविच्छेदात् "यस्य" इत्यादिकमपि संहर्तृत्वरूपात्तृत्व-प्रतिपादकतया ब्रह्मविषयं स्यादिति पूर्वसूत्रद्वयार्थं प्रत्युत्तरसूत्रद्वयार्थस्य उपजीवव्यत्वादित्याहुः ।

ಅನುವಾದ - ರಾಮಾನುಜರು 'ಅತ್ತಾ ಚರಾಚರಗ್ರಹಣಾತ್' ಎಂಬುದರಿಂದ ಪ್ರಾರಂಭಿಸಿ ನಾಲ್ಕು ಸೂತ್ರಗಳನ್ನು ಒಂದೇ ಅಧಿಕರಣವೆನ್ನುತ್ತಾರೆ - ಎರಡೆರಡು ಸೂತ್ರಗಳನ್ನು ಪ್ರತ್ಯೇಕ ಅಧಿ ಕರಣವೆನ್ನಬಾರದು. ಏಕೆಂದರೆ ಸೂತ್ರಗಳು ವಾಕ್ಯವಿಶೇಷವಿಷಯಕವಾಗಿದ್ದರೂ ಒಂದೇ ಪ್ರಕರಣದಲ್ಲಿ ಇರುವ ವಾಕ್ಯಗಳಾಗಿರುವುದರಿಂದ, ಮತ್ತು ಪಾದದಿಂದ ಅಥವಾ ವ್ಯವಹಿತವಾದ ಅಧಿಕರಣದಿಂದ ವ್ಯವಧಾನವಿಲ್ಲದ ಕಾರಣ, ಮತ್ತು ಈ ಸೂತ್ರಗಳಲ್ಲಿ ಪರಸ್ಪರ ಉಪಜೀವ್ಯಉಪಜೀವಕ ಭಾವವಿರುವುದರಿಂದ, ಪರಸ್ಪರ ಅನ್ವಯಗೊಂಡ ಅರ್ಥವುಳ್ಳದ್ದರಿಂದಲೂ ಸೂತ್ರಗಳ ವಿಷಯವಾಕ್ಯವು ಭಿನ್ನವಾಗಿದ್ದರೂ ಸಹ ಬೇರೆ ಬೇರೆ ಅಧಿಕರಣವೆಂದು ಹೇಳಬಾರದು.

ಪ್ರಕೃತ ಅತ್ತಾಚರಾಚರವೆಂಬ ಎರಡು ಸೂತ್ರಗಳಿಗೆ "ಯಸ್ಯ ಬ್ರಹ್ಮಚ" ಎಂಬ ವಾಕ್ಯವು ವಿಷಯವಾಗಿದೆ. 'ಗುಹಾಪ್ರವಿಷ್ಟೌ' ಇತ್ಯಾದಿ ವಾಕ್ಯಗಳಿಗೆ "ಋತಂ ಪಿಬಂತೌ" ಎಂಬ ವಾಕ್ಯವು ವಿಷಯವಾಗಿದೆ. ಈ ಎರಡೂ ವಾಕ್ಯಗಳು ಒಂದೇ ಪ್ರಕರಣದಲ್ಲಿರುವುದರಿಂದ ಮತ್ತು ಪರಸ್ಪರ ಉಪಜೀವ್ಯಉಪಜೀವಿಕಭಾವವಿರುವುದರಿಂದ ಪರಸ್ಪರ ಅನ್ವಿತವಾದ ಅರ್ಥವುಳ್ಳವುಗಳಾಗಿವೆ.

ಅದು ಹೀಗೆ - "ಋತಂ ಪಿಬಂತೌ" ಎಂಬ ವಾಕ್ಯವು ಒಂದು ವೇಳೆ ಪೂರ್ವಪಕ್ಷದ ಪ್ರಕಾರ ಬುದ್ಧಿತತ್ವ ಹಾಗೂ ಜೀವರನ್ನು ವಿಷಯೀಕರಿಸಿದರೆ ಆವಾಗ ಈ ವಾಕ್ಯವು ಬ್ರಹ್ಮವಿಷಯಕವಾಗುವುದಿಲ್ಲ.

ಆದ್ದರಿಂದಲೇ ''ಮಹಾಂತಂ ವಿಭುಮಾತ್ಮಾನಂ'' ಪ್ರಸ್ತುತವಾದ ಬ್ರಹ್ಮಪ್ರಕರಣಕ್ಕೆ ವಿಚ್ಛೇದ ಬರುತ್ತದೆ. ''ಋತಂ ಪಿಬಂತೌ'' ಎಂಬ ವಾಕ್ಯಕ್ಕಿಂತ ಅವ್ಯವಹಿತವಾಗಿ ಹಿಂದಿರುವ ''ಯಸ್ಯ ಬ್ರಹ್ಮ ಚ ಕ್ಷತ್ರಂ ಚ'' ಎಂಬ ವಾಕ್ಯವೂ ಸಹ ವ್ಯವಹಿತವಾದ 'ಮಹಾಂತಂ' ಎಂಬ ವಾಕ್ಯದಿಂದ ಏಕಪ್ರಕರಣಗತತ್ವವನ್ನು ಹೊಂದುವುದಿಲ್ಲ. ಹೊರತಾಗಿ ''ಋತಂ ಪಿಬಂತೌ'' ಎಂಬ ವಾಕ್ಯದ ಜೊತೆಗೆ ಸೇರಿ ಏಕಪ್ರಕರಣಗತತ್ವವನ್ನು ಹೊಂದುತ್ತದೆ. ಆದ್ದರಿಂದಲೇ ''ಋತಂ ಪಿಬಂತೌ'' ಎಂಬ ವಾಕ್ಯವು ಕರ್ಮಫಲಭೋಕ್ತೃತ್ವವೆಂಬ ಪಾತೃತ್ವವನ್ನು ಪ್ರತಿಪಾದನೆ ಮಾಡುವ ಮೂಲಕ ಜೀವನನ್ನು ವಿಷಯೀಕರಿಸುವಂತೆ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವೂ ಜೀವನನ್ನೇ ವಿಷಯೀಕರಿಸುತ್ತದೆ.

ಒಂದು ವೇಳೆ ''ಋತಂ ಪಿಬಂತೌ'' ಎಂಬ ವಾಕ್ಯವು ಸಿದ್ಧಾಂತದ ಪ್ರಕಾರ ಜೀವ ಹಾಗೂ ಪರಬ್ರಹ್ಮರನ್ನು ವಿಷಯೀಕರಿಸುವುದಾದರೆ ಆವಾಗ ಬ್ರಹ್ಮವಿಷಯಕವಾಗುವುದರಿಂದ 'ಮಹಾಂತಂ ವಿಭುಂ' ಎಂಬ ಬ್ರಹ್ಮಪ್ರಕರಣವು ವಿಚ್ಛೇದವಾಗುವುದಿಲ್ಲ. ಆದ್ದರಿಂದ ''ಯಸ್ಯ ಬ್ರಹ್ಮ ಚ'' ಎಂಬ ವಾಕ್ಯವೂ ಸಹ ಸಂಹರ್ತೃತ್ವ ರೂಪವಾದ ಅತ್ತೃತ್ವವನ್ನು ಪ್ರತಿಪಾದಿಸುವ ಕಾರಣ ಬ್ರಹ್ಮವಿಷಯಕವೇ ಆಗುತ್ತದೆ. ಹೀಗೆ ಹಿಂದಿನ ಎರಡು ಸೂತ್ರಗಳ ಅರ್ಥವನ್ನು ಕುರಿತು ಮುಂದಿನ ಎರಡು ಸೂತ್ರಗಳ ಅರ್ಥವು ಉಪಜೀವ್ಯಗಳಾಗಿವೆ. ಆದ್ದರಿಂದ ನಾಲ್ಕು ಸೂತ್ರಗಳೂ ಸಹ ಒಂದೇ ಅಧಿಕರಣ-ವಾಗಿವೆಯೆಂಬುದು ರಾಮಾನುಜರ ವಾದ.

**प्रकाशः –**

केचित्त्विति । अत्रेदमधिकरणशरीरं –

यस्य ब्रह्म च क्षत्रं चोभे भवत ओदनः ।
मृत्युर्यस्योपसेचनं .............. ॥

इत्यत्रौदनोपसेचनपदसूचितोऽत्ता जीवः परमात्मा वेति संशयेऽत्तृत्वस्य कर्मफलभोक्तृत्वरूपत्वात्तस्य च जीव एव सम्भवाज्जीव इति प्राप्ते,

ರಾಮಾನುಜರ ಅಧಿಕರಣಶರೀರ ಹೀಗಿದೆ -

ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ।
ಮೃತ್ಯುರ್ಯಸ್ಯೋಪಸೇಚನಂ ...... ॥

'ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ' ಎಂಬ ಕಾಠಕೋಪನಿಷತ್ತಿನಲ್ಲಿ ಕೇಳಿಸುತ್ತಿರುವ ವಾಕ್ಯವು ಈ ಅಧಿಕರಣಕ್ಕೆ ವಿಷಯವಾಗಿದೆ. ಇಲ್ಲಿ 'ಮೃತ್ಯು' ಹಾಗೂ

'ಉಪಸೇಚನ' ಪದಗಳಿಂದ ಅತ್ತೃತ್ವವು ಸೂಚಿತವಾಗಿದೆ. ಈ ಅತ್ತೃತ್ವವನ್ನು ಜೀವನಲ್ಲಿ ಹೇಳಬೇಕೋ? ಅಥವಾ ಪರಮಾತ್ಮನಲ್ಲಿ ಹೇಳಬೇಕೋ ? ಎಂದು ಸಂಶಯ. ಅತ್ತೃತ್ವವು ಕರ್ಮಫಲ ಭೋಕ್ತೃತ್ವರೂಪವಾದ್ದರಿಂದ ಜೀವನಲ್ಲೇ ಹೇಳಬೇಕೆಂದು ಪೂರ್ವಪಕ್ಷ.

**प्रकाशः** – अत्र अत्तृत्वस्य ब्रह्मक्षत्रोपलक्षितचराचराचरग्रहणेन सर्वसंहर्तृत्वरूपत्वात्तस्य च ब्रह्मण्येव सम्भवात्,

महान्तं विभुमात्मानं मत्वा धीरो न शोचति ।
नायमात्मा प्रवचनेन लभ्यो न मेधया न बहुना श्रुतेन ।

इति पूर्वत्र ब्रह्मप्रकरणे श्रुतस्य प्रसादादृते दुरवबोधत्वरूपलिङ्गस्येह ''क इत्था वेद'' इति श्रवणेन 'प्रत्यभिज्ञायमानतया ब्रह्मप्रकरणत्वावगमाच्च परमात्मैवात्ताऽत्रोच्यते ।

ಶ್ರುತಿಯಲ್ಲಿರುವ ಬ್ರಹ್ಮ ಹಾಗೂ ಕ್ಷತ್ರ ಪದಗಳಿಂದ ಚರಾಚರಪದಾರ್ಥಗಳನ್ನು ಉಪಲಕ್ಷಣಯಾ ಸ್ವೀಕರಿಸಬೇಕು. ಆದ್ದರಿಂದ ಅತ್ತೃತ್ವವು ಸರ್ವಸಂಹಾರರೂಪವಾಗುತ್ತದೆ. ಇಂತಹ ಸರ್ವಸಂಹಾರವು ಬ್ರಹ್ಮನಲ್ಲೇ ಬರುತ್ತದೆ ಹೊರತು. ಜೀವನಲ್ಲಿ ಬರುವುದಿಲ್ಲ. ಮತ್ತು

ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ।
ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ।

ಇತ್ಯಾದಿಯಾಗಿ ಮೊದಲು ಬ್ರಹ್ಮನ ಪ್ರಕರಣವೇ ಪ್ರಸಕ್ತವಾಗಿದೆ. ಬ್ರಹ್ಮನ ಪ್ರಸಾದವಿಲ್ಲದೆ ಅವನನ್ನು ತಿಳಿಯಲು ಸಾಧ್ಯವಿಲ್ಲವೆಂಬ ಲಿಂಗದಿಂದ ಪ್ರಕೃತ "ಕ ಇತ್ಥಾ ವೇದ ಯತ್ರ ಸಃ" ಎಂಬಲ್ಲಿಯೂ ಬ್ರಹ್ಮನ ಪ್ರತ್ಯಭಿಜ್ಞಾನವೇ ಬರುತ್ತದೆ. ಮತ್ತು ಬ್ರಹ್ಮನ ಪ್ರಕರಣವೂ ಆಗಿರುವುದರಿಂದ ಪರಮಾತ್ಮನೇ ಇಲ್ಲಿ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯುತ್ತದೆ.

**प्रकाशः** – नच वाच्यं उत्तरत्र ''ऋतं पिबन्तौ'' इति वाक्ये कर्मफलभोक्तृत्वश्रवणेन बुद्धिजीवपरत्वं वा प्राणजीवपरत्वं वा अवश्यं वाच्यं, ब्रह्मणः कर्मबन्धविधुरत्वात् । एवञ्च प्रकरणाल्लिङ्गस्य बलवत्त्वेन ऋतपानाख्यलिङ्गेन ''महान्तं'' इति ब्रह्मप्रकरणं विच्छिन्नं, व्यवहितत्वात्, ''यस्य ब्रह्म च'' इति वाक्यं तु सन्निहितत्वान्न विच्छिन्नमिति प्रागुक्तोऽप्यत्ता न परमात्मेति,

ಪ್ರಶ್ನೆ - "ಮಹಾಂತಂ ವಿಭುಮಾತ್ಮಾನಂ" ಎಂಬುದಾಗಿ ಪೂರ್ವದಲ್ಲಿ ಬ್ರಹ್ಮನು ಪ್ರಸಕ್ತನಾಗಿದ್ದಾನೆ. ಕೆಲವು ವಾಕ್ಯಗಳ ಮುಂದೆ "ಋತಂ ಪಿಬಂತೌ" ಎಂಬ ಶ್ರುತಿಯಿದೆ. ಈ ವಾಕ್ಯದ ಅವ್ಯವಹಿತವಾದ ಮುಂದಿನ ವಾಕ್ಯವೇ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯವಾಗಿದೆ. ಹೀಗಿರುವಾಗ 'ಮಹಾಂತಂ ವಿಭುಂ'

ಎಂಬ ವಾಕ್ಯಕ್ಕಿಂತ ಮುಂದಿರುವ 'ಋತಂ ಪಿಬಂತೌ' ಎಂಬ ವಾಕ್ಯದಲ್ಲಿ ಕರ್ಮಫಲಭೋಕ್ತೃತ್ವವು ಕೇಳಿಸುತ್ತಿರುವುದರಿಂದ ಬುದ್ಧಿತತ್ವ ಹಾಗೂ ಜೀವಪರವೆಂದಾಗಲೀ ಅಥವಾ ಪ್ರಾಣತತ್ವ ಮತ್ತು ಜೀವಪರವೆಂದಾಗಲೀ ಅವಶ್ಯವಾಗಿ ಹೇಳಬೇಕು. ಏಕೆಂದರೆ ಬ್ರಹ್ಮನಿಗೆ ಕರ್ಮಬಂಧವಿಲ್ಲದ ಕಾರಣ ಕರ್ಮಫಲಭೋಕ್ತೃತ್ವವನ್ನು ಹೇಳಲಾಗದು. ಆದ್ದರಿಂದ 'ಮಹಾಂತಂ ವಿಭುಮಾತ್ಮಾನಂ' ಎಂಬ ಶ್ರುತಿಯು ಬ್ರಹ್ಮ ಪ್ರಕರಣವಾಗಿದ್ದರೂ ಪ್ರಕರಣಕ್ಕಿಂತ ಲಿಂಗವೇ ಪ್ರಬಲವಾಗಿದೆ. ಇಂತಹ ಕರ್ಮಫಲ ಭೋಕ್ತೃತ್ವ ಎಂಬ ಲಿಂಗದಿಂದ 'ಮಹಾಂತಂ ವಿಭುಮಾತ್ಮಾನಂ' ಎಂಬ ಬ್ರಹ್ಮಪ್ರಕರಣವು ಬಾಧಿತವಾಗುತ್ತದೆ. 'ಋತಂ ಪಿಬಂತೌ' ಎಂಬ ವಾಕ್ಯಕ್ಕಿಂತ 'ಮಹಾಂತಂ' ಎಂಬ ವಾಕ್ಯವು ದೂರದಲ್ಲಿರುವುದರಿಂದ ಏಕವಾಕ್ಯತ್ವವನ್ನೂ ಸಹ ಹೇಳಲಾಗದು. ಆದರೆ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯವು 'ಋತಂ ಪಿಬಂತೌ' ಎಂಬ ವಾಕ್ಯಕ್ಕಿಂತ ಅವ್ಯವಹಿತವಾಗಿ ಮುಂದಿರುವುದರಿಂದ ಅದರ ಜೊತೆಗೆ ಏಕವಾಕ್ಯತ್ವವನ್ನು ಹೇಳಬಹುದು. ಹಾಗಾಗಿ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯದಲ್ಲಿ ಜೀವನಿಗೆ ಅತ್ತೃತ್ವವನ್ನು ಹೇಳುತ್ತಿರುವುದರಿಂದ 'ಋತಂ ಪಿಬಂತೌ' ಎಂಬ ವಾಕ್ಯದಲ್ಲಿಯೂ ಜೀವನಿಗೆ ಅತ್ತೃತ್ವವನ್ನು ಹೇಳಬೇಕಲ್ಲವೇ?

**प्रकाशः** – यतो गुहां प्रविष्टौ जीवात्मपरमात्मानावेव अस्मिन् प्रकरणे ''गुहाहितं गह्वरेष्ठं'' इति परस्य ''गुहां प्रविश्य तिष्ठन्तं'' इति जीवस्य च गुहाविष्टत्वदर्शनात् । अस्मिन् प्रकरणे ''मत्वा धीरो न शोचति'' ''आत्मानं रथिनं विद्धि'' इत्यादिनोपास्यत्वोपासकत्वप्राप्यत्वप्राप्तृत्वविशेषणाच्च शेषभूतो जीवो द्वितीयः छत्रिवत् परमात्मैवात्मेति सिद्धान्त इति ।

ಉತ್ತರ - ಇದು ತಪ್ಪು. ಏಕೆಂದರೆ 'ಋತಂ ಪಿಬಂತೌ' ಎಂಬ ಶ್ರುತಿಯು ಗುಹಾಪ್ರವಿಷ್ಟತ್ವವನ್ನು ಹೇಳುತ್ತಿದೆ. ಇದು ಜೀವಪರಮಾತ್ಮರಲ್ಲಷ್ಟೇ ಇರುವಂತಹ ಧರ್ಮ. ಏಕೆಂದರೆ ಇದೇ ಪ್ರಕರಣದಲ್ಲಿ ''ಗುಹಾನಿಹಿತಂ ಗಹ್ವರೇಷ್ಠಂ'' ಎಂಬುದಾಗಿ ಪರಮಾತ್ಮನಲ್ಲಿ ಗುಹಾಪ್ರವೇಶವು ಕೇಳಿಸುತ್ತಿದೆ. ಜೀವನಲ್ಲಿಯೂ ಸಹ 'ಗುಹಾಂ ಪ್ರವಿಶ್ಯ ತಿಷ್ಠಂತಂ'' ಎಂಬುದಾಗಿ ಗುಹಾಪ್ರವೇಶವು ಕೇಳಿಸುತ್ತಿದೆ. ಅಷ್ಟೇ ಅಲ್ಲದೆ ''ಮತ್ವಾ ಧೀರೋ ನ ಶೋಚತಿ'' ''ಆತ್ಮಾನಂ ರಥಿನಂ ವಿದ್ಧಿ'' ಎಂಬುದಾಗಿ ಇದೇ ಪ್ರಕರಣದಲ್ಲಿ ಬ್ರಹ್ಮನಲ್ಲಿ ಉಪಾಸ್ಯತ್ವವು ಜೀವನಲ್ಲಿ ಉಪಾಸಕತ್ವವು ಮತ್ತು ಬ್ರಹ್ಮನಲ್ಲಿ ಪ್ರಾಪ್ಯವು ಜೀವನಲ್ಲಿ ಪ್ರಾಪ್ತೃತ್ವವು ವಿಶೇಷಣವಾಗಿ ಕೇಳಿಸಲಾಗುತ್ತಿದೆ. ಆದ್ದರಿಂದ ಜೀವ ಹಾಗೂ ಪರಮಾತ್ಮರೇ 'ಋತಂ ಪಿಬಂತೌ' ಎಂಬ ವಾಕ್ಯದಿಂದ ಪ್ರತಿಪಾದ್ಯರಾಗಿದ್ದಾರೆಂದು ಸಿದ್ಧಾಂತ.

**प्रकाशः** – तदुक्तं –

अत्ता खल्वोदनादेर्भवभुगिति कठश्रुत्यधीतोऽप्यसौ स्यात्
न स्यान्मृत्यूपसिक्तस्थिरचरनिखिलग्रासतस्तल्लयोक्तेः ।
जीवव्यावर्तनं च प्रकरणविदितं भोक्तृतोक्तिर्द्वयोस्तु
प्रेर्यत्वप्रेरकत्वप्रतिनियतरसाच्छत्रिनीत्याऽथवा स्यात् ।।

इति ।

ಪರಿಪೂರ್ಣಚಂದ್ರಿಕಾ

ಅತ್ತಾ ಖಲ್ವೋದನಾದೇರ್ಭವಭುಗಿತಿ ಕಠಶ್ರುತ್ಯಾಧೀತೋಽಪ್ಯಸೌ ಸ್ಯಾತ್
ನ ಸ್ಯಾನ್ಮೃತ್ಯೂಪಸಿಕ್ತಸ್ಥಿರಚರನಿಖಿಲಗ್ರಾಸತಸ್ತಲ್ಲಬೋಕ್ತೇಃ।
ಜೀವವ್ಯಾವರ್ತನಂ ಚ ಪ್ರಕರಣವಿದಿತಂ ಭೋಕ್ತೃತೋಕ್ತಿರ್ದ್ವಯೋಸ್ತು
ಪ್ರೇರ್ಯತ್ವಪ್ರೇರಕತ್ವಪ್ರತಿನಿಯತರಸಾಚ್ಛತ್ರಿನೀತ್ಯಾಽಥವಾ ಸ್ಯಾತ್ ॥

ಇದನ್ನೇ ಶ್ರುತಪ್ರಕಾಶದಲ್ಲಿ ಹೀಗೆ ಹೇಳಿದ್ದಾರೆ - ಕಾಠಕ ಶ್ರುತಿಯಲ್ಲಿ ಕೇಳಿಸುತ್ತಿರುವ ಅತ್ತೃತ್ವವು ಸಂಸಾರಿಯಾದ ಜೀವನಲ್ಲೇ ಬರುತ್ತದೆಂದು ಪೂರ್ವಪಕ್ಷ. 'ಮೃತ್ಯು' ಪದದಿಂದ ಉಪಲಕ್ಷಣಯಾ ತಿಳಿಯುವ ಚರಾಚರ ಸಕಲ ಪ್ರಪಂಚವನ್ನು ಸ್ವೀಕರಿಸಬೇಕು. ಸಮಸ್ತ ಜಗತ್ತಿನ ಅತ್ತೃತ್ವವು ಪರಮಾತ್ಮನಲ್ಲಷ್ಟೇ ಬರುತ್ತದೆ ಹೊರತು ಜೀವನಲ್ಲಿ ಅಲ್ಲ. ಮತ್ತು ಜೀವವ್ಯಾವರ್ತಕವಾದ ಬ್ರಹ್ಮಪ್ರಕರಣವಿರುವುದರಿಂದ ಕೇವಲ ಜೀವನಲ್ಲಿ ಭೋಕ್ತೃತ್ವವನ್ನು ಹೇಳಲಾಗದು. ಹೊರತಾಗಿ ಪ್ರೇರ್ಯಪ್ರೇರಕರಾಗಿ ಪ್ರತಿನಿಯತರಾದ ಜೀವಬ್ರಹ್ಮರಲ್ಲಿ ಛತ್ರಿನ್ಯಾಯದಿಂದ ಭೋಕ್ತೃತ್ವವನ್ನು ಹೇಳಬಹುದು ಎಂದು.

**प्रकाशः** – तदेतत्परमते विषयवाक्यानानुगुण्यादिनोक्तदूषणगणेन दूषितप्रायं मत्वा, यदत्रैकाधिकरण्यसमर्थनं, तदपि निराचिकीर्षुः, श्रुतप्रकाशे दर्शितमैकाधिकरण्यसमर्थनमनुवदति – **एकप्रकरणेति** । 'भिन्नाधिकरणत्वायोगात्' इत्यन्वयः ।

ರಾಮಾನುಜರ ಈ ಅಧಿಕರಣ ಶರೀರವು ಅಸಾಧುವಾಗಿದೆ. ಅದ್ವೈತಿಗಳ ನಿರಾಕರಣೆಯಿಂದಲೇ ಇವರ ಮತವೂ ಸಹ ನಿರಾಕೃತವಾಯಿತು. 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯದಲ್ಲಿ ಅತ್ತೃತ್ವವು ನೇರವಾಗಿ ಕೇಳಿಸುತ್ತಲೇ ಇಲ್ಲ. ಉಪಲಕ್ಷಣಯಾ ಅತ್ತೃತ್ವವನ್ನು ಊಹಿಸಬೇಕು. ಆದರೆ ನಾವು ಹೇಳುವ 'ಸರ್ವಂ ವಾ ಅತ್ತಿ' ಎಂಬ ವಿಷಯವಾಕ್ಯದಲ್ಲಿ ನೇರವಾಗಿಯೇ ಅತ್ತೃತ್ವವು ಕೇಳಿಸುತ್ತಿದೆ. ಮತ್ತು 'ಸರ್ವ' ಶಬ್ದದಿಂದ ಚರಾಚರ ಪದಾರ್ಥವು ಸಾಕ್ಷಾತ್ತಾಗಿ ಪ್ರತಿಪಾದ್ಯವಾಗಿದೆ. ಹೀಗೆ ವಿಷಯವಾಕ್ಯ ಅನಾನುಗುಣ್ಯ ಮೊದಲಾದ ಅದ್ವೈತಿಗಳಿಗೆ ಹೇಳಿದ ದೋಷವು ರಾಮಾನುಜರಿಗೆ ತಪ್ಪಿದಲ್ಲ. ಈ ಅಭಿಪ್ರಾಯದಿಂದ ರಾಮಾನುಜರ ಅಧಿಕರಣವು ನಿರಾಕೃತವಾಯಿತೆಂದು ತಿಳಿದು ಅತ್ತೃತ್ವಾಧಿಕರಣ ಹಾಗೂ ಗುಹಾಧಿಕರಣವನ್ನು ಒಂದೇ ಅಧಿಕರಣವೆಂದು ರಾಮಾನುಜರು ಹೇಳುತ್ತಾರೆ. ಈ ವಿಷಯವನ್ನು ನಿರಾಕರಿಸುವುದಕ್ಕಾಗಿ ಶ್ರುತಪ್ರಕಾಶದಲ್ಲಿ ಸಮರ್ಥಿಸಲ್ಪಟ್ಟ ಒಂದೇ ಅಧಿಕರಣವೆಂಬ ವಿಚಾರವನ್ನು 'ಏಕಪ್ರಕರಣ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡುತ್ತಿದ್ದಾರೆ. ಗ್ರಂಥದಲ್ಲಿರುವ 'ಏಕಪ್ರಕರಣಸ್ಥ ವಾಕ್ಯವಿಶೇಷವಿಷಯಾಣಾಂ' ಎಂಬ ಷಷ್ಠ್ಯಂತ ಪದಗಳಿಗೆಲ್ಲಾ 'ಭಿನ್ನಾಧಿಕರಣತ್ವಾಯೋಗಾತ್' ಎಂಬಲ್ಲಿ ಅನ್ವಯ.

**प्रकाशः** – नन्वदृश्यत्वाधिकरणस्य द्युभ्वाद्यधिकरणस्य चाथर्वणिकैकप्रकरणगतवाक्यविशेषविषयस्य भिन्नत्वं दृष्टमित्यत उक्तं – **पादान्तरेति** । तत्रोभाभ्यां व्यवधानात् ''यस्मिन् द्यौः'' इत्यस्य ब्रह्मपरत्वेऽप्यदृश्यत्वादियुक्तस्याक्षरस्य ब्रह्मप्रकरणेऽपि तच्छेषतया प्रधानाद्युक्तुचपपत्त्या ब्रह्मत्वाऽसिद्धेरुपजीव्योपजीवकभावाभावात् ।

ಗುಹಾಧಿಕರಣ (೧-೨-೩)

ಎಂಬ ವಾಕ್ಯಕ್ಕಿಂತ ಮುಂದಿರುವ 'ಋತಂ ಪಿಬಂತೌ' ಎಂಬ ವಾಕ್ಯದಲ್ಲಿ ಕರ್ಮಫಲಭೋಕ್ತೃತ್ವವು ಕೇಳಿಸುತ್ತಿರುವುದರಿಂದ ಬುದ್ಧಿತತ್ವ ಹಾಗೂ ಜೀವಪರವೆಂದಾಗಲೀ ಅಥವಾ ಪ್ರಾಣತತ್ವ ಮತ್ತು ಜೀವಪರವೆಂದಾಗಲೀ ಅವಶ್ಯವಾಗಿ ಹೇಳಬೇಕು. ಏಕೆಂದರೆ ಬ್ರಹ್ಮನಿಗೆ ಕರ್ಮಬಂಧವಿಲ್ಲದ ಕಾರಣ ಕರ್ಮಫಲಭೋಕ್ತೃತ್ವವನ್ನು ಹೇಳಲಾಗದು. ಆದ್ದರಿಂದ 'ಮಹಾಂತಂ ವಿಭುಮಾತ್ಮಾನಂ' ಎಂಬ ಶ್ರುತಿಯು ಬ್ರಹ್ಮ ಪ್ರಕರಣವಾಗಿದ್ದರೂ ಪ್ರಕರಣಕ್ಕಿಂತ ಲಿಂಗವೇ ಪ್ರಬಲವಾಗಿದೆ. ಇಂತಹ ಕರ್ಮಫಲ ಭೋಕ್ತೃತ್ವ ಎಂಬ ಲಿಂಗದಿಂದ 'ಮಹಾಂತಂ ವಿಭುಮಾತ್ಮಾನಂ' ಎಂಬ ಬ್ರಹ್ಮಪ್ರಕರಣವು ಬಾಧಿತವಾಗುತ್ತದೆ. 'ಋತಂ ಪಿಬಂತೌ' ಎಂಬ ವಾಕ್ಯಕ್ಕಿಂತ 'ಮಹಾಂತಂ' ಎಂಬ ವಾಕ್ಯವು ದೂರದಲ್ಲಿರುವುದರಿಂದ ಏಕವಾಕ್ಯತ್ವವನ್ನೂ ಸಹ ಹೇಳಲಾಗದು. ಆದರೆ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯವು 'ಋತಂ ಪಿಬಂತೌ' ಎಂಬ ವಾಕ್ಯಕ್ಕಿಂತ ಅವ್ಯವಹಿತವಾಗಿ ಮುಂದಿರುವುದರಿಂದ ಅದರ ಜೊತೆಗೆ ಏಕವಾಕ್ಯತ್ವವನ್ನು ಹೇಳಬಹುದು. ಹಾಗಾಗಿ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯದಲ್ಲಿ ಜೀವನಿಗೆ ಅತ್ತೃತ್ವವನ್ನು ಹೇಳುತ್ತಿರುವುದರಿಂದ 'ಋತಂ ಪಿಬಂತೌ' ಎಂಬ ವಾಕ್ಯದಲ್ಲಿಯೂ ಜೀವನಿಗೆ ಅತ್ತೃತ್ವವನ್ನು ಹೇಳಬೇಕಲ್ಲವೇ?

**प्रकाशः** – यतो गुहां प्रविष्टौ जीवात्मपरमात्मानावेव अस्मिन् प्रकरणे "गुहाहितं गह्वरेष्ठं" इति परस्य "गुहां प्रविश्य तिष्ठन्तं" इति जीवस्य च गुहाविष्टत्वदर्शनात् । अस्मिन् प्रकरणे "मत्वा धीरो न शोचति" "आत्मानं रथिनं विद्धि" इत्यादिनोपास्यत्वोपासकत्वप्राप्यत्वप्राप्तृत्वविशेषणाच्च शेषभूतो जीवो द्वितीयः छत्रिवत् परमात्मैवात्मेति सिद्धान्त इति ।

ಉತ್ತರ - ಇದು ತಪ್ಪು. ಏಕೆಂದರೆ 'ಋತಂ ಪಿಬಂತೌ' ಎಂಬ ಶ್ರುತಿಯು ಗುಹಾಪ್ರವಿಷ್ಟತ್ವವನ್ನು ಹೇಳುತ್ತಿದೆ. ಇದು ಜೀವಪರಮಾತ್ಮರಲ್ಲಷ್ಟೇ ಇರುವಂತಹ ಧರ್ಮ. ಏಕೆಂದರೆ ಇದೇ ಪ್ರಕರಣದಲ್ಲಿ "ಗುಹಾನಿಹಿತಂ ಗಹ್ವರೇಷ್ಠಂ" ಎಂಬುದಾಗಿ ಪರಮಾತ್ಮನಲ್ಲಿ ಗುಹಾಪ್ರವೇಶವು ಕೇಳಿಸುತ್ತಿದೆ. ಜೀವನಲ್ಲಿಯೂ ಸಹ 'ಗುಹಾಂ ಪ್ರವಿಶ್ಯ ತಿಷ್ಠಂತಂ" ಎಂಬುದಾಗಿ ಗುಹಾಪ್ರವೇಶವು ಕೇಳಿಸುತ್ತಿದೆ. ಅಷ್ಟೇ ಅಲ್ಲದೆ "ಮತ್ವಾ ಧೀರೋ ನ ಶೋಚತಿ" "ಆತ್ಮಾನಂ ರಥಿನಂ ವಿದ್ಧಿ" ಎಂಬುದಾಗಿ ಇದೇ ಪ್ರಕರಣದಲ್ಲಿ ಬ್ರಹ್ಮನಲ್ಲಿ ಉಪಾಸ್ಯತ್ವವು ಜೀವನಲ್ಲಿ ಉಪಾಸಕತ್ವವು ಮತ್ತು ಬ್ರಹ್ಮನಲ್ಲಿ ಪ್ರಾಪ್ಯವು ಜೀವನಲ್ಲಿ ಪ್ರಾಪ್ತೃತ್ವವು ವಿಶೇಷಣವಾಗಿ ಕೇಳಿಸಲಾಗುತ್ತಿದೆ. ಆದ್ದರಿಂದ ಜೀವ ಹಾಗೂ ಪರಮಾತ್ಮರೇ 'ಋತಂ ಪಿಬಂತೌ' ಎಂಬ ವಾಕ್ಯದಿಂದ ಪ್ರತಿಪಾದ್ಯರಾಗಿದ್ದಾರೆಂದು ಸಿದ್ಧಾಂತ.

**प्रकाशः** – तदुक्तं –

अत्ता खल्वोदनादेर्भवभुगिति कठश्रुत्यधीतोऽप्यसौ स्यात्
न स्यान्मृत्यूपसिक्तस्थिरचरनिखिलग्रासतस्तल्लयोक्तेः ।
जीवव्यावर्तनं च प्रकरणविदितं भोक्तृतोक्तिर्द्वयोस्तु
प्रेर्यत्वप्रेरकत्वप्रतिनियतरसाच्छत्रिनीत्याऽथवा स्यात् ।।

इति ।

ಅತ್ತಾ ಖಲ್ವೋದನಾದೇರ್ಭವಭುಗಿತಿ ಕಠಶ್ರುತ್ಯಾಧೀತೋಽಪ್ಯಸೌ ಸ್ಯಾತ್
ನ ಸ್ಯಾನ್ಮೃತ್ಯೂಪಸಿಕ್ತಸ್ಥಿರಚರನಿಖಿಲಗ್ರಾಸತಸ್ತಲ್ಲಯೋಕ್ತೇಃ।
ಜೀವವ್ಯಾವರ್ತನಂ ಚ ಪ್ರಕರಣವಿದಿತಂ ಭೋಕ್ತೃತೋಕ್ತಿರ್ದ್ವಯೋಸ್ತು
ಪ್ರೇರ್ಯತ್ವಪ್ರೇರಕತ್ವಪ್ರತಿನಿಯತರಸಾಚ್ಛತ್ರಿನೀತ್ಯಾಽಥವಾ ಸ್ಯಾತ್ ॥

ಇದನ್ನೇ ಶ್ರುತಪ್ರಕಾಶದಲ್ಲಿ ಹೀಗೆ ಹೇಳಿದ್ದಾರೆ - ಕಾಠಕ ಶ್ರುತಿಯಲ್ಲಿ ಕೇಳಿಸುತ್ತಿರುವ ಅತ್ತೃತ್ವವು ಸಂಸಾರಿಯಾದ ಜೀವನಲ್ಲೇ ಬರುತ್ತದೆಂದು ಪೂರ್ವಪಕ್ಷ. 'ಮೃತ್ಯು' ಪದದಿಂದ ಉಪಲಕ್ಷಣಯಾ ತಿಳಿಯುವ ಚರಾಚರ ಸಕಲ ಪ್ರಪಂಚವನ್ನು ಸ್ವೀಕರಿಸಬೇಕು. ಸಮಸ್ತ ಜಗತ್ತಿನ ಅತ್ತೃತ್ವವು ಪರಮಾತ್ಮನಲ್ಲಷ್ಟೇ ಬರುತ್ತದೆ ಹೊರತು ಜೀವನಲ್ಲಿ ಅಲ್ಲ. ಮತ್ತು ಜೀವವ್ಯಾವರ್ತಕವಾದ ಬ್ರಹ್ಮಪ್ರಕರಣವಿರುವುದರಿಂದ ಕೇವಲ ಜೀವನಲ್ಲಿ ಭೋಕ್ತೃತ್ವವನ್ನು ಹೇಳಲಾಗದು. ಹೊರತಾಗಿ ಪ್ರೇರ್ಯಪ್ರೇರಕರಾಗಿ ಪ್ರತಿನಿಯತರಾದ ಜೀವಬ್ರಹ್ಮರಲ್ಲಿ ಛತ್ರಿನ್ಯಾಯದಿಂದ ಭೋಕ್ತೃತ್ವವನ್ನು ಹೇಳಬಹುದು ಎಂದು.

**प्रकाशः** – तदेतत्परमते विषयवाक्यानानुगुण्यादिनोक्तदूषणगणेन दूषितप्रायं मत्वा, यदत्रैकाधिकरण्यसमर्थनं, तदपि निराचिकीर्षुः, श्रुतप्रकाशे दर्शितमैकाधिकरण्य-समर्थनमनुवदति – **एकप्रकरणेति** । 'भिन्नाधिकरणत्वायोगात्' इत्यन्वयः ।

ರಾಮಾನುಜರ ಈ ಅಧಿಕರಣ ಶರೀರವು ಅಸಾಧುವಾಗಿದೆ. ಅದ್ವೈತಿಗಳ ನಿರಾಕರಣೆಯಿಂದಲೇ ಇವರ ಮತವೂ ಸಹ ನಿರಾಕೃತವಾಯಿತು. 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯದಲ್ಲಿ ಅತ್ತೃತ್ವವು ನೇರವಾಗಿ ಕೇಳಿಸುತ್ತಲೇ ಇಲ್ಲ. ಉಪಲಕ್ಷಣಯಾ ಅತ್ತೃತ್ವವನ್ನು ಊಹಿಸಬೇಕು. ಆದರೆ ನಾವು ಹೇಳುವ 'ಸರ್ವಂ ವಾ ಅತ್ತಿ' ಎಂಬ ವಿಷಯವಾಕ್ಯದಲ್ಲಿ ನೇರವಾಗಿಯೇ ಅತ್ತೃತ್ವವು ಕೇಳಿಸುತ್ತಿದೆ. ಮತ್ತು 'ಸರ್ವ' ಶಬ್ದದಿಂದ ಚರಾಚರ ಪದಾರ್ಥವು ಸಾಕ್ಷಾತ್ತಾಗಿ ಪ್ರತಿಪಾದ್ಯವಾಗಿದೆ. ಹೀಗೆ ವಿಷಯವಾಕ್ಯ ಅನಾನುಗುಣ್ಯ ಮೊದಲಾದ ಅದ್ವೈತಿಗಳಿಗೆ ಹೇಳಿದ ದೋಷವು ರಾಮಾನುಜರಿಗೆ ತಪ್ಪಿದಲ್ಲ. ಈ ಅಭಿಪ್ರಾಯದಿಂದ ರಾಮಾನುಜರ ಅಧಿಕರಣವು ನಿರಾಕೃತವಾಯಿತೆಂದು ತಿಳಿದು ಅತ್ತ್ರಧಿಕರಣ ಹಾಗೂ ಗುಹಾಧಿಕರಣವನ್ನು ಒಂದೇ ಅಧಿಕರಣವೆಂದು ರಾಮಾನುಜರು ಹೇಳುತ್ತಾರೆ. ಈ ವಿಷಯವನ್ನು ನಿರಾಕರಿಸುವುದಕ್ಕಾಗಿ ಶ್ರುತಪ್ರಕಾಶದಲ್ಲಿ ಸಮರ್ಥಿಸಲ್ಪಟ್ಟ ಒಂದೇ ಅಧಿಕರಣವೆಂಬ ವಿಚಾರವನ್ನು 'ಏಕಪ್ರಕರಣ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡುತ್ತಿದ್ದಾರೆ. ಗ್ರಂಥದಲ್ಲಿರುವ 'ಏಕಪ್ರಕರಣಸ್ಥ ವಾಕ್ಯವಿಶೇಷವಿಷಯಾಣಾಂ' ಎಂಬ ಷಷ್ಠ್ಯಂತ ಪದಗಳಿಗೆಲ್ಲಾ 'ಭಿನ್ನಾಧಿಕರಣತ್ವಾಯೋಗಾತ್' ಎಂಬಲ್ಲಿ ಅನ್ವಯ.

**प्रकाशः** – नन्वदृश्यत्वाधिकरणस्य द्युभ्वाद्यधिकरणस्य चार्थवणिकैकप्रकरणगत-वाक्यविशेषविषयस्य भिन्नत्वं दृष्टमित्यत उक्तं – **पादान्तरेति** । तत्रोभाभ्यां व्यवधानात् ''यस्मिन् द्यौः'' इत्यस्य ब्रह्मपरत्वेऽप्यदृश्यत्वादियुक्तस्याक्षरस्य ब्रह्मप्रकरणेऽपि तच्छेषतया प्रधानाद्युक्त्युपपत्त्या ब्रह्मत्वाऽसिद्धेरुपजीव्योपजीवकभावा-भावात् ।

ಗುಹಾಧಿಕರಣ (೧-೨-೩)

ಪ್ರಶ್ನೆ - ಅದೃಶ್ಯತ್ವಾಧಿಕರಣಕ್ಕೆ 'ಯತ್ತದದ್ರೇಶ್ಯಂ' ಎಂಬುದು ವಿಷಯವಾಕ್ಯ. ದ್ಯುಭ್ವಾದ್ಯಧಿಕರಣಕ್ಕೆ "ಯಸ್ಮಿನ್ ದ್ಯೌಃ" ಎಂಬುದು ವಿಷಯವಾಕ್ಯ. ಈ ಎರಡೂ ವಾಕ್ಯಗಳು ಆಥರ್ವಣ ಉಪನಿಷತ್ತೆಂಬ ಒಂದೇ ಪ್ರಕರಣದಲ್ಲಿ ಪ್ರಸಕ್ತವಾಗಿದೆ. ಆದ್ದರಿಂದ ಆ ಎರಡು ಅಧಿಕರಣಗಳೂ ಸೇರಿ ನಿಮ್ಮ ಪ್ರಕಾರ ಒಂದೇ ಆಗಬೇಕಲ್ಲವೇ? ಎಂಬ ಪ್ರಶ್ನೆಗೆ 'ಪಾದಾಂತರ' ಎಂಬುದಾಗಿ ಉತ್ತರಿಸಿದ್ದಾರೆ. ಅಂದರೆ ಒಂದೇ ಪಾದದಲ್ಲಿರುವ ಎರಡು ಅಧಿಕರಣಗಳಾಗಿರಬೇಕೆಂದು ಅಭಿಪ್ರಾಯ. ಅದೃಶ್ಯತ್ವಾಧಿಕರಣವು ಎರಡನೆಯ ಪಾದದಲ್ಲಿದೆ. ದ್ಯುಭ್ವಾದ್ಯಧಿಕರಣವು ಮೂರನೇ ಪಾದದಲ್ಲಿದೆ. ಹೀಗೆ ಬೇರೆ ಬೇರೆ ಪಾದದಲ್ಲಿರುವ ಕಾರಣ ಈ ಎರಡು ಅಧಿಕರಣಗಳಿಗೆ ಐಕ್ಯವನ್ನು ಹೇಳಲು ಸಾಧ್ಯವಿಲ್ಲ. ಮತ್ತು ಮಧ್ಯದಲ್ಲಿ ವೈಶ್ವಾನರಾಧಿಕರಣವಿದೆ. ಹೀಗೆ ಪಾದದಿಂದ ಹಾಗೂ ಅಧಿಕರಣದಿಂದ ದ್ಯುಭ್ವಾದ್ಯಧಿಕರಣಕ್ಕೆ ವ್ಯವಧಾನವಿರುವುದರಿಂದ ಐಕ್ಯವನ್ನು ಹೇಳಲಾಗದು. ಅಷ್ಟೇ ಅಲ್ಲದೆ "ಯಸ್ಮಿನ್ ದ್ಯೌಃ" ಎಂಬ ಶ್ರುತಿಯು ಬ್ರಹ್ಮಪರವಾಗಿದ್ದರೂ ಸಹ ಅದೃಶ್ಯತ್ವಾದಿಧರ್ಮವನ್ನು ಪ್ರತಿಪಾದಿಸುವ ಅಕ್ಷರ ಶಬ್ದವು ಕೇಳಿಸುತ್ತಿದೆ. ಸಂಪೂರ್ಣ ಇದು ಬ್ರಹ್ಮಪ್ರಕರಣವಾಗಿದ್ದರೂ ಬ್ರಹ್ಮನಿಗೆ ಅಂಗವಾಗಿ ಪ್ರಧಾನ ಮೊದಲಾದವೂ ಸಹ ಪ್ರತಿಪಾದ್ಯವಾಗಬಹುದು. ಆದ್ದರಿಂದ ಅದೃಶ್ಯತ್ವಾಧಿಕರಣಕ್ಕೂ ದ್ಯುಭ್ವಾದ್ಯಧಿಕರಣಕ್ಕೂ ಉಪಜೀವ್ಯಉಪಜೀವಕಭಾವವೂ ಸಹ ಇರುವುದಿಲ್ಲ.

**प्रकाशः – अत एव ''तद्धेतुव्यपदेशाच्च'' ''मान्त्रवर्णिकमेव च'' इत्यादिसूत्राणां पूर्वापरबहुवाक्यविषयत्वेऽप्यव्यवहितत्वात्, परस्परोपजीव्योपजीवकभावेनान्वितार्थ-परतया चैकाधिकरण्यम् । अन्यथा तत्रापि भेद स्यादिति भावः । उपजीव्योपजीवकभावं श्रुतप्रकाशोक्तमेव दर्शयति – तथा हीति ।**

ಆದ್ದರಿಂದಲೇ "ತದ್ಧೇತುವ್ಯಪದೇಶಾಚ್ಚ"ಎಂಬ ವಾಕ್ಯವು "ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್" ಎಂಬ ವಾಕ್ಯವನ್ನು ವಿಚಾರ ಮಾಡುತ್ತದೆ. 'ಮಾಂತ್ರವರ್ಣಿಕಮೇವಚ' ಎಂಬ ಸೂತ್ರವು 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬ ವಾಕ್ಯವನ್ನು ವಿಚಾರ ಮಾಡುತ್ತದೆ. ಇವೆರಡೂ ಬೇರೆ ಬೇರೆ ಕಡೆ ಇದ್ದರೂ ಸಹ ಒಂದೇ ಪ್ರಕರಣದ ವಾಕ್ಯಗಳಾಗಿವೆ. ಮತ್ತು ಪರಸ್ಪರವಾಗಿ ಉಪಜೀವ್ಯ ಉಪಜೀವಕ ಭಾವವೂ ಇರುತ್ತದೆ. ಆದ್ದರಿಂದ ಈ ಎರಡೂ ಸೂತ್ರಗಳನ್ನು ಒಂದೇ ಅಧಿಕರಣವೆಂದು ಒಪ್ಪಲಾಗಿದೆ. ಹೀಗೆ ಏಕಪ್ರಕರಣವಾಗಿದ್ದು ಉಪಜೀವ್ಯ, ಉಪಜೀವಕಭಾವಗಳಿದ್ದಲ್ಲಿ ಆ ಸೂತ್ರಗಳಿಗೆ ಐಕಾಧಿಕರಣ್ಯವನ್ನು ಒಪ್ಪಲೇಬೇಕು. ಇಲ್ಲದಿದ್ದರೆ 'ತದ್ಧೇತುವ್ಯಪದೇಶಾಚ್ಚ', "ಮಾಂತ್ರವರ್ಣಿಕಮೇವ ಚ" ಇತ್ಯಾದಿ ಸೂತ್ರಗಳೂ ಸಹ ಬೇರೆ ಬೇರೆ ಅಧಿಕರಣಗಳಾಗಬೇಕಾದೀತು. ಪ್ರಕೃತ ಅತ್ತೃತ್ವಾಧಿಕರಣಕ್ಕೂ, ಗುಹಾಧಿಕರಣಕ್ಕೂ ಪರಸ್ಪರ ಉಪಜೀವ್ಯ ಉಪಜೀವಕಭಾವವು ಇರುತ್ತದೆಂದು ಶ್ರುತಪ್ರಕಾಶದಲ್ಲಿ ಸಮರ್ಥಿಸಲಾಗಿದೆ. ಇದನ್ನೇ ಇಲ್ಲಿ 'ತಥಾ ಹಿ' ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः – पूर्वपक्षरीत्येति । सा रीतिः प्राङ्मया प्रदर्शिता । विच्छेदादिति । ऋतपानाख्यलिङ्गापेक्षया प्रकरणस्य दुर्बलत्वादिति भावः ।**

ಪರಿಪೂರ್ಣಚಂದ್ರಿಕಾ

ननु "ऋतं पिबन्तौ" इत्येतदब्रह्मविषयं सत्र "महान्तं" इति प्रकृतब्रह्मप्रकरणविच्छेदकं, किन्तु "यस्य ब्रह्म च" इत्यनेनैव विच्छेदकरं, "यस्य ब्रह्म च" इत्येतत्तु वाक्यमनेनाब्रह्मविषयेण विच्छिन्नं सत् "महान्तं" इत्यादिब्रह्मपरवाक्यैः "क इत्था वेद" इति लिङ्गकृतप्रत्यभिज्ञा वशेनैकवाक्यतामापन्नं सद्ब्रह्मपरमेव स्यात् इत्यत आह – **ऋतमित्यनेनेति** ।

'ಪೂರ್ವಪಕ್ಷರೀತ್ಯಾ' ಎಂದು ಗ್ರಂಥದಲ್ಲಿದೆ. ಪೂರ್ವಪಕ್ಷರೀತಿಯನ್ನು ಈ ಹಿಂದೆ ತೋರಿಸಲಾಗಿದೆಯೆಂದು ತಿಳಿಯಬೇಕು. 'ವಿಚ್ಛೇದಾತ್' ಎಂಬ ವಾಕ್ಯಕ್ಕೆ 'ಋತಪಾನ' ಎಂಬ ಲಿಂಗಕ್ಕಿಂತ ಪ್ರಕರಣವು ದುರ್ಬಲವಾಗಿದೆಯೆಂದು ಅಭಿಪ್ರಾಯ.

ಪ್ರಶ್ನೆ – 'ಋತಂ ಪಿಬಂತೌ' ಎಂಬ ಶ್ರುತಿಯು ಬ್ರಹ್ಮವಿಷಯಕವಾಗದೆ 'ಮಹಾಂತಂ' ಎಂಬ ಶ್ರುತಿಯು ಬ್ರಹ್ಮಪರವಾಗುವುದಿಲ್ಲವೆಂದು ಸಮರ್ಥಿಸುವುದಿಲ್ಲ; ಹೊರತಾಗಿ 'ಯಸ್ಯ ಬ್ರಹ್ಮ ಚ'' ಎಂಬ ವಾಕ್ಯದ ಬಲದಿಂದ ಬ್ರಹ್ಮಪ್ರಕರಣಕ್ಕೆ ವಿಚ್ಛೇದಕವಾಗುತ್ತದೆ. 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವಾದರೂ 'ಋತಂ ಪಿಬಂತೌ' ಎಂಬ ವಾಕ್ಯದಿಂದ ಅಬ್ರಹ್ಮವಿಷಯಕವಾಗಿ 'ಮಹಾಂತಂ' ಎಂಬ ಬ್ರಹ್ಮಪರವಾಕ್ಯದಿಂದಲೂ 'ಕ ಇತ್ಥಾ ವೇದ' ಎಂಬುದಾಗಿ ಲಿಂಗದಿಂದ ಬರುವ ಪ್ರತ್ಯಭಿಜ್ಞಾಬಲದಿಂದ ಏಕವಾಕ್ಯತ್ವವನ್ನು ಹೊಂದುತ್ತದೆ. ಹೀಗೆ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವು ಬ್ರಹ್ಮಪರವೇ ಆಗಬಹುದಲ್ಲವೇ? ಎಂಬ ಪ್ರಶ್ನೆಗೆ 'ಋತಂ ಇತ್ಯನೇನ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – "महान्तं" इत्यस्य व्यवहितत्वात् "यस्य" इत्यस्याव्यवहितत्वादित्यर्थः । **ऋतमित्यादिनेति** । अव्यवहितेनेत्यर्थः । **सिद्धान्तरीत्येति** । उक्ता रीतिः प्राक् । **उपजीव्यत्वादिति** । उत्तरवाक्यस्याब्रह्मपरत्वे ब्रह्मपरत्वे वा पूर्वस्यापि तथात्वादित्यर्थः ।

'ಋತಂ ಪಿಬಂತೌ' ಎಂಬ ವಾಕ್ಯಕ್ಕೆ 'ಮಹಾಂತಂ ವಿಭುಂ' ಎಂಬ ವಾಕ್ಯವು ವ್ಯವಹಿತವಾಗಿದೆ. 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವು ಅವ್ಯವಹಿತವಾಗಿದೆಯೆಂದು ತಿಳಿಯಬೇಕು. 'ಋತಂ ಇತ್ಯಾದಿನಾ' ಎಂಬುದಕ್ಕೆ ಅವ್ಯವಹಿತವಾದ 'ಋತಂ' ಎಂಬ ವಾಕ್ಯದಿಂದ ಎಂದರ್ಥ. 'ಸಿದ್ಧಾಂತರೀತ್ಯಾ' ಎಂಬಲ್ಲಿ ಸಿದ್ಧಾಂತದ ರೀತಿಯನ್ನು ಹಿಂದೆ ಹೇಳಲಾಗಿದೆಯೆಂದು ತಿಳಿಯಬೇಕು. 'ಉಪಜೀವ್ಯತ್ವಾತ್' ಎಂದರೆ ಮುಂದಿನ ವಾಕ್ಯವು ಬ್ರಹ್ಮಪರವಾಗದಿದ್ದರೆ ಹಿಂದಿನ ವಾಕ್ಯವೂ ಸಹ ಬ್ರಹ್ಮಪರವಾಗುವುದಿಲ್ಲ. ಮುಂದಿನ ವಾಕ್ಯವು ಬ್ರಹ್ಮಪರವಾದರೆ ಮಾತ್ರ ಹಿಂದಿನ ವಾಕ್ಯವು ಬ್ರಹ್ಮಪರವಾಗುತ್ತದೆಂಬ ಉಪಜೀವ್ಯಜೀವಕಭಾವವನ್ನು ತಿಳಿಯಬೇಕೆಂದರ್ಥ.



ಅದ್ವೈತಿಗಳಂತೆ ರಾಮಾನುಜರೂ ಸಹ 'ಗುಹಾಪ್ರವಿಷ್ಟೌ' ಇತ್ಯಾದಿ ಸೂತ್ರಗಳನ್ನು ವ್ಯಾಖ್ಯಾನಿಸುತ್ತಾರೆ. ಆದರೆ ಹಿಂದಿನ ಅಧಿಕರಣದ ಎರಡು ಸೂತ್ರಗಳು ಈ ಅಧಿಕರಣದ ಎರಡು ಸೂತ್ರಗಳು ಸೇರಿ ಒಂದೇ ಅಧಿಕರಣವೆಂದು ರಾಮಾನುಜರು ಹೇಳುವ ಹೊಸ ವಿಚಾರ.

ಮೊದಲೆರಡು ಸೂತ್ರಗಳಿಗೆ ಕಾಠಕದ ಪ್ರಥಮಾಧ್ಯಾಯದ ಎರಡನೆಯ ವಲ್ಲಿಯಲ್ಲಿರುವ ಇಪ್ಪತ್ತನಾಲ್ಕನೆಯ ''ಯಸ್ಯ ಬ್ರಹ್ಮ ಚ ಕ್ಷತ್ರಂ ಚ'' ಎಂಬ ಮಂತ್ರವು ವಿಷಯವಾಕ್ಯ. ಮುಂದಿನ 'ಗುಹಾಂಪ್ರವಿಷ್ಟೌ' ಇತ್ಯಾದಿ ಸೂತ್ರಗಳಿಗೆ ಅದೇ ಕಾಠಕದ ಪ್ರಥಮಾಧ್ಯಾಯದಲ್ಲಿರುವ ಮೂರನೆಯ ವಲ್ಲಿಯ 'ಋತಂ ಪಿಬಂತೌ' ಎಂಬುದು ವಿಷಯವಾಕ್ಯ. ಹೀಗೆ ವಿಷಯವಾಕ್ಯಗಳು ಭಿನ್ನಭಿನ್ನವಾದ್ದರಿಂದ ಅಧಿಕರಣಗಳೂ ಸಹ ಬೇರೆ ಬೇರೆಯಾಗುತ್ತವೆಂದು ಅದ್ವೈತಿಗಳು ಹೇಳುತ್ತಾರೆ.

ಆದರೆ ಇದು ತಪ್ಪು. ಈ ಎರಡೂ ಅಧಿಕರಣಗಳು ಒಂದರ ಮುಂದೆ ಮತ್ತೊಂದು ಇವೆ. ಈ ಎರಡು ವಿಷಯವಾಕ್ಯಗಳಲ್ಲಿ ಪರಸ್ಪರ ಉಪಜೀವ್ಯಜೀವಕಭಾವವೂ ಇದೆ. ಮತ್ತು ಬೇರೆ ಪಾದವೆಂಬ ವ್ಯವಧಾನವೂ ಇಲ್ಲ. ಆದ್ದರಿಂದ 'ಋತಂ ಪಿಬಂತೌ' ಎಂಬ ಮುಂದಿರುವ ವಾಕ್ಯವು ಬುದ್ಧಿತತ್ವ ಹಾಗೂ ಜೀವರನ್ನು ಪ್ರತಿಪಾದಿಸುವುದಾದರೆ ಅದರ ಹಿಂದಿನ ''ಯಸ್ಯ ಬ್ರಹ್ಮ ಚ ಕ್ಷತ್ರಂ ಚ'' ಎಂಬ ವಾಕ್ಯವೂ ಸಹ ಜೀವನನ್ನೇ ಪ್ರತಿಪಾದಿಸಬೇಕು. 'ಮಹಾತಂ ವಿಭುಮಾತ್ಮಾನಂ' ಎಂಬ ವಾಕ್ಯವು ಬ್ರಹ್ಮಪ್ರಕರಣವೆಂದು ಹೇಳಿದರೂ ಅದು ಭಗ್ನವಾಗುತ್ತದೆ. ಒಂದು ವೇಳೆ 'ಋತಂ ಪಿಬಂತೌ' ಎಂಬ ವಾಕ್ಯವು ಜೀವಬ್ರಹ್ಮರನ್ನು ವಿಷಯೀಕರಿಸುವುದಾದರೆ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯವೂ ಸಹ ಜೀವಬ್ರಹ್ಮರನ್ನೇ ವಿಷಯೀಕರಿಸುತ್ತದೆ.

ಹೀಗೆ ಹಿಂದಿನ ಶ್ರುತಿ ವಾಕ್ಯವು ಮುಂದಿನ ವಾಕ್ಯದ ಅರ್ಥವನ್ನು ಉಪಜೀವಿಸಿರುವುದರಿಂದ ಪರಸ್ಪರ ಉಪಜೀವ್ಯಉಪಜೀವಕಭಾವವು ಕಾಣಿಸುತ್ತದೆ. ಆದ್ದರಿಂದ ಈ ಎರಡೂ ವಿಷಯ ವಾಕ್ಯಗಳು ಒಂದೇ ಅಧಿಕರಣಕ್ಕೆ ಸಂಬಂಧಪಡಬೇಕೆಂದು ರಾಮಾನುಜರ ವಾದ.



• • • • •

## ರಾಮಾನುಜರ ವಿಷಯವಾಕ್ಯಗಳಿಗೆ ಉಪಜೀವ್ಯ ಉಪಜೀವಕ ಭಾವವಿಲ್ಲ

### तात्पर्यचन्द्रिका

**तन्न, अस्मन्मते पूर्वसूत्रद्वयस्य बृहदारण्यकगतवाक्यविषयत्वेन, उत्तरद्वयस्य च काठकगतवाक्यविषयत्वेनैकप्रकरणस्थविषयत्वाभावात् । किञ्च – ''ऋतम्'' इत्यादिकं ''महान्तम्'' इत्यस्य ''यस्य'' इत्यस्य च मध्ये यदि स्यात्, तदा –**

विच्छिन्ना सामिधेनीनां निविद्भिः प्रक्रिया यतः ।
नतु काम्यैः पुनः कल्पैः सन्धातुं सा हि शक्यते ॥

इत्युक्तन्यायेन मध्यस्थनिविद्भिस्सामधेनीप्रकरणस्येव "ऋतं" इत्यनेन ब्रह्माविषयेण ब्रह्मप्रकरणस्य विच्छेद इति शङ्का स्यात् । न त्वेतदस्ति, "ऋतं" इत्यादेः "यस्य" इत्यस्मादपि परत्वात् । तथा च "यस्य" इत्यस्य कथं ब्रह्मप्रकरणाद्विच्छेदाशङ्का ।

नच "नायमात्मा प्रवचनेन लभ्यः" इति ब्रह्मपरपूर्ववाक्योक्तस्य दुरवबोधत्वरूपब्रह्मलिङ्गस्य "यस्य" इति वाक्ये "क इत्था वेद यत्र सः" इति प्रत्यभिज्ञानात् तदेकप्रकरणतेति त्वद्रीत्या "प्रकरणात्" इति सूत्रेणोक्तेऽपि, तत्त्यागेन "यस्य" इत्यस्यानन्तर्यरूपेण क्रमेण "ऋतं" इति वाक्येन एकवाक्यतेति शङ्कितुं शक्यम्, लिङ्गादानन्तर्यरूपक्रमदौर्बल्यस्य त्वन्मते एतच्छा स्त्रपूर्वभागे पूर्वतन्त्र एव सिद्धत्वे पुनरिह क्रमप्राबल्यशङ्कानुदयात् ।

सिद्धान्ते "ऋतं पिबन्तौ" इति ब्रह्मप्रकरणे तच्छेषतया जीवोक्तिवत्, "बुद्धिं तु सारथिं विद्धि" इति बुद्ध्युक्तिवच्च पूर्वपक्षेऽपि 'यस्य ब्रह्म च" इत्यादि ब्रह्मप्रकरणे तच्छेषतया बुद्धिजीवोक्तिसम्भवाच्च ।

ಅನುವಾದ - ರಾಮಾನುಜರ ಈ ವಾದವು ತಪ್ಪು. ಏಕೆಂದರೆ ಹಿಂದಿನ ಸೂತ್ರದಲ್ಲಿ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯವು ವಿಷಯವೇ ಆಗಿಲ್ಲ. ಹೊರತಾಗಿ ಬೃಹದಾರಣ್ಯಕದಲ್ಲಿರುವ 'ಯದ್ದೇವಾಃ ಅಸಜ್ಯತ' ಎಂಬ ವಾಕ್ಯವು ವಿಷಯವಾಗಿದೆ. ಮುಂದಿನ ಎರಡು ಸೂತ್ರಗಳಿಗೆ ಕಾಠಕದಲ್ಲಿರುವ 'ಋತಂ ಪಿಬಂತೌ' ಎಂಬುದು ವಿಷಯವಾಗಿದೆ. ಆದ್ದರಿಂದ ಎರಡೂ ವಿಷಯವಾಕ್ಯಗಳು ಒಂದೇ ಪ್ರಕರಣದಲ್ಲಿವೆಯೆಂದು ಹೇಳಲಾಗದು.

ಮತ್ತು 'ಮಹಾಂತಂ ವಿಭುಂ' ಎಂಬ ವಾಕ್ಯಕ್ಕೂ ಮತ್ತು 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯಕ್ಕೂ ಮಧ್ಯದಲ್ಲಿ 'ಋತಂ ಪಿಬಂತೌ' ಎಂಬ ವಾಕ್ಯವು ಇದ್ದಿದ್ದರೆ ಆವಾಗ 'ಮಹಾಂತಂ' ಎಂಬುದು ಬ್ರಹ್ಮಪ್ರಕರಣವಾದ್ದರಿಂದ 'ಋತಂ ಪಿಬಂತೌ' ಎಂಬ ವಾಕ್ಯವು ಬುದ್ಧಿಜೀವವಿಷಯಕವಾದರೆ ಬ್ರಹ್ಮಪ್ರಕರಣಕ್ಕೆ ವಿಚ್ಛೇದ ಬರುತ್ತದೆಂದು ಹೇಳಬಹುದಿತ್ತು. ಆದರೆ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯದ ಅನಂತರ 'ಋತಂ ಪಿಬಂತೌ' ಎಂಬ ವಾಕ್ಯವು ಇರುವುದರಿಂದ 'ಋತಂ ಪಿಬಂತೌ' ಎಂಬ ವಾಕ್ಯವು

ಬ್ರಹ್ಮವಿಷಯಕವಾಗದಿದ್ದರೂ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವು ಬ್ರಹ್ಮವಿಷಯಕವಾಗಬಹುದು. ಆದ್ದರಿಂದ ನೀವು ಮಾಡಿದ ಶಂಕೆಯೇ ತಪ್ಪಾಗಿದೆ.

ವಿಚ್ಛಿನ್ನಾ ಸಾಮಿಧೇನೀನಾಂ ನಿವಿದ್ಭಿಃ ಪ್ರಕ್ರಿಯಾ ಯತಃ ।
ನತು ಕಾಮ್ಯೈಃ ಪುನಃ ಕಲ್ಪ್ಯೈಃ ಸಂಧಾತುಂ ಸಾ ಹಿ ಶಕ್ಯತೇ ॥

ಯಾವ ಕಾರಣದಿಂದ ಸಾಮಿಧೇನಿಪ್ರಕರಣವು 'ನಿವಿನ್ನಾಮಕ' ಮಂತ್ರಗಳಿಂದ ವಿಚ್ಛೇದವಾಗುತ್ತದೋ? ಆ ಕಾರಣದಿಂದಲೇ ಪುನಃ 'ಕಾಮ್ಯಸಾಮಿಧೇನಿ' ಮಂತ್ರಗಳಿಂದ 'ಉಪವೀಯತೇ' ಎಂಬ ಮಂತ್ರವು ಸಂಧಾನ ಹೊಂದಲು ಸಮರ್ಥವಾಗುವುದಿಲ್ಲ ಎಂಬ ಹಿಂದೆ ಹೇಳಿದ ಪೂರ್ವಮೀಮಾಂಸಾನ್ಯಾಯದಂತೆ ಮಧ್ಯದಲ್ಲಿ ನಿವಿನ್ನಾಮಕಮಂತ್ರಗಳಿಂದ ಸಾಮಿಧೇನಿ ಪ್ರಕರಣದಿಂದ ವಿಚ್ಛೇದನವು ಹೇಗೆ ಆಗಿದೆಯೋ? ಅದರಂತೆ 'ಋತಂ ಪಿಬಂತೌ' ಎಂಬ ವಾಕ್ಯವು ಮಧ್ಯದಲ್ಲಿರುವುದರಿಂದ ಬ್ರಹ್ಮಪ್ರಕರಣಕ್ಕೆ ಬ್ರಹ್ಮಅವಿಷಯಕವಾದ ಈ ವಾಕ್ಯದಿಂದ ವಿಚ್ಛೇದವಾಯಿತೆಂಬ ಶಂಕೆಯನ್ನು ಮಾಡಬಹುದಿತ್ತು. ಆದರೆ ಹೀಗೆ ಶಂಕೆಯನ್ನು ಮಾಡಲಾಗದು. ಏಕೆಂದರೆ 'ಋತಂ ಪಿಬಂತೌ' ಎಂಬ ವಾಕ್ಯವು 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯದ ಅನಂತರದಲ್ಲಿದೆ. ಆದ್ದರಿಂದ 'ಯಸ್ಯ ಬ್ರಹ್ಮ ಚ' ಎಂಬ ಹಿಂದಿನ ವಾಕ್ಯಕ್ಕೆ ಬ್ರಹ್ಮಪ್ರಕರಣವು ವಿಚ್ಛೇದವಾಯಿತೆಂದು ಹೇಗೆ ಆಶಂಕಿಸುತ್ತೀರಿ?

''ನಾಯಮಾತ್ಮಾ ಪ್ರವಚನೇನ ಲಭ್ಯಃ' ಎಂಬುದಾಗಿ ಹಿಂದಿನ ವಾಕ್ಯದಲ್ಲಿ 'ದುರವಬೋಧಕತ್ವ' ಎಂಬ ಲಿಂಗದಿಂದ ಬ್ರಹ್ಮನು ಪ್ರಸಕ್ತನಾಗಿದ್ದಾನೆ. ಆದ್ದರಿಂದ 'ಯಸ್ಯ ಬ್ರಹ್ಮ ಚ ' ಎಂಬ ವಾಕ್ಯದಲ್ಲಿ 'ಕ ಇತ್ಥಾ ವೇದ ಯತ್ರ ಸಃ' ಎಂಬುದರ ಪ್ರತ್ಯಭಿಜ್ಞಾನವು ಬರುವುದರಿಂದ ಏಕಪ್ರಕರಣವೆಂದು ನಿರ್ಣಯವಾಗುತ್ತದೆ. ಹೀಗೆ 'ಪ್ರಕರಣಾತ್' ಎಂಬ ಸೂತ್ರದಿಂದ ನೀವು ಹೇಳುತ್ತೀರಿ. ಆದರೂ ಸಹ ಈ ಲಿಂಗಪ್ರಮಾಣವನ್ನು ಬಿಟ್ಟು 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯಕ್ಕೆ ಆನಂತರ್ಯರೂಪವಾದ ಕ್ರಮಪ್ರಮಾಣದಿಂದ 'ಋತಂ ಪಿಬಂತೌ' ಎಂಬ ವಾಕ್ಯಕ್ಕೆ ಏಕವಾಕ್ಯತ್ವವನ್ನು ಶಂಕಿಸುವುದು ತಪ್ಪಾಗುತ್ತದೆ.

ಏಕೆಂದರೆ ಲಿಂಗಪ್ರಮಾಣಕ್ಕಿಂತಲೂ ಆನಂತರ್ಯರೂಪವಾದ ಕ್ರಮಪ್ರಮಾಣವು ದುರ್ಬಲ-ವಾಗಿದೆಯೆಂದು ನೀವೂ ಸಹ ಒಪ್ಪಿದ್ದೀರಿ. ಬ್ರಹ್ಮಮೀಮಾಂಸಾಶಾಸ್ತ್ರದ ಪೂರ್ವಭಾಗವೆಂದು ಒಪ್ಪಿದ ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಈ ವಿಚಾರವು ಸಿದ್ಧವಾಗಿರುವುದರಿಂದ ನಿಮಗೂ ಸಮ್ಮತವಾಗಿದೆ ಎಂದರ್ಥ. ಆದ್ದರಿಂದ ಪುನಃ ಇಲ್ಲಿ ಲಿಂಗಪ್ರಮಾಣಕ್ಕಿಂತ ಕ್ರಮಪ್ರಮಾಣವನ್ನು ಪ್ರಬಲವೆಂದು ಆಶಂಕಿಸುವುದು ತಪ್ಪಾಗುತ್ತದೆ.

ಆಕ್ಷೇಪ - 'ಋತಂ ಪಿಬಂತೌ' ಎಂಬ ವಾಕ್ಯವು ಮಧ್ಯದಲ್ಲಿಲ್ಲದಿರಬಹುದು. ಆದರೂ ಸಹ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯಕ್ಕೆ ಹತ್ತಿರದಲ್ಲಿದೆ. 'ಮಹಾಂತಂ ವಿಭುಂ' ಎಂಬ ವಾಕ್ಯವು ಬಹಳ

ದೂರದಲ್ಲಿದೆ. ಹೀಗೆ ಸಾನ್ನಿಧ್ಯ ಪ್ರಯುಕ್ತವಾಗಿ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವು 'ಋತಂ ಪಿಬಂತೌ' ಎಂಬ ವಾಕ್ಯದ ಜೊತೆಗೆ ಏಕವಾಕ್ಯತ್ವವನ್ನು ಹೊಂದುತ್ತವೆಂದು ಹೇಳಿದ್ದೇವಲ್ಲವೆ?

ಸಮಾಧಾನ - ಹಾಗಾದರೆ ಕ್ರಮವನ್ನು ಪ್ರಮಾಣವನ್ನಾಗಿ ಆಶ್ರಯಿಸಿ ನೀವು ಉತ್ತರಿಸಿದಂತಾಯಿತು. ದುರವಬೋಧತ್ವವೆಂಬ ಬ್ರಹ್ಮಲಿಂಗಕ್ಕಿಂತ ಈ ಕ್ರಮಪ್ರಮಾಣವು ದುರ್ಬಲವಾಗಿದೆ. ಆದ್ದರಿಂದ 'ಮಹಾಂತಂ ವಿಭುಂ' ಎಂಬ ಶ್ರುತಿಯ ಜೊತೆಗೆ ಲಿಂಗಪ್ರಮಾಣದಿಂದ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವು ಅನ್ವಯಹೊಂದಿ ಬ್ರಹ್ಮಪ್ರಕರಣವಾಗುತ್ತದೆ ಹೊರತು ಕ್ರಮಪ್ರಮಾಣದಿಂದ 'ಋತಂ ಪಿಬಂತೌ' ಎಂಬ ಮುಂದಿನ ವಾಕ್ಯದ ಜೊತೆಗೆ ಸೇರಿ ಬುದ್ಧಿಜೀವವಿಷಯಕವಾಗುವುದಿಲ್ಲ.

ಮತ್ತು ಸಿದ್ಧಾಂತದಲ್ಲಿ 'ಋತಂ ಪಿಬಂತೌ' ಎಂಬುದು ಬ್ರಹ್ಮಪ್ರಕರಣವಾಗಿದ್ದರೂ ಸಹ ಬ್ರಹ್ಮನಿಗೆ ಅಂಗಭೂತವಾಗಿ ಜೀವನನ್ನು ಹೇಳಿದಂತೆ "ಬುದ್ಧಿಂ ತು ಸಾರಥಿಂ ವಿದ್ಧಿ" ಎಂಬುದಾಗಿ ಬುದ್ಧಿಯನ್ನು ಶೇಷವಾಗಿ ಹೇಳಿದಂತೆಯೂ ಪೂರ್ವಪಕ್ಷದಲ್ಲಿಯೂ 'ಯಸ್ಯ ಬ್ರಹ್ಮ ಚ' ಎಂಬ ಬ್ರಹ್ಮ ಪ್ರಕರಣದಲ್ಲಿ ಬ್ರಹ್ಮನಿಗೆ ಶೇಷವಾಗಿ ಬುದ್ಧಿ ಹಾಗೂ ಜೀವರನ್ನು ಹೇಳಬಹುದು. ಆದ್ದರಿಂದ 'ಋತಂ ಪಿಬಂತೌ' ಎಂಬ ಶ್ರುತಿಯು ಬ್ರಹ್ಮನನ್ನು ಪ್ರತಿಪಾದಿಸಿದರೆ ಮಾತ್ರ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವು ಬ್ರಹ್ಮನನ್ನು ಪ್ರತಿಪಾದಿಸಲು ಸಾಧ್ಯವೆಂಬ ಉಪಜೀವ್ಯ ಉಪಜೀವಕಭಾವವನ್ನು ಹೇಳಲು ಸಾಧ್ಯವಿಲ್ಲ.

**प्रकाशः —**

**बृहदारण्यकगतेति । तस्यैव सूत्रानुगुणत्वेनोदाहरणतौचित्यात् नास्ममतेऽयं दोषः, किन्तु मायिनां मत एव, पादान्त्यप्राणनये – ''सर्वत्र'' इति नययोस्तादृशवाक्यविषयत्वेऽपि भिन्नपादस्थत्वादिति भावः ।**

ವಿವರಣೆ - ರಾಮಾನುಜರ ಮತವನ್ನು 'ತನ್ನ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. 'ಅತ್ತಾ ಚರಾಚರ' ಎಂಬೆರಡು ಸೂತ್ರಗಳಿಗೆ ಕಾಠಕದಲ್ಲಿರುವ 'ಯಸ್ಯ ಬ್ರಹ್ಮ ಚ' ಎಂಬುದನ್ನು ವಿಷಯವಾಕ್ಯವನ್ನಾಗಿ ಯಾರು ಹೇಳುತ್ತಾರೋ, ಅಂತಹ ಮಾಯಾವಾದಿಗಳಿಗಷ್ಟೇ ರಾಮಾನುಜರು ಹೇಳುವ ದೋಷ ಬರುತ್ತದೆ. ಆದರೆ ನಮ್ಮ ಮತದಲ್ಲಿ ಬೃಹದಾರಣ್ಯಕದಲ್ಲಿರುವ 'ಸಃ ಯದ್ಯದೇವಾಸೃಜತ' ಎಂಬುದನ್ನು ವಿಷಯವಾಕ್ಯವನ್ನಾಗಿ ಹೇಳಿದ್ದರಿಂದ ರಾಮಾನುಜರಿಗೆ ಹೇಳಿದ ದೋಷವು ನಮಗೆ ಬರುವುದಿಲ್ಲ. ಬೃಹದಾರಣ್ಯಕದ ಮಾತೇ 'ಅತ್ತಾ ಚರಾಚರ' ಎಂಬ ಸೂತ್ರಕ್ಕೆ ಅನುಗುಣವಾಗಿದೆಯೆಂದು ಈ ಹಿಂದೆ ಸಮರ್ಥಿಸಿದ್ದೇವೆ.

ವಸ್ತುತಃ ಅಂತಿಮಪ್ರಾಣಾಧಿಕರಣದ ವಿಷಯವಾಕ್ಯ ಹಾಗೂ ಸರ್ವಗತತ್ವಾಧಿಕರಣದ ವಿಷಯವಾಕ್ಯ ಒಂದೇ ಪ್ರಕರಣದಲ್ಲಿರುವುದರಿಂದ ಒಂದೇ ಅಧಿಕರಣವಾಗಲಿ ಎಂದು ಆಕ್ಷೇಪಿಸಬಹುದು. ಆದರೆ

ರಾಮಾನುಜರೇ ಹೇಳುವಂತೆ ಎರಡೂ ಅಧಿಕರಣಗಳು ಬೇರೆ ಬೇರೆ ಪಾದದಲ್ಲಿರುವ ಕಾರಣ ಒಂದೇ ಅಧಿಕರಣವಾಗಬೇಕಾಗಿಲ್ಲ.

**प्रकाशः –** यदप्युपजीव्योपजीवकभावेनैकाधिकरण्यसमर्थनं, तदप्ययुक्तमिति वक्तुं, यत्तावदुक्तं ''ऋतं इत्यादिकं ''यस्य'' इत्यस्य ''महान्तं'' इत्यादिब्रह्मप्रकरण विच्छेदकमिति' तत्तावन्न युक्तं तस्य तन्मध्यपतित्वाभावादित्याह – **किञ्चेति** । **इत्युक्तेति** । इति वार्तिकोक्तन्यायेनेत्यर्थः ।

ರಾಮಾನುಜರು 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯಕ್ಕೂ 'ಋತಂ ಪಿಬಂತೌ' ಎಂಬ ವಾಕ್ಯಕ್ಕೂ ಪರಸ್ಪರ ಉಪಜೀವ್ಯಉಪಜೀವಕಭಾವವನ್ನು ಸಮರ್ಥಿಸಿ ಒಂದೇ ಅಧಿಕರಣವೆನ್ನಬೇಕೆಂದು ಹೇಳಿದರು. ಇದೂ ಸಹ ತಪ್ಪು. ಏಕೆಂದರೆ 'ಋತಂ ಪಿಬಂತೌ' ಎಂಬುದು 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯದ ಅನಂತರವಿರುವುದರಿಂದ 'ಮಹಾಂತಂ ವಿಭುಂ' ಎಂಬ ಬ್ರಹ್ಮಪ್ರಕರಣಕ್ಕೆ ವಿಚ್ಛೇದಕವೇ ಆಗಿರುವುದಿಲ್ಲ. ಏಕೆಂದರೆ 'ಮಹಾಂತಂ ವಿಭುಂ' ಎಂಬ ವಾಕ್ಯದ ಮತ್ತು 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯದ ಮಧ್ಯದಲ್ಲಿ 'ಋತಂ ಪಿಬಂತೌ' ಎಂಬ ವಾಕ್ಯವು ಇರುವುದಿಲ್ಲವೆಂದು 'ಕಿಂಚ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. 'ಇತ್ಯುಕ್ತನ್ಯಾಯೇನ' ಎಂಬ ಪದಕ್ಕೆ ವಾರ್ತಿಕದಲ್ಲಿ ಹೇಳಲ್ಪಟ್ಟ ನ್ಯಾಯದಿಂದ ಎಂದರ್ಥ.

**प्रकाशः –** तृतीयस्याद्ये पादे ''सन्दिग्धे तु व्यवायाद्वाक्यभेदस्स्यात्'' इति दशमेऽधिकरणे दर्शपूर्णमासप्रकरणे ''उपव्ययते'' इति श्रुतं उपवीतं किं सामिधेन्यङ्गमुत दर्शपूर्णमासाङ्गमिति संशये

पुरस्तादुपरिष्टाच्च सामिधेनीकीर्तनादवान्तरप्रकरणेन सामिधेन्यङ्गमिति प्राप्ते,

''देवेद्धोमन्विद्धः'' इत्यादिभिर्निविद्भिर्व्यवधानात् सामिधेनीप्रकरणस्य विच्छेदान्न तदङ्गम् । नच ''एकविंशतिमनुब्रूयात् प्रतिष्ठाकामस्य'' इत्यादिकाम्यसामिधेनीनां प्रकरणानुवृत्तिः शङ्क्या तासां काम्यसामिधेनीनां स्वातन्त्र्येण प्रकृत्वाभावात्, अतो महाप्रकरणेन दर्शपूर्णमासाङ्गमिति सिद्धान्तितम् ।

ಸಂದಿಗ್ಧೇ ತು ವ್ಯವಾಯಾದ್ವಾಕ್ಯಭೇದಸ್ಯ [१](೩-೧-೧೦)

(१) भाट्टसङ्ग्रहः –

**अथैकादशमुपवीतस्य प्राकरणिकाङ्गताधिकरणम्**

**सन्दिग्धे तु व्यवायाद्वाक्यभेदः स्यात् ॥ २१ ॥**

अत्र पूर्वसिद्धान्तन्यायेन शङ्कानात्सङ्गतिः । दर्शपूर्णमासप्रकरणे 'विश्वरूपो वै त्वाष्ट्रः' इत्यस्मिन् प्रपाठके सप्तमेऽनुवाके 'प्र वो वाजा इत्यन्वाह' इत्यदिसामिधेनीर्विधाय, 'त्रिः

ದರ್ಶಪೂರ್ಣಮಾಸ ಪ್ರಕರಣದಲ್ಲಿ 'ಉಪವ್ಯಯತೇ' ಎಂಬ ವಾಕ್ಯವು ಶ್ರುತವಾಗಿದೆ. ಈ ವಾಕ್ಯದಲ್ಲಿ ವಸ್ತ್ರವನ್ನು ಉಪವೀತಾಕಾರದಲ್ಲಿ ಧರಿಸಬೇಕೆಂದು ಹೇಳಲಾಗಿದೆ. ಈ ರೀತಿಯಾದ ವಸ್ತ್ರದ ಧಾರಣೆಯನ್ನು 'ಸಾಮಿಧೇನೀ' ಎಂಬ 'ಋಕ್' ಮಂತ್ರಗಳನ್ನು ಪಠಿಸುವಾಗ ಮಾಡಬೇಕೋ ಅಥವಾ ಸಂಪೂರ್ಣ ದರ್ಶಪೂರ್ಣಮಾಸಯಾಗದಲ್ಲಿ ಧರಿಸಬೇಕೋ? ಎಂದು ಸಂಶಯ.

ಪೂರ್ವಪಕ್ಷ - 'ತ್ರಿಪ್ರಥಮಮನ್ವಾಹ' ಎಂಬುದಾಗಿ ಹಿಂದಿನ ವಾಕ್ಯದಲ್ಲಿ ಹಾಗೂ ಉಚ್ಚಸ್ವರದಲ್ಲಿ ಹೇಳಬೇಕೆಂಬ ಮುಂದಿನ ವಾಕ್ಯದಲ್ಲಿ 'ಸಾಮಿಧೇನೀ' ಮಂತ್ರದ ಗುಣಗಳೇ ಕೇಳಿಸುತ್ತಿವೆ. ಆದ್ದರಿಂದ ದರ್ಶಪೂರ್ಣಮಾಸಯಾಗವೆಂಬುದು ಮಹಾಪ್ರಕರಣದಲ್ಲಿರುವುದಾದರೂ ಸಾಮಿಧೇನೀ ಋಕ್ ಮಂತ್ರಗಳನ್ನು ಪಠಿಸಬೇಕೆಂದು ಹೇಳುವ ಭಾಗವು ಅವಾಂತರಪ್ರಕರಣವಾಗಿದೆ. 'ಉಪವ್ಯಯತೇ' ಎಂಬ

---

प्रथमामन्वाह, 'त्रिरुत्तमाम्' इति त्रिरनुवचनरूपतद्गुणान् अष्टमे चानुवाके आर्षेयवरणादिगुणांश्च विधाय, नवमे निविन्नामकान् ''अग्ने महाँ असि' 'ब्रह्मण' 'भरत' 'देवेद्धो' 'मन्विद्धः' इत्यादिकान् मन्त्रान् विधाय, दशमे 'एकविंशतिमनुब्रूयात् प्रतिष्ठाकामकस्य' इत्यादिना काम्यसामिधेनीविकल्पान् विधाय, एकादेशेऽनुवाके 'निवीतं मनुष्याणां, प्राचीनावीतं पितॄणां, उपवीतं देवानां, उपव्ययते देवलक्ष्यमेव तत्कुरुते' इत्युपवीतं विधाय, पुनश्च 'अन्तराऽनूच्यँ सदेवत्वाय' इति क्रौञ्चमन्द्रस्वरयोः अन्तरास्वरेणानुवचनं कार्यमित्यादयः सामिधेनीगुणाः श्रूयन्ते । अग्निसमन्धिकत्वात् **सामिधेनीति** ऋङ्नाम् । 'यन्निविद्भिर्न्यवेदयत् तन्निविदां निवित्त्वम्' इति निर्वचनादिध्म-प्रक्षेपसमिद्धाग्निसम्बोधनरूपमन्त्रा **निविद** इत्युच्यन्ते । **उपवीतं** नाम शीतवातातपपीडा-निवृत्त्यर्थत्वेन दृष्टार्थं वासोविन्यासविशेषरूपम् । तत्रोपवीतं किं सामिधेनीनामङ्गमुत दर्शपूर्णमासाङ्गमिति **सन्देहः** । 'त्रि प्रथमाम्' इत्यादिना पूर्वत्र 'अन्तराऽनूच्यँ' इत्यादिनोत्तरत्र च सामिधेनीगुणश्रवणेन पूर्वत्रेव सन्दंशेन सामिधेनीनामवान्तरप्रकरण-कल्पनात्तेन सामिधेन्यङ्गमुपवीतमिति **प्राप्ते, सिद्धान्तः** निविन्नामकमन्त्रविनियोजकेन 'अग्ने महाँ असीत्याह' इत्यादिवाक्येन सामिधेनीप्रकरणस्य विच्छेदान्न तदङ्गत्वं युक्तम् । नच निविदामपि सामिधेन्यङ्गतया न व्यवधायकत्वमिति शङ्क्यम् । निविदां लिङ्गेनाग्न्यङ्गत्वावगमात् । न चैवं निविदङ्गमस्त्विति शङ्क्यम् । उपवीतस्याभितो निविद्धर्माश्रवणेन, तासामवान्तरप्रकरणाभावात् । नच सन्निधानात् काम्यसामिधेनीनामङ्गता शङ्क्या । सन्निधितो दर्शपूर्णमासप्रकरणस्य बलवत्त्वात् । तस्मादिह पूर्वन्यायाभावान्महा-प्रकरणेन दर्शपूर्णमासाङ्गम् । तथा च **सूत्रम्** निदिद्भिः **व्यवायात्** व्यवधानात्' सामिधेनी-प्रकरणानुवर्तने **सन्दिग्धे, वाक्यभेद, स्यात्** । 'उपव्ययत' इत्यस्य सामिधेनीवाक्यैकवाक्यता न स्यादिति । **फलन्तु** सामिधेन्यङ्गत्वदर्शपूर्णमासाङ्गत्वे **पूर्वोत्तरपक्षयोरिति** व्यक्तम् ।

इत्येकादशमुपवीतस्य प्राकरणिकाङ्गताधिकरणम्

ಗುಹಾಧಿಕರಣ (೧-೨-೩)

ಶ್ರುತಿಯು ಅವಾಂತರ ಪ್ರಕರಣದಲ್ಲೇ ಪ್ರಾಪ್ತವಾಗಿದೆ. ಆದ್ದರಿಂದ 'ಸಾಮಿಧೇನೀಋಚ್' ಮಂತ್ರವನ್ನು ಪಠಿಸುವಾಗ ವಸ್ತ್ರವನ್ನು ಉಪವೀತಾಕಾರವಾಗಿ ಧರಿಸಬೇಕು.

ಸಿದ್ಧಾಂತ - ದರ್ಶಪೂರ್ಣಮಾಸಯಾಗವನ್ನು ಆಚರಿಸುವಾಗ ಉಪವೀತಾಕಾರವಾಗಿ ವಸ್ತ್ರವನ್ನು ಧರಿಸಬೇಕಾದ್ದರಿಂದ ಸಾಮಿಧೇನೀಮಂತ್ರಕ್ಕೆ ಇದು ಅಂಗವಾಗುವುದಿಲ್ಲ. ಏಕೆಂದರೆ 'ದೇವೇದ್ಧೋಮನ್ವಿದ್ಧಃ' ಎಂಬುದಾಗಿ 'ನಿವಿನ್ನಾಮಕ' ಮಂತ್ರಗಳು ಮಧ್ಯದಲ್ಲಿ ಪ್ರಾಪ್ತವಾಗಿವೆ. ಅಂದರೆ ಮೊದಲು 'ಸಾಮಿಧೇನೀ' ಮಂತ್ರಗಳ ಬಗ್ಗೆ ಉಲ್ಲೇಖವಿದೆ. ಮಧ್ಯದಲ್ಲಿ 'ನಿವಿನ್ನಾಮಕ' ಮಂತ್ರಗಳ ಬಗ್ಗೆ ಹೇಳುತ್ತಾರೆ. ಕೊನೆಯಲ್ಲಿ 'ಉಪವ್ಯಯತೇ' ಎಂಬ ಮಂತ್ರವು ಪ್ರಾಪ್ತವಾಗಿದೆ. ಮಧ್ಯದಲ್ಲಿರುವ 'ನಿವಿನ್ನಾಮಕ' ಮಂತ್ರದಿಂದ ಮೊದಲು ಪ್ರಾಪ್ತವಾದ 'ಸಾಮಿಧೇನೀ' ಪ್ರಕರಣವು ವಿಚ್ಛೇದವಾಗುತ್ತದೆ. ಆದ್ದರಿಂದ 'ಉಪವ್ಯಯತೇ' ಎಂಬ ಮಂತ್ರವು 'ಸಾಮಿಧೇನೀಗೆ' ಅಂಗವಾಗಲು ಸಾಧ್ಯವಿಲ್ಲ.

'ನಿವಿನ್ನಾಮಕ' ಮಂತ್ರಗಳ ಅನಂತರ ಪುನಃ 'ಏಕವಿಶಂತಿಮನುಭ್ರೂಯಾತ್ ಪ್ರತಿಷ್ಠಾಕಾಮಸ್ಯ'' ಎಂಬುದಾಗಿ 'ಕಾಮ್ಯಸಾಮಿಧೇನೀ' ಮಂತ್ರಗಳ ಬಗ್ಗೆ ಉಲ್ಲೇಖವಿದೆ. ಆದ್ದರಿಂದ ಮಧ್ಯದಲ್ಲಿ 'ನಿವಿನ್ನಾಮಕ' ಮಂತ್ರಗಳು ಪ್ರಾಪ್ತವಾಗಿದ್ದರೂ ಪುನಃ ಸಾಮಿಧೇನೀಪ್ರಕರಣವು ಅನಿಶ್ಚಿತವಾಗಬಹುದಲ್ಲವೇ?

ಹೀಗೆ ಶಂಕಿಸಬಾರದು. ಏಕೆಂದರೆ 'ಕಾಮ್ಯ ಸಾಮಿಧೇನೀ' ಮಂತ್ರಗಳು ಸ್ವತಂತ್ರವಾಗಿ ಪ್ರವೃತ್ತವಾಗದ ಕಾರಣ ಅದರ ಜೊತೆಗೆ 'ಉಪವ್ಯಯತೇ' ಎಂಬ ಮಂತ್ರವು ಸಂಧಾನವಾಗುವುದಿಲ್ಲ. ಹೊರತಾಗಿ ಮಹಾಪ್ರಕರಣವೆನಿಸಿದ ದರ್ಶಪೂರ್ಣಮಾಸಯಾಗಕ್ಕೆ ಮಾತ್ರ ಅಂಗವಾಗುತ್ತದೆ.

**ಪ್ರಕಾಶಃ – तत्र सिद्धान्तवार्तिकमेतत् । 'यतः' यस्मात् 'निविद्भिः' निविन्नामकैः ''देवेद्धोमन्विद्धः'' इत्यादिमन्त्रैर्विच्छिन्नं सामिधेनीनां अग्निसमिन्धनार्थतया सामिधेनीनामिकानामृचां प्रकरणं, तस्मात् प्रकरणं काम्यैस्सामिधेनीकल्पैर्न सामिधेनीकल्पैः पुनस्सन्धानतुं संयोजयितुं शक्यमित्यर्थः ।**

ಗ್ರಂಥದಲ್ಲಿರುವ 'ವಿಚ್ಛಿನ್ನಸಾಮಿಧೇನೀನಾಂ' ಎಂಬ ಶ್ಲೋಕವು ಈ ಅಧಿಕರಣದ ಸಿದ್ಧಾಂತ ಭಾಗದ ವಾರ್ತಿಕದಲ್ಲಿದೆ. ಶ್ಲೋಕಕ್ಕೆ ಹೀಗರ್ಥ -

ಯತಃ = ಯಾವ ಕಾರಣದಿಂದ ನಿವಿದ್ಭಿಃ = ನಿವಿನ್ನಾಮಕವಾದ, 'ದೇವೇದ್ಧೋಮನ್ವಿದ್ಧಃ' ಇತ್ಯಾದಿ ಮಂತ್ರಗಳಿಂದ, ಸಾಮಿಧೇನೀನಾಂ = ಅಗ್ನಿಸಮಿಂಧನಕ್ಕೋಸ್ಕರ ಉಪಯೋಗಿಸುವ ಸಾಮಿಧೇನೀ ಎಂಬ 'ಋಚ್' ಮಂತ್ರಗಳ ಪ್ರಕರಣವು, ವಿಚ್ಛಿನ್ನ = ವಿಚ್ಛಿನ್ನವಾಗಿದೆ, ತಸ್ಮಾತ್ = ಆ ಕಾರಣದಿಂದ, ಪ್ರಕರಣವು ಕಾಮ್ಯೈಃ ಕಲ್ಪೈಃ = ಕಾಮ್ಯವಾದ ಸಾಮಿಧೇನೀಮಂತ್ರಗಳಿಂದ, ಪುನಃ = ಮತ್ತೆ, ಸಂಧಾತುಃ = ಸಂಧಾನ ಹೊಂದಲು, ನಹಿ ಶಕ್ಯತೇ = ಸಮರ್ಥವಾಗುವುದಿಲ್ಲ ಎಂದು.

ಪೂರ್ವಮೀಮಾಂಸೆಯ ಈ ಅಧಿಕರಣದಿಂದ ಮೊದಲು ಪ್ರಾಪ್ತವಾದ 'ಸಾಮಿಧೇನೀ' ಪ್ರಕರಣವು ಒಮ್ಮೆ ವಿಚ್ಛೇದವಾದ ಮೇಲೆ ಪುನಃ ಅದು ಪ್ರಸಕ್ತವಾಗುವುದಿಲ್ಲವೆಂದು ನಿರ್ಣಯವಾಗಿದೆ. ಅದರಂತೆ 'ಮಹಾಂತಂ ವಿಭುಂ' ಎಂಬುದಾಗಿ ಬ್ರಹ್ಮಪ್ರಕರಣವು ಪ್ರಾಪ್ತವಾಗಿರುವುದರಿಂದ 'ಋತಂ ಪಿಬಂತೌ'

ಎಂಬುದರಿಂದ ವಿಚ್ಛೇದವಾಗುವುದಿಲ್ಲ. ಏಕೆಂದರೆ 'ಸಾಮಿಧೇನೀ' ಪ್ರಕರಣಕ್ಕೆ ವಿಚ್ಛೇದಕವಾಗಿ 'ನಿವಿನ್ನಾಮಕ' ಮಂತ್ರಗಳು ಪ್ರಾಪ್ತವಾದಂತೆ ಪ್ರಕೃತದಲ್ಲಿ ಬ್ರಹ್ಮಪ್ರಕರಣಕ್ಕೆ ವಿಚ್ಛೇದಕವಾದ ಯಾವುದೇ ಶ್ರುತಿಗಳಿರುವುದಿಲ್ಲ. ಹೀಗೆ ದೃಷ್ಟಾಂತದಾರ್ಷ್ಟಾಂತಿಕಭಾವವನ್ನು ತಿಳಿಯಬೇಕು.

**प्रकाशः** – ननूक्तमत्र ''यस्य'' इत्येतत् व्यवहितेन ''महान्तं'' इत्यनेन विच्छिन्नं सन्निहितेन ''ऋतं'' इत्यनेनैकवाक्यतामापद्यत इति, तन्न, प्रकरणात् सन्निधेर्दुर्बलत्वादिति भावेन तदाशङ्क्य निराह – न चेत्यादिना ।

**क्रमेणेति । स्थानरूपप्रमाणेनेत्यर्थः । लिङ्गादिति ।**

ಆಕ್ಷೇಪ - 'ಯಸ್ಯ ಬ್ರಹ್ಮ ಚ' ಎಂಬ ಮಂತ್ರವು 'ಋತಂ ಪಿಬಂತೌ' ಎಂಬ ಮಂತ್ರಕ್ಕಿಂತ ಅನಂತರ ಇಲ್ಲದಿರಬಹುದು. ಆದರೂ ಸಹ ಅದರ ಸಾನ್ನಿಧ್ಯವನ್ನು ಹೊಂದಿದ ಕಾರಣ 'ಮಹಾಂತಂ ವಿಭುಂ' ಎಂಬ ಬ್ರಹ್ಮಪ್ರಕರಣಕ್ಕೆ ವಿಚ್ಛೇದಕವಾಗಬಹುದಲ್ಲವೇ?

ಸಮಾಧಾನ - ಪ್ರಕರಣಪ್ರಮಾಣಕ್ಕಿಂತ ಸನ್ನಿಧಿಪ್ರಮಾಣವು ದುರ್ಬಲವಾಗಿದೆ. ಆದ್ದರಿಂದ ನೀವು ಹೇಳಿದ್ದು ತಪ್ಪೆಂಬ ಅಭಿಪ್ರಾಯದಿಂದ 'ನಚ' ಇತ್ಯಾದಿ ವಾಕ್ಯಗಳು ಹೊರಟಿವೆ.

'ಕ್ರಮೇಣ' ಎಂಬ ಪದಕ್ಕೆ ಸ್ಥಾನರೂಪ ಪ್ರಮಾಣದಿಂದ ಎಂದರ್ಥ.

**प्रकाशः** – तृतीयस्य तृतीये ''श्रुतिलिङ्गवाक्यप्रकरणस्थान'' इति बलाबलप्रकरणे दशमेऽधिकरणे राजसूये पश्विष्टिसोमयागाः समप्रधानतया श्रुताः । तत्राभिषेचनीयस्य सोमयागस्य सन्निधौ विदेवनादयः केचन पदार्थाः श्रुताः । ते किमभिषेचनीयस्याङ्गमुत सर्वस्य राजसूयस्येति संशये,

सन्निधिविशेषादभिषेचनीयमात्राङ्गमिति प्राप्ते,
प्रकरणाविशेषात्सर्वराजसूयाङ्गमिति सिद्धान्तितम् ।

ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಸಮವಾಯೇ ಪರದೌರ್ಬಲ್ಯಮರ್ಥವಿಪ್ರಕರ್ಷಾತ್
(೩-೩-೧೦)

ಈ ಅಧಿಕರಣವು ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ ಇವುಗಳಲ್ಲಿ ಯಾವುದು ಪ್ರಬಲ ಯಾವುದು ದುರ್ಬಲವೆಂದು ವಿಚಾರ ಮಾಡುತ್ತಿದೆ. ರಾಜಸೂಯಯಾಗದಲ್ಲಿ 'ಪಶ್ವಿಷ್ಟಿಸೋಮ' ಮೊದಲಾದ ಯಾಗಗಳು ಸಮಾನವಾಗಿ ಕೇಳಿಸುತ್ತಿವೆ. ಇವುಗಳಲ್ಲಿ ಅಭಿಷೇಚನೀಯವೆಂಬ ಸೋಮಯಾಗದ ಸಮೀಪದಲ್ಲಿ 'ವಿದೇವನ' 'ಪಗಡೆಯಾಟ' ಮೊದಲಾದವುಗಳನ್ನು ಹೇಳಲಾಗಿದೆ. ಈ ವಿದೇವನಾದಿ ಕ್ರೀಡೆಗಳು 'ಅಭಿಷೇಚನೀಯ' ಎಂಬ ಯಾಗಕ್ಕೆ ಅಂಗವೋ? ಅಥವಾ ಪ್ರಧಾನವಾದ ರಾಜಸೂಯಯಾಗಕ್ಕೆ ಅಂಗವೋ? ಎಂದು ಸಂಶಯ.

ಪೂರ್ವಪಕ್ಷ - 'ಅಭಿಷೇಚನೀಯ' ಯಾಗದ ಸಮೀಪದಲ್ಲೇ ವಿದೇವನಾದಿಗಳನ್ನು ಹೇಳಿರುವುದರಿಂದ ಕೇವಲ 'ಅಭಿಷೇಚನೀಯ' ಯಾಗಕ್ಕೆ ಅಂಗವಾಗುತ್ತದೆ.

ಸಿದ್ಧಾಂತ - ಪ್ರಕರಣದ ಬಲದಿಂದ 'ವಿದೇವನಾದಿ ಕ್ರೀಡೆಗಳು' ರಾಜಸೂಯಯಾಗದ ಅಂಗವೆಂದೇ ತಿಳಿಯಬೇಕು.

**प्रकाशः** – तथा च ''विंशतिलक्षण्येकं शास्त्रं'' इति वदतस्तव मते तत्रैव प्रकरणात्पाठसन्निधिरूपस्य स्थानस्य दौर्बल्यं सिद्धमिति नात्र तत्प्राबल्यशङ्कोपपद्यत इत्यर्थः ।

''ವಿಂಶತಿಲಕ್ಷಣ್ಯೇಕಂ ಶಾಸ್ತ್ರಂ'' ಎಂದು ಹೇಳುವ ನೀವು ಬ್ರಹ್ಮಮೀಮಾಂಸಾಶಾಸ್ತ್ರದ ಮತ್ತೊಂದು ಅಂಗವನ್ನಾಗಿ ಪೂರ್ವಮೀಮಾಂಸಾಶಾಸ್ತ್ರವನ್ನು ಹೇಳುತ್ತೀರಿ. ಅಂತಹ ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಪ್ರಕರಣಪ್ರಮಾಣಕ್ಕಿಂತ ಸನ್ನಿಧಿಯೆಂಬ ಸ್ಥಾನ ಪ್ರಮಾಣಕ್ಕೆ ದೌರ್ಬಲ್ಯವನ್ನು ಸಾಧಿಸಲಾಗಿದೆ. ಆದ್ದರಿಂದ ಪ್ರಕೃತ ಪ್ರಕರಣಕ್ಕಿಂತ ಸನ್ನಿಧಿಯನ್ನು ಬಲಿಷ್ಠವೆಂದು ನೀವು ಹೇಳಬಾರದು.

**प्रकाशः** – एवं ''यस्य'' इत्यस्य ''ऋतम् इत्यनेन नैकवाक्यता युक्तेत्युक्तम् । इदानीमस्त्वेकवाक्यत्वम् ,

**एवमपि न ब्रह्मप्रकरणविच्छेदशङ्का युक्तेत्याह - सिद्धान्त इति । तच्छेषतयेति । ब्रह्मणः प्राधान्येन प्रतिपादनं जीवस्य ब्रह्मगुणशेषभूततयेत्यर्थः ।**

ಆದ್ದರಿಂದ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವು 'ಋತಂ ಪಿಬಂತೌ' ಎಂಬ ವಾಕ್ಯದ ಜೊತೆಗೆ ಏಕವಾಕ್ಯತ್ವವನ್ನು ಹೊಂದಲು ಸಾಧ್ಯವಿಲ್ಲವೆಂದು ಇಲ್ಲಿಯ ತನಕ ಸಮರ್ಥಿಸಿದ್ದಾಯಿತು. ಪ್ರಕೃತ ಏಕವಾಕ್ಯತ್ವವನ್ನು ಒಪ್ಪೋಣ ಆದರೂ ಸಹ ಬ್ರಹ್ಮಪ್ರಕರಣವು ವಿಚ್ಛೇದವಾಗುತ್ತಿದೆ ಎಂಬ ಶಂಕೆಯು ಅಯುಕ್ತವಾಗಿದೆಯೆಂದು 'ಸಿದ್ಧಾಂತಃ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

'ತತ್‌ಶೇಷತಯಾ' ಎಂಬ ಪದಕ್ಕೆ ಬ್ರಹ್ಮನು ಪ್ರಧಾನವಾಗಿ ಪ್ರತಿಪಾದ್ಯನಾಗಿದ್ದಾನೆ. ಜೀವನು ಬ್ರಹ್ಮನಿಗೆ ಅಂಗಭೂತವಾಗಿ ಪ್ರತಿಪಾದ್ಯನಾಗಿದ್ದಾನೆಂದು ಅರ್ಥ.

**प्रकाशः** – द्युभ्वादिनये त्वदुक्तरीत्यैवेति भावः । प्राधान्येनान्यप्रतिपादन एव प्रकरणविच्छेदः । एवं च प्रकरणविच्छेदशङ्काया अयोगेन तत्समाधानार्थं ''गुहां'' इत्यादिकमयुक्तमित्याशयः ।

ದ್ಯುಭ್ವಾದ್ಯಧಿಕರಣದಲ್ಲಿ ಜೀವನು ಬ್ರಹ್ಮನಿಗೆ ಅಂಗವಾಗಿದ್ದಾನೆಂದು ರಾಮಾನುಜರೇ ಒಪ್ಪಿದ್ದಾರೆಂದು ತಿಳಿಯಬೇಕು. ಪ್ರಧಾನವಾಗಿ ಬೇರೆ ಪದಾರ್ಥವು ಪ್ರತಿಪಾದ್ಯವಾದರೆ ಮಾತ್ರ ಪ್ರಕರಣವು ವಿಚ್ಛೇದವಾಗುತ್ತದೆ. ಆದರೆ ಬ್ರಹ್ಮನಿಗೆ ಅಂಗಭೂತನಾಗಿ ಜೀವನು ಪ್ರತಿಪಾದ್ಯನಾದಾಗ ಬ್ರಹ್ಮಪ್ರಕರಣಕ್ಕೆ ವಿಚ್ಛೇದ ಬರುವುದಿಲ್ಲ.

ಪ್ರಕರಣವು ವಿಚ್ಛೇದವಾಗುತ್ತದೆಂಬ ಶಂಕೆಯೇ ತಪ್ಪಾಗುತ್ತದೆ. ಹೀಗಿರುವಾಗ ಈ ಶಂಕೆಯ ಸಮಾಧಾನಕ್ಕಾಗಿ 'ಗುಹಾಂ ಪ್ರವಿಷ್ಟೌ' ಇತ್ಯಾದಿ ಎರಡು ಸೂತ್ರಗಳು ಉಪಜೀವ್ಯರೂಪವಾಗಿ ಹೊರಟವೆ ಎಂಬ ಸಮಾಧಾನವು ಅಯುಕ್ತವಾಗಿದೆಯೆಂದು ತಿಳಿಯಬೇಕು.

**गुरुराजीयम्** – अस्मन्मत इति वदता एकप्रकरणस्थमेव विषयवाक्यं वदतां परेषामर्थदोष इति ध्वनितम् । ननु यस्य ब्रह्म च क्षत्रं चेत्यस्य वाक्यस्यानन्तर्यरूपेण क्रमेण ऋतमिति वाक्येनैवकवाक्यतेति शङ्का किं न स्यादित्यत आह – **न चेति** ।। ननु लिङ्गेन यस्य ब्रह्मेत्यादेर्ब्रह्मप्रकरणत्वनिश्चयेऽप्यानन्तर्यरूपक्रमस्य दुर्बलत्वानिश्चयेन क्रमप्राबल्यशङ्कया क्रमेण ऋतमिति वाक्यैकवाक्यता शङ्का स्यादेवेत्यत आह – **लिङ्गादिति** ।। विंशल्लक्षणमेकं शास्त्रमति त्वत्सिद्धान्तादिति भावः ।




ರಾಮಾನುಜರು ಅದ್ವೈತಿಗಳಂತೆ ಕಠೋಪನಿಷತ್ತಿನಲ್ಲಿರುವ ವಾಕ್ಯಗಳನ್ನೇ ನಾಲ್ಕೂ ಸೂತ್ರಗಳ ವಿಷಯವಾಕ್ಯವೆನ್ನುತ್ತಾರೆ. ಒಂದೇ ಪ್ರಕರಣದಲ್ಲಿರುವ ವಿಷಯವಾಕ್ಯದ ಸಮನ್ವಯಕ್ಕಾಗಿ ಎರಡು ಅಧಿಕರಣವು ಅನಾವಶ್ಯಕವೆಂಬ ದೋಷವು ಅದ್ವೈತಿಗಳಿಗೆ ಬರುತ್ತದೆ ಹೊರತು ನಮಗೆ ಬರುವುದಿಲ್ಲ. ಏಕೆಂದರೆ ಹಿಂದಿನ ಅಧಿಕರಣಕ್ಕೆ ಬೃಹದಾರಣ್ಯಕವು ವಿಷಯವಾಗಿದೆ. ಈ ಅಧಿಕರಣಕ್ಕೆ 'ಋತಂ ಪಿಬಂತೌ' ಎಂಬುದು ಕಾಠಕದ ವಿಷಯವಾಗಿದೆ ಎಂಬುದು ನಮ್ಮ ಸಿದ್ಧಾಂತ.

ಈ ಅಧಿಕರಣದಲ್ಲಿ ವಿಚಾರ ಮಾಡುವ 'ಋತಂ ಪಿಬಂತೌ' ಎಂಬ ವಾಕ್ಯವನ್ನು ಉಪಜೀವಿಸಿಕೊಂಡು ಹಿಂದಿನ ಅಧಿಕರಣದ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯವು ಬ್ರಹ್ಮಪರವಾಗುತ್ತದೆಂಬುದು ರಾಮಾನುಜರ ವಾದ. ಆದರೆ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವು 'ಋತಂ ಪಿಬಂತೌ' ಎಂಬ ವಾಕ್ಯಕ್ಕಿಂತ ಮೊದಲೇ ಪ್ರಸಕ್ತವಾಗಿರುವುದರಿಂದ 'ಮಹಾಂತಂ ವಿಭುಂ' ಇತ್ಯಾದಿ ಹಿಂದಿನ ವಾಕ್ಯದ ಬಲದಿಂದ ಬ್ರಹ್ಮಪರವೆಂದು ಮೊದಲೇ ನಿರ್ಣಯವಾಗಿದೆ. ಹೀಗಿರುವಾಗ ಮುಂದಿರುವ 'ಋತಂ ಪಿಬಂತೌ' ಎಂಬ ವಾಕ್ಯದ ಬಲದಿಂದ ಬ್ರಹ್ಮಪ್ರಕರಣವಾಗುವುದಿಲ್ಲವೆಂಬ ಶಂಕೆಯೇ ತಪ್ಪಾಗುತ್ತದೆ. ಸಾನ್ನಿಧ್ಯ ಪ್ರಮಾಣದಿಂದ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವು ಬ್ರಹ್ಮಪ್ರಕರಣಕ್ಕೆ ವಿಚ್ಛೇದವಾಗಬಹುದಲ್ಲವೇ ಎಂಬುದು ಅವರ ಆಕ್ಷೇಪ.

ಆದರೆ ಪರಮಪ್ರಮಾಣವೆಂದು ಅವರೇ ಒಪ್ಪಿಕೊಂಡಿರುವ ಪೂರ್ವಮೀಮಾಂಸೆಯಲ್ಲಿ ಸಾನ್ನಿಧ್ಯ ಪ್ರಮಾಣಕ್ಕಿಂತ ಪ್ರಕರಣ ಪ್ರಮಾಣವು ಬಲಿಷ್ಠವೆಂದು ನಿರ್ಣಯಿಸಲಾಗಿದೆ.

ಯಾವ ಕಾರಣದಿಂದ 'ಸಾಮಿಧೇನೀ' ಪ್ರಕರಣವು 'ನಿವಿನ್ನಾಮಕ' ಮಂತ್ರಗಳಿಂದ ವಿಚ್ಛೇದವಾಗುತ್ತದೋ? ಆ ಕಾರಣದಿಂದಲೇ ಪುನಃ 'ಕಾಮ್ಯಸಾಮಿಧೇನೀ' ಮಂತ್ರಗಳಿಂದ.

'ಉಪವೀಯತೇ' ಎಂಬ ಮಂತ್ರವು ಸಂಧಾನ ಹೊಂದಲು ಸಮರ್ಥವಾಗುವುದಿಲ್ಲ. ಹೀಗೆ ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದಂತೆ ಮೊದಲೇ ಪ್ರಾಪ್ತವಾದ ಬ್ರಹ್ಮಪ್ರಕರಣಕ್ಕೆ 'ಋತಂ ಪಿಬಂತೌ' ಎಂಬ ವಾಕ್ಯವು ವಿಚ್ಛೇದಕವಾಗುವುದಿಲ್ಲ. ಆದ್ದರಿಂದ 'ಋತಂ ಪಿಬಂತೌ' ಎಂಬ ಶ್ರುತಿಯು 'ಯಸ್ಯ ಬ್ರಹ್ಮ ಚ' ಎಂಬ ಶ್ರುತಿಗೆ ಉಪಜೀವ್ಯವಾಗಿದೆಯೆಂದು ಯಾವುದೇ ಕಾರಣದಿಂದಲೂ ಹೇಳಲಾಗದು.



## ಒಂದೇ ಪ್ರಕರಣದಲ್ಲಿರುವಿಕೆಯು ಐಕಾಧಿಕರಣ್ಯಕ್ಕೆ ತಂತ್ರವಲ್ಲ

**तात्पर्यचन्द्रिका**

**किञ्च – यथाऽदृश्यत्वाद्यधिकरणद्युभ्वाद्यधिकरणयोरेकप्रकरणस्थवाक्यविषयत्वे उपजीव्योपजीवकभावे च सत्यपि भेदः, तथाऽत्र किं न स्यात् । अस्ति हि तत्राप्युपजीव्योपजीवकभावः, "यस्मिन् द्यौः" इत्यादिकस्योत्तरवाक्यस्य परमात्मपरत्वाभावे पूर्वस्य "यत्तदद्रेश्यमग्राह्यम्" इत्याद्यदृश्यत्वादिवाक्यस्य तत्परत्वासिद्धेः ।**

**अथ अदृश्यत्वाद्यधिकरणद्युभ्वाद्यधिकरणयोर्वैश्वानराधिकरण- व्यवहितत्वात् भिन्नपादनिवेशाच्च नैकाधिकरणतेति चेत्, न, ऐकाधिकरण्ययोग्ययो-र्व्यवधानादेरेव अयुक्तत्वात् ।**

**नन्वस्पष्टजीवादिलिङ्गकत्वाददृश्यत्वाद्यधिकरणं द्वितीये स्पष्टजीवादिलिङ्गकत्वात् द्युभ्वाद्यधिकरणं तृतीये निवेशितमिति चेत्, न,**

**अत्राप्यत्तृत्वस्य द्वितीयस्थत्वात् अस्पष्टजीवलिङ्गत्वेन, ऋतशब्दवाच्यकर्मफल-भोक्तृत्वस्य स्पष्टजीवलिङ्गत्वेन भिन्नपादनिवेशापातात् ।**

ಅನುವಾದ - ಮತ್ತು ಇದೇ ಪಾದದಲ್ಲಿರುವ ಅದೃಶ್ಯತ್ವಾಧಿಕರಣದ ವಿಷಯವಾಕ್ಯವು ಮುಂದಿನ ಪಾದದಲ್ಲಿರುವ 'ದ್ಯುಭ್ವಾದ್ಯಧಿಕರಣದ' ವಿಷಯವಾಕ್ಯವು 'ಮಾಂಡೋಕ್ಯೋಪನಿಷತ್ತು' ಎಂಬ ಒಂದೇ ಪ್ರಕರಣದಲ್ಲಿದೆ. ಮತ್ತು ಆ ಎರಡು ವಿಷಯವಾಕ್ಯಗಳಿಗೆ ಪರಸ್ಪರ ಉಪಜೀವ್ಯೋಪ-ಜೀವಕಭಾವ್ಯವೂ ಸಹ ಇದೆ. ಆದರೂ ಸಹ ಸೂತ್ರಕಾರರು ಬೇರೆ ಬೇರೆ ಅಧಿಕರಣಗಳನ್ನಾಗಿ ಪರಿಗಣಿಸಿದ್ದಾರೆ. ರಾಮಾನುಜರ ಪ್ರಕಾರ ಇದು ತಪ್ಪಾಗಬೇಕಾದೀತು. ಆ ಎರಡು ವಿಷಯವಾಕ್ಯಗಳಿಗೆ

ಉಪಜೀವ್ಯೋಪ- ಜೀವಕಭಾವವು ಸ್ಪಷ್ಟವಾಗಿ ಕಾಣಿಸುತ್ತಿದೆ. ಏಕೆಂದರೆ ''ಯಸ್ಮಿನ್ ದ್ಯೌಃ'' ಎಂಬ ಮುಂದಿನ ವಾಕ್ಯವು ಪರಮಾತ್ಮ ಪರವಾಗದಿದ್ದರೆ 'ಋತ್ತದದ್ರೇಶ್ಯಂ' ಎಂಬ ವಾಕ್ಯವೂ ಸಹ ಪರಮಾತ್ಮ ಪರವಾಗುವುದಿಲ್ಲ.

ಶಂಕೆ - ಅದೃಶ್ಯತ್ವಾಧಿಕರಣ ಹಾಗೂ ದ್ಯುಭ್ವಾದ್ಯಧಿಕರಣಗಳ ಮಧ್ಯದಲ್ಲಿ ವೈಶ್ವಾನರಾಧಿಕರಣದ ವ್ಯವಧಾನವಿದೆ. ಮತ್ತು ದ್ಯುಭ್ವಾದ್ಯಧಿಕರಣವು ಬೇರೆ ಪಾದದಲ್ಲಿರುವುದರಿಂದ ಪಾದದ ವ್ಯವಧಾನವೂ ಇದೆ. ಹಾಗಾಗಿ ಈ ಎರಡು ಅಧಿಕರಣಗಳಿಗೆ ಐಕ್ಯವನ್ನು ಹೇಗೆ ಆಪಾದಿಸುತ್ತೀರಿ?

ಸಮಾಧಾನ - ಹೀಗೆ ಶಂಕಿಸಬಾರದು. ಎರಡೂ ಸಹ ಒಂದೇ ಅಧಿಕರಣಗಳಾದರೂ ಯೋಗ್ಯವಾಗಿರುವಾಗ ಅಧಿಕರಣದ ಹಾಗೂ ಪಾದದ ವ್ಯವಧಾನವೇ ತಪ್ಪೆಂದು ನಮ್ಮ ಆಕ್ಷೇಪದ ಅಭಿಪ್ರಾಯ.

ಶಂಕೆ - ಅದೃಶ್ಯತ್ವಾಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಲಿಂಗಗಳು ಜೀವನಲ್ಲಿ ಅಸ್ಪಷ್ಟವಾಗಿವೆ. ಆದರೆ ಮೂರನೇ ಪಾದದ ದ್ಯುಭ್ವಾದ್ಯಧಿಕರಣದಲ್ಲಿ ಸ್ಪಷ್ಟವಾದ ಜೀವಲಿಂಗಗಳನ್ನು ಸಮನ್ವಯ ಮಾಡಲಾಗಿದೆ. ಸ್ಪಷ್ಟವಾದ ಜೀವಲಿಂಗಗಳನ್ನು ಮೂರನೆಯ ಪಾದದಲ್ಲಿಯೇ ಸಮನ್ವಯ ಮಾಡಬೇಕಾದ್ದರಿಂದ ಐಕಾಧಿಕರಣ್ಯವನ್ನು ಹೇಗೆ ಆಪಾದಿಸುತ್ತೀರಿ ?

ಸಮಾಧಾನ - ಹಾಗಾದರೆ ಅತ್ತೃತ್ವವನ್ನು ಎರಡನೆಯ ಪಾದದಲ್ಲಿ ಸಮನ್ವಯ ಮಾಡುತ್ತಿರುವುದರಿಂದ ಅಸ್ಪಷ್ಟವಾದ ಜೀವಲಿಂಗವೇ ಆಗಿದೆ. 'ಗುಹಾಂ ಪ್ರವಿಷ್ಟೌ' ಎಂಬ ಸೂತ್ರದಲ್ಲಿ ಸಮನ್ವಯ ಮಾಡುತ್ತಿರುವ 'ಋತ' ಶಬ್ದ ವಾಚ್ಯವಾದ ಕರ್ಮಫಲ ಭೋಕ್ತೃತ್ವವು ಸ್ಪಷ್ಟವಾದ ಜೀವಲಿಂಗವಾಗಿದೆ. ಆದ್ದರಿಂದ ಈ ಎರಡು ಸೂತ್ರಗಳನ್ನು ಮೂರನೇ ಪಾದದಲ್ಲಿಯೇ ನಿವೇಶ ಮಾಡ ಬೇಕಾದೀತು.

**प्रकाशः –**

यत्त्वेकप्रकरणस्थवाक्यविशेषविषयत्वादैकाधिकरण्यमिति, तदपि नेत्याह – किञ्चेति ।

ವಿವರಣೆ - ಹಿಂದೆ ರಾಮಾನುಜರು ಒಂದೇ ಪ್ರಕರಣದಲ್ಲಿರುವ ಬೇರೆ ಬೇರೆ ವಾಕ್ಯಗಳನ್ನು ಸಮನ್ವಯ ಮಾಡುತ್ತಿರುವುದರಿಂದ ನಾಲ್ಕೂ ಸೂತ್ರಗಳಿಗೂ ಐಕಾಧಿಕರಣ್ಯವನ್ನು ಹೇಳಬೇಕೆಂದು ಉಪಪಾದಿಸಿದ್ದರು. ಅದನ್ನು ಪ್ರಕೃತ 'ಕಿಂಚ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ.

**प्रकाशः – ननु कथं उपजीव्योपजीवकभावः । ''नहि यस्मिन् द्यौः पृथिवी इत्यादिवाक्यस्य परमात्मपरत्वमदृश्यत्वादिगुणकस्याक्षरात्परतः परस्य परमात्मत्वोपपादकम् । परप्रकरणेऽपि तच्छेषत्वेन प्रधानादिप्रतिपादनोपपत्ते'' रित्युपजीव्योपजीवकभावाभावस्य श्रुतप्रकाश एवोक्तेरित्यतोऽत्रेव तत्रापि पूर्वपक्षे तद्भावमाह – यस्मिन्निति ।**

ಆಕ್ಷೇಪ - 'ಯಸ್ಮಿನ್ ದ್ಯೌಃ ಯತ್ತದದ್ರೇಶ್ಯಂ' ಎಂಬ ವಾಕ್ಯಕ್ಕೂ ಪರಸ್ಪರ ಉಪಜೀವ್ಯೋಪ-ಜೀವಕಭಾವವು ಇರುತ್ತದೆಂದು ಹೇಗೆ ಹೇಳಿದಿರಿ? ಏಕೆಂದರೆ 'ಯಸ್ಮಿನ್ ದ್ಯೌಃ ಪೃಥಿವೀ' ಪೃಥಿವ್ಯಾದಿಗಳನ್ನು ಪ್ರತಿಪಾದಿಸುವ 'ಯಸ್ಮಿನ್' ಎಂಬ ವಾಕ್ಯವು ಪರಮಾತ್ಮಪರವಾಗಿದೆ. ಅದೃಶ್ಯತ್ವಾದಿ ಗುಣವುಳ್ಳ ಅಕ್ಷರತತ್ತ್ವಕ್ಕಿಂತ ಶ್ರೇಷ್ಠನಾದ ಪರಮಾತ್ಮನೇ ಆ ಪ್ರಕರಣದಲ್ಲಿ ಪ್ರತಿಪಾದ್ಯನಾಗಿದ್ದಾನೆ. ಹೀಗೆ ಪರಮಾತ್ಮ ಪ್ರಕರಣದಲ್ಲಿ ಪ್ರಸಕ್ತವಾಗಿರುವ ಪ್ರಧಾನಾದಿಗಳನ್ನು ಪ್ರತಿಪಾದಿಸುವ ವಾಕ್ಯಕ್ಕೆ ಪ್ರಧಾನವು ಪರಮಾತ್ಮನಿಗೆ ಅಂಗಭೂತವಾಗಿದೆಯೆಂದು ವ್ಯಾಖ್ಯಾನಿಸಬೇಕು. ಹೀಗಿರುವಾಗ ಪರಸ್ಪರವಾಗಿ ಉಪಜೀವ್ಯೋಪ-ಜೀವಕಭಾವವನ್ನು ಹೇಳಲು ಸಾಧ್ಯವಿಲ್ಲವೆಂದು ಶ್ರುತಪ್ರಕಾಶದಲ್ಲಿ ಹೇಳಿದೆಯಲ್ಲವೇ?

ಸಮಾಧಾನ - ಪ್ರಕೃತ ಗುಹಾಧಿಕರಣದಲ್ಲಿ ಹೇಳುತ್ತಿರುವಂತೆ ಅಲ್ಲಿಯೂ ಸಹ ನಿಮ್ಮ ಪ್ರಕಾರ ಉಪಜೀವ್ಯಉಪಜೀವಕಭಾವವನ್ನು ಹೇಳಬಹುದು. ಈ ಅಭಿಪ್ರಾಯದಿಂದ 'ಯಸ್ಮಿನ್ ದ್ಯೌಃ' ಎಂಬ ವಾಕ್ಯವು ಹೊರಟಿದೆ.

**प्रकाशः – अत्र यथा ''ऋतं'' इत्यस्याब्रह्मपरत्वे तत्पूर्वस्य ''यस्य'' इत्यस्यापि तथात्वं, तद्वत्तत्रापि सम्भवादविशेषात् ।**

**नन्वदृश्यत्वादिकं नान्यस्य शङ्कार्हमिति चेन्न ।**

ಈ ಅಧಿಕರಣದಲ್ಲಿ ಯಾವರೀತಿಯಾಗಿ 'ಋತಂ ಪಿಬಂತೌ' ಎಂಬ ವಾಕ್ಯವು ಬ್ರಹ್ಮಪರವಾಗದಿದ್ದರೆ ಅದರ ಹಿಂದಿರುವ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವೂ ಸಹ ಬ್ರಹ್ಮಪರವಾಗಲು ಸಾಧ್ಯವಿಲ್ಲವೋ? ಅದರಂತೆ ದ್ಯುಭ್ವಾದ್ಯಧಿಕರಣದ ವಿಷಯವಾಕ್ಯವೆನಿಸಿದ 'ಯಸ್ಮಿನ್ ದ್ಯೌಃ' ಎಂಬ ವಾಕ್ಯವು ಬ್ರಹ್ಮಪರವಾಗದಿದ್ದರೆ ಅದೃಶ್ಯತ್ವಾಧಿಕರಣದ ವಿಷಯವಾಕ್ಯವೆನಿಸಿದ 'ಯತ್ತ ತದ್ರೇಶ್ಯಂ' ಎಂಬ ವಾಕ್ಯವೂ ಸಹ ಬ್ರಹ್ಮಪರವಾಗುವುದಿಲ್ಲ. ಎಂದು ಹೇಳಬಹುದು. ಇಲ್ಲಿ ಹೇಳುತ್ತಿರುವ ವಾಕ್ಯಗಳಿಗೂ ಅಲ್ಲಿರುವ ವಿಷಯವಾಕ್ಯಗಳಿಗೂ ಏನೂ ವ್ಯತ್ಯಾಸವಿಲ್ಲ.

ಆಕ್ಷೇಪ - ಅದೃಶ್ಯತ್ವಾದಿಗಳು ಕೇವಲ ಬ್ರಹ್ಮನ ಧರ್ಮಗಳಾಗಿವೆ. ಜೀವನಲ್ಲಿ ಇವುಗಳನ್ನು ಶಂಕಿಸಲೂ ಸಹ ಸಾಧ್ಯವಿಲ್ಲ. ಆದ್ದರಿಂದ 'ಯಸ್ಮಿನ್ ದ್ಯೌಃ' ಎಂಬ ವಾಕ್ಯವು ಜೀವಪರವಾದರೆ 'ಯತ್ತದದ್ರೇಶ್ಯಂ' ಎಂಬುದೂ ಸಹ ಜೀವಪರವಾಗುತ್ತದೆಂದು ಹೇಗೆ ಶಂಕಿಸುತ್ತೀರಿ?

**प्रकाशः** – द्युभ्वाद्यायतनत्वं जीवस्य शङ्कमानेनादृश्यत्वादेरपि शङ्कितुं शक्यत्वात् । ''सर्वत्र प्रसिद्ध'' इत्यत्रैकवाक्यत्वसिद्धये ''मनोमयः'' इत्यादेरुत्तरवाक्यस्य जीवविषयत्वे ''सर्वं खल्विदं ब्रह्म'' इत्यादिपूर्ववाक्यमपि जीवविषयमिति त्वयैवोक्तत्वात् ।

पूर्वस्य परमात्मपरत्वासिद्धिप्रकारस्य तत्रैवास्मदीयपूर्वपक्षे स्पष्टयिष्यमाणत्वाच्चेति भावः ।

ಸಮಾಧಾನ - ಯಾವ ವ್ಯಕ್ತಿಯು ಜೀವನಲ್ಲಿ ದ್ಯುಭ್ವಾದ್ಯಾಯನತ್ವವನ್ನು ಶಂಕಿಸುತ್ತಾನೋ ಅಂತಹವನು ಅದೃಶ್ಯತ್ವಾದಿಗಳನ್ನು ಶಂಕಿಸುವುದರಲ್ಲಿ ತಪ್ಪಿಲ್ಲ. ಏಕೆಂದರೆ ಅದೃಶ್ಯತ್ವಧರ್ಮವು ಹೇಗೆ ಬೇರೆಯವರಲ್ಲಿ ಅಸಂಭಾವಿತವೋ, ಅದರಂತೆ ಪೃಥ್ವೀ ಮೊದಲಾದ ಪದಾರ್ಥಗಳಿಗೆ ಆಶ್ರಯವಾಗಿರುವಿಕೆಯೂ ಸಹ ಬೇರೆಯವಲ್ಲಿ ಅಸಂಭಾವಿತವಾಗಿದೆ.

'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿ ಏಕವಾಕ್ಯತ್ವದ ಸಿದ್ಧಿಗೋಸ್ಕರ 'ಮನೋಮಯಃ' ಎಂಬ ಮುಂದಿನ ವಾಕ್ಯವು ಜೀವವಿಷಯಕವಾದರೆ ಸರ್ವಾತ್ಮಕತ್ವವನ್ನು ಹೇಳುವ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವಾಕ್ಯವೂ ಸಹ ಜೀವವಿಷಯಕವೇ ಆಗುತ್ತದೆಂದು ನೀವೇ ಪೂರ್ವಪಕ್ಷದಲ್ಲಿ ಹೇಳಿದ್ದೀರಿ. ಹೀಗೆ ಸರ್ವಾತ್ಮಕತ್ವವನ್ನು ಜೀವನಲ್ಲಿ ಆಕ್ಷೇಪಿಸುವ ನಿಮಗೆ ಅದೃಶ್ಯತ್ವಾದಿಗಳನ್ನು ಆಕ್ಷೇಪಿಸುವುದು ಕಷ್ಟವೇ ಅಲ್ಲ.

'ಯತ್ತದದ್ರೇಶ್ಯಂ' ಎಂಬ ವಾಕ್ಯವು ನಮ್ಮ ಸಿದ್ಧಾಂತದ ಪ್ರಕಾರ ಪರಮಾತ್ಮಪರವಾಗುವುದಿಲ್ಲ. ಪ್ರಧಾನಾದಿಗಳನ್ನು ಪ್ರತಿಪಾದಿಸುತ್ತದೆಂದು ಪೂರ್ವಪಕ್ಷ ಮಾಡುತ್ತೇವೆ. ಇದು ಪ್ರಧಾನದಲ್ಲಿ ಶಂಕಿಸಲು ಹೇಗೆ ಯೋಗ್ಯವಾಗಿದೆಯೆಂಬ ವಿಚಾರವನ್ನು ಆ ಅಧಿಕರಣದ ಪೂರ್ವಪಕ್ಷದಲ್ಲಿಯೇ ಸ್ಪಷ್ಟಪಡಿಸುತ್ತೇವೆ.

**प्रकाशः** – तदुक्तमेवाधिकरणभेदनियामकमाशङ्क्य निराह – **अथेति । व्यवधानादेरिति** । भिन्नपादनिवेश आदिपदार्थः ।

नन्वेवं सिद्धान्तेऽपि ''पादान्त्यप्राणनय'' ''सर्वत्र'' इति नययोर्भिन्नपादनिवेशायोग इति चेन्न, पररीत्या परस्यापादनात् । न ह्येतत्परोक्तमुपजीव्यत्वादिकं अधिकरणैक्ये बीजमिति सम्प्रतिपन्नं, किन्त्वप्रयोजकमित्यत्रैव तात्पर्यात् । स्पष्टमेतदग्रे ।

ರಾಮಾನುಜರೇ ಹೇಳಿರುವ ಅಧಿಕರಣ ಭೇದಕ್ಕೆ ನಿಯಾಮಕವನ್ನು ಆಶಂಕಿಸಿ ನಿರಾಕರಿಸುತ್ತಿದ್ದಾರೆ 'ಅಥ' ಇತ್ಯಾದಿ ವಾಕ್ಯದಿಂದ. 'ವ್ಯವಧಾನಾದೇಃ' ಎಂಬ ಆದಿಪದದಿಂದ ಬೇರೆ ಪಾದದಲ್ಲಿ ನಿವೇಶ ಮಾಡುವುದನ್ನು ವಿವಕ್ಷಿಸಬೇಕು.

ಗುಹಾಧಿಕರಣ (೧-೨-೩)

**प्रकाशः** – ननु कथं उपजीव्योपजीवकभावः । ''नहि यस्मिन् द्यौः पृथिवी इत्यादिवाक्यस्य परमात्मपरत्वमदृश्यत्वादिगुणकस्याक्षरात्परतः परस्य परमात्मत्वोपपादकम् । परप्रकरणेऽपि तच्छेषत्वेन प्रधानादिप्रतिपादनोपपत्ते'' रित्युपजीव्योपजीवकभावाभावस्य श्रुतप्रकाश एवोक्तेरित्यतोऽत्रैव तत्रापि पूर्वपक्षे तद्भावमाह – **यस्मिन्निति** ।

ಆಕ್ಷೇಪ - 'ಯಸ್ಮಿನ್ ದ್ಯೌಃ ಯತ್ತದದ್ರೇಶ್ಯಂ' ಎಂಬ ವಾಕ್ಯಕ್ಕೂ ಪರಸ್ಪರ ಉಪಜೀವ್ಯೋಪ-ಜೀವಕಭಾವವು ಇರುತ್ತದೆಂದು ಹೇಗೆ ಹೇಳಿದಿರಿ? ಏಕೆಂದರೆ 'ಯಸ್ಮಿನ್ ದ್ಯೌಃ ಪೃಥಿವೀ' ಪೃಥಿವ್ಯಾದಿಗಳನ್ನು ಪ್ರತಿಪಾದಿಸುವ 'ಯಸ್ಮಿನ್' ಎಂಬ ವಾಕ್ಯವು ಪರಮಾತ್ಮಪರವಾಗಿದೆ. ಅದೃಶ್ಯತ್ವಾದಿ ಗುಣವುಳ್ಳ ಅಕ್ಷರತತ್ತ್ವಕ್ಕಿಂತ ಶ್ರೇಷ್ಠನಾದ ಪರಮಾತ್ಮನೇ ಆ ಪ್ರಕರಣದಲ್ಲಿ ಪ್ರತಿಪಾದ್ಯನಾಗಿದ್ದಾನೆ. ಹೀಗೆ ಪರಮಾತ್ಮ ಪ್ರಕರಣದಲ್ಲಿ ಪ್ರಸಕ್ತವಾಗಿರುವ ಪ್ರಧಾನಾದಿಗಳನ್ನು ಪ್ರತಿಪಾದಿಸುವ ವಾಕ್ಯಕ್ಕೆ ಪ್ರಧಾನವು ಪರಮಾತ್ಮನಿಗೆ ಅಂಗಭೂತವಾಗಿದೆಯೆಂದು ವ್ಯಾಖ್ಯಾನಿಸಬೇಕು. ಹೀಗಿರುವಾಗ ಪರಸ್ಪರವಾಗಿ ಉಪಜೀವ್ಯೋಪ-ಜೀವಕಭಾವವನ್ನು ಹೇಳಲು ಸಾಧ್ಯವಿಲ್ಲವೆಂದು ಶ್ರುತಪ್ರಕಾಶದಲ್ಲಿ ಹೇಳಿದೆಯಲ್ಲವೇ?

ಸಮಾಧಾನ - ಪ್ರಕೃತ ಗುಹಾಧಿಕರಣದಲ್ಲಿ ಹೇಳುತ್ತಿರುವಂತೆ ಅಲ್ಲಿಯೂ ಸಹ ನಿಮ್ಮ ಪ್ರಕಾರ ಉಪಜೀವ್ಯಉಪಜೀವಕಭಾವವನ್ನು ಹೇಳಬಹುದು. ಈ ಅಭಿಪ್ರಾಯದಿಂದ 'ಯಸ್ಮಿನ್ ದ್ಯೌಃ' ಎಂಬ ವಾಕ್ಯವು ಹೊರಟಿದೆ.

**प्रकाशः** – अत्र यथा ''ऋतं'' इत्यस्याब्रह्मपरत्वे तत्पूर्वस्य ''यस्य'' इत्यस्यापि तथात्वं, तद्वत्तत्रापि सम्भवादविशेषात् ।

नन्वदृश्यत्वादिकं नान्यस्य शङ्कार्हमिति चेन्न ।

ಈ ಅಧಿಕರಣದಲ್ಲಿ ಯಾವರೀತಿಯಾಗಿ 'ಋತಂ ಪಿಬಂತೌ' ಎಂಬ ವಾಕ್ಯವು ಬ್ರಹ್ಮಪರವಾಗದಿದ್ದರೆ ಅದರ ಹಿಂದಿರುವ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವೂ ಸಹ ಬ್ರಹ್ಮಪರವಾಗಲು ಸಾಧ್ಯವಿಲ್ಲವೋ? ಅದರಂತೆ ದ್ಯುಭ್ವಾದ್ಯಧಿಕರಣದ ವಿಷಯವಾಕ್ಯವೆನಿಸಿದ 'ಯಸ್ಮಿನ್ ದ್ಯೌಃ' ಎಂಬ ವಾಕ್ಯವು ಬ್ರಹ್ಮಪರವಾಗದಿದ್ದರೆ ಅದೃಶ್ಯತ್ವಾಧಿಕರಣದ ವಿಷಯವಾಕ್ಯವೆನಿಸಿದ 'ಯತ್ತ ತದ್ರೇಶ್ಯಂ' ಎಂಬ ವಾಕ್ಯವೂ ಸಹ ಬ್ರಹ್ಮಪರವಾಗುವುದಿಲ್ಲ. ಎಂದು ಹೇಳಬಹುದು. ಇಲ್ಲಿ ಹೇಳುತ್ತಿರುವ ವಾಕ್ಯಗಳಿಗೂ ಅಲ್ಲಿರುವ ವಿಷಯವಾಕ್ಯಗಳಿಗೂ ಏನೂ ವ್ಯತ್ಯಾಸವಿಲ್ಲ.

ಆಕ್ಷೇಪ - ಅದೃಶ್ಯತ್ವಾದಿಗಳು ಕೇವಲ ಬ್ರಹ್ಮನ ಧರ್ಮಗಳಾಗಿವೆ. ಜೀವನಲ್ಲಿ ಇವುಗಳನ್ನು ಶಂಕಿಸಲೂ ಸಹ ಸಾಧ್ಯವಿಲ್ಲ. ಆದ್ದರಿಂದ 'ಯಸ್ಮಿನ್ ದ್ಯೌಃ' ಎಂಬ ವಾಕ್ಯವು ಜೀವಪರವಾದರೆ 'ಯತ್ತದದ್ರೇಶ್ಯಂ' ಎಂಬುದೂ ಸಹ ಜೀವಪರವಾಗುತ್ತದೆಂದು ಹೇಗೆ ಶಂಕಿಸುತ್ತೀರಿ?

**प्रकाशः** – द्युभ्वाद्यायतनत्वं जीवस्य शङ्कमानेनादृश्यत्वादेरपि शङ्कितुं शक्यत्वात् । ''सर्वत्र प्रसिद्ध'' इत्यत्रैकवाक्यत्वसिद्धये ''मनोमयः'' इत्यादेरुत्तरवाक्यस्य जीवविषयत्वे ''सर्वं खल्विदं ब्रह्म'' इत्यादिपूर्ववाक्यमपि जीवविषयमिति त्वयैवोक्तत्वात् ।

पूर्वस्य परमात्मपरत्वासिद्धिप्रकारस्य तत्रैवास्मदीयपूर्वपक्षे स्पष्टयिष्यमाणत्वाच्चेति भावः ।

ಸಮಾಧಾನ - ಯಾವ ವ್ಯಕ್ತಿಯು ಜೀವನಲ್ಲಿ ದ್ಯುಭ್ವಾದ್ಯಾಯನತ್ವವನ್ನು ಶಂಕಿಸುತ್ತಾನೋ ಅಂತಹವನು ಅದೃಶ್ಯತ್ವಾದಿಗಳನ್ನು ಶಂಕಿಸುವುದರಲ್ಲಿ ತಪ್ಪಿಲ್ಲ. ಏಕೆಂದರೆ ಅದೃಶ್ಯತ್ವಧರ್ಮವು ಹೇಗೆ ಬೇರೆಯವರಲ್ಲಿ ಅಸಂಭಾವಿತವೋ, ಅದರಂತೆ ಪೃಥ್ವೀ ಮೊದಲಾದ ಪದಾರ್ಥಗಳಿಗೆ ಆಶ್ರಯವಾಗಿರುವಿಕೆಯೂ ಸಹ ಬೇರೆಯವಲ್ಲಿ ಅಸಂಭಾವಿತವಾಗಿದೆ.

'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿ ಏಕವಾಕ್ಯತ್ವದ ಸಿದ್ಧಿಗೋಸ್ಕರ 'ಮನೋಮಯಃ' ಎಂಬ ಮುಂದಿನ ವಾಕ್ಯವು ಜೀವವಿಷಯಕವಾದರೆ ಸರ್ವಾತ್ಮಕತ್ವವನ್ನು ಹೇಳುವ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವಾಕ್ಯವೂ ಸಹ ಜೀವವಿಷಯಕವೇ ಆಗುತ್ತದೆಂದು ನೀವೇ ಪೂರ್ವಪಕ್ಷದಲ್ಲಿ ಹೇಳಿದ್ದೀರಿ. ಹೀಗೆ ಸರ್ವಾತ್ಮಕತ್ವವನ್ನು ಜೀವನಲ್ಲಿ ಆಕ್ಷೇಪಿಸುವ ನಿಮಗೆ ಅದೃಶ್ಯತ್ವಾದಿಗಳನ್ನು ಆಕ್ಷೇಪಿಸುವುದು ಕಷ್ಟವೇ ಅಲ್ಲ.

'ಯತ್ತದದ್ರೇಶ್ಯಂ' ಎಂಬ ವಾಕ್ಯವು ನಮ್ಮ ಸಿದ್ಧಾಂತದ ಪ್ರಕಾರ ಪರಮಾತ್ಮಪರವಾಗುವುದಿಲ್ಲ. ಪ್ರಧಾನಾದಿಗಳನ್ನು ಪ್ರತಿಪಾದಿಸುತ್ತದೆಂದು ಪೂರ್ವಪಕ್ಷ ಮಾಡುತ್ತೇವೆ. ಇದು ಪ್ರಧಾನದಲ್ಲಿ ಶಂಕಿಸಲು ಹೇಗೆ ಯೋಗ್ಯವಾಗಿದೆಯೆಂಬ ವಿಚಾರವನ್ನು ಆ ಅಧಿಕರಣದ ಪೂರ್ವಪಕ್ಷದಲ್ಲಿಯೇ ಸ್ಪಷ್ಟಪಡಿಸುತ್ತೇವೆ.

**प्रकाशः** – तदुक्तमेवाधिकरणभेदनियामकमाशङ्क्य निराह – **अथेति** । **व्यवधानादेरिति** । भिन्नपादनिवेश आदिपदार्थः ।

नन्वेवं सिद्धान्तेऽपि ''पादान्त्यप्राणनय'' ''सर्वत्र'' इति नययोर्भिन्नपादनिवेशायोग इति चेन्न, परीत्या परस्यापादनात् । न ह्येतत्परोक्तमुपजीव्यत्वादिकं अधिकरणैक्ये बीजमिति सम्प्रतिपन्नं, किन्त्वप्रयोजकमित्यत्रैव तात्पर्यात् । स्पष्टमेतदग्रे ।

ರಾಮಾನುಜರೇ ಹೇಳಿರುವ ಅಧಿಕರಣ ಭೇದಕ್ಕೆ ನಿಯಾಮಕವನ್ನು ಆಶಂಕಿಸಿ ನಿರಾಕರಿಸುತ್ತಿದ್ದಾರೆ 'ಅಥ' ಇತ್ಯಾದಿ ವಾಕ್ಯದಿಂದ. 'ವ್ಯವಧಾನಾದೇಃ' ಎಂಬ ಆದಿಪದದಿಂದ ಬೇರೆ ಪಾದದಲ್ಲಿ ನಿವೇಶ ಮಾಡುವುದನ್ನು ವಿವಕ್ಷಿಸಬೇಕು.

## ಗುಹಾಧಿಕರಣ (೧-೨-೩)

ಪ್ರಶ್ನೆ - ನಿಮ್ಮ ಸಿದ್ಧಾಂತದಲ್ಲಿಯೂ ಪಾದಾಂತ್ಯ ಪ್ರಾಣಾಧಿಕರಣದ ಹಾಗೂ ಸರ್ವಗತತ್ವಾಧಿಕರಣದ ವಿಷಯವಾಕ್ಯಗಳು ಒಂದೇ ಪ್ರಕರಣದಲ್ಲಿರುವುದರಿಂದ ಬೇರೆ ಪಾದದಲ್ಲಿ ನಿವೇಶಿಸಿದ್ದು ತಪ್ಪಲ್ಲವೇ?

ಉತ್ತರ - ರಾಮಾನುಜರ ಸಿದ್ಧಾಂತವನ್ನು ಅವಲಂಬಿಸಿ ರಾಮಾನುಜರನ್ನು ಆಕ್ಷೇಪಿಸುತ್ತಿದ್ದೇವೆಯೇ ಹೊರತು ನಮ್ಮ ಸಿದ್ಧಾಂತವನ್ನು ಅನುಸರಿಸಿ ರಾಮಾನುಜರನ್ನು ಆಕ್ಷೇಪಿಸುತ್ತಿಲ್ಲ. ಏಕೆಂದರೆ ರಾಮಾನುಜರು ಹೇಳುವಂತೆ ಪರಸ್ಪರ ಉಪಜೀವ್ಯಉಪಜೀವಕಭಾವ ಮೊದಲಾದವುಗಳು ಐಕಾಧಿಕರಣ್ಯಕ್ಕೆ ಪ್ರಯೋಜಕವೆಂದು ನಾವು ಹೇಳುವುದಿಲ್ಲ. ಹೊರತಾಗಿ ಅವರು ಹೇಳುವ ಕಾರಣಗಳು ಅಪ್ರಯೋಜಕಗಳೆಂದು ಸಮರ್ಥಿಸುವುದರಲ್ಲೇ ನಮ್ಮ ತಾತ್ಪರ್ಯ. ಈ ವಿಷಯವು ಮುಂದೆ ಸ್ಪಷ್ಟವಾಗುತ್ತದೆ.

**प्रकाशः** – ''किञ्च'' इत्यादिना । स्पष्टास्पष्टलिङ्गकवाक्यविषयत्वेनैकस्मिन् पादे सङ्गत्यनुपपत्तेरिति श्रुतप्रकाशोक्तमेवाशङ्कते – नन्विति ।

ಸ್ಪಷ್ಟಲಿಂಗಕವಾದ ಮತ್ತು ಅಸ್ಪಷ್ಟಲಿಂಗಕವಾದ ವಾಕ್ಯಗಳಿಗೆ ಒಂದೇ ಪಾದದಲ್ಲಿ ಸಂಗತಿಯು ಅನುಪಪನ್ನವಾಗುತ್ತದೆಂದು ಶ್ರುತಪ್ರಕಾಶದಲ್ಲಿ ಹೇಳಲಾಗಿದೆ. ಅದನ್ನೇ ಪ್ರಕೃತ 'ನನು' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ.




ಇದೇ ಪಾದದಲ್ಲಿರುವ ಅದೃಶ್ಯತ್ವಾಧಿಕರಣದ ವಿಷಯವಾಕ್ಯವು ಮುಂದಿನ ಪಾದದಲ್ಲಿರುವ ದ್ಯುಭ್ವಾದ್ಯಧಿಕರಣದ ವಿಷಯವಾಕ್ಯವು 'ಮಾಂಡೋಕ್ಯೋಪನಿಷತ್' ಎಂಬ ಒಂದೇ ಪ್ರಕರಣದಲ್ಲಿದೆ. ಮತ್ತು ಆ ಎರಡು ವಿಷಯವಾಕ್ಯಗಳಿಗೆ ಪರಸ್ಪರ ಉಪಜೀವ್ಯಜೀವಕಭಾವವೂ ಸಹ ಇದೆ. ಆದರೂ ಸಹ ಸೂತ್ರಕಾರರು ಬೇರೆ ಬೇರೆ ಅಧಿಕರಣಗಳನ್ನಾಗಿ ಪರಿಗಣಿಸಿದ್ದಾರೆ. ಅದರಂತೆ ಪ್ರಕೃತದಲ್ಲಿಯೂ ವಿಷಯವಾಕ್ಯಗಳು ಒಂದೇ ಪ್ರಕರಣದಲ್ಲಿದ್ದರೂ ವಿಭಿನ್ನವಾಗಿರುವುದರಿಂದ ಅಧಿಕರಣಗಳೂ ಸಹ ಪ್ರತ್ಯೇಕವೇ ಆಗುತ್ತವೆ.



• • • • •

## ಒಂದು ವಾಕ್ಯವೇ ಅನೇಕ ಅಧಿಕರಣಗಳಿಗೆ ವಿಷಯವಾಗಬಹುದು

### तात्पर्यचन्द्रिका

किञ्च – औदुम्बराधिकरणेऽपि ''यस्य पर्णमयी जुहूर्भवति न स पापꣳश्लोकꣳ शृणोति'' इति वाक्यमुदाहरणम् । पर्णमय्यधिकरणेऽपि ''औदुम्बरो यूपो भवति ऊर्ग्वा उदुम्बरः ऊर्क् पशवः ऊर्जैवास्मा ऊर्जं पशूनाप्नोति'' इति वाक्यमुदाहरणम् ।

नच पौनरुक्त्यम्, औदुम्बराधिकरणे वाक्यद्वयगतः साधनप्रतिपादकः पूर्वभाग उदाहरणम्, पर्णमय्यधिकरणे तु साध्यप्रतिपादकः उत्तराभागः उदाहरणमिति वार्तिक एवोक्तम् ।

एवञ्च यथा तयोः पूर्वोत्तरभागविषयत्वे उपजीव्योपजीवकभावे च सत्यपि भेदः, तथाऽत्र किं न स्यात् ।

नहि पर्णमय्यधिकरणोक्तेन "न स पापꣳ श्लोकꣳ शृणोति" इत्यादेः कामपदोपबन्धरहितत्वात् न साध्यसमर्पकत्वमित्यनेन विना औदुम्बराधिकरणोक्तस्य "पर्णमयी जुहूर्भवति" इत्यादेः विधिविभक्तिरहितत्वात् । न साधनसमर्पकत्व-मित्येतत्सिध्यति, साध्यस्य साधनं विनाऽयोगेन अपापश्लोकश्रवणादेः साध्यत्वे पर्णमयीत्वादेः बलात् साधनत्वापातात् ।

एवञ्च अस्माकं मतेऽपि "प्राणस्तथा" इत्यस्य, "सर्वत्र" इत्यस्य च एकप्रकरणस्थवाक्यविषयत्वं उपजीव्योपजीवकभावे च सत्यपि भिन्नाधिकरणता सिद्धा । "तद्धेतुव्यपदेशाच्च" इत्यादौ समन्वेतव्यान्तराभावादिनैकाधिकरणतेति दिक् ॥

ಅನುವಾದ - ಪೂರ್ವಮೀಮಾಂಸೆಯಲ್ಲಿ ಒಂದೇ ವಾಕ್ಯವನ್ನು ಎರಡು ಅಧಿಕರಣದಲ್ಲಿ ವಿಚಾರ ಮಾಡಲಾಗಿದೆ - ಔದುಂಬರಾಧಿಕರಣದಲ್ಲಿ "ಔದುಂಬರೋ ಯೂಪೋ ಭವತಿ" ಎಂಬುದು ವಿಷಯವಾಕ್ಯ. ಆದರೂ ಸಹ "ಯಸ್ಯ ಪರ್ಣಮಯೀ ಜುಹೂರ್ಭವತಿ ನ ಸ ಪಾಪಂ ಶ್ಲೋಕಂ ಶೃಣೋತಿ" ಎಂಬ ವಾಕ್ಯವನ್ನೂ ಸಹ ವಿಚಾರ ಮಾಡಲಾಗಿದೆ. ಇದರಂತೆ ಪರ್ಣಮಯ್ಯಧಿಕರಣದಲ್ಲಿ 'ಯಸ್ಯ ಪರ್ಣಮಯೀ ಜುಹೂರ್ಭವತಿ' ಎಂಬುದು ವಿಷಯವಾಕ್ಯ. ಆದರೂ ಸಹ "ಔದುಂಬರೋ ಯೂಪೋ ಭವತಿ ಊರ್ಗ್ವಾ ಉದುಂಬರಃ ಊರ್ಕ್ ಪಶವಃ ಊರ್ಜೈವಾಸ್ಮಾ ಊರ್ಜಂ ಪಶೂನಾಪ್ನೋತಿ" ಎಂಬ ವಾಕ್ಯವನ್ನೂ ಸಹ ವಿಚಾರ ಮಾಡಲಾಗಿದೆ.

ಒಂದೇ ವಾಕ್ಯವನ್ನು ಎರಡು ಅಧಿಕರಣಗಳಲ್ಲಿ ವಿಚಾರ ಮಾಡಿದಾಗ ಪುನರುಕ್ತಿ ಬರುತ್ತದಲ್ಲವೇ? ಎಂದು ಶಂಕಿಸಬಾರದು. ಔದುಂಬರಾಧಿಕರಣದಲ್ಲಿ ಎರಡು ವಿಷಯವಾಕ್ಯಗಳಲ್ಲಿರುವ ಸಾಧನ-ಪ್ರತಿಪಾದಕವಾದ ಪೂರ್ವಭಾಗವನ್ನಷ್ಟೇ ಉದಾಹರಿಸಲಾಗಿದೆ. 'ಯಸ್ಯ ಪರ್ಣಮಯೀ ಜುಹೂರ್ಭವತಿ' ಎಂಬ ಭಾಗವನ್ನು ಮತ್ತು 'ಔದುಂಬರೋ ಯೂಪೋ ಭವತಿ' ಎಂಬ ಭಾಗವನ್ನಷ್ಟೇ

ವಿಚಾರ ಮಾಡಲಾಗಿದೆ. ಪರ್ಣಮಯ್ಯಧಿಕರಣದಲ್ಲಾದರೂ ಸಾಧ್ಯಪ್ರತಿಪಾದಕವಾದ ಉತ್ತರಭಾಗವನ್ನು ಉದಾಹರಿಸಲಾಗಿದೆ. ಅಂದರೆ "ನ ಸ ಪಾಪಂ ಶ್ಲೋಕಂ ಶೃಣೋತಿ" 'ಊರ್ಜ್ವಾಸ್ಮಾ ಊರ್ಜಂ ಪಶೂನಾಪ್ನೋತಿ' ಎಂಬ ಫಲಪ್ರತಿಪಾದಕವಾದ ವಾಕ್ಯವನ್ನು ವಿಚಾರ ಮಾಡಲಾಗಿದೆ. ಈ ವಿಚಾರವನ್ನೆಲ್ಲಾ ವಾರ್ತಿಕ ಗ್ರಂಥದಲ್ಲಿ ನಿರೂಪಿಸಲಾಗಿದೆ. ಆದ್ದರಿಂದ ಒಂದೇ ವಾಕ್ಯದಲ್ಲಿರುವ ಹಿಂದಿನ ಮುಂದಿನ ಭಾಗಗಳು ವಿಷಯವಾಗಿದ್ದು ಪರಸ್ಪರ ಉಪಜೀವ್ಯೋಪಜೀವಕಭಾವವಿದ್ದರೂ ಸಹ ಅಧಿಕರಣಭೇದವನ್ನು ಪೂರ್ವಮೀಮಾಂಸಕರು ಹೇಗೆ ಒಪ್ಪಿದ್ದಾರೋ ಅದರಂತೆ ಕಾಠಕೋಪನಿಷತ್ತಿನ ಮಂತ್ರಗಳನ್ನು ಎರಡು ಅಧಿಕರಣಗಳಲ್ಲಿ ಏಕೆ ವಿಚಾರ ಮಾಡಬಾರದು?

ಪೂರ್ವಮೀಮಾಂಸೆಯ ಎರಡು ಅಧಿಕರಣಗಳಿಗೆ ಉಪಜೀವ್ಯೋಪಜೀವಕಭಾವವಿಲ್ಲವೆಂದು ತಿಳಿಯಬಾರದು. ಏಕೆಂದರೆ ಪರ್ಣಮಯ್ಯಧಿಕರಣದಲ್ಲಿ ವಿಚಾರ ಮಾಡುತ್ತಿರುವ 'ನ ಸ ಪಾಪಂ ಶ್ಲೋಕಂ ಶೃಣೋತಿ' ಎಂಬಲ್ಲಿ ಕಾಮಪದದ ಉಲ್ಲೇಖವಿಲ್ಲದ ಕಾರಣ ಸಾಧ್ಯಸಮರ್ಪಕವಾಗುವುದಿಲ್ಲ. ಈ ವಾಕ್ಯವು ಸಾಧ್ಯಸಮರ್ಪಕವಾಗದಿದ್ದರೆ ಔದುಂಬರಾಧಿಕರಣದಲ್ಲಿ ವಿಚಾರ ಮಾಡಲ್ಪಟ್ಟ 'ಯಸ್ಯ ಪರ್ಣಮಯೀ ಜುಹೂರ್ಭವತಿ' ಎಂಬಲ್ಲಿ ವಿಧಿಪ್ರತ್ಯಯವೆನಿಸಿದ ಲಿಂಜಾದಿಗಳಿಲ್ಲದ ಕಾರಣ ಸಾಧನ ಸಮರ್ಪಕವಾಗುವುದಿಲ್ಲ. ಆದ್ದರಿಂದಲೇ ಇದು ಸಾಧನವೆನಿಸುವುದಿಲ್ಲ. ಹೀಗೆ ಸಾಧ್ಯವು ಸಾಧನವನ್ನು ಬಿಟ್ಟು ಇರಲಾರದು. ಅಪಾಪಶ್ಲೋಕಶ್ರವಣಾದಿಗಳು ಸಾಧ್ಯವೆಂದು ನಿರ್ಣಯವಾದರೆ ಮಾತ್ರ ಪರ್ಣಮಯತ್ವಾದಿಗಳು ಸಾಧನವೆನಿಸುತ್ತವೆ. ಹೀಗೆ ಪರಸ್ಪರ ಉಪಜೀವ್ಯೋಪಜೀವಕಭಾವವಿದ್ದರೂ ಸಹ ಅಧಿಕರಣಗಳಿಗೆ ಭೇದವನ್ನು ಮೀಮಾಂಸಕರು ಒಪ್ಪಿದ್ದಾರೆ.

ಇದರಂತೆ ನಮ್ಮ ಮತದಲ್ಲಿಯೂ ಸಹ ಅಂತಿಮಪ್ರಾಣಾಧಿಕರಣದ ವಿಷಯವಾಕ್ಯ ಹಾಗೂ ಸರ್ವಗತತ್ವಾಧಿಕರಣದ ವಿಷಯವಾಕ್ಯ ಒಂದೇ ಪ್ರಕರಣದಲ್ಲಿದ್ದರೂ ಮತ್ತು ಅವುಗಳಿಗೆ ಪರಸ್ಪರ ಉಪಜೀವ್ಯೋಪಜೀವಕಭಾವಿದ್ದರೂ ಸಹ ಬೇರೆ ಬೇರೆ ಅಧಿಕರಣಗಳೆಂದು ಒಪ್ಪಬಹುದು. ಆನಂದಮಯಾಧಿಕರಣದಲ್ಲಿರುವ 'ತದ್ದೇತುವ್ಯಪದೇಶಾಚ್ಚ' ಎಂಬ ಸೂತ್ರವು ಹೊಸದಾಗಿ ಏನನ್ನೂ ಸಮನ್ವಯ ಮಾಡದ ಕಾರಣ ಈ ಎಲ್ಲಾ ವಿಚಾರಗಳು ಕೇವಲ ದಿಕ್‌ಪ್ರದರ್ಶನ.

**प्रकाशः –**

**ननु "प्राणस्तथा" इत्यादावपि भेदो न स्यादित्यतो नैकप्रकरणगत-वाक्यत्वमधिकरणैक्यप्रयोजकं यथैकवाक्यविषयत्वेऽपि पूर्वोत्तरभागविषयत्वेन भेदस्तथैहैकप्रकरणेऽपि पूर्वोत्तरवाक्यविशेषविषयत्वेन भेदस्स्यादित्याह – किञ्चेति ।**

ವಿವರಣೆ - ಆಕ್ಷೇಪ - ಅಂತಿಮಪ್ರಾಣಾಧಿಕರಣಕ್ಕೂ ಸರ್ವಗತತ್ವಾಧಿಕರಣಕ್ಕೂ ಭೇದವನ್ನು ದ್ವೈತಿಗಳು ಹೇಳುತ್ತಾರೆ. ಆದರೆ ಎರಡು ವಿಷಯವಾಕ್ಯಗಳು ಒಂದೇ ಪ್ರಕರಣದಲ್ಲಿರುವುದರಿಂದ ಆ ಎರಡು ಅಧಿಕರಣಗಳಿಗೆ ಭೇದವು ಇರಬಾರದಲ್ಲವೇ?

ಸಮಾಧಾನ - ಇದು ತಪ್ಪು. ಏಕಾಧಿಕರಣ್ಯಕ್ಕೆ ಒಂದೇ ಪ್ರಕರಣದಲ್ಲಿರುವ ವಾಕ್ಯವನ್ನು ವಿಚಾರ ಮಾಡುವಿಕೆಯು ಪ್ರಯೋಜಕವಲ್ಲ. ಏಕೆಂದರೆ ಪೂರ್ವಮೀಮಾಂಸೆಯಲ್ಲಿ ಒಂದೇ ವಾಕ್ಯವು ವಿಷಯವಾಗಿದ್ದರೂ ಆ ವಾಕ್ಯದ ಹಿಂದಿನ ಮುಂದಿನ ಭಾಗಗಳನ್ನು ವಿಚಾರ ಮಾಡುವ ಪ್ರಯುಕ್ತ ಅಧಿಕರಣಭೇದವನ್ನು ಒಪ್ಪಲಾಗಿದೆ. ಅದರಂತೆ ಪ್ರಕೃತದಲ್ಲಿಯೂ ಒಂದೇ ಪ್ರಕರಣದಲ್ಲಿರುವ ಬೇರೆ ಬೇರೆ ವಾಕ್ಯಗಳನ್ನು ವಿಚಾರ ಮಾಡಲು ಹೊರಟಿರುವುದರಿಂದ ಅತ್ತೃತ್ವಾಧಿಕರಣಕ್ಕೂ ಗುಹಾಧಿಕರಣಕ್ಕೂ ಭೇದವು ಬರಬೇಕಾದೀತೆಂದು 'ಕಿಂಚ' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः** – द्वे अप्यधिकरणे प्राक् पादान्त्यप्राणाधिकरणे प्रपञ्चिते ।

ननु ''विधिर्वा स्यादपूर्वत्वाद्वादमात्रं ह्यनर्थकं'' इत्याद्याध्यायस्थद्वितीयपादीय औदुम्बराधिकरणे ''औदुम्बरो यूपो भवति'' इत्यादिवाक्यमुदाहृतम् शाबरभाष्ये । ''द्रव्यसंस्कारकर्मसु परार्थत्वात्फलश्रुतिरर्थवादः'' इति चतुर्थपादीयपर्णमय्यधिकरणे ''यस्य पर्णमयी जुहूः'' इति । तथा चैकवाक्यविषयत्वं नेत्यतः, इदं तत्र तच्चात्रेत्युभयमुभयत्रोदाहरणमिति तन्त्रवार्तिकोक्तमेवाह – **औदुम्बराधिकरणेऽपीति** ।

ಔದುಂಬರಾಧಿಕರಣವನ್ನು ಮತ್ತು ಪರ್ಣಮಯ್ಯಧಿಕರಣವನ್ನು ಹಿಂದೆ ಅಂತಿಮಪ್ರಾಣಾಧಿಕರಣದಲ್ಲಿ ವಿವರಿಸಿದ್ದಾಗಿದೆ.

ಆಕ್ಷೇಪ - ಗ್ರಂಥಕಾರರು ಹೇಳಿದ್ದು ಸರಿಯಲ್ಲ "ವಿಧಿರ್ವಾ ಸ್ಯಾದಪೂರ್ವತ್ವಾದ್ವಾದಮಾತ್ರಂ ಹ್ಯನರ್ಥಕಂ'' ಎಂಬ ಮೊದಲನೇ ಅಧ್ಯಾಯದಲ್ಲಿ ಎರಡನೇ ಪಾದಕ್ಕೆ ಬರುವ ಔದುಂಬರಾಧಿಕರಣದಲ್ಲಿ "ಔದುಂಬರೋ ಯೂಪೋ ಭವತಿ'' ಎಂಬ ವಾಕ್ಯವನ್ನು ಉದಾಹರಿಸಲಾಗಿದೆ. ಮತ್ತು ಶಾಬರ ಭಾಷ್ಯದಲ್ಲಿ "ದ್ರವ್ಯಸಂಸ್ಕಾರಕರ್ಮಸು ಪರಾರ್ಥತ್ವಾತ್ಫಲಶ್ರುತಿರರ್ಥವಾದಃ'' ಎಂಬ ನಾಲ್ಕನೆಯ ಅಧ್ಯಾಯದ ಮೂರನೇ ಪಾದದ ಪರ್ಣಮಯ್ಯಧಿಕರಣದಲ್ಲಿ "ಯಸ್ಯ ಪರ್ಣಮಯೀ ಜುಹೂಃ'' ಎಂಬುದನ್ನು ವಿಷಯವಾಕ್ಯವೆಂದು ಹೇಳಲಾಗಿದೆ. ಹೀಗಿರುವಾಗ ಎರಡೂ ಅಧಿಕರಣಗಳಿಗೆ ಎರಡೂ ವಾಕ್ಯಗಳು ವಿಷಯವಾಗಿವೆಯೆಂದು ಹೇಗೆ ಹೇಳುತ್ತೀರಿ?

ಸಮಾಧಾನ - ತಂತ್ರವಾರ್ತಿಕದಲ್ಲಿ "ಇದಂ ತತ್ರ ತಚ್ಚಾತ್ರೇತ್ಯುಭಯಮುಭಯೋತ್ರೋದಾಹರಣಂ'' ಎಂಬುದಾಗಿ ಎರಡೂ ಅಧಿಕರಣಗಳಿಗೆ ಎರಡನ್ನೂ ವಿಷಯವಾಕ್ಯವೆಂದು ಸ್ಪಷ್ಟವಾಗಿ ಹೇಳಲಾಗಿದೆ. ಅದನ್ನೇ 'ಔದುಂಬರಾಧಿಕರಣೇಪಿ' ಎಂದು ಸಮರ್ಥಿಸುತ್ತಿದ್ದಾರೆ.

**प्रकाशः** – न केवलं पर्णमय्यधिकरण इत्यपेरर्थः । एवमग्रेऽपि ।

**साधनेति** । ''औदुम्बरो यूपो भवति'' ''पर्णमयी जुहूर्भवति'' इत्यंशः । 'वार्तिके' औदुम्बराधिकरणवार्तिके । ''एकस्यैव न्यायस्य कश्चित्कश्चिदंशः परिशोध्यत इति पुनरारम्भः'' इत्यादिनेत्यर्थः ।

'ಔದುಂಬರಾಧಿಕರಣೇಪಿ' ಎಂಬಲ್ಲಿರುವ 'ಅಪಿ' ಶಬ್ದಕ್ಕೆ 'ಕೇವಲ ಪರ್ಣಮಯ್ಯಧಿಕರಣದಲ್ಲಷ್ಟೇ ಅಲ್ಲ' ಎಂಬರ್ಥವನ್ನು ತಿಳಿಯಬೇಕು. ಇದರಂತೆ 'ಪರ್ಣಮಯ್ಯಧಿಕರಣೇಪಿ' ಎಂಬಲ್ಲಿರುವ 'ಅಪಿ' ಶಬ್ದದಿಂದ ಔದುಂಬರಾಧಿಕರಣದಲ್ಲಷ್ಟೇ ಅಲ್ಲ ಎಂದು ತಿಳಿಯಬೇಕು.

'ಸಾಧನಪ್ರತಿಪಾದಕಃ' ಎಂದರೆ "ಔದುಂಬರೋ ಯೂಪೋ ಭವತಿ" "ಪರ್ಣಮಯೀ ಜುಹೂರ್ಭವತಿ" ಎಂಬ ಯಜ್ಞಸಾಧನವನ್ನು ಪ್ರತಿಪಾದಿಸುವ ಅಂಶವು ಎಂದರ್ಥ. 'ವಾರ್ತಿಕೇ' ಎಂಬ ಪದಕ್ಕೆ ಔದುಂಬರಾಧಿಕರಣದ 'ವಾರ್ತಿಕ' ಗ್ರಂಥದಲ್ಲಿ ಎಂದರ್ಥ. "ಏಕಸ್ಯೈವ ನ್ಯಾಯಸ್ಯ ಕ್ವಚಿತ್ಕಶ್ಚಿದಂಶಃ" ಒಂದೇ ನ್ಯಾಯವಾಗಿದ್ದರೂ ಒಂದು ಭಾಗದ ಪರಿಶೋಧನೆಯನ್ನಷ್ಟೇ ಮಾಡಿದ್ದರಿಂದ ಮತ್ತೊಂದು ಅಧಿಕರಣವು ಹೊರಟಿದೆ. ಇತ್ಯಾದಿಯಾಗಿ ವಾರ್ತಿಕದಲ್ಲಿ ಹೇಳಲಾಗಿದೆ.

**प्रकाशः** – अस्तु ततः किमित्यत आह – **एवञ्चेति** । नात्रोपजीव्यत्वाद्यस्ति, साधनपरत्वबोधकविधिप्रत्ययस्येवेह विधेरभावादेव पूर्वभागस्य साधनपरत्वाभाव-बोधनासम्भवेन तद्बोधायोत्तरभागस्य साध्यपरत्वाभावस्यानुपजीव्यत्वादित्यतः, ।

ಒಂದೇ ವಿಷಯವಾಕ್ಯವನ್ನು ಪೂರ್ವಮೀಮಾಂಸೆಯಲ್ಲಿ ಎರಡು ಅಧಿಕರಣಗಳಿಂದ ವಿಚಾರ ಮಾಡಿದ್ದಾರೆಂದು ತಿಳಿದಿದ್ದಾಯಿತು. ಮುಂದೇನು ? ಎಂಬ ಪ್ರಶ್ನೆಗೆ 'ಏವಂಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಆಕ್ಷೇಪ - ನೀವು ಉದಾಹರಿಸಿದ ಪೂರ್ವಮೀಮಾಂಸಾಧಿಕರಣದ ವಿಷಯವಾಕ್ಯಗಳಿಗೆ ಉಪಜೀವ್ಯೋಪಜೀವಕಭಾವವೇ ಇರುವುದಿಲ್ಲ. ಏಕೆಂದರೆ ಸಾಧನ ಪರತ್ವವನ್ನು ತಿಳಿಸುವ ವಿಧಿಪ್ರತ್ಯಯವು 'ಜುಹೂರ್ಭವತಿ' ಎಂಬಲ್ಲಿ ಕಾಣಿಸುತ್ತಿಲ್ಲ. ಆದ್ದರಿಂದ ಪೂರ್ವವಾಕ್ಯವನ್ನು ಸಾಧನಪರವೆಂದು ಹೇಳಲಾಗದು. ಹೀಗೆಯೇ ಸಾಧನಪರತ್ವಾಭಾವವನ್ನು ತಿಳಿಯಲು ಬರುವಾಗ 'ನ ಸ ಪಾಪಂ ಶ್ಲೋಕಂ ಶೃಣೋತಿ' ಎಂಬ ಮುಂದಿನ ಭಾಗವು ಸಾಧ್ಯಪರವಾಗಿರುವುದಿಲ್ಲ ಎಂಬುದಾಗಿ ತಿಳಿಯುವ ಅವಶ್ಯಕತೆ ಇಲ್ಲ. ಅಂದರೆ ಮುಂದಿನ ವಾಕ್ಯವು ಸಾಧ್ಯಪರವಲ್ಲದ ಕಾರಣ ಹಿಂದಿನ ವಾಕ್ಯವು ಸಾಧನಪರವಲ್ಲ ಎಂದು ಹೇಳಿದ್ದಲ್ಲಿ ಉಪಜೀವ್ಯೋಪಜೀವಕಭಾವವನ್ನು ತಿಳಿಯಬಹುದಿತ್ತು. ಆದರೆ ವಿಧಿಪ್ರತ್ಯಯವಿಲ್ಲದ ಕಾರಣದಿಂದಲೇ ಹಿಂದಿನ ವಾಕ್ಯವು ಸಾಧನಪರವಲ್ಲವೆಂದು ತಿಳಿಯುತ್ತಿದೆ.

**प्रकाशः** – तदुपपादयति – **नहीति** । पूर्वभागस्य साधनपरत्वं न विधिप्रत्ययबलात्कल्प्यते, तदभावात्, किन्तूत्तरभागस्य साध्यपरत्वमुपजीव्येव, साध्यस्य साधनापेक्षत्वात् । एवञ्च तस्य "पशुकामः" इत्यादाविव कामपदरहितत्वादिना पर्णमय्यधिकरणन्यायेन साध्यपरत्वाभावसिद्धेः पूर्वभागस्यापि साधनपरत्वाभावः सिध्यतीति सिद्धान्ते उपजीव्योपजीवकभाव इत्यर्थः ।

ಪರಿಪೂರ್ಣಚಂದ್ರಿಕಾ

ಸಮಾಧಾನ - ಈ ಆಕ್ಷೇಪಕ್ಕೆ 'ನಹಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಹಿಂದಿನ ಭಾಗವು ಸಾಧನಪರವಾಗಿದೆಯೆಂದು ವಿಧಿಪ್ರತ್ಯಯದ ಬಲದಿಂದ ನಾವು ಕಲ್ಪಿಸುತ್ತಿಲ್ಲ. ಏಕೆಂದರೆ ಇಲ್ಲಿ ವಿಧಿಪ್ರತ್ಯಯವೇ ಕಾಣಿಸುತ್ತಿಲ್ಲ. ಹೊರತಾಗಿ ಮುಂದಿನ ಭಾಗವು ಸಾಧ್ಯಸಮರ್ಪಕವಾಗಿದೆ. ಅದನ್ನು ಉಪಜೀವಿಸಿ ಹಿಂದಿನ ವಾಕ್ಯವು ಸಾಧನಸಮರ್ಪಕವಾಗಿದೆಯೆಂದು ಹೇಳುತ್ತಿದ್ದೇವೆ. ಏಕೆಂದರೆ ಸಾಧ್ಯಕ್ಕೆ ಸಾಧನವು ಅಪೇಕ್ಷಿತವಾಗಿರುವುದರಿಂದ. ಆದ್ದರಿಂದ "ಪಶುಕಾಮಃ" ಎಂಬಲ್ಲಿ ಕಾಮಪದವಿದ್ದಂತೆ ಪ್ರಕೃತ ವಿಷಯವಾಕ್ಯದಲ್ಲಿ ಕಾಮಪದವು ಕೇಳಿಸುತ್ತಿಲ್ಲ. ಆದ್ದರಿಂದ ಪರ್ಣಮಯ್ಯಧಿಕರಣದ ನ್ಯಾಯದಿಂದ 'ನ ಸ ಪಾಪಂ ಶ್ಲೋಕಂ ಶೃಣೋತಿ' ಎಂಬುದು ಸಾಧ್ಯಪರವಾಗುವುದಿಲ್ಲವೆಂದು ಸಿದ್ಧವಾಗುತ್ತದೆ. ಇದರಿಂದಲೇ ಪೂರ್ವಭಾಗವೂ ಸಹ ಸಾಧನಪರವಲ್ಲವೆಂದು ಸಿದ್ಧವಾಗುತ್ತದೆ. ಹೀಗೆ ಸಿದ್ಧಾಂತದಲ್ಲಿ ಉಪಜೀವ್ಯೋಪಜೀವಕಭಾವವನ್ನು ಮೀಮಾಂಸಕರು ಹೇಳಿದ್ದಾರೆ.

**प्रकाशः – बलादिति** । विधिप्रत्ययाभावेऽपीत्यर्थः । चतुस्सूत्र्या भिन्नाधिकरणत्वसाधनेनान्यदपि फलमाह – **एवञ्चेति** ।

ननु तर्हि "तद्धेतुव्यपदेशात्" "मान्त्रवर्णिकमेव च गीयते" इत्यादेरपि भिन्नाधिकरणता च स्यादित्युक्तमित्यत आह – **तद्धेत्विति** । अधिकाशङ्काप्रापकहेतुविशेषाभावादिरादिपदार्थः ।

'ಬಲಾತ್' ಎಂಬ ಪದಕ್ಕೆ ವಿಧಿಪ್ರತ್ಯಯವಿಲ್ಲದಿದ್ದರೂ ಸಹ ಎಂದರ್ಥ. ಹೀಗೆ ನಾಲ್ಕು ಸೂತ್ರಗಳಿಗೆ ಭಿನ್ನಾಧಿಕರಣತ್ವವನ್ನು ಸಾಧನೆ ಮಾಡಿದ್ದರಿಂದ. ಈಗ ಮತ್ತೊಂದು ಬಗೆಯ ಪ್ರಯೋಜನವನ್ನು 'ಏವಂಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಹಾಗಾದರೆ ಆನಂದಮಯಾಧಿರಕಣದಲ್ಲಿ "ತದ್ಧೇತುವ್ಯಪದೇಶಾತ್" "ಮಾಂತ್ರವರ್ಣಿಕಮೇವ ಚ ಗೀಯತೇ" ಇತ್ಯಾದಿ ಸೂತ್ರಗಳಿಗೂ ಸಹ ಭಿನ್ನಾಧಿಕರಣತ್ವವು ಏಕೆ ಬರುವುದಿಲ್ಲ ? ಎಂಬ ಪ್ರಶ್ನೆಗೆ 'ತದ್ಧೇತು' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಆದಿಪದದಿಂದ ಅಧಿಕಾಶಂಕಾಪ್ರಾಪಕವಾದ ಹೇತುವಿಶೇಷವು ಇಲ್ಲದ್ದರಿಂದಲೂ ಎಂಬರ್ಥವನ್ನು ತಿಳಿಯಬೇಕು.

**प्रकाशः** – यच्चोक्तं "अत्ता" इति सूत्रद्वये "यस्य ब्रह्म च" इत्यादिवाक्यं विषय इति, तन्न, "सर्वं वा अत्ति" इति मदीयविषयवाक्ये सूत्रे प्रतिज्ञातस्यात्तुः हेतूकृतस्य चराचरग्रहणस्य च साक्षादुपादानेन "यस्य" इति वाक्ये तदभावेनैतस्य सूत्रानानुगुण्यात् ।

सन्निधिमात्रेण प्रकरणविच्छेदाशङ्कायोगस्योक्तत्वेन "प्रकरणाच्च" इत्युक्तप्रकरणविच्छेदाशङ्कासमाधानाय "गुहां" इत्यादेरनारभ्यत्वाच्च ।

ಗುಹಾಧಿಕರಣ (೧-೨-೩)

ಇನ್ನು ರಾಮಾನುಜರು 'ಅತ್ತಾ ಚರಾಚರ' ಎಂಬೆರಡು ಸೂತ್ರಗಳಿಗೆ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯವನ್ನು ವಿಷಯವನ್ನಾಗಿ ಹೇಳಿದ್ದೂ ಸಹ ತಪ್ಪು. ಏಕೆಂದರೆ ನಾವು ಹೇಳುವಂತೆ ''ಸರ್ವಂ ವಾ ಅತ್ತಿ'' ಎಂಬುದನ್ನು ವಿಷಯವಾಕ್ಯವೆಂದಾಗ ಸೂತ್ರದಲ್ಲಿರುವ 'ಅತ್ತಾ' ಎಂಬ ಪ್ರತಿಜ್ಞೆಗೆ ಮತ್ತು ಚರಾಚರವೆಂಬ ಹೇತುವಿಗೆ ವಿಷಯವಾಕ್ಯದಿಂದ ನೇರವಾಗಿ ಸಂಗತಿಯು ದೊರೆಯುತ್ತದೆ. ಆದರೆ 'ಯಸ್ಯ ಬ್ರಹ್ಮ ಚ' ಎಂಬ ವಾಕ್ಯದಲ್ಲಿ ಅತ್ತೃತ್ವವಾಗಲಿ ಚರಾಚರಸಕಲಪದಾರ್ಥಗಳಾಗಲೀ ನೇರವಾಗಿ ತಿಳಿಯದ ಕಾರಣ ವಿಷಯವಾಕ್ಯಕ್ಕೆ ಸೂತ್ರದಿಂದ ಅನಾನುಗುಣ್ಯದೋಷ ಬರುತ್ತದೆ.

ಇನ್ನು ಸಾನ್ನಿಧ್ಯ ಪ್ರಮಾಣದಿಂದ ಬ್ರಹ್ಮಪ್ರಕರಣಕ್ಕೆ ವಿಚ್ಛೇದವನ್ನು ಆಶಂಕಿಸಿ ಪ್ರಕರಣಪ್ರಮಾಣದಿಂದ ಸಮಾಧಾನ ಹೇಳುವುದಕ್ಕಾಗಿ 'ಪ್ರಕರಣಾಚ್ಚ' ಎಂಬ ಸೂತ್ರವು ಹೊರಟಿದೆ ಎಂಬ ಎರಡನೆಯ ಸೂತ್ರವ್ಯಾಖ್ಯಾನವೂ ತಪ್ಪು. ಏಕೆಂದರೆ ಕೇವಲ ಸಾನ್ನಿಧ್ಯಪ್ರಮಾಣದಿಂದ ಬಲಿಷ್ಠವಾದ ಬ್ರಹ್ಮಪ್ರಕರಣಕ್ಕೆ ವಿಚ್ಛೇದವನ್ನು ಹೇಳಲು ಸಾಧ್ಯವಿಲ್ಲವೆಂದು ಈಗಾಗಲೇ ಸಮರ್ಥಿಸಿದ್ದರಿಂದ ಪ್ರಕರಣ ವಿಚ್ಛೇದಕ ಶಂಕೆಯನ್ನು ಪರಿಹರಿಸುವುದಕ್ಕಾಗಿ 'ಗುಹಾಂ ಪ್ರವಿಷ್ಟೌ' ಇತ್ಯಾದಿ ಸೂತ್ರಗಳು ಹೊರಟಿದ್ದೇ ವ್ಯರ್ಥವಾಗುತ್ತವೆ.

**प्रकाशः** – यदपि सिद्धान्ते गुहाविष्टत्वादिलिङ्गाज्जीवपरावुच्येते इति, तन्न, गुहाविष्टत्वस्य विष्ण्वेकप्रापकतायाः प्राक्समर्थितत्वेन तेन जीवप्राप्तेरयोगात् ।

या प्राणेन संविशत्यदितिर्देवतामयी ।
गुहां प्रविश्य तिष्ठन्ती या भूतेभिर्व्यजायते ।।

इत्यत्र ''महान्तं'' इति ब्रह्मप्रकरणेन ''व्यजायते'' इत्यादेर्मत्स्यादिरूपेण स्वात्मजननपरत्वोपपत्त्या प्रकरणविच्छेदकाभावेन च देवतामयत्वायोगेन चास्यापि ब्रह्मपरत्वेन जीवपरत्वायोगाच्च ।

ಮತ್ತು ರಾಮಾನುಜರು ಸಿದ್ಧಾಂತ ಮಾಡುವಾಗ ಗುಹಾಪ್ರವಿಷ್ಟತ್ವಾದಿ ಲಿಂಗಗಳಿಂದ ಜೀವಪರಮಾತ್ಮರು ಪ್ರತಿಪಾದ್ಯರೆಂದು ನಿರ್ಣಯವಾಗುತ್ತದೆಂದು ಹೇಳಿದ್ದರು. ಇದೂ ಸಹ ತಪ್ಪು. ಗುಹಾಪ್ರವಿಷ್ಟತ್ವವು ಕೇವಲ ವಿಷ್ಣುವಿನಲ್ಲೇ ಬರುತ್ತದೆ ಹೊರತು, ಜೀವನಲ್ಲಿ ಬರುವುದಿಲ್ಲವೆಂದು ಈ ಹಿಂದೆ ಸಮರ್ಥಿಸಿದ್ದರಿಂದ ಗುಹಾಪ್ರವಿಷ್ಟತ್ವ ಲಿಂಗವು ಬ್ರಹ್ಮಪ್ರಾಪಕವಾಗುತ್ತದೆ ಹೊರತು ಜೀವಪ್ರಾಪಕವಾಗುವುದಿಲ್ಲ.

ಯಾ ಪ್ರಾಣೇನ ಸಂವಿಶತ್ಯದಿತಿರ್ದೇವತಾಮಯೀ।
ಗುಹಾಂ ಪ್ರವಿಶ್ಯ ತಿಷ್ಠಂತೀ ಯಾ ಭೂತೇಭಿರ್ವ್ಯಜಾಯತೇ॥

ಎಂಬ ವಾಕ್ಯವೂ ಸಹ ಜೀವಪ್ರಾಪಕವಾಗುವುದಿಲ್ಲ. ಏಕೆಂದರೆ ಈ ವಾಕ್ಯವು ''ಮಹಾಂತಂ ವಿಭುಂ'' ಎಂಬ ಬ್ರಹ್ಮಪ್ರಕರಣದಲ್ಲಿ ಪ್ರಾಪ್ತವಾಗಿದೆ. ಆದ್ದರಿಂದ ''ವ್ಯಜಾಯತ'' ಎಂಬ ಪದವು ಮತ್ಸ್ಯಾದಿರೂಪದಿಂದ ಪರಮಾತ್ಮನ ರೂಪಗಳ ಪ್ರಾದುರ್ಭಾವವನ್ನೇ ಹೇಳುತ್ತಿದೆ. ಆದ್ದರಿಂದ ಈ ಪದವು ಪ್ರಕರಣ ವಿಚ್ಛೇದಕವಾಗುವುದಿಲ್ಲ. ಮತ್ತು ಇದು ಜೀವಪ್ರಾಪಕವಾದರೆ ದೇವತಾಮಯಿ ಎಂಬ ಪದವು ಅಯುಕ್ತವಾಗುತ್ತದೆ. ಆದ್ದರಿಂದ ಈ ವಾಕ್ಯವನ್ನು ಬ್ರಹ್ಮಪರವೆಂದೇ ಹೇಳಬೇಕು.

**प्रकाशः** – उक्तरीत्या विष्णोरेव मुख्यभोक्तृत्वेन जीवे तदभावेन च्छत्रिन्यायेन लक्षणोक्त्ययोगाच्चेत्यादि ध्येयमिति भावेनाह – **दिगिति** ।

यद्वा – ''अनुकृतेः'' इत्यधिकरणस्य ''शब्दादेव'' इत्यधिकरणस्य चैकत्रत्य-वाक्यद्वयविषयकत्वेऽपि वक्ष्यमाणदिशोपजीव्यात्वादौ सत्यप्यव्यवहितत्वेऽपि भिन्नाधिकरणतोह्येति भावेनाह – **दिगिति** ।

ಹಿಂದೆ ಹೇಳಿದ ಪ್ರಕಾರ ವಿಷ್ಣುವೇ ಮುಖ್ಯಭೋಕ್ತೃವಾಗುತ್ತಾನೆ ಹೊರತು ಜೀವನು ಆಗುವುದಿಲ್ಲ. ಆದ್ದರಿಂದ ಛತ್ರಿನ್ಯಾಯವನ್ನು ವಿವಕ್ಷಿಸಿ ಲಕ್ಷಣಾವನ್ನೂ ಸಹ ಇಟ್ಟುಕೊಳ್ಳಲು ಸಾಧ್ಯವಿಲ್ಲವೆಂದು ತಿಳಿಯಬೇಕು. ಈ ಅಭಿಪ್ರಾಯದಿಂದಲೇ ಗ್ರಂಥಕಾರರು 'ದಿಕ್' ಎಂಬ ಪದದಿಂದ ದಿಕ್‌ಪ್ರದರ್ಶನ ಮಾಡಿದ್ದಾರೆ.

ಅಥವಾ ''ಅನುಕೃತೇಃ'' ಎಂಬ ಅಧಿಕರಣವು ಮತ್ತು 'ಶಬ್ದಾದೇವ' ಎಂಬ ಅಧಿಕರಣವು ಒಂದೇ ಪ್ರಕರಣದಲ್ಲಿರುವ ವಾಕ್ಯವನ್ನು ವಿಚಾರ ಮಾಡುತ್ತಿದ್ದರೂ ಮತ್ತು ಪರಸ್ಪರ ಉಪಜೀವ್ಯೋಪಜೀವಕ ಭಾವವಿದ್ದು ಎರಡೂ ಅಧಿಕರಣಗಳು ಜೊತೆಗೆ ಇದ್ದರೂ ಸಹ ಬೇರೆ ಬೇರೆ ಅಧಿಕರಣಗಳೆಂದೇ ಪರಿಗಣಿಸಬೇಕು. ಇಲ್ಲಿಯ ತನಕ ಉಪಪಾದಿಸಿದ ಕಾರಣವನ್ನೆಲ್ಲಾ ಅಲ್ಲಿಯೂ ಅನುಸಂಧಾನ ಮಾಡಿಕೊಳ್ಳಬೇಕೆಂಬ ಅಭಿಪ್ರಾಯದಿಂದ ಗ್ರಂಥಕಾರರು 'ದಿಕ್' ಎಂಬಪದದಿಂದ 'ದಿಕ್‌ಪ್ರದರ್ಶನ' ಮಾಡಿದ್ದಾರೆ.

**गुरुराजीयम्** – किञ्चैकप्रकरणस्थवाक्यविषयत्वे उपजीव्योपजीवकभावे चाधिकरणभेद इति किमस्मिंस्तन्त्रे तथादृष्टत्वादित्युच्यते किं पूर्वतन्त्रे । नाद्य इत्याह – **किञ्चेति** ।। न द्वितीय इत्याह – **किञ्चौदुम्बराधिकरणेऽपीति** ।। पूर्वभागः ''औदुम्बरो यूपो भवति'' ''यस्य पर्णमयी जुहूर्भवति'' इत्येवंरूप इत्यर्थः । साध्यभागः ऊर्ग्वा उदुम्बर इत्यादिरूपः । न पापं श्लोकं शृणोतीत्येवंरूप इत्यर्थः । उपजीव्योपजीवकभावमुपपादयति – **नहीति** ।।

नन्वेकप्रकरणस्थवाक्यविषयत्वे उपजीव्योपजीवकभावे च सति यद्यधिकरणभेदस्तर्ह्यानन्दमयाधिकरणे तद्धेतुव्यपदेशादित्यस्याप्यधिकरणान्तरत्वं स्यादित्यत आह – **तद्धेत्विति** ।। **समन्वेतव्यान्तराभावादिनेति** ।। विकारशब्दब्रह्मशब्दादिपूर्वोत्तर-पक्षीययुक्तीनां साधारण्येन चेत्यादिशब्दार्थः ।



ಒಂದೇ ಪ್ರಕರಣದಲ್ಲಿರುವ ವಿಷಯವಾಕ್ಯವನ್ನು ವಿಚಾರ ಮಾಡಿದರೆ ಅಥವಾ ಪರಸ್ಪರ ಆಯಾ ಎರಡು ವಾಕ್ಯಗಳಿಗೆ ಪರಸ್ಪರ ಉಪಜೀವ್ಯೋಪಜೀವಕಭಾವವಿದ್ದರೆ ಪಾದ ಅಥವಾ ಅಧಿಕರಣಗಳಿಂದ ತಡೆಯಿಲ್ಲದಿದ್ದರೆ ಅಧಿಕರಣ ಭೇದವನ್ನು ಮಾಡಬಾರದೆಂಬುದು ರಾಮಾನುಜರ ಸಮರ್ಥನೆ. ಇಲ್ಲಿಯ ತನಕ ಒಂದೇ ಪ್ರಕರಣದಲ್ಲಿರುವಿಕೆಯು ಅಧಿಕರಣ ಭೇದಕ್ಕೆ ವಿರೋಧವಲ್ಲವೆಂದು ಸಮರ್ಥಿಸಿದೆವು. ಈಗ ಪೂರ್ವಮೀಮಾಂಸೆಯ ದೃಷ್ಟಾಂತದಿಂದ ಒಂದೇ ವಾಕ್ಯವನ್ನು ಅನೇಕ ಅಧಿಕರಣದಲ್ಲಿ ವಿಚಾರ ಮಾಡುವುದೂ ಸಹ ತಪ್ಪಲ್ಲವೆಂದು ಸಮರ್ಥಿಸುತ್ತಿದ್ದಾರೆ.

ಔದುಂಬರಾಧಿಕರಣದಲ್ಲಿ 'ಔದುಂಬರೋ ಯೂಪೋ ಭವತಿ' ಎಂಬ ವಾಕ್ಯವನ್ನು ವಿಚಾರ ಮಾಡಿದಂತೆ 'ಯಸ್ಯ ಪರ್ಣಮಯಿ ಜೂಹೂರ್ಭವತಿ' ಎಂಬ ವಾಕ್ಯವನ್ನೂ ಸಹ ವಿಚಾರ ಮಾಡಿದ್ದಾರೆ. ಈ ಎರಡು ವಾಕ್ಯಗಳನ್ನೇ ಪುನಃ ಪರ್ಣಮಯ್ಯಧಿಕರಣದಲ್ಲಿಯೂ ವಿಚಾರ ಮಾಡುತ್ತಾರೆ. ಈ ವಾಕ್ಯಗಳಿಗೆ ಪರಸ್ಪರ ಉಪಜೀವ್ಯೋಪಜೀವಕಭಾವವಿದೆ. ಆದರೂ ಒಂದೇ ವಾಕ್ಯಗಳನ್ನು ವಿಚಾರ ಮಾಡಲು ಎರಡು ಅಧಿಕರಣಗಳು ಅನಿವಾರ್ಯವೆಂದು ಮೀಮಾಂಸಕರು ಒಪ್ಪಿದ್ದಾರೆ. ಹೀಗಿರುವಾಗ ಒಂದು ಪ್ರಕರಣದಲ್ಲಿರುವ ಬೇರೆ ಬೇರೆ ವಾಕ್ಯಗಳನ್ನು ವಿಚಾರ ಮಾಡಲು ಎರಡು ಅಧಿಕರಣಗಳು ಹೊರಡುವುದರಲ್ಲಿ ಏನೂ ತಪ್ಪಿಲ್ಲ.

ಆದ್ದರಿಂದಲೇ ನಮ್ಮ ಸಿದ್ಧಾಂತದಲ್ಲಿ ಅಂತಿಮಪ್ರಾಣಾಧಿಕರಣ ಹಾಗೂ ಸರ್ವಗತತ್ವಾಧಿಕರಣವು ಒಂದೆ ಪ್ರಕರಣದಲ್ಲಿರುವ ಎರಡು ವಾಕ್ಯವನ್ನು ವಿಚಾರ ಮಾಡುತ್ತಿದ್ದರೂ ಅವುಗಳಿಗೆ ಪರಸ್ಪರ ಉಪಜೀವ್ಯೋಪಜೀವಕಭಾವವಿದ್ದರೂ ಅಧಿಕರಣದ ಭೇದವು ತಪ್ಪಾಗುವುದಿಲ್ಲ. ಮುಂದೆಯೂ ಸಹ 'ಅನುಕೃತೇಃ' ಎಂಬ ಅಧಿಕರಣದಲ್ಲಿ ಮತ್ತು 'ಶಬ್ದಾದೇವ' ಎಂಬ ಅಧಿಕರಣದಲ್ಲಿ ಒಂದೇ ಪ್ರಕರಣದಲ್ಲಿರುವ ವಾಕ್ಯವನ್ನೇ ವಿಚಾರ ಮಾಡುವವರಿದ್ದೇವೆ.



• • • • •

## ಪೂರ್ವಮೀಮಾಂಸಾಶಾಸ್ತ್ರದಿಂದ ಪುನರುಕ್ತಿ

### तात्पर्यचन्द्रिका

**यच्चोक्तम् – ''अत्ता'' इत्यत्र साधारणाकारं विहाय असाधारणाकारेण गौणार्थो वर्णनीय इति न्यायो व्युत्पादित इति,**

**तन्न, · ''प्रोद्गातॄणाम्'' इत्यत्र षोडशर्त्विक्साधारणाकारं विहाय असाधारणाकारेण भाष्यकारमते उद्गातृप्रस्तोतृप्रतिहर्तृसुब्रह्मण्यानां चतुर्णामेव, वार्तिककारमते अपसुब्रह्मण्यानां त्रयाणामेव लक्षणायाम्तृतीये उक्तत्वात् ।**

ಪರಿಪೂರ್ಣಚಂದ್ರಿಕಾ

''मासमग्निहोत्रं जुहोति'' इत्यत्राग्निहोत्रशब्दस्य होमत्वादिसाधारणाकारं हित्वा सूर्यदेवताकत्वादिनित्याग्निहोत्रासाधारणाकारेणैव मासाग्निहोत्रे गौणातायाश्च सप्तमे उक्तत्वेन पुनरिह तस्यावक्तव्यत्वादिति ॥

ಅನುವಾದ - ಇನ್ನು ''ಅತ್ತಾ ಚರಾಚರಗ್ರಹಣಾತ್'' ಎಂಬ ಸೂತ್ರದಲ್ಲಿ ಸಾಧಾರಣಾಕಾರವಾದ ಗೌಣಾರ್ಥವನ್ನು ಹೇಳದೆ ಅಸಾಧಾರಣಾಕಾರವಾದ ಗೌಣಾರ್ಥವನ್ನು ವರ್ಣಿಸಬೇಕೆಂಬ ನ್ಯಾಯವನ್ನು ಸಮರ್ಥಿಸಲಾಗಿದೆ ಎಂಬ ವಿಚಾರವೂ ಸಹ ತಪ್ಪು. ಏಕೆಂದರೆ ಪೂರ್ವಮೀಮಾಂಸೆಯ ''ಪ್ರೋದ್ಗಾತ್ರಧಿಕರಣ''ದಲ್ಲಿ ಈ ವಿಚಾರವನ್ನು ನಿರಾಕರಿಸಿದ್ದಾರೆ -

''ಪ್ರೋದ್ಗಾತ್ರೃಣಾಮ್'' ಎಂಬಲ್ಲಿ ಬಹುವಚನವು ಕೇಳಿಸುತ್ತಿದೆ. ವಸ್ತುತಃ ಹಿಂದೆ ಹದಿನಾರು ಮಂದಿ ಋತ್ವಿಜರು ಪ್ರಸಕ್ತರಾಗಿದ್ದಾರೆ. ಅವರನ್ನು ಇಲ್ಲಿ ಬಹುವಚನದಿಂದ ಋತ್ವಿಕ್ತ್ವ ಎಂಬ ಸಾಧಾರಣ ಧರ್ಮದಿಂದ ಸ್ವೀಕರಿಸುತ್ತಿಲ್ಲ ಹೊರತಾಗಿ ಭಾಷ್ಯಕಾರ ಮತದಂತೆ ಛಂದೋಗತ್ವವೆಂಬ ಅಸಾಧಾರಣ ಧರ್ಮವನ್ನು ವಿವಕ್ಷಿಸಲಾಗಿದೆ. ಆದ್ದರಿಂದ ಹದಿನಾರು ಮಂದಿ ಋತ್ವಿಜರನ್ನು ವಿವಕ್ಷಿಸದೆ ಸಾಮಗಾನ ಮಾಡುವ ಉದ್ಗಾತೃ, ಪ್ರಸ್ತೋತೃ, ಪ್ರತಿಹರ್ತೃ ಮತ್ತು ಸುಬ್ರಹ್ಮಣ್ಯ ನಾಲ್ಕು ಮಂದಿಯನ್ನಷ್ಟೇ ಬಹುವಚನದಿಂದ ವಿವಕ್ಷಿಸಬೇಕು. ಹೀಗೆ ಮೂರನೆಯ ಅಧ್ಯಾಯದಲ್ಲಿ ನಿರ್ಣಯಿಸಿದ್ದಾರೆ.

''ಮಾಸಂ ಅಗ್ನಿಹೋತ್ರಂ ಜುಹೋತಿ'' ಎಂಬ ವಾಕ್ಯವು ನಿತ್ಯಾಗ್ನಿಹೋತ್ರದ ವಿಕೃತಿಯಾಗವನ್ನು ವಿಧಿಸುತ್ತಿದೆ. ಇಲ್ಲಿರುವ ಅಗ್ನಿಹೋತ್ರ ಶಬ್ದದಿಂದ ಯಾವುದೇ ಅಗ್ನಿಹೋತ್ರವನ್ನೂ ಸಹ ಸಾಧಾರಣಾಕಾರವಾಗಿ ಸ್ವೀಕರಿಸಬಹುದು. ಆದರೆ ಇದನ್ನು ಬಿಟ್ಟು ಸೂರ್ಯದೇವತಾಕತ್ವ ರೂಪದಿಂದ ನಿತ್ಯಾಗ್ನಿಹೋತ್ರದ ಅಸಾಧಾರಣಾಕಾರದಿಂದಲೇ ಮಾಸಾಗ್ನಿ ಹೋತ್ರದಲ್ಲಿ ಗೌಣಾರ್ಥವನ್ನು ಸ್ವೀಕರಿಸಬೇಕು. ಅಂದರೆ ಬೇರೆ ಅಗ್ನಿಹೋತ್ರಗಳನ್ನು ಮಾಡಬಾರದು. ಪ್ರಕೃತಿಯಾಗದಲ್ಲಿ ಪ್ರಸಕ್ತವಾದ ಸೂರ್ಯದೇವತಾಕವಾದ ಅಗ್ನಿಹೋತ್ರವನ್ನೇ ಮಾಡಬೇಕೆಂದರ್ಥ. ಹೀಗೆ ಪೂರ್ವಮೀಮಾಂಸೆಯ ಏಳನೆಯ ಅಧ್ಯಾಯದಲ್ಲಿ ಸಾಧಿಸಿದ್ದಾರೆ.

ಪೂರ್ವಮೀಮಾಂಸಾಶಾಸ್ತ್ರವು ಬ್ರಹ್ಮಮೀಮಾಂಸಾಶಾಸ್ತ್ರದ ಪೂರ್ವಭಾಗವೆಂದು ರಾಮಾನುಜರು ಒಪ್ಪಿದ್ದಾರೆ. ಹೀಗಿರುವಾಗ ಸಾಧಾರಣಾಕಾರವಾದ ಗೌಣಾರ್ಥವನ್ನು ಬಿಟ್ಟು ಅಸಾಧಾರಣಾಕಾರವೆಂಬ ಗೌಣಾರ್ಥವನ್ನು ಸ್ವೀಕರಿಸಬೇಕೆಂಬ ವಿಚಾರವು ಮೊದಲು ಪೂರ್ವಮೀಮಾಂಸೆಯಲ್ಲೇ ನಿರ್ಣಯವಾಗಿದೆ. ಪುನಃ ಇಲ್ಲಿಯೂ ಅದನ್ನೇ ಸಮರ್ಥಿಸಿದರೆ ಪುನರುಕ್ತಿ ಬರುತ್ತದೆಂದು ಅಭಿಪ್ರಾಯ.

**प्रकाशः –**

**यच्चेति** । ''अत्ता'' इति सूत्रे ब्रह्मक्षत्रोपलक्षितचराचरस्य मृत्यूपसेचनत्वविशेषणेनादनीयत्वलाभात्तत्सूचितस्य कृत्स्नात्तृत्वस्य संहर्तृत्वरूपत्वात्, अत्ता विष्णुरित्युक्ते मृत्यूपसेचनत्वस्य मृत्युवशत्वाभावाभिप्रायेणोपपत्तेर्न तद्विशेषणेन

ब्रह्मक्षत्रादेरदनीयत्वसिद्धिरित्याशङ्क्योपसेचनशब्दस्य गौणत्वेऽपि तद्वश्यत्वाभावरूप-साधारणाकारोपचारं विना स्वयमद्यमानत्वे सति अन्यस्यादनहेतुत्व-रूपविशेषाकारेणोपचार इति अदनीयत्वसिद्धिरित्युक्त्वा "साधारणाकारं विहाय" इत्यादिना सूत्रस्य तात्पर्यार्थ उक्तः, सोऽप्ययुक्तः, पौनरुक्त्यादित्यर्थः ।

ವಿವರಣೆ - ರಾಮಾನುಜರ ಮತ್ತೊಂದು ವಿಚಾರ ಹೀಗಿದೆ - "ಅತ್ತಾ ಚರಾಚರಗ್ರಹಣಾತ್" ಎಂಬ ಸೂತ್ರದಲ್ಲಿ ಬ್ರಹ್ಮ ಹಾಗೂ ಕ್ಷತ್ರ ಪದಗಳಿಂದ ಉಪಲಕ್ಷಣಯಾ ಸಕಲ ಚರಾಚರ ಪ್ರಪಂಚವು ತಿಳಿಯುತ್ತದೆ. ಮೃತ್ಯು ಮತ್ತು ಉಪಸೇಚನ ಪದಗಳಿಂದ ಚರಾಚರ ಪ್ರಪಂಚವು ಅದನೀಯವೆಂದು ಸೂಚಿತವಾಗುತ್ತದೆ. ಆದ್ದರಿಂದ ಸಕಲ ಚರಾಚರ ಪ್ರಪಂಚವನ್ನು ತಿನ್ನುತ್ತಾನೆಂದರೆ ಸಂಹಾರ ಮಾಡುತ್ತಾನೆಂದರ್ಥ. ಆದ್ದರಿಂದ ವಿಷ್ಣು ತಿನ್ನುತ್ತಾನೆಂದರೆ ಮೃತ್ಯುವು ಉಪಸೇಚನವಾಗಿರುವುದರಿಂದ ಮೃತ್ಯುವಿನ ಅಧೀನವಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಮೃತ್ಯು ಹಾಗೂ ಉಪಸೇಚನಗಳೆಂಬ ವಿಶೇಷಣಗಳಿಂದ ಬ್ರಹ್ಮಕ್ಷತ್ರಾದಿಗಳಿಗೆ ಅದನೀಯತ್ವವು ಹೇಗೆ ಸಿದ್ಧಿಸುತ್ತದೆ ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸುತ್ತಾರೆ. 'ಉಪಸೇಚನ' ಶಬ್ದವು ಗೌಣಾರ್ಥವನ್ನು ಹೇಳುವುದಾದರೂ ಮೃತ್ಯುವಿನ ಅಧೀನವಾಗುವುದಿಲ್ಲವೆಂಬ ಸಾಧಾರಣಾಕಾರವಾದ ಗೌಣಾರ್ಥವನ್ನು ಹೇಳದೆ ಸ್ವತಃ ತಿನ್ನಲು ಯೋಗ್ಯವಾಗಿದ್ದು ಮತ್ತೊಂದನ್ನು ತಿನ್ನಲು ಹೇತುವಾಗಿರುವಿಕೆ ಎಂಬ ಅದನೀಯತ್ವ ಸಿದ್ಧಿಃ ವಿಶೇಷಾಕಾರದಿಂದ ಗೌಣಾರ್ಥವನ್ನು ಮಾಡಬೇಕು. ಹೀಗೆ ಅದನೀಯತ್ವವು ಸಿದ್ಧವಾಗುತ್ತದೆಂದು ಹೇಳಿ 'ಸಾಧಾರಣಾಕಾರಂ ವಿಹಾಯ' ಸೂತ್ರದ ತಾತ್ಪರ್ಯವನ್ನು ಹೇಳಿದ್ದಾರೆ.

ಇದೂ ಸಹ ತಪ್ಪು. ಹೀಗೆ ಹೇಳಿದರೆ ಪೂರ್ವಮೀಮಾಂಸೆಯಿಂದ ಪುನುರಕ್ತಿ ಬರುತ್ತದೆ.

**प्रकाशः** – तार्तीयं प्रोद्गात्रधिकरणं जन्माधिकरणे, साप्तमिकं मासाग्निहोत्राधिकरणं च पादान्त्यप्राणनये प्रपञ्चितम् । भाष्यकृन्मते प्रोद्गातृशब्दस्य षोडशर्त्विक्-साधारणाकारं प्रकरणगतत्वं विहाय च्छन्दोगत्वरूपेणासाधाराणाकारेणोद्गात्रादीनां चतुर्णां लक्षणाया उक्तत्वात्, वार्तिकमते तु स्तोत्रकारित्वसदस्सन्निहितत्वादिना ततोऽप्यसाधारणाकारेणापसुब्रह्मण्यानां त्रयाणामेव लक्षणाया उक्तत्वात्,

तथैव मासाग्निहोत्रेऽग्निहोत्रशब्दस्य साधारणाकारेण गौणताया उक्तत्वादित्यर्थः ।

ಪೂರ್ವಮೀಮಾಂಸೆಯ ಮೂರನೆಯ ಅಧ್ಯಾಯದಲ್ಲಿರುವ ಪ್ರೋದ್ಗಾತ್ರಧಿಕರಣವನ್ನು ಹಿಂದೆ ಜನ್ಮಾಧಿಕರಣದಲ್ಲೇ ವಿವರಿಸಿದ್ದಾಗಿದೆ. ಏಳನೇ ಅಧ್ಯಾಯದಲ್ಲಿ ಬರುವ ಮಾಸಾಗ್ನಿಹೋತ್ರಾಧಿಕರಣವನ್ನು ಅಂತಿಮಪ್ರಾಣಾಧಿಕರಣದಲ್ಲಿ ವಿವರಿಸಿದ್ದಾಗಿದೆ.

ಭಾಷ್ಯಕಾರರ ಪ್ರಕಾರ 'ಪ್ರೋದ್ಗಾತೃ' ಶಬ್ದಕ್ಕೆ ಹದಿನಾರು ಮಂದಿ ಋತ್ವಿಜರಲ್ಲಿ ಸಾಧಾರಣಾಕಾರವಾದ ಪ್ರಕರಣದ ತತ್ವವನ್ನು ಹೇಳದೆ ಛಾಂದೋಗತ್ವವೆಂಬ ಅಸಾಧಾರಣಾಕಾರದಿಂದ 'ಉದ್ಗಾತೃವೇ' ಮೊದಲಾದ ನಾಲ್ವರಲ್ಲ ಲಕ್ಷಣಾ ಮಾಡಲಾಗಿದೆ. ಆದರೆ ವಾರ್ತಿಕಕಾರರ ಮತದಲ್ಲಿ ಸ್ತೋತ್ರಕಾರಿತ್ವವೆಂಬ ಅಸಾಧಾರಣ

ಧರ್ಮವನ್ನು ವಿವಕ್ಷಿಸಿ ಸುಬ್ರಹ್ಮಣ್ಯನನ್ನು ಬಿಟ್ಟು ಉಳಿದ ಮೂವರನ್ನು ಮಾತ್ರ ಬಹುವಚನಾರ್ಥವೆಂದು ಅಂಗೀಕರಿಸಲಾಗಿದೆ.

ಇದರಂತೆ ಮಾಸಾಗ್ನಿಹೋತ್ರದಲ್ಲಿ ಅಗ್ನಿಹೋತ್ರ ಶಬ್ದಕ್ಕೆ ಅಸಾಧಾರಣಾಕಾರದಿಂದ ಗೌಣಾರ್ಥ ಮಾಡಲಾಗಿದೆ. ಹೀಗೆ ಪೂರ್ವಮೀಮಾಂಸೆಯಲ್ಲಿ ಹೇಳಿದ ವಿಚಾರವನ್ನೇ ಬ್ರಹ್ಮಮೀಮಾಂಸೆಯಲ್ಲಿಯೂ ನೀವು ಹೇಳುತ್ತಿರುವುದರಿಂದ ಪುನರುಕ್ತಿದೋಷ ಬರುತ್ತದೆ.

**प्रकाशः** – एतेन रामानुजरीतिं प्रायेणानुसरतः कस्यचिन्मतमपि निरस्तं ध्येयम् ।

आत्माऽन्तरात्मेति हरिः एक एव द्विधा स्थितः ।

इत्यादिवचनविरोधेन शिव इति सिद्धान्तस्यायुक्तत्वाच्चेति ।

ಶೈವರೂ ಸಹ ರಾಮಾನುಜರ ಪದ್ಧತಿಯನ್ನೇ ಅನುಸರಿಸಿ ಅಧಿಕರಣವನ್ನು ರಚಿಸುತ್ತಾರೆ. ರಾಮಾನುಜಮತನಿರಾಸದಿಂದಲೇ ಇವರ ಮತವು ನಿರಾಕೃತವಾಯಿತೆಂದು ತಿಳಿಯಬೇಕು. ಅಷ್ಟೇ ಅಲ್ಲದೆ "ಆತ್ಮಾಂತರಾತ್ಮೇತಿ ಹರಿಃ ಏಕ ಏವ ದ್ವಿಧಾ ಸ್ಥಿತಃ" ಇತ್ಯಾದಿಯಾದ ಹರಿಪರವಾದ ಪ್ರಮಾಣಗಳ ವಿರೋಧವೂ ಸಹ ಶೈವರಿಗೆ ಬರುತ್ತದೆಂದು ತಿಳಿಯಬೇಕು. ಆದ್ದರಿಂದ ಶಿವನೇ 'ಗುಹಾನಿವಿಷ್ಟ' ಎಂಬ ಸಿದ್ಧಾಂತವು ಸಿದ್ಧವಾಗಿದೆ.




"ಅತ್ತಾ ಚರಾಚರಗ್ರಹಣಾತ್" ಎಂಬ ಸೂತ್ರಕ್ಕೆ ಸಾಧಾರಣಾಕಾರವಾದ ಗೌಣಾರ್ಥವನ್ನು ಬಿಟ್ಟು ಅಸಾಧಾರಣಾಕಾರವಾದ ಗೌಣಾರ್ಥವನ್ನು ಮಾಡಬೇಕೆನ್ನುತ್ತಾರೆ. ಈ ವಿಚಾರವನ್ನು ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ನಿರ್ಣಯ ಮಾಡಿದ್ದರಿಂದ ಇಲ್ಲಿ ನಿರ್ಣಯಿಸಬೇಕಾಗಿಲ್ಲ. 'ಪ್ರೋದ್ಗಾತೃಣಾಂ' ಎಂಬಲ್ಲಿ ಮತ್ತು 'ಮಾಸಮಗ್ನಿಹೋತ್ರಂ' ಎಂಬಲ್ಲಿ ಅಸಾಧಾರಣಾಕಾರವಾದ ಲಕ್ಷಣಾವನ್ನು ಮಾಡದೆ ಸಾಧಾರಾಣಕಾರವಾದ ಲಕ್ಷಣಾವನ್ನೇ ಮಾಡಬೇಕೆಂದು ಪ್ರೋದ್ಗಾತ್ರಧಿಕರಣದಲ್ಲಿ ಮತ್ತು ಮಾಸಾಗ್ನಿಹೋತ್ರಾಧಿಕರಣದಲ್ಲಿ ನಿರ್ಣಯಿಸಿದ್ದಾಗಿದೆ. ಪುನಃ ಇಲ್ಲಿ ಅದನ್ನೇ ಸಾಧಿಸಿದರೆ ಪುನರುಕ್ತಿ ಬರುತ್ತದೆ. ಪೂರ್ವಮೀಮಾಂಸಾಶಾಸ್ತ್ರವೂ ಸೇರಿ ಇಪ್ಪತ್ತು ಅಧ್ಯಾಯವು ಒಂದೇ ಶಾಸ್ತ್ರವೆಂದು ಹೇಳುವ ರಾಮಾನುಜರಿಗೆ ಮಾತ್ರ ಈ ದೋಷ.



ಟೀಕೆಯ ಕಠಿಣಪದಾರ್ಥ

तात्पर्यचन्द्रिका

टीकाक्षरार्थस्तु – तद्यदा विष्णोरन्यस्यैव स्यादिति । पूर्वत्र सम्भवत्सर्वात्तृत्वं लक्षणत्वेनोक्तम् । ब्रह्मणि च अशुभभोक्तृत्वासम्भवेऽपि ऋतपातृत्वरूपं शुभभोक्तृत्वं सिद्धान्तरीत्या सम्भवति । तत्र च पिबतोर्जीवेश्वरत्वमुपेत्य जीवे पातृत्वं मुख्यम् ईश्वरे त्वमुख्यमिति स्वीकारेऽसम्भवः, उभयोरपि मुख्यमिति स्वीकारे तु जीवस्यापि शुभभोक्तृत्वेन ईश्वरवत्सर्वात्तृत्वस्यापि प्रसङ्गात् अतिव्याप्तिरित्यर्थः । तथा च द्वयोरपि पातृत्वं मुख्यमिति पूर्वपक्षोऽप्यत्राभिप्रेत इति द्रष्टव्यम् ।

यद्वा – गुहाप्रविष्टत्वादिब्रह्मलिङ्गसहितस्यापि ऋतपातृत्वस्यासम्भवोऽतिव्याप्तिर्वा यदा, तदा तत्सहचरितस्य पूर्वोक्तात्तृत्वस्यापि असम्भवोऽतिव्याप्तिर्वा स्यादित्यर्थः । तथा च लक्षणमयुक्तमिति ।

यद्यपि सर्वसंहर्तृत्वरूपलक्षणं ब्रह्मण्येवेति पूर्वपक्षिणाऽपि स्वीकृतम् । अत एव टीका ''कर्मफलभोगं विनाऽपि संहर्तृत्वमात्रेण तदुपपत्तेः'' इति । तथाऽपि सिद्धान्त्यभिप्रेतं संहर्तृत्वविशेषात्मकं भक्षयितृत्वरूपं लक्षणमयुक्तमिति भावः ।

यस्सेतुः'' इति पिबतोरेकवचनेन विशेषणात् इत्यादि । ''विशेषणाच्च'' इति सूत्रं ''यस्सेतुः'' इत्यादिभाष्येण एकवचनेन विशेषणात् ब्रह्मशब्देन विशेषणाच्चेति द्विधा व्याख्यातमिति भावः । उपलक्षणं चैतत्, सेतुत्वाक्षरत्वादिना विशेषणात् ब्रह्मणश्च परत्वेन विशेषणादित्यपि व्याख्येयमिति ।।

।। इति श्रीब्रह्मण्यतीर्थपूज्यश्रीपादशिष्यव्यासतीर्थविरचिता तात्पर्यचन्द्रिकायां गुहाधिकरणं सम्पूर्णम् ।।

ಅನುವಾದ - ಟೀಕೆಯಲ್ಲಿ 'ತದ್ಯದಾ ವಿಷ್ಣೋರನ್ಯಸ್ಯೈವ ಸ್ಯಾತ್' ಇತ್ಯಾದಿ ವಾಕ್ಯಗಳು ಹೊರಟಿವೆ. ಈ ವಾಕ್ಯದಲ್ಲಿ ಅಸಂಭವ ಹಾಗೂ ಅತಿವ್ಯಾಪ್ತಿ ದೋಷಗಳನ್ನು ಹೇಳಿದ್ದಾರೆ. ಅದನ್ನು ಹೀಗೆ ತಿಳಿಯಬೇಕು - ಹಿಂದಿನ ಅಧಿಕರಣದಲ್ಲಿ ಸಂಭವತ್ಸರ್ವಾತ್ತೃತ್ವವನ್ನು ಬ್ರಹ್ಮನ ಲಕ್ಷಣವೆಂದು

ಸಾಧಿಸಲಾಯಿತು. ಏಕೆಂದರೆ ಬ್ರಹ್ಮನಲ್ಲಿ ಅಶುಭಭೋಕ್ತೃತ್ವವು ಅಸಂಭಾವಿತವಾದರೂ ಋತಪಾತೃತ್ವವೆಂಬ ಸುಖಫಲಭೋಕ್ತೃತ್ವ ಪೂರ್ವಪಕ್ಷದ ಪ್ರಕಾರ ಕೂಡದಿದ್ದರೂ ಸಿದ್ಧಾಂತದ ಪ್ರಕಾರ ಸಮಂಜಸವಾಗುತ್ತದೆ. ಹೀಗಿರುವಾಗ "ಪಿಬತೋಃ" ಎಂಬ ವಿಶೇಷಣವಾಚಕಪದದಿಂದ ಜೀವೇಶ್ವರರಿಬ್ಬರನ್ನು ವಾಚಕರೆಂದು ಒಪ್ಪಿ, ಜೀವರಲ್ಲಿ ಮುಖ್ಯವಾದ ಪಾತೃತ್ವವನ್ನು ಹೇಳಿ ಈಶ್ವರನಲ್ಲಿ ಅಮುಖ್ಯವಾದ ಪಾತೃತ್ವವನ್ನು ಹೇಳಿದರೆ ಅಸಂಭವ ದೋಷ ಬರುತ್ತದೆಂದು ಅಭಿಪ್ರಾಯ.

ಇನ್ನು ಜೀವೇಶ್ವರರಿಬ್ಬರೂ ಮುಖ್ಯಪಾತೃತ್ವವುಳ್ಳವರೆಂದೇ ಒಪ್ಪಿದರೆ ಜೀವನಲ್ಲಿಯೂ ಶುಭಭೋಕ್ತೃತ್ವವನ್ನು ಹೇಳಿದಂತಾಯಿತು. ಆವಾಗ ಈಶ್ವರನಂತೆ ಜೀವನಲ್ಲಿಯೂ ಸಹ ಸರ್ವಾತ್ತೃತ್ವ ಲಕ್ಷಣವು ಬರುವ ಕಾರಣ ಅತಿವ್ಯಾಪ್ತಿ ಬರುತ್ತದೆಂದು ಅಭಿಪ್ರಾಯ. ಆದ್ದರಿಂದ ಜೀವೇಶ್ವರರಿಬ್ಬರಲ್ಲಿಯೂ ಮುಖ್ಯವಾದ ಪಾತೃತ್ವವನ್ನು ಪೂರ್ವಪಕ್ಷಿಯು ಒಪ್ಪಿದ್ದಾನೆಂದು ತಿಳಿಯಬೇಕು.

ಅಥವಾ ಗುಹಾಪ್ರವಿಷ್ಟತ್ವವೇ ಮೊದಲಾದ ಬ್ರಹ್ಮನ ಲಿಂಗಗಳಿದ್ದರೂ ಋತಪಾತೃತ್ವವೆಂಬ ಬ್ರಹ್ಮನ ಲಕ್ಷಣಕ್ಕೆ ಅಸಂಭವ ಅಥವಾ ಅತಿವ್ಯಾಪ್ತಿ ದೋಷವು ಬರುವುದಾದರೆ ಬ್ರಹ್ಮನ ಲಿಂಗಗಳಿಂದಲೇ ಸಹಚರಿತವಾದ ಹಿಂದಿನ ಅಧಿಕರಣದಲ್ಲಿ ಸಮರ್ಥಿಸಲ್ಪಟ್ಟ ಅತ್ತೃತ್ವ ಲಕ್ಷಣಕ್ಕೂ ಸಹ ಅತಿವ್ಯಾಪ್ತಿ ಅಥವಾ ಅಸಂಭವ ದೋಷಗಳೇಕೆ ಬರಬಾರದೆಂದು ಅಭಿಪ್ರಾಯ. ಆದ್ದರಿಂದ ಲಕ್ಷಣ ಅಯುಕ್ತವಾಗಿದೆಯೆಂದು ಪೂರ್ವಪಕ್ಷಿಯು ಹೇಳುತ್ತಾನೆ.

ವಸ್ತುತಸ್ತು ಸರ್ವಸಂಹರ್ತೃತ್ವವೆಂಬ ಲಕ್ಷಣವನ್ನು ಬ್ರಹ್ಮನಲ್ಲಿಯೇ ಪೂರ್ವಪಕ್ಷಿಯೂ ಸಹ ಅಂಗೀಕರಿಸಿದ್ದಾನೆ. ಆದ್ದರಿಂದಲೇ ಟೀಕೆಯಲ್ಲಿ "ಕರ್ಮಫಲಭೋಗಂ ವಿನಾಪಿ ಸಂಹರ್ತೃತ್ವ-ಮಾತ್ರೇಣ ತದುಪಪತ್ತೇಃ" ಕರ್ಮಭೋಗವಿಲ್ಲದಿದ್ದರೂ ಕೇವಲ ಸಂಹರ್ತೃತ್ವದಿಂದ ಬ್ರಹ್ಮನಲ್ಲಿ ಯುಕ್ತವಾಗುತ್ತದೆಂದು ಹೇಳಿದ್ದಾರೆ. ಆದರೂ ಸಹ ಸಿದ್ಧಾಂತಿಗಳಿಗೆ ಅಭಿಪ್ರೇತವಾದ ಸಂಹರ್ತೃತ್ವದ ವಿಶೇಷರೂಪವಾದ 'ಭಕ್ಷಯಿತೃತ್ವ' ಎಂಬ ಲಕ್ಷಣವನ್ನು ಪೂರ್ವಪಕ್ಷಿಯು ಅಂಗೀಕರಿಸುವುದಿಲ್ಲ. ಈ ಲಕ್ಷಣವು ಅಯುಕ್ತವಾಗಿದೆಯೆಂದು ಪೂರ್ವಪಕ್ಷಿಯು ಆಕ್ಷೇಪಿಸುತ್ತಿದ್ದಾನೆಂದು ತಿಳಿಯಬೇಕು.

ಎರಡನೆಯ ಸೂತ್ರವನ್ನು ವ್ಯಾಖ್ಯಾನಿಸುವಾಗ ಟೀಕೆಯಲ್ಲಿ "ಯಸ್ಸೇತುಃ ಇತಿ ಪಿಬತೋರೇಕವಚನೇನ ವಿಶೇಷಣಾತ್" 'ಯಸ್ಸೇತುಃ' ಇತ್ಯಾದಿ ಭಾಷ್ಯವು ಏಕವಚನದಿಂದ ವಿಶೇಷಣವಾಗಿರುವುದರಿಂದ ಮತ್ತು ಬ್ರಹ್ಮಶಬ್ದದಿಂದ ವಿಶೇಷಣವಾಗಿರುವುದರಿಂದ 'ವಿಶೇಷಣಾಚ್ಚ' ಎಂಬ ಸೂತ್ರವನ್ನು ಎರಡು ಬಗೆಯಲ್ಲಿ ವ್ಯಾಖ್ಯಾನಿಸಿದೆ ಎಂದು ಅಭಿಪ್ರಾಯ. 'ಉಪಲಕ್ಷಣಯಾ' 'ಹೇತುತ್ವ' ಹಾಗೂ ಅಕ್ಷರತ್ವಾದಿಗಳಿಂದ ವಿಶೇಷಣವಾಗಿದೆ. ಬ್ರಹ್ಮನು ಪರತ್ವದಿಂದ ವಿಶೇಷಣನಾಗಿರುವುದರಿಂದ ಎಂದೂ ಸಹ ವ್ಯಾಖಾನಿಸಬೇಕು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಗುಹಾಧಿಕರಣವು ಸಂಪೂರ್ಣವಾಯಿತು.
ಗುಹಾಧಿಕರಣ (೧-೨-೩)

**प्रकाशः –**

अत्र टीकायां "तदृतपानकर्तृत्वं यदि विष्णोरन्यस्यैव स्यात्तदा न तस्य सर्वात्तृत्वं, यदि चान्यस्यापि सम्भवेत्तदा लक्षणस्यातिव्याप्तिः" इत्युक्तम् ।

ವಿವರಣೆ - ಈ ಅಧಿಕರಣದ ಟೀಕೆಯಲ್ಲಿ "ತದೃತಪಾನಕರ್ತೃತ್ವಂ ಯದಿ ವಿಷ್ಣೋರನ್ಯಸ್ಯೈವ ಸ್ಯಾತ್ತದಾ ನ ತಸ್ಯ ಸರ್ವಾತ್ತೃತ್ವಂ, ಯದಿ ಚಾನ್ಯಸ್ಯಾಪಿ ಸಂಭವೇತ್ತದಾ ಲಕ್ಷಣಸ್ಯಾತಿವ್ಯಾಪ್ತಿಃ" ಒಂದು ವೇಳೆ ಋತಪಾನ ಕರ್ತೃತ್ವವು ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ಬರುವುದಾದರೆ ಆವಾಗ ವಿಷ್ಣುವಿಗೆ ಸರ್ವಾತ್ತೃತ್ವವನ್ನು ಹೇಳಲಾಗದ ಕಾರಣ ಅಸಂಭವ ಬರುತ್ತದೆ. ಒಂದು ವೇಳೆ ಬೇರೆಯವರಲ್ಲೂ ಸರ್ವಾತ್ತೃತ್ವ ಬರುವುದಾದರೆ ಆವಾಗ ವಿಷ್ಣುವಿನ ಲಕ್ಷಣಕ್ಕೆ ಅತಿವ್ಯಾಪ್ತಿ ಬರುತ್ತದೆಂದು ಹೇಳಲಾಗಿದೆ.

**प्रकाशः** – तत्रानुपपत्तयः – पूर्वं सर्वात्तृत्वस्य लक्षणत्वेनाभिमतत्वादेकदेशस्यान्यमात्रगतत्वेऽपि नासम्भवः । न चैकदेशाभावादेव सर्वात्तृत्वमपि नेत्युच्यत इति वाच्यं, सिद्धन्तेऽप्यशुभभोक्तृत्वाभावेन तद्दोषतादवस्थ्यापातादित्येका ।

ಈ ಟೀಕಾಮಾತನ್ನು ನೋಡಿದಾಗ ಅನೇಕ ಅನುಪಪತ್ತಿಗಳು ಕಾಣಿಸುತ್ತವೆ. ಹಿಂದೆ ಸರ್ವಾತ್ತೃತ್ವವನ್ನು ವಿಷ್ಣುವಿನ ಲಕ್ಷಣವೆಂದು ಸಾಧಿಸಲಾಯಿತು. ಆದ್ದರಿಂದ ಕೆಲವು ಪದಾರ್ಥಗಳ ಅತ್ತೃತ್ವವು ಬೇರೆಯವರಲ್ಲಿ ಮಾತ್ರ ಬರುವುದರಿಂದ ಅಸಂಭವವನ್ನು ಹೇಳಲು ಸಾಧ್ಯವಿಲ್ಲ.

ಪ್ರಶ್ನೆ - ಏಕದೇಶ ಪದಾರ್ಥದ ಅತ್ತೃತ್ವವು ಬೇರೆಯವರಲ್ಲಿ ಮಾತ್ರ ಬರುವುದಾದರೆ ವಿಷ್ಣುವಿನಲ್ಲಿ ಏಕದೇಶ ಪದಾರ್ಥದ ಅತ್ತೃತ್ವವನ್ನು ಹೇಳಿದಂತಾಗಲಿಲ್ಲ. ಆವಾಗ ಸರ್ವಾತ್ತೃತ್ವ ಲಕ್ಷಣಕ್ಕೆ ಅಸಂಭವ ದೋಷವನ್ನು ಹೇಳಿದಂತಾಗುತ್ತದಲ್ಲವೇ?

ಉತ್ತರ - ಸಿದ್ಧಾಂತದಲ್ಲಿಯೂ ಸಹ ಅಶುಭಫಲಭೋಕ್ತೃತ್ವವನ್ನು ವಿಷ್ಣುವಿನಲ್ಲಿ ಅಂಗೀಕರಿಸಿಲ್ಲ. ಆದ್ದರಿಂದ ಏಕದೇಶ ಪದಾರ್ಥದ ಅತ್ತೃತ್ವವು ಬೇರೆಯವರಲ್ಲಿ ಬರುವ ಮಾತ್ರದಿಂದ ಹಿಂದಿನ ಅಧಿಕರಣದಲ್ಲಿ ಸಮರ್ಥಿಸಲ್ಪಟ್ಟ ಸರ್ವಾತ್ತೃತ್ವ ಲಕ್ಷಣಕ್ಕೆ ಅಸಂಭವ ದೋಷವನ್ನು ಹೇಳಲಾಗದು. ಇದು ಮೊದಲನೆಯ ಅನುಪಪತ್ತಿ.

**प्रकाशः** – पूर्वपक्षे ऋतपातृत्वस्य जीवेश्वरोभयगतत्वोपगमेनान्यस्यैवेत्ययुक्तमित्यन्या ।

"यदि च" इत्यत्रापि भगवति पातृत्वस्यैव पूर्वपक्षेऽनङ्गीकृतत्वेन अन्यस्यापीत्यपिपदास्वारस्यमित्येका ।

एकदेशस्यान्यमात्रगतत्वेऽपि कृत्स्नात्तृत्वस्यातिव्याप्त्यप्रसरादित्यपरा ।

ಅಥವಾ ಪೂರ್ವಪಕ್ಷದಲ್ಲಿ ಋತಪಾತೃತ್ವವನ್ನು ಜೀವ ಹಾಗೂ ಈಶ್ವರರಿಬ್ಬರಲ್ಲಿಯೂ ಅಂಗೀಕರಿಸಿರುವುದರಿಂದ ಟೀಕೆಯಲ್ಲಿ 'ಅನ್ಯಸ್ಯೈವ' ಎಂಬ ಮಾತು ತಪ್ಪಾಗುತ್ತದೆ. ಇದು ಎರಡನೆಯ ಅನುಪಪತ್ತಿ.

"ಯದಿ ಚ" ಎಂಬ ಟೀಕಾವಾಕ್ಯದಲ್ಲಿಯೂ ಸಹ ಭಗವಂತನಲ್ಲಿ ಪಾತೃತ್ವವನ್ನಷ್ಟೇ ಪೂರ್ವಪಕ್ಷಕಾರರು ಒಪ್ಪದ ಕಾರಣ 'ಅನ್ಯಸ್ಯಾಪಿ' ಎಂಬಲ್ಲಿರುವ 'ಅಪಿ' ಪದವು ಅಸ್ವರಸವಾಗುತ್ತದೆ.

ಏಕದೇಶವು ಬೇರೆಯವರಲ್ಲಿ ಬಂದ ಮಾತ್ರದಿಂದ ಸಕಲಜಗತ್ತಿನ ಅತ್ತೃತ್ವ ಲಕ್ಷಣಕ್ಕೆ ಅತಿವ್ಯಾಪ್ತಿಯನ್ನು ಹೇಳಲು ಸಾಧ್ಯವಾಗುವುದಿಲ್ಲವೆಂಬುದು "ಯದಿ ಚ" ಎಂಬ ವಾಕ್ಯದಲ್ಲಿರುವ ಎರಡನೆಯ ಅನುಪಪತ್ತಿ.

**प्रकाशः** – ता एताः निरसितुमाह – **सम्भवदिति** । "असम्भवः" इत्यन्तेनाद्ययोर्निरासः । "मुख्यं" इत्युक्त्या द्वितीयायाः, शेषेणाद्याया इति विवेकः ।

"उभयोरपि मुख्यं" इत्यनेन तृतीयायाः, सर्वात्तृत्वस्यापि प्रसङ्गात्सम्भवत् सर्वात्तृत्वरूपस्य "सर्वशुभात्तृत्वस्यापि प्रसङ्गात्" इत्यनेन अन्त्या निरस्तेति ध्येयम् ।

ಈ ಎಲ್ಲಾ ಅನುಪಪತ್ತಿಗಳನ್ನು ನಿರಾಸ ಮಾಡುವುದಕ್ಕಾಗಿ "ಸಂಭವತಿ" ಎಂಬ ವಾಕ್ಯವು ಹೊರಟಿದೆ. "ಅಸಂಭವಃ" ಎಂಬಲ್ಲಿಯ ತನಕ ಮೊದಲಿನ ಎರಡು ಅನುಪಪತ್ತಿಗಳನ್ನು ಪರಿಹರಿಸಲಾಗಿದೆ. ಅಂದರೆ 'ಮುಖ್ಯಮ್' ಎಂಬ ಮಾತಿನಿಂದ ಎರಡನೆಯ ಅನುಪಪತ್ತಿಯು ಉಳಿದ ಮಾತುಗಳಿಂದ ಮೊದಲನೆಯ ಅನುಪಪತ್ತಿಯು ಪರಿಹಾರವಾಗಿದೆಯೆಂದು ತಿಳಿಯಬೇಕು.

'ಉಭಯೋರಪಿ ಮುಖ್ಯಂ" ಎಂಬ ವಾಕ್ಯದಿಂದ ಮೂರನೆಯ ಅನುಪಪತ್ತಿಯು "ಸರ್ವಾಶುಭಾತ್ತೃತ್ವಸ್ಯಾಪಿ ಪ್ರಸಂಗಾತ್" ಎಂಬುದರಿಂದ ಕೊನೆಯ ಅನುಪಪತ್ತಿಯು ನಿರಾಕೃತವಾಯಿತೆಂದು ತಿಳಿಯಬೇಕು.

**प्रकाशः** – नन्वत्रच्छत्रिन्यायस्य टीकायामुक्तेः कथमुभयमुख्यत्वोक्तिरित्यत आह – **तथा चेति** । च्छत्रिन्यायोऽसम्भवपक्ष एवेति भावः ।

पूर्वं सर्वात्तृत्वं सङ्कुचितमुपेत्य असम्भवतिव्याप्ती उपपादिते, अधुनाऽसङ्कुचितमेव तदादाय तदुपपादयति – **यद्वेति** ।

ಟೀಕೆಯಲ್ಲಿ ಛತ್ರಿನ್ಯಾಯವನ್ನು ಹೇಳಿರುವಾಗ ಇಬ್ಬರಲ್ಲಿಯೂ ಮುಖ್ಯಾರ್ಥವನ್ನು ಹೇಳಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ತಥಾಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಛತ್ರಿನ್ಯಾಯವು ಅಸಂಭವಪಕ್ಷದಲ್ಲಷ್ಟೇ ವಿವಕ್ಷಿತವೆಂದು ತಿಳಿಯಬೇಕು.

ಹಿಂದೆ ಸರ್ವಾತ್ತೃತ್ವವನ್ನು ಸಂಭವತ್ಸರ್ವಾತ್ತೃತ್ವವೆಂದು ಸಂಕೋಚ ಮಾಡಿ ಅಸಂಭವ ಮತ್ತು ಅತಿವ್ಯಾಪ್ತಿಗಳನ್ನು ಹೇಳಲಾಯಿತು. ಈಗ ಅಸಂಕುಚಿತವಾದ ಸರ್ವಾತ್ತೃತ್ವವನ್ನು ಸ್ವೀಕರಿಸಿ ಅಸಂಭವ ಅತಿವ್ಯಾಪ್ತಿಗಳನ್ನು 'ಯದ್ವಾ' ಇತ್ಯಾದಿ ಗ್ರಂಥದಿಂದ ಉಪಪಾದಿಸುತ್ತಿದ್ದಾರೆ.

**प्रकाशः** – पिबतोर्जीवेश्वरत्वमुपेत्य ब्रह्मलिङ्गसहचरितमपि पातृत्वं जीवे मुख्यं, ईश्वरे त्वमुख्यमिति स्वीकारे, चराचरात्मकसर्वात्तृत्वरूपब्रह्मलिङ्गसहचरितमपि प्रागुक्तं, सर्वात्तृत्वं जीव एव मुख्यं, ईश्वरे त्वमुख्यमित्यसम्भव इत्यर्थः ।

'ಯದ್ವಾ' ಇತ್ಯಾದಿ ಗ್ರಂಥದ ಅಭಿಪ್ರಾಯ ಹೀಗಿದೆ - 'ಪಿಬತ್' ಪ್ರಾತಿಪದಿಕದಿಂದ ಜೀವೇಶ್ವರರಿಬ್ಬರೂ ಸಹ ಪ್ರತಿಪಾದ್ಯರೆಂದು ಅಂಗೀಕರಿಸಿ ಬ್ರಹ್ಮಲಿಂಗಗಳಿದ್ದರೂ ಪಾತೃತ್ವವನ್ನು ಜೀವನಲ್ಲಿ ಮುಖ್ಯವಾಗಿ ಹೇಳಿ ಈಶ್ವರನಲ್ಲಿ ಅಮುಖ್ಯವಾಗಿ ಹೇಳುವುದಾದರೆ ಚರಾಚರಸ್ವರೂಪವಾದ ಸರ್ವಾತ್ತೃತ್ವವೆಂಬ ಬ್ರಹ್ಮನ ಲಿಂಗವಿದ್ದರೂ ಹಿಂದೆ ಹೇಳಲ್ಪಟ್ಟ ಸರ್ವಾತ್ತೃತ್ವವನ್ನು ಜೀವನಲ್ಲೇ ಮುಖ್ಯವಾಗಿ ಹೇಳಿ ಈಶ್ವರನಲ್ಲಿ ಅಮುಖ್ಯವಾಗಿ ಹೇಳಬಹುದೆಂಬ ಆಪತ್ತಿ ಬರುವುದರಿಂದ ಅಸಂಭವ ದೋಷ ಬರುತ್ತದೆಂದು ತಿಳಿಯಬೇಕು.

**प्रकाशः** – यद्युभयोरपीदं मुख्यं, तदा प्राक्तनमपि सर्वात्तृत्वं द्वयोः स्यात्, ब्रह्मलिङ्गबाधस्योभयत्र तुल्यत्वात्, तथा चातिव्याप्तिरित्यर्थः ।

ಒಂದು ವೇಳೆ ಜೀವೇಶ್ವರರಿಬ್ಬರಲ್ಲಿಯೂ ಮುಖ್ಯವಾದ ಪಾತೃತ್ವ ಬರುವುದಾದರೆ ಹಿಂದಿನ ಅಧಿಕರಣದಲ್ಲಿ ಸಾಧಿಸಲ್ಪಟ್ಟ ಸರ್ವಾತ್ತೃತ್ವವೂ ಸಹ ಇಬ್ಬರಿಗೂ ಬರುತ್ತದೆ. ಏಕೆಂದರೆ ಬ್ರಹ್ಮಲಿಂಗದಿಂದ ಬಾಧವು ಎರಡೂ ಪಕ್ಷದಲ್ಲಿ ಸಮಾನವಾಗಿದೆ. ಆದ್ದರಿಂದ 'ಅತಿವ್ಯಾಪ್ತಿ' ಎಂದರ್ಥ.

**प्रकाशः** – ननु टीकायां ''तथा च लक्षणमयुक्तं'' इति पूर्वपक्षोपसंहारोऽयुक्तः, 'कर्मफलभोगं विनाऽपि'' इत्यादिपूर्ववाक्ये प्रागुक्तसंहर्तृत्वाङ्गीकारप्रतीतेरित्याशङ्कापूर्वं तद्व्याचष्टे – **लक्षणमयुक्तमितीति** ।

ಟೀಕೆಯಲ್ಲಿ ಪೂರ್ವಪಕ್ಷವನ್ನು ಉಪಸಂಹಾರ ಮಾಡಿದ್ದಾರೆ. ಇದು ತಪ್ಪು. ಏಕೆಂದರೆ 'ಕರ್ಮಫಲಭೋಗಂ ವಿನಾಪಿ' ಇತ್ಯಾದಿಯಾಗಿ ಹಿಂದಿನ ವಾಕ್ಯದಲ್ಲಿ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಸಂಹರ್ತೃತ್ವವನ್ನು ಅಂಗೀಕರಿಸಲಾಗಿದೆಯೆಂಬ ಪ್ರತೀತಿಯು ಬರುತ್ತದೆ. ಆದ್ದರಿಂದ ಸಂಹರ್ತೃತ್ವವೆಂಬ ಲಕ್ಷಣವು ಅಯುಕ್ತವಾಗಿದೆಯೆಂಬ ಪೂರ್ವಪಕ್ಷವನ್ನು ಉಪಸಂಹಾರ ಮಾಡಲು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ ಪೂರ್ವಪಕ್ಷವಾಕ್ಯವನ್ನು ವ್ಯಾಖ್ಯಾನಿಸುವ ಮೂಲಕ 'ಲಕ್ಷಣಮಯುಕ್ತಮಿತಿ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

प्रकाशः – ''यस्सेतुरिति पिबतोरेकवचनेन विशेषणादेक एव पाता । स च ब्रह्मत्वविशेषणाच्च विष्णुरेव'' इति वाक्यस्योद्भाष्यत्वभ्रमं निराह – यस्सेतुरित्यादिना ।

''सेतुत्वादक्षरत्वतः'' इति स्वोक्तं टीकाविरुद्धमिति भ्रमं वारयति - उपलक्षणमिति । व्याख्येयमिति ।

यस्सेतुरीजानानामक्षरं ब्रह्म यत्परम् ।।

इति भाष्यं सूत्रस्य सेतुत्वादिविशेषणादित्यर्थवर्णनपरतया व्याख्येयमित्यर्थः । शिष्टं स्पष्टमिति भावः ।।

इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे गुहाधिकरणं सम्पूर्णम् ।।

''ಯಸ್ಸೇತುರಿತಿ ಪಿಬತೋರೇಕವಚನೇನ ವಿಶೇಷಣಾದೇಕ ಏವ ಪಾತಾ । ಸ ಚ ಬ್ರಹ್ಮತ್ವವಿಶೇಷಣಾಚ್ಚ ವಿಷ್ಣುರೇವ''

'ಯಸ್ಸೇತುಃ' ಎಂಬಲ್ಲಿ 'ಪಿಬತೋಃ' ಎಂಬ ವಿಶೇಷಣವಾಚಕ ಪದವು ಏಕವಚನದಲ್ಲಿದೆ. ಇದರಿಂದ ಪಾತೃತ್ವವು ಒಬ್ಬನಲ್ಲೇ ಬರುತ್ತದೆಂದು ತಿಳಿಯುತ್ತದೆ. ಅದು ಬ್ರಹ್ಮನಲ್ಲಿ ವಿಶೇಷಣವಾಗಿರುವುದರಿಂದ ಆತ್ಮತ್ವವುಳ್ಳವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯವಾಗುತ್ತದೆ. ಟೀಕೆಯ ಈ ಮಾತಿಗೆ ವಾಖ್ಯೇಯವಾದ ಭಾಷ್ಯ ಇಲ್ಲವೆಂಬ ಭ್ರಮೆಯನ್ನು 'ಯಸ್ಸೇತುಃ' ಎಂಬ ವಾಕ್ಯದಿಂದ ಗ್ರಂಥಕಾರರು ಪರಿಹರಿಸುತ್ತಿದ್ದಾರೆ.

''ಸೇತುತ್ವಾದರಕ್ಷರತ್ವತಃ'' ತಮ್ಮ ಮಾತು ಟೀಕೆಗೆ ವಿರುದ್ಧವಾಗಿದೆ ಎಂಬ ಭ್ರಮೆಯನ್ನು ಉಪಲಕ್ಷಣಯಾ ಎಂಬ ಮಾತಿನಿಂದ ಪರಿಹರಿಸುತ್ತಿದ್ದಾರೆ.

'ಯಸ್ಸೇತುರೀಜಾನಾನಾಮಕ್ಷರಂ ಬ್ರಹ್ಮ ಯತ್ಪರಮ್' ಎಂಬ ಭಾಷ್ಯದ ಮಾತು ಸೇತುತ್ವಾದಿ ವಿಶೇಷಣಗಳಿರುವುದರಿಂದ ಬ್ರಹ್ಮನೇ ಕರ್ಮಫಲಭೋಕ್ತೃವಾಗಿದ್ದಾನೆಂದು ಸೂತ್ರವನ್ನು ವ್ಯಾಖ್ಯಾನಿಸುತ್ತಿದೆಯೆಂದು ತಿಳಿಯಬೇಕು. ಉಳಿದ ಟೀಕಾಮಾತುಗಳ ಅರ್ಥವು ಉಪನ್ಯಾಸರೂಪವಾದ ವ್ಯಾಖ್ಯಾನದಿಂದಲೇ ಸ್ಪಷ್ಟವಾಗಿದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಗುಹಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಗುಹಾಧಿಕರಣ (೧-೨-೩)

**गुरुराजीयम्** – तद्यदीत्यादिटीकाऽनुपपन्ना । कर्मफलभोक्तृत्वस्यान्यनिष्ठत्वेऽपि जन्मादिसूत्रोक्तसर्वसंहर्तृत्वादिरूपसर्वात्तृत्वस्य ब्रह्ममात्रनिष्ठत्वोपपत्त्याऽसम्भवाभावात् ।

नच भक्षयितृत्वरूपमपि सर्वात्तृत्वं ब्रह्मलक्षणत्वेनाभिमतमित्यन्यस्य तदङ्गीकारे तदसम्भव इति वाच्यम् । सर्वात्तृत्वमित्यत्र सर्वशब्दस्य सङ्कुचितवृत्तित्वाभ्युपगमे कर्मफलभोक्तृत्वांशेऽपि सङ्कोचापत्त्या असङ्कुचितत्वे चाशुभफलभोक्तृत्वस्यापत्त्या तस्य लक्षणत्वासम्भवात् ।

नच सम्भवत्सर्वात्तृत्वमेव लक्षणत्वेनाभिमतमिति वाच्यम् । कर्मफलभोक्तृत्वस्यापि कर्मबन्धरहिते ब्रह्मण्यसम्भवात् । तथा च कथमसम्भवः । एवं यदि चान्यस्यापीत्यादिटीकाप्यनुपपन्नैव। कर्मफलभोक्तृत्वरूपस्य ऋतपानकर्तृत्वस्यान्यनिष्ठत्वेऽपि लक्षणत्वेनाभिमतस्य सर्वात्तृत्वस्य ब्रह्ममात्रनिष्ठत्वेनान्यत्राभावेन लक्षणस्यातिव्याप्त्यसम्भवादित्यतो व्याचष्टे – **पूर्वत्रेत्यादिना** ।।

अस्मिन्पक्षे द्वयोरपि पातृत्वं मुख्यमिति कुत्राप्यनुक्तस्य पूर्वपक्षस्य कल्पनं समायातीत्यतः पक्षान्तरमाह – **यद्वेति** ।। टीकाकारैः स्पष्टतया ब्रह्मशब्देन विशेषणादित्यनुक्त्वाऽस्पष्टत्वादेकवचनेन विशेषणादिति व्याख्यातम् । तेन च तावन्मात्रमेवार्थ इति भातीत्यतो व्याचष्टे – **विशेषणाच्चेतीति** ।।

पिबतोर्ब्रह्मत्वसाधकत्वेन स्वोक्तस्य सेतुत्वाक्षरत्वादेरुत्सूत्रितत्वभ्रान्तिवारणाय तदप्युपलक्षणत्वेन सूत्रार्थतया योजनीयमित्याह – **उपलक्षणं चैतदिति** ।।

।। इति श्रीकेशवभट्टारकेण विरचितायां भावदीपिकायां

गुहाधिकरणम् सम्पूर्णम् ।। ।।

ಪರಿಪೂರ್ಣಚಂದ್ರಿಕಾ

# ೦೩-ಗುಹಾಧಿಕರಣ

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣಪಂಚಿಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿಃ,
ಸೂತ್ರಾರ್ಥರತ್ನಾವಳಿಃ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

## गुहाधिकरणम् - ३

**ॐ गुहां प्रविष्टावात्मानौ हि तद्दर्शनात् ॐ ॥ १-२-११ ॥**

**ॐ विशेषणाच्च ॐ ॥ १-२-१२ ॥**

**द्विवचनश्रुतेरपि बलं निरवकाशत्वं नास्ति । विष्णोरेव बलत्वात् ॥**

ನ್ಯಾಯವಿವರಣೆ

ದ್ವಿವಚನಶ್ರುತಿಯು ಪೂರ್ವಪಕ್ಷ ಪ್ರಾಪಕವೆನ್ನಲು ನಿರವಕಾಶ ಪ್ರಮಾಣವಿಲ್ಲ. ವಿಷ್ಣುವಿನಲ್ಲಿ ದ್ವಿತ್ವವು ಉಪಪನ್ನವಾಗುವುದರಿಂದ ದ್ವಿವಚನ ಶ್ರುತಿಯನ್ನು ಕೂಡಿಸಬಹುದು.

'ऋतं पिबन्तौ' इति वाक्ये बुद्धिजीवौ प्रतिपाद्यौ भवितुमर्हतः । कुतः? कर्मफलभोक्तृत्वेनैकस्य जीवत्वावश्यम्भावात् । एकस्मिन् शरीरे भोक्तृजीवद्वयासम्भवेन, द्वितीयस्य भोगोपकरणतयोपचारेण भोक्तुः बुद्धित्वोपपत्तेः ।

'ಋತಂ ಪಿಬಂತೌ' ಎಂಬ ವಾಕ್ಯದಲ್ಲಿ ಪ್ರತಿಪಾದ್ಯರಾದವರು ಬುದ್ಧಿಜೀವರೇ ಆಗಿದ್ದಾರೆ. ಏಕೆಂದರೆ ಕರ್ಮಫಲಭೋಕ್ತೃತ್ವವನ್ನು ಹೇಳಿದ್ದರಿಂದ ಒಬ್ಬನನ್ನು ಜೀವನೆಂದು ಅವಶ್ಯ ಒಪ್ಪಬೇಕು. ಒಂದೇ ಶರೀರದಲ್ಲಿ ಇಬ್ಬರು ಭೋಕ್ತೃಗಳಾದ ಜೀವರನ್ನು ಒಪ್ಪುವುದು ಅಸಂಭಾವಿತವಾದ್ದರಿಂದ ಎರಡನೆಯವನನ್ನು ಜೀವನೆಂದು ಹೇಳಲಾಗದು. ಆದ್ದರಿಂದ ಭೋಗಕ್ಕೆ ಉಪಕರಣವಾದ್ದರಿಂದ ಔಪಚಾರಿಕವಾಗಿ ಭೋಕ್ತೃ ಎನಿಸಿದ ಬುದ್ಧಿಯನ್ನೇ ಎರಡನೆಯದ್ದನ್ನಾಗಿ ಸ್ವೀಕರಿಸಬೇಕು.

ಪರಿಪೂರ್ಣಚಂದ್ರಿಕಾ

छायातपत्वं च तयोः चैतन्यप्रकाशत्वतदभावाभ्यां युज्यते ।

ಈ ಬುದ್ಧಿಜೀವರಲ್ಲಿ ಛಾಯಾತಪತ್ವವನ್ನು ಹೇಗೆ ಹೇಳಲು ಸಾಧ್ಯ ? ಎಂದರೆ ಚೈತನ್ಯಪ್ರಕಾಶತ್ವ ಜೀವನಲ್ಲಿರುವುದರಿಂದ ಜೀವನು ಆತಪನೆನಿಸುತ್ತಾನೆ. ಬುದ್ಧಿಯಲ್ಲಿ ಚೇತನ್ಯಪ್ರಕಾಶತ್ವ ಇಲ್ಲದ್ದರಿಂದ ಛಾಯಾ ಎನಿಸುತ್ತದೆ.

यदि वा 'अस्य गोद्वितीयोऽन्वेष्टव्यः' इतिवत् सजातीयग्रहणस्य न्याय्यत्वाच्चेतन एव द्वितीये ग्राह्ये जीवेश्वराविमौ भवतः । तथाच ब्रह्मविद्यात्वमपि न विरुद्ध्यते । ईश्वरस्याभोक्तृत्वेऽपि भोक्तृसाहचर्याच्छत्रिन्यायेन बोक्तृत्वोपचारः । छायातपत्वं च अविद्याविद्यावत्त्वेन तयोरुपपद्यते ।

ಒಂದು ವೇಳೆ 'ಅಸ್ಯ ಗೋರ್ದ್ವಿತೀಯೋऽನ್ವೇಷ್ಟವ್ಯಃ' 'ಈ ಎತ್ತಿಗೆ ಜೋಡಿಯನ್ನು ಹುಡುಕಬೇಕು' ಎಂದು ಹೇಳಿದಾಗ ಎರಡನೆಯದ್ದು ಎತ್ತೆಂದು ಹೇಗೆ ವಿವಕ್ಷಿಸುತ್ತವೆಯೋ ಆದೇರೀತಿಯಾಗಿ ಒಬ್ಬನನ್ನು ಜೀವನೆಂದು ವಿವಕ್ಷಿಸಿದಾಗ ಮತ್ತೊಬ್ಬನೂ ಸಹ ಚೇತನನೇ ಆಗಬೇಕೆಂದು ಹೇಳುವುದಾದರೆ ಈಶ್ವರನನ್ನು ಎರಡನೆಯವನೆಂದು ಪರಿಗಣಿಸಬಹುದು. ಆದ್ದರಿಂದ ಜೀವೇಶ್ವರರೇ 'ಋತಂ ಪಿಬಂತೌ' ಎಂಬ ಶ್ರುತಿಯಿಂದ ಪ್ರತಿಪಾದ್ಯರಾಗುತ್ತಾರೆ. ಈ ಪಕ್ಷದಲ್ಲಿ ಬ್ರಹ್ಮವಿದ್ಯೆಯೆಂಬ ಮಾತಿಗೂ ಸಹ ವಿರೋಧ ಬರುವುದಿಲ್ಲ. ವಸ್ತುತಃ ಈಶ್ವರನು ಅಭೋಕ್ತ್ಯವಾಗಿರಬಹುದು. ಆದರೆ ಭೋಕ್ತ್ಯವಾದ ಜೀವನ ಸಾಹಚರ್ಯ ಬ್ರಹ್ಮನಿಗಿರುವುದರಿಂದ ಛತ್ರಿನ್ಯಾಯದಿಂದ ಔಪಚಾರಿಕವಾಗಿ ಭೋಕ್ತೃತ್ವವನ್ನು ಹೇಳಬಹುದು. ಛಾಯಾತಪತ್ವ ಎಂದರೆ ಜೀವನು ಅವಿದ್ಯಾವಿಷಯನಾದ್ದರಿಂದ ಛಾಯಾ ಎನಿಸುತ್ತಾನೆ. ಬ್ರಹ್ಮನು ವಿದ್ಯಾವಿಷಯನಾದ್ದರಿಂದ ಆತಪನೆನಿಸುತ್ತಾನೆ.

'यः सेतुः' इति वाक्यबलादीश्वर एव केवलः किं न स्यादिति चेन्न, तस्मिन् द्विवचनश्रुतेः कर्मफलभोगस्य छायातपत्वस्य चावकाशाभावात् । 'यः सेतुः' इति वाक्यस्य तु बाधकवशेन कथञ्चिज्जीवविषयतया ईश्वरमात्रविषयतया वा व्याख्यातव्यत्वादिति प्राप्ते,

'ಯಃ ಸೇತುಃ' ಎಂಬ ವಾಕ್ಯಬಲದಿಂದ ಕೇವಲ ಈಶ್ವರನೇ ಪ್ರತಿಪಾದ್ಯನೆಂದು ಏಕೆ ಹೇಳಬಾರದು? ಎಂದು ಪ್ರಶ್ನಿಸಬಾರದು. ಈಶ್ವರನೊಬ್ಬನೇ 'ಋತಂ ಪಿಬಂತೌ' ಎಂಬ ಶ್ರುತಿಯಿಂದ ಪ್ರತಿಪಾದ್ಯನಾದರೆ ಅವನಲ್ಲಿ ದ್ವಿವಚನವಾಗಲೀ ಕರ್ಮಫಲಭೋಗವಾಗಲಿ ಛಾಯಾತಪತ್ವವಾಗಲೀ

ಉಪಪನ್ನವಾಗುವುದಿಲ್ಲ. 'ಯಃ ಸೇತುಃ' ಎಂಬ ವಾಕ್ಯವನ್ನಾದರೂ ಬಾಧಕವಶಾತ್ ಕಥಂಚಿತ್ ಜೀವ ವಿಷಯವಾಗಿ ಅಥವಾ ಈಶ್ವರ ವಿಷಯವಾಗಿ ವ್ಯಾಖ್ಯಾನಿಸಬೇಕು. ಆದ್ದರಿಂದ 'ಋತಂ ಪಿಬಂತೌ' ಎಂಬ ಶ್ರುತಿಯು ಬುದ್ಧಿಜೀವರನ್ನು ಅಥವಾ ಜೀವೇಶ್ವರರನ್ನು ಪ್ರತಿಪಾದಿಸುತ್ತದೆಂದು ಪೂರ್ವಪಕ್ಷ.

**प्रतिविहितम् । परमेश्वर एवात्र प्रतिपाद्यः, गुहां प्रविष्टत्वलिङ्गात् । तस्यान्यत्र सम्भवेऽपि प्रसिद्धस्यैव ग्राह्यत्वात् । नहि 'मैथिलः' 'पाञ्चालः' इत्युक्ते, यः कोऽपि मिथिलायां भवः, पाञ्चालेषु भवो वा गृह्यते, किन्तु प्रसिद्धस्तदधिपतिरेव ।**

ಈ ಪೂರ್ವಪಕ್ಷ ಸರಿಯಲ್ಲ. 'ಋತಂ ಪಿಬಂತೌ' ಎಂಬ ಶ್ರುತಿಯಿಂದ ಪ್ರತಿಪಾದ್ಯನಾದವನು ಈಶ್ವರನೇ ಆಗಿದ್ದಾನೆ. ಏಕೆಂದರೆ ಗುಹಾಪ್ರವಿಷ್ಟತ್ವ ಲಿಂಗವು ವಿಷ್ಣುವಿನಲ್ಲಿ ಬಿಟ್ಟು ಬೇರೆ ಯಾರಲ್ಲಿಯೂ ಬರುವುದಿಲ್ಲ. ಬೇರೆಯವರಲ್ಲಿ ಕಥಂಚಿತ್ ಬರುವುದಾದರೂ ಪ್ರಸಿದ್ಧವಾದದ್ದನ್ನೇ ಸ್ವೀಕರಿಸಬೇಕು. ಏಕೆಂದರೆ 'ಮೈಥಿಲಃ' 'ಪಾಂಚಾಲಃ' ಎಂದು ಹೇಳಿದಾಗ ಮಿಥಿಲಾ ಪಟ್ಟಣದಲ್ಲಿ ಅಥವಾ ಪಾಂಚಾಲ ದೇಶದಲ್ಲಿ ಹುಟ್ಟಿದ ಯಾರೋ ಒಬ್ಬನನ್ನು ಮೈಥಿಲನೆಂದೋ, ಪಾಂಚಾಲನೆಂದೋ ಹೇಳುವುದಿಲ್ಲ. ಹೊರತಾಗಿ ಆ ದೇಶಕ್ಕೆ ಅಧಿಪತಿಯಾದ ರಾಜನನ್ನೇ 'ಮೈಥಿಲಃ', 'ಪಾಂಚಾಲಃ' ಎಂದು ಹೇಳುತ್ತಾರೆ. ಮತ್ತು 'ಯಃ ಸೇತುಃ' ಎಂಬ ಹೇತುತ್ವವನ್ನು ವಿಶೇಷಣವನ್ನಾಗಿ ಹೇಳಿರುವುದರಿಂದಲೂ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆ.

**'यः सेतुः' इति विशेषणाच्च । बाधकात् सर्वमन्यथानेतव्यमिति चेन्न, तदभावात् । द्विवचनश्रुतिरीश्वरे निरवकाशेत्युक्तमिति चेत्, तत्राह – द्विवचनेति ।।**

ಎಲ್ಲವನ್ನೂ ಅನ್ಯಥಾ ವ್ಯಾಖ್ಯಾನಿಸಬೇಕಲ್ಲವೇ? ಎಂಬ ಶಂಕೆಗೆ ಅವಕಾಶವಿಲ್ಲ. ಯಾವುದೇ ಬಾಧಕಗಳು ಇಲ್ಲಿ ಕಾಣಿಸುತ್ತಿಲ್ಲ. ಇನ್ನು ದ್ವಿವಚನ ಶ್ರುತಿಯು ಈಶ್ವರನಲ್ಲಿ ಸಾಧ್ಯವಿಲ್ಲವಲ್ಲ? ಎಂದೂ ಸಹ ಶಂಕಿಸಬಾರದೆಂದು 'ದ್ವಿವಚನ ಶ್ರುತೇಃ' ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ.

**द्विवचनान्ता श्रुतिः द्विवचनश्रुतिः । निरवकाशतया प्रतीताया अपीत्यर्थः । कुत इत्यत आह – विष्णोरेवेति ।। निर्भेदस्यैवेत्यर्थः ।**

ದ್ವಿವಚನಶ್ರುತಿಯೆಂದರೆ ದ್ವಿವಚನಾಂತವಾದ ಶ್ರುತಿಯೆಂದರ್ಥ. ಇದು ನಿರವಕಾಶವೆಂದು ಪ್ರತೀತವಾದರೂ ವಿಷ್ಣುವೇ ಶ್ರುತಿಪ್ರತಿಪಾದ್ಯನಾಗುತ್ತಾನೆ. ಏಕೆಂದರೆ 'ವಿಷ್ಣೋಃ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ವಿಷ್ಣೋರೇವ' ಎಂದರೆ ಯಾವುದೇ ತರಹ ಭೇದವಿಲ್ಲದ ವಿಷ್ಣುವನ್ನು ದ್ವಿವಚನ ಶ್ರುತಿಯು ಪ್ರತಿಪಾದಿಸಬಹುದು ಎಂದರ್ಥ.

अयमर्थः – द्विवचनश्रुतिर्हि द्वित्वसङ्ख्यां प्रतिपादयति । द्वित्वसङ्ख्या च विष्णावङ्गीक्रियत एव । 'घर्मा समन्ताद्' इत्यादौ द्वित्वस्योक्तत्वात् ।

ಒಟ್ಟು ಅಭಿಪ್ರಾಯ. ದ್ವಿವಚನ ಶ್ರುತಿಯು ದ್ವಿತ್ವ ಸಂಖ್ಯೆಯನ್ನು ಪ್ರತಿಪಾದಿಸುತ್ತದೆ. ದ್ವಿತ್ವ ಸಂಖ್ಯೆಯು ವಿಷ್ಣುವಿನಲ್ಲಿದೆಯೆಂದು ನಾವು ಒಪ್ಪುತ್ತೇವೆ. ಏಕೆಂದರೆ 'ಘರ್ಮಾ ಸಮಾಂತಾತ್' ಎಂಬಲ್ಲಿ ವಿಷ್ಣುವಿನಲ್ಲಿ ದ್ವಿತ್ವವನ್ನು ಸಮರ್ಥಿಸಲಾಗಿದೆ.

द्वित्वे भेदोऽपि स्यादिति चेन्न । तर्कपक्षे विपर्ययापर्यवसानात् । अनुमानपक्षे च बाधितविषयत्वात् । 'व्यतिरेको गन्धवद्' इति न्यायेन व्यभिचाराच्चेति । अत एव श्रुतिर्द्विवचनेन प्रकृत्य 'यः सेतुः' इत्येकवचनेन विशिनष्टि ।

ದ್ವಿತ್ವವನ್ನು ಒಪ್ಪಿದರೆ ಭೇದವನ್ನು ಒಪ್ಪಬೇಕಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಇದು ತರ್ಕವೋ? ಅಥವಾ ಅನುಮಾನವೋ? ತರ್ಕವಾದರೆ 'ಯಃ ಭೇದಃ ದ್ವಿತ್ವಂ ಪರ್ಯವಸಾನಾತ್' ಎಂದು ದ್ವಿತ್ವವನ್ನುಪರ್ಯವಸಾನ ಮಾಡಲು ಸಾಧ್ಯವಿಲ್ಲ. ಅನುಮಾನವೆಂದು ಹೇಳಿದರೆ ಪಕ್ಷೀಭೂತವಾದ ವಿಷ್ಣುವಿನಲ್ಲಿ ಭೇದವೆಂಬ ಸಾಧ್ಯವೇ ಇರುವುದಿಲ್ಲ. ಆದ್ದರಿಂದ ಅನುಮಾನವು ಬಾಧಿತವಾಗುತ್ತದೆ. ಅಷ್ಟೇ ಅಲ್ಲದೆ 'ವ್ಯತಿರೇಕೋ ಗಂಧವತ್' ಎಂಬ ನ್ಯಾಯದಿಂದ ವ್ಯಭಿಚಾರದೋಷವೂ ಬರುತ್ತದೆ. ವಿಷ್ಣುವಿನಲ್ಲಿ ದ್ವಿತ್ವವಿದ್ದರೂ ಸಹ ಭೇದವು ಇಲ್ಲದ್ದರಿಂದಲೇ ಶ್ರುತಿಯು ದ್ವಿವಚನದಿಂದ ಪ್ರಕೃತನಾದವನನ್ನು 'ಯಃ ಸೇತುಃ' ಎಂಬುದಾಗಿ ಏಕವಚನದಿಂದ ವಿಶೇಷಣವನ್ನಾಗಿ ಹೇಳುತ್ತಿದೆ.

नन्विदमानन्दमयाधिकरणेन गतमेव । मैवम्, नहि तत्र द्विवचनं बहुवचनं वा शङ्कितम्, तदभावात् । किं नाम शब्दभेदादिना भेद इति ।

ಈ ಪೂರ್ವಪಕ್ಷದ ನಿರಾಕರಣೆಯು ಆನಂದಮಯಾಧಿಕರಣದ ನ್ಯಾಯದಿಂದಲೇ ಗತಾರ್ಥವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಆನಂದಮಯಾಧಿಕರಣದಲ್ಲಿ ದ್ವಿವಚನವಾಗಲಿ ಅಥವಾ ಬಹುವಚನವಾಗಲೀ ಪರಮಾತ್ಮನಲ್ಲಿ ಕೂಡುವುದಿಲ್ಲವೆಂದು ಆಕ್ಷೇಪಿಸಿಲ್ಲ. ಏಕೆಂದರೆ ಆಕ್ಷೇಪಕ್ಕೆ ದ್ವಿವಚನಶ್ರುತ್ಯಾದಿಗಳು ಅಲ್ಲಿ ಪ್ರಸಕ್ತವಾಗಿರುವುದಿಲ್ಲ. ಹೊರತಾಗಿ ಅನ್ನಮಯ ಮೊದಲಾದ ಬೇರೆ ಬೇರೆ ಶಬ್ದಗಳಿಂದ ಪ್ರತಿಪಾದ್ಯನಾದ ಮೇಲೆ ಪರಮಾತ್ಮನಲ್ಲಿ ಭೇದವು ಬರಬೇಕಲ್ಲವೇ? ಎಂಬ ಶಂಕೆಯನ್ನಷ್ಟೇ ಅಲ್ಲಿ ಪರಿಹರಿಸಿದ್ದಾರೆ.

ಗುಹಾಧಿಕರಣ (೧-೨-೩)

कर्मफलभोगश्चाङ्गीक्रियत एव । नच 'न वैशेष्याद्' इत्युक्तविरोधः । 'शुभं पिबत्यसौ नित्यम्' इति व्यवस्थाया उक्तत्वात् । छायातपत्वं चान्यत्र व्याख्यातमिति ॥

ಕರ್ಮಫಲಭೋಗವನ್ನೂ ಸಹ ವಿಷ್ಣುವಿನಲ್ಲಿ ಅಂಗೀಕರಿಸುತ್ತೇವೆ. ಹಾಗಾದರೆ 'ನ ವೈಶೇಷ್ಯಾದ್' ಎಂದು ಸೂತ್ರದಲ್ಲಿ ಹೇಳಿದ್ದರ ವಿರೋಧವೇ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. 'ಶುಭಂ ಪಿಬತ್ಯಸೌ ನಿತ್ಯಮ್' ಎಂಬ ಪ್ರಮಾಣದ ಆಧಾರದಿಂದ ಪರಮಾತ್ಮನಲ್ಲಿ ಕೇವಲ ಶುಭಕರ್ಮಫಲ ಭೋಕ್ತೃತ್ವವನ್ನು ಅಂಗೀಕರಿಸುತ್ತೇವೆ. ಇನ್ನು ಛಾಯಾತಪತ್ವವನ್ನು ಪರಮಾತ್ಮನಲ್ಲಿ ಹೇಗೆ ಕೂಡಿಸಬೇಕೆಂಬುದನ್ನು ಬೇರೆ ಕಡೆ ಪ್ರತಿಪಾದಿಸಿದ್ದೇವೆ.

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣೆಯ ಟೀಕೆಯ
ಕನ್ನಡಾನುವಾದದಲ್ಲಿ ಗುಹಾಧಿಕರಣವು ಸಮಾಪ್ತವಾಯಿತು.

श्रीमदानन्दतीर्थभगवत्पादाचार्यविरचितम्

# अणुभाष्यम्

## गुहाधिकरणम् - ३

अत्ता

ಅಣುಭಾಷ್ಯ - ಹೃದಯಗುಹೆಯಲ್ಲಿ ನೆಲೆಸಿ ಶುಭಫಲವನ್ನಷ್ಟೇ ತಿನ್ನುವವನು ವಿಷ್ಣುವೇ ಆಗಿದ್ದಾನೆ.

श्री राघवेन्द्रतीर्थविरचिता

# तत्वमञ्जरी

## गुहाधिकरणम् - ३

नन्वथापि न तस्य सर्वादनं युक्तम् । 'ऋतं पिबन्तौ सुकृतस्य लोके' इति ऋतशब्दितकर्मफलादनरूपऋतपातृत्वस्य देहहृदयगुहाप्रविष्टयोः जीवेश्वरयोः द्विवचनश्रुत्या प्रतीतावपि ईश्वरस्यानश्नन् इत्यादिना कर्मफलानत्तृत्वात् छत्रिन्यायेन जीवेश्वरौ ऋतं पिबन्तावित्युक्त्युपपत्तेरित्यतः प्राप्तम् – **गुहां प्रविष्टेत्यादिसूत्रद्वयम्** ।।

ಅತ್ತೃತ್ವಾಧಿಕರಣದಲ್ಲಿ ವಿಷ್ಣುವು ಸರ್ವಾತ್ತೃ ಎಂದು ಪ್ರತಿಪಾದಿಸಿದರು. ಇದು ಸರಿಯಲ್ಲ. ಏಕೆಂದರೆ 'ಋತಂ ಪಿಬಂತೌ ಸುಕೃತಸ್ಯ ಲೋಕೇ' ಇತ್ಯಾದಿ ಶ್ರುತಿಯಲ್ಲಿರುವ ಋತ ಶಬ್ದಕ್ಕೆ ಕರ್ಮಫಲದ ಅನುಭವವೆಂಬ 'ಋತಪಾತೃತ್ವ' ಎಂದರ್ಥ. ಇದು ಹೃದಯಗುಹೆಯಲ್ಲಿ ಪ್ರವಿಷ್ಟರಾದ ಜೀವ ಮತ್ತು ಈಶ್ವರರಿಗೆ ಇರುತ್ತದೆಂದು ತೋರುತ್ತದೆ. ಇವರಿಬ್ಬರಲ್ಲಿ ಈಶ್ವರನಿಗೆ 'ಅನಶ್ನನ್' ಎಂಬ ಶ್ರುತಿಯು ಕರ್ಮಫಲದ ಅನುಭವವಿಲ್ಲವೆಂದು ಹೇಳುತ್ತಿದೆ. ಆದ್ದರಿಂದ ಛತ್ರಿನ್ಯಾಯದಂತೆ ಜೀವನು ಮಾತ್ರ ಕರ್ಮಫಲ ಭೋಕ್ತ್ಯವೆನ್ನಬೇಕು. ಈ ಕಾರಣದಿಂದ ವಿಷ್ಣು 'ಸರ್ವಾತ್ತೃ' ಆಗಿದ್ದಾನೆ ಎಂಬ ಅತ್ತೃತ್ವಾಧಿಕರಣದಲ್ಲಿ ಹೇಳಿದ್ದು ತಪ್ಪಾಗುತ್ತದೆ ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ 'ಗುಹಾಂ ಪ್ರವಿಷ್ಟೌ' ಇತ್ಯಾದಿ ಎರಡು ಸೂತ್ರಗಳು ಹೊರಟಿವೆ.

तस्याप्यर्थः – **अत्तेति** ।। **सर्वग इत्यस्ति** । **लिङ्गैरित्याद्यन्वेति** । **सर्वगोऽत्ता** ऋतं पिबन्तावित्याद्युक्तः सर्वप्राणिशरीरहृदयगुहास्थः सन् कर्मफलात्ता स सर्वात्तृत्वेनोक्तः स एको विष्णुरेव, नतु जीवेश्वरौ ।

ಈ ಅಧಿಕರಣದ ಸಾರವನ್ನೇ ಅಣುಭಾಷ್ಯದಲ್ಲಿ 'ಅತ್ತಾ' ಎಂದು ಸಂಗ್ರಹಿಸಿದ್ದಾರೆ. 'ಸರ್ವಗಃ' ಎಂಬುದನ್ನು 'ಲಿಂಗೈಃ ಸರ್ವೈಃ ರ್ಯುತೋ ಹಿ 'ಎಂಬುದನ್ನೂ ಸಹ ಇಲ್ಲಿ ಅನ್ವಯ ಮಾಡಬೇಕು. ಅಂದರೆ ಸರ್ವಗತನಾದ ಮತ್ತು ಸರ್ವಾತ್ತೃವಾದ ವಿಷ್ಣುವು 'ಋತಂ ಪಿಬಂತೌ' ಎಂಬ ಶ್ರುತಿಯಿಂದ ಪ್ರತಿಪಾದ್ಯನಾಗಿದ್ದಾನೆ. ಈ ಶ್ರುತಿ ಹೇಳುವಂತೆ ಸಕಲಪ್ರಾಣಿಗಳ ಶರೀರಹೃದಯಗುಹೆಯಲ್ಲಿ ನೆಲೆಸಿ ಕರ್ಮಫಲವನ್ನು ಅನುಭವಿಸುತ್ತಾನೆ. ಆದ್ದರಿಂದ ಸಕಲವನ್ನು ತಿನ್ನುವವನು ವಿಷ್ಣುವೊಬ್ಬನೇ ಆಗಿದ್ದಾನೆ ಹೊರತು, ಜೀವೇಶ್ವರರಲ್ಲ.

कुतः? **लिङ्गैः सर्वैर्युतो हि ॥** 'गुहां प्रविष्टौ इति, 'यः सेतुरीजानानाम्' इति, 'अक्षरं ब्रह्म तत्परम्' इति गुहाप्रविष्टत्व-सेतुत्व-अक्षरत्व-एकवचनोक्तत्व-एकत्वादि लिङ्गैर्युतत्वादित्यर्थः । एतैर्लिङ्गैर्युतोऽत्ता विष्णुरेव । तेषां भाष्यदिशा वैष्णवत्वप्रसिद्धेरिति वा ।

ಏಕೆಂದರೆ 'ಲಿಂಗೈಃ ಸರ್ವೈರ್ಯುತೋ ಹಿ' ಎಂದು ಕಾರಣವನ್ನು ಹೇಳಿದ್ದಾರೆ. ಅಂದರೆ 'ಗುಹಾಂ ಪ್ರವಿಷ್ಟೌ' 'ಯಃ ಸೇತುಃರೀಜಾನಾನಾಮ್' 'ಅಕ್ಷರಂ ಬ್ರಹ್ಮ ತತ್ಪರಮ್' ಇವೇ ಮೊದಲಾದ ಶ್ರುತಿಗಳಲ್ಲಿ ಹೇಳಲ್ಪಟ್ಟ ಗುಹಾಪ್ರವಿಷ್ಟತ್ವ, ಸೇತುತ್ವ, ಅಕ್ಷರತ್ವ, ಏಕವಚನದಿಂದ ಸೂಚಿತವಾದ ಏಕತ್ವ ಮೊದಲಾದ ಲಿಂಗಗಳೆಲ್ಲವೂ ವಿಷ್ಣುವಿನಲ್ಲೇ ಉಪಪನ್ನವಾಗುತ್ತವೆ. ಈ ಎಲ್ಲಾ ಲಿಂಗಗಳ ಬಲದಿಂದ ವಿಷ್ಣುವೇ 'ಅತ್ತಾ' ಎಂದು ನಿರ್ಣಯವಾಗುತ್ತದೆ. ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಗಳಿಂದ ಈ ಎಲ್ಲಾ ಧರ್ಮಗಳು ವಿಷ್ಣುವಿನ ಧರ್ಮಗಳೆಂದು ಸ್ಪಷ್ಟವಾಗುತ್ತದೆ.

अत्रापि विष्णुरिति वर्तमाने स इत्युक्तिः सर्वत्रैक्यद्योतनाय वा । 'क इत्था वेद यत्र सः' इति तच्छब्देन पूर्वप्रकृतो विष्णुरेव द्विरूपोऽत्रोच्यते, नत्वप्रकृतो जीव इति सूचनाय वा ।

ಈ ಅಧಿಕರಣದಲ್ಲಿ ವಿಷ್ಣು ಎಂಬುದನ್ನು ಅನುವೃತ್ತಿಯಿಂದಲೇ ತಿಳಿಯುತ್ತಿದ್ದರೂ 'ಸಃ' ಎಂದು ಹೇಳಿರುವುದು ಎಲ್ಲಾ ಶ್ರುತಿಗಳಲ್ಲಿ ಪ್ರತಿಪಾದ್ಯನಾದವನು ಒಬ್ಬನೇ ಆಗಿದ್ದಾನೆಂದು ತಿಳಿಸುವುದಕ್ಕಾಗಿ. ಅಥವಾ 'ಕ ಇತ್ಥಾ ವೇದ ಯತ್ರ ಸಃ' ಎಂಬ ಶ್ರುತಿಯಲ್ಲಿ 'ತತ್' ಶಬ್ದದಿಂದ ಪೂರ್ವಪ್ರಕೃತನಾದ ವಿಷ್ಣುವೇ ಎರಡು ರೂಪಗಳಿಂದ ಈ ಶ್ರುತಿಯಲ್ಲಿ ಪ್ರತಿಪಾದ್ಯನಾಗಿದ್ದಾನೆ ಹೊರತು ಅಪ್ರಕೃತನಾದ ಜೀವನು ಹೃದಯಗುಹೆಯಲ್ಲಿ ನೆಲೆಸಿದ ಮತ್ತೊಬ್ಬ ಚೇತನನೆಂದು ಹೇಳುವುದು ಸರಿಯಲ್ಲ. ಇದನ್ನು ಸೂಚಿಸುವುದಕ್ಕಾಗಿ 'ಸಃ' ಎಂದು ಹೇಳಿದ್ದಾರೆ.

न चानशनश्रुतिविरोध इत्यतोऽपि स इति । 'तस्येदाहुः पिप्पलं स्वाद्वग्रे तन्नो नशद् यः पितरं न वेद' इति अनशनवाक्यशेषे यो जीवानद्यात्तृत्वेनोक्तः स विष्णुरेवात्ता ऋतपानकर्तेत्यर्थः । 'ऋतं सत्यं तथा धर्मः सुकृतं च' इत्यादेः । तथाच श्रुतिः जीवाद्याशुभादनपरेति भावः । एक इति जीवेशरूपानेककोटिनिरासाय। सर्वग इति गुहास्थत्वयुक्तिसूचनाय अत्ताराविति वाच्ये अत्तेत्युक्तिः रूपद्वयैक्योक्त्यर्था ॥

ಹಾಗಾದರೆ 'ಅನಶ್ನನ್' ಎಂಬ 'ಅನಶ್ನನ್' ಶ್ರುತಿ ವಿರೋಧವು ಬರುತ್ತದಲ್ಲವೇ? ಎಂದು

ಪ್ರಶ್ನಿಸಬಾರದೆನ್ನಲು 'ಸಃ' ಎಂದು ಹೇಳಿದ್ದಾರೆ. 'ತಸ್ಯೇದಾಹುಃ ಪಿಪ್ಪಲಂ ಸ್ವಾದ್ವಗ್ರೇ ತನ್ನೋ ನಶದ್ ಯಃ ಪಿತರಂ ನ ವೇದ' ಇತ್ಯಾದಿಯಾಗಿ ವಾಕ್ಯಶೇಷದಲ್ಲಿ ಜೀವನು ಅನುಭವಿಸುವ ಅಶುಭ-ಫಲವನ್ನು ಬಿಟ್ಟು ಶುಭಫಲವನ್ನಷ್ಟೇ ವಿಷ್ಣು ಅನುಭವಿಸುತ್ತಾನೆಂದು ಹೇಳಲಾಗಿದೆ. 'ಋತಂ ಸತ್ಯಂ ತಥಾ ಧರ್ಮಃ ಸುಕೃತಂ ಚ' ಇತ್ಯಾದಿಯಾದ ಪ್ರಮಾಣದಿಂದ 'ಋತ' ಶಬ್ದಕ್ಕೆ ಶುಭಫಲವೆಂದೇ ಅರ್ಥೈಸಬೇಕು. ಆದ್ದರಿಂದ 'ಋತಪಾನಕರ್ತೃ' ಎಂಬ ಶಬ್ದಕ್ಕೆ ಶುಭಫಲಭೋಕ್ತೃ ಎಂದರ್ಥ. ವಾಕ್ಯಶೇಷದಲ್ಲಿ ಹೇಳಲ್ಪಟ್ಟ ಶುಭಫಲಭೋಕ್ತೃತ್ವವನ್ನೇ 'ಋತಂ ಪಿಬಂತೌ' ಎಂಬ ಶ್ರುತಿಯು ಪ್ರತಿಪಾದಿಸುತ್ತಿದೆಯೆಂದು ಸೂಚಿಸುವುದಕ್ಕಾಗಿ 'ವಿಷ್ಣುಃ' ಎಂಬುದು ಅನುವೃತ್ತಿಯಿಂದ ದೊರೆಯುತ್ತಿದ್ದರೂ 'ಸಹ' ಎಂದು ಹೇಳಲಾಗಿದೆ. ಆದ್ದರಿಂದ 'ಅನಶ್ನನ್' ಎಂಬ ಶ್ರುತಿಗೆ ಅಶುಭ ಫಲವನ್ನು ಅನುಭವಿಸುವುದಿಲ್ಲವೆಂದೇ ಅರ್ಥೈಸಬೇಕು. 'ಏಕಃ' ಎಂದು ಹೇಳಿದ್ದರಿಂದ ಜೀವ ಹಾಗೂ ಈಶರೆಂಬ ಅನೇಕ ಕೋಟಿಗಳನ್ನು ನಿರಾಸ ಮಾಡಿದಂತಾಗುತ್ತದೆ. 'ಹೃದಯಗುಹಾಸ್ಥತ್ವ' ಎಂಬ ಯುಕ್ತಿಯನ್ನು ಸೂಚಿಸುವುದಕ್ಕಾಗಿ 'ಸರ್ವಗಃ' ಎಂದು ಹೇಳಿದ್ದಾರೆ. 'ಆತ್ಮಾರೌ' ಎಂದು ಹೇಳುವ ಬದಲು 'ಆತ್ಮಾ' ಎಂದು ಹೇಳಿದ್ದರಿಂದ ಪರಮಾತ್ಮನ ಎರಡು ರೂಪಗಳಿಗೆ ಐಕ್ಯವನ್ನು ಹೇಳಿದಂತಾಗುತ್ತದೆ

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ
ತತ್ವಮಂಜರಿಯ ಕನ್ನಡಾನುವಾದದಲ್ಲಿ ಗುಹಾಧಿಕರಣವು ಮುಗಿಯಿತು.

श्री राघवेन्द्रतीर्थविरचिता

# तन्त्रदीपिका

## गुहाधिकरणम् - ३

ॐ गुहां प्रविष्टावात्मानौ हि तद्दर्शनात् ॐ ।। १-२-११ ।।

अत्र नये कर्मफलभोगरूपक्रियालिङ्गं समन्वीयते । ऋतं पिबन्ताविति योग्यतयान्वेति । 'ऋतं पिबन्तौ सुकृतस्य लोके गुहां प्रविष्टौ' इति श्रुत्युक्तौ ऋतं पिबन्तावात्मानावेव आत्मान्तरात्माख्यब्रह्मरूपविशेषावेव । नतु जीवेश्वरौ । कुतः? गुहां प्रविष्टौ । हेतुगर्भमिदम् । हृदयगुहाप्रविष्टत्वलिङ्गादित्यर्थः । हिशब्देन ब्रह्मण्येव 'यो वेद निहितं गुहायाम्' इत्यादौ तस्य प्रसिद्धिमाह । रूपद्वयस्य गुहास्थत्वं कुत इत्यत उक्तम् – तद्दर्शनात् ।। तस्य आत्मनोर्गुहास्थत्वस्य 'घर्मा समन्तात् त्रिवृतं व्यापतुः' इत्यादिश्रुत्युक्तेरित्यर्थः । ऋतं पिबन्ताविति वाच्ये गुहाप्रविष्टत्वोक्तिद्वारा तदुक्तिर्गुहाप्रविष्टत्वरूपहेतुसूचनार्था । तत्त्वित्यनुवृत्तावप्यात्मानाविति द्विवचनान्तात्मपदोक्तिरादेयं मातीयात्मेति शुभभोक्तृत्वमस्य सूचयितुम्, श्रौतद्विवचनस्य गत्युक्त्यै आत्मान्तरात्माख्यरूपद्वयं वक्तुं चेति ।।

ಅಧಿಕರಣದಲ್ಲಿ ಕರ್ಮಫಲಭೋಗರೂಪವಾದ ಕ್ರಿಯಾತ್ಮಕಲಿಂಗವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. 'ಋತಂ ಪಿಬಂತೌ' ಎಂಬ ಪದಗಳು ಯಥಾಯೋಗ್ಯವಾಗಿ ಅನ್ವಯ ಹೊಂದುತ್ತವೆ. 'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂಪ್ರವಿಷ್ಟೌ' ಎಂಬ ಕಾಠಕಶ್ರುತಿಯಲ್ಲಿ ಹೇಳಲ್ಪಟ್ಟ ಋತಪಾನ ಮಾಡುವವರು ಆತ್ಮಾನಾವೇವ = ಆತ್ಮ ಅಂತರಾತ್ಮ ಎಂಬ ಬ್ರಹ್ಮನ ಎರಡು ರೂಪವಿಶೇಷಗಳೇ ಆಗಿವೆ ಹೊರತು ಜೀವೇಶ್ವರರಲ್ಲ. ಏಕೆಂದರೆ 'ಗುಹಾಂಪ್ರವಿಷ್ಟೌ', ಇದು ಹೇತುಗರ್ಭವಿಶೇಷಣ. ಅಂದರೆ ಹೃದಯ ಗುಹಾಪ್ರವಿಷ್ಟತ್ವದ ಲಿಂಗದಿಂದ ಎಂದರ್ಥ. ಈ ಶಬ್ದದಿಂದ 'ಯೋ ವೇದ ನಿಹಿತಂ ಗುಹಾಯಾಮ್' ಎಂಬ ಶ್ರುತಿಯಿಂದ ಹೃದಯಗುಹಾಪ್ರವಿಷ್ಟತ್ವವು ಬ್ರಹ್ಮನಲ್ಲೇ ಪ್ರಸಿದ್ಧವಾಗಿದೆಯೆಂದು ಸೂತ್ರಕಾರರು ತಿಳಿಸಿದ್ದಾರೆ. ಬ್ರಹ್ಮನ ಎರಡು ರೂಪಗಳಿಗೆ ಹೃದಯಗುಹಾಪ್ರವಿಷ್ಟತ್ವವಿದೆ ಎಂಬುದು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ ? ಎಂಬ ಪ್ರಶ್ನೆಗೆ

'ತದ್ದರ್ಶನಾತ್' ಎಂದು ಉತ್ತರಿಸಿದ್ದಾರೆ. ಆತ್ಮ ಮತ್ತು ಅಂತರಾತ್ಮರಿಗೆ ಹೃದಯಗುಹಾನಿವಿಷ್ಟತ್ವವು 'ಘರ್ಮಾ ಸಮಾಂತಾತ್ ತ್ರಿವೃತಂ ವ್ಯಾಪತುಃ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿದೆ. 'ಋತಂ ಪಿಬಂತೌ' ಎಂದು ಹೇಳುವ ಮೊದಲು 'ಗುಹಾಂ ಪ್ರವಿಷ್ಟೌ' ಎಂದು ಸೂತ್ರದಲ್ಲಿ ಹೇಳಿದ್ದರಿಂದ ಋತಪಾನಕರ್ತೃತ್ವಕ್ಕೆ ಗುಹಾಪ್ರವಿಷ್ಟತ್ವವು ಹೇತುವಾಗಿದೆಯೆಂದು ಸೂಚಿಸಿದ್ದಾರೆ. 'ತತ್' ಎಂಬ ಪದವು ಅನುವೃತ್ತಿಯಿಂದ ಸಿದ್ಧವಾದರೂ ಸಹ 'ಆತ್ಮಾನೌ' ಎಂಬುದಾಗಿ ದ್ವಿವಚನಾಂತವಾದ ಆತ್ಮಪದವನ್ನು ಏಕೆ ಹೇಳಿದ್ದಾರೆ ಎಂದರೆ 'ಆದೇಯಂ ಮಾತೀತಿ ಆತ್ಮಾ' ಎಂಬ ಯುಕ್ತಿಯಂತೆ ಶುಭಫಲ ಭೋಕ್ತೃತ್ವವು ಪರಬ್ರಹ್ಮನಿಗೆ ಇದೆಯೆಂದು ಸೂಚಿಸುವುದಕ್ಕಾಗಿ ಮತ್ತು 'ಆತ್ಮಂತರಾತ್ಮ' ಎಂಬ ಎರಡು ರೂಪಗಳನ್ನು ಪ್ರತಿಪಾದಿಸುವುದಕ್ಕಾಗಿ

इतश्चैवमित्याह –

**ॐ विशेषणाच्च ॐ ॥ १-२-१२ ॥**

'यः सेतुरीजानानामक्षरं ब्रह्म यत्परम्' इत्येकवचनेन सेतुत्वब्रह्मत्वादिना च विशेषणाच्च पिबन्तावात्मानावेव न जीवेशावित्यर्थः ॥

ಮತ್ತೊಂದು ಕಾರಣದಿಂದಲೇ ಕರ್ಮಫಲಭೋಕ್ತೃ ಪರಮಾತ್ಮನೇ ಆಗಿದ್ದಾನೆಂದು ಸೂತ್ರಕಾರರು ಹೇಳುತ್ತಿದ್ದಾರೆ.

ಓಂ ವಿಶೇಷಣಾಚ್ಚ ಓಂ ॥ ೧-೨-೧೨ ॥

'ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ಯತ್ಪರಮ್' ಎಂಬುದಾಗಿ ಏಕವಚನ ಇರುವುದರಿಂದ ಸೇತುತ್ವ ಬ್ರಹ್ಮತ್ವ ಮೊದಲಾದ ವಿಶೇಷಣಗಳಿರುವುದರಿಂದಲೂ ಕರ್ಮಫಲಭೋಕ್ತೃ ಪರಮಾತ್ಮನ ಎರಡು ರೂಪಗಳೇ ಆಗಿವೆ ಹೊರತು ಜೀವೇಶ್ವರರಲ್ಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಗುಹಾಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावळिः

## गुहाधिकरणम् - ३

ॐ गुहां प्रविष्टावात्मानौ हि तद्दर्शनात् ॐ ।। १-२-११ ।।

ॐ विशेषणाच्च ॐ ।। १-२-१२ ।।

अत्र प्रागुक्तात्तृत्वविशेषस्य कर्मफलभोक्तृत्वस्य चिन्तनाद्वा पूर्वाक्षेपेण पूर्वपक्षोत्थानाद्वा सङ्गतिः ।

ಈ ಅಧಿಕರಣದಲ್ಲಿ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಅತ್ತೃತ್ವದ ವಿಶೇಷವಾದ ಕರ್ಮಫಲ ಭೋಕ್ತೃತ್ವವನ್ನು ವಿಚಾರ ಮಾಡುತ್ತಿದ್ದಾರೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಸಂಗತಿಯು ಇರುತ್ತದೆ. ಅಥವಾ ಹಿಂದಿನ ಅಧಿಕರಣದ ಪ್ರಮೇಯವನ್ನು ಆಕ್ಷೇಪಿಸಿ ಪೂರ್ವಪಕ್ಷ ಮಾಡುತ್ತಿರುವುದರಿಂದಲೂ ಹಿಂದಿನ ಅಧಿಕರಣದಿಂದ ಆಕ್ಷೇಪಿಕೀ ಸಂಗತಿಯನ್ನು ತಿಳಿಯಬೇಕು.

काठके तृतीयवल्ल्यां 'ऋतं पिबन्तौ सुकृतस्य लोके गुहां प्रविष्टौ' इति श्रुतिवाक्ये ऋतं पिबन्तावित्युक्तौ कर्मफलभोक्तारौ किं जीवेश्वरौ? किं वा ईश्वरे रूपविशेषौ? इति सन्देहः ।

ಕಾಠಕೋಪನಿಷತ್ತಿನ ಮೂರನೇ ವಲ್ಲಿಯಲ್ಲಿ 'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ' ಎಂಬ ವಾಕ್ಯವು ಕೇಳಿಸುತ್ತಿದೆ. ಈ ವಾಕ್ಯದಲ್ಲಿ ಕೇಳಿಸುತ್ತಿರುವ 'ಋತಂ ಪಿಬಂತೌ' ಎಂಬ ಪದಗಳು ಕರ್ಮಫಲವನ್ನು ಅನುಭವಿಸುವ ಇಬ್ಬರನ್ನು ಪ್ರತಿಪಾದಿಸುತ್ತಿದೆ. ಆ ಇಬ್ಬರು ಜೀವ ಮತ್ತು ಪರಮಾತ್ಮರೋ ಅಥವಾ ಭಗವಂತನದ್ದೇ ಆದ ಎರಡು ವಿಶೇಷ ರೂಪಗಳೋ? ಎಂದು ಸಂಶಯ.

पिबन्ताविति द्विवचनश्रुतेर्द्वित्ववाचित्वात् तस्य चाभेदेऽयोगात् कर्मबन्धविधुरे कर्मफलभोक्तृत्वस्याप्ययोगात् । छत्रिन्यायेन सजातीयौ भोक्तृजीवेश्वरावेवेति प्राप्ते,

'ಪಿಬಂತೌ' ಎಂಬ ಶ್ರುತಿಯಲ್ಲಿ ದ್ವಿವಚನ ಪ್ರತ್ಯಯವು ಕೇಳಿಸುತ್ತಿರುವುದರಿಂದ ದ್ವಿತ್ವವನ್ನು ಹೇಳುತ್ತಿದೆ. ಒಬ್ಬನೇ ಈಶ್ವರನಲ್ಲಿ ಈ ದ್ವಿತ್ವವನ್ನು ಹೇಳಲು ಸಾಧ್ಯವಿಲ್ಲ. ಮತ್ತು ಕರ್ಮಬಂಧದಿಂದ ರಹಿತನಾದ ಪರಮಾತ್ಮನಲ್ಲಿ ಕರ್ಮಫಲಭೋಕ್ತೃತ್ವವನ್ನೂ ಸಹ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಛತ್ರಿನ್ಯಾಯದಿಂದ ಸಜಾತೀಯರಾದ ಭೋಕ್ತೃಜೀವ ಹಾಗೂ ಈಶ್ವರರೇ 'ಋತಂ ಪಿಬಂತೌ' ಎಂಬ ಶ್ರುತಿಯಿಂದ ಪ್ರತಿಪಾದ್ಯರಾಗಿದ್ದಾರೆಂದು ಪೂರ್ವಪಕ್ಷ.

**ब्रूमः । गुहां प्रविष्टावित्युक्तगुहानिविष्टत्वलिङ्गस्य 'यो वेद निहितं गुहायाम्' 'गुहाहितं गह्वरेष्ठं पुराणम्' इत्यादिना विष्णोरेव प्रसिद्धत्वात् ।**

ಇದು ತಪ್ಪು. ಪೂರ್ವಪಕ್ಷಕ್ಕೆ ಹೀಗೆ ಉತ್ತರಿಸುತ್ತೇವೆ - 'ಗುಹಾಂ ಪ್ರವಿಷ್ಟೌ' ಎಂಬಲ್ಲಿ ಗುಹಾನಿವಿಷ್ಟತ್ವಲಿಂಗವು ಕೇಳಿಸುತ್ತಿದೆ. 'ಯೋ ವೇದ ನಿಹಿತಂ ಗುಹಾಯಾಮ್' ಎಂಬ ಶ್ರುತಿಯಲ್ಲಿ ಮತ್ತು 'ಗುಹಾಹಿತಂ ಗಹ್ವರೇಷ್ಠಂ ಪುರಾಣಮ್' ಎಂಬಲ್ಲಿ ಗುಹಾನಿಹಿತತ್ವ ಲಿಂಗವು ವಿಷ್ಣುವಿನಲ್ಲಿ ಮಾತ್ರ ಪ್ರಸಿದ್ಧವಾಗಿದೆಯೆಂದು ಹೇಳಲಾಗಿದೆ.

**'यः सेतुरीजानानामक्षरं ब्रह्म तत्परम् । अभयं तितीर्षतां पारम्' इत्युत्तरवाक्ये श्रुतात्परत्वविशेषणयुक्तब्रह्मशब्दाद् 'एष सेतुर्विधृतिः' इत्यादिश्रुत्यन्तरसिद्ध-सेतुत्वाभयत्वादिलिङ्गाच्च, 'आत्मान्तरात्मेति हरिरेक एव द्विधा स्थितः' इत्यादिस्मृतेरेकस्यापि रूपविशेषेण द्वित्वोपपत्तेः ।**

'ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ತತ್ಪರಮ್ । ಅಭಯಂ ತಿತೀರ್ಷತಾಂ ಪಾರಮ್' ಎಂಬ ಮುಂದಿನ ವಾಕ್ಯದಲ್ಲಿ ಬ್ರಹ್ಮಶಬ್ದವು ವಿಶೇಷಣದಿಂದ ಯುಕ್ತವಾಗಿದೆ. ಇದು ಬ್ರಹ್ಮನಲ್ಲಿ ಯುಕ್ತವಾಗುತ್ತದೆ. 'ಏಷ ಸೇತುರ್ವಿಧೃತಿಃ' ಎಂಬ ಮತ್ತೊಂದು ಶ್ರುತಿಯಲ್ಲಿ ಹೇತುತ್ವ ಅಭಯತ್ವವೇ ಮೊದಲಾದ ವಿಷ್ಣುವಿನ ಅಸಾಧಾರಣ ಲಿಂಗಗಳು ಕೇಳಿಸುತ್ತಿವೆ. ಮತ್ತು 'ಆಂತ್ಮಾಂತಾರತ್ಮೇತಿ ಹರಿರೇಕ ಏವ ದ್ವಿಧಾ ಸ್ಥಿತಿಃ' ಎಂಬ ಬೃಹತ್‌ಸಂಹಿತೆಯು ಒಬ್ಬನೇ ವಿಷ್ಣುವಿಗೆ ರೂಪವಿಶೇಷದಿಂದ ದ್ವಿತ್ವವು ಉಪಪನ್ನವಾಗುತ್ತದೆಂದು ಹೇಳಿದೆ.

**'शुभं पिबत्यसौ नित्यं नाशुभं स हरिः पिबेद्' इत्यादेः कर्मफलभोक्तृत्वस्य सम्भवादनशनश्रुतेरशुभबोक्तृत्वाभावपरतयोपपत्तेः ऋतं पिबन्तावीश्वररूप-विशेषावेवेति ।**

ಗುಹಾಧಿಕರಣ (೧-೨-೩)

**'शुभं पिबत्यसौ नित्यं नाशुभं स हरिः पिबेद्'**

'ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇದ್' ಎಂಬ ಪಾದ್ಮ ಪುರಾಣವು ಪರಮಾತ್ಮನಲ್ಲಿ ಕರ್ಮಫಲಭೋಕ್ತೃತ್ವವನ್ನು ಹೇಳುತ್ತಿದೆ. ಆದ್ದರಿಂದ 'ಅನಶ್ನನ್' ಶ್ರುತಿಗೆ ಅಶುಭಭೋಕ್ತೃತ್ವವನ್ನು ನಿಷೇಧ ಮಾಡುತ್ತಿದೆಯೆಂದೇ ವ್ಯಾಖ್ಯಾನಿಸಬೇಕು. ಆದ್ದರಿಂದ 'ಋತಂ ಪಿಬಂತೌ' ಎಂಬ ದ್ವಿವಚನಶ್ರುತಿಯು ಭಗವಂತನ ಎರಡು ರೂಪವಿಶೇಷಗಳನ್ನೇ ಪ್ರತಿಪಾದಿಸುತ್ತಿದೆಯೆಂದು ನಿರ್ಣಯವಾಗುತ್ತದೆ.

**फले तु पूर्वोक्तसर्वात्तृत्वाक्षेपसमाधी । तत्प्रकारश्च चन्द्रिकोक्तः ॥**

ಹಿಂದಿನ ಅಧಿಕರಣದ ಸರ್ವಾತ್ತೃತ್ವದ ಆಕ್ಷೇಪವು ಪೂರ್ವಪಕ್ಷದ ಫಲ. ಆದರ ಸಮಾಧಾನವೇ ಸಿದ್ಧಾಂತದ ಫಲ. ಇವುಗಳ ಪ್ರಕಾರವು ತಾತ್ಪರ್ಯಚಂದ್ರಿಕೆಯಲ್ಲಿ ಸ್ಪಷ್ಟವಾಗಿದೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಗುಹಾಧಿಕರಣವು ಸಮಾಪ್ತವಾಯಿತು.

*****

# सूत्रार्थरत्नावलिः

अत्र लोकतोऽन्यत्र प्रसिद्धकर्मफलभोक्तृत्वलिङ्गस्य विष्णौ समन्वयः प्रतिपाद्यते ।

**ॐ ॥ गुहां प्रविष्टात्मानौ हि तद्दर्शनात् ॥ ॐ (१-२-११)**

ननु 'ऋतं पिबन्तौ' इति वाक्योक्तौ जीवौ न त्वेकः परमेश्वरः । द्विवचनश्रुतेः (कठ १।३।१) एकस्मिन् द्विवचनायोगात् । एवं च हरिवज्जीवस्यापि स्वातन्त्र्येण पातृत्वेन तद्वदेवसर्वात्तृत्वमपि । स्वतन्त्रस्य तदनङ्गीकारे कारणाभावात् । ततश्चातिव्याप्तिः । यद्वा, तद्वाक्योक्तौ जीवपरौ । द्विवचनश्रुतेः । एवमपि जीव एव पाता न विभुः । कर्मबन्धविधुरस्य कर्मफलात्तृत्वायोगात् । न च सर्वं वाऽत्तीति सर्वात्तृत्वोक्तिविरोधः । अनश्नन्नन्य इति

(मुं.उ.३।१।१) श्रुतिविरोधेन सङ्कोचसम्भवात् । न च 'पिबन्तौ' इति द्वयोः पातृत्वोक्ति-विरोधः । छत्रिन्यायेन पातृत्वोपचाराङ्गीकारात् । तथाऽपि जीवेशत्वे को हेतुरिति चेत् । एकस्मिन् शरीरे भोक्तृजीवद्वयायोगात् । तस्माज्जीवेशावेव ग्राह्यौ । तथाऽपि जीवस्यैव पातृत्वेन न तस्य लक्षणत्वाभिमतं सर्वात्तृत्वमित्यसम्भवः । यद्वा, पुनरस्तु द्वावपि जीवौ । न चैकस्मिन् शरीरे भोक्तृजीवद्वयायोगः । व्रीह्यादिशरीर उत्पत्स्यमानजीवस्य प्रमाणान्तरसिद्धत्वान्न तु न तस्य भोक्तृत्वमिति चेन्न । तच्छरीरावच्छेदेन पातृत्वाभावेऽपि-वस्तुतः पातृत्वसद्भावात् । एवं चेश्वरस्य कर्मफलात्तृत्वाभावेनासम्भव एवेति प्राप्ते सूत्रितम् –

ॐ ॥ **गुहां प्रविष्टात्मानौ हि तद्दर्शनादिति** ॥ अस्यार्थः – तत्त्विति विपरिणामेनानुवर्तते । आत्मानौ आदेयं मातेति व्युत्पत्त्या 'ऋतं पिबन्तौ' इति (कठ. १।३।१) श्रुतिस्थपिबच्छब्दोदितशुभफलकर्मभोक्तारौ आत्मान्तरात्माख्यौ विष्णुरूपे एव । न तु जीवेश्वरौ । कुतः? हि यस्मात् । तौ गुहां प्रविष्टौ । तस्मादित्यर्थः । हिशब्देन गुहास्थितत्वलिङ्गस्य 'यो वेद' इति (तै.२।१) श्रुतिप्रसिद्धं सूचयति । द्विरूपतया शरीरगुहास्थितत्वे प्रमाणमाह – **तद्दर्शनादिति** ॥ तस्य हरेः द्विरूपतया शरीरहृदयगुहास्थितत्वस्य तस्य 'घर्मा समन्ता' इति (ऋ. १०।११४।१) श्रुतावुक्तत्वादित्यर्थः ।

एवं चोक्तवाक्ये यौ पिबन्तौ तौ विष्णुरूपे एव । गुहाप्रविष्टत्वलिङ्गात् । न चैतल्लिङ्गं जीवेऽप्यस्तीति न विष्णुत्वनिर्णायकमिति वाच्यम् । 'यो वेदनिहितम्' इति गुहानिहितत्वस्येश्वरे प्रसिद्धत्वेन प्रसिद्धस्यैव ग्राह्यत्वात् । न च द्विवचन-श्रुतिविरोधः । रूपद्वयाभिप्रायेण सावकाशत्वात् । न चैकैकेनैव रूपेण प्रवेशेन रूपद्वयाभावः । 'घर्मा समन्ता त्रिवृतम्' प्रमाणेनैकस्मिन्नपि शरीरे रूपद्वयस्यैव सिद्धत्वात् । न च विष्णोः पातृत्वाङ्गीकारेऽनश्नन्नन्य इत्यादिश्रुतिविरोधः । 'शुभं पिबत्यसौ' इति (पाद्मे) प्रमाणेन विष्णोः पातृत्वस्य सिद्धत्वेन तस्या अशुभभोगा-भावविषयत्वात् । न च पूर्णस्य कर्मबन्धविधुरत्वेन कर्मफलभोगानुपपत्तिः । नियोगतो-

भोगासम्भवेऽपि स्वेच्छया तत्सम्भवात् । ततश्च विष्णोरेव पातृत्वेनात्तृत्वलक्षणं युक्तमिति सिद्धम् ॥

**ॐ ॥ विशेषणाच्च ॥ ॐ (१-२-१२)**

यदा निरवकाशगुहानिहितत्वलिङ्गस्य सावकाशाद् द्विवचनश्रुतितोऽपि प्राबल्याद् विष्णोः प्रकृत्यर्थभोक्तृत्वसम्भवाच्च स एव पातेति सिद्ध्यति । किं पुनर्निरवकाश-श्रुत्याऽपीत्यर्थे प्रतिपादयत् सूत्रं पठति ।

**ॐ॥ विशेषणाच्चेति ॥** अस्यार्थः – चो युक्तिसमुच्चये । 'यः सेतुः' इति (कठ. १।३।२) एकवचनेन विशेषणादेक एव पाता । स च सेतुत्वब्रह्मत्वादिना विशेषितत्वाद् विष्णुरेव न जीव इत्यर्थः ।

एवं च न केवलं गुहाप्रविष्टत्वलिङ्गबलादेव पिबन्तौ विष्णुरूपे किन्तु 'यः सेतुरीजानानाम्' इति श्रुतौ ब्रह्मैकवचनशब्दाभ्यां विशेषणादपि विष्णुरेव पातेति सिद्धम् ॥

॥ इति सूत्रार्थरत्नावळ्यां गुहाधिकरणम् ॥

॥ ಪರಿಪೂರ್ಣಚಂದ್ರಿಕೆಯಲ್ಲಿ ಗುಹಾಧಿಕರಣವು ಮುಗಿಯಿತು ॥

॥ ಶ್ರೀಮಧ್ವೇಶಾರ್ಪಣಮಸ್ತು ॥

# ೦೪-ಅಂತರಾಧಿಕರಣ

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ಭಾಷ್ಯದೀಪಿಕಾ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ, ವಾಕ್ಯಾರ್ಥಮಂಜರೀ

॥ ಶ್ರೀಗುರುಭ್ಯೋ ನಮಃ ॥

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

ಬ್ರಹ್ಮಮೀಮಾಂಸಾಶಾಸ್ತ್ರ

# ಅಂತರಾಧಿಕರಣ

## ಚಕ್ಷುರಿಂದ್ರಿಯದಲ್ಲಿರುವವನೂ ಸಹ ವಿಷ್ಣುವೇ

**सू - ॐ ॥ अन्तर उपपत्तेः ॥ ॐ ॥१-२- १३॥**

"ಯ ಏಷೋಽಂತರಕ್ಷಿಣಿ ಪುರುಷಃ" ಎಂಬ ಶ್ರುತಿಯಲ್ಲಿ ಚಕ್ಷುರಿಂದ್ರಿಯದಲ್ಲಿ ನಿಯಾಮಕನಾಗಿರುವವನು ಬ್ರಹ್ಮನೇ ಹೊರತು ಅಗ್ನಿಯಲ್ಲ. ಅಮೃತತ್ವ ಅಭಯತ್ವ ಮೊದಲಾದ ಅಸಾಧಾರಣ ಧರ್ಮಗಳನ್ನು ಬ್ರಹ್ಮಶಬ್ದ ಮೊದಲಾದವುಗಳನ್ನು ಹೇಳಿರುವುದರಿಂದ.

* * * *

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** - "य एषोऽन्तरक्षिणि" श्रुत्युक्तो अन्तरः चक्षुरण्तःथितो विष्णुरेव नतु अग्निः । कुतः उपपत्तेः एतत् अमृतत्वब्रह्मशब्दादीनां अन्तरे श्रवणात् । तेषां च विष्णावेव उपपत्तेः इत्यर्थः ।

"ಯ ಏಷೋಽಂತರಕ್ಷಿಣಿ" ಎಂದು ಶ್ರುತಿಯಲ್ಲಿ ಪ್ರತಿಪಾದ್ಯನಾದ, "ಅಂತರಃ" = ಕಣ್ಣಿನೊಳಗೆ ನಿಯಾಮಕನಾಗಿರುವವನು ವಿಷ್ಣುವೇ ಆಗಿದ್ದಾನೆ ಹೊರತು ಅಗ್ನಿ ಅಲ್ಲ. ಏಕೆಂದರೆ "ಉಪಪತ್ತೇಃ" = ಕಣ್ಣಿನಲ್ಲಿರುವವನಿಗೆ ಅಮೃತತ್ವ, ಬ್ರಹ್ಮಶಬ್ದಗಳು ಕೇಳಿಸುತ್ತಿರುವುದರಿಂದ. ಈ ಎಲ್ಲಾ ಧರ್ಮಗಳು ವಿಷ್ಣುವಿನಲ್ಲಿಯೇ ಉಪಪನ್ನವಾಗುತ್ತವೆಯೆಂದು ಅಭಿಪ್ರಾಯ.

ಪರಿಪೂರ್ಣಚಂದ್ರಿಕಾ

**तत्वप्रकाशिका – ननु सकलचेतनानामपि पूर्णानन्दत्वात् कथमेतद् विष्णुलक्षणमित्यत आह – लक्षणमिति ।। अन्येषामापेक्षिकमेव पूर्णसुखत्वं न ब्रह्मवन्निरवधिकम् इत्ति भावः । नन्वग्न्यादिसुखस्यापेक्षिकतयापि पूर्णत्वसद्भावात्तेषां किन्न स्यादित्यत आह – नचेति ।। मुख्ये निरवधिकपूर्णत्वे सति सम्भवति नामुख्यमापेक्षिकं पूर्णत्वं युज्यत इत्यर्थः । नचोपक्रमे प्राणस्यापि श्रुतत्वेन प्राकरणिकत्वम् । श्रुतिलिङ्गादिबाधकसद्भावात् ।। १५ ।।**

ಶಂಕಾ - ಪ್ರಕರಣದ ಪ್ರಾರಂಭದಲ್ಲಿ ಪೂರ್ಣಜ್ಞಾನಾದಿಗಳನ್ನು ಹೇಳಿದ್ದರೂ ಅವುಗಳು ವಿಷ್ಣುವಿನ ಲಕ್ಷಣವೆಂದು ಹೇಳಲು ಬರುವುದಿಲ್ಲ. ಏಕೆಂದರೆ ಸಕಲಚೇತನರೂ ಸಹ ಪೂರ್ಣಾನಂದರಾಗಿದ್ದಾರಲ್ಲವೇ?

ಸಮಾಧಾನ - ಭಾಷ್ಯಕಾರರು ''ಲಕ್ಷಣಂ'' ಎಂಬ ವಾಕ್ಯದಿಂದ ಸಮಾಧಾನವನ್ನು ಹೇಳುತ್ತಿದ್ದಾರೆ. ಇತರ ಜೀವರ ಪೂರ್ಣಾನಂದತ್ವವು ಮತ್ತೊಬ್ಬರನ್ನು ಅವಲಂಭಿಸಿರುತ್ತದೆ. ಮತ್ತು ಬ್ರಹ್ಮನಂತೆ ಸೀಮೆ ಇಲ್ಲದ ಪೂರ್ಣಾನಂದತ್ವವಲ್ಲ.

ಶಂಕಾ - ಅಗ್ನಿಯೇ ಮೊದಲಾದ ಜೀವರ ಸುಖವು ಆಪೇಕ್ಷಿಕವಾಗಿದ್ದರೂ ಅವರ ಸುಖವು ಪೂರ್ಣವಾಗಿರುತ್ತದಲ್ಲವೇ? ಮತ್ತು ಇದು ಅಗ್ನಿದೇವರ ಪ್ರಕರಣವಾಗಿರುವುದರಿಂದ ಅಗ್ನಿಯನ್ನೇ ಏಕೆ ತೆಗೆದುಕೊಳ್ಳಬಾರದು?

ಸಮಾಧಾನ - ಭಾಷ್ಯಕಾರರು 'ನಚ' ಎಂಬ ವಾಕ್ಯದಿಂದ ಉತ್ತರವನ್ನು ಕೊಡುತ್ತಿದ್ದಾರೆ. ಪರಮಾತ್ಮನ ನಿರವಕಾಶವಾದ ಪೂರ್ಣತ್ವವನ್ನು ಹೇಳಲು ಬರುವಾಗ ಅಗ್ನಿಯೇ ಮೊದಲಾದ ದೇವತೆಗಳ ಆಪೇಕ್ಷಿಕಪೂರ್ಣತವ್ವವನ್ನು ಹೇಳುವುದು ಯುಕ್ತವಲ್ಲ.

ಈ ಪ್ರಕರಣದ ಪ್ರಾರಂಭದಲ್ಲಿ ''ಪ್ರಾಣೋ ಬ್ರಹ್ಮ'' ಎಂದು ಮುಖ್ಯಪ್ರಾಣನೇ ಪ್ರಸಕ್ತನಾಗಿರುವುದರಿಂದ ಈ ಪ್ರಕರಣವು ಮುಖ್ಯಪ್ರಾಣನ ಪ್ರಕರಣವೆಂದು ಹೇಳುವುದು ಯುಕ್ತವಲ್ಲ. ಏಕೆಂದರೆ ''ಪುರುಷ'', ''ಆತ್ಮಾ'',''ಬ್ರಹ್ಮ'' ಮುಂತಾದ ವಿಷ್ಣುವಿನ ಶಬ್ದಗಳಿರುವುದರಿಂದ ಮತ್ತು ''ಅಮೃತತ್ವ'' ಮತ್ತು ''ಅಭಯತ್ವ'' ಎಂಬ ವಿಷ್ಣುವಿನ ಲಿಂಗಗಳು ಇವೆ. ಇವುಗಳು ಮುಖ್ಯಪ್ರಾಣನ ಪ್ರಕರಣವೆಂದು ನಿರ್ಣಯ ಮಾಡಲು ಬಾಧಕವಾಗಿವೆ.

**भावदीपः** – भाष्यस्य सूत्रेणान्वयं मत्वा 'विशिष्टसुखवत्त्वाच्च ब्रह्मत्वं च विशिष्टता' इत्यनुभाष्यदिशा भाष्यार्थमाह – **अत्रेति** ।। श्रुतावित्यर्थः ।। **पूर्णत्वमिति** ।। तद्भाष्ये तु 'अपरं ब्रह्म स प्राणः साक्षाद् यो बलदेवता ।

ज्ञानानन्दात्मकं पूर्णं परब्रह्म हरिः स्वयम् ।।' इति कंखंपदयोरेव पूर्णसुखादिवाचित्वाद् 'विज्ञानं ब्रह्म' इत्यादाविव पूर्णानन्दं पूर्णज्ञानं च परं ब्रह्मेत्यर्थान्तरमुक्तम् ।

ಭಾಷ್ಯದ ಮಾತಿಗೆ ಸೂತ್ರದ ಜೊತೆಗೆ ಅನ್ವಯ ಮಾಡಿ 'ವಿಶಿಷ್ಟಸುಖವತ್ತ್ವಾಚ್ಚ ಬ್ರಹ್ಮತ್ವಂ ಚ ವಿಶಿಷ್ಟತಾ' ಎಂಬ ಅನುವ್ಯಾಖ್ಯಾನದ ಪ್ರಕಾರ ಭಾಷ್ಯದ ಅರ್ಥವನ್ನು 'ಅತ್ರ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಅತ್ರ ಎಂದರೆ ಶ್ರುತಿಯಲ್ಲಿ ಎಂದರ್ಥ. ಪೂರ್ಣತ್ವಮ್ ಎಂದು ಟೀಕೆಯಲ್ಲಿದೆ. ಅಂದರೆ ಆ ಶ್ರುತಿಯ ಭಾಷ್ಯದಲ್ಲಿ 'ಅಪರಂ ಬ್ರಹ್ಮ ಸ ಪ್ರಾಣಃ ಸಾಕ್ಷಾದ್ಯೋ ಬಲದೇವತಾ । ಜ್ಞಾನಾನಂದಾತ್ಮಕಂ ಪೂರ್ಣಂ ಪರಬ್ರಹ್ಮ ಹರಿಃ ಸ್ವಯಮ್ ।।' 'ಬಲದೇವತೆಯಾದ ಮುಖ್ಯಪ್ರಾಣನು ಅಪರಬ್ರಹ್ಮ ಆಗಿದ್ದಾನೆ. ಜ್ಞಾನಾನಂದಾತ್ಮಕನಾದ ಪೂರ್ಣನಾದ ಹರಿಯು ಸ್ವತಃ ಪರಬ್ರಹ್ಮನಾಗಿದ್ದಾನೆ'. ಹೀಗೆ ಕಮ್ ಮತ್ತು ಖಮ್ ಪದಗಳಿಗೆ ಪೂರ್ಣಸುಖ ಎಂಬರ್ಥವಿರುವುದರಿಂದ 'ವಿಜ್ಞಾನಮ್ ಬ್ರಹ್ಮ' ಇತ್ಯಾದಿ ಸ್ಥಾನದಂತೆ ಪೂರ್ಣಾನಂದನು ಪೂರ್ಣಜ್ಞಾನನು ಪರಬ್ರಹ್ಮ ಎಂದು ಮತ್ತೊಂದು ಅರ್ಥವನ್ನು ಹೇಳಿದ್ದಾರೆ.

**भावदीपः** – अत्र 'प्राणो ब्रह्म' इत्येतदंशोदाहरणं च श्रुतेति सूत्रे कगतीति कशब्देन प्राणब्रह्मणोस्तन्त्रेणोपादानस्य वक्ष्यमाणत्वात् । कं ब्रह्मेति कशब्देन ब्रह्मण इव प्राणस्यापि प्राणो ब्रह्मेति प्रकृतत्वमस्ति । अन्यथा 'स एनान् ब्रह्म गमयति' इति श्रुतौ स इति तच्छब्दश्रवणेन प्राणपरामर्शो न स्यादित्युत्तरार्थत्वेनेति भावः । श्रुतिलिङ्गवाक्यानामुपक्रमोपसंहारयोः श्रुतत्वे तन्निश्चायकतया लिङ्गत्वमिति शब्दादेवेत्यत्र वक्ष्यमाणदिशा पूर्णानन्दादिरूपलिङ्गमुपक्रमे श्रुतं सद् उपक्रमस्य वैष्णवत्वनिर्णायकतया अस्य प्रकरणस्य विष्णौ तात्पर्यवत्त्वरूपं वैष्णवत्वमनुमापयतीति सूत्रार्थमाह – **तथाचेति** ।

ಪ್ರಕೃತ 'ಪ್ರಾಣೋ ಬ್ರಹ್ಮ' ಎಂಬ ಅಂಶವನ್ನು ಏಕೆ ಉದಾಹರಿಸಿದ್ದಾರೆ? ಎಂದರೆ 'ಶ್ರುತ' ಎಂಬ ಸೂತ್ರದಲ್ಲಿ 'ಕಗತಿ' ಎಂದು 'ಕ' ಶಬ್ದವನ್ನು ಹೇಳಿದ್ದರಿಂದ ಪ್ರಾಣ ಹಾಗೂ ಬ್ರಹ್ಮ ಎಂಬ ಪದಗಳನ್ನು ಎರಡು ಬಾರಿ ಅನ್ವಯಿಸಿಕೊಳ್ಳಬೇಕೆಂದು ಮುಂದೆ ಹೇಳುತ್ತಾರೆ. ಪೂರ್ಣಾನಂದವೇ ಮೊದಲಾದ ಲಿಂಗವು ಉಪಕ್ರಮದಲ್ಲಿ ಕೇಳಿಸುತ್ತಿರುವುದರಿಂದ ಅಂತಹ ಉಪಕ್ರಮವು ವಿಷ್ಣುಪರವಾಗಿದೆ ಎಂಬುದನ್ನು ನಿರ್ಣಯಿಸುವುದಕ್ಕಾಗಿ ಈ ಪ್ರಕರಣವು ವಿಷ್ಣುವಿನಲ್ಲಿ ತಾತ್ಪರ್ಯವುಳ್ಳಂತಹ ವೈಷ್ಣವತ್ವವನ್ನು ಸಾಧಿಸುತ್ತದೆಂದು "ತತ್ ಚ" ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**भावदीपः** – **पूर्णसुखेति** ।। 'कडाराः कर्मधारये' इति विशिष्टपदस्य परनिपात इति भावः । सौत्रैवकारार्थमाह – **किमुतेति** ।। एतेन भाष्ये खं ब्रह्मेत्युक्तेरुपयोगो दर्शितः ।

ಅಂತರಾಧಿಕರಣ (೧-೨-೨)

ಸೂತ್ರದಲ್ಲಿರುವ 'ಸುಖವಿಶಿಷ್ಟ' ಎಂಬ ಪದಕ್ಕೆ ಪೂರ್ಣಸುಖವೆಂದರ್ಥ 'ಕಡಾರಾಃ ಕರ್ಮಧಾರಯೇ' ಎಂಬ ಸೂತ್ರದಂತೆ ವಿಶಿಷ್ಟಪದವು ಪರನಿಪಾತವನ್ನು ಹೊಂದಿದೆ. ಇಲ್ಲದಿದ್ದರೆ ವಿಶಿಷ್ಟಸುಖವೆಂದಾಗ-ಬೇಕಿತ್ತು. ಸೂತ್ರದಲ್ಲಿರುವ 'ಏವ' ಕಾರದ ಅರ್ಥವನ್ನು 'ಕಿಮುತ' ಎಂದು ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿರುವ 'ಖಮ್ ಬ್ರಹ್ಮ'ಎಂಬುದಕ್ಕೆ ಪ್ರಯೋಜನವನ್ನು ತೋರಿಸಿದಂತಾಯಿತು.

**भावदीपः – ननु विज्ञानमित्यादौ पूर्णत्ववाचिपदाभावात् कथं पूर्णानन्द-संवित्त्वस्येत्युक्तिरित्यत आह – श्रौतमपीति ॥ न केवलं कमित्यादिपदमित्यपेरर्थः । 'मुख्यस्य निर्विशेषेण' इति न्यायात् । पूर्णज्ञानादेरेव मुख्यत्वाद् अन्यथा लक्षणस्यातिव्याप्त्यापत्तेरिति भावः ।**

"ವಿಜ್ಞಾನಂ ಆನಂದಮ್" ಎಂಬಲ್ಲಿ ಪೂರ್ಣತ್ವವನ್ನು ಹೇಳುವ ಯಾವುದೇ ಪದಗಳಿಲ್ಲ. ಆದ್ದರಿಂದ ಪೂರ್ಣಾನಂದವನ್ನು ಮತ್ತು ಪೂರ್ಣಜ್ಞಾನವನ್ನು ಇದರಿಂದ ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ "ಶ್ರೌತಮಪಿ" ಎಂಬುದರಿಂದ ಉತ್ತರಿಸಿದ್ದಾರೆ. ಕೇವಲ 'ಕಮ್' ಇತ್ಯಾದಿ ಪದಗಳಷ್ಟೆ ಅಲ್ಲವೆಂದು 'ಅಪಿ' ಪದದ ಅರ್ಥ. "ಮುಖ್ಯಸ್ಯ ನಿರ್ವಿಶೇಷೇಣ" ಎಂಬ ನ್ಯಾಯದಂತೆ ಪೂರ್ಣಜ್ಞಾನಾದಿಗಳು ಮುಖ್ಯವಾಗಿರುವುದರಿಂದ ಕೇವಲ ಜ್ಞಾನವೆಂದಷ್ಟೇ ಹೇಳಿದರೂ ಪೂರ್ಣಜ್ಞಾನವೆಂದೇ ಅರ್ಥವಾಗುತ್ತದೆ. ಹೀಗೆ ಹೇಳದಿದ್ದರೆ ಜ್ಞಾನಾನಂದಗಳಿಂದ ವಿಷ್ಣುವಿನ ಲಕ್ಷಣಕ್ಕೆ ಅತಿವ್ಯಾಪ್ತಿ ಬರುತ್ತದೆಂದು ತಿಳಿಯಬೇಕು.

**भावदीपः – अन्येषामापेक्षिकमेवेति । यथोदञ्चनकुम्भादेः सरित्सागरयोरपि ।**

**अल्पेन महता वापि पूर्तिर्योग्यतया भवेत् ॥**
**एवं नारादिब्रह्मान्तजीवानां साधनैरपि ॥**

**अनादिसिद्धैर्भक्त्याद्यैः पूर्तिर्योग्यतया भवेत् ।**
**अल्पैः पूर्तिस्तथाल्पानां महद्भिर्महतामपि ॥**

**इति प्रथमाध्याये बृहद्भाष्ये व्यक्तमेतत् । विवरिष्यते चात्रापि 'भूम्नः क्रतुवज्ज्यायस्त्वम्' इत्यादौ तृतीयेऽध्याये ।**

'ಅನ್ಯೇಷಾಂ ಆಪೇಕ್ಷಿಕಮೇವ' ಎಂಬ ಟೀಕೆಗೆ ಮಡಿಕೆ ಹಾಗೂ ಸಣ್ಣ ಪಾತ್ರೆಗಳಲ್ಲಿ ನೀರು ಹಿಡಿಸುವಂತೆ ಅಥವಾ ನದಿ ಸಮುದ್ರಗಳಲ್ಲಿ ನೀರು ಹಿಡಿಸುವಂತೆ ಬೇರೆಯವರ ಆನಂದವು ಆಪೇಕ್ಷಿಕವಾಗಿದೆ ಎಂದರ್ಥ.

ಅಲ್ಪೇನ ಮಹತಾ ವಾಪಿ ಪೂರ್ತಿರ್ಯೋಗ್ಯತಯಾ ಭವೇತ್ ॥
ಏವಂ ನಾರಾದಿ ಬ್ರಹ್ಮಾಂತಜೀವಾನಾಂ ಸಾಧನೈರಪಿ ॥
ಪರಿಪೂರ್ಣಚಂದ್ರಿಕಾ

ಅನಾದಿಸಿದ್ಧೈರ್ಭಕ್ತಾದ್ಯೈಃ ಪೂರ್ತಿರ್ಯೋಗ್ಯತಯಾ ಭವೇತ್ ॥

ಅಲ್ಪೈಃ ಪೂರ್ತಿಸ್ಥಥಾಲ್ಪತ್ವಾಂ ಮಹದ್ಭಿರ್ಮಹತಾಮಪಿ ॥

ಯೋಗ್ಯತೆಯು ಅಲ್ಪವಾಗಿರಲಿ ಅಥವಾ ಮಹತ್ತಾಗಿರಲಿ ಬ್ರಹ್ಮದೇವರಿಂದ ಆರಂಭಿಸಿ ಮನುಷ್ಯ ಪರ್ಯಂತ ಸಕಲ ಜೀವರ ಸಾಧನೆಗೆ ತಕ್ಕಂತೆ ಅನಾದಿಸಿದ್ಧವಾದ ಭಕ್ತ್ಯಾದಿಗಳಿಂದ ಆಯಾ ಜೀವರು ಪೂರ್ಣರಾಗುತ್ತಾರೆ. ಅಲ್ಪಯೋಗ್ಯತೆಯುಳ್ಳ ಜೀವರು ಅಲ್ಪತ್ವದಿಂದಲೇ ಪೂರ್ಣರಾಗುತ್ತಾರೆ. ದೊಡ್ಡ ಯೋಗ್ಯತೆಯುಳ್ಳ ಜೀವರು ದೊಡ್ಡ ಪರಿಮಾಣದಿಂದಲೇ ಪೂರ್ಣರಾಗಿರುತ್ತಾರೆ. ಹೀಗೆ ಬೃಹದ್‌ಭಾಷ್ಯದ ಪ್ರಥಮಾಧ್ಯಾಯವು ಈ ವಿಷಯವನ್ನು ಸ್ಪಷ್ಟಮಾಡಿದೆ. ಮುಂದೆ ಸೂತ್ರಕಾರರೂ ಸಹ "ಭೂಮ್ನಃ ಕ್ರತುವತ್'' ಎಂಬ ಸೂತ್ರದಲ್ಲಿ ಈ ವಿಷಯವನ್ನೇ ವಿವರಿಸಿದ್ದಾರೆ.

**भावदीपः – यद्वा तथापि पुर्णान्दत्वममुक्तानां व्यपेक्षयेति पञ्चमे बृहद्भाष्योक्तदिशा आपेक्षिकमित्यर्थः । अथवा 'एतस्यैवानन्दस्यान्यानि भूतानि मात्रामुपजीवन्ति' इत्यादेर्भगवदायत्तमित्यर्थः । एतेन सूत्रे पूर्णसुखेत्यनुक्त्वा विशिष्ट सुखेत्युक्तिरापेक्षिकपूर्णत्वस्य जीवेष्वपि सत्त्वेन व्यभिचारात् सर्वव्यावृत्त-पूर्णत्वलाभायेति सूचितं प्रकरणत्वं प्रकरणप्रतिपाद्यत्वम् ।। श्रुतिलिङ्गादीति ।। पुरुष आत्मा ब्रह्मेति श्रुत्यमृतत्वादिलिङ्गब्रह्मप्रकरणरूपबाधकेत्यर्थः ।। १५ ।।**

ಅಥವಾ 'ತಥಾಪಿ ಪೂರ್ಣಾನಂದತ್ವಮಮುಕ್ತಾನಾಂ ವ್ಯಪೇಕ್ಷಯಾ' ಎಂಬ ಬೃಹದ್‌ಭಾಷ್ಯದ ಪಂಚಮಾಧ್ಯಾಯದಲ್ಲಿ ಹೇಳಿರುವಂತೆ ಆಪೇಕ್ಷಿಕವಾದ ಪೂರ್ಣಾನಂದವನ್ನೂ ಸಹ ತಿಳಿಯಬಹುದು. ಅಥವಾ ಭಗವಂತನ ಆನಂದದ ಲೇಶದಿಂದಲೇ ಸಕಲ ಪ್ರಾಣಿಗಳು ಉಪಜೀವಿಸಿದ್ದಾರೆ. ಎಂಬುದಾಗಿ ಭಗವಂತನ ಅಧೀನವೆಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಸೂತ್ರದಲ್ಲಿ ಪೂರ್ಣಸುಖ ಎಂದು ಹೇಳದೆ ವಿಶಿಷ್ಟಸುಖ ಎಂದು ಹೇಳಿದ್ದರಿಂದ ಆಪೇಕ್ಷಿಕವಾದ ಪೂರ್ಣತ್ವವನ್ನು ಜೀವರಲ್ಲಿಯೂ ಸಹ ಹೇಳಬಹುದೆಂದು ತಿಳಿಯುತ್ತದೆ. ಹೀಗೆ ಪರಮಾತ್ಮನ ಪೂರ್ಣಸುಖತ್ವಲಕ್ಷಣಕ್ಕೆ ಜೀವಾದಿಗಳ ಪೂರ್ಣಸುಖದಲ್ಲಿ ವ್ಯಭಿಚಾರ ಬರುವುದರಿಂದ ಸಕಲ ವ್ಯಾವೃತ್ತವಾದ ಪೂರ್ಣತ್ವದ ಲಾಭಕ್ಕಾಗಿ ಸೂತ್ರದಲ್ಲಿ ವಿಶಿಷ್ಟಸುಖ ಎಂದು ಹೇಳಿದ್ದಾರೆ. ಪ್ರಾಕರಣಿಕಶಬ್ದಕ್ಕೆ ಪ್ರಕರಣಪ್ರತಿಪಾದ್ಯವೆಂದು ಅರ್ಥ. ಶ್ರುತಿಲಿಂಗಾದಿ ಎಂದರೆ ಪುರುಷ, ಆತ್ಮ, ಬ್ರಹ್ಮ ಮೊದಲಾದ ಶ್ರುತಿಗಳು, ಅಮೃತತ್ವ ಮೊದಲಾದ ಲಿಂಗಗಳು ಪ್ರಾಣನ ವಿಷಯದಲ್ಲಿ ಬಾಧಕಗಳಾಗಿವೆ ಎಂದರ್ಥ.

**वाक्यार्थमञ्जरी –**

**।। ॐ सुखविशिष्टाभिधानादेव च ॐ ।।**

विशिष्टं पूर्णं च तत्सुखं च सुखविशिष्टम् । 'कडाराः कर्मधारये' इति परनिपातः । 'कं ब्रह्म खं ब्रह्म' इत्युपक्रमे पूर्णसुखाभिधानाच्चक्षुरन्तःस्थो

ब्रह्मैवेत्यर्थः । उक्त्वा ब्रह्मशब्देन । कं सुखं खं ज्ञानम् । सौत्रैवकारार्थमाह – किमुतेति ।। प्रकृतोपयोगमाह – श्रौतमपीति ।। निरपवादेऽमुख्यग्रहणायोगादिति भावः । आपेक्षिकं सावधिकम् । स्मृतौ विप्लुट् अल्पम् ।।

## ಬ್ರಹ್ಮಮೀಮಾಂಸಾಶಾಸ್ತ್ರ

### ಬ್ರಹ್ಮಪ್ರಾಪ್ತಿವೆಂಬ ಪ್ರಯೋಜನವೂ ಸಹ ಆಧಾರವಾಗಿದೆ

**सू – ॐ ॥ श्रुतोपनिषत्कगत्यभिधानाच्च ॥ ॐ ॥१-२- १६ ॥**

ಅನುವಾದ - ಯಾರು ಈ ವಿದ್ಯೆಯನ್ನು ಶ್ರವಣ ಮನನ ಧ್ಯಾನ ಮಾಡುತ್ತಾರೋ ಅಂತಹವರಿಗೆ ವಾಯುವಿನ ದೆಸೆಯಿಂದ ಪರಮಾತ್ಮನು ದೊರೆಯುತ್ತಾನೆ. ಹೀಗೆ ಹೇಳಿದ್ದರಿಂದಲೂ ಅಕ್ಷಿಸ್ಥನಾದವನು ಬ್ರಹ್ಮನೇ ಆಗಿದ್ದಾನೆ.

****

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** श्रुतोपनिषदां श्रुत'तध्यातैतद्विद्यानां पुंसा' । केनं वायुना । कयोः कार्यपरब्रह्मणोः । गतेः प्राप्तेः । '' स एनान् ब्रह्म गमयति '' इति (छां ४-१५) श्रुतौ अभिधानाच्चचक्षुरन्तरो वुष्णुरेव इत्यर्थः ।

ಶ್ರುತೋಪನಿಷತ್ = ಶ್ರವಣ-ಮನನ-ಧ್ಯಾನ ಇವುಗಳನ್ನು ಹೊಂದಿದ ಮನುಷ್ಯರಿಗೆ, ಕೇನ = ಮುಖ್ಯಪ್ರಾಣನಿಂದ, ಕಯೋಃ = ಪರಬ್ರಹ್ಮನ, ಗತೇಃ = ಪ್ರಾಪ್ತಿಯನ್ನು ಹೇಳಲ್ಪಟ್ಟರುವುದರಿಂದ, '' ಸ ಏನಾನ್ ಬ್ರಹ್ಮ ಗಮಯತಿ'' ಎಂಬುದಾಗಿ ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿರುವುದಿಂದಲೂ, ಚಕ್ಷುರಂತರ್ಗತನಾದವನು ವಿಷ್ಣುವೇ ಆಗಿದ್ದಾನೆ.

ಪರಿಪೂರ್ಣಚಂದ್ರಿಕಾ

**सू – ॐ ॥ श्रुतोपनिषत्कगत्यभिधानाच्च ॥ ॐ ॥ १६ ॥**

**'स एनान् ब्रह्म गमयति' (छां. ४-१५) इति ।**
**न ह्यन्यविद्ययाऽन्यगतिर्युक्ता ॥**

ಅನುವಾದ - ಅಗ್ನಿಯ ವಿದ್ಯೆಯನ್ನು ತಿಳಿದವನು ಬ್ರಹ್ಮನನ್ನೇ ಹೊಂದುತ್ತಾನೆ ಎಂದು ಛಾಂದೋಗ್ಯವು ಹೇಳಿದೆ. ಬೇರೆಯವರ ವಿದ್ಯೆಯಿಂದ ಅವನ ಪ್ರಾಪ್ತಿಯನ್ನು ಹೇಳುವುದು ಅಯುಕ್ತವಾಗುತ್ತದೆ. ಆದ್ದರಿಂದ ಅಗ್ನಿವಿದ್ಯೆಗೆ ಪರಮಾತ್ಮನೇ ವಿಷಯನು.

ಪ್ರತಿಪದಾರ್ಥ - ಸಃ = ಅಗ್ನಿಯ ಉಪಾಸಕನು, ಏನಾನ್ ಬ್ರಹ್ಮ = ಇಂತಹ ಬ್ರಹ್ಮನನ್ನು, ಗಮಯತಿ = ಹೊಂದುತ್ತಾನೆ. ಇತಿ = ಹೀಗೆ ಛಾಂದೋಗ್ಯವು ಹೇಳಿದೆ. ಅನ್ಯವಿದ್ಯಯಾ = ಅಗ್ನಿಯ ವಿದ್ಯೆಯಿಂದ, ಅನ್ಯ ಗತಿಃ = ಪರಮಾತ್ಮನ ಪ್ರಾಪ್ತಿಯು, ನಹಿ = ಯುಕ್ತವಾಗುವುದಿಲ್ಲ.(१)

---

(१) भाष्यदीपिका – नन्वेतदुपक्रमे सुखज्ञानयोरभिधानेऽपि नाक्षिस्थप्रकरणस्य वैष्णवत्वं युक्तम् । छान्दोग्ये 'प्राणो ब्रह्म कम्' इति विद्यां 'य एष आदित्ये पुरुषः' इति विद्यां चोक्त्वाऽग्निभिरुपकोसलं प्रति 'उपकोसलैषा सोम्य तेऽस्मद्विद्या चाऽत्मविद्या चोक्ता' इत्युक्तत्वेन 'कम्' इत्याद्यविद्याया विष्णुविषयत्वस्य 'य एषः' इति द्वितीयायाश्चाग्निविषयत्वस्यैव युक्तत्वात् । न च 'अस्मद्विद्या' इत्युक्तादित्यविद्याया अग्निविषयत्वेऽपि नाक्षिस्थविद्यायास्तद्युक्तमिति वाच्यम् । 'य एषोऽन्तरक्षिणि' इत्यक्षिस्थविद्याया आदित्यविद्ययैकार्थत्वात् । न चोपक्रमविरोधः । यथा 'ह्वयाम्यग्निं प्रथमं स्वस्तये' इत्यत्राग्नेरुपक्रमेऽपि 'सवितारमूतये' 'हिरण्ययेन सविता रथेन' इत्यादिसवितृश्रुतिलिङ्गादिना तत्प्रकरणं सावित्रमिति प्रकरणविच्छेदः, तथाऽत्रापि ब्रह्मण उपक्रमेऽपि 'अस्मद्विद्या' इत्यग्नेरस्मच्छब्देनोक्तत्वादग्नीनामेवेदं प्रकरणं न विष्णोः । न च 'अस्मद्विद्या' इत्येतदन्तर्यामिपरतया योज्यम् । तथा सति 'आत्मविद्या' इति पृथगुक्त्ययोगात् । तस्मादग्निविषयत्वमेव चक्षुरन्तःस्थविद्याया इत्याशङ्कां परिहरत्सूत्रं पठित्वा तदुपात्तश्रुतिमेवोदाहरति – **श्रुतेति** ।। इतीत्यस्य सूत्रेणान्वयः । अत्र सूत्रे श्रुतेत्युपलक्षणं, मतध्यातेत्यपि द्रष्टव्यम् । केति वायुरुच्यते । 'को वायुरिति शब्दितः' इति अभिधानात् । कशब्दस्याऽवृत्त्या गतिरित्यनेनापि सम्बन्धे कगतिरिति परब्रह्मगतिरुच्यते । 'कं ब्रह्म' इति वाक्यबोधितपरब्रह्मप्रकरणादेतदर्थ निश्चयात् । तथा च – श्रुतोपनिषदां श्रुतमतध्यातैतद्विद्यानां पुंसां केन वायुना कगतेः 'कं ब्रह्म' इति वाक्यबोधितब्रह्मप्राप्तेः 'स एनान् ब्रह्म गमयति' इत्युपसंहारेऽभिधानाद् विष्णुविषयैवाक्षिस्थविद्या, न त्वग्निविषयेति सूत्रार्थः ।

यद्वा – श्रुतोपनिषदमुपकोसलं प्रत्यग्निभिरेतद्विद्याफलत्वेन ब्रह्मगत्यभिधानाद् वैष्णवमेवेदं प्रकरणं, नत्वग्निविषयमित्यर्थः । तत्त्वप्रदीपे तु – 'स एनान् ब्रह्म गमयति' इति श्रुतोपनिषत्कानां श्रुतोपनिषद्गतोपासनानां ब्रह्मगत्यभिधानाच्च आन्तरो विष्णुरेव । अस्यामुपनिषीदति ब्रह्मेत्युपनिषत् उपासना । अनया ब्रह्म उपनिषीदतीति वेत्युक्तम् । श्रुतविषयिणी या उपनिषत् मतिध्यानरूपोपासना तत्कानां तद्गतं तद्विषयकं ध्यानरूपोपासनं तद्गतामित्यर्थः । अनेन उपनिषच्छब्दो मतिध्यानरूपोपासनापरः । ब्रह्मेत्यनेन बहुव्रीहिसमासावयवभूतः कशब्द आवृत्तो ब्रह्मवाचक इत्युक्तं भवति । अत एवाऽह टीकाकृत् – श्रुतपदं मनननिदिध्यासनयोरुपलक्षकमित्यादिना । तत्त्वप्रदीपपक्षे – उपनिषच्छब्द उपासनापरः । टीकाकृत्पक्षे विद्यापरः । टीकायां वाशब्दश्चार्थः॥

यद्यप्यस्य सूत्रस्य प्रकरणविच्छेदाशङ्कापरिहारायोपसंहारस्थलिङ्गोक्तिपरत्वेन परमसाध्ये युक्त्यन्तरप्रतिपादकत्वाभावादत्र चशब्दो न प्रयोज्यः । तथाऽपि 'स एनान् ब्रह्म' इत्युपसंहारस्थस्यैतद्विद्यावेत्तॄणां ब्रह्मप्राप्तिरूपलिङ्गस्य चक्षुरन्तरो विष्णुरेवेति परमसाध्येऽपि साक्षादन्वयादस्य च लिङ्गस्य आद्यसूत्रोक्तामृतत्व लिङ्गापेक्षयोत्तरवाक्यस्थ-द्वितीयसूत्रोक्तलिङ्गापेक्षया तृतीयसूत्रोक्तप्रकरणापेक्षया युक्त्यन्तरत्वात् तद्विवक्षया सूत्रे चशब्दप्रयोगोपपत्तिरिति केचिदाहुः ॥

वस्तुतस्तु – अत्र प्रकरणविच्छेदाशङ्कापरिहारेऽपि पूर्वसूत्रेऽत्र चैतत्प्रकरणस्य वैष्णवत्व-रूपाध्याहृतावान्तरसाध्यस्यैकत्वेन तत्रानेन युक्त्यन्तराभिधानाच्चशब्दोपपत्तिः । 'अथ यदु चैवास्मिञ्छव्यं कर्म कुर्वन्ति यदि चनार्चिषमेवाभिसम्भवन्ति । अर्चिषोऽहरह्न आपूर्यमाणपक्षम् आपूर्यमाणपक्षाद् यान् षडुदङ्ङेति मासान् तान् मासेभ्यः संवत्सरं संवत्सरादादित्यमादित्याच्चन्द्रमसं चन्द्रमसो विद्युतं तत्पुरुषो मानवः स एनान् ब्रह्म गमयति' इति छन्दोगश्रुतेरयमर्थः – अथेत्यर्थान्तरे । 'अथ' अवसितकर्मणि 'अस्मिन्' ज्ञानिविषये पुत्रादयो यदि 'शव्यं' शवयोग्यं दहनादि कर्म कुर्वन्ति । 'यदि चन' यदि वा न कुर्वन्ति 'तदार्चिषम्' अर्चिर्नामकदेवलोकं सम्भवन्ति प्राप्नुवन्त्येवेमे ज्ञानिन इति विपरिणामेनान्वयः । संविशतीत्येकवचनान्तविशिधातुपाठः 'ते' इति पाठश्च प्रमेयदीपछन्दोगपाठविरुद्धः । ततोऽहर्लोकं , ततः 'आपूर्यमाणपक्षं' शुक्लपक्षलोकं, ततः सूर्यो 'यान्' षण्मासान् उदङ्ङेति तान् मासदेवलोकम् उत्तरायणलोकं च, ततः संवत्सरादित्यचन्द्रविद्युदभिमानिलोकान् क्रमेण प्राप्नुवन्ति । ततः 'तस्याः' विद्युन्नाम्न्या भारत्याः 'पुरुषः' भर्ता 'मानवः' मनुसञ्ज्ञस्य विष्णोः प्रियो मुख्यवायुस्तं गच्छन्ति । 'सः' वायुः 'एनान्' स्वमाप्तान् प्रतीकालम्बनान् चतुर्मुखाख्यं कार्यं ब्रह्मप्रतीकालम्बनांस्तु परं ब्रह्म गमयतीति ।

## श्रीपद्मनाभतीर्थविरचितसत्तर्कदीपावळिः

### ॐ श्रुतोपनिषत्कगत्यभिधानाच्च ॐ ।। १-२-१६ ।।

स एनान् ब्रह्म गमयतीति अक्षिस्थपुरुषज्ञानाद् ब्रह्मगमनश्रवणादप्यसौ विष्णुरेव नाग्निः । नह्यग्निविद्यया विष्णुगतिर्युज्यते । 'यान्ति देवव्रता देवान् पितॄन् यान्ति पितृव्रताः । भूतानि यान्ति भूतेज्याः यान्ति मद्याजिनोऽपि माम्' इति भगवद्वचनविरोधादित्येतमर्थं सूत्रेण दर्शयति – श्रुतेत्यादिना ।।

'ಸ ಏನಾನ್ ಬ್ರಹ್ಮ' ಎಂಬಲ್ಲಿ ಅಕ್ಷಿಯಲ್ಲಿರುವ ಪುರುಷನ ಜ್ಞಾನದಿಂದ ಬ್ರಹ್ಮನು ದೊರೆಯುತ್ತಾನೆಂದು ತಿಳಿಯುತ್ತದೆ. ಆದ್ದರಿಂದ ಅಕ್ಷಿಸ್ಥನಾದವನು ವಿಷ್ಣುವೇ ಆಗಿರುತ್ತಾನೆ ಹೊರತು ಅಗ್ನಿಯಲ್ಲ ಅಗ್ನಿವಿದ್ಯೆಯಿಂದ ವಿಷ್ಣು ದೊರೆಯಲು ಸಾಧ್ಯವಿಲ್ಲ. ಏಕೆಂದರೆ 'ಯಾಂತಿ' ಎಂಬ ಗೀತಾ ಮಾತಿನ ವಿರೋಧ ಬರುತ್ತದೆ. ಹೀಗೆ ಸೂತ್ರವನ್ನು "ಶ್ರುತ" ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

तत्वप्रकाशिका –

### ॐ श्रुतोपनिषत्कगत्यभिधानाच्च ॐ ।। १-२-१६ ।।

नैवमुपक्रमेऽप्यक्षिस्थप्रकरणस्य वैष्णवत्वं युक्तम् । 'प्राणो ब्रह्म' 'कमिति विद्याम्' 'य एष आदित्ये पुरुषः' इत्यादिविद्यां चोक्त्वा अग्निभिरुपकोसलैषा सौम्य तेऽस्मद्विद्याऽऽत्मविद्या चेत्युक्तत्वेनाद्यविद्याया विष्णुविषयत्वस्य, द्वितीयविद्याया अग्निविषयत्वस्यैव युक्तत्वादक्षिस्थविद्यायाश्चादित्यस्थविद्ययैकार्थत्वात् ।

---

अस्त्वेतद्विद्यायाः फलत्वेन ब्रह्मप्राप्त्यभिधानं, तथाऽपि कुतो नाग्निविषयत्वमस्या इत्यत आह – न हीति ।। 'हि' यस्मादन्यस्याग्नेर्विद्ययाऽन्यगतिरन्यस्य ब्रह्मणः प्राप्तिर्न युक्ता । यस्माच्चात्र परब्रह्मप्राप्तिः फलत्वेनोच्यत इत्यर्थः । तस्मान्नान्यविद्येयं ब्रह्मविद्यैवेति वाक्यशेषः । हिशब्देन विपक्षे – 'देवान् देवयजो यान्ति मद्भक्ता यान्ति मामपि' इति स्मृतिविरोधं सूचयति । 'अस्मद्विद्याऽऽत्मविद्या' इति वचनविरोधस्तु तयोरन्तर्यामि-सर्वगतरूपद्वयविषयकत्वेन परिहरणीयः । सावकाशश्रुतेरपि निरवकाशश्रुतेः प्राबल्यादिति भावः ।

**नचोपक्रमविरोधः । 'ह्यायाम्यग्निम्' इत्यादाविवोपपत्तेः । न चास्मद्विद्येत्यन्तर्यामिविषयतया योज्यं तथा सत्यात्मविद्येति पृथगुक्त्ययोगात् । तस्मादग्निविषयत्वमेव चक्षुरन्तःस्थविद्याया इत्याशङ्कां परिहरत्सूत्रं पठित्वा तदुपात्तश्रुतिमेवोदाहरति – श्रुतेति ।।**

ಈ ಅಕ್ಷಿಸ್ಥಪ್ರಕರಣದ ಪ್ರಾರಂಭದಲ್ಲಿ "ಪ್ರಾಣೋ ಬ್ರಹ್ಮ" ಎಂದು ಕೇಳಿಸುತ್ತಿರುವುದರಿಂದ ಈ ಪ್ರಕರಣವು ವಿಷ್ಣುಸಂಬಂಧಿಯಾದ ಪ್ರಕರಣವೆಂದು ಹೇಳಿದ್ದು ಕೂಡುವುದಿಲ್ಲ. ಏಕೆಂದರೆ ಮೂರು ಅಗ್ನಿದೇವತೆಗಳು (ಗಾರ್ಹಪತ್ಯ, ಅನ್ವಾಹಾರ್ಯಪಚನ, ಮತ್ತು ಆಹವನೀಯ) ಉಪಕೋಸಲನೆಂಬ ಶಿಷ್ಯನಿಗೆ "ಪ್ರಾಣೋ ಬ್ರಹ್ಮ" "ಕಮಿತಿ ವಿದ್ಯಾಂ" ಎಂದು ಆತ್ಮ ವಿದ್ಯೆಯನ್ನು ಹೇಳಿದ್ದಾರೆ. ಮತ್ತು "ಯ ಏಷ ಆದಿತ್ಯೇ ಪುರುಷಃ" ಎಂದು ಆದಿತ್ಯ ವಿದ್ಯೆಯನ್ನು ಹೇಳಿ, ಮುಂದೆ. "ಏಷಾ ಸೌಮ್ಯ ತೇಽಸ್ಮದ್ವಿದ್ಯಾಽತ್ಮವಿದ್ಯಾ ಚ" ಹೇ ಸೌಮ್ಯ ಉಪಕೋಸಲ, ನಾವು ನಿನಗೆ ನಮ್ಮ ವಿಷಯಕ ವಿದ್ಯೆಯನ್ನೂ ಮತ್ತು ಆತ್ಮವಿದ್ಯೆಯನ್ನೂ ಹೇಳಿದ್ದೇವೆ ಎಂದು ಹೇಳಿದ್ದಾರೆ. ಮೊದಲಿನ ವಿದ್ಯೇ ವಿಷ್ಣು ಸಂಬಂಧಿಯಾಗಿದ್ದು, ಎರಡನೆಯ ವಿದ್ಯೆಯು ಅಗ್ನಿ ಸಂಬಂಧಿಯಾಗಿದೆ. ಅಕ್ಷಿಸ್ಥವಿದ್ಯಾ ಮತ್ತು ಆದಿತ್ಯವಿದ್ಯಾವು ಒಂದೇ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಅಕ್ಷಿಸ್ಥನು ಅಗ್ನಿಯೇ ಹೊರತು ವಿಷ್ಣುವಲ್ಲ. ಆದರೆ "ಪ್ರಾಣೋ ಬ್ರಹ್ಮ" ಎಂದು ಪ್ರಾರಂಭವಿರುವುದರಿಂದ ಉಪಕ್ರಮದ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಅವಕಾಶವೇ ಇಲ್ಲ. ಏಕೆಂದರೆ ಆರಂಭದಲ್ಲಿ ವಿಷ್ಣು ಸಂಬಂಧಿಯಾದ ಉಪಕ್ರಮವಿದ್ದರೂ ಮುಂದೆ "ಅಸ್ಮದ್‌ವಿದ್ಯಾ" ಎಂದು ಸ್ಪಷ್ಟವಾಗಿ ಕೇಳಿಬರುವುದರಿಂದ ಇದು ಅಗ್ನಿಪ್ರಕರಣವೆಂದೇ ಹೇಳಬೇಕು.

"ಅಸ್ಮದ್ವಿದ್ಯಾ" ಎಂಬಲ್ಲಿ "ಅಸ್ಮತ್" ಪದವನ್ನು ಅಂತರ್ಯಾಮಿ ಪರವಾಗಿ (ಅಗ್ನಿಯ ಅಂತರ್ಯಾಮಿ ಎಂದು) ಕೂಡಿಸಬಹುದಲ್ಲವೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಅಂತರ್ಯಾಮಿ ಎಂಬ ಅರ್ಥವನ್ನು ಸ್ವೀಕಾರ ಮಾಡಿದರೆ "ಆತ್ಮವಿದ್ಯಾ" ಎಂದು ಪ್ರತ್ಯೇಕವಾಗಿ ಹೇಳುವ ಅವಶ್ಯಕತೆ ಇರಲಿಲ್ಲ.

**तत्वप्रकाशिका – नैतद्विद्याया अग्निविषयत्वं युक्तमपि तु विष्णुविषयत्वमेव। 'अथ यदुचैवास्मिञ्छव्यं कर्म कुर्वन्ति यदु चैनाऽर्चिषमेवाभिसंविशत्यर्चिषोऽहरन्ह आपूर्यमाणपक्षमापूर्यमाणपक्षाद्यान् षडुदङेति मासांस्तान्मासेभ्यः संवत्सरं संवत्सरा-दादित्यमादित्याच्चन्द्रमसं चन्द्रमसो विद्युतं तत्पुरुषो मानवः स एनान् ब्रह्म गमयति' इति श्रुतैतद्विद्यानां ब्रह्मगत्यभिधानादिति भावः ।**

ಆದ್ದರಿಂದ ಚಕ್ಷುರಂತಸ್ಥವಿದ್ಯೆಯು ಅಗ್ನಿವಿಷಯಕವೇ ಆಗಿದೆ ಎಂದು ಶಂಕಾವನ್ನು ಮಾಡಿದರೆ, ಶಂಕಾ ಪರಿಹಾರ ಮಾಡುವ ಸೂತ್ರವನ್ನು ಹೇಳಿ, ಸೂತ್ರದಲ್ಲಿ ಅಡಗಿರುವ ಶ್ರುತಿಯನ್ನೇ

ಉದಾಹರಿಸುತ್ತಿದ್ದಾರೆ "ಶ್ರುತ" ಎಂದು. ಈ ವಿದ್ಯೆಯು ಅಗ್ನಿವಿಷಯಕವಲ್ಲ ವಿಷ್ಣುವಿಷಯಕವೇ ಆಗಿದೆ. ಏಕೆಂದರೆ ಛಾಂದೋಗ್ಯೋಪನಿಷತ್ತಿನ ಮಂತ್ರವು ಈ ರೀತಿಯಾಗಿದೆ - "ಅಥ ಯದುಚೈವಾಸ್ಮಿನ್‌ಶವ್ಯಂ ಕರ್ಮ ಕುರ್ವಂತಿ ಯದು ಚೈನಾಽರ್ಚಿಷಮೇವಾಭಿಸಂವಿಶಂತಿ ಅರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮಾಪೂರ್ಯಮಾಣಪಕ್ಷಾದ್ಯಾನ್ ಷಡುದತಿ ಮಾಸಾಂಸ್ತಾನ್ ಮಾಸೇಭ್ಯಃ ಸಂವತ್ಸರಂ ಸಂವತ್ಸರಾದಾದಿತ್ಯಮಾದಿತ್ಯಾಚ್ಚಾಂದ್ರಮಸಂ ಚಂದ್ರಮಸೋ ವಿದ್ಯುತಂ ತತ್ಪುರುಷೋ ಮಾನವಃ ಸ ಏನಾನ್ ಬ್ರಹ್ಮ ಗಮಯತಿ" ಯಾರು ಈ ಉಪನಿಷತ್ತಿನ ವಿದ್ಯೆಯನ್ನು ತಿಳಿದುಕೊಂಡಿದಾರೋ ಅವರು ಮರಣ ಹೊಂದಿದನಂತರ ಔರ್ಧ್ವದೇಹಿಕ ಕ್ರಿಯಾ ಮಾಡಲಿ ಅಥವಾ ಬಿಡಲಿ, ಮೊದಲು ಅರ್ಚಿ ಎಂಬ ಹೆಸರುಳ್ಳ ಲೋಕವನ್ನು ಪ್ರವೇಶ ಮಾಡುತ್ತಾರೆ. ಆ ಅರ್ಚಿಲೋಕದಿಂದ ಅಹಲ್ರ್ಲೋಕ, ಅಲ್ಲಿಂದ ಶುಕ್ಲಪಕ್ಷಾಭಿಮಾನಿಲೋಕ, ಅಲ್ಲಿಂದ ಉತ್ತರಾಯಣಾಭಿಮಾನಿಲೋಕ, ಸಂವತ್ಸರಾಭಿಮಾನಿಲೋಕ, ಆದಿತ್ಯಲೋಕ, ಚಂದ್ರಲೋಕ, ವಿದ್ಯುದಭಿಮಾನಿಲೋಕಗಳ ಪ್ರಾಪ್ತಿಯನ್ನು ಪಡೆಯುತ್ತಾರೆ. ಅಲ್ಲಿಂದ ಭಾರತೀಪತಿಯಾದ ವಾಯುದೇವರನ್ನು ಹೊಂದುತ್ತಾರೆ. ವಾಯುದೇವರು ಇವರನ್ನು ಪರಬ್ರಹನನ್ನು ಹೊಂದಿಸುತ್ತಾರೆ ಎಂದು ಇದೆ. ಹೀಗೆ ಈ ವಿಶಿಷ್ಟ ಜ್ಞಾನದ ಫಲ ಬ್ರಹ್ಮಪ್ರಾಪ್ತಿ ಎಂದು ಅಭಿಪ್ರಾಯ.

**तत्वप्रकाशिका – श्रुतपदं मनननिदिध्यासनोपलक्षकम् । कगतिरिति ब्रह्मगतिः । कं ब्रह्मेति प्रकृतत्वात् । केन वायुना गतिरिति वा । 'को वायुरिति शब्दितः' इत्यभिधानात् । अथवा श्रुतोपनिषदुपकोसलं प्रति एतद्विद्याफलत्वेन कगत्यभिधानादिति । नच वाच्यमत्र कगतिकथनमेव श्रूयते न तद्विद्याफलत्वेनेति । सर्वेषु लोकेषु भाति य एवं वेदेति फलश्रुतिसामीप्यात् । अन्यथा असङ्गतेश्च ।**

ಸೂತ್ರದಲ್ಲಿರುವ "ಶ್ರುತ" ಪದದಿಂದ ಮನನ ನಿದಿಧ್ಯಾಸನವನ್ನು ಉಪಲಕ್ಷಣವಾಗಿ ಸ್ವೀಕರಿಸಬೇಕು. "ಕ ಗತಿ" ಎಂದರೆ "ಬ್ರಹ್ಮಗತಿ" ಎಂದರ್ಥ. ಏಕೆಂದರೆ "ಕಂ ಬ್ರಹ್ಮ" ಎಂದು ಹಿಂದೆ ಪ್ರಕೃತವಾಗಿದೆ. ಅಥವಾ "ಕೇನ = ವಾಯುನಾ ಗತಿಃ" ಎಂದು ಅರ್ಥಾಂತರ ಮಾಡಬಹುದು. ಏಕೆಂದರೆ "ಕೋ ವಾಯುರಿತಿ ಶಬ್ದಿತಃ" ಎಂದು ಕೋಶವಿದೆ. ಅಥವಾ ಯಾರು ಈ ಉಪನಿಷತ್ತನ್ನು ಶ್ರವಣ ಮಾಡಿದ್ದಾರೋ, ಅಂದರೆ ಉಪಕೋಸಲನನ್ನು ಕುರಿತು ಆ ವಿದ್ಯೆಯ ಫಲವಾದ ಬ್ರಹ್ಮಪ್ರಾಪ್ತಿಯನ್ನು ಹೇಳಿದ್ದಾರೆಂದು ತಿಳಿಯಬೇಕು.

ಪ್ರಶ್ನೆ - ಈ ಛಾಂದೋಗ್ಯಶ್ರುತಿಯಲ್ಲಿ ಕೇವಲ 'ಕ' ಗತಿಯೆಂದು ಮಾತ್ರ ಕೇಳಿಸುತ್ತಿದೆ ಹೊರತು, ಆಕ್ಷಿಪ್ತ ವಿದ್ಯೆಯ ಫಲವೆಂದು ಹೇಳಿಲ್ಲವಲ್ಲ?

ಉತ್ತರ - 'ಕ' ಗತಿಯನ್ನು ಹೇಳಿರುವ ಶ್ರುತಿಯ ಪೂರ್ವವಾಕ್ಯವು "ಸರ್ವೇಷು ಲೋಕೇಷು ಭಾತಿ ಯ ಏವಂ ವೇದ"(ಯಾರು ಈ ವಿದ್ಯೆಯನ್ನು ತಿಳಿಯುತ್ತಾರೆಯೋ ಅವರು ಎಲ್ಲಾ ಲೋಕಗಳಲ್ಲಿಯೂ ಪ್ರಕಾಶಮಾನರಾಗಿರುತ್ತಾರೆ) ಎಂದು ಈ ವಿದ್ಯೆಯ ಫಲವು ಪಠಿತವಾಗಿದೆ. ಈ ಮಂತ್ರವು ಅಕ್ಷಿಸ್ಥ ವಿದ್ಯೆಯ ಫಲವಲ್ಲದಿದ್ದರೆ ಮಧ್ಯದಲ್ಲಿ ಇದನ್ನು ಹೇಳುವುದು ಅಸಂಗತವಾಗುತ್ತಿತ್ತು.

**तत्वप्रकाशिका – अस्त्वेतद्विद्याया ब्रह्मप्राप्तिः फलम्, तथापि कुतो नाग्निविषयत्वमित्यत आह – नहीति ।। यदीयमग्निविद्या तर्ह्येतद्विद्ययाऽग्निप्राप्तिरेव फलत्वेनोच्यते, न ब्रह्मप्राप्तिः । 'देवान् देवयजो यान्ति मद्भक्ता यान्ति मामपि' इत्यादेरन्यविद्ययाऽन्यगतेरयुक्तत्वात् । अतो ब्रह्मप्राप्तिफलैतद्विद्याया ब्रह्मपरत्वमेवेति भावः ।**

ಪ್ರಶ್ನೆ - ಆಗಲಿ, ನೀವು ಹೇಳಿದ ಪ್ರಕಾರ ಈ ಅಕ್ಷಿಸ್ಥ ವಿದ್ಯೆಯ ಫಲವು ಬ್ರಹ್ಮಪ್ರಾಪ್ತಿ ಎಂದು ಆಗಲಿ. ಆದರೂ ಸಹ ಈ ಪ್ರಕರಣವು ಅಗ್ನಿ ವಿಷಯವೇ ಆಗಿದೆ ಎಂದು ಏಕೆ ಹೇಳಬಾರದು?

ಉತ್ತರ - ಈ ಪ್ರಶ್ನೆಗೆ ಆಚಾರ್ಯರು ಭಾಷ್ಯದಲ್ಲಿ "ನಹಿ" ಎಂಬ ವಾಕ್ಯದಿಂದ ಉತ್ತರಿಸುತ್ತಿದಾರೆ. ಒಂದು ವೇಳೆ ಈ ವಿದ್ಯೆಯು ಅಗ್ನಿವಿದ್ಯೆ ಆಗಿದ್ದ ಪಕ್ಷದಲ್ಲಿ ಫಲರೂಪವಾಗಿ ಅಗ್ನಿಪ್ರಾಪ್ತಿಯನ್ನೇ ಹೇಳಬೇಕೇ ಹೊರತು ಬ್ರಹ್ಮಪ್ರಾಪ್ತಿಯನ್ನಲ್ಲ. ಏಕೆಂದರೆ ಗೀತೆಯಲ್ಲಿ "ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ" ಅನ್ಯ ದೇವತೆಗಳನ್ನು ಆರಾದನೆ ಮಾಡಿದವರು ಆಯಾ ದೇವತೆಗಳನ್ನೇ ಹೊಂದುತ್ತಾರೆ, ನನ್ನ ಭಕ್ತರು ನನ್ನನ್ನೇ ಹೊಂದುತ್ತಾರೆ ಎಂದು ಶ್ರೀಕೃಷ್ಣನ ಮಾತಿದೆ. ಆದ್ದರಿಂದ ಅಗ್ನಿವಿದ್ಯೆಯಿಂದ ಬ್ರಹ್ಮ ಪ್ರಾಪ್ತಿಯನ್ನು ಹೇಳುವುದು ಯುಕ್ತವಲ್ಲ. ಆದ್ದರಿಂದ ಬ್ರಹ್ಮ ಪ್ರಾಪ್ತಿರೂಪವಾದ ಫಲವನ್ನು ಹೇಳಿರುವುದರಿಂದ ಈ ವಿದ್ಯೆಯು ಬ್ರಹ್ಮಪರವಾಗಿಯೇ ಇದೆ ಎಂದು ಸಿದ್ಧವಾಗುತ್ತದೆ.

**तत्वप्रकाशिका – नचास्मद्विद्येत्युक्तिविरोधः । तस्य अन्तर्यामिविषयत्वोपपत्तेः । श्रुतेरपि निरवकाशत्वोपपत्तेः प्राबल्यात् । नचात्मविद्येति पृथगुक्तिविरोधः । तस्याः सर्वगतात्मविद्यात्वाभिधायकत्वात् । तस्यैव ब्रह्मत्वात् ।। १६ ।।**

ಈಗ 'ಅಸ್ಮದ್ವಿದ್ಯಾ' ಎಂದು ಅಗ್ನಿದೇವತೆಗಳು ಸ್ಪಷ್ಟವಾಗಿ ಹೇಳಿರುವುದರಿಂದ, ಇದರ ವಿರೋಧ ಬರುತ್ತದೆಂದು ಹೇಳಬಾರದು. ಏಕೆಂದರೆ "ಅಸ್ಮತ್" ಎಂದರೆ "ನಮ್ಮ ಅಂತರ್ಯಾಮಿ"

ಎಂದರ್ಥವನ್ನೂ ಮಾಡಿ ಶ್ರುತಿಯಲ್ಲಿರುವ ಆ ಶಬ್ದವನ್ನು ಹೊಂದಿಸಬಹುದು. ಏಕೆಂದರೆ ಸಾವಕಾಶವಾದ ಅಸ್ಮತ್ ಶಬ್ದವು ಶ್ರುತಿಗಿಂತ ನಿರವಕಾಶವಾದ ಬ್ರಹ್ಮಪ್ರಾಪ್ತಿರೂಪವಾದ ಫಲವೆಂಬ ಉಪಪತ್ತಿಯು ಪ್ರಬಲವಾಗಿದೆ.

''ಅಸ್ಮದ್ವಿದ್ಯಾ'' ಮತ್ತು ''ಆತ್ಮವಿದ್ಯಾ'' ಎಂದು ಪ್ರತ್ಯೇಕವಾಗಿ ಏಕೆ ಹೇಳಬೇಕೇ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಉತ್ತರ - ಆತ್ಮವಿದ್ಯಾ ಎಂದರೆ ಸರ್ವಗತನಾದ ಪರಮಾತ್ಮನ ವಿದ್ಯೆ ಎಂದೂ, ''ಅಸ್ಮದ್ವಿದ್ಯಾ'' ಎಂದರೆ ಅಗ್ನಿಯ ಅಂತರ್ಯಾಮಿಯಾದ ಪರಮಾತ್ಮನ ವಿದ್ಯೆಯೆಂದು ಅರ್ಥ ಮಾಡಬೇಕು. ಅಂದರೆ ಈ ರೀತಿಯಿಂದ ಪರಮಾತ್ಮನ ಜ್ಞಾನವನ್ನು ಹೊಂದಬೇಕೆಂಬುದೇ ಶ್ರುತಿಯ ಅಭಿಪ್ರಾಯ. ಈ ಸರ್ವಗತನಾದ ಆತ್ಮನೇ ಬ್ರಹ್ಮನು.

**भावदीपः – शङ्कते – नैवमिति ।। प्राणो ब्रह्मेत्येतदंशानुवादस्तु विद्यात्रैविध्य-शङ्कानिरासायात्मविद्यात्वेन सङ्ग्रहार्थमित्येके ।**

'ನೈವಂ' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ. ಟೀಕೆಯಲ್ಲಿ 'ಪ್ರಾಣೋ ಬ್ರಹ್ಮ' ಎಂಬ ಅಂಶವನ್ನೇಕೆ ಅನುವಾದ ಮಾಡಿದ್ದಾರೆಂದರೆ ಮೂರು ಬಗೆಯ ವಿದ್ಯೆಯನ್ನು ಶ್ರುತಿ ಹೇಳುತ್ತಿದೆಯೆಂಬ ಶಂಕೆ ಬರುತ್ತಿತ್ತು. ಅದನ್ನು ಪರಿಹರಿಸಿ ಎಲ್ಲವೂ 'ಆತ್ಮವಿದ್ಯಾತ್ವ' ಧರ್ಮದಿಂದ ಸಮಾನವಾಗಿದೆಯೆಂದು ತಿಳಿಸಲು 'ಪ್ರಾಣೋ ಬ್ರಹ್ಮ' ಎಂಬುದನ್ನು ಉಲ್ಲೇಖಿಸಿದ್ದಾರೆಂದು ಕೆಲವರು ಹೇಳುತ್ತಾರೆ.

**भावदीपः – केचित्तु प्राणोपक्रमेऽपि बाधकाद् यथा न प्राणविद्यात्वं सर्वस्य, तथा ब्रह्मोपक्रमेऽप्यग्नीनामादित्यस्थत्वोक्तिबाधकेन न ब्रह्मविद्यात्वम्, किन्तु अग्निविद्यात्वमेवेति दृष्टान्तार्थं 'प्राणो ब्रह्म' इत्यंशानुवादः, अत एव प्राक् श्रुतिलिङ्गादिबाधकसद्भावान्न प्रकरणित्वं प्राणस्येत्युक्तमित्याहुः ।**

ಇನ್ನು ಕೆಲವರ ಸಮಾಧಾನ ಹೀಗಿದೆ - ಉಪಕ್ರಮದಲ್ಲಿ ಪ್ರಾಣಶಬ್ದವಿದ್ದರೂ ಬಾಧಕವಿರುವುದರಿಂದ ಇದು ಹೇಗೆ ಸಂಪೂರ್ಣ ಪ್ರಾಣ ವಿದ್ಯೆ ಆಗುವುದಿಲ್ಲವೋ, ಅದರಂತೆ ಉಪಕ್ರಮದಲ್ಲಿ ಬ್ರಹ್ಮಶಬ್ದವಿದ್ದರೂ ಅಗ್ನಿಗಳಿಗೆ ಆದಿತ್ಯಸ್ಥತ್ವವೆಂಬ ಬಾಧಕವನ್ನು ಹೇಳಿದ್ದರಿಂದ ಬ್ರಹ್ಮವಿದ್ಯೆ ಎನಿಸುವುದಿಲ್ಲ. ಹೊರತಾಗಿ ಅಗ್ನಿವಿದ್ಯೆಯೇ ಆಗುತ್ತದೆ. ಹೀಗೆ ದೃಷ್ಟಾಂತವನ್ನು ತೋರಿಸುವುದಕ್ಕಾಗಿ 'ಪ್ರಾಣೋ ಬ್ರಹ್ಮ' ಎಂಬ ಅಂಶವನ್ನು ಅನುವಾದ ಮಾಡಿದ್ದಾರೆ. ಆದ್ದರಿಂದಲೇ ಹಿಂದೆ ಶ್ರತಿ ಲಿಂಗ ಮೊದಲಾದ ಬಾಧಕಗಳಿರುವುದರಿಂದ ಪ್ರಾಣನು ಪ್ರಕರಣಪ್ರತಿಪಾದ್ಯನಾಗುವುದಿಲ್ಲವೆಂದು ಹೇಳಿದ್ದರೆಂದು.

**भावदीपः – श्रुतौ सान्निध्यमनुरुद्ध्य व्युत्क्रमेणोक्तावपि स्वयं यथाक्रममन्वयमाह – आद्येति ।। कं ब्रह्मेत्युक्तविद्याया इत्यर्थः । तावता अक्षिस्थो विष्णुरित्यत्र किमायातम्? अत आह – अक्षिस्थेति ।।**

ಶ್ರುತಿಯಲ್ಲಿ ಸಾನ್ನಿಧ್ಯವನ್ನು ಅನುಸರಿಸಿ ವಿಪರೀತವಾಗಿ ಹೇಳಿದ್ದರೂ ಗ್ರಂಥಕಾರರು ಯಥಾರೀತಿಯಾಗಿ ಅನ್ವಯ ಮಾಡಿ ಹೇಳುತ್ತಿದ್ದಾರೆ 'ಆದ್ಯವಿದ್ಯಾಯಾಃ' ಇತ್ಯಾದಿಯಾಗಿ 'ಕಂ ಬ್ರಹ್ಮ' ಇತ್ಯಾದಿಯಾಗಿ ಹೇಳಲ್ಪಟ್ಟ ವಿದ್ಯೆಯೇ ಆದ್ಯವಿದ್ಯೆ ಎನಿಸುತ್ತದೆ. ಹೀಗೆ ಹೇಳಿದ್ದರಿಂದ ಅಕ್ಷಿಸ್ಥನಾದವನು ವಿಷ್ಣುವಾಗಿದ್ದಾನೆಂಬ ವಿಷಯದಲ್ಲಿ ಹೇಗೆ ಆಕ್ಷೇಪಿಸಿದಂತಾಯಿತು ? ಎಂಬ ಪ್ರಶ್ನೆಗೆ 'ಅಕ್ಷಿಸ್ಥ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**भावदीपः** – 'ह्वयाम्यग्निम् प्रथमं स्वस्तये' इत्यत्राग्नेरुपक्रमेऽपि 'सवितारमूर्तये' 'हिरण्मयेन सविता रथेन' इत्यादिसवितृश्रुतिलिङ्गादिना तत्प्रकरणं सावित्रं ह्वयाम्येकादशसावित्रमित्यनुक्रमणिकोक्तेः । तथाऽत्राप्यस्मद्विद्येत्यग्निभिरुक्तत्वादग्नि-प्रकरणमित्यर्थः । एतेन प्राणस्य न प्रकरणित्वमित्येतदप्युपपादितं बोध्यम्

'ಹ್ವಯಾಮ್ಯಗ್ನಿಂ ಪ್ರಥಮಂ ಸ್ವಸ್ತಯೇ' ಎಂಬಲ್ಲಿ ಅಗ್ನಿಯು ಉಪಕ್ರಮದಲ್ಲಿ ಪ್ರಸಕ್ತನಾಗಿದ್ದರೂ 'ಸವಿತಾರಮೂರ್ತಯೇ ಹಿರಣ್ಮಯೇನ ಸವಿತಾ ರಥೇನ' ಇತ್ಯಾದಿಯಾಗಿ ಸವಿತೃಶ್ರುತಿ ಹಾಗೂ ಸವಿತೃಲಿಂಗಗಳ ಬಲದಿಂದ ಆ ಪ್ರಕರಣವು ಸಾವಿತ್ರಪ್ರಕರಣವೆಂದು ತಿಳಿಯುತ್ತದೆ. 'ಹ್ವಯಾಮ್ಯೇಕಾದಶಸಾವಿತ್ರಮ್' ಎಂದು ಅನುಕ್ರಮಣಿಕೆಯಲ್ಲಿ ಹೇಳಿದ್ದರಿಂದ ಅದರಂತೆ ಇಲ್ಲಿಯೂ 'ಅಸ್ಮದ್ವಿದ್ಯಾ' ಇತ್ಯಾದಿಯಾಗಿ ಅಗ್ನಿಗಳ ಉಪದೇಶವಿರುವುದರಿಂದ ಅಗ್ನಿಪ್ರಕರಣವೆಂದು ನಿಶ್ಚಯಿಸಬಹುದು. ಹೀಗೆ ಹೇಳಿದ್ದರಿಂದ ಪ್ರಾಣನು ಪ್ರಕರಣಪ್ರತಿಪಾದ್ಯನಲ್ಲವೆಂದು ತಿಳಿಯುತ್ತದೆ.

**भावदीपः** – **इति पृथगुक्तीति** ।। एतेन न्यायविवरणे 'सोऽहमस्मि स एवाहमस्मि' इत्याद्यभ्यासेत्यत्रास्मद्विद्या आत्मविद्येति विद्याशब्दाभ्यासोऽप्यादिपदेन गृहीत इति दर्शित इत्याहुः ।

ಇದರಿಂದ 'ಸೋऽಹಮಸ್ಮಿ ಸ ಏವಾಹಮಸ್ಮಿ ಇತ್ಯಾದ್ಯಭ್ಯಾಸ' ಎಂಬ ನ್ಯಾಯವಿವರಣವಾಕ್ಯದಲ್ಲಿರುವ ಆದಿಪದದಿಂದ 'ಅಸ್ಮದ್ವಿದ್ಯಾ ಆತ್ಮವಿದ್ಯಾ' ಎಂಬ ವಿದ್ಯಾಶಬ್ದದ ಅಭ್ಯಾಸವನ್ನೂ ಸ್ವೀಕರಿಸಬೇಕು. ಅದಕ್ಕಾಗಿ 'ದರ್ಶಿತಃ' ಎಂಬ ಪದವನ್ನು ಬಳಸಿದ್ದಾರೆಂದು ಕೆಲವರು ಹೇಳುತ್ತಾರೆ.

**भावदीपः** – भाष्यस्य सूत्रेणान्वयं दर्शयन् 'स एनान्' इति पदद्वयपरामृष्टं वक्तुं कृत्स्नवाक्यमुपाददानः सूत्रार्थमाह – **नैतदिति** ।। अन्तरो विष्णुरेवेत्यनुवृत्तस्य तात्पर्योक्तिरियम् । श्रवणमात्रस्य ब्रह्मप्राप्त्यहेतुत्वाद् 'य एवं वेद' इत्यपरोक्षस्याप्युक्तेरिति भावेनाह – **उपलक्षकमिति** ।।

ಭಾಷ್ಯದಲ್ಲಿರುವ ಮಾತುಗಳಿಗೆ ಸೂತ್ರದ ಜೊತೆ ಅನ್ವಯ ತೋರಿಸುತ್ತಾ 'ಸಃ' ಏನಾನ್, ಎಂಬೆರಡು ಪದಗಳಿಂದ ಪರಾಮರ್ಶಿಸಿದ್ದನ್ನು ಹೇಳುವುದಕ್ಕಾಗಿ ಸಂಪೂರ್ಣ ವಾಕ್ಯವನ್ನು ಉಲ್ಲೇಖಿಸುತ್ತಾ

ಸೂತ್ರಾರ್ಥವನ್ನು ಹೇಳುತ್ತಿದ್ದಾರೆ 'ನೈತತ್' ಇತ್ಯಾದಿಯಾಗಿ. 'ಅಂತರಃ ವಿಷ್ಣುರೇವ' ಎಂದು ಅನುವೃತ್ತವಾಗಿದೆ. ಇದರ ತಾತ್ಪರ್ಯವನ್ನೇ ಟೀಕೆಯಲ್ಲಿ 'ನೈತತ್' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಕೇವಲ ಬ್ರಹ್ಮನ ಬಗ್ಗೆ ಶ್ರವಣ ಮಾಡುವುದರಿಂದ ಬ್ರಹ್ಮಪ್ರಾಪ್ತಿಯು ಉಂಟಾಗುವುದಿಲ್ಲ. ಆದ್ದರಿಂದ 'ಯ ಏವಂ ವೇದ' ಎಂಬುದಾಗಿ ಅಪರೋಕ್ಷ್ಯವನ್ನೂ ಹೇಳಿದ್ದಾರೆಂಬ ಅಭಿಪ್ರಾಯದಿಂದ 'ಉಪಲಕ್ಷಕಮ್' ಎಂದು ಟೀಕೆಯಲ್ಲಿ ಹೇಳಿದ್ದಾರೆ.

**भावदीपः** – ।। इति वेति ।। 'प्राणो ब्रह्म' इति तस्यापि प्रकृतत्वादिति भावः । पूर्वमेनानित्युक्तबहुवचनान्तपरत्वेनार्थ उक्तः । अधुना 'आचार्यस्तु ते गतिं वक्ता' इति 'अहं तु ते तद् वक्ष्यामि' इति युष्मच्छब्देन प्रकृतश्रोतृपरत्वेनार्थमाह – अथवेति ।। तदा नोपलक्षणमिति भावः

'ಪ್ರಾಣೋ ಬ್ರಹ್ಮ' ಎಂಬುದೂ ಸಹ ಪ್ರಕೃತವಾಗಿದೆಯೆಂದು ತಿಳಿಯಬೇಕು. ಹಿಂದೆ ಏನಾನ್ ಎಂಬ ಬಹುವಚನಾಂತವಾದ ಶ್ರುತಿಗೆ ಅನುಗುಣವಾಗಿ ಸೂತ್ರವನ್ನು ವ್ಯಾಖ್ಯಾನಿಸಿದ್ದರು. ಈಗ 'ಆಚಾರ್ಯಸ್ತು ತೇ ಗತಿಂ ವಕ್ತಾ' 'ಅಹಂ ತು ತೇ ತದ್‌ವಕ್ಷ್ಯಾಮಿ' ಎಂಬುದಾಗಿ 'ಯುಷ್ಮತ್' ಶಬ್ದದಿಂದ ಪ್ರಕೃತವಾದದ್ದನ್ನು ಶ್ರೋತೃಪರವಾಗಿ ವ್ಯಾಖ್ಯಾನಿಸುತ್ತಿದ್ದಾರೆ ಅಥವಾ ಇತ್ಯಾದಿಯಾಗಿ. ಈ ಪಕ್ಷದಲ್ಲಿ ಉಪಲಕ್ಷಣವಾಗಿ ಯಾವುದನ್ನೂ ಇಟ್ಟುಕೊಳ್ಳಬೇಕಾಗಿಲ್ಲವೆಂದು ತಿಳಿಯಬೇಕು.

**भावदीपः** – ।। एतदिति ।। एतद्विद्योपासनाफलत्वेनेत्यर्थः ।। अन्यथेति ।। एतद्विद्याप्रस्तावे यत्किञ्चित्फलरूपगत्युक्तेरसङ्गतेरिति भावः । हिशब्दसूचितमाह – देवानिति ।। इत्यादेः गीतायामित्यर्थः । 'ज्ञात्वा परत्वं विष्णोस्तु पृथग् देवान् यजन्नरः । याति देवांस्तदज्ञात्वा तम एव प्रपद्यते ।।' इति तात्पर्यं ज्ञेयम् । तेन 'येऽप्यन्यदेवताभक्ताः' इत्यादिविरोधिनेति ध्येयम्

ಟೀಕೆಯಲ್ಲಿರುವ 'ಏತದ್‌ವಿದ್ಯಾಫಲತ್ವೇನ' ಎಂಬ ಶಬ್ದಕ್ಕೆ ಏತದ್‌ವಿದ್ಯೋಪಾಸನೆಯ ಫಲದಿಂದ ಎಂದರ್ಥ. 'ಅನ್ಯಥಾ' ಎಂದರೆ ಏತದ್‌ವಿದ್ಯೆಯ ಪ್ರಸ್ತಾಪದಲ್ಲಿ ಯತ್‌ಕಿಂಚಿತ್ ಫಲವೆಂಬ ಗತಿಯನ್ನು ಹೇಳಿದ್ದು ಅಸಂಗತವಾಗುತ್ತದೆಂದು ತಿಳಿಯಬೇಕು. ಹಿ ಶಬ್ದದಿಂದ ಸೂಚಿತವಾದದ್ದನ್ನು 'ದೇವಾನ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಇತ್ಯಾದೇಃ' ಎಂದರೆ ಗೀತೆಯಲ್ಲಿ ಎಂದರ್ಥ. ಗೀತಾತಾತ್ಪರ್ಯದಲ್ಲಿ ಹೀಗೆ ವ್ಯಾಖ್ಯಾನಿಸಿದ್ದಾರೆ - ''ಜ್ಞಾತ್ವಾ ಪರತ್ವಂ ವಿಷ್ಣೋಸ್ತು ಪೃಥಗ್ ದೇವಾನ್ ಯಜನ್ನರಃ । ಯಾತಿ ದೇವಾಂಸ್ತದಜ್ಞಾತ್ವಾ ತಮ ಏವ ಪ್ರಪದ್ಯತೇ ॥'' ಎಂದು.

'ತೇನ' ಶಬ್ದಕ್ಕೆ 'ಯೇಪ್ಯನ್ಯದೇವತಾಃ ಭಕ್ತಾಃ' ಇತ್ಯಾದಿ ವಿರೋಧಪ್ರಮಾಣವಿರುವುದರಿಂದ ಎಂದರ್ಥ.

ಅಂತರಾಧಿಕರಣ (೧-೨-೨)

ಶ್ರುತಿಯಲ್ಲಿ ಸಾನ್ನಿಧ್ಯವನ್ನು ಅನುಸರಿಸಿ ವಿಪರೀತವಾಗಿ ಹೇಳಿದ್ದರೂ ಗ್ರಂಥಕಾರರು ಯಥಾರೀತಿಯಾಗಿ ಅನ್ವಯ ಮಾಡಿ ಹೇಳುತ್ತಿದ್ದಾರೆ 'ಆದ್ಯವಿದ್ಯಾಯಾಃ' ಇತ್ಯಾದಿಯಾಗಿ 'ಕಂ ಬ್ರಹ್ಮ' ಇತ್ಯಾದಿಯಾಗಿ ಹೇಳಲ್ಪಟ್ಟ ವಿದ್ಯೆಯೇ ಆದ್ಯವಿದ್ಯೆ ಎನಿಸುತ್ತದೆ. ಹೀಗೆ ಹೇಳಿದ್ದರಿಂದ ಅಕ್ಷಿಸ್ಥನಾದವನು ವಿಷ್ಣುವಾಗಿದ್ದಾನೆಂಬ ವಿಷಯದಲ್ಲಿ ಹೇಗೆ ಆಕ್ಷೇಪಿಸಿದಂತಾಯಿತು ? ಎಂಬ ಪ್ರಶ್ನೆಗೆ 'ಅಕ್ಷಿಸ್ಥ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**भावदीपः –** **'ह्वयाम्यग्निम् प्रथमं स्वस्तये' इत्यत्राग्नेरुपक्रमेऽपि 'सवितारमूर्तये' 'हिरण्मयेन सविता रथेन' इत्यादिसवितृश्रुतिलिङ्गादिना तत्प्रकरणं सावित्रं ह्वयाम्येकादशसावित्रमित्यनुक्रमणिकोक्तेः । तथाऽत्राप्यस्मद्विद्येत्यग्निभिरुक्तत्वादग्निप्रकरणमित्यर्थः । एतेन प्राणस्य न प्रकरणित्वमित्येतदप्युपपादितं बोध्यम्**

'ಹ್ವಯಾಮ್ಯಗ್ನಿಂ ಪ್ರಥಮಂ ಸ್ವಸ್ತಯೇ' ಎಂಬಲ್ಲಿ ಅಗ್ನಿಯು ಉಪಕ್ರಮದಲ್ಲಿ ಪ್ರಸಕ್ತನಾಗಿದ್ದರೂ 'ಸವಿತಾರಮೂರ್ತಯೇ ಹಿರಣ್ಮಯೇನ ಸವಿತಾ ರಥೇನ' ಇತ್ಯಾದಿಯಾಗಿ ಸವಿತೃಶ್ರುತಿ ಹಾಗೂ ಸವಿತೃಲಿಂಗಗಳ ಬಲದಿಂದ ಆ ಪ್ರಕರಣವು ಸಾವಿತ್ರಪ್ರಕರಣವೆಂದು ತಿಳಿಯುತ್ತದೆ. 'ಹ್ವಯಾಮ್ಯೇಕಾದಶಸಾವಿತ್ರಮ್' ಎಂದು ಅನುಕ್ರಮಣಿಕೆಯಲ್ಲಿ ಹೇಳಿದ್ದರಿಂದ ಅದರಂತೆ ಇಲ್ಲಿಯೂ 'ಅಸ್ಮದ್‌ವಿದ್ಯಾ' ಇತ್ಯಾದಿಯಾಗಿ ಅಗ್ನಿಗಳ ಉಪದೇಶವಿರುವುದರಿಂದ ಅಗ್ನಿಪ್ರಕರಣವೆಂದು ನಿಶ್ಚಯಿಸಬಹುದು. ಹೀಗೆ ಹೇಳಿದ್ದರಿಂದ ಪ್ರಾಣನು ಪ್ರಕರಣಪ್ರತಿಪಾದ್ಯನಲ್ಲವೆಂದು ತಿಳಿಯುತ್ತದೆ.

**भावदीपः –** **इति पृथगुक्तीति ।।** एतेन न्यायविवरणे 'सोऽहमस्मि स एवाहमस्मि' इत्याद्यभ्यासेत्यत्रास्मद्विद्या आत्मविद्येति विद्याशब्दाभ्यासोऽप्यादिपदेन गृहीत इति दर्शित इत्याहुः ।

ಇದರಿಂದ 'ಸೋಽಹಮಸ್ಮಿ ಸ ಏವಾಹಮಸ್ಮಿ ಇತ್ಯಾದ್ಯಭ್ಯಾಸ' ಎಂಬ ನ್ಯಾಯವಿವರಣವಾಕ್ಯದಲ್ಲಿರುವ ಆದಿಪದದಿಂದ 'ಅಸ್ಮದ್‌ವಿದ್ಯಾ ಆತ್ಮವಿದ್ಯಾ' ಎಂಬ ವಿದ್ಯಾಶಬ್ದದ ಅಭ್ಯಾಸವನ್ನೂ ಸ್ವೀಕರಿಸಬೇಕು. ಅದಕ್ಕಾಗಿ 'ದರ್ಶಿತಃ' ಎಂಬ ಪದವನ್ನು ಬಳಸಿದ್ದಾರೆಂದು ಕೆಲವರು ಹೇಳುತ್ತಾರೆ.

**भावदीपः –** भाष्यस्य सूत्रेणान्वयं दर्शयन् 'स एनान्' इति पदद्वयपरामृष्टं वक्तुं कृत्स्नवाक्यमुपाददानः सूत्रार्थमाह – **नैतदिति ।।** अन्तरो विष्णुरेवेत्यनुवृत्तस्य तात्पर्योक्तिरियम् । श्रवणमात्रस्य ब्रह्मप्राप्त्यहेतुत्वाद् 'य एवं वेद' इत्यपरोक्षस्याप्युक्तेरिति भावेनाह – **उपलक्षकमिति ।।**

ಭಾಷ್ಯದಲ್ಲಿರುವ ಮಾತುಗಳಿಗೆ ಸೂತ್ರದ ಜೊತೆ ಅನ್ವಯ ತೋರಿಸುತ್ತಾ 'ಸಃ' ಏನಾನ್, ಎಂಬೆರಡು ಪದಗಳಿಂದ ಪರಾಮರ್ಶಿಸಿದ್ದನ್ನು ಹೇಳುವುದಕ್ಕಾಗಿ ಸಂಪೂರ್ಣ ವಾಕ್ಯವನ್ನು ಉಲ್ಲೇಖಿಸುತ್ತಾ

ಸೂತ್ರಾರ್ಥವನ್ನು ಹೇಳುತ್ತಿದ್ದಾರೆ 'ನೈತತ್' ಇತ್ಯಾದಿಯಾಗಿ. 'ಅಂತರಃ ವಿಷ್ಣುರೇವ' ಎಂದು ಅನುವೃತ್ತವಾಗಿದೆ. ಇದರ ತಾತ್ಪರ್ಯವನ್ನೇ ಟೀಕೆಯಲ್ಲಿ 'ನೈತತ್' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಕೇವಲ ಬ್ರಹ್ಮನ ಬಗ್ಗೆ ಶ್ರವಣ ಮಾಡುವುದರಿಂದ ಬ್ರಹ್ಮಪ್ರಾಪ್ತಿಯು ಉಂಟಾಗುವುದಿಲ್ಲ. ಆದ್ದರಿಂದ 'ಯ ಏವಂ ವೇದ' ಎಂಬುದಾಗಿ ಅಪರೋಕ್ಷ್ಯವನ್ನೂ ಹೇಳಿದ್ದಾರೆಂಬ ಅಭಿಪ್ರಾಯದಿಂದ 'ಉಪಲಕ್ಷಕಮ್' ಎಂದು ಟೀಕೆಯಲ್ಲಿ ಹೇಳಿದ್ದಾರೆ.

**भावदीपः – ।। इति वेति ।। 'प्राणो ब्रह्म' इति तस्यापि प्रकृतत्वादिति भावः । पूर्वमेनानित्युक्तबहुवचनान्तपरत्वेनार्थ उक्तः । अधुना 'आचार्यस्तु ते गतिं वक्ता' इति 'अहं तु ते तद् वक्ष्यामि' इति युष्मच्छब्देन प्रकृतश्रोतृपरत्वेनार्थमाह – अथवेति ।। तदा नोपलक्षणमिति भावः**

'ಪ್ರಾಣೋ ಬ್ರಹ್ಮ' ಎಂಬುದೂ ಸಹ ಪ್ರಕೃತವಾಗಿದೆಯೆಂದು ತಿಳಿಯಬೇಕು. ಹಿಂದೆ ಏನಾನ್ ಎಂಬ ಬಹುವಚನಾಂತವಾದ ಶ್ರುತಿಗೆ ಅನುಗುಣವಾಗಿ ಸೂತ್ರವನ್ನು ವ್ಯಾಖ್ಯಾನಿಸಿದ್ದರು. ಈಗ 'ಆಚಾರ್ಯಸ್ತು ತೇ ಗತಿಂ ವಕ್ತಾ' 'ಅಹಂ ತು ತೇ ತದ್‌ವಕ್ಷ್ಯಾಮಿ' ಎಂಬುದಾಗಿ 'ಯುಷ್ಮತ್' ಶಬ್ದದಿಂದ ಪ್ರಕೃತವಾದದ್ದನ್ನು ಶ್ರೋತೃಪರವಾಗಿ ವ್ಯಾಖ್ಯಾನಿಸುತ್ತಿದ್ದಾರೆ ಅಥವಾ ಇತ್ಯಾದಿಯಾಗಿ. ಈ ಪಕ್ಷದಲ್ಲಿ ಉಪಲಕ್ಷಣವಾಗಿ ಯಾವುದನ್ನೂ ಇಟ್ಟುಕೊಳ್ಳಬೇಕಾಗಿಲ್ಲವೆಂದು ತಿಳಿಯಬೇಕು.

**भावदीपः – ।। एतदिति ।। एतद्विद्योपासनाफलत्वेनेत्यर्थः ।। अन्यथेति ।। एतद्विद्याप्रस्तावे यत्किञ्चित्फलरूपगत्युक्तेरसङ्गतेरिति भावः । हिशब्दसूचितमाह – देवानिति ।। इत्यादेः गीतायामित्यर्थः । 'ज्ञात्वा परत्वं विष्णोस्तु पृथग् देवान् यजन्नरः । याति देवांस्तदज्ञात्वा तम एव प्रपद्यते ।।' इति तात्पर्यं ज्ञेयम् । तेन 'येऽप्यन्यदेवताभक्ताः' इत्यादिविरोधिनेति ध्येयम्**

ಟೀಕೆಯಲ್ಲಿರುವ 'ಏತದ್‌ವಿದ್ಯಾಫಲತ್ವೇನ' ಎಂಬ ಶಬ್ದಕ್ಕೆ ಏತದ್‌ವಿದ್ಯೋಪಾಸನೆಯ ಫಲದಿಂದ ಎಂದರ್ಥ. 'ಅನ್ಯಥಾ' ಎಂದರೆ ಏತದ್‌ವಿದ್ಯೆಯ ಪ್ರಸ್ತಾವದಲ್ಲಿ ಯತ್‌ಕಿಂಚಿತ್ ಫಲವೆಂಬ ಗತಿಯನ್ನು ಹೇಳಿದ್ದು ಅಸಂಗತವಾಗುತ್ತದೆಂದು ತಿಳಿಯಬೇಕು. ಹಿ ಶಬ್ದದಿಂದ ಸೂಚಿತವಾದದ್ದನ್ನು 'ದೇವಾನ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಇತ್ಯಾದೇಃ' ಎಂದರೆ ಗೀತೆಯಲ್ಲಿ ಎಂದರ್ಥ. ಗೀತಾತಾತ್ಪರ್ಯದಲ್ಲಿ ಹೀಗೆ ವ್ಯಾಖ್ಯಾನಿಸಿದ್ದಾರೆ - ''ಜ್ಞಾತ್ವಾ ಪರತ್ವಂ ವಿಷ್ಣೋಸ್ತು ಪೃಥಗ್ ದೇವಾನ್ ಯಜನ್ನರಃ । ಯಾತಿ ದೇವಾಂಸ್ತದಜ್ಞಾತ್ವಾ ತಮ ಏವ ಪ್ರಪದ್ಯತೇ ॥'' ಎಂದು.

'ತೇನ' ಶಬ್ದಕ್ಕೆ 'ಯೇಪ್ಯನ್ಯದೇವತಾಃ ಭಕ್ತಾಃ' ಇತ್ಯಾದಿ ವಿರೋಧಪ್ರಮಾಣವಿರುವುದರಿಂದ ಎಂದರ್ಥ.

ಅಂತರಾಧಿಕರಣ (೧-೨-೨)

**भावदीपः** – ।। **अत इति** ।। अन्यविद्यया अन्यगतेरयुक्तत्वादित्यर्थः । 'अस्मच्छब्दोदितोऽन्तस्थः आत्मा व्याप्तो जनार्दनः । अग्नयो द्विविधं विष्णुमब्रुवन् उपकोसलम् ।।' इति छान्दोग्यभाष्यदिशा 'सोऽहमस्मि' इत्यादि त्वन्तर्याम्यपेक्षयेति भाष्यस्थादिपदेनास्मद्विद्येत्युक्तिरपि ग्राह्येति भावेनोत्तरमाह – **तस्या इति** ।।

ಅನ್ಯವಿದ್ಯೆಯಿಂದ ಅನ್ಯಗತಿಯು ಅಯುಕ್ತವಾದ್ದರಿಂದ ಎಂದು "ಅತಃ" ಶಬ್ದಕ್ಕೆ ಅರ್ಥ. "ಅಸ್ಮಚ್ಛಬ್ದೋದಿತೋಽನ್ತಸ್ಥ ಆತ್ಮಾ ವ್ಯಾಪ್ತೋ ಜನಾರ್ದನಃ । ಅಗ್ನಯೋ ದ್ವಿವಿಧಂ ವಿಷ್ಣುಮಬ್ರುವನ್ ಉಪಕೋಸಲಂ" ಎಂದು ಛಾಂದೋಗ್ಯಭಾಷ್ಯದಲ್ಲಿ ಹೇಳಿದ ಪ್ರಕಾರ 'ಸೋಽಹಮಸ್ಮಿ' ಇತ್ಯಾದಿ ವಾಕ್ಯವನ್ನು ಅಂತರ್ಯಾಮಿಯಲ್ಲಿಯೇ ಕೂಡಿಸಬೇಕು. ಭಾಷ್ಯದಲ್ಲಿರುವ ಆದಿಪದದಿಂದ 'ಅಸ್ಮದ್‌ವಿದ್ಯಾ' ಎಂಬ ಮಾತನ್ನು ಸ್ವೀಕರಿಸಬೇಕೆಂಬ ಅಭಿಪ್ರಾಯದಿಂದ ಉತ್ತರಿಸುತ್ತಿದ್ದಾರೆ 'ತಸ್ಯಾಃ' ಇತ್ಯಾದಿಯಾಗಿ.

**भावदीपः** – उपपत्तेरित्युक्त्या सौत्रोपपत्तेरित्यस्य न केवलं श्रुतिलिङ्गोपपत्तेरित्यर्थः । किन्तु सोऽहमस्मीत्याद्युक्ताहंशब्दार्थवादानाम् अस्मद्विद्येत्युक्तेश्चान्तर्याम्यपेक्षयोप पत्तेरिति वृत्त्यन्तरं भाष्ये चोपपद्यत इति शेष इति सूचितमित्याहुः ।

'ಉಪಪತ್ತೇಃ' ಎಂದು ಹೇಳಿದ್ದರಿಂದ ಸೂತ್ರದಲ್ಲಿರುವ 'ಉಪಪತ್ತೇಃ' ಎಂಬ ಶಬ್ದಕ್ಕೆ ಕೇವಲ ಶ್ರುತಿಲಿಂಗಗಳೆಂಬ ಉಪಪತ್ತಿ ಇರುವುದರಿಂದ ಎಂದಷ್ಟೇ ಅರ್ಥವಲ್ಲ. ಹೊರತಾಗಿ 'ಸೋಽಹಮಸ್ಮಿ' ಇತ್ಯಾದಿಯಾಗಿ ಹೇಳಲ್ಪಟ್ಟ "ಅಹಂ" ಶಬ್ದ ಹಾಗೂ ಅರ್ಥವಾದಗಳ ಬಲದಿಂದ 'ಅಸ್ಮದ್‌ವಿದ್ಯಾ' ಎಂಬ ಶ್ರುತಿಯನ್ನು ಅಂತರ್ಯಾಮ್ಯಪೇಕ್ಷೆಯಿಂದ ಕೂಡಿಸಬೇಕಾದ್ದರಿಂದ ಎಂಬ ಮತ್ತೊಂದರ್ಥವನ್ನು ವಿವಕ್ಷಿಸಬೇಕು. ಇದನ್ನು 'ಭಾಷ್ಯೇ ಚ ಉಪಪದ್ಯತೇ ಇತಿ ಶೇಷಃ' ಎಂಬುದರಿಂದ ಸೂಚಿಸಿದ್ದಾರೆಂದು ಕೆಲವರ ವ್ಯಾಖ್ಯಾನ.

**भावदीपः** – ननु वक्तरि स्वरसस्यास्मच्छब्दस्य कुतोऽन्यपरत्वम् इत्यतो निरवकाशोपपत्तेरेव प्राबल्यमिति न्यायविवरणोक्तहेतुमाह – **श्रुतेरपीति** ।। अस्मदिति श्रुतेरपीत्यर्थः ।। **निरवकाशेति** ।। प्रागुक्तदिशाऽनेकेत्यपि ग्राह्यम् ।। **उपपत्तेरिति** ।। अमृतत्वाभयत्वरूपलिङ्गस्येत्यर्थः । पुरुषात्मब्रह्मशब्दानामुपलक्षणमेतत् । यद्वा निरवकाशश्रुतिलिङ्गोपपत्तेरित्यर्थः ।।

ಯಾರು ಉಪದೇಶ ಮಾಡುತ್ತಿದ್ದರೋ, ಅಂತಹ ಅಗ್ನಿಯಲ್ಲಿಯೇ 'ಅಸ್ಮತ್' ಶಬ್ದವನ್ನು ಕೂಡಿಸಲು ಬರುವಾಗ ಅನ್ಯಪರತ್ವವನ್ನು ಏಕೆ ಒಪ್ಪಬೇಕು ? ಎಂಬ ಪ್ರಶ್ನೆಗೆ 'ನಿರವಕಾಶೋಪಪತ್ತೇರೇವ ಪ್ರಾಬಲ್ಯಮ್' ಎಂಬ ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಹೇತುವನ್ನು 'ಶ್ರುತೇರಪಿ' ಎಂಬುದರಿಂದ ಹೇಳುತ್ತಿದ್ದಾರೆ.

'ಅಸ್ಮದ್' ಎಂಬ ವಾಕ್ಯಕ್ಕೆ ಶ್ರುತಿಗೂ ಸಹ ಎಂಬರ್ಥವನ್ನು ವಿವಕ್ಷಿಸಬೇಕು. 'ನಿರವಕಾಶ' ಎಂದರೆ ಹಿಂದೆ ಹೇಳಿದ ಪ್ರಕಾರ ಅನೇಕ ನಿರವಕಾಶ ಉಪಪತ್ತಿಗಳಿರುವುದರಿಂದ ಎಂದರ್ಥ. 'ಉಪಪತ್ತೇಃ' ಎಂದರೆ ಅಮೃತತ್ವ ಅಭಯತ್ವ ಮೊದಲಾದ ಉಪಪತ್ತಿಗಳಿಂದ ಎಂದರ್ಥ. ಪುರುಷಶಬ್ದ ಆತ್ಮಶಬ್ದ ಇವುಗಳನ್ನೂ ಸಹ ಉಪಲಕ್ಷಣಯಾ ವಿವಕ್ಷಿಸಬೇಕು. ಅಥವಾ ನಿರವಕಾಶವಾದ ಶ್ರುತಿ ಹಾಗೂ ಲಿಂಗಗಳೆಂಬ ಉಪಪತ್ತಿಗಳಿಂದ ಎಂದೂ ಸಹ ವ್ಯಾಖ್ಯಾನಿಸಬಹುದು.

**भावदीपः – सर्वगतात्मेति ।।** तत्रैव भाष्ये 'अस्मच्छब्दोदितोऽन्तस्थः आत्मा व्याप्तो जनार्दनः' इत्युक्तेरिति भावः । ननु श्रुतौ 'क आत्मा' इत्यश्रवणाद् ब्रह्मेत्येव श्रवणादस्मद्विद्या ब्रह्मविद्या चेत्येव वाच्यमित्यत आह – **तस्यैवेति ।।** सर्वगतात्मन एवेत्यर्थः ।

ಸರ್ವಗತವಾದ ಆತ್ಮವಿದ್ಯೆ ಎಂದರೆ ಅದೇ ಶ್ರುತಿಯ ಭಾಷ್ಯದಲ್ಲಿ 'ಅಸ್ಮಚ್ಛಬ್ದೋऽದಿತೋಂತಸ್ಥಃ ಆತ್ಮಾ ವ್ಯಾಪ್ತೋ ಜನಾರ್ದನಃ' ಎಂಬುದಾಗಿ ವ್ಯಾಖ್ಯಾನಿಸಿದ್ದಾರೆ. ಶ್ರುತಿಯಲ್ಲಿ 'ಕ ಆತ್ಮಾ' ಎಂದು ಕೇಳಿಸುತ್ತಿಲ್ಲ. ಕೇವಲ ಬ್ರಹ್ಮ ಎಂದಷ್ಟೇ ಕೇಳಿಸುತ್ತದೆ. ಹೀಗಿರುವಾಗ 'ಅಸ್ಮದ್ವಿದ್ಯಾ ಬ್ರಹ್ಮವಿದ್ಯಾ' ಎಂದೇ ಹೇಳಬೇಕಲ್ಲವೆ ? ಎಂಬ ಪ್ರಶ್ನೆಗೆ "ತಸ್ಯೈವ" ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ತಸ್ಯೈವ' ಎಂದರೆ ಸರ್ವಗತನಾದ ಆತ್ಮನೇ, ಎಂದರ್ಥ.

**भावदीपः –** ब्रह्मात्मशब्दयोः पर्यायत्वादिति भावः । कमानन्दरूपं ब्रह्म परं ब्रह्मेति तद्भाष्योक्तार्थमुपेत्येयमुक्तिः । 'ब्रह्मत्वं च विशिष्टते' इत्यनुभाष्योक्तदिशा सुखादिस्थपूर्णत्ववाचित्वेन कमित्यादेर्विशेषणत्वे तस्यैव ब्रह्मत्वादित्युक्त्ययोगात् ।।१६।।

ಬ್ರಹ್ಮಶಬ್ದ ಹಾಗೂ ಆತ್ಮಶಬ್ದಗಳು ಪರ್ಯಾಯ ಪದಗಳಾದ್ದರಿಂದ ಎಂದು ತಿಳಿಯಬೇಕು. ಕಮ್ = ಆನಂದ ರೂಪನಾದ, ಬ್ರಹ್ಮ = ಪರಬ್ರಹ್ಮನು ಎಂದು ಉಪನಿಷದ್‌ಭಾಷ್ಯದ ಅರ್ಥವನ್ನು ಅಂಗೀಕರಿಸಿ ಈ ಅರ್ಥವನ್ನು ಹೇಳಿದ್ದಾರೆ. 'ಬ್ರಹ್ಮತ್ವಂಚ ವಿಶಿಷ್ಟತಾ' ಎಂಬ ಅನುವ್ಯಾಖ್ಯಾನದ ಮಾತಿನಂತೆ ಸುಖಾದ್ಯರ್ಥದಲ್ಲಿರುವ "ಕಮ್" ಪದವು ಬ್ರಹ್ಮನಲ್ಲಿ ವಿಶೇಷಣವಾದ ಮೇಲೆ ಅದನ್ನು ಬ್ರಹ್ಮನೆಂದು ಹೇಳಲು ಸಾಧ್ಯವಿಲ್ಲ.

### वाक्यार्थमञ्जरी

शङ्कते – **नैवमिति ।। उपकोसलेति ।।** हे सौम्योपकोसल ते तुभ्यम् एषाऽस्माद्विद्यान्तर्यामिविद्या आत्मविद्या सर्वगतात्मविद्या चोपदिष्टेत्यर्थः ।

नन्वग्निभिरात्मविद्यात्वेनोक्तविद्याया आदित्यस्थविद्यात्वादक्षिस्थविद्यायाः कथमग्निविषयत्वमित्यत आह – **अक्षिस्थविद्यायाश्चेति** ।। उक्तरीत्याक्ष्यादित्ययोरेक-विधत्वादिति भावः ।। **ह्याम्यग्निमित्यादाविवेति** ।। यथा ह्याम्यग्निप्रथमं स्वस्तय इत्यत्राग्नेरुपक्रमेऽपि सवितारमूतये हिरण्मयेन सविता रथेनेत्यादि सवितृपरं श्रुतिलिङ्गादिना तत्प्रकरणं सूर्यमत्यवोक्तमनुक्रमिकायाम् ।। ह्याम्येकादश-सावित्रमिति । तथात्रापि ब्रह्मण उपक्रमेऽप्यस्मद्विद्येत्यग्नेरुक्तत्वादग्निप्रकरणमेवेति भावः ।। **तथा सतीति** ।। **अन्तर्यामिण एवात्मत्वादिति** भावः ।। **ॐ श्रुतोपनिषत्कगत्यभिधानाच्च ॐ** ।। श्रुतोपनिषदाम् अधीतैतद्विद्यानां पुंसां केन वायुना कस्य ब्रह्मणो गतेः प्राप्तेः 'स एनान् ब्रह्म गमयति' इत्यभिधानाच्च चक्षुरन्तरो विष्णुरेवेत्यर्थः ।। **अथेति** ।। अथेत्यर्थान्तरे । यदु च यद्यप्यस्मिन् ज्ञानिनि मृते शव्यं शवसम्बन्धि कर्म कुर्वन्त्येव तदीयाः यदु च नैव कुर्वन्ति तथापि ते ज्ञानिनः सर्वथा स्वज्ञानप्रसन्नभगवत्सामर्थ्याद्धृदयाग्रप्रज्वलनप्रकाशितद्वारेण ब्रह्मनाड्या देहादुत्क्रान्ता अर्चिषमर्चिर्नामकमूर्ध्वलोकं संविशन्त्येव प्राप्नुवन्त्येव । तत्र कञ्चन कालं स्थित्वा ततोऽर्चिष अर्चिर्लोकादतिवाहिकाख्यवायुलोकद्वारा अहरहरभिमानिदेवतालोकं प्राप्नुवन्ति । अह्नः अहर्लोकादापूर्यमाणपक्षं शुक्लपक्षाभिमानिदेवतालोकम् आपूर्यमाणपक्षादुद्गच्छन् यान् षण्मासानुदङेत्यादित्यस्तान् मासानुत्तरायणाभिमानि-देवतालोकं मासेभ्यस्तेभ्यः संवत्सरं संवत्सराभिमानिदेवतालोकं संवत्सरात्तडिद्वारेण प्रजापतिप्राप्तिद्वारादित्यमादित्या चन्द्रमसं चन्द्रमसो वैश्वानरेन्द्रध्रुवद्वारा विद्युतं विद्युन्नाम्नीं भारतीं प्राप्नुवन्ति ततस्तस्याः पुरुषो भर्ता मानवो मननान्मनुर्भगवांस्तस्यायं प्रियभृत्यो मानवो मुख्यवायुस्तं गच्छन्ति । स वायुरेनान् स्वप्राप्तान् प्रतीकालम्बनान् कार्यं ब्रह्म, अप्रतीकालम्बनाद् ब्रह्म गमयतीत्यर्थः ।। मनननिदिध्यासनोप-लक्षणमिति ।। श्रवणमात्रस्य ब्रह्मप्राप्तिहेतुत्वासम्भवादिति भावः । वायुः क इति शब्दित इति सम्बन्धः ।। **अथवेति** ।। तथाच नोपलक्षणमिति भावः ।। **सामीप्यादिति** ।। श्रुतै तद्विद्याफलाभिधायकैतद्वाक्यानन्तरमेव यदुचैवेत्यादिश्रवणादिति भावः । अन्यथाकगतिकथनस्यैतद्विद्याफलकथनरूपत्वाभावे यजः याजकाः, कृष्णवाक्यमिदम् । 'अस्मच्छब्दोदितोऽन्तःस्थ आत्मा व्याप्तो जनार्दनः ।

अग्नयो द्विविधं विष्णुमवोचन्नुपकोसलम् ॥' इति प्रमाणानुसारेणाह – तस्यान्तर्यामीत्यादि ॥ श्रुतेरस्मादित्यस्याः सकाशात् उपपत्तेः एतद्विद्याफलत्वेन कगत्यभिधानरूपायाः । ननु कं ब्रह्म खं ब्रह्मेत्युक्तविद्यायाः ब्रह्मशब्दोपेतत्वेन ब्रह्मविद्यात्वात् कथमात्मविद्येत्युक्त-सर्वगतविद्यात्वमित्यत आह – तस्यैवेति ॥ सर्वगतस्यैवेत्यर्थः ॥

# ಬ್ರಹ್ಮಮೀಮಾಂಸಾಶಾಸ್ತ್ರ

## ಅಗ್ನಿಯು ಅಂತರನಾದಲ್ಲಿ ಬಾಧಕವಿದೆ

**सू – ॐ ॥ अनवस्थितेरसम्भवाच्च नेतरः ॥ ॐ ॥ १-२-१७ ॥**

ಅನುವಾದ - ಅಗ್ನಿಯೂ ಸಹ ಒಬ್ಬ ಜೀವನಾಗಿರುವುದರಿಂದ ಚಕ್ಷುರಿಂದ್ರಿಯದಲ್ಲಿ ಇದ್ದು ಅವನು ಪ್ರೇರಕನಾದರೆ, ಅವನಿಗೂ ಸಹ ಮತ್ತೊಬ್ಬ ಪ್ರೇರಕನು ಬೇಕಾಗುತ್ತದೆ. ಹೀಗೆ ಅನವಸ್ಥಾದೋಷ ಬರುವುದರಿಂದ ಮತ್ತು ಜೀವಸ್ವರೂಪನಾದ ಅಗ್ನಿಗೆ ಪ್ರೇರಕತ್ವವು ಅಸಂಭಾವಿತವಾಗಿರುವುದರಿಂದಲೂ ಬ್ರಹ್ಮನನ್ನು ಬಿಟ್ಟು ಅಗ್ನಿ ಮೊದಲಾದ ಜೀವರು ಚಕ್ಷುರಿಂದ್ರಿಯದಲ್ಲಿ ಅಂತರ್ಗತರಾಗಲು ಸಾಧ್ಯವಿಲ್ಲ.

### ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** इतरः अग्निः । चक्षुरन्तरो न किंतु विष्णुरेव । कुतः अनवस्थितेः जीवस्य अग्नेः जीवान्तर नियमकत्वे तस्यापि जीवत्वाविशेषात् तस्यापि निया'कान्तर अभ्युपग' तस्याप्येवि'ति अनवस्थानात् । अग्न्यादि जीवस्य जीवान्तरनिया'कत्वासंभवात् च इत्यर्थः ॥

ಇತರಃ = ಅಗ್ನಿಯು, ನ = ಚಕ್ಷುರಂತರ್ಗತನಲ್ಲ ಹೊರತಾಗಿ ವಿಷ್ಣುವೇ ಆಗಿದ್ದಾನೆ. ಏಕೆಂದರೆ ಅನವಸ್ಥಿತೇಃ = ಜೀವಸ್ವರೂಪನಾದ ಅಗ್ನಿಯೂ ಮತ್ತೊಬ್ಬ ಜೀವನಿಗೆ ಪ್ರೇರಣ ಮಾಡುವುದಾದರೆ, ಅಗ್ನಿಯೂ ಸಹ ಜೀವನೇ ಆಗಿರುವುದರಿಂದ ಅವನಿಗೆ ಮತ್ತೊಬ್ಬನ ನಿಯಾಮಕತೆಯ ಅನಿವಾರ್ಯತೆ ಇದೆ. ಹೀಗೆ ಅನವಸ್ಥಾದೋಷ ಬರುವುದರಿಂದ, ಚ = ಮತ್ತು, ಅಸಂಭವಾತ್ = ಅಗ್ನ್ಯಾದಿ ಜೀವರುಗಳಿಗೆ ಜೀವಾಂತರನಿಯಾಮಕತ್ವವು ಅಸಂಭಾವಿತವಾಗಿರುವುದಿಂದಲೂ ವಿಷ್ಣುವೇ ಅಕ್ಷಿಸ್ಥನಾಗಿದ್ದಾನೆ

ಅಂತರಾಧಿಕರಣ (೧-೨-೨)

**भाष्यम् - जीवस्य जीवान्तरनियामकत्वेऽनवस्थितेः, साम्यादसम्भवाच्च न जीवः नियमप्रमाणाभावात् । अनीश्वरापेक्षत्वाच्च ॥ १७ ॥**

॥ इति अन्तराधिकरणम् ॥ ४ ॥

ಅನುವಾದ - ಅಗ್ನಿಯು ಜೀವನಾದ್ದರಿಂದ ಅವನಿಗೆ ಮತ್ತೊಬ್ಬ ನಿಯಮಾಕನು ಬೇಕಾಗುತ್ತದೆ. ಹೀಗೆ ಅನವಸ್ಥಾದೋಷ ಬರುತ್ತದೆ. ಮತ್ತು ಇತರ ಜೀವರಂತೆ ನಿಯಮ್ಯನಾದ್ದರಿಂದ ನಿಯಾಮಕತ್ವವು ಅವನಿಗೆ ಅಸಂಭಾವಿತವಾಗಿದೆ. ಜೀವನಾದ ಅಗ್ನಿಯು ನಿಯಮ್ಯನಲ್ಲ ಎಂಬ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲ. ಮತ್ತು ಈಶ್ವರನನ್ನು ಅಪೇಕ್ಷೆ ಪಡದ ಅಗ್ನಿಗೆ ಅಕ್ಷಿನಿಯಾಮಕತ್ವವನ್ನೂ ಸಹ ಹೇಳಲಾಗುವುದಿಲ್ಲ.

ಪ್ರತಿಪದಾರ್ಥ - ಜೀವಸ್ಯ = ಜೀವನೇ ಆಗಿರುವ ಅಗ್ನಿಗೆ, ಜೀವಾಂತರ ನಿಯಾಮಕತ್ವೇ = ಉಳಿದ ಜೀವರುಗಳ ನಿಯಾಮಕತ್ವವನ್ನು ಹೇಳಿದರೆ, ಅನವಸ್ಥಿತೇಃ = ಅನವಸ್ಥಾ ದೋಷವು ಬರುತ್ತದೆ. ಮತ್ತು ಸಾಮ್ಯಾತ್ = ಉಳಿದ ಜೀವರಂತೆ ನಿಯಮ್ಯತ್ವವು ಸಮಾನವಾಗಿರುವುದರಿಂದ, ಅಸಂಭವಾಚ್ಚ = ನಿಯಾಮಕತ್ವವು ಕೂಡುವುದಿಲ್ಲ. ಆದ್ದರಿಂದ ನ ಜೀವಃ = ಜೀವನಾಗಿರುವ ಅಗ್ನಿಯು ನಿಯಾಮಕನಾಗುವುದಿಲ್ಲ. ನಿಯಮೇ = ನಿಯಮ್ಯನಲ್ಲವೆಂಬ ವಿಷಯದಲ್ಲಿ, ಪ್ರಮಾಣಾಭಾವಾತ್ = ಯಾವುದೇ ಪ್ರಮಾಣಗಳು ಇರುವುದಿಲ್ಲ, ಚ = ಮತ್ತು, ಅನೀಶ್ವರಾಪೇಕ್ಷತ್ವಾತ್ = ಈಶ್ವರನ ಅಪೇಕ್ಷೆ ಇಲ್ಲದಿರುವುದರಿಂದಲೂ, ಅಗ್ನಿಗೆ ಚಕ್ಷುರಂತಸ್ಥವು ಯುಕ್ತವಾಗುವುದಿಲ್ಲ.(१)

---

(१) **भाष्यदीपिका** – एवमुपपत्त्यादिभिर्विष्णोरक्षिस्थत्वं प्रतिपाद्य विपक्षे बाधकेनापि तत्समर्थयत्सूत्रं पठति – **अनवस्थितेरिति** ॥ अत्राऽन्तरस्तत्तज्जीवप्रेरकतया तत्तच्चक्षुस्स्थितः 'इतरः' पूर्वप्रकृतात् कशब्दोदिताद् ब्रह्मणोऽन्योऽग्निजीवो न । कुतः ? यतः स इतरो जीव इति हेतुसाध्ययोजनामभिप्रेत्यात्र विपक्षेऽनिष्टप्रसङ्गाभिधायकतयाऽनवस्थितेरित्यंशं योजयति – **जीवस्येति** ॥'साम्यात्' इति सूत्रेऽध्याहृतं पदं तत्त्वप्रदीपरीत्या देहलीदीपन्यायेनोभयत्र सम्बध्यते । जीवस्य जीवान्तरनियामकत्वे इत्येतद्विपरिणतमसम्भवादित्यनेनापि सम्बध्यते । चो हेतुसमुच्चये । इतर इत्यस्याग्निरित्यर्थे वाच्ये जीव इति सामान्येनोक्तिः साध्यहेत्वोस्तन्त्रेणाभिधानार्थम् । न जीव इत्यस्य आन्तर इत्युद्देश्यसमर्पकानुवृत्त-पदेनान्वयः । अनेन तत्तज्जीवप्रेरकतया तत्तच्चक्षुरन्तरो नेतरः नाग्निः । कुतः ? यतः स इतरो जीवः जीवत्वादिति यावत् । न च विपक्षे बाधकाभावः, जीवस्य जीवान्तरनियामकत्वे

## श्रीपद्मनाभतीर्थविरचितसत्तर्कदीपावलिः

### ॐ अनवस्थितेरसम्भवाच्च नेतरः ॐ ।। १-२-१७ ।।

युक्त्यन्तरबलादप्यादित्येऽक्षिणि च नियामकत्वेन स्थितो यः चक्षुषि तिष्ठन्नादिश्रुत्यन्तरे सिद्धो नाग्निरित्येतत्प्रतिपादयत्सूत्रमुपन्यस्य व्याचष्टे – अनवस्थितेरित्यादिना ।। अस्यार्थः । यथा जनपदनियोजितस्य तत्प्रजानां च नियम्यनियामकभावः क्षितिपत्यधीनः । एवमग्न्यादित्यानां जीवानां परस्परनियामकभावश्चेदसौ सर्वेशाज्ञाधीन एव भवेत् । अन्यथैकस्य जीवस्यान्येन जीवेन नियम्यत्वे तस्याप्यन्येन जीवेन नियम्यत्वं तस्याप्यन्येनेत्यनवस्था

---

प्रेरकत्वे आन्तरजीवस्यापि जीवत्वसाम्यात् तस्यापि नियामकं जीवान्तरं वाच्यमित्यनवस्थितेरसिद्धपरम्पराकल्पनरूपानवस्थाख्यानिष्टापत्तेः । अभ्युपगम्य चेदमुदितम् । वस्तुतस्तु – **जीवस्य जीवान्तरनियामकत्वासम्भवाच्च नेतरोऽग्निरन्तरः** । कुतोऽसम्भवः ? अग्नेर्जीवस्य प्रेर्यजीवान्तरेण सह परतन्त्रत्वरूपजीवत्वसाम्यादिति सूत्रवृत्तिर्दर्शिता भवति ।।

**भाष्यदीपिका** – ननु जीवप्रेरकाग्नेः स्वातन्त्र्याभ्युपगमान्नानवस्था । न चैवं जीवान्तरस्यापि स्वातन्त्र्यं स्याद् जीवत्वसाम्यादित्युक्तमिति वाच्यम् । जीवत्वसाम्येऽप्यग्नेरेव स्वातन्त्र्यं नान्येषामिति नियमाभ्युपगमादित्यत आह – **नियमेति** ।। जीवत्वसाम्येऽप्यग्नेरेव स्वातन्त्र्यं नान्येषामिति नियमे प्रमाणाभावादित्यर्थः । अतोऽग्नेः स्वातन्त्र्यायोगात् सुस्थैवानवस्थितिरिति भावः । नन्वस्त्वग्नेरस्वातन्त्र्यं, तथाऽपि तत्प्रेरकस्येश्वरस्य स्वातन्त्र्यसम्भवान्नानवस्थेत्यत आह – **अनीश्वरेति** ।। ईश्वरं जगत्प्रेरकत्वेन योऽपेक्षतेऽभ्युपैति स ईश्वरापेक्षः, स न भवतीत्यनीश्वरापेक्षः, तस्य भावस्तत्त्वं तस्मादित्यर्थः । पूर्ववादिन इति शेषः । हेतुसमुच्चये चशब्दः । एवं वा – ननु परतन्त्रत्वसाम्येऽपि जीवानां जीवान्तरनियामकत्वात् कथं तदसम्भव इत्यत आह – **अनीश्वरेति** ।। व्याख्यानं पूर्ववत् । तथा च – यथाऽस्मत्पक्षे सति राज्ञि मण्डलेशे प्रजानां राजशक्त्या नियम्यनियामकभाववद् ईश्वरशक्त्या जीवानां जीवान्तरनियामकत्वसम्भवः, न तथा परपक्षे सम्भवति, परेण ईश्वरानभ्युपगमादिति भावः । इदं च वाक्यद्वयस्य योजनाद्वयम् । टीकायां तत्त्वप्रदीपोक्तमेवोक्तम् । उक्तं हि तत्त्वप्रदीपे – नियमप्रमाणाभावोऽनीश्वरापेक्षत्वं चेत्युभौ उभयत्र हेतुरिति । 'उभयत्र' अनवस्थित्यसम्भवयोरित्यर्थः ।

।। इत्यन्तराधिकरणम् ।। ४ ।।

ಅಂತರಾಧಿಕರಣ (೧-೨-೨)

स्यात् । जीवत्वाविशेषान्नियम्यनियामकभावासम्भवश्च स्यात् तेषाम् । नचेश्वराज्ञानिरपेक्षत्वेन कस्यचित् जीवस्य नियम्यत्वं कस्यचित् नियामकत्वमित्यत्र प्रमाणमस्ति । अत उक्तहेतुभ्यां मुख्यनियामकस्य पुरुषोत्तमान्यस्यासम्भवात् । असावेव दिव्यदृष्टिगोचरोऽक्ष्यन्तरपुरुष इति सिद्धम् ।।

।। इति सत्तर्कदीपावळ्याम् अन्तराधिकरणम् ।।

ಮತ್ತೊಂದು ಯುಕ್ತಿಯ ಬಲದಿಂದಲೂ ಆದಿತ್ಯನಲ್ಲಿ ಮತ್ತು ಚಕ್ಷುರಿಂದ್ರಿಯದಲ್ಲಿ ನಿಯಾಮಕನಾಗಿರುವವನು 'ಯಃಶ್ಚಕ್ಷುಷಿ' ಎಂಬ ಮತ್ತೊಂದು ಶ್ರುತಿಯಿಂದ ಸಿದ್ಧನಾದ ಅಗ್ನಿಯು ಪ್ರತಿಪಾದ್ಯನಾಗುವುದಿಲ್ಲ. ಈ ವಿಷಯವನ್ನು ನಿರೂಪಿಸುವ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನಿಸುತ್ತಿದ್ದಾರೆ 'ಅನವಸ್ಥಿತೇಃ' ಇತ್ಯಾದಿಯಾಗಿ.

ಸೂತ್ರಾರ್ಥ ಹೀಗಿದೆ - ಯಾವರೀತಿಯಾಗಿ ಒಂದು ಗ್ರಾಮದ ನಿಯಾಮಕನಿಗೆ ಮತ್ತು ಪ್ರಜೆಗಳಿಗೆ ಇರುವ ನಿಯಮ್ಯನಿಯಾಮಕಭಾವವು ರಾಜನ ಅಧೀನವಾಗಿರುತ್ತದೋ ಅದರಂತೆ ಅಗ್ನಿ ಮೊದಲಾದ ಜೀವರುಗಳಿಗೆ ಇರುವ ಪರಸ್ಪರ ನಿಯಮ್ಯನಿಯಾಮಕಭಾವವು ಸರ್ವಾಧಿಪತಿಯಾದ ಭಗವಂತನ ಅಧೀನವಾಗಿದೆ. ಹೀಗೊಪ್ಪದಿದ್ದರೆ ಒಬ್ಬ ಜೀವನಿಗೆ ಮತ್ತೊಬ್ಬ ನಿಯಾಮಕನು ಅವನಿಗೆ ಮಗದೊಬ್ಬ ನಿಯಾಮಕನೆಂದು ಅನವಸ್ಥಾದೋಷ ಬರುತ್ತದೆ. ಎಲ್ಲರೂ ಜೀವರೇ ಆಗಿರುವುದರಿಂದ ಯಾರೊಬ್ಬನನ್ನೂ ನಿಯಮ್ಯನಲ್ಲವೆಂದು ಹೇಳಲು ಸಾಧ್ಯವಿಲ್ಲ. ಮತ್ತು ಭಗವಂತನ ಅಪೇಕ್ಷೆ ಇಲ್ಲದೆ ಯಾರೊಬ್ಬ ಜೀವನಲ್ಲಿಯೂ ನಿಯಮ್ಯತ್ವವಾಗಲೀ, ನಿಯಾಮಕತ್ವವಾಗಲೀ ಇರುತ್ತದೆನ್ನಲು ಪ್ರಮಾಣವಿಲ್ಲ.

ಹೀಗೆ ಮೇಲೆ ಹೇಳಿದ ಎರಡು ಹೇತುಗಳಿಂದ ಪುರುಷೋತ್ತಮನನ್ನು ಬಿಟ್ಟು ಮತ್ತೊಬ್ಬನು ಮುಖ್ಯ ನಿಯಾಮಕನಾಗಲು ಸಾಧ್ಯವೇ ಇಲ್ಲ. ಆದ್ದರಿಂದ ಭಗವಂತನೇ ದಿವ್ಯದೃಷ್ಟಿಗೆ ಗೋಚರನಾದ ಅಕ್ಷಿಸ್ಥಪುರುಷನಾಗಿದ್ದಾನೆಂದು ನಿರ್ಣಯವಾಯಿತು.

ಇಲ್ಲಿಗೆ ಸತರ್ಕದೀಪಾವಳಿಯ ಕನ್ನಡಾನುವಾದದಲ್ಲಿ ಅಂತರಾಧಿಕರಣವು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣಮಸ್ತು

ಪರಿಪೂರ್ಣಚಂದ್ರಿಕಾ

**तत्वप्रकाशिका –**

**ॐ अनवस्थितेरसम्भवाच्च नेतरः ॐ ।। १-२-१७ ।।**

**एवमुपपत्त्यादियुक्तिभिर्विष्णोरक्षिस्थत्वं प्रतिपाद्य विपक्षे बाधकेनापि समर्थयत्सूत्रमुपन्यस्य व्याचष्टे – अनवस्थितेरिति ।। नायं चक्षुरन्तःस्थोऽग्निर्भवेत् । अस्य तत्तत्प्रेरकत्वेन तत्तच्चक्षुःस्थितेरभिप्रेतत्वात् । नचाग्नेरन्यप्रेरकत्वं युक्तम्, जीवत्वात् । जीवस्य तस्य जीवान्तरनियामकत्वे तस्यापि जीवान्तर नियामकमित्यनवस्थानात् । पूर्वपूर्वचेष्टासिद्धावुत्तरोत्तरचेष्टासिद्धिरिति मूलक्षतेः । अभ्युपगम्य चेदमुदितम् । अग्नेरपि प्रेर्येण सह जीवत्वसाम्यात् प्रेरणासम्भवाच्चेत्यर्थः ।**

ಇದುವರೆಗೂ ಉಪಪತ್ತಿಯೇ ಮೊದಲಾದ ಯುಕ್ತಿಗಳಿಂದ (ಅಮೃತತ್ವ, ಸ್ಥಾನಶಕ್ತಿ, ಸುಖಪೂರ್ಣತಾ ಮುಂತಾದವುಗಳು) ವಿಷ್ಣುವೇ ಕಣ್ಣಿನಲ್ಲಿ ನಿಯಾಮಕನೆಂದು ಪ್ರತಿಪಾದನೆ ಮಾಡಿದ್ದಾಯಿತು. ಇನ್ನು ಮುಂದೆ ಅಕ್ಷಿಸ್ಥನು ಅಗ್ನಿಯೇ ಎಂದು ಒಪ್ಪಿದರೆ ಯಾವರೀತಿ ಬಾಧ ಬರುತ್ತದೆಂದು ಹೇಳಿ ಅದಕ್ಕೆ ವಿಷ್ಣುತ್ವ ಸಮರ್ಥನೆ ಮಾಡುವ ಸೂತ್ರವನ್ನು ಹೇಳಿ, ಸೂತ್ರದ ವ್ಯಾಖ್ಯಾನವನ್ನು "ಅನವಸ್ಥಿತೇಃ" ಎಂಬ ವಾಕ್ಯದಿಂದ ಮಾಡುತ್ತಿದ್ದಾರೆ.

ಚಕ್ಷುರಂತಃಸ್ಥನು ಅಗ್ನಿಯು ಆಗುವುದಿಲ್ಲ. ಏಕೆಂದರೆ ಚಕ್ಷುರಂತಃಸ್ಥನಿಗೆ "ಸಂಯದ್ವಾಮ" "ವಾಮನಿ" "ಭಾಮನಿ" ಇತ್ಯಾದಿ ಶಬ್ದಗಳಿಂದ ಆಯಾ ಜೀವರಗಳಿಗೆ ಪ್ರೇರಕನೆಂದು ಹೇಳಬೇಕು. ಆದರೆ ಅಗ್ನಿಗೆ ಈ ರೀತಿಯಾದ ಪ್ರೇರಕತ್ವವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಅಗ್ನಿಯೂ ಸಹ ಜೀವನೇ ಆಗಿರುವುದರಿಂದ, ಅವನು ಮತ್ತೊಬ್ಬ ಜೀವನಿಗೆ ನಿಯಾಮಕನೆಂದು ಒಪ್ಪಿಕೊಂಡರೆ, ಆ ಅಗ್ನಿಗೆ ಮತ್ತೊಬ್ಬ ಜೀವನು ನಿಯಾಮಕನೆಂದು ಹೇಳಬೇಕು. ಈ ರೀತಿಯಾಗಿ ಹೇಳುತ್ತಾ ಹೋದರೆ ಅನವಸ್ಥಾ ಎಂಬ ದೋಷ ಬರುತ್ತದೆ. ಹಿಂದಿನವರ ಚೇಷ್ಟೆಯು ಅಸಿದ್ಧವಾದರೆ ಮುಂದಿನವರ ಚೇಷ್ಟೆಯೂ ಅಸಿದ್ಧವಾಗುತ್ತದೆ. ಈ ರೀತಿಯಾಗಿ ಅಗ್ನಿಯ ಪ್ರೇರಕತ್ವವು ಅಸಿದ್ಧವಾಗಿ ಅನವಸ್ಥಾದೋಷದಿಂದ ಮೂಲ ಕ್ಷತಿಯಾಗುತ್ತದೆ. ಅಗ್ನಿಯು ಪ್ರೇರಕನೆಂದು ಒಪ್ಪಿಕೊಂಡು ಅನವಸ್ಥಾದೋಷವನ್ನು ಹೇಳಿದ್ದಾರೆ. ಆದರೆ ಪ್ರೇರಕನಾದ ಅಗ್ನಿಗೂ ಪ್ರೇರ್ಯನಾದ ಜೀವನಿಗೂ ಜೀವತ್ವವೆಂಬ ಧರ್ಮವು ಸಾಮ್ಯವಿರುವುದರಿಂದ ಅಗ್ನಿಗೆ ಪ್ರೇರಣತ್ವವು ಯಾವ ಕಾಲಕ್ಕೂ ಕೂಡುವುದಿಲ್ಲವೆಂದು ಅರ್ಥ.

ಅಂತರಾಧಿಕರಣ (೧-೨-೨)

**तत्वप्रकाशिका – जीवप्रेरकाग्नेः स्वातन्त्र्याभ्युपगमान्नानवस्थेत्यत आह – नियमेति ।। अग्नेः स्वतन्त्रत्वे जीवान्तरस्यापि तत् स्यात् । अन्यथाऽग्नेरपि तन्न स्यात् । जीवत्वसाम्येऽप्यग्नेरेव स्वातन्त्र्यं नान्येषामिति नियमे प्रमाणाभावात् । अतोऽग्नेः स्वातन्त्र्यायोगात् सुस्थैवानवस्थेति भावः ।**

ಜೀವರಿಗೆ ಪ್ರೇರಕನಾದ ಅಗ್ನಿಯು ಸ್ವತಂತ್ರನಾಗಿದ್ದಾನೆಂದು ಒಪ್ಪಿ ಅನವಸ್ಥಾದೋಷವನ್ನು ಪರಿಹಾರ ಮಾಡಿಕೊಳ್ಳಬಹುದಲ್ಲವೇ? ಎಂದು ಪ್ರಶ್ನೆ ಮಾಡಿದರೆ ಅಚಾರ್ಯರು ಭಾಷ್ಯದಲ್ಲಿ "ನಿಯಮ" ಎಂಬ ವಾಕ್ಯದಿಂದ ಉತ್ತರವನ್ನು ಹೇಳುತ್ತಿದ್ದಾರೆ. ಒಂದು ವೇಳೆ ಅಗ್ನಿಯು ಸ್ವತಂತ್ರನಾಗಿದ್ದ ಪಕ್ಷದಲ್ಲಿ ಅನ್ಯಜೀವರೂ ಸಹ ಸ್ವತಂತ್ರರಾಗಲಿ. ಇಲ್ಲದ್ದಿದ್ದರೆ ಅಗ್ನಿಯೂ ಸಹ ಸ್ವತಂತ್ರನಾಗಲಾರ. ಜೀವತ್ವಸಾಮ್ಯವಿದ್ದರೂ ಅಗ್ನಿಮಾತ್ರ ಸ್ವತಂತ್ರ, ಅನ್ಯ ಜೀವರು ಅಸ್ವತಂತ್ರರು ಎಂದು ಹೇಳಲು ಯಾವ ಪ್ರಮಾಣಗಳ ಅಧಾರವೂ ಇಲ್ಲ. ಆದ್ದರಿಂದ ಅಗ್ನಿಗೆ ಸ್ವಾತಂತ್ರ್ಯವು ಸಿದ್ಧವಾಗದ್ದರಿಂದ ಅನವಸ್ಥಾ ದೋಷವೂ ಸಹ ಪರಿಹಾರವಾಗುವುದಿಲ್ಲ.

**तत्वप्रकाशिका – अस्तु अग्नेः अस्वातन्त्र्यं तथापि तत्प्रेरकस्येश्वरस्य स्वातन्त्र्यसम्भवान्नानवस्थेत्यत आह – अनीश्वरेति ।। त्वयेश्वरानभ्युपगमान्नैवमनवस्थापरिहार इत्यर्थः । ईश्वराभ्युपगमे स एव अक्षिस्थतया युक्त्यादिप्राप्तः किमपोद्यते ।**

ಅಗ್ನಿಯು ಅಸ್ವತಂತ್ರನಾಗಲಿ ಅದರೂ ಸಹ ಅವನಿಗೆ ಪ್ರೇರಕನಾದ ಈಶ್ವರನು ಸ್ವತಂತ್ರನಾಗಿರುವುದರಿಂದ ಅನವಸ್ಥಾದೋಷ ಪರಿಹಾರವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ ಉತ್ತರವನ್ನು "ಅನೀಶ್ವರ" ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ನೀನು ಈಶ್ವರನನ್ನೇ ಅಂಗೀಕಾರ ಮಾಡಿಲ್ಲವಾದ್ದರಿಂದ ಅನವಸ್ಥಾದೋಷವು ಪರಿಹಾರವಾಗುವುದಿಲ್ಲ ಎಂದು ಅರ್ಥ. ಒಂದು ವೇಳೆ ಈಶ್ವರನನ್ನು ಅಂಗೀಕಾರ ಮಾಡುತ್ತೇನೆಂದರೆ, ಈಶ್ವರನೇ ಅಕ್ಷಿಸ್ಥನಾಗಿದ್ದಾನೆ ಎಂಬುದಕ್ಕೆ ಅನೇಕ ಯುಕ್ತಿಗಳು ಇರಬೇಕಾದರೆ ಯಾವಕಾರಣದಿಂದ ಅದನ್ನು ವಿರೋಧಿಸುತ್ತೀರಿ?

**तत्वप्रकाशिका – ननु जीवत्वसाम्येऽपि नीचोच्यभाववन्नियम्यनियामकभावसम्भवः किन्न स्यादित्यत आह – नियमेति ।। नियामकविशेषे प्रमाणाभावात् न दृष्टान्तमात्रेण नियम्यनियामकभावसम्भव इति भावः । ननु भवताप्यग्न्यादिजीवानां जीवान्तरनियामकत्वाभ्युपगमात् कथं तदसम्भव इत्यतो वाऽऽह – अनीश्वरेति ।। यथा सति राज्ञि मण्डलेशे प्रजानां तच्छक्त्या नियम्यनियामकभावः**

सम्भवति, नत्वराजके लोके तथाऽस्मत्पक्षे जीवानामीश्वरशक्त्या जीवान्तरनियामकत्वमुप-पद्यते न परपक्षे । परमेश्वरानङ्गीकारादिति भावः । तस्माद् विष्णुरेव अक्ष्यादित्यस्थो दिव्यदृष्टिगोचरोऽतः स एवानन्दमयस्तज्ज्ञानादेव मोक्ष इति सिद्धम् ।। १७ ।।

।। इति श्रीमज्जयतीर्थभिक्षुविरचितायां तत्वप्रकाशिकायाम्
अन्तराधिकरणम् ।।

ಪ್ರಶ್ನೆ - ಅಗ್ನಿ ಮತ್ತು ಜೀವ ಇಬ್ಬರಲ್ಲೂ ಜೀವತ್ವವೆಂಬ ಧರ್ಮದ ಸಾಮ್ಯವಿದ್ದರೂ ಸಹ 'ನೀಚ' ಮತ್ತು 'ಉಚ್ಚ' ಭಾವವಿರುವುದರಿಂದ 'ನಿಯಮ್ಯನಿಯಾಮಕಭಾವ' ಏಕಿರಬಾರದು?

ಉತ್ತರ - ಈ ಪ್ರಶ್ನೆಗೆ ಉತ್ತರವನ್ನು "ನಿಯಮ" ಎಂಬ ವಾಕ್ಯದಿಂದ ಹೇಳಿದ್ದಾರೆ. ಅಂದರೆ ಅಗ್ನಿಯು ಇತರ ಜೀವರ ನಿಯಾಮಕನೆಂಬ ವಿಷಯದಲ್ಲಿ ಪ್ರಮಾಣವಿಲ್ಲದ್ದರಿಂದ ಕೇವಲ ಉಚ್ಚನೀಚದೃಷ್ಟಾಂತದಿಂದಲೇ ನಿಯಮ್ಯನಿಯಾಮಕಭಾವವನ್ನು ಹೇಳಲು ಬರುವುದಿಲ್ಲ ಎಂದು ಅಭಿಪ್ರಾಯ.

ಪ್ರಶ್ನೆ - ಸಿದ್ಧಾಂತಿಗಳೂ ಸಹ ಅಗ್ನಿಯೇ ಮೊದಲಾದ ಜೀವರಿಗೆ ಜೀವಾಂತರನಿಯಾಮಕತ್ವವನ್ನು ಒಪ್ಪಿರುವಾಗ, ಹೇಗೆ ನಿಯಮ್ಯನಿಯಾಮಕಭಾವವನ್ನು ಅಸಂಭವವೆಂದು ಹೇಳುತ್ತೀರಿ?

ಉತ್ತರ - ಈ ಪ್ರಶ್ನೆಗೂ ಸಹ ಉತ್ತರವನ್ನು 'ಅನೀಶ್ವರ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಇದರ ಅಭಿಪ್ರಾಯ - ಒಬ್ಬ ಚಕ್ರವರ್ತಿಯ ಆಧಿಪತ್ಯದಲ್ಲಿ ಅವನ ಆಜ್ಞೆ ಮತ್ತು ಸಾಮರ್ಥ್ಯದಿಂದ ಅವನ ಅಧೀನರಾದ ಬೇರೆ ಗ್ರಾಮದ ಮುಖ್ಯಸ್ಥರಿಗೆ ನಿಯಮ್ಯನಿಯಾಮಕಭಾವವು ಕೂಡುತ್ತದೆ. ಆದರೆ ಯಾವ ರಾಜ್ಯದಲ್ಲಿ ರಾಜನೇ ಇರುವುದಿಲ್ಲವೊ ಅಲ್ಲಿ ನಿಯಮ್ಯನಿಯಾಮಕಗಳನ್ನು ಹೇಳಲು ಬರುವುದೇ ಇಲ್ಲ. ಅದರಂತೆ ನಮ್ಮ ಪಕ್ಷದಲ್ಲಿ ಈಶ್ವರನ ಶಕ್ತಿಯಿಂದ ಜೀವರಲ್ಲಿ ನಿಯಮ್ಯನಿಯಾಮಕಭಾವವು ಕೊಡುತ್ತದೆ. ಆದರೆ ಪರಪಕ್ಷದವರು ಈಶ್ವರನನ್ನೇ ಅಂಗೀಕರಿಸಿಲ್ಲವಾದ್ದರಿಂದ ಈ ನಿಯಮ್ಯನಿಯಾಮಕ ಭಾವವನ್ನು ಹೇಳಲು ಬರುವುದಿಲ್ಲ.

ಆದ್ದರಿಂದ ಅಕ್ಷಿ ಹಾಗೂ ಆದಿತ್ಯರಲ್ಲಿ ವಿಷ್ಣುವೇ ಅಂತಸ್ಥನಾಗಿದ್ದಾನೆ. ಅವನು ದಿವ್ಯದೃಷ್ಟಿಗೆ ಗೋಚರನಾಗಿದ್ದಾನೆ. ಅವನೇ ಆನಂದಮಯನಾಗಿದ್ದಾನೆ ಮತ್ತು ಅವನ ಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ಸಿದ್ಧವಾಯಿತು.

॥ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಅಂತರಾಧಿಕರಣವು ಸಮಾಪ್ತವಾಯಿತು ॥

**भावदीपः** – उपपत्त्यादीत्यादिपदेन स्थानादिशक्तिसुखविशिष्टाभिधानादिग्रहः । न जीव इत्यस्यार्थः – **नायमिति** ।। अन्तर इत्यनुवर्तत इति भावः । भाष्योक्तापादकस्यासिद्धिनिरासाय परिष्करोति – **अस्य तत्तत्प्रेरकत्वेनेति** ।। वामनिभामनिशब्दाभ्यां सर्वस्त्रीपुंसनेतृत्वस्याक्षिस्थे श्रुतौ प्रतीतेरिति भावः ।

ಟೀಕೆಯಲ್ಲಿರುವ ''ಉಪಪತ್ತ್ಯಾದಿ'' ಎಂಬಲ್ಲಿರುವ ''ಆದಿ'' ಪದದಿಂದ 'ಸ್ಥಾನಾದಿಶಕ್ತಿ', 'ಸುಖವಿಶಿಷ್ಟಾಭಿಧಾನಾತ್' ಮೊದಲಾದ ಹೇತುಗಳನ್ನು ಸ್ವೀಕರಿಸಬೇಕು. ಭಾಷ್ಯದಲ್ಲಿರುವ ''ನ ಜೀವಃ'' ಎಂಬ ಪದದ ಅರ್ಥವನ್ನು ''ನಾಯಂ'' ಎಂದು ಹೇಳಿದ್ದಾರೆ. ಅಂತರ ಎಂಬುದನ್ನು ಅನುವೃತ್ತಿ ಮಾಡಿಕೊಂಡು 'ನ ಜೀವಃ ಅಂತರಃ' ಎಂದು ವಿವಕ್ಷಿಸಬೇಕು.

ಭಾಷ್ಯದಲ್ಲಿ ಆಪಾದನೆ ಮಾಡಿರುವ ಅನವಸ್ಥಾದೋಷಕ್ಕೆ ಅಸಿದ್ಧಿಯನ್ನು ಪರಿಹರಿಸಲು, ''ಅಸ್ಯ ತತ್ತತ್ಪ್ರೇರಕತ್ವೇನ'' ಎಂದು ಪರಿಷ್ಕರಿಸುತ್ತಿದ್ದಾರೆ. ವಾಮನಿ ಭಾಮನಿ ಶಬ್ದಗಳಿಂದ ಸಕಲ ಸ್ತ್ರೀ ಮತ್ತು ಪುರುಷರುಗಳ ಪ್ರೇರಕನೆಂದು ಹೇಳಲಾಗಿದೆ. ಪರಮಾತ್ಮನ ಇಂತಹ ಎರಡು ರೂಪಗಳನ್ನು ಶ್ರುತಿ ಹೇಳುತ್ತಿದೆಯೆಂದು ತಿಳಿಯಬೇಕು.

**भावदीपः** – भाष्ये नाग्निरिति वाच्ये जीवपदोक्त्या सूचितां युक्तिमाह – **जीवत्वादिति** ।। जीवस्येत्यादेरर्थः – **जीवस्येति** ।। असम्भवादित्यस्य पूर्वोक्तेन व्याघातनिरासायाह – **अभ्युपगम्येति** ।। प्रेरकत्वमित्यर्थः । इदम् अनवस्थानम् । अनवस्थानिरासायाग्नेः स्वातन्त्र्यशङ्कनादग्नेरेवेति नियमदूषणमसङ्गतमित्यतो व्याचष्टे – **अग्नेरिति** ।। त्वया पूर्वपक्षिणा ।। **नैवमिति** ।। तेन प्राणाभावादित्यनेन समुच्चयार्थश्चशब्द इति भावः ।। **नीचोच्चेति** ।। 'वृद्धिह्रासभाक्त्वमन्तर्भावाद्' 'यावदधिकारमवस्थितिराधिकारिकाणाम्' 'इयदामननात्' 'नाविशेषाद्'

इत्यादिसूत्रैरानन्दस्य मीमांसा भवति । वाग्वाव नाम्नो भूयसि इत्यादिभिश्चाङ्गीकृततरतमभाववदित्यर्थः । नियमशब्दार्थः – नियामकेति ।।

ಭಾಷ್ಯದಲ್ಲಿ 'ನ ಅಗ್ನಿಃ' ಎಂದು ಹೇಳಬೇಕಿತ್ತು. ಆದರೆ 'ನ ಜೀವಃ' ಎಂದು ಹೇಳಿದ್ದಾರೆ. ಹೀಗೆ ಜೀವನೆಂದು ಹೇಳಿದ್ದರ ಪ್ರಯೋಜನವನ್ನು 'ಜೀವತ್ವಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. 'ಜೀವತ್ವ' ಎಂಬ ಯುಕ್ತಿಯನ್ನು ತೋರಿಸಿದಂತಾಯಿತು. ಭಾಷ್ಯದಲ್ಲಿರುವ 'ಜೀವಸ್ಯ' ಇತ್ಯಾದಿ ವಾಕ್ಯದ ಅರ್ಥವನ್ನೇ ಟೀಕೆಯಲ್ಲಿ 'ಜೀವಸ್ಯ ತಸ್ಯ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ.

'ಅಸಂಭವಾತ್' ಎಂದು ಭಾಷ್ಯದಲ್ಲಿ ಹೇಳಿದ್ದಕ್ಕೆ ವ್ಯಾಘಾತ ಬರುತ್ತದೆ. ಆದರ ಪರಿಹಾರಕ್ಕಾಗಿ 'ಅಭ್ಯುಪಗಮ್ಯ' ಎಂದಿದ್ದಾರೆ. ಪ್ರೇರಕತ್ವವನ್ನು ಅಗ್ನಿಯಲ್ಲಿ ಅಂಗೀಕರಿಸಿ ಹೇಳಿದ್ದಾರೆಂದರ್ಥ. 'ಇದಂ' ಶಬ್ದಕ್ಕೆ ಅನವಸ್ಥಾ ಎಂದರ್ಥ. ಅನವಸ್ಥಾನಿರಾಸ ಮಾಡುವುದಕ್ಕಾಗಿ ಅಗ್ನಿಗೆ ಸ್ವಾತಂತ್ರ್ಯವಿಲ್ಲವೆನ್ನಬೇಕು. ಆದ್ದರಿಂದ ಅಗ್ನಿಯೇ ನಿಯಾಮಕನೆಂದು ಹೇಳಿದರೆ ಅನವಸ್ಥಾ ಬರುತ್ತದೆಂದು ಹೇಳಿದ್ದು ಅಸಂಗತವಾಗುತ್ತದಲ್ಲವೆ ? ಎಂಬ ಪ್ರಶ್ನೆಗೆ 'ಅಗ್ನೇಃ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

'ತ್ವಯಾ' ಎಂದರೆ ಪೂರ್ವಪಕ್ಷಿಯಿಂದ ಎಂದರ್ಥ. 'ನೈವಂ' ಎಂದು ಹೇಳಿದ್ದರಿಂದ 'ಪ್ರಮಾಣಾಭಾವಾತ್' ಎಂಬುದರಿಂದ ಸಮುಚ್ಚಯಾರ್ಥದಲ್ಲಿ ಚ ಶಬ್ದವಿದೆಯೆಂದು ತಿಳಿಯುತ್ತದೆ. 'ನೀಚೋಚ್ಚ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - 'ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾತ್' ಎಂಬ ಸೂತ್ರದಲ್ಲಿ ಮತ್ತು 'ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಮ್', 'ಇಯದಾಮನನಾತ್', ಸೂತ್ರಗಳಿಂದ ಆನಂದದ ಮೀಮಾಂಸೆ ಮಾಡಲಾಗಿದೆ. ಅವರವರ ಯೋಗ್ಯತೆಗೆ ತಕ್ಕಂತೆ ಆನಂದವನ್ನು ವಿಭಾಗ ಮಾಡಿದ್ದಾರೆ. 'ವಾಗ್ವಾವ ನಾಮ್ನೋ ಭೂಯಸಿ' ಎಂಬಲ್ಲಿ ಎಲ್ಲಾ ಜೀವರ ತಾರತಮ್ಯವನ್ನು ಒಪ್ಪಿದ್ದಾರೆ. ಆದ್ದರಿಂದ ಎಲ್ಲರೂ ಜೀವರೇ ಆಗಿದ್ದರೂ ನಿಚೋಚ್ಚಭಾವವಿರುತ್ತದೆಂದು ತಿಳಿಯಬೇಕು. ನಿಯಮಶಬ್ದಕ್ಕೆ ನಿಯಾಮಕ ಎಂದರ್ಥ.

**भावदीपः** – यद्यपि इन्द्रो वै देवानामोजिष्ठो रुद्रो वाव लोकाधारः वायुना वै गोतमसूत्रेणायं च लोक इत्यादिश्रुतिः । 'रुद्रं समाश्रिता देवाः रुद्रो ब्रह्माणमाश्रितः' इत्यादिस्मृतिश्चास्ति । तथापि 'न ऋते त्वत् क्रियते किञ्चनारे' इत्यादौ तेषामपि स्वतन्त्रेश्वराधीनतावगतेरिति भावः ।। **भवतापीति** ।। 'कत्येव देवाः प्रजा विधारयन्तः' इत्यादिप्रमाणैः 'स्वामिनः फलश्रुतेः' इत्यादिसूत्रैश्च सिद्धान्तिना तथोपगमादिति भावः ।

ಅಂತರಾಧಿಕರಣ (೧-೨-೨)

ವಸ್ತುತಃ 'ಇಂದ್ರೋ ವೈ ದೇವಾನಾಮೋಜಿಷ್ಠಃ','ರುದ್ರೋ ವಾ ವ ಲೋಕಾಧಾರಃ', ' ವಾಯುನಾ ವೈ ಗೌತಮಃ' ಇವೇ ಮೊದಲಾದ ಶ್ರುತಿಗಳಿಂದ 'ರುದ್ರಂ ಸಮಾಶ್ರಿತಾ ದೇವಾಃ ರುದ್ರೋ ಬ್ರಹ್ಮಾಣಮಾಶ್ರಿತಃ' ಮೊದಲಾದ ಸ್ಮೃತಿಗಳಿಂದ ರುದ್ರಾದಿ ದೇವತೆಗಳು ನಿಯಾಮಕರಾಗಿದ್ದಾರೆಂದು ತಿಳಿಯುತ್ತದೆ.

ಆದರೆ 'ನ ಋತೇ ತ್ವತ್‌ಕ್ರಿಯತೇ ಕಿಂಚನಾರೇ' ಎಂಬ ಶ್ರುತಿಯಿಂದ ರುದ್ರಾದಿಗಳ ನಿಯಾಮಕತ್ವವು ಭಗವಂತನ ಅಧೀನವೇ ಆಗಿದೆಯೆಂದು ತಿಳಿಯುತ್ತದೆ.

'ಭವತಾಪಿ' ಇತ್ಯಾದಿ ಟೀಕೆಯ ಅಭಿಪ್ರಾಯ ಹೀಗಿದೆ - 'ಕತ್ಯೇವ ದೇವಾಃ ಪ್ರಜಾ ವಿಧಾರಯಂತಃ' ಮೊದಲಾದ ಪ್ರಮಾಣಗಳಿಂದ 'ಸ್ವಾಮಿನಃ ಫಲಶ್ರುತೇಃ' ಮೊದಲಾದ ಸೂತ್ರಗಳಿಂದ ಸಿದ್ಧಾಂತಿಗಳು ಅಗ್ನಿಗೆ ನಿಯಾಮಕತ್ವವನ್ನು ಒಪ್ಪಿದ್ದಾರೆಂದು ತಿಳಿಯಬೇಕು.

**भावदीपः – प्रतीतानुपपत्तिनिरासेन फलोक्त्याऽधिकरणार्थमुपसंहरति – तस्मादिति ।। उपपत्तिस्थानादिशक्तिपूर्णसुखाद्यभिधानश्रुतोपनिषद्ब्रह्मगत्यभिधान रूप साधकानवस्थारूपविपक्षबाधकहेतूनां सद्भावादित्यर्थः ।। अन्तरस्तत्त्वित्यस्यार्थः – विष्णुरेवेत्यादि**

ಆಪಾತತಃ ತೋರುವ ಅಗ್ನಿಯೇ ನಿಯಾಮಕನೆಂಬ ಅನುಪಪತ್ತಿಯನ್ನು ನಿರಾಸ ಮಾಡಿದ್ದಾಯಿತು. ಆದ್ದರಿಂದ ಅಧಿಕರಣದ ಪ್ರಯೋಜನವನ್ನು ಹೇಳುತ್ತಾ ಉಪಸಂಹಾರ ಮಾಡುತ್ತಿದ್ದಾರೆ 'ತಸ್ಮಾತ್' ಇತ್ಯಾದಿ ವಾಕ್ಯದಿಂದ. ಇಲ್ಲಿಯತನಕ ಹೇಳಿದ ಉಪಪತ್ತಿಗಳೆಂದರೆ ಸ್ಥಾನಾದಿಶಕ್ತಿ, ಪೂರ್ಣಸುಖಾದ್ಯಭಿಧಾನ, ಶ್ರುತೋಪನಿಷತ್‌ಬ್ರಹ್ಮಗತ್ಯಭಿಧಾನ ಮೊದಲಾದವು. ಇವುಗಳು ಸಾಧಕಪ್ರಮಾಣಗಳಾಗಿವೆ. ಅನವಸ್ಥಾ, ಅಸಂಭವ ಮೊದಲಾದವು ವಿಪಕ್ಷದಲ್ಲಿ ಬಾಧಕಪ್ರಮಾಣಗಳಾಗಿವೆ. ಇವುಗಳ ಆಧಾರದಿಂದ ಸಿದ್ಧಾಂತ-ಸ್ಥಾಪನೆಯಾಗುತ್ತದೆ. 'ಅಂತರಃ' 'ತತ್ತು' ಎಂಬ ಪ್ರತಿಜ್ಞೆಯ ಅರ್ಥವನ್ನೇ ಟೀಕೆಯಲ್ಲಿ 'ವಿಷ್ಣುರೇವ' ಎಂದು ಹೇಳಿದ್ದಾರೆ.

**भावदीपः – ।। आदित्येति ।।** अत्र पूर्वत्र च विद्यमानादित्यस्थ इत्यार्थिकोऽर्थः । आदित्यादिस्थ इत्यादिपदेनाग्निग्रहः । नन्वेवं कथं तर्हि अक्षणि पुरुषो दृश्यत इत्युक्तिः । 'तदव्यक्तमाह हि' इति तस्यान्यक्तैकस्वभावत्वादित्यत आह – **दिव्येति ।।** 'दृश्यते ज्ञानदृष्ट्या यः सूर्ये चक्षुषि चैकराड्' इति प्रथमाध्याय छान्दोग्यभाष्योक्तेरिति भावः ।

ಅಕ್ಷಿಸ್ಥನೆಂದು ಶ್ರುತಿಯಿಂದಲೇ ತಿಳಿಯುತ್ತದೆ. ಆದಿತ್ಯಸ್ಥನೆಂಬುದು ಅರ್ಥಿಕಾರ್ಥ. 'ಆದಿತ್ಯಾದಿಸ್ಥಃ' ಎಂದು ಹೇಳಿದಾಗ ಆದಿ ಪದದಿಂದ ಅಗ್ನಿಸ್ಥನೆಂಬುದನ್ನು ಇಟ್ಟುಕೊಳ್ಳಬೇಕು.

ಹಾಗಾದರೆ 'ಅಕ್ಷಿಣಿ ಪುರುಷೋ ದೃಶ್ಯತೇ' ಎಂದು ಹೇಗೆ ಹೇಳಿದರು ? ಏಕೆಂದರೆ ಅವ್ಯಕ್ತನಾಗಿ ಗೋಚರಿಸುತ್ತಾನೆಂದು 'ಹಿ' ಶಬ್ದ ತಿಳಿಸುತ್ತಿದೆ. ಏಕೆಂದರೆ ವಿಷ್ಣು ಅವ್ಯಕ್ತೈಕಸ್ವಭಾವವುಳ್ಳವನಾಗಿದ್ದಾನೆ. ಆದ್ದರಿಂದ 'ದೃಶ್ಯತೇ' ಎಂಬ ಪ್ರಯೋಗವು ತಪ್ಪಾಗುತ್ತದಲ್ಲವೆ ? ಎಂಬ ಪ್ರಶ್ನೆಗೆ 'ದಿವ್ಯದೃಷ್ಟಿಗೋಚರಃ' ಎಂದು ಉತ್ತರಿಸುತ್ತಿದ್ದಾರೆ.

'ದೃಶ್ಯತೇ ಜ್ಞಾನದೃಷ್ಟ್ಯಾ ಯಃ ಸೂರ್ಯೇ ಚಕ್ಷುಷಿ ಚೈಕರಾಟ್' ಆದಿತ್ಯನಲ್ಲಿರುವವನೇ ಚಕ್ಷುರಿಂದ್ರಿಯದಲ್ಲಿ ಜ್ಞಾನದೃಷ್ಟಿಯಿಂದ ಗೋಚರಿಸುತ್ತಾನೆ' ಎಂದು ಛಾಂದೋಗ್ಯ ಭಾಷ್ಯದ ಪ್ರಥಮಾಧ್ಯಾಯದಲ್ಲಿ ಹೇಳಿದ್ದಾರೆ.

**भावदीपः** – अतो विष्णोरेवादित्यस्थत्वादित्यर्थः ।। मोक्ष इति ।। 'तद् यथा पुष्करपलाश' इत्यादिनोक्त इत्यर्थः । यत्त्वत्र केनचित् सूत्राणां भाष्यटीकार्थेऽस्वरसादि-दूषणमुद्भावितम्, तत्तु भाष्यटीकारीत्या सूत्रार्थाभिमर्शिनां न चमत्कारावहमिति नात्र तदुद्धारः प्रपञ्चितोऽस्माभिः ।। १७ ।।

।। इति राघवेन्द्रयतिकृते भावदीपे अन्तराधिकरणम् ।।

ಟೀಕೆಯಲ್ಲಿರುವ 'ಅತಃ' ಎಂಬ ಪದಕ್ಕೆ ಆದಿತ್ಯನಲ್ಲಿರುವವನಾದ್ದರಿಂದ ಎಂದರ್ಥ. 'ಮೋಕ್ಷ' ಎಂದು ಟೀಕೆಯಲ್ಲಿದೆ. ತದ್ಯಥಾ ಪುಷ್ಕರಪಲಾಶಃ ಎಂಬಲ್ಲಿ ಚಕ್ಷುರಂತಸ್ಥನಾದ ವಿಷ್ಣುವಿನ ಜ್ಞಾನದಿಂದಲೇ ಮೋಕ್ಷವೆಂದು ಹೇಳಿದ್ದಾರೆ.

ಕೆಲವರು ಸೂತ್ರಗಳಿಗೆ ಭಾಷ್ಯ ಹಾಗೂ ಟೀಕೆಗಳಿಂದ ಅಸ್ವಾರಸ್ಯ ತೋರಿಸಿದ್ದಾರೆ. ಇದು ಭಾಷ್ಯ ಹಾಗೂ ಟೀಕೆಗಳ ಪ್ರಕಾರ ಸೂತ್ರಾರ್ಥವನ್ನು ತಿಳಿದುಕೊಳ್ಳಬೇಕಾದ ನಮ್ಮಂತಹವರು ಮಾಡುವ ವಿಮರ್ಶೆ ಅಲ್ಲ. ಹಾಗೆ ಹೇಳುವುದರಿಂದ ಚಮತ್ಕಾರವನ್ನು ತೋರಿಸಿಕೊಂಡಂತೇನು ಆಗುವುದಿಲ್ಲ. ಆದ್ದರಿಂದ ಅವರ ಪಕ್ಷವನ್ನು ಇಲ್ಲಿ ತೋರಿಸಿಯೂ ಇಲ್ಲ.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಅಂತರಾಧಿಕರಣವು ಸಮಾಪ್ತವಾಯಿತು ॥

**वाक्यार्थमञ्जारी**

**।। ॐ अनवस्थितेरसम्भवाच्च नेतरः ॐ ।।**

चक्षुरन्तस्थ इतरोऽग्निर्न अनवस्थितेः । जीवस्याग्नेर्जीवान्तरप्रेरकत्वे तस्यापि प्रेरकान्तरेण भाव्यम् । एवं तस्यापीत्यनवस्थानाद् अग्नेरपि प्रेर्येण जीवत्वसाम्येन प्रेरणासम्भवाच्चेत्यर्थः ।। **तत्तत्प्रेरकत्वेनेति** ।। 'यश्चक्षुरन्तरो यमयति' इति श्रुत्यन्तरसमाख्यानादिति भावः । नेयमनवस्थाबीजाङ्कुरपरम्परानवस्थावन्मन्तव्येत्यत आह – **पूर्वपूर्वेति** ।। अत्राग्नेर्जीवप्रेरकत्वं मूलं तदर्थमेवोत्तरोत्तरानुसरणात् । तथाच प्रयोजकत्वेन कल्पितानां व्युत्क्रमेण पूर्वपूर्वप्रेरकानामसिद्धौ प्रयोज्यानामुत्तरोत्तरप्रेरकत्वानामप्यसिद्धिरित्यग्नेरपि प्रेरकत्वसिद्धेरित्यर्थः । अभ्युपेत्य प्रेरकत्वम् इदमनवस्थानम् ।। **स्वातन्त्र्येति** ।। तथाच न तत्प्रेरकोऽपेक्षित इति भावः ।। **दिव्यदृष्टिगोचर इति** ।। ततश्च श्रुतौ 'य एषोऽन्तरक्षिणि पुरुषो दृश्यते' इति दृश्यत्वोक्तिर्युक्तेति भावः ।।

।। इति श्रीशर्कराश्रीनिवासविचचिता वाक्यार्थमञ्जर्याम् अन्तराधिकरणम् ।।

*****

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ,

### ಭಾಟ್ಟಸಂಗ್ರಹ, ಶಂಕರಭಾಷ್ಯ, ಭಾಮತೀ,

### ಶ್ರೀಭಾಷ್ಯ, ಶ್ರುತಪ್ರಕಾಶ ಇವುಗಳ ಆಯ್ದ ಭಾಗಗಳು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ अन्तराधिकरणम्

ಅಕ್ಷಿವಾಕ್ಯವೇ ವಿಷಯ. ಅಗ್ನಿಯೋ, ವಿಷ್ಣುವೋ ? ಎಂದು ಸಂಶಯ

**।। ॐ अन्तर उपपत्तेः ॐ ।।**

**अत्र ''य एषोऽन्तरक्षिणि पुरुषो दृश्यते एष आत्मेति होवाच एतदमृतमभयमेतद् ब्रह्म'' इत्युक्तस्य चक्षुरन्तस्स्थस्याभयस्याग्नित्वात् ''अभयं तितीर्षतां पारं'' इति पूर्वोक्ताभयोऽप्यग्निर्न तु विष्णुरिति पूर्वपक्षोत्थानादनन्तरसङ्गतिः ।**

**अत्र चक्षुरन्तस्स्थोऽग्निः विष्णुर्वेति चिन्ता । तदर्थं अन्तस्स्थे श्रुतममृतत्वादिकं किं गौणं किं वा मुख्यमिति ।**

**तदर्थं ''य एष आदित्ये पुरुषः सोऽहमस्मि'' इति अक्ष्यभिन्नादित्यस्थपुरुषे प्रयुक्तोऽहंशब्दः किमग्निपरः किं वा ब्रह्मपर इति ।**

**तदर्थं ब्रह्मपरत्वे ''अस्मद्विद्या आत्मविद्या च'' इत्युक्तो विद्याभेदो घटते उत न घटत ? इति ।**

ಅನುವಾದ - ಈ ಅಧಿಕರಣದಲ್ಲಿ "ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ ಏತದಮೃತಮಭಯಮೇತದ್ ಬ್ರಹ್ಮ" ಎಂಬುದು ವಿಷಯವಾಕ್ಯ. ಇದರಲ್ಲಿ ಚಕ್ಷುರಂತಸ್ಥನಾದವನನ್ನು ಅಭಯಸ್ವರೂಪನಾದ ಅಗ್ನಿಯನ್ನು ಪ್ರತಿಪಾದಿಸಿರುವುದರಿಂದ "ಅಭಯಂ ತಿತೀರ್ಷತಾಂ ಪಾರಂ" ಎಂಬ ಹಿಂದಿನ 'ವಿಶೇಷಣಾಚ್ಚ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ

ಅಭಯಸ್ವರೂಪನಾದ ಅಗ್ನಿಯೇ ಆಗಿದ್ದಾನೆ ಹೊರತು ವಿಷ್ಣುವಲ್ಲ. ಹೀಗೆ ಪೂರ್ವಪಕ್ಷ ಹುಟ್ಟುವುದರಿಂದ ಅನಂತರ ಸಂಗತಿಯನ್ನು ತಿಳಿಯಬೇಕು.

ಆದ್ದರಿಂದ ಚಕ್ಷುರಂತಸ್ಥನಾದವನು ಅಗ್ನಿಯೋ? ಅಥವಾ ವಿಷ್ಣುವೋ? ಎಂದು ಸಂಶಯ. ಆದಕ್ಕಾಗಿ ಅಂತಸ್ಥನಲ್ಲಿ ಕೇಳಿಸುತ್ತಿರುವ ಅಮೃತತ್ವಾದಿಗಳು ಗೌಣವೋ ಅಥವಾ ಮುಖ್ಯವೋ? ಎಂದು ಸಂಶಯ. ಅದಕ್ಕಾಗಿ "ಯ ಏಷ ಆದಿತ್ಯೇ ಪುರುಷಃ ಸೋಽಹಮಸ್ಮಿ" ಎಂಬಲ್ಲಿ "ಅಕ್ಷಿಯಿಂದ ಅಭಿನ್ನವಾದ ಆದಿತ್ಯನಲ್ಲಿರುವ ಪುರುಷನಲ್ಲಿ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದವು ಅಗ್ನಿಪರವೋ? ಅಥವಾ ಬ್ರಹ್ಮಪರವೋ? ಎಂದು ಸಂಶಯ. ಅದಕ್ಕೋಸ್ಕರ ಬ್ರಹ್ಮಪರವಾದರೆ "ಅಸ್ಮದ್ವಿದ್ಯಾ ಆತ್ಮವಿದ್ಯಾ ಚ" ಎಂಬಲ್ಲಿ ಹೇಳಲ್ಪಟ್ಟ ವಿದ್ಯಾಶಬ್ದವು ಕೂಡುವುದಿಲ್ಲವೋ ಅಥವಾ ಕೂಡುತ್ತದೋ ? ಎಂಬ ಸಂಶಯವು ಪರಿಹಾರವಾಗಬೇಕು.

## ಶ್ರೀರಾಘವೇಂದ್ರತೀರ್ಥ ವಿರಚಿತ
# ಪ್ರಕಾಶ

**प्रकाशः – ।। ॐ अन्तर उपपत्तेः ॐ ।।** भाष्यदिशाऽऽनन्दमयनयेन सङ्गतिप्रतीतेः पूर्वेण तामाह – **अत्रेति ।**

**पूर्वोक्तेति ।** "विशेषणाच्च" इति सूत्रोक्तेत्यर्थः । 'सङ्गतिः' आक्षेपिकी । भाष्यं तु फलपरं वा, येन केनचित्पूर्वेण सङ्गतिर्वाच्या न त्वव्यवहितेनेति निर्बन्ध इत्याशयं वा, आदित्यान्तस्स्थत्वलिङ्गस्यापि समन्वयाशयं वा नेयमिति भावः ।

ವಿವರಣೆ - ಅಂತರಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣಕ್ಕೆ ಆನಂದಮಯಾಧಿಕರಣದಿಂದ ಸಂಗತಿಯಿರುತ್ತದೆಂದು ಭಾಷ್ಯಕಾರರು ಹೇಳಿದಂತೆ ತೋರುತ್ತದೆ. ಅದಕ್ಕೋಸ್ಕರ ಅವ್ಯವಹಿತವಾದ ಹಿಂದಿನ ಅಧಿಕರಣದಿಂದಲೇ ಗ್ರಂಥಕಾರರು ಸಂಗತಿಯನ್ನು ತೋರಿಸುವುದಕ್ಕಾಗಿ 'ಅತ್ರ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

'ಪೂರ್ವೋಕ್ತ' ಎಂದರೆ "ವಿಶೇಷಣಾಚ್ಚ" ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಎಂದು ಅರ್ಥ. 'ಸಂಗತಿಃ' ಎಂದರೆ ಆಕ್ಷೇಪಿಕೀ ಸಂಗತಿಯೆಂದು ತಿಳಿಯಬೇಕು. ಹಾಗಾದರೆ ಭಾಷ್ಯದ ಮಾತಿಗೆ ಏನು ಅರ್ಥ? ಎಂದರೆ ಆನಂದಮಯಾಧಿಕರಣದಿಂದ ಈ ಅಧಿಕರಣಕ್ಕೆ ಫಲವನ್ನು ತೋರಿಸುತ್ತಿದ್ದಾರೆಂದು ಅಥವಾ ಅವ್ಯವಹಿತವಾದ ಹಿಂದಿನ ಅಧಿಕರಣದಿಂದಲೇ ಸಂಗತಿಯನ್ನು ತೋರಿಸಬೇಕೆಂಬ ನಿರ್ಬಂಧವಿಲ್ಲವೆಂದು ಅಥವಾ ಆದಿತ್ಯಾಂತಸ್ಸ್ಥತ್ವವೆಂಬ ಲಿಂಗವನ್ನೂ ಸಹ ಸಮನ್ವಯ ಮಾಡುವ ಉದ್ದೇಶದಿಂದಲೂ ಭಾಷ್ಯದ ಮಾತನ್ನು ಅರ್ಥೈಸಿಕೊಳ್ಳಬೇಕು.

**प्रकाशः** – नन्वस्याभयस्याग्नित्वे प्राक्तनस्यापि कुतस्तत्त्वं, अभ्यासार्थवाद-सहिताग्निश्रुतिबाहुल्यरूपविशेषहेतोरत्रेव तत्राभावात् । नहि "इन्द्रस्यात्मा" इत्यत्रेन्द्रस्यान्यत्वे "इन्द्रो राजा जगतः" इत्यत्राप्यन्यत्वम् । प्रत्युत तत्रोक्तलिङ्गैस्तस्य विष्णुधर्मत्वाध्ययवसायेनात्रापि तेन विष्णुत्वस्यैव निर्णयोपपत्तेरिति चेत् ।

ಆಕ್ಷೇಪ - ಈ ಶ್ರುತಿಯಲ್ಲಿ ಪ್ರತಿಪಾದ್ಯನಾದ ಅಭಯನು ಅಗ್ನಿಯೆಂದಾದರೆ ಹಿಂದಿನ ಸೂತ್ರದಲ್ಲಿ ಪ್ರತಿಪಾದಿಸಲ್ಪಟ್ಟವನೂ ಸಹ ಅಗ್ನಿಯೇ ಆಗುತ್ತಾನೆಂದು ಹೇಳಿದಿರಿ. ಇದು ಹೇಗೆ ಸರಿ? ಏಕೆಂದರೆ 'ಯ ಏಷಃ' ಎಂಬ ಶ್ರುತಿಯಲ್ಲಿ ಅಭ್ಯಾಸ ಅರ್ಥವಾದ ಸಹಿತವಾದ ಅಗ್ನಿಶ್ರುತಿ ಮೊದಲಾದ ವಿಶೇಷ ಹೇತುಗಳು ಇರುವುದರಿಂದ ಈ ಶ್ರುತಿಯಿಂದಷ್ಟೇ ಅಗ್ನಿಯು ಪ್ರತಿಪಾದ್ಯನಾಗಲಿ. ಆದರೆ 'ಅಭಯಂ ತಿತೀರ್ಷತಾಂ' ಎಂಬ ಶ್ರುತಿಯಲ್ಲಿ ಇಂತಹ ಲಿಂಗಗಳು ಇರುವುದಿಲ್ಲ. ಏಕೆಂದರೆ 'ಇಂದ್ರಸ್ಯಾತ್ಮಾ' ಎಂಬಲ್ಲಿ ಪ್ರತಿಪಾದ್ಯನಾದ ಇಂದ್ರನು ಬೇರೆಯವನಾದರೆ 'ಇಂದ್ರೋ ರಾಜಾ' ಎಂಬಲ್ಲಿಯೂ ಸಹ ಬೇರೆಯವನೇ ಆಗುತ್ತಾನೆಂದು ಹೇಳಬಾರದು. 'ಇಂದ್ರೋ ರಾಜಾ' ಎಂಬಲ್ಲಿ ಹೇಳಲ್ಪಟ್ಟ ಲಿಂಗಗಳು ವಿಷ್ಣುಧರ್ಮಗಳಾದ್ದರಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ. ಇದರ ಬಲದಿಂದ 'ಇಂದ್ರಸ್ಯಾತ್ಮಾ' ಎಂಬ ವಾಕ್ಯದ ಬಲದಿಂದಲೂ ವಿಷ್ಣುವೇ ಪ್ರತಿಪಾದ್ಯನೆಂದು ನಿರ್ಣಯಿಸಬಹುದಲ್ಲವೇ?

**प्रकाशः** – मैवं, अभयत्वमन्यतो भयशून्यत्वं, तच्च स्वतन्त्रस्यैव, न त्वन्यनियतस्य । तथा चात्राभयत्वमग्नेरावश्यकमिति, स्वतन्त्रवस्तुद्वयायोगात् प्राक्तनानामप्यभयत्वं तस्यैवेति तद्बलेनेतरदपि कथञ्चित्तस्मिन्नेयं, एकेनापि निरवकाशेन बहूनां बाधसम्भवात्, गुहाविष्टत्वस्याग्नावप्युपपत्तेः,

ಸಮಾಧಾನ - ಇದು ತಪ್ಪು. ಅಭಯ ಶಬ್ದಕ್ಕೆ ಬೇರೆ ಪದಾರ್ಥದಿಂದ ಭಯವಿಲ್ಲದಿರುವಿಕೆ ಎಂದರ್ಥ. ಸ್ವತಂತ್ರನಾದವನಿಗಷ್ಟೇ ಈ ಅಭಯತ್ವವನ್ನು ಹೇಳಲು ಸಾಧ್ಯ, ಹೊರತು ಬೇರೆಯವನಿಂದ ನಿಯಮ್ಯನಾದವನಲ್ಲಿ ಹೇಳಲಾಗದು. ಆದ್ದರಿಂದ ಅಗ್ನಿಯನ್ನೇ ಅಭಯಸ್ವರೂಪನೆನ್ನಬೇಕು. ಇಬ್ಬರು ಸ್ವತಂತ್ರರಾಗಲು ಸಾಧ್ಯವಿಲ್ಲದ ಕಾರಣ. ಹಿಂದಿನ ಸೂತ್ರವಾಕ್ಯದಲ್ಲಿ ಪ್ರತಿಪಾದ್ಯನಾದ ಅಭಯಸ್ವರೂಪನೂ ಸಹ ಅಗ್ನಿಯೇ ಆಗುತ್ತಾನೆ. ಈ ಕಾರಣದಿಂದ ಉಳಿದ ವಿಷ್ಣು ಹಾಗೂ ಲಿಂಗಗಳ ಶ್ರುತಿಗಳನ್ನೂ ಸಹ ಅಗ್ನಿಯಲ್ಲಿಯೇ ಹೇಗಾದರೂ ಸಮನ್ವಯಗೊಳಿಸಬೇಕು. ಏಕೆಂದರೆ ನಿರವಕಾಶವಾದ ಒಂದೇ ಲಿಂಗದಿಂದ ಸಾವಕಾಶವಾದ ಅನೇಕ ಶ್ರುತಿಲಿಂಗಗಳಿಗೆ ಬಾಧವನ್ನು ಹೇಳಬಹುದಾದ್ದರಿಂದ ಗುಹಾವಿಷ್ಟತ್ವವು ಅಗ್ನಿಯಲ್ಲೇ ಬರುತ್ತದೆ.

**प्रकाशः** – ब्रह्मत्वस्यात्रेव तत्रापि नेतुं शक्यत्वात्, अमृतत्वं तस्मिन् शङ्कमानेनाक्षरत्वादेरपि तत्रैव शङ्कितुं शक्यत्वादस्याभयत्वस्याक्षेपेण तेन

**विष्णुत्वशङ्कानवकाशादिति तात्पर्यात् । एवं फलपरभाष्यसमर्थनमपि ध्येयम् । विषयसंशयटीकां व्यनक्ति – अत्रेति ।**

ಬ್ರಹ್ಮತ್ವವನ್ನು ವಿಷ್ಣುವಿನಲ್ಲಿ ಸಮರ್ಥಿಸುವಂತೆ ಅಗ್ನಿಯಲ್ಲೂ ಸಹ ಸಮರ್ಥಿಸಬಹುದು. ಅಗ್ನಿಯಲ್ಲಿ ಅಮೃತತ್ವವನ್ನು ಆಶಂಕಿಸುತ್ತಿರುವುದರಿಂದ ಅಕ್ಷರತ್ವಾದಿಗಳನ್ನೂ ಸಹ ಅಗ್ನಿಯಲ್ಲೇ ಆಶಂಕಿಸಲು ಬರುತ್ತದೆ. ಹೀಗೆ ಅಕ್ಷರತ್ವ ಅಭಯತ್ವ ಮೊದಲಾದ ಧರ್ಮಗಳಿಂದ ವಿಷ್ಣುವನ್ನು ಶ್ರುತಿಪ್ರತಿಪಾದ್ಯನೆಂದು ಶಂಕಿಸಲು ಸಾಧ್ಯವಿಲ್ಲ. ಹೀಗೆ ಭಾಷ್ಯವು ಫಲಪರವಾಗುತ್ತದೆಂದೂ ಸಹ ತಿಳಿಯಬೇಕು. ವಿಷಯವನ್ನು ಪ್ರತಿಪಾದನೆ ಮಾಡುವ ಟೀಕೆಯನ್ನು 'ಅತ್ರ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः – छान्दोग्ये चतुर्थाध्याये ''उपकोसलो ह वै कामलायनः सत्यकामे जाबाले ब्रह्मचर्यमुवास । तस्य ह द्वादशवर्षाण्यग्नीन् परिचचार । स ह स्मान्यानन्तेवासिनस्समावर्तयन् तं ह स्मैव न समावर्तयति । तं जायोवाच तप्तो ब्रह्मचारी कुशलमग्नीन् परिचचारीत् । मावाऽग्नयः परिप्रावोचत् । प्रब्रूह्यस्मा इति । तस्मै होप्रोच्यैव प्रवासां चक्रे ।**

ಉಪಕೋಸಲೋ ಹ ವೈ ಕಾಮಲಾಯನಃ ಸತ್ಯಕಾಮೇ ಜಾಬಾಲೇ ಬ್ರಹ್ಮಚರ್ಯಂ ಉವಾಸ । ತಸ್ಯ ಹ ದ್ವಾದಶವರ್ಷಾಣಿ ಅಗ್ನೀನ್ ಪರಿಚಚಾರ । ಸ ಹ ಸ್ಮ ಅನ್ಯಾನ್ ಅಂತೇವಾಸಿನಃ ಸಮಾವರ್ತಯನ್ ತಂ ಹ ಸ್ಮ ಏವ ನ ಸಮಾವರ್ತಯತಿ । ತಂ ಜಾಯಾ ಉವಾಚ 'ತಪ್ತೋ ಬ್ರಹ್ಮಚಾರೀ । ಕುಶಲಮಗ್ನೀನ್ ಪರಿ ಚ ಚಾರೀತ್ । ಮಾ ತ್ವಾ ಅಗ್ನಯಃ ಪರಿಪ್ರಾವೋಚನ್ । ಪ್ರಬ್ರೂಹಿ ಅಸ್ಮೈ' ಇತಿ । ತಸ್ಮೈ ಹ ಅಪ್ರೋಚ್ಯೈವ ಪ್ರವಾಸಾಂಚಕ್ರೇ ।

ಕಾಮಲಾಯನನ ಮಗನಾದ ಉಪಕೋಸಲನು ವೇದಾಧ್ಯಯನಕ್ಕೋಸ್ಕರ ಸತ್ಯಕಾಮನಾದ ಜಾಬಾಲನಲ್ಲಿ ಗುರುಕುಲವಾಸ ಮಾಡಿದ. ಆಚಾರ್ಯರ ಗಾರ್ಹಪತ್ಯ, ಆಹವನೀಯ, ಅನ್ವಾಹಾರ್ಯಪಚನ ಎಂಬ ಮೂರು ಅಗ್ನಿಗಳನ್ನು ಹನ್ನೆರಡು ವರ್ಷ ಪರ್ಯಂತ ಸೇವಿಸಿದ. ಸತ್ಯಕಾಮನಾದರೂ ತನ್ನ ಬೇರೆ ಶಿಷ್ಯರಿಗೆ ವೇದಾಧ್ಯಯನ ಮಾಡಿಸಿ ತಮ್ಮ ಮನೆಗೆ ಹೋಗಲು ಅನುಮತಿ ನೀಡಿದ. ಆದರೆ ಉಪಕೋಸಲನಿಗೆ ಮಾತ್ರ ಉಪದೇಶ ಸಮಾವರ್ತನಗಳನ್ನು ಮಾಡಿಸಲಿಲ್ಲ. ಆಶ್ಚರ್ಯ ! ಸತ್ಯಕಾಮನಿಗೆ ಆತನ ಮಡದಿ ಹೇಳಿದಳು. 'ಬ್ರಹ್ಮಚಾರಿ ಉಪಕೋಸಲನು ತಪಸ್ಸು ಮಾಡಿದ್ದಾನೆ. ನಮ್ಮ ಅಗ್ನಿಗಳನ್ನು ಚೆನ್ನಾಗಿ ಸೇವಿಸಿದ್ದಾನೆ. ಆದರೂ ನೀವಾಗಲಿ, ಅಗ್ನಿಗಳಾಗಲೀ, ಅವನಿಗೆ ಉಪದೇಶ ಮಾಡಿಲ್ಲ. ಇನ್ನಾದರೂ ನೀವು ಅವನಿಗೆ ಉಪದೇಶ ಮಾಡಿರಿ'. ಹೀಗೆ ಪತ್ನಿಯು ಹೇಳಿದರೂ ಉಪದೇಶಿಸದೆ ಸತ್ಯಕಾಮನು ಪ್ರವಾಸಕ್ಕೆ ಹೊರಟ.

**प्रकाशः – स ह व्याधिनाऽनशितुं दध्रे । तमाचार्यजायोवाच ब्रह्मचारिन्नशान, किन्नु नाश्नासीति । स होवाच, बहव इमेऽस्मिन्पुरुषे कामा नानात्यया व्याधिभिः प्रतिपूर्णोऽस्मि नाशिष्यामीति ।**

**अथ हाग्नयः समूदिरे, तप्तो ब्रह्मचारी कुशलं नः परिचचारीद्धान्तस्मै प्रब्रवामेति । तस्मै होचुः, प्राणो ब्रह्म कं ब्रह्म खं ब्रह्म'' इत्याद्युपक्रमस्य सम्भूयोपदेशानन्तरं,**

ಸ ಹ ವ್ಯಾಧಿನಾ ಅನಶಿತುಂ ದಧ್ರೇ । ತಂ ಆಚಾರ್ಯಜಾಯಾ ಉವಾಚ - 'ಬ್ರಹ್ಮಚಾರಿನ್ ಅಶಾನ । ಕಿಂ ನು ನ ಅಶ್ನಾಸಿ' ಇತಿ । ಸ ಹ ಉವಾಚ - 'ಬಹವಃ ಹಿ ಅಸ್ಮಿನ್ ಪುರುಷೇ ಕಾಮಾಃ ನಾನಾತ್ಯಯಾಃ । ವ್ಯಾಧಿಭಿಃ ಪ್ರತಿಪೂರ್ಣೋಽಸ್ಮಿ । ನ ಅಶಿಷ್ಯಾಮಿ' ಇತಿ ।

**ಅಥ ಹ ಅಗ್ನಯಃ ಸಮೂದಿರೇ - 'ತಪ್ತೋ ಬ್ರಹ್ಮಚಾರೀ । ಕುಶಲಂ ನಃ ಪರಿ ಚ ಚಾರೀತ್ ।**
**ಹಂತ ಅಸ್ಮೈ ಪ್ರಬ್ರವಾಮ' ಇತಿ । ತಸ್ಮೈ ಹ ಊಚುಃ - 'ಪ್ರಾಣೋ ಬ್ರಹ್ಮ । ಕಂ ಬ್ರಹ್ಮ ।**
**ಖಂ ಬ್ರಹ್ಮ' ಇತಿ । ಸ ಹ ಉವಾಚ 'ವಿಜಾನಾಮಿ ಅಹಂ ಯತ್ ಪ್ರಾಣೋ ಬ್ರಹ್ಮ ।**
**ಕಂ ಚ ತು ಖಂ ನ ವಿಜಾನಾಮಿ' ಇತಿ । ತೇ ಹ ಊಚುಃ 'ಯದ್ವಾವ ಕಂ ತದೇವ ಖಂ ।**
**ಯದೇವ ಖಂ ತದೇವ ಕಂ' ಇತಿ । ಪ್ರಾಣಂ ಚ ಹ ಅಸ್ಮೈ ತದಾಕಾಶಂ ಚ ಊಚುಃ ।**

ಉಪಕೋಸಲನು ಮಾನಸಿಕ ದುಃಖದಿಂದ ಉಪವಾಸವಿರಲು ಸಂಕಲ್ಪಿಸಿದ. ಆಚಾರ್ಯರ ಪತ್ನಿಯು 'ಬ್ರಹ್ಮಚಾರಿಯೇ ! ಊಟ ಮಾಡು. ಏತಕ್ಕಾಗಿ ಉಪವಾಸವಿರುತ್ತಿ? ಎಂದು ಕೇಳಿದಳು. ಉಪಕೋಸಲನು 'ನನ್ನಲ್ಲಿ ನಾನಾರೀತಿಯಾದ ಅನೇಕ ಕಾಮನೆಗಳಿವೆ. ಅವು ಪೂರೈಸದಿದ್ದ ಪ್ರಯುಕ್ತ ಮಾನಸಿಕ ಚಿಂತೆಯಿಂದ ಪೂರ್ಣನಾಗಿದ್ದೇನೆ. ಅದಕ್ಕಾಗಿ ಊಟ ಮಾಡುವುದಿಲ್ಲ' ಎಂದು ಹೇಳಿದ.

ಆಗ ಗಾರ್ಹಪತ್ಯಾದಿ ಅಗ್ನಿಗಳು ಪರಸ್ಪರ ಹೇಳಿಕೊಂಡರು. 'ಈ ಬ್ರಹ್ಮಚಾರಿಯು ತಪಸ್ಸು ಮಾಡಿದ್ದಾನೆ. ನಮ್ಮನ್ನು ಚೆನ್ನಾಗಿ ಸೇವಿಸಿದ್ದಾನೆ. ಪಾಪ ! ಅವನಿಗೆ ನಾವು ಉಪದೇಶಿಸೋಣ' ಹೀಗೆ ಹೇಳಿ ಅವನಿಗೆ ಉಪದೇಶಿಸಿದರು.

'ಬಲದೇವತೆಯಾದ ಮುಖ್ಯಪ್ರಾಣನು ಅಪರಬ್ರಹ್ಮ. 'ಕ' ಅಂದರೆ ಅಪರಾಧೀನವಾದ ಬಲಾನಂದಸ್ವರೂಪನಾದವನು ಪರಬ್ರಹ್ಮ, ಮತ್ತು 'ಖ' ಅಂದರೆ ಅಪರಾಧೀನವಾದ ಬಲಜ್ಞಾನಸ್ವರೂಪನಾದವನು ಪರಬ್ರಹ್ಮ ಎಂದು.

ಉಪಕೋಸಲನು ಹೇಳಿದನು - 'ಬಲದೇವತೆಯಾದ ಮುಖ್ಯಪ್ರಾಣನು ಅಪರಬ್ರಹ್ಮನೆಂದು ತಿಳಿಯಿತು. ಆದರೆ ಆನಂದಸ್ವರೂಪನಾದ ಮತ್ತು ಜ್ಞಾನಸ್ವರೂಪನಾದ ಪರಬ್ರಹ್ಮನನ್ನು ಮಾತ್ರ ವಿಶೇಷವಾಗಿ ಅಂದರೆ, 'ಕ' ಮತ್ತು 'ಖ' ಒಬ್ಬರೇ? ಅಥವಾ ಬೇರೆಯೇ ? ಎಂದು ತಿಳಿಯಲಿಲ್ಲ' ಎಂದು. ಅದಕ್ಕೆ ಅಗ್ನಿಗಳು 'ಯಾವ ಪರಬ್ರಹ್ಮನು 'ಕ' ಎನಿಸಿರುವನೋ ಅವನೇ 'ಖ'. ಯಾವ ಪರಬ್ರಹ್ಮನು 'ಖ' ಎನಿಸಿರುವನೋ ಅವನೇ 'ಕ' ಎಂದು. 'ಕ' ಮತ್ತು 'ಖ' ಎನಿಸಿದ ಪರಬ್ರಹ್ಮ ಒಬ್ಬನೇ ಎಂದು ಉಪದೇಶಿಸಿದರು. ಈ ಪ್ರಕಾರವಾಗಿ ಅಗ್ನಿಗಳು ಮುಖ್ಯಪ್ರಾಣನನ್ನೂ ಮತ್ತು ಆಕಾಶನಾಮಕನಾದ ವಿಷ್ಣುವನ್ನೂ ಉಪಕೋಸಲನಿಗೆ ಉಪದೇಶಿಸಿದರು.

**प्रकाशः** – **''अथ हैनं गार्हपत्योऽनुशशास, पृथिव्यग्निरन्नमादित्य इति । य एष आदित्ये पुरुषो दृश्यते, सोऽहमस्मि स एवाहमस्मीति ।**

स य एतमेवं विद्वानुपास्तेऽपहतं पापकृत्यां, लोकी भवति, सर्वमायुरेति, ज्योग्जीवति, नास्यापरपुरुषाः क्षीयन्ते, उपवयन्तं भुञ्जामोस्मिंश्च लोकेऽमुष्मिंश्च य एतमेवं विद्वानुपास्ते''

इत्यादिना गार्हपत्यान्वाहार्यपचनाहवनीयरूपत्रेताग्नीनामादित्यचन्द्रविद्युद्गतस्य स्वात्मतयोपदेशमुक्त्वा ''ते होचुरुपकोसलैषा सोम्य तेऽस्मद्विद्या चोक्ता'' इत्युपसंहृत्याम्नायते ''य एषोन्तरक्षिणि पुरुषो दृश्यते एष आत्मेति होवाचैतदमृतमभयमेतद् ब्रह्मैतस्मिन्न किञ्चन श्लिष्यति, तद्यदस्मिन् सर्पिर्वोदकं वा सिञ्चति वर्त्मनी एव गच्छति, एतं संयद्वाममित्याचक्षते, एतं सर्वाणि वामान्यभिसंयन्ति य एवं वेद एष उ एव वामनिरेष हि सर्वाणि वामानि नयति य एवं वेद एष उ एव भामनिरेष हि सर्वेषु लोकेषु भाति य एवं वेद एष उ यदु चैवास्मिंच्छव्यं कर्म कुर्वन्ति, यदु च नार्चिषमेवाभिसम्भवन्ति, अर्चिषोऽहरन्ह आपूर्यमाणपक्षमापूर्यमाणपक्षाद्यान् षडुदङ्ङेति मासांस्तान्मासेभ्यस्संवत्सरं संवत्सरादादित्यं आदित्याच्चन्द्रमसं चन्द्रमसो विद्युतं तत्पुरुषो मानवस्स एनान् ब्रह्म गमयति'' इत्यादि ।

ಅಥ ಹ ಏನಂ ಗಾರ್ಹಪತ್ಯೋಽನುಶಶಾಸ - 'ಪೃಥಿವೀ । ಅಗ್ನಿಃ । ಅನ್ನಂ । ಆದಿತ್ಯಃ ।' ಇತಿ । 'ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಮಹಮಸ್ಮಿ' ಇತಿ ।

ಸ ಯ ಏತಮೇವಂ ವಿದ್ವಾನ್ ಉಪಾಸ್ತೇ ಅಪಹತೇ ಪಾಪಕೃತ್ಯಾಂ । ಲೋಕೀ ಭವತಿ । ಸರ್ವಮಾಯುರೇತಿ । ಜ್ಯೋಕ್ ಜೀವತಿ । ನ ಅಸ್ಯ ಅಪರಪುರುಷಾಃ ಕ್ಷೀಯಂತೇ । 'ಉಪ ವಯಂ ತಂ ಭುಂಜಾಮಃ ಅಸ್ಮಿಂಶ್ಚ ಲೋಕೇ ಅಮುಷ್ಮಿಂಶ್ಚ ಯ ಏತಮೇವಂ ವಿದ್ವಾನುಪಾಸ್ತೇ ।'

ಅನಂತರ ಉಪಕೋಸಲನಿಗೆ ಗಾರ್ಹಪತ್ಯ ಅಗ್ನಿಯು ಪ್ರತ್ಯೇಕವಾಗಿ ಉಪದೇಶ ಮಾಡಿದನು. 'ಪರಬ್ರಹ್ಮನು ಪೃಥು ಅಂದರೆ ವ್ಯಾಪ್ತನಾದ್ದರಿಂದ ಪೃಥಿವೀ ನಾಮಕನಾಗಿ ಪೃಥಿವಿಯಲ್ಲಿದ್ದಾನೆ. ಅಂಗನೇತಾರ ಅಂದರೆ ಜಗನ್ನಿಯಾಮಕನಾದ್ದರಿಂದ ಅಗ್ನಿನಾಮಕನಾಗಿ ಅಗ್ನಿಯಲ್ಲಿದ್ದಾನೆ. ಅತ್ತೃತ್ವದಿಂದ ಅಂದರೆ, ಸಂಹರಿಸುವುದರಿಂದ ಅನ್ನನಾಮಕನಾಗಿ ಅನ್ನದಲ್ಲಿದ್ದಾನೆ. ಜಗತ್ತಿಗೆ ಆದಿಕಾರಣನಾದ್ದರಿಂದ ಆದಿತ್ಯನಾಮಕನಾಗಿ ಆದಿತ್ಯನಲ್ಲಿದ್ದಾನೆ. ಇದು ವ್ಯಾಪ್ತನಾದ ಪರಮಾತ್ಮನ ವಿದ್ಯೆ. ಇನ್ನು ಅಂತರ್ಯಾಮಿಯಾದ ಪರಮಾತ್ಮನ ವಿದ್ಯೆ-ಆದಿತ್ಯನಲ್ಲಿ ಪೂರ್ಣಷಡ್ಗುಣನಾದ ಯಾವ ಭಗವಂತನು ದಿವ್ಯದೃಷ್ಟಿಗೆ ಗೋಚರನಾಗಿರುವನೋ ಅವನೇ, ಅಹೇಯನಾದ್ದರಿಂದ 'ಅಹಂ' ಶಬ್ದದಿಂದ ವಾಚ್ಯನಾಗಿದ್ದು ನನ್ನಲ್ಲಿ ಅಂತರ್ಯಾಮಿಯಾಗಿದ್ದಾನೆ. ಆದಿತ್ಯನಲ್ಲಿರುವ ಅವನ ರೂಪಕ್ಕೂ, ನನ್ನಲ್ಲಿ ಅಂತರ್ಯಾಮಿಯಾಗಿರುವ ರೂಪಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಯಾವ ವ್ಯತ್ಯಾಸವೂ ಇಲ್ಲದೆ ಅವನೇ ನನ್ನ ಅಂತರ್ಯಾಮಿಯಾಗಿದ್ದಾನೆ' ಎಂದು.

"ಯಾರು ವ್ಯಾಪ್ತನೂ ಅಂತರ್ಯಾಮಿಯೂ ಆದ ಈ ವಿಷ್ಣುವನ್ನು ತಿಳಿದು ಉಪಾಸನೆ ಮಾಡುವನೋ ಅವನು ಪಾಪವನ್ನು ಪರಿಹರಿಸಿಕೊಂಡು ವೈಕುಂಠಾದಿ ಲೋಕಗಳನ್ನು ಹೊಂದಿ ಪೂರ್ಣ ಆಯುಸ್ಸನ್ನು ಪಡೆಯುತ್ತಾನೆ. ಯೋಗ್ಯತಾನುಸಾರ ಸರ್ವಜ್ಞನಾಗುತ್ತಾನೆ. ಅವನಿಗೆ ಭೃತ್ಯರ ಕೊರತೆಯಾಗುವುದಿಲ್ಲ. 'ಇಂತಹ ವಿಷ್ಣೂಪಾಸಕನನ್ನು ನಾವು ಇಹ ಮತ್ತು ಪರಗಳೆರಡರಲ್ಲಿಯೂ ಆಶ್ರಯಿಸುತ್ತೇವೆ' ಎಂದೇ ಭೃತ್ಯರು ಹೇಳುತ್ತಾರೆ" ಎಂದು ಗಾರ್ಹಪತ್ಯಾಗ್ನಿಯು ಉಪದೇಶಿಸಿದನು.

ಅಥ ಹ ಏನಂ ಅನ್ವಾಹಾರ್ಯಪಚನಃ ಅನುಶಶಾಸ – 'ಆಪಃ। ದಿಶಃ। ನಕ್ಷತ್ರಾಣಿ। ಚಂದ್ರಮಾಃ।' ಇತಿ। 'ಯ ಏಷ ಚಂದ್ರಮಸಿ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮಿ' ಇತಿ।

ಸ ಯ ಏತಮೇವಂ ವಿದ್ವಾನುಪಾಸ್ತೇ ಅಪಹತೇ ಪಾಪಕೃತ್ಯಾಂ। ಲೋಕೀ ಭವತಿ। ಸರ್ವಮಾಯುರೇತಿ। ಜ್ಯೋಕ್ ಜೀವತಿ। ನ ಅಸ್ಯ ಅಪರಪುರುಷಾಃ ಕ್ಷೀಯಂತೇ। 'ಉಪ ವಯಂ ತಂ ಭುಂಜಾಮಃ ಅಸ್ಮಿಂಶ್ಚ ಲೋಕೇ ಅಮುಷ್ಮಿಂಶ್ಚ ಯ ಏತಮೇವಂ ವಿದ್ವಾನುಪಾಸ್ತೇ'।

ಅನಂತರ ಅನ್ವಾಹಾರ್ಯಪಚನ ಎಂಬ ಅಗ್ನಿಯು ಉಪಕೋಸಲನಿಗೆ ಉಪದೇಶಿಸಿದನು. 'ವಿಷ್ಣುವು ಚೆನ್ನಾಗಿ ಪಾಲಕನಾದ್ದರಿಂದ 'ಆಪಃ' ಎನಿಸಿ ನೀರಿನಲ್ಲಿದ್ದಾನೆ. ಅಭೀಷ್ಟಗಳನ್ನು ಕೊಡುವುದರಿಂದ ದಿಕ್ ನಾಮಕನಾಗಿ ದಿಕ್ಕುಗಳಲ್ಲಿದ್ದಾನೆ. ಯಾರಿಗೂ ಅಧೀನನಾಗದಿರುವುದರಿಂದ ನಕ್ಷತ್ರನಾಮಕನಾಗಿ ನಕ್ಷತ್ರದಲ್ಲಿದ್ದಾನೆ. ಆನಂದರೂಪನಾದ್ದರಿಂದ ಚಂದ್ರನಾಮಕನಾಗಿ ಚಂದ್ರನಲ್ಲಿದ್ದಾನೆ. ಇದು ವ್ಯಾಪ್ತನಾದ ಪರಮಾತ್ಮನ ಉಪದೇಶ. ಇದು ಅಂತರ್ಯಾಮಿಯಾದ ಪರಮಾತ್ಮನ ಉಪದೇಶ - ಪೂರ್ಣಷಡ್ಗುಣನಾದ ಯಾವ ಭಗವಂತನು ಚಂದ್ರನಲ್ಲಿದ್ದು ದಿವ್ಯದೃಷ್ಟಿಗೋಚರನಾಗಿರುವನೋ ಅವನೇ, ಅಹೇಯನಾದ್ದರಿಂದ ಅಹಂಶಬ್ದವಾಚ್ಯನಾಗಿದ್ದು, ನನ್ನಲ್ಲಿ ಅಂತರ್ಯಾಮಿಯಾಗಿದ್ದಾನೆ. ವ್ಯಾಪ್ತರೂಪಕ್ಕಿಂತ ಯಾವ ವಿಶೇಷವೂ ಇಲ್ಲದೆ ಅಂತರ್ಯಾಮಿಯಾಗಿಯೂ ಇದ್ದಾನೆ.

"ಯಾರು ಇದನ್ನು ತಿಳಿದು ಉಪಾಸನೆ ಮಾಡುತ್ತಾನೋ ಅವನು ಪಾಪಗಳನ್ನು ಪರಿಹರಿಸಿಕೊಂಡು ವೈಕುಂಠಾದಿ ಲೋಕಗಳನ್ನು ಹೊಂದಿ, ಪೂರ್ಣ ಆಯುಸ್ಸನ್ನು ಪಡೆಯುತ್ತಾನೆ. ಯೋಗ್ಯತೆಗನುಗುಣವಾಗಿ ಸರ್ವಜ್ಞನಾಗುತ್ತಾನೆ. ಅವನಿಗೆ ಭೃತ್ಯರ ಕೊರತೆಯಾಗುವುದಿಲ್ಲ. 'ಇಂತಹ ವಿಷ್ಣೂಪಾಸಕನನ್ನು ನಾವು ಇಹ ಪರಗಳೆರಡರಲ್ಲಿಯೂ ಬಿಡದೆ ಆಶ್ರಯಿಸುತ್ತೇವೆ' ಎಂದೇ ಭೃತ್ಯರು ಹೇಳುತ್ತಾರೆ" ಎಂದು ಅನ್ವಾಹಾರ್ಯಪಚನನು ಹೇಳಿದನು.

ಅಥ ಹ ಏವಮಾಹವನೀಯಃ ಅನುಶಶಾಸ – 'ಪ್ರಾಣಃ। ಆಕಾಶಃ। ದ್ಯೌಃ। ವಿದ್ಯುತ್।' ಇತಿ। 'ಯ ಏಷ ವಿದ್ಯುತಿ ಪುರುಷೋ ದೃಶ್ಯತೇ ಸೋಽಹಮಸ್ಮಿಸ ಏವಾಹಮಸ್ಮಿ' ಇತಿ।

ಸ ಯ ಏತಮೇವಂ ವಿದ್ವಾನ್ ಉಪಾಸ್ತೇ ಅಪಹತೇ ಪಾಪಕೃತ್ಯಾಂ। ಲೋಕೀ ಭವತಿ। ಸರ್ವಮಾಯುರೇತಿ। ಜ್ಯೋಕ್ ಜೀವತಿ। ನ ಅಸ್ಯ ಅಪರಪುರುಷಾಃ ಕ್ಷೀಯಂತೇ। 'ಉಪ ವಯಂ ತಂ ಭುಂಜಾಮಃ ಅಸ್ಮಿಂಶ್ಚ ಲೋಕೇ ಅಮುಷ್ಮಿಂಶ್ಚ ಯ ಏತಮೇವಂ ವಿದ್ವಾನುಪಾಸ್ತೇ।'

ಅನಂತರ ಆಹವನೀಯ ಎಂಬ ಅಗ್ನಿಯು ಉಪಕೋಸಲನಿಗೆ ಉಪದೇಶಿಸಿದನು. 'ವಿಷ್ಣುವು ಬಲರೂಪನಾದ್ದರಿಂದ ಪ್ರಾಣನಾಮಕನಾಗಿ ಪ್ರಾಣನಲ್ಲಿ, ಅವಕಾಶಪ್ರದನಾದ್ದರಿಂದ ಆಕಾಶನಾಮಕನಾಗಿ

ಆಕಾಶದಲ್ಲಿ, ಪ್ರಕಾಶಸ್ವರೂಪನಾದ್ದರಿಂದ ದ್ಯುನಾಮಕನಾಗಿ ದ್ಯುಲೋಕದಲ್ಲಿ, ಎಲ್ಲವನ್ನೂ ತಿಳಿದಿರುವುದರಿಂದ ವಿದ್ಯುತ್‌ನಾಮಕನಾಗಿ ವಿದ್ಯುತ್ತಿನಲ್ಲಿ ಇದ್ದಾನೆ. ಇದು ವ್ಯಾಪ್ತನಾದ ಪರಮಾತ್ಮನ ಉಪದೇಶ. ಇನ್ನು ಅಂತರ್ಯಾಮಿಯಾದ ಪರಮಾತ್ಮನ ಉಪದೇಶ - ಯಾವ ಭಗವಂತನು ವಿದ್ಯುತ್ತಿನಲ್ಲಿ ಪೂರ್ಣಷಡ್ಗುಣನಾಗಿ ದಿವ್ಯದೃಷ್ಟಿಗೆ ಗೋಚರನಾಗಿರುವನೋ ಅವನೇ ನನ್ನಲ್ಲಿ ಅಂತರ್ಯಾಮಿಯಾಗಿದ್ದಾನೆ. ಅಹೇಯನಾದ್ದರಿಂದ ಅಹಂ ಶಬ್ದವಾಚ್ಯನಾಗಿದ್ದಾನೆ. ವ್ಯಾಪ್ತರೂಪಕ್ಕಿಂತ ಯಾವ ವ್ಯತ್ಯಾಸವೂ ಇಲ್ಲದೇ ನನ್ನಲ್ಲಿ ಅಂತರ್ಯಾಮಿಯಾಗಿಯೂ ಇದ್ದಾನೆ.

ಯಾರು ಈ ವಿಷ್ಣುವನ್ನು ಹೀಗೆ ತಿಳಿದು ಉಪಾಸನೆ ಮಾಡುತ್ತಾನೋ ಅವನು ಪಾಪಗಳನ್ನು ಪರಿಹರಿಸಿಕೊಂಡು ವೈಕುಂಠಾದಿಲೋಕಗಳನ್ನು ಪಡೆದು, ಪೂರ್ಣ ಆಯುಸ್ಸನ್ನು ಹೊಂದುತ್ತಾನೆ. ತನ್ನ ಯೋಗ್ಯತೆಯಂತೆ ಸರ್ವವನ್ನೂ ತಿಳಿಯುತ್ತಾನೆ. ಇವನಿಗೆ ಭೃತ್ಯರ ಕೊರತೆ ಇರುವುದಿಲ್ಲ. 'ಇಂತಹ ವಿಷ್ಣುಭಕ್ತನನ್ನು ನಾವು ಇಹ ಪರ ಲೋಕಗಳೆರಡರಲ್ಲಿಯೂ ಬಿಡದೆ ಆಶ್ರಯಿಸುತ್ತೇವೆ. ಎಂದೇ ಭೃತ್ಯರು ಹೇಳುತ್ತಾರೆ.'' ಎಂದು ಆಹವನೀಯಾಗ್ನಿಯನ್ನು ಉಪದೇಶಿಸಿದನು.

**ತೇ ಹ ಊಚುಃ। 'ಉಪಕೋಸಲ ಏಷಾ ಸೋಮ್ಯ ತೇ ಅಸ್ಮದ್ವಿದ್ಯಾ ಆತ್ಮವಿದ್ಯಾ ಚ। ಆಚಾರ್ಯಸ್ತು ತೇ ಗತಿಂ ವಕ್ತಾ' ಇತಿ। ಆಜಗಾಮ ಹ ಅಸ್ಯ ಆಚಾರ್ಯಃ। ತಮಾಚಾರ್ಯಃ ಅಭ್ಯುವಾದ 'ಉಪಕೋಸಲ' ಇತಿ। 'ಭಗವ' ಇತಿ ಹ ಪ್ರತಿಶುಶ್ರಾವ। 'ಬ್ರಹ್ಮವಿದ ಇವ ಸೋಮ್ಯ ತೇ ಮುಖಂ ಭಾತಿ। ಕೋ ನು ತ್ವಾಽನುಶಶಾಸ' ಇತಿ। 'ಕೋ ನು ಮಾ ಅನುಶಿಷ್ಯಾತ್ ಭೋ' ಇತಿ। ಇಹಾವೇ ವ ನಿಹ್ನುತಃ। ಇಮೇ ನೂನಮೀದೃಶಾ ಅನಾದೃಶಾ' ಇತಿ ಹ ಅಗ್ನೀನ್ ಅಭ್ಯೂದೇ। 'ಕಿಂ ನು ಸೋಮ್ಯ ಕಿಲ ತೇ ಅವೋಚನ್' ಇತಿ। 'ಇದಂ ಇತಿ ಹ ಪ್ರತಿಜಜ್ಞೇ।**

''ಉಪಕೋಸಲ ! ಈ ವರೆಗೆ 'ಸೋಽಹಮಸ್ಮಿ' ಇತ್ಯಾದಿಯಾಗಿ ಅಂತರ್ಯಾಮಿ ವಿದ್ಯೆಯನ್ನೂ 'ಕಂ ಬ್ರಹ್ಮ' ಇತ್ಯಾದಿಯಾಗಿ ಸರ್ವಗತನಾದ ಬ್ರಹ್ಮನ ವಿದ್ಯೆಯನ್ನೂ ನಾವು ಉಪದೇಶಿಸಿದ್ದೇವೆ. ಇದನ್ನು ತಿಳಿಯಬೇಕು ಹೊರತು ಉಪಾಸನೆ ಮಾಡುವಂಥಹುದಲ್ಲ. ಉಪಾಸನೆಯ ಮಾರ್ಗವನ್ನು ನಿನಗೆ ನಿನ್ನ ಆಚಾರ್ಯರೇ ಹೇಳುವರು' ಎಂದು ತ್ರೇತಾಗ್ನಿಗಳು ಹೇಳಿದರು. ಆಗ ಉಪಕೋಸಲನ ಆಚಾರ್ಯರು ಬಂದರು. 'ಉಪಕೋಸಲ !' ಎಂದು ಕರೆದರು. 'ಪೂಜ್ಯರೇ' ಎಂದು ಉಪಕೋಸಲನು ಪ್ರತಿಯಾಗಿ ಕೇಳಿದ. 'ನಿನ್ನ ಮುಖದಲ್ಲಿ ಬ್ರಹ್ಮಜ್ಞಾನಿಯ ಕಾಂತಿ ಕಾಣುತ್ತಿದೆ. ನಿನಗಾರು ಉಪದೇಶಿಸಿದರು?' ಎಂದು ಗುರುಗಳು ಪ್ರಶ್ನಿಸಿದರು. 'ಬ್ರಹ್ಮವಿದ್ಯೆಯನ್ನು ಯಾರು ತಾನೇ ನನಗೆ ಉಪದೇಶಿಸಬಲ್ಲರು ? ಭೂಮಿಯಲ್ಲಿರುವ ಮಾನವರೂ, ಪಾತಾಲದಲ್ಲಿರುವ ಅಸುರರೂ, ಭಗವಂತನ ವಿಷಯವನ್ನು ಅಪಲಾಪ ಮಾಡುವವರು. ಉಪದೇಶಕ್ಕೆ ಅಸಮರ್ಥರು. ನನಗೆ ಉಪದೇಶಿಸಿದವರು ದೇವತೆಗಳು ಈ ಅಗ್ನಿಯಂತೆ ಇರುವವರೂ ಜ್ವಾಲೆಯ ಬಣ್ಣದವರೂ ಮತ್ತು ಹಸ್ತಪಾದಾದಿ ಅವಯವಗಳುಳ್ಳವರೂ ಆಗಿದ್ದರು. ಅವರೆ ಪ್ರತ್ಯಕ್ಷರಾಗಿ ನನಗೆ ಉಪದೇಶಿಸಿದರು' ಎಂದು ಉಪಕೋಸಲನು ತನಗೆ ಉಪದೇಶಿಸಿದವರು ಅಗ್ನಿಗಳೆಂಬ ವಿಷಯವನ್ನು ಹೇಳಿದನು. 'ಅವರು ನಿನಗೆ ಏನು ಉಪದೇಶಿಸಿದರು? ಎಂದು ಗುರುಗಳು ಕೇಳಿದರು. ಉಪಕೋಸಲನು ಅಗ್ನಿಗಳು ಇದನ್ನು ಉಪದೇಶಿಸಿದರು ಎಂದು ಅನುವಾದ ಮಾಡಿದ.

ಅಂತರಾಧಿಕರಣ (೧-೨-೪)

'ಲೋಕಾನ್ ವಾವ ಕಿಲ ಸೋಮ್ಯ ತೇ ಅವೋಚನ್ । ಅಹಂ ತು ತೇ ತದ್ ವಕ್ಷ್ಯಾಮಿ । ತದ್
ಯಥಾ ಪುಷ್ಕರಪಲಾಶೇ ಆಪೋ ನ ಶ್ಲಿಷ್ಯಂತೇ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ' ಇತಿ ।
'ಬ್ರವೀತು ಮೇ ಭಗವಾನ್' ಇತಿ । ತಸ್ಮೈಹ ಉವಾಚ ।

'ಯ ಏಷಃ ಅಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾ' ಇತಿ ಹ ಉವಾಚ ।
'ಏತದಮೃತಮಭಯಮೇತದ್ ಬ್ರಹ್ಮ । ಏತಸ್ಮಿನ್ ನ ಕಿಂಚನ ಶ್ಲಿಷ್ಯತಿ ।
ತದ್ ಯದ್ಯಪ್ಯಸ್ಮಿನ್ ಸರ್ಪಿರ್ವಾ ಉದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ ।'

ಸತ್ಯಕಾಮನು ಉಪಕೋಸಲನಿಗೆ ಹೇಳಿದ - 'ಉಪಕೋಸಲ ! ಅಗ್ನಿಗಳು ನಿನಗೆ ಉಪದೇಶಿಸಿದ್ದು ಸರ್ವಲೋಕಾಧಾರವಾದ ಅಂತರ್ಯಾಮಿ ಭಗವದ್ರೂಪಗಳಲ್ಲವೇ? ಅವು ಕೇವಲ ತಿಳಿಯಲು ಮಾತ್ರ ಯೋಗ್ಯ ಹೊರತು ಉಪಾಸನೆಗೆ ಮತ್ತು ಹೊಂದಲು ಯೋಗ್ಯವಲ್ಲ. ನಾನು ಮಾತ್ರ ನಿನಗೆ, ಯಾವ ಬ್ರಹ್ಮನ ಜ್ಞಾನವನ್ನು ಪಡೆದರೆ ಆ ಜ್ಞಾನಿಗೆ ಕಮಲಪತ್ರದಲ್ಲಿ ನೀರು ಅಂಟದಿರುವಂತೆ 'ಪಾಪಕರ್ಮ ಲೇಪವಾಗಲಾರದೋ ಅಂತಹ ಬ್ರಹ್ಮನನ್ನು ಉಪದೇಶಿಸುತ್ತೇನೆ'.

ಪೂಜ್ಯರು ಉಪದೇಶಿಸಬೇಕೆಂದು ಉಪಕೋಸಲನು ಕೇಳಿಕೊಂಡನು. ಆಗ ಆಚಾರ್ಯರು ಉಪದೇಶಿಸಿದರು - 'ಜ್ಞಾನಿಗಳಿಗೆ ದ್ವಿವ್ಯದೃಷ್ಟಿಯಿಂದ ಕಣ್ಣಿನೊಳಗೆ ಯಾವ ಪುರುಷನು ಗೋಚರನಾಗುವನೋ ಅವನೇ ವಾಮನ ಎಂಬ ಹೆಸರುಳ್ಳ ಪರಮಾತ್ಮನಾಗಿದ್ದಾನೆ' ಎಂದು ಹೇಳಿದರು. 'ಅವನು ಸ್ವತಃ ನಿತ್ಯ ಮುಕ್ತನೂ ಭಯರಹಿತನೂ ಗುಣಪೂರ್ಣನೂ ಆಗಿದ್ದಾನೆ. ಅವನಿಗೆ ಯಾವುದರ ಲೇಪವೂ ಇಲ್ಲ. ಇಂತಹ ಅಸಂಗನಾದ ಪರಮಾತ್ಮನು ಕಣ್ಣಿನಲ್ಲಿರುವುದರಿಂದಲೇ ಯಾರಾದರೂ ಕಣ್ಣಿನಲ್ಲಿ ತುಪ್ಪವನ್ನೋ ನೀರನ್ನೋ ಹಾಕಿದರೆ ಅದು ಕಣ್ಣಿಗೆ ಅಂಟದಂತೆ ಬದಿಯಿಂದ ಹರಿದು ಹೋಗುತ್ತದೆ.

ಏತಂ ಸಂಯದ್ವಾಮ ಇತ್ಯಾಚಕ್ಷತೇ । ಏತಂ ಹಿ ಸರ್ವಾಣಿ ವಾಮಾನಿ ಅಭಿಸಂಯತಿ ।
ಸರ್ವಾಣಿ ಏನಂ ವಾಮಾನ್ಯಭಿಸಂಯಂತಿ ಯ ಏವಂ ವೇದ ।

ಏಷ ಉ ಏವ ವಾಮಾನಿಃ । ಏಷ ಹಿ ಸರ್ವಾಣಿ ವಾಮಾನಿ ನಯತಿ ।
ಸರ್ವಾಣಿ ವಾಮಾನಿ ನಯತಿ ಯ ಏವಂ ವೇದ ।

ಏಷ ಉ ಏ ವ ಭಾಮನಿಃ । ಏಷ ಹಿ ಸರ್ವೇಷು ಲೋಕೇಷು ಭಾತಿ ।
ಸರ್ವೇಷು ಲೋಕೇಷು ಭಾತಿ ಯ ಏವಂ ವೇದ ।

ಕಣ್ಣಿನಲ್ಲಿರುವ ಅಸಂಗನಾದ ಬ್ರಹ್ಮನನ್ನೇ ಜ್ಞಾನಿಗಳು ಸಂಯದ್ವಾಮ ಎನ್ನುತ್ತಾರೆ. ಏಕೆಂದರೆ 'ವಾಮನಿ' ಎಲ್ಲ ಸೌಂದರ್ಯಗಳು, 'ಏನಂ' ಬ್ರಹ್ಮನನ್ನು 'ಸಂಯತಿ' ಹೊಂದಿವೆ. ಯಾರು ಹೀಗೆ ಬ್ರಹ್ಮನನ್ನು ಸಂಯದ್ವಾಮ ಎಂದು ತಿಳಿಯುವರೋ ಅವರಿಗೂ ಸರ್ವಸೌಂದರ್ಯವು ಪ್ರಾಪ್ತವಾಗುತ್ತದೆ.

ಕಣ್ಣಿನೊಳಗಿನ ಈ ಪರಮಾತ್ಮನೇ ವಾಮನಿ ಎನಿಸಿದ್ದಾನೆ. ಏಕೆಂದರೆ, ವಾಮಾನಿ, ಎಲ್ಲ ಸುಂದರಸ್ತ್ರೀಯರ ಸೌಂದರ್ಯವನ್ನು, ನಯತಿ, ಆ ಸ್ತ್ರೀಯರಿಗೆ ಹೊಂದಿಸುತ್ತಾನೆ. ಯಾರು ಹೀಗೆ ಉಪಾಸನೆ ಮಾಡುವನೋ ಅವನು ಮುಕ್ತಿಯಲ್ಲಿ ತನಗಿಂತ ಅವರರಾದ ಸ್ತ್ರೀಯರ ಸೌಂದರ್ಯವನ್ನು ನಿಯಂತ್ರಿಸುತ್ತಾನೆ.

ಪರಿಪೂರ್ಣಚಂದ್ರಿಕಾ

ಕಣ್ಣಿನೊಳಗಿನ ಈ ವಾಮನಾಖ್ಯ ಬ್ರಹ್ಮನೇ ಭಾಮನಿ ಎನಿಸಿದ್ದಾನೆ. ಏಕೆಂದರೆ ಇವನು ಎಲ್ಲ ಲೋಕಗಳಲ್ಲಿ, ಭಾತಿ ಎಂದರೆ ಪ್ರಕಾಶಿಸುತ್ತಾನೆ. ಯಾರು ಹೀಗೆ ಉಪಾಸನೆ ಮಾಡುವನೋ ಅವನು ಮುಕ್ತಿಯಲ್ಲಿ ಸರ್ವಲೋಕದಲ್ಲಿಯೂ ಪ್ರಕಾಶಿಸುತ್ತಾನೆ.

ಅಥ ಯದು ಚೈವಾಸ್ಮಿನ್ ಶವ್ಯಂ ಕರ್ಮ ಕುರ್ವಂತಿ, ಯದು ಚ ನ, ಅರ್ಚಿಷಮೇವ ಅಭಿಸಂಭವಂತಿ (ವಿಶಂತಿ) । ಅರ್ಚಿಷಃ ಅಹಃ । ಅಹ ಆಪೂರ್ಯಮಾಣಪಕ್ಷಂ । ಆಪೂರ್ಯಮಾಣಪಕ್ಷಾತ್ ಯಾನ್ ಷಟ್ ಉದಙ್ ಏತಿ ಮಾಸಾನ್ ತಾನ್ । ಮಾಸೇಭ್ಯಃ ಸವಂತ್ಸರಂ । ಸಂವತ್ಸರಾದಾದಿತ್ಯಂ । ಆದಿತ್ಯಾತ್ ಚಂದ್ರಮಸಂ । ಚಂದ್ರಮಸೋ ವಿದ್ಯುತಂ ತತ್ಪುರುಷೋ ಮಾನವಃ । ಸ ಏನಾನ್ ಬ್ರಹ್ಮ ಗಮಯತಿ ।

ಕಣ್ಣಿನೊಳಗಿರುವ ಅಸಂಗನಾದ ಪರಮಾತ್ಮನನ್ನು ತಿಳಿದ ಜ್ಞಾನಿಗಳು ಮರಣ ಹೊಂದಿದಾಗ ಅವರಿಗೆ ದಹನಾದಿ ಉತ್ತರ ಕರ್ಮಗಳನ್ನು ಮಾಡಲಿ ಅಥವಾ ಮಾಡದಿರಲಿ, ಮೃತರಾದ ಆ ಜ್ಞಾನಿಗಳಂತೂ ಶ್ರೀಹರಿಯ ಅನುಗ್ರಹದಿಂದ ಅರ್ಚಿರ್ ಲೋಕವನ್ನು ಹೊಂದಿ - ಅಲ್ಲಿಂದ ಅತಿವಾಹಿಕ ಎಂಬ ವಾಯುಲೋಕವನ್ನೂ, ಅನಂತರ ಹಗಲಿಗಭಿಮಾನಿಯಾದ ದೇವತೆಯ ಲೋಕವನ್ನೂ, ಅಲ್ಲಿಂದ ಶುಕ್ಲಪಕ್ಷಾಭಿಮಾನಿ ದೇವತೆಯ ಲೋಕವನ್ನೂ, ಅಲ್ಲಿಂದ ಸೂರ್ಯನು ಉತ್ತರದಲ್ಲಿ ಸಂಚರಿಸುವ ಕಾಲವೆನಿಸಿದ ಉತ್ತರಾಯಣದ ಆರು ತಿಂಗಳಿಗಭಿಮಾನಿಯಾದ ದೇವತೆಯ ಲೋಕವನ್ನೂ, ಅಲ್ಲಿಂದ ಸಂವತ್ಸರಾಭಿಮಾನಿ ಲೋಕವನ್ನೂ, ಅಲ್ಲಿಂದ ಆದಿತ್ಯಲೋಕವನ್ನೂ, ಆದಿತ್ಯಲೋಕದಿಂದ ಚಂದ್ರಲೋಕವನ್ನೂ, ಚಂದ್ರಲೋಕದಿಂದ ವೈಶ್ವಾನರ, ಇಂದ್ರ, ಧ್ರುವಲೋಕಗಳ ಮೂಲಕ ವಿದ್ಯುತ್ತಿಗಭಿಮಾನಿಯಾದ ಭಾರತೀದೇವಿಯನ್ನೂ ಹೊಂದುತ್ತಾರೆ. ಬಳಿಕ ಭಾರತಿಯಪತಿಯೂ, ಭಗವಂತನ ಪ್ರಿಯಭೃತ್ಯನೂ ಆದ ವಾಯುವನ್ನು ಹೊಂದುತ್ತಾರೆ.

ಆ ವಾಯುದೇವರು ದೇಹದಲ್ಲಿ ಭಗವಂತನನ್ನು ಉಪಾಸನೆ ಮಾಡುವ ಜ್ಞಾನಿಗಳನ್ನು ಕಾರ್ಯಬ್ರಹ್ಮನೆನಿಸಿದ ಚತುರ್ಮುಖಬ್ರಹ್ಮದೇವರ ಬಳಿಗೂ, ವ್ಯಾಪ್ತ್ಯೋಪಾಸಕ ಜ್ಞಾನಿಗಳನ್ನು ಪರಬ್ರಹ್ಮನೆನಿಸಿದ ಪರಮಾತ್ಮನ ಬಳಿಗೂ ಕರೆದುಕೊಂಡು ಹೋಗುವರು.

**ಪ್ರಕಾಶಃ** – तत्रत्यः चक्षुरन्तस्स्थो विषय इत्यर्थः । अत्र 'अक्षिस्थः' इति वक्तव्ये 'चक्षुः' इत्युक्तिरादित्याभेदस्फोरणाय, "आदित्यश्चक्षुर्भूत्वा" इत्यादेः । अत्राक्षिपदोक्तं चक्षुः प्राचां मतरीत्या देवतारूपं, टीकारीत्या जडरूपमिति ज्ञेयम् ।

ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಚಕ್ಷುರಂತಸ್ಥನಾದವನೇ ಈ ಅಧಿಕರಣದ ವಿಷಯನಾಗಿದ್ದಾನೆಂದರ್ಥ. ವಸ್ತುತಃ ಇಲ್ಲಿ 'ಅಕ್ಷಿಸ್ಥಃ' ಎಂದು ಹೇಳಬೇಕಿತ್ತು. ಆದರೆ ಚಕ್ಷುರಂತಸ್ಥನೆಂದು ಹೇಳಿದ್ದರಿಂದ ಆದಿತ್ಯನಿಗೂ ಚಕ್ಷುಸ್ಸಿಗೂ ಅಭೇದವನ್ನು ತಿಳಿಸಿದ್ದಾರೆ. "ಆದಿತ್ಯಶ್ಚಕ್ಷುರ್ಭೂತ್ವಾ" ಎಂಬ ಪ್ರಮಾಣವಿರುವುದರಿಂದ. ಇಲ್ಲಿಯೂ ಗಮನಿಸಬೇಕಾದ ಅಂಶವೊಂದಿದೆ. ಪ್ರಾಚೀನ ಟೀಕಾಕಾರರ ಪ್ರಕಾರ ಅಕ್ಷಿಯೆಂದರೆ ದೇವತೆಯೆಂದರ್ಥ. ಟೀಕಾರಾಯರ ಪ್ರಕಾರ ಜಡವೆಂದರ್ಥ.

ಅಂತರಾಧಿಕರಣ (೧-೨-೪)

**प्रकाशः** – मुख्यमिति चिन्तानन्तरं किं बाधकमस्त्युत नेति चिन्ता स्पष्टेति नोक्ता । **अक्ष्यभिन्नेति** । वक्ष्यमाणदिशेति भावः । एतच्च हेतुहेतुमद्भावघटनाय । अन्यथाऽऽदित्यस्थपुरुषे प्रयुक्ताहंशब्दस्याग्निपरत्वेऽप्यक्षिस्थस्याग्नित्वानापत्तेः ।

ಗ್ರಂಥದಲ್ಲಿ ಚಿಂತೆಯ ಅನಂತರ ಅಮೃತತ್ವಾದಿಗಳಿಗೆ ಬಾಧಕವಿದೆಯೋ ಇಲ್ಲವೋ? ಎಂಬ ಸಂಶಯವನ್ನು ವಿವಕ್ಷಿಸಬೇಕು. ಇದು ಸ್ಪಷ್ಟವಾದ್ದರಿಂದ ಗ್ರಂಥಕಾರರು ಹೇಳಿರುವುದಿಲ್ಲ. ಗ್ರಂಥದಲ್ಲಿ ಆದಿತ್ಯನನ್ನು ಅಕ್ಷಿಯಿಂದ ಅಭಿನ್ನನೆನ್ನಲಾಗಿದೆ. ಈ ವಿಚಾರವು ಮುಂದೆ ಸ್ಪಷ್ಟವಾಗುತ್ತದೆ. ಹೀಗೆ ಹೇಳಿದ್ದರಿಂದ ಹೇತುಹೇತುಮದ್ಭಾವವನ್ನು ತಿಳಿಸಿದ್ದಾರೆ. ಇಲ್ಲದಿದ್ದರೆ ಆದಿತ್ಯನಲ್ಲಿರುವ ಪುರುಷನಲ್ಲಿ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದವು ಅಗ್ನಿ ಪರವಾದರೂ ಸಹ ಅಕ್ಷಿಯಲ್ಲಿರುವವನು ಅಗ್ನಿಯೆಂದು ಆಗಲಾರನು.

**प्रकाशः** – **विद्येति** । "उपकोसलैषा सोम्यास्मद्विद्याऽऽत्मविद्या च" इत्युक्तविद्याभेद इत्यर्थः । उपलक्षणमेतत् । सावधारणाभ्यासोऽर्थवादश्चेत्यपि बोध्यम् ।

'ವಿದ್ಯಾಭೇದಾವೆಂದರೆ' 'ಉಪಕೋಸಲ ಏಷಾ ಸೋಮ್ಯ ತೇ ಅಸ್ಮದ್ವಿದ್ಯಾ ಆತ್ಮವಿದ್ಯಾ ಚ' ಎಂದು ಹೇಳಲ್ಪಟ್ಟ ವಿದ್ಯಾಭೇದವೆಂದರ್ಥ. ಉಪಲಕ್ಷಣಯಾ ಸಾವಧಾರಣವಾದ ಅಭ್ಯಾಸ ಹಾಗೂ ಅರ್ಥವಾದವನ್ನೂ ಸಹ ವಿವಕ್ಷಿಸಬೇಕು.

**प्रकाशः** – यदा विद्याभेदो न युक्तः तदा "कं ब्रह्म" इत्याद्यात्मविद्या, "य एषोऽन्तरादित्ये" इति विद्या त्वस्मद्विद्येति वाच्यत्वादादित्यस्थपुरुषे प्रयुक्ताहं-शब्दस्याग्निपरत्वात् बाधकात् तदभिन्नाक्षिस्थे श्रुतामृतत्वादिकं गौणमित्यग्निश्रुत्यादि-बलादग्निरेव चक्षुरन्तस्स्थ इति पूर्वपक्षे फलम्,

यदा तु घटते तदाऽहंशब्दस्य शास्त्रदृष्ट्या ब्रह्मपरत्वसम्भवाद्बाधका-भावेनामृतत्वादिकं मुख्यमेवेति तद्बलाद्विष्णुरिति सिद्धान्ते फलमिति स्पष्टमिति भावः ।

ಒಂದುವೇಳೆ ವಿದ್ಯಾಭೇದವು ಅಯುಕ್ತವಾದರೆ ಆವಾಗ "ಕಂ ಬ್ರಹ್ಮ" ಎಂಬುದು ಅಧ್ಯಾತ್ಮವಿದ್ಯೆಯೆಂದು "ಯ ಏಷೋಽಂತರಾದಿತ್ಯೇ" ಎಂಬ ವಿದ್ಯೆಯು ಅಸ್ಮದ್ವಿದ್ಯೆಯೆಂದು ಹೇಳಬೇಕಾಗುತ್ತದೆ. ಆವಾಗ ಆದಿತ್ಯಸ್ಥ ಪುರುಷನಲ್ಲಿ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದವು ಅಗ್ನಿ ಪರವಾಗುವುದರಿಂದ ಬಾಧಕವಶಾತ್ ಅಗ್ನಿಯಿಂದ ಅಭಿನ್ನನಾದ ಕಣ್ಣಿನಲ್ಲಿರುವವನಲ್ಲಿ ಕೇಳಿಸಲ್ಪಟ್ಟ ಅಮೃತತ್ವಾದಿಗಳನ್ನು ಗೌಣವೆನ್ನಬೇಕಾಗುತ್ತದೆ. ಹೀಗೆ ಅಗ್ನಿಶ್ರುತ್ಯಾದಿಗಳ ಬಲದಿಂದ ಅಗ್ನಿಯೇ ಚಕ್ಷುರಂತಸ್ಥನಾಗಿದ್ದಾನೆಂದು ಸಿದ್ಧವಾಗುತ್ತದೆ. ಇದು ಪೂರ್ವಪಕ್ಷದ ಫಲ.

ಒಂದು ವೇಳೆ ವಿದ್ಯಾಭೇದವು ಕೂಡುವುದಾದರೆ 'ಅಹಂ' ಶಬ್ದವು ಶಾಸ್ತ್ರದ ಪ್ರಕಾರ ಬ್ರಹ್ಮಪರವಾಗುತ್ತದೆ. ಆವಾಗ ಯಾವುದೇ ಬಾಧಕವಿಲ್ಲದ ಕಾರಣ ಅಮೃತತ್ವಾದಿಗಳು ಮುಖ್ಯವೇ ಆಗುತ್ತವೆ. ಇಂತಹ ಅಮೃತತ್ವಾದಿ ಲಿಂಗಗಳ ಬಲದಿಂದ ವಿಷ್ಣುವೇ ಶ್ರುತಿಪ್ರತಿಪಾದ್ಯನಾಗುತ್ತಾನೆಂಬುದು ಸಿದ್ಧಾಂತದ ಫಲ.

**प्रकाशः** – नन्वत्र वक्ष्यमाणदिशा टीकादिरीत्या चादित्यवाक्येऽग्निप्रयुक्ताहंशब्द-सावधारणाभ्यासार्थवादविद्याभेदानां भावेन तद्बलात्तस्याग्निपरत्वं निर्धार्याक्षि-वाक्यस्यापि तदनुसारेणाग्निपरत्वमुच्यते पूर्वपक्षे, न त्वक्षिवाक्यस्थप्रापकबलेन, तत्र तदभावात् । तथा चादित्यवाक्यमेवोदाहृत्यादित्यान्तरस्थः किमग्निर्विष्णुर्वेति चिन्ता, तदर्थं ''सोऽहं'' इत्यग्निप्रयुक्तोऽहंशब्दोऽग्निपरो विष्णुपरो वेति, तदर्थं तस्य विष्णुपरत्वे ''सोऽहमस्मि स एवाहमस्मि'' इत्यादिसावधारणाभ्यासार्थवाद-विद्याभेदोक्तयो न युज्यन्ते युज्यन्ते वेति चिन्तनीयम् । यदि न युज्यन्ते, तदाऽग्नेरेव आदित्यस्थत्वं, अन्यथा तु विष्णोरिति फलिष्यति । आदित्यादिस्थत्वेनोक्तानन्दमयाक्षेपश्च ऋजुर्भवति । आदित्यस्थस्य विष्णुत्वं चार्थादक्षिस्थोऽपि स एवेति सिध्यति । तथा च सूत्रेऽक्षिवाक्योपादानाय तत्रत्यात्मशब्दार्थोक्तिपरशब्दोऽपि व्यर्थ इति 'अन्तः' इत्येव सूत्रं स्यात्, 'अन्तरः' इत्यपि न वक्तव्यमिति लाघवम् । ''स्थानादि'' इति सूत्रं च न कर्तव्यं स्यादिति चेत्

ಮುಂದೆ ಹೇಳುವ ಟೀಕಾ ಮಾತಿನ ಪ್ರಕಾರ ಆದಿತ್ಯವಾಕ್ಯವನ್ನೇ ಉದಾಹರಿಸಬಹುದು. ಏಕೆಂದರೆ ಅದರಲ್ಲಿ ಅಗ್ನಿಯಿಂದ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದ ಅವಧಾರಣಸಹಿತವಾದ ಅಭ್ಯಾಸ, ಅರ್ಥವಾದ ಹಾಗೂ ವಿದ್ಯಾಪ್ರಭೇದಗಳೆಲ್ಲವೂ ಸ್ಪಷ್ಟವಾಗಿ ಇರುತ್ತವೆ. ಇವುಗಳ ಬಲದಿಂದ ಅಗ್ನಿಯೇ ಶ್ರುತಿಯಿಂದ ಪ್ರತಿಪಾದ್ಯನೆಂದು ನಿರ್ಧರಿಸಬಹುದು. ಈ ಆದಿತ್ಯವಾಕ್ಯಕ್ಕೆ ಅನುಸಾರಿಯಾಗಿ ''ಯ ಏಷೋಽಂತರಕ್ಷಿಣಿ'' ಎಂಬ ಅಕ್ಷಿವಾಕ್ಯವನ್ನೂ ಸಹ ಅಗ್ನಿಪರವೆಂದು ಪೂರ್ವಪಕ್ಷದಲ್ಲಿ ಸಮರ್ಥಿಸಬಹುದು ಹೊರತು ಅಕ್ಷಿವಾಕ್ಯದಲ್ಲಿರುವ ಲಿಂಗಗಳ ಬಲದಿಂದ ಅಗ್ನಿಪರವೆಂದು ಹೇಳಬೇಕಾಗಿಲ್ಲ. ಏಕೆಂದರೆ ಅಕ್ಷಿವಾಕ್ಯದಲ್ಲಿ ಅಂತಹ ಲಿಂಗಗಳೇ ಇಲ್ಲ.

ಆದ್ದರಿಂದ ಆದಿತ್ಯವಾಕ್ಯವನ್ನೇ ಉದಾಹರಿಸಿ ಆದಿತ್ಯನಲ್ಲಿರುವ ಅಂತಸ್ಥನು ಅಗ್ನಿಯೋ? ಅಥವಾ ವಿಷ್ಣುವೋ? ಎಂದು ಸಂಶಯ. ಈ ಸಂಶಯ ಪ್ರರಿಹಾರಕ್ಕಾಗಿ 'ಸೋಽಹಂ' ಎಂಬ ಅಗ್ನಿಯಿಂದ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದವು ಅಗ್ನಿಪರವೋ? ಅಥವಾ ವಿಷ್ಣುಪರವೋ ? ಎಂಬ ಸಂಶಯವು ಪರಿಹಾರವಾಗಬೇಕು. ಈ ಸಂಶಯ ಪರಿಹಾರವಾಗಬೇಕೆಂದರೆ ಆ ಶ್ರುತಿಯು ವಿಷ್ಣುಪರವಾದರೆ ''ಸೋಽಹಮಸ್ಮಿ ಸ ಏವಾಹಮಸ್ಮಿ'' ಇತ್ಯಾದಿಯಾದ ಸಾವಧಾರಣವಾದ ಅರ್ಥಬಾಧ ಹಾಗೂ ವಿದ್ಯಾಪ್ರಭೇದಗಳು ಅಯುಕ್ತವಾಗುತ್ತದೋ? ಅಥವಾ ಯುಕ್ತವಾಗುತ್ತದೋ? ಎಂಬ ಸಂಶಯ

ಪರಿಹಾರವಾಗಬೇಕು. ಇದರ ಪರಿಹಾರಕ್ಕಾಗಿ ವಿದ್ಯಾಪ್ರಭೇದಗಳು ಅಯುಕ್ತವಾದರೆ ಅಗ್ನಿಯೇ ಆದಿತ್ಯಾಂತರ್ಗತನಾಗುತ್ತಾನೆ. ಇಲ್ಲದ್ದಿದರೆ ವಿಷ್ಣುವೇ ಆದಿತ್ಯಾಂತರ್ಗತನಾಗುತ್ತಾನೆಂಬುದು ಪರಿಹಾರವಾಗಬೇಕು.

ಆದಿತ್ಯವಾಕ್ಯವನ್ನು ವಿಷಯವೆಂದು ಪರಿಗಣಿಸಿದಾಗ ಆದಿತ್ಯಾಂತರ್ಗತನೆಂದು ಹೇಳಲ್ಪಟ್ಟವನು ಆನಂದಮಯನೂ ಸಹ ಆಗಲಾರನೆಂಬ ಆಕ್ಷೇಪವು ಋಜುವಾಗುತ್ತದೆ. ಆದಿತ್ಯಾಂತರ್ಗತನು ವಿಷ್ಣುವಾದರೆ ಅರ್ಥಾತ್ ಆಕ್ಷಿಪ್ತನೂ ಸಹ ವಿಷ್ಣುವೇ ಆಗುತ್ತಾನೆಂದು ಸಿದ್ಧವಾಗುತ್ತದೆ. ಆದ್ದರಿಂದ ಹೀಗೆ ಆದಿತ್ಯವಾಕ್ಯವನ್ನು ವಿಷಯವೆಂದು ಹೇಳಿದಾಗ ಸೂತ್ರದಲ್ಲಿರುವ "ರ" ಎಂಬಕ್ಷರವೂ ಸಹ ಅಯುಕ್ತವಾಗುತ್ತದೆ. ಏಕೆಂದರೆ ಅಕ್ಷಿವಾಕ್ಯದಲ್ಲಿರುವ ಆತ್ಮಶಬ್ದಾರ್ಥವನ್ನು ನಿರೂಪಿಸುವುದಕ್ಕಾಗಿ ಸೂತ್ರದಲ್ಲಿ "ರ" ಎಂಬಕ್ಷರವನ್ನು ಉಲ್ಲೇಖಿಸಿದ್ದಾರೆ. ಅಕ್ಷಿವಾಕ್ಯವು ವಿಷಯವಾಗದಿದ್ದಾಗ ಕೇವಲ 'ಅಂತಃ' ಎಂದಷ್ಟೇ ನಿರ್ದೇಶಿಸಿದರೆ ಸಾಕು. 'ಅಂತರಃ' ಎಂದು ಹೇಳುವುದಕ್ಕಿಂತ 'ಅಂತಃ' ಎಂದು ಹೇಳುವುದರಲ್ಲಿ ಲಾಘವವಿದೆ. ಅಷ್ಟೇ ಅಲ್ಲದೆ ಸ್ಥಾನಾದಿ ಸೂತ್ರಗಳೂ ಸಹ ವ್ಯರ್ಥವಾಗುತ್ತವೆ. ಈ ಎಲ್ಲಾ ಕಾರಣಗಳಿಂದ ಆದಿತ್ಯವನ್ನು ವಿಷಯವಾಕ್ಯವನ್ನಾಗಿ ಪರಿಗಣಿಸಿ ಸೂತ್ರದಲ್ಲಿ 'ಅಂತಃ' ಎಂದಷ್ಟೇ ಹೇಳಿದರೆ ಸಾಕು. ಮುಂದಿನ ಸೂತ್ರಗಳೂ ಸಹ ಬೇಕಾಗಿರುವುದಿಲ್ಲ.

**प्रकाशः –** मैवं, बलवद्विष्णुश्रुतिलिङ्गादिबलेनाऽऽदित्यस्थस्य विष्णुत्वे निर्णीते सत्येवाहंशब्दादेः शास्त्रदृष्ट्यादिना विष्णौ घटनाया वर्णनीयत्वात् । विष्णुश्रुत्यादेश्चाक्षिवाक्य एव भावेनादित्यवाक्ये विष्णुपरत्वावधारणस्याक्षिस्थस्य विष्णुत्वनिर्णयाधीनत्वेनाक्षिवाक्यस्यैवोदाहर्तव्यत्वात् ।

नच "सुखविशिष्ट" इत्युक्तेन "कं ब्रह्म" इति प्रकरणेनादित्यस्थस्य विष्णुत्वनिर्णयोऽस्त्विति शङ्क्यं, तस्याग्निप्रयुक्ताहंश्रुत्यादिना विच्छेदस्य पूर्वपक्षिणा चोद्यमानत्वात् ।

ಸಮಾಧಾನ - ಇದು ತಪ್ಪು. ಅಕ್ಷಿವಾಕ್ಯವನ್ನೇ ಉದಾಹರಿಸುವುದು ಯುಕ್ತವಾಗಿದೆ. ಏಕೆಂದರೆ ಬಲಿಷ್ಠವಾದ ವಿಷ್ಣುಶ್ರುತಿ ಹಾಗೂ ಲಿಂಗಗಳ ಬಲದಿಂದ ಆದಿತ್ಯನಲ್ಲಿರುವವನು ವಿಷ್ಣುವೆಂದು ನಿರ್ಣಯವಾದರೆ ಮಾತ್ರ ಶಾಸ್ತ್ರದ ಪ್ರಕಾರ 'ಅಹಂ' ಶಬ್ದಾದಿಗಳು ವಿಷ್ಣುವಿನಲ್ಲಿ ಉಪಪನ್ನವಾಗುತ್ತವೆ. ಆದ್ದರಿಂದ ಬಲಿಷ್ಠವಾದ ವಿಷ್ಣುಶ್ರುತಿ ಹಾಗೂ ಲಿಂಗಗಳೆಲ್ಲವೂ ಅಕ್ಷಿವಾಕ್ಯದಲ್ಲಿರುತ್ತದೆಯೇ ಹೊರತು ಆದಿತ್ಯವಾಕ್ಯದಲ್ಲಿ ಇರುವುದಿಲ್ಲ. ಆದ್ದರಿಂದ ಅಕ್ಷಿಯಲ್ಲಿರುವವನು ವಿಷ್ಣುವೆಂದು ನಿರ್ಣಯವಾದರೆ ಮಾತ್ರ ಆದಿತ್ಯವಾಕ್ಯದಿಂದ ವಿಷ್ಣುವು ಪ್ರತಿಪಾದ್ಯನಾಗಲು ಸಾಧ್ಯ. ಈ ಕಾರಣಕ್ಕೋಸ್ಕರ ಆದಿತ್ಯವಾಕ್ಯವನ್ನೇ ಉದಾಹರಿಸಬೇಕು.

'ಸುಖವಿಶಿಷ್ಟ' ಎಂಬ ಶ್ರುತಿಯಲ್ಲಿ 'ಕಂ ಬ್ರಹ್ಮ' ಎಂಬ ಬ್ರಹ್ಮಪ್ರಕರಣದಿಂದ ಆದಿತ್ಯನಲ್ಲಿರುವವನು ವಿಷ್ಣುವೆಂದು ನಿರ್ಣಯಿಸಬಹುದಲ್ಲವೇ? ಎಂದು ಆಶಂಕಿಸಬಾರದು. ಆ ಪ್ರಕರಣವೂ ಸಹ ಅಗ್ನಿ

ಪ್ರಯುಕ್ತವಾದ 'ಅಹಂ' ಶ್ರುತಿಯ ಬಲದಿಂದ ಅಗ್ನಿಪರವಾಗಬಹುದೆಂದು ಪೂರ್ವಪಕ್ಷಿಯು ಆಕ್ಷೇಪಿಸಬಹುದು. ಆದ್ದರಿಂದ ಅಕ್ಷಿಶ್ರುತಿಯನ್ನೇ ಉದಾಹರಿಸುವುದು ಸಮಂಜಸವಾಗಿದೆ.

**प्रकाशः** – नच ''श्रुतोपनिषत्'' इति सूत्रोक्तोपसंहारस्थब्रह्मलिङ्ग-बलेन प्रकरणाविच्छेदः सुज्ञान इत्यतः ''सुखविशिष्टाभिधानादेव च'' ''श्रुतोपनिषत्कगत्यभिधानाच्च'' इत्येव पूर्यत इति वाच्यं, तावता बलवद्विष्णु-श्रुतिलिङ्गानामनुपदर्शनेन प्रकरणमात्रेणाहंशब्दाभ्यासादेर्बाधायोगाद्यथान्यासमे-वानवद्यम् ।

'ಶ್ರುತೋಪನಿಷತ್' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಉಪಸಂಹಾರದಲ್ಲಿರುವ ಬ್ರಹ್ಮನ ಬಲದಿಂದಲೇ ಬ್ರಹ್ಮಪ್ರಕರಣದ ವಿಚ್ಛೇದವಾಗುವುದಿಲ್ಲವೆಂದು ತಿಳಿಯಬಹುದಾದ್ದರಿಂದ "ಸುಖವಿಶಿಷ್ಟಾಭಿಧಾನದೇವ ಚ" "ಶ್ರುತೋಪನಿಷತ್ಕಗತ್ಯಭಿಧಾನಾಚ್ಚ" ಎಂಬ ಸೂತ್ರದಿಂದಲೇ ಈ ವಿಷಯವನ್ನು ತಿಳಿಯಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಇಷ್ಟರಿಂದಲೇ ಬಲಿಷ್ಠವಾದ ವಿಷ್ಣುಶ್ರುತಿ ಹಾಗೂ ವಿಷ್ಣುಲಿಂಗಗಳು ಬಾಧಿತವಾಗುವುದಿಲ್ಲ. ಕೇವಲ ಪ್ರಕರಣದ ಬಲದಿಂದ 'ಅಹಂ' ಶಬ್ದಪ್ರಯೋಗ, ಅಭ್ಯಾಸ ಇವುಗಳಿಗೆಲ್ಲಾ ಬಾಧವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅಕ್ಷಿವಾಕ್ಯವನ್ನೇ ಉದಾಹರಿಸಿ ವಸ್ತುಸ್ಥಿತಿಯನ್ನೇ ಕಾಪಾಡುವುದೇ ಸೂಕ್ತ.

**प्रकाशः** – अत एवामृतत्वादिकं किं गौणमित्यादिचिन्तोपदर्शिता । यद्यपि अमृतत्वादेर्मुख्यत्वेऽपि न पूर्वपक्षिणः क्षतिः, तादृशस्यापि तेनाग्नौ शङ्क्यमानत्वात्। तथाऽपि वास्तवाभिप्रायेण गौणं मुख्यमिति कोटिप्रदर्शनं, मुख्यसम्भवस्याभिमान-मात्रत्वात् ।

ಆದ್ದರಿಂದಲೇ ಅಮೃತತ್ವಾದಿಗಳು ಗೌಣವೋ? ಅಲ್ಲವೋ? ಎಂಬ ಸಂಶಯವನ್ನು ತೋರಿಸಲಾಗಿದೆ. ವಾಸ್ತವಿಕವಾಗಿ ಅಮೃತತ್ವಾದಿ ಲಿಂಗಗಳು ಮುಖ್ಯವೆಂದಾದರೂ ಸಹ ಪೂರ್ವಪಕ್ಷಿಗೆ ಹಾನಿಯಿಲ್ಲ. ಮುಖ್ಯವಾದ ಅಮೃತತ್ವಾದಿಗಳನ್ನೇ ಅಗ್ನಿಯಲ್ಲಿ ಶಂಕಿಸಬಹುದು. ಆದರೂ ಸಹ ವಸ್ತುಸ್ಥಿತಿಯನ್ನು ಅನುಸರಿಸಿ ಗೌಣವೋ ಮುಖ್ಯವೋ ಎಂಬ ಚಿಂತಾಕೋಟಿಯನ್ನು ಪ್ರದರ್ಶಿಸಿದ್ದಾರೆ.

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम्** – ।। ॐ अन्तर उपपत्तेः ॐ ।। ब्रह्मजिज्ञासा कर्तव्येत्युक्तमित्यानन्दमयाधिकरणभाष्यवदादित्ये विष्णुरित्येतदधिकरणीयभाष्यमपि विचारसाफल्यमात्रपरं नतु सङ्गतिपरमित्यभिप्रेत्य स्वयमवान्तरसङ्गतिमाह – अत्रेति ।।



ಅಂತರಾಧಿಕರಣವು ಪ್ರಾರಂಭವಾಗುತ್ತಿದೆ. ಛಾಂದೋಗ್ಯದ ನಾಲ್ಕನೆಯ ಅಧ್ಯಾಯದಲ್ಲಿ ಉಪಕೋಸಲ ವಿದ್ಯೆಯು ಪ್ರಸಕ್ತವಾಗಿದೆ. ಆ ಸಂದರ್ಭದಲ್ಲಿ "ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ ಏತದಮೃತಮಭಯಮೇತದ್ ಬ್ರಹ್ಮ" ಎಂಬ ವಾಕ್ಯವು ಕೇಳಿಸುತ್ತಿದೆ. ಮೇಲ್ನೋಟಕ್ಕೆ ಅಗ್ನಿಯನ್ನು ಇದು ಪ್ರತಿಪಾದಿಸುವಂತೆ ಕಾಣಿಸುತ್ತಿದೆ. ಆದರೆ ವಿಷ್ಣುವೇ ಪ್ರತಿಪಾದ್ಯನೆಂಬುದು ಅಂತಿಮ ನಿರ್ಣಯ.

ಆದ್ದರಿಂದ ಒಂದುವೇಳೆ ವಿದ್ಯಾಭೇದವು ಅಯುಕ್ತವಾದರೆ ಆವಾಗ "ಕಂ ಬ್ರಹ್ಮ" ಎಂಬುದು ಅಧ್ಯಾತ್ಮವಿದ್ಯೆಯೆಂದು "ಯ ಏಷೋಽಂತರಾದಿತ್ಯೇ" ಎಂಬುದು ಅಸ್ಮದ್‌ವಿದ್ಯೆಯೆಂದು ಹೇಳಬೇಕಾಗುತ್ತದೆ. ಆವಾಗ ಆದಿತ್ಯಸ್ಥ ಪುರುಷನಲ್ಲಿ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದವು ಅಗ್ನಿಪರವಾಗುವುದರಿಂದ ಬಾಧಕವಶಾತ್ ಅಗ್ನಿಯಿಂದ ಅಭಿನ್ನನಾದ ಕಣ್ಣಿನಲ್ಲಿರುವವನಲ್ಲಿ ಕೇಳಿಸಲ್ಪಟ್ಟ ಅಮೃತತ್ವಾದಿಗಳನ್ನು ಗೌಣವೆನ್ನಬೇಕಾಗುತ್ತದೆ. ಹೀಗೆ ಅಗ್ನಿಶ್ರುತ್ಯಾದಿಗಳ ಬಲದಿಂದ ಅಗ್ನಿಯೇ ಚಕ್ಷುರಂತಸ್ಥನಾಗಿದ್ದಾನೆಂದು ಸಿದ್ಧವಾಗುತ್ತದೆ. ಇದು ಪೂರ್ವಪಕ್ಷದ ಫಲ.

ಒಂದು ವೇಳೆ ವಿದ್ಯಾಭೇದವು ಕೂಡುವುದಾದರೆ 'ಅಹಂ' ಶಬ್ದವು ಶಾಸ್ತ್ರದ ಪ್ರಕಾರ ಬ್ರಹ್ಮಪರವಾಗುತ್ತದೆ. ಆವಾಗ ಯಾವುದೇ ಬಾಧಕವಿಲ್ಲದ ಕಾರಣ ಅಮೃತತ್ವಾದಿಗಳು ಮುಖ್ಯವೇ ಆಗುತ್ತವೆ. ಇಂತಹ ಅಮೃತತ್ವಾದಿ ಲಿಂಗಗಳ ಬಲದಿಂದ ವಿಷ್ಣುವೇ ಶ್ರುತಿಪ್ರತಿಪಾದ್ಯನಾಗುತ್ತಾನೆಂಬುದು ಸಿದ್ಧಾಂತದ ಫಲ.





### ಅಕ್ಷಿಶಬ್ದವು ಅಭಿಮಾನಿಪರವೆಂದು ಪೂರ್ವಪಕ್ಷ

**तात्पर्यचन्द्रिका**

**पूर्वपक्षस्तु – चक्षुरन्तस्स्थोऽग्निरेव, "य एष आदित्ये पुरुषो दृश्यते सोऽहमस्मि" इत्यग्निनाऽऽदित्यस्थस्य स्वात्मतयोपदिष्टत्वात्, चक्षुरादित्यदेवतयोश्च "आदित्यश्चक्षुर्भूत्वाऽक्षिणी प्राविशत्" इत्यादिश्रुत्या ऐक्यात् ।**

**यद्यपि "अक्षिणी प्राविशत्" इत्यत्र बाधकवशादक्षिशब्दो नादित्यदेवतापरः, किन्तु जडपरः । तथाऽपि "अन्तरक्षिणि" इत्यत्र चक्षुःपर्यायः स देवतापर एव, अभिमान्यधिकरणन्यायेन तस्याक्ष्यभिमानिदेवतायामेव मुख्यत्वात् ।**

ಪರಿಪೂರ್ಣಚಂದ್ರಿಕಾ

"यश्चक्षुषि तिष्ठन् यश्चक्षुषोऽन्तरः" इति श्रुत्यन्तरेऽन्तरपुरुषाधिकरणत्वेनोक्तस्य चक्षुषः इह "अन्तरक्षिणि" इति प्रत्यभिज्ञानाच्च तत्रोक्तस्य चक्षुषः "यं चक्षुर्न वेद" इति वाक्यशेषेण चेतनत्वात् । स्थानादिसूत्रादौ जडस्य स्थानत्वोक्तिस्तु परम्परया स्थानत्वात् ।

अत एव भाष्ये सन्न्यायरत्नावल्यां च "अक्ष्यादित्ययोरैक्यात्" इत्येवोक्तम् ।

तत्त्वप्रदीपे च "अक्षीन्द्रियप्रेरकादित्ययोरैक्यात्" इत्येवोक्तम् । "अक्ष्यादित्ययोरेकविधत्वात्" इति टीकाऽपि भाष्याद्यनुसारेण प्रकारभेदनिषेधमुखेन प्रकार्यैक्यपरा नेया ।

ಅನುವಾದ - ಪೂರ್ವಪಕ್ಷ - ಚಕ್ಷುರಂತಸ್ಥನಾದವನು ಅಗ್ನಿಯೇ ಆಗಿದ್ದಾನೆ. 'ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ'' ಎಂಬುದಾಗಿ ಅಗ್ನಿಯೇ ತನ್ನನ್ನು ಆದಿತ್ಯನಿಷ್ಠನೆಂದು ಹೇಳಿದ್ದಾನೆ ಚಕ್ಷುರಭಿಮಾನಿದೇವತೆಯು ಹಾಗೂ ಆದಿತ್ಯಾಭಿಮಾನಿದೇವತೆಯು ಒಬ್ಬನೇ ಆಗಿದ್ದಾನೆಂದು 'ಆದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣೀ ಪ್ರಾವಿಶತ್'' ಎಂಬ ಶ್ರುತಿಯಿಂದ ತಿಳಿಯುತ್ತದೆ.

ವಸ್ತುತಃ 'ಅಕ್ಷಿಣಿ ಪ್ರಾವಿಶತ್' ಎಂಬಲ್ಲಿ 'ಅಕ್ಷಿ' ಶಬ್ದವು ಆದಿತ್ಯದೇವತಾಪರವೆನ್ನಲು ಬಾಧಕವಿದೆ. ಆದ್ದರಿಂದ ಜಡಪರವೇ ಆಗಿರುತ್ತದೆ. ಆದರೆ 'ಅಂತರಕ್ಷಿಣಿ ಪುರುಷಃ ಎಂಬಲ್ಲಿರುವ 'ಅಕ್ಷಿ' ಶಬ್ದವು ದೇವತಾಪರವೇ ಆಗುತ್ತದೆ. ಏಕೆಂದರೆ ಈ 'ಅಕ್ಷಿ' ಶಬ್ದವು 'ಚಕ್ಷುಸ್' ಶಬ್ದದ ಪರ್ಯಾಯಪದವಾಗಿದೆ. ಅಭಿಮಾನ್ಯಧಿಕರಣದ ನ್ಯಾಯದಿಂದ 'ಅಕ್ಷಿ' ಶಬ್ದವು ಅಭಿಮಾನಿ ದೇವತೆಯನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೆ.

"ಯಶ್ಚಕ್ಷುಷಿ ತಿಷ್ಠನ್ ಯಶ್ಚಕ್ಷುಷೋಽಂತರಃ'' ಎಂಬ ಮತ್ತೊಂದು ಶ್ರುತಿಯಲ್ಲಿ ಅಂತರ್ಯಾಮಿಯಾದ ಪುರುಷನಿಗೆ ಚಕ್ಷುಸ್ಸನ್ನು ಅಧಿಷ್ಠಾನವೆಂದು ಹೇಳಲಾಗಿದೆ. ಇದೇ ಚಕ್ಷುಸ್ಸಿನ ಪ್ರತ್ಯಭಿಜ್ಞಾನವು 'ಅಂತರಕ್ಷಿಣಿ' ಎಂಬ ಶ್ರುತಿಯಿಂದ ಬರುತ್ತದೆ. ಆದ್ದರಿಂದ 'ಯಶ್ಚಕ್ಷುಷಿ' ಎಂಬ ವಾಕ್ಯದಲ್ಲಿ ಅಂತರ್ಯಾಮಿಪುರುಷನಿಗೆ ಅಧಿಷ್ಠಾನ ಭೂತವಾದ ಚಕ್ಷುಸ್ಸೆಂದರೆ "ಯಂ ಚಕ್ಷುರ್ನ ವೇದ'' ಎಂಬ ವಾಕ್ಯಶೇಷದಿಂದ ಚೇತನವೆಂದು ದೃಢವಾಗುತ್ತದೆ. ಆದ್ದರಿಂದ 'ಚಕ್ಷುಸ್' ಶಬ್ದದ ಪರ್ಯಾಯ ಪದವೆನಿಸಿದ 'ಅಕ್ಷಿ' ಶಬ್ದವೂ ಸಹ ಚೇತನಪರವೇ ಆಗುತ್ತದೆ. 'ಯ ಏಷೋಽಂತರಕ್ಷಿಣಿ' ಎಂಬ ಶ್ರುತಿಯು 'ಅಕ್ಷಿಣೀ ಪ್ರಾವಿಶತ್' ಎಂಬ ಶ್ರುತಿಯಂತೆ ಜಡಪ್ರತಿಪಾದಕವಾಗುವುದಿಲ್ಲವೆಂದು ನಿರ್ಣಯವಾಗುತ್ತದೆ.

ಅಂತರಾಧಿಕರಣ (೧-೨-೪)

'ಸ್ಥಾನಾದಿವ್ಯಪದೇಶಾಚ್ಚ' ಎಂಬ ಸೂತ್ರದಲ್ಲಿ ತುಪ್ಪ ಮೊದಲಾದ ಪದಾರ್ಥಗಳ ಸಂಪರ್ಕವು ಜಡಭೂತವಾದ ಚಕ್ಷುರಿಂದ್ರಿಯಕ್ಕೆ ಇಲ್ಲವೆಂದು ಹೇಳಿದ್ದಾರೆ. ಲೇಪವಿಲ್ಲದಿರುವಿಕೆಯೆಂಬ ಶಕ್ತಿಯು ಜಡದಲ್ಲಿ ಹೇಳಿರುವಾಗ 'ಅಕ್ಷಿ' ಶಬ್ದದಿಂದ ಚೇತನನ್ನು ಹೇಗೆ ವಿವಕ್ಷಿಸುತ್ತೀರಿ? ಎಂದು ಪ್ರಶ್ನಿಸಬಾರದು. ಲೇಪವಿಲ್ಲದಿರುವಿಕೆಯೆಂಬ ಗುಣಕ್ಕೆ ಮುಖ್ಯವಾಗಿ ಆಶ್ರಯನಾದವನು ವಿಷ್ಣುವೇ ಆಗಿದ್ದಾನೆ. ಅಂತಹ ವಿಷ್ಣುವಿಗೆ ಜಡಭೂತವಾದ ಅಕ್ಷಿಯು ಅಧಿಷ್ಠಾನವಾಗಿರುವುದರಿಂದ ಲೇಪವಿಲ್ಲದಿರುವಿಕೆಯೆಂಬ ಗುಣಕ್ಕೆ ಜಡವು ಸ್ಥಾನವಾಗಿದೆ ಎಂದು ಸೂತ್ರವು ಸಮರ್ಥಿಸುತ್ತಿದೆ. ಹಾಗಾದರೆ ಸ್ಥಾನಾದಿಸೂತ್ರದಲ್ಲಿ ಜಡವೇ ಅಂತರ್ಯಾಮಿಪುರುಷನಿಗೆ ಅಧಿಷ್ಠಾನವೆಂದು ಹೇಳಿದೆಯಲ್ಲವೇ? ಎಂದರೆ ಅಂತರ್ಯಾಮಿಪುರುಷನಿಗೆ ಜಡಭೂತವಾದ ಚಕ್ಷುರಿಂದ್ರಿಯವು ಅಭಿಮಾನಿದೇವತೆಯ ಮೂಲಕ ಅಧಿಷ್ಠಾನವಾಗಿದೆ ಹೊರತು ನೇರವಾಗಿ ಆಧಾರವಾಗಿಲ್ಲ. ಆದ್ದರಿಂದಲೇ ಭಾಷ್ಯದಲ್ಲಿ ಮತ್ತು ಸನ್ನ್ಯಾಯರತ್ನಾವಳಿಯಲ್ಲಿ "ಅಕ್ಷ್ಯಾದಿತ್ಯಯೋರೈಕ್ಯಾತ್" ಎಂದು ಅಕ್ಷಿಗೂ ಆದಿತ್ಯನಿಗೂ ಐಕ್ಯವನ್ನು ಹೇಳಿದ್ದಾರೆ. 'ಅಕ್ಷ್ಯಾದಿತ್ಯಯೋಃ' ಎಂಬ ಟೀಕೆಯನ್ನೂ ಸಹ ಭಾಷ್ಯಕ್ಕೆ ಅನುಸಾರಿಯಾಗಿ ಭೇದವನ್ನು ನಿಷೇಧ ಮಾಡುವ ಮೂಲಕ ಅಂದರೆ ಒಂದೇ ಪ್ರಕಾರವನ್ನು ಹೇಳುತ್ತಿದೆಯೆಂದೇ ಅರ್ಥೈಸಬೇಕು.

**प्रकाशः –**

'उपपत्तेः' इत्यादिसिद्धान्तहेतुव्यावर्त्यैरग्निप्रापकश्रुत्यर्थवादाभ्यासैः पूर्वपक्षयन्, "य एषोऽन्तरक्षिणि" इति वाक्ये "अग्निरेवेत्यादिबह्वग्निश्रुति-सद्भावाच्च" इत्यन्तटीकां तावद्व्यनक्ति – **पूर्वपक्षस्त्वित्यादिनाऽग्निपरतेत्यन्तेन ।**

ವಿವರಣೆ - ಪೂರ್ವಪಕ್ಷ ಹೀಗಿದೆ - ಅಂತರಧಿಕರಣದ ಸೂತ್ರದಲ್ಲಿ 'ಉಪಪತ್ತೇಃ' ಎಂಬ ಪದವು ಸಿದ್ಧಾಂತ ಹೇತುವನ್ನು ಸಮರ್ಥಿಸುತ್ತಿದೆ. ಇದರಿಂದ ಅಗ್ನಿಪ್ರಾಪಕವಾದ ಶ್ರುತಿ ಅರ್ಥವಾದ 'ಅಭ್ಯಾಸಾತ್' ಮೊದಲಾದ ಪೂರ್ವಪಕ್ಷ ಯುಕ್ತಿಯೆಲ್ಲವೂ ನಿರಾಸವಾಗುತ್ತದೆ. ಹೀಗೆ ನಿರಾಸವಾಗುವಂತಹ ಪೂರ್ವಪಕ್ಷ ಯುಕ್ತಿಗಳನ್ನು ಪ್ರತಿಪಾದಿಸುವ "'ಯ ಏಷೋಽಂತರಕ್ಷಿಣಿ' ಇತಿ ವಾಕ್ಯೇ ಅಗ್ನಿರೇವ" 'ಯ ಏಷೋಽಂತರಕ್ಷಿಣಿ' ಎಂಬ ವಾಕ್ಯದಲ್ಲಿ ಅಗ್ನಿಯೇ ಪ್ರತಿಪಾದ್ಯನೆಂದು ಪ್ರಾರಂಭವಾಗಿ "ಬಹ್ವಗ್ನಿಶ್ರುತಿಸದ್ಭಾವಾಚ್ಚ" 'ಅನೇಕ ಅಗ್ನಿಶ್ರುತಿಗಳಿರುವುದರಿಂದ' ಎಂಬಲ್ಲಿಯ ತನಕದ ಟೀಕೆಯನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಪೂರ್ವಪಕ್ಷಸ್ತು' ಎಂಬಲ್ಲಿಂದ ಪ್ರಾರಂಭಿಸಿ 'ಅಗ್ನಿಪರತಾ' ಎಂಬಲ್ಲಿಯ ತನಕ.

**प्रकाशः** – नन्वग्निना आदित्यस्थस्य स्वात्मतयोपदेशोऽपि अक्षिस्थस्याग्नित्वं कुत ? इत्यतः, चक्षुरादित्यशब्दयोर्भाष्यतत्त्वप्रदीपाद्यनुरोधेन देवतापरत्वमुपेत्य तत्रोपपत्तिं वदंस्तावत्परिहारमाह – **चक्षुरिति ।**

ಅಗ್ನಿಯು ತನ್ನನ್ನು ಆದಿತ್ಯನಲ್ಲಿರುವವನೆಂದು ಹೇಳಿಕೊಂಡ ಮಾತ್ರದಿಂದ ಅಕ್ಷಿಯಲ್ಲಿರುವವನು ಅಗ್ನಿಯೇ ಏಕಾಗಬೇಕು ? ಎಂಬ ಪ್ರಶ್ನೆಗೆ 'ಚಕ್ಷು' ಶಬ್ದ ಹಾಗೂ 'ಆದಿತ್ಯ' ಶಬ್ದಗಳು ದೇವತಾಪರವಾಗಿವೆಯೆಂದು ಭಾಷ್ಯ ಹಾಗೂ ತತ್ವಪ್ರದೀಪಗಳಲ್ಲಿ ಸಮರ್ಥಿಸಿದ್ದಾರೆ. ಅದರ ಪ್ರಕಾರ ಈ ವಿಷಯದಲ್ಲಿ ಕಾರಣವನ್ನು ನಿರೂಪಿಸುತ್ತಾ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ 'ಚಕ್ಷುಃ' ಇತ್ಯಾದಿ ವಾಕ್ಯದಿಂದ.

**प्रकाशः** – 'अदित्यः' मण्डलदेवता चेतनश्चक्षुरभिमानी भूत्वाऽक्षिगोलके प्राविशादित्यर्थः ।

ननु ''अक्षिणी'' इत्यत्राक्षिशब्दस्य गोलकपरत्वादत्राप्यक्षिशब्दस्य न देवतापरत्वमित्याशङ्क्य साधयति – **यद्यपीति** ।

ಆದಿತ್ಯ ಮಂಡಲಕ್ಕೆ ದೇವತೆಯಾಗಿರುವ ಚೇತನನೇ ಚಕ್ಷುರಿಂದ್ರಿಯಕ್ಕೆ ಅಭಿಮಾನಿಯಾಗಿ ಅಕ್ಷಿಯೆಂಬ ಗೋಲಕದಲ್ಲಿ ಪ್ರವೇಶಿಸಿದನೆಂದು 'ಆದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣೀ ಪ್ರಾವಿಶತ್' ಎಂಬ ಶ್ರುತಿಗೆ ಅರ್ಥ.

'ಅಕ್ಷಿಣೀ' ಎಂಬಲ್ಲಿ 'ಅಕ್ಷಿ' ಶಬ್ದವು ಗೋಲಕಪರವಾದ್ದರಿಂದ ಇಲ್ಲಿರುವ 'ಅಕ್ಷಿ' ಶಬ್ದವೂ ಸಹ ಗೋಲಕಪರವೇ ಆಗಬೇಕು. ದೇವತಾಪರವೆಂದು ಹೇಗೆ ಹೇಳುತ್ತೀರಿ? ಎಂದು ಆಶಂಕಿಸಿ ಉತ್ತರಿಸುತ್ತಿದ್ದಾರೆ. 'ಯದ್ಯಪಿ' ಇತ್ಯಾದಿ ವಾಕ್ಯದಿಂದ.

**प्रकाशः – बाधकेति** । आदित्यदेवतायाः चक्षुर्देवतायां प्रवेशायोगरूपादित्यर्थः। **'चक्षुःपर्यायः'** चक्षुरिन्द्रियपर्यायः, न तदधिष्ठानगोलकपर्याय इत्यर्थः । **'सः'** अक्षिशब्दः ।

'ಬಾಧಕವಶಾತ್' ಎಂದರೆ ಆದಿತ್ಯ ದೇವತೆಯು 'ಚಕ್ಷುಸ್' ಎಂಬ ದೇವತೆಯಲ್ಲಿ ಪ್ರವೇಶ ಮಾಡಲು ಸಾಧ್ಯವಿಲ್ಲವೆಂಬ ಬಾಧಕದಿಂದ ಎಂದರ್ಥ. 'ಚಕ್ಷುಃಪರ್ಯಾಯಃ' ಎಂಬ ಪದಕ್ಕೆ ಚಕ್ಷುರಿಂದ್ರಿಯಕ್ಕೆ ಪರ್ಯಾಯಪದವೆನಿಸಿದ 'ಅಕ್ಷಿ' ಎಂಬ ಶಬ್ದವು ಎಂದರ್ಥ. ಈ 'ಅಕ್ಷಿ' ಶಬ್ದವು ಚಕ್ಷುರಿಂದ್ರಿಯಕ್ಕೆ ಅಧಿಷ್ಠಾನವಾದ ಗೋಲಕಕ್ಕೆ ಪರ್ಯಾಯವಾಗಿಲ್ಲ ಎಂದರ್ಥ. 'ಸಃ' ಎಂದರೆ 'ಅಕ್ಷಿ' ಶಬ್ದವೆಂದರ್ಥ.

**प्रकाशः – अभिमानीति** । द्वितीयस्याद्यपादे ''अभिमानिव्यपदेशस्तु विशेषानुगतिभ्याम्'' इति तृतीयेऽधिकरणे ''मृदब्रवीत्'' इत्यादिवाक्यं प्रमाणं न वेति संशये, मृत्त्वादिहेतुना मृदादेर्जडत्वानुमानात्, अभिमानिचेतनस्यानुपलम्भादि-बाधित्वात्, जडस्य च वक्तृत्वाद्ययोगादप्रमाणमिति प्राप्ते, निरवकाशजडत्वयुक्तिनिद र्षवेदवाक्यप्रामाण्योभयान्यथानुपपत्त्या ।

पृथिव्याद्यभिमानिन्यो देवताः प्रथितौजसः ।

इत्यादिवचनेन च देवतातद्विग्रहतदन्तर्धानशक्त्यादिसिद्धे, अभिमन्यमान-गतमृत्त्वादिमृच्छब्दप्रवृत्तिनिमित्तस्यऽभिमान्यधीनत्वस्याकाशनये,

यतोऽत्यन्तपराधीनं चेतनादप्यचेतनम् ।

इत्युक्तदिशा सिद्धत्वात्, "तदधीनत्वात् इत्यत्रोक्तन्यायेन स्वातन्त्र्यस्य शब्दवृत्तौ मुख्यनिमित्तत्वेन मृदादिशब्दानां अभिमानिषु मृदादिजडेभ्यो मुख्यत्वात् मृदादिशब्दैर्देवताया एवाभिधानमिति वक्तृत्वाद्युपपत्तेः प्रमाणमेवेत्युक्तम् । तेन न्यायेन मुख्यत्वादित्यर्थः । तथा च "मुख्यामुख्ययोर्मुख्ये कार्यसम्प्रत्ययः" इति न्यायेन मुख्यदेवताया एव ग्रहणं, न त्वमुख्यजडस्येति भावः ।

ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್ (೨-೧-೩)

ಈ ಅಧಿಕರಣದಲ್ಲಿ 'ಮೃದಬ್ರವೀತ್' ವಾಕ್ಯವನ್ನು ವಿಚಾರ ಮಾಡಲಾಗಿದೆ. ಇದು ಪ್ರಮಾಣವೋ? ಅಪ್ರಮಾಣವೋ? ಎಂದು ಸಂಶಯ.

ಪೂರ್ವಪಕ್ಷ - ಮೃತ್ವವೆಂಬ ಹೇತುವಿನಿಂದ "ಮೃದಾದಿಗಳನ್ನು" ಜಡವೆಂದು ಸಾಧಿಸಬಹುದು. ಆದ್ದರಿಂದ ಮೃದಭಿಮಾನಿ ದೇವತೆಯು ಕಣ್ಣಿಗೆ ಗೋಚರಿಸುತ್ತಿಲ್ಲ. ಜಡವಾದ ಮಣ್ಣಿಗೆ ಮಾತನಾಡುವ ಸಾಮರ್ಥ್ಯವಿಲ್ಲ. ಆದ್ದರಿಂದ "ಮೃದಬ್ರವೀತ್" ಎಂಬ ವಾಕ್ಯವನ್ನು ಅಪ್ರಮಾಣವೆನ್ನಬೇಕು.

ಸಿದ್ಧಾಂತ - ಜಡತ್ವಯುಕ್ತಿಯು ನಿರವಕಾಶವಾಗಿದೆ. ವಕ್ತೃತ್ವವನ್ನು ಹೇಳುವ ವೇದವಾಕ್ಯವು ನಿರ್ದೋಷವಾಗಿದೆ. ಆದ್ದರಿಂದ ಎರಡನ್ನೂ ಸಹ ಪ್ರಮಾಣವೆಂದೇ ಹೇಳಬೇಕು. ಮೃದಭಿಮಾನಿ ದೇವತೆಗೆ ವಕ್ತೃತ್ವವನ್ನು ಹೇಳದೆ ಈ ಎರಡನ್ನೂ ಪ್ರಮಾಣವೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಉಭಯಾನ್ಯಥಾನುಪಪತ್ತಿಯಿಂದ 'ಮೃತ್' ಶಬ್ದಕ್ಕೆ ಮೃದಭಿಮಾನಿದೇವತೆಯೆಂದು ವ್ಯಾಖ್ಯಾನಿಸಬೇಕು. 'ಪೃಥಿವ್ಯಾದ್ಯಭಿಮಾನಿನ್ಯೋ ದೇವತಾಃ ಪ್ರಥಿತೌಜಸಃ' ಎಂಬ ಸ್ಮೃತಿವಾಕ್ಯವೂ ಸಹ ಈ ವಿಷಯದಲ್ಲಿ ಆಧಾರವಾಗಿದೆ. ಮತ್ತು ಅಭಿಮಾನಿದೇವತೆಗಳಿಗೆ ಅಂತರ್ಧಾನಶಕ್ತಿಯೂ ಸಹ ಇದರಿಂದ ಸಿದ್ಧವಾಗುತ್ತದೆ. 'ಮೃತ್' ಶಬ್ದದ ಪ್ರವೃತ್ತಿನಿಮಿತ್ತವಾದ ಮೃತ್ವವು ಮೃದಭಿಮಾನಿ ದೇವತೆಗಳ ಅಧೀನವಾಗಿದೆ. ಈ ವಿಚಾರವು ಆಕಾಶಾಧಿಕರಣದಲ್ಲಿ 'ಯತೋಽತ್ಯಂತಪರಾಧೀನಂ ಚೇತನಾದಪ್ಯಚೇತನಮ್' ಚೇತನರಿಗಿಂತ ಅಚೇತನವು ಮತ್ತಷ್ಟು ಅಸ್ವತಂತ್ರವಾಗಿದೆ ಎಂಬ ಮಾತಿನಿಂದ ಸಿದ್ಧವಾಗಿದೆ.

"ತದಧೀನತ್ವಾತ್" ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ನ್ಯಾಯದಿಂದ ಶಬ್ದಗಳ ಪ್ರವೃತ್ತಿಗೆ ಸ್ವಾತಂತ್ರ್ಯವೇ ಮುಖ್ಯವಾದ ಕಾರಣವೆಂದು ನಿರ್ಣಯವಾಗಿದೆ. ಆದ್ದರಿಂದ ಮೃದಾದಿ ಶಬ್ದಗಳು ಮೃದಾದಿ

ಜಡಪದಾರ್ಥಗಳನ್ನು ಹೇಗೆ ಪ್ರತಿಪಾದಿಸುತ್ತವೋ ಅದಕ್ಕಿಂತ ಮುಖ್ಯವಾಗಿ ತದಭಿಮಾನಿ ದೇವತೆಗಳನ್ನೇ ಪ್ರತಿಪಾದಿಸುತ್ತವೆ. ಆದ್ದರಿಂದ 'ಮೃದಬ್ರವೀತ್' ಎಂಬ ವಾಕ್ಯ ಪ್ರತಿಪಾದಿಸುವ ವಕ್ತೃತ್ವವು ಅಭಿಮಾನಿದೇವತೆಗಳಲ್ಲಿ ಉಪಪನ್ನವಾಗುವುದರಿಂದ ಪ್ರಮಾಣವೇ ಆಗಿದೆಯೆಂದು ಅಭಿಮಾನ್ಯಧಿಕರಣದಲ್ಲಿ ಸಿದ್ಧಾಂತ ಮಾಡಿದ್ದಾರೆ.

ಈ ನ್ಯಾಯದಂತೆ ಪ್ರಕೃತದಲ್ಲಿ 'ಅಕ್ಷಿ' ಶಬ್ದವು ಅಭಿಮಾನಿದೇವತಾಪರವಾಗಿದೆಯೆಂದು ತಿಳಿಯಬೇಕು. ಆದ್ದರಿಂದ "ಮುಖ್ಯಾಮುಖ್ಯಯೋರ್ಮುಖ್ಯೇ ಕಾರ್ಯಸಂಪ್ರತ್ಯಯಃ" ಮುಖ್ಯಾಮುಖ್ಯಗಳಲ್ಲಿ ಮುಖ್ಯವನ್ನೇ ಸ್ವೀಕರಿಸಬೇಕೆಂಬ ನ್ಯಾಯದಂತೆ ಮುಖ್ಯಾರ್ಥವಾದ ಗೋಲಕವನ್ನು ಬಿಟ್ಟು ಚಕ್ಷುರಭಿಮಾನಿದೇವತೆಯನ್ನೇ ಸ್ವೀಕರಿಸಬೇಕೆಂದು ತಿಳಿಯಬೇಕು.

**प्रकाशः** – युक्त्यन्तरं चाह – **य इति** । चक्षुश्शब्दस्य देवतापरत्वं कुत इत्यत आह – **तत्रेति** । श्रुत्यन्तरं इत्यर्थः । जडस्य वेदनप्रसक्तेरभावेन "न वेद" इति निषेधायोगात्तदन्यथानुपपत्त्या चेतनत्वसिद्धिरिति भावः । व्यक्तमेतदुत्तरतये ।

ಅಭಿಮಾನಿಯಾದ ದೇವತೆಯನ್ನೇ ಸ್ವೀಕರಿಸಬೇಕೆನ್ನಲು ಮತ್ತೊಂದು ಯುಕ್ತಿಯಿಂದ 'ಚಕ್ಷುಸ್' ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. 'ಚಕ್ಷುಸ್' ಶಬ್ದವು ದೇವತಾಪರವೆಂದೇಕೆ ಒಪ್ಪಬೇಕು? ಎಂಬ ಪ್ರಶ್ನೆಗೆ 'ತತ್ರೋಕ್ತಸ್ಯ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಮತ್ತೊಂದು ಶ್ರುತಿಯಲ್ಲಿ ಹೇಳಲ್ಪಟ್ಟ ಎಂದರ್ಥ. ಜಡವಾದ ಪದಾರ್ಥಕ್ಕೆ ತಿಳುವಳಿಕೆಯು ಸಾಧ್ಯವಿಲ್ಲದ ಕಾರಣ 'ನ ವೇದ' ಎಂದು ತಿಳುವಳಿಕೆಯನ್ನು ನಿಷೇಧಿಸಲಾಗದು. ಇದರ ಅನ್ಯಥಾನುಪಪತ್ತಿಯಿಂದ 'ಚಕ್ಷುಸ್' ಶಬ್ದವು ಚೇತನಪರವಾಗಿದೆಯೆಂದು ಸಿದ್ಧವಾಗುತ್ತದೆ. ಈ ವಿಷಯವು ಮುಂದಿನ ಅಧಿಕರಣದಲ್ಲಿ ಮತ್ತಷ್ಟು ಸ್ಪಷ್ಟವಾಗುತ್ತದೆ.

**प्रकाशः** – ननु 'स्थानादिव्यपदेशाच्च' इति सूत्रे "तद्यदस्मिन् सर्पिर्वोदकं वा सिञ्चति वर्त्मनी एव गच्छति" इति श्रुतौ जडस्यैवाक्ष्णोऽरसङ्गत्वाख्य-शक्तिव्यपदेशादक्षिशब्देन चेतनग्रहणे सर्पिराद्यलेपरूपस्थानशक्तिव्यदेशो न युक्त इत्यत आह – **स्थानेति** ।

'ಸ್ಥಾನಾದಿವ್ಯಪದೇಶಾಚ್ಚ' ಎಂಬ ಸೂತ್ರದಲ್ಲಿ "ತದ್ಯದಸ್ಮಿನ್ ಸರ್ಪಿವೋದಕಂ ವಾ ಸಿಂಚತಿ ವರ್ತ್ಮನಿ ಏವ ಗಚ್ಛತಿ" ಎಂಬುದಾಗಿ ಕಣ್ಣಿಗೆ ಯಾವುದೇ ಜಡ ಪದಾರ್ಥದ ಲೇಪವಿಲ್ಲವೆಂದು ಅತ್ಯಂತ ನಿಖರವಾಗಿ ಹೇಳಿದೆ. ಆದರೆ ನೀವು 'ಅಕ್ಷಿ' ಶಬ್ದದಿಂದ ಚೇತನನ್ನು ವಿವಕ್ಷಿಸಿದರೆ 'ಸರ್ಪಿ' ಮೊದಲಾದ ಪದಾರ್ಥಗಳ ಲೇಪವಿಲ್ಲವೆಂಬ ಶಕ್ತಿಯನ್ನು ಚೇತನರಲ್ಲಿ ಹೇಗೆ ಕೂಡಿಸುತ್ತೀರಿ? ಈ ಪ್ರಶ್ನೆಗೆ 'ಸ್ಥಾನಾದಿಸೂತ್ರಾದೌ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

ಅಂತರಾಧಿಕರಣ (೧-೨-೪)

**प्रकाशः** – असङ्गविष्ण्वाधारदेवताधारत्वाभिप्रायेण सिद्धान्ते तदुक्तिरित्यर्थः । अक्ष्णोर्जडत्वोपगमपरतया प्रतीयमानाऽपि टीका चेतनपरत्वेन नेयेत्याह – **अक्षीति।**

ಅಕ್ಷಿಯಲ್ಲಿರುವ ವಿಷ್ಣುವಿನಲ್ಲಿ ಮಾತ್ರ ಅಸಂಗ ಶಕ್ತಿಯು ಇರುತ್ತದೆ. ಇಂತಹ ವಿಷ್ಣುವಿನ ಸನ್ನಿಧಾನದಿಂದಷ್ಟೇ ಜಡಭೂತವಾದ ಅಕ್ಷಿಯಲ್ಲಿ ಅಸಂಗಶಕ್ತಿಯು ವಿರುದ್ಧವಾಗಿದೆಯೆಂದು ಸಿದ್ಧಾಂತದಲ್ಲಿ ಹೇಳುತ್ತಾರೆ.

ವಸ್ತುತಃ ಟೀಕೆಯಲ್ಲಿರುವ 'ಅಕ್ಷಿ' ಶಬ್ದವು ಜಡಪರವೆಂದು ಭಾಸವಾಗುತ್ತದೆ. ಆದರೂ ಸಹ ಚೇತನಪರವಾಗಿ ವ್ಯಾಖ್ಯಾನಿಸಬೇಕೆಂದು 'ಅಕ್ಷಿ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – विधाशब्दस्य प्रकारार्थत्वात्, 'एकविधत्वात्' इत्यनेनक्ष्णोर्यद्देवताधिष्ठानत्वं तद्देवताधिष्ठानत्वमादित्यमण्डलस्यापि, नतु देवतान्तराधिष्ठानत्वमिति प्रकारभेदनिषेधप्रतीतावप्युभयाधारत्वरूपैकप्रकारवान् प्रकारी चेतन एक एवेति नेयेत्यर्थः ।

ಟೀಕೆಯಲ್ಲಿ 'ಏಕವಿಧತ್ವಾತ್' ಎಂದಿದೆ. ಇಲ್ಲಿ 'ವಿಧ' ಎಂಬ ಶಬ್ದಕ್ಕೆ ಪ್ರಕಾರ ಎಂದರ್ಥ. ಆದ್ದರಿಂದ ಜಡಭೂತವಾದ ಅಕ್ಷಿಯೆಂಬ ಗೋಲಕವು ಯಾವ ದೇವತೆಗೆ ಅಧಿಷ್ಠಾನವಾಗಿದೆಯೋ? ಅಂತಹ ದೇವತೆಗಷ್ಟೇ ಆದಿತ್ಯಮಂಡಲವೂ ಸಹ ಅಧಿಷ್ಠಾನವಾಗಿದೆ ಹೊರತು ಮತ್ತೊಬ್ಬ ದೇವತೆಗೆ ಅಧಿಷ್ಠಾನವಾಗಿಲ್ಲ. ಹೀಗೆ ಪ್ರಕಾರ ಭೇದವನ್ನು ನಿಷೇಧ ಮಾಡುವ ಮೂಲಕ ಉಭಯ ಆಧಾರತ್ವವೆಂಬ ಏಕಪ್ರಕಾರವುಳ್ಳ ಪ್ರಕಾರಿಯಾದ ಚೇತನನಿಗೆ ಐಕ್ಯವನ್ನು ಒಪ್ಪಿ 'ಏಕವಿಧತ್ವಾತ್' ಎಂಬ ಟೀಕೆಯನ್ನು ವ್ಯಾಖ್ಯಾನಿಸಬೇಕು. ಅಂದರೆ ಅಕ್ಷಿಗೋಲಕ ಹಾಗೂ ಆದಿತ್ಯ ಮಂಡಲದಲ್ಲಿ ಒಬ್ಬನೇ ಚೇತನನಿದ್ದಾನೆಂದು ಅಭಿಪ್ರಾಯ.

**गुरुराजीयम्** – अक्ष्यादित्ययौरक्यादित्ययुक्तम् । आदित्यशब्दस्य मण्डलपरत्वे मण्डलस्याक्षिषु प्रवेशासम्भवेन तद्गतचेतनपरत्वात् । य एषोऽन्तरक्षिणीत्यत्राक्षिशब्दस्य मण्डलपरत्वात् । न चात्राप्यक्षिशब्दस्य चेतनपरत्वेनाक्ष्यादित्ययोरैक्यं युक्तमिति वाच्यम् । आदित्यश्चक्षुर्भूत्वाऽक्षिणी प्राविशदित्यत्राक्षिशब्दस्य चेतनपरत्वे तत्रादित्यमण्डलस्थचेतनस्य तत्र प्रवेशासम्भवेनाक्षिशब्दस्य चेतनपरत्वासम्भवेन गोलकपरत्वस्यैव वक्तव्यत्वात् । तदुसारेणान्तरक्षिणीत्यत्रापि गोलकपरत्वस्यैव विद्यमानत्वेन जडस्याक्ष्णश्चेतनेनादित्येनैक्यासम्भवादित्यत आह – **यद्यपीति** ।।

**बाधकवशादिति** ।। अक्षिशब्दस्य चेतनपरत्वे तत्र चेतनप्रवेशानुपपत्तिरूपबाधकवशादित्यर्थः । चक्षुश्शब्दस्य देवतापरत्वेन तत्पर्यायाक्षिशब्दस्यापि देवतापरत्वमेवेत्याह – **चक्षुःपर्याय इति** ।।

ಪರಿಪೂರ್ಣಚಂದ್ರಿಕಾ

अभिमान्यधिकरणन्यायेनेति ।। अभिमन्यमानवाचकानां शब्दानामभिमानिनि मुख्यत्वादिति न्यायेनेत्यर्थः ।

यश्चक्षुषि तिष्ठन्निति श्रुत्यन्तरेतरपुरुषाधिकरणत्वेनोक्तस्य चक्षुषोऽन्तरक्षिणीत्यत्र प्रत्यभिज्ञानेऽप्यन्तरक्षिणीत्यत्रोक्तस्याक्ष्णश्चेतनत्वं कुतः । यश्चक्षुषि तिष्ठन्निति वाक्योक्तस्य चक्षुषोऽप्यचेतनत्वादित्यत आह – तत्रोक्तस्येति।।

ज्ञानप्रसक्तौ सत्यां तदभावश्चेतनत्वाभावेन सम्भवति । अचेतने ज्ञानप्रसक्तेरेवाभावात् । तथा च तदन्यथानुपपत्त्या चक्षुषश्चेतनत्वसिद्धिरित्यर्थः ।




'ಯ ಏಷಃ ಅಂತರಕ್ಷಿಣಿ' ಎಂಬ ಶ್ರುತಿಯಲ್ಲಿ ಚಕ್ಷುರಂತರ್ಗತನಾದವನು ಅಗ್ನಿದೇವತೆಯೆಂದು ಪೂರ್ವಪಕ್ಷ. ಏಕೆಂದರೆ ಅಗ್ನಿಯೇ ಸ್ವತಃ ತನ್ನನ್ನು ಆದಿತ್ಯದೇವತೆಯೆಂದು ಹೇಳಿಕೊಂಡಿದ್ದಾನೆ. ಚಕ್ಷುರಭಿಮಾನಿದೇವತೆ ಹಾಗೂ ಆದಿತ್ಯ ದೇವತೆ ಒಬ್ಬನೇ ಎಂದು 'ಆದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣಿ ಪ್ರಾವಿಶತ್' ಎಂಬ ಶ್ರುತಿಯಿಂದ ತಿಳಿಯುತ್ತದೆ.

'ಅಕ್ಷಿ' ಶಬ್ದವು ಮುಖ್ಯವಾಗಿ ಕಣ್ಣಿಗೆ ಅಭಿಮಾನಿಯಾದ ದೇವತೆಯನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತಿದೆ ಎಂದು ಅಭಿಮಾನ್ಯಧಿಕರಣದಿಂದ ನಿರ್ಣಯವಾಗಿದೆ. ಮತ್ತು 'ಯಶ್ಚಕ್ಷುಷಿ ತಿಷ್ಠನ್' ಎಂಬ ಮತ್ತೊಂದು ಶ್ರುತಿಯಲ್ಲಿ ಪ್ರತಿಪಾದ್ಯವಾದ ಚಕ್ಷುಸ್ಸೇ 'ಅಂತರಕ್ಷಿಣಿ ಪುರುಷಃ' ಎಂಬಲ್ಲಿರುವ ಅಕ್ಷಿಶಬ್ದದಿಂದ ವಿವಕ್ಷಿತವಾಗಿದೆ. ಆ ಶ್ರುತಿಯಲ್ಲಿ ಹೇಳಲ್ಪಟ್ಟ 'ಚಕ್ಷುಷಃ ಯಂ ಚಕ್ಷುರ್ನವೇದ' ಎಂಬ ವಾಕ್ಯಶೇಷದಿಂದ ಚೇತನಪರವೆಂದು ಸಿದ್ಧವಾದ ಮೇಲೆ ಅಂತರಕ್ಷಿಣಿ ಎಂಬಲ್ಲಿರುವ ಅಕ್ಷಿಯೂ ಸಹ ಚೇತನಪರವೇ ಆಗಬೇಕು. ಈ ವಿಷಯದಲ್ಲಿ ಭಾಷ್ಯ ಹಾಗೂ ಸನ್ನ್ಯಾಯರತ್ನಾವಳಿಗಳ ಸಮ್ಮತಿಯೂ ಇದೆ.



• • • • •

### ಅಕ್ಷಿಶಬ್ದವು ಜಡಪರವೂ ಆಗಬಹುದು

## तात्पर्यचन्द्रिका

**यद्वा – "अक्षिणि प्राविशत्" इत्यत्रेव "अन्तरक्षिणि" इत्यत्राप्यक्षिशब्दो जडपरः । एवञ्च स्थानादिसूत्रादिस्वारस्यं, "य एष आदित्ये पुरुषो दृश्यते" "य एषोऽन्तरक्षिणि पुरुषो दृश्यते" इति वाक्यद्वयवैयर्थ्यं च ।**

ಅಂತರಾಧಿಕರಣ (೧-೨-೪)

**न चैवं अक्ष्यादित्ययोर्भिन्नत्वादादित्यस्थत्वेऽप्यक्षिस्थत्वासिद्धिरिति वाच्यम्, "आदित्यश्चक्षुः" इति श्रुतावादित्यमण्डलस्थचेतनस्य जडाक्षिप्रवेशोक्त्या जडाक्ष्यादित्यमण्डलयोरेकचेतनस्थानत्वेनैकविधत्वात् । "य एष आदित्ये पुरुषो दृश्यते" इत्यत्राप्यादित्यपदेन मण्डलमेवोच्यते ।**

**"ऐक्यात्" इति भाष्येऽपि जडाक्ष्यादित्ययोरैक्यायोगात् एकविधत्वमेवाभिप्रेतमिति टीकार्थः ।**

**यद्यप्यंशाधिकरणे "असावादित्यस्त्रिवृत्त्रिवृदिव वै चक्षुः शुक्लं कृष्णां कनीनिका" इति श्रुत्या त्रिवृत्त्वेन अक्ष्यादित्ययोस्साम्यं वक्ष्यते । तथाऽपि न तदिह विवक्ष्यते, तेनादित्यस्थस्याक्षिस्थत्वासिद्धेः ।**

ಅನುವಾದ - ಅಥವಾ 'ಅಕ್ಷಿಣಿ ಪ್ರಾವಿಶತ್' ಎಂಬಲ್ಲಿ ಯಾವರೀತಿಯಾಗಿ 'ಅಕ್ಷಿ' ಶಬ್ದವು ಜಡಪರವಾಗಿದೆಯೋ ಅದರಂತೆ 'ಅಂತರಕ್ಷಿಣಿ ಪುರುಷಃ' ಎಂಬಲ್ಲಿರುವ 'ಅಕ್ಷಿ' ಶಬ್ದವೂ ಜಡಪರ ಆಗಿದೆಯೆಂದೇ ಹೇಳೋಣ. ಇದರಿಂದ ಸ್ಥಾನಾದಿ ಸೂತ್ರಗಳೆಲ್ಲವೂ ಸ್ವರಸವಾಗುತ್ತವೆ. ಮತ್ತು "ಯ ಏಷ ಆದಿತ್ಯೇ ಪುರುಷೋ ದೃಶ್ಯತೇ" "ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ" ಎಂಬೆರಡು ವಾಕ್ಯಗಳನ್ನು ಉಲ್ಲೇಖಿಸುವ ಅವಶ್ಯಕತೆಯೂ ಇರುವುದಿಲ್ಲ.

ಜಡಭೂತವಾದ ಅಕ್ಷಿ ಹಾಗೂ ಆದಿತ್ಯಗಳು ಭಿನ್ನವಾದ್ದರಿಂದ ಆದಿತ್ಯನಲ್ಲಿ ಇದ್ದಾನೆಂದ ಮಾತ್ರಕ್ಕೆ ಅಕ್ಷಿಯಲ್ಲಿದ್ದಾನೆಂದೇನು ಸಿದ್ಧವಾಗುವುದಿಲ್ಲವಲ್ಲ? ಎಂದು ಪ್ರಶ್ನಿಸಬಾರದು. "ಆದಿತ್ಯಶ್ಚಕ್ಷುಃ" ಎಂಬ ಶ್ರುತಿಯಲ್ಲಿ ಆದಿತ್ಯಮಂಡಲದಲ್ಲಿರುವ ಚೇತನನೇ ಜಡಭೂತವಾದ ಅಕ್ಷಿಯೆಂಬ ಗೋಲಕದಲ್ಲಿ ಪ್ರವೇಶಿಸಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ಜಡಭೂತವಾದ 'ಅಕ್ಷಿಗೋಲಕ' ಹಾಗೂ ಆದಿತ್ಯಮಂಡಲಗಳು ಒಬ್ಬನೆ ಚೇತನನಿಗೆ ಅಧಿಷ್ಠಾನವಾಗಿವೆಯೆಂದು ಏಕವಿಧತ್ವವನ್ನು ತಿಳಿಯಬೇಕು.

'ಯ ಏಷಃ ಆದಿತ್ಯೇ ಪುರುಷಃ ದೃಶ್ಯತೇ' ಎಂಬಲ್ಲಿಯೂ ಸಹ ಆದಿತ್ಯಪದದಿಂದ ಆದಿತ್ಯಮಂಡಲವೇ ಪ್ರತಿಪಾದ್ಯವಾಗಿವೆ. 'ಐಕ್ಯಾತ್' ಎಂಬ ಭಾಷ್ಯದಲ್ಲಿಯೂ ಜಡವಾದ ಅಕ್ಷಿಗೋಲಕ ಹಾಗೂ ಆದಿತ್ಯಮಂಡಲಗಳಿಗೆ ಐಕ್ಯವನ್ನು ವಿವಕ್ಷಿಸಲಾಗದ ಕಾರಣ ಏಕವಿಧತ್ವವನ್ನೇ ವಿವಕ್ಷಿಸಬೇಕು. ಅಂದರೆ ಎರಡೂ ಅಧಿಷ್ಠಾನಗಳಲ್ಲಿರುವ ಚೇತನನು ಒಬ್ಬನೇ ಆಗಿದ್ದಾನೆಂದು ಟೀಕೆಯ ಅಭಿಪ್ರಾಯ.

ವಸ್ತುತಃ ಅಂಶಾಧಿಕರಣನ್ಯಾಯವನ್ನು ವಿವಕ್ಷಿಸಿದಾಗ "ಅಸಾವಾದಿತ್ಯಸ್ತ್ರಿವೃತ್ತ್ರಿವೃದಿವ ವೈ ಚಕ್ಷುಃ. ಶುಕ್ಲಂ ಕೃಷ್ಣಂ ಕನೀನೀಕಾ" ಎಂಬ ಶ್ರುತಿಯಲ್ಲಿ ಅಕ್ಷಿಗೋಲಕ ಹಾಗೂ ಸೂರ್ಯಮಂಡಲಗಳು ಬಿಳಿ, ಕಪ್ಪು, ಕೆಂಪು ಬಣ್ಣಗಳಿಂದ ಕೂಡಿರುವುದರಿಂದ ಪೃಥಿವೀ, ಜಲ ಹಾಗೂ ತೇಜಸ್ಸಿನ ವಿಕಾರಭೂತ-

ವಾಗಿವೆಯೆಂದು ತ್ರಿವೃತ್ತ್ವವನ್ನು ಹೇಳಿದ್ದಾರೆ. ತ್ರಿವೃತ್ತ್ವವೆಂಬ ಧರ್ಮದಿಂದ ಆದಿತ್ಯಮಂಡಲ ಹಾಗೂ ಅಕ್ಷಿಗೋಲಕಗಳಿಗೆ ಸಾಮ್ಯವನ್ನು ಅಲ್ಲಿ ಹೇಳಿದ್ದಾರೆ. ಆದರೆ ಅಂತಹ ಸಾಮ್ಯವನ್ನು ಇಲ್ಲಿ ವಿವಕ್ಷಿಸಲಾಗದು. ಅದರಿಂದ ಆದಿತ್ಯಮಂಡಲದಲ್ಲಿರುವವನೇ ಅಕ್ಷಿಗೋಲಕದಲ್ಲಿದ್ದಾನೆಂದು ಸಿದ್ಧವಾಗುವುದಿಲ್ಲ.

**प्रकाशः –**

इदानीमनेकस्वारस्यानुरोधेन टीकारीत्याऽक्ष्णोर्जडत्वमुपेत्याक्ष्यादित्ययोरैक्यप्रकारमाह – **यद्वेति** । आदिपदेन ''सर्पिर्वा'' इति श्रुतिर्गृह्यते । **वाक्यद्वयेति** । चेतनपक्षे द्वयोरेकदेवताकत्वादन्यतरवैयर्थ्यमिति भावः ।

ವಿವರಣೆ - ಇಲ್ಲಿಯ ತನಕ ಅಕ್ಷಿಶಬ್ದವು ದೇವತಾಪರವೆಂದು ಪೂರ್ವಪಕ್ಷ ಮಾಡಿದರು. ಈಗ ಜಡಪರವೆಂದು ಒಪ್ಪಿ ಪೂರ್ವಪಕ್ಷ ಮಾಡುತ್ತಿದ್ದಾರೆ. ಹೀಗೆ ಜಡಪರವೆಂದು ಹೇಳಿದಾಗ ಅನೇಕ ವಾಕ್ಯಗಳನ್ನು ಸ್ವಾರಸ್ಯವಾಗಿ ವ್ಯಾಖ್ಯಾನಿಸಿದಂತಾಗುತ್ತದೆ. ಮತ್ತು ಟೀಕೆಯೂ ಸಹ ಸಮಂಜಸವಾಗುತ್ತದೆ. ಆದ್ದರಿಂದ ಅಕ್ಷಿಯೆಂಬ ಗೋಲಕಕ್ಕೂ, ಆದಿತ್ಯಮಂಡಲಕ್ಕೂ ಹೇಳಲ್ಪಟ್ಟ ಐಕ್ಯಪ್ರಕಾರವನ್ನು 'ಯದ್ವಾ' ಇತ್ಯಾದಿ ವಾಕ್ಯದಿಂದ ಉಪಪಾದಿಸುತ್ತಿದ್ದಾರೆ. ಸೂತ್ರಾದಿ ಎಂಬಲ್ಲಿರುವ ಆದಿಪದದಿಂದ 'ಸರ್ಪಿರ್ವಾ' ಎಂಬ ಶ್ರುತಿಯನ್ನು ವಿವಕ್ಷಿಸಬೇಕು. ವಾಕ್ಯದ್ವಯವು ಏಕೆ ವ್ಯರ್ಥವೆಂದರೆ ಚೇತನರನ್ನು ವಿವಕ್ಷಿಸಿದರೆ ಅಕ್ಷಿಗೆ ಹಾಗೂ ಸೂರ್ಯಮಂಡಲಕ್ಕೆ ಒಬ್ಬನೇ ದೇವತೆಯಾದ್ದರಿಂದ ಒಂದು ವಾಕ್ಯವು ವ್ಯರ್ಥವಾಗುತ್ತದೆಂದು ತಿಳಿಯಬೇಕು.

**प्रकाशः** – ''एकविधत्वात्'' इति टीकावाक्यं टीकोक्तव्यावर्त्यशङ्काव्यक्तिपूर्वं व्यनक्ति – **नचेति** । 'एवं' जडत्वे ।

''ಏಕವಿಧತ್ವಾತ್'' ಎಂಬ ಟೀಕಾ ಮಾತನ್ನು ಟೀಕೆಯಲ್ಲಿ ಹೇಳಲ್ಪಟ್ಟ ವ್ಯಾವರ್ತ್ಯಶಂಕೆಯನ್ನು ತೋರಿಸುವ ಮೂಲಕ ವ್ಯಾಖ್ಯಾನಿಸುತ್ತಿದ್ದರೆ ''ನ ಚೈವಂ'' ಎಂಬ ವಾಕ್ಯದಿಂದ. 'ಏವಂ' ಎಂಬ ಪದಕ್ಕೆ ಜಡಪರವಾದರೆ ಎಂದರ್ಥ.

**प्रकाशः** – ननु ''य एष आदित्ये'' इत्यत्र ''आदित्यश्चक्षुर्भूत्वा'' इत्यादाविव'' आदित्यशब्दस्य चेतनपरत्वे मण्डलाभिमानिचेतनस्यस्यैव स्वात्मतयोपदेशात् । अक्ष्णश्चैकचेतनस्थानत्वेनैकविधत्वादक्षिचेतनस्य एवाग्निरिति वाच्यमित्यत आह – **य एष इति** ।

''ಯ ಏಷ ಆದಿತ್ಯೇ'' ಎಂಬ ವಾಕ್ಯವು 'ಆದಿತ್ಯಶ್ಚಕ್ಷುರ್ಭೂತ್ವಾ' ಎಂಬ ಶ್ರುತಿಯಂತೆ ಆದಿತ್ಯ ಶಬ್ದವು ಚೇತನಪರವೆಂದು ಹೇಳಿದರೆ ಆದಿತ್ಯಮಂಡಲಕ್ಕೆ ಅಭಿಮಾನಿಯಾದ ಯಾವ ಚೇತನನಿದ್ದಾನೋ ಅವನ

ಅಂತರ್ಯಾಮಿಯಾಗಿ ತನ್ನನ್ನು ಉಪದೇಶಿಸಿದನು ಎಂದರ್ಥವಾಗುತ್ತದೆ. ಆವಾಗ ಅಕ್ಷಿಯೆಂಬ ಗೋಲಕಕ್ಕೆ ಅಭಿಮಾನಿಯಾದ ಅಕ್ಷಿದೇವತೆಯಲ್ಲಿ ಅಂತರ್ಯಾಮಿಯಾಗಿ ಅಗ್ನಿಯು ತನ್ನನ್ನು ಉಪದೇಶಿಸಿದ್ದಾನೆಂಬ ಅರ್ಥ ತಿಳಿಯುತ್ತದಲ್ಲವೇ? ಎಂಬ ಪ್ರಶ್ನೆಗೆ 'ಯ ಏಷಃ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – एवञ्च प्राचीनरीत्या अक्ष्यादित्यदेवतयोरैक्यादादित्यदेवतान्तस्स्थस्य स्वात्मतयोपदेशोऽक्षिदेवतान्तस्स्थोऽपि स एव । उभयदेवताया एकत्वादित्यर्थः । टीकाकृन्मतेऽक्ष्यादित्ययोर्जडत्वेऽप्येकदेवताधिष्ठानत्वादक्षिस्थस्याग्नित्वे आदित्यस्थस्य स्वात्मतयोपदेशादिति हेतुर्न व्यधिकरण इति सिद्धम् ।

ಏಕೆಂದರೆ ಸನ್ನ್ಯಾಯರತ್ನಾವಳಿಯ ಅಭಿಪ್ರಾಯದಂತೆ ಅಕ್ಷಿದೇವತೆಯು ಹಾಗೂ ಆದಿತ್ಯದೇವತೆಯು ಒಬ್ಬನೇ ಆಗಿರುವುದರಿಂದ ಆದಿತ್ಯದೇವತೆಯಲ್ಲಿರುವವನನ್ನೇ ಅಗ್ನಿಯು ತಾನೆಂದು ಹೇಳಿಕೊಂಡಿದ್ದರಿಂದ ಅಕ್ಷಿದೇವತೆಯೊಳಗಿರುವ ದೇವತೆಯೂ ಸಹ ಅಗ್ನಿಯೇ ಆಗುತ್ತಾನೆಂದು ಅಭಿಪ್ರಾಯ. ಏಕೆಂದರೆ ಆದಿತ್ಯದೇವತೆ ಹಾಗೂ ಅಕ್ಷಿದೇವತೆ ಒಬ್ಬನೇ ಆಗಿದ್ದಾನೆ.

ಟೀಕಾರಾಯರ ಪ್ರಕಾರ 'ಅಕ್ಷಿ' ಹಾಗೂ 'ಆದಿತ್ಯ' ಶಬ್ದಗಳು ಜಡಪ್ರತಿಪಾದಕವಾದರೂ ಸಹ ಒಬ್ಬನೇ ದೇವತೆಗೆ ಅಧಿಷ್ಠಾನವಾದ್ದರಿಂದ ಆದಿತ್ಯಮಂಡಲದಲ್ಲಿರುವ ದೇವತೆಯು ಅಗ್ನಿಯೇ ಆಗಿದ್ದಾನೆಂಬುದನ್ನು ಆದಿತ್ಯನಲ್ಲಿ ತಾನಿರುವವನೆಂದು ಅಗ್ನಿಯ ಸ್ವಾತ್ಮೋಪದೇಶವೆಂಬ ಹೇತುವಿನಿಂದ ತಿಳಿಯಬೇಕು. ಈ ಹೇತುವು ವ್ಯಧಿಕರಣವಲ್ಲವೆಂದು ಸಿದ್ಧವಾಯಿತು.

**गुरुराजीयम्** – नन्वक्षिशब्दस्य चेतनपरत्वे तद्यदस्मिन्सर्पिर्वोदकं वा सिञ्चतीत्यादिवाक्योक्ता सङ्गत्वरूपस्थानशक्तेरसम्भवेन जडस्यैव सम्भवेनाक्षिशब्देन जडपरत्वमेवास्येयमित्यत आह – **स्थानादीति** ।। **परम्परयेति** ।। मञ्जूषास्थोऽपि हि मणिर्गेहस्थ इति गीयत इति न्यायेनान्तरपुरुषाधिकरणचेतनाधिष्ठानत्वेन परम्परया स्थानत्वादित्यर्थ। ।। **अत एवेति** ।। उक्तरीत्याऽऽदित्यशब्दवच्चक्षुश्शब्दस्यापि देवतापरत्वेनाक्ष्यादित्ययोरैक्यस्याभिप्रेतत्वादेवेत्यर्थः ।

नन्वेवमक्ष्यादित्ययोरैक्यं चेत्तर्हि टीकायामक्ष्यादित्ययोरेकविधत्वादित्येकविधत्वोक्तिरयुक्तेत्यत आह – **अक्ष्यादित्ययोरिति** ।। **प्रकारभेदनिषेधमुखेनेति** ।। स्थानभेदात्तापकत्वतदभावादिना तदभेदानुपपत्तिरित्याशङ्क्य

**अंशिनो यत्तु सामर्थ्यं यत्स्वरूपं यथास्थितिः ।**
**तदेव नाणुमात्रोऽपि भेदस्स्वांशांशिनोः क्वचित् ।।**

इति न्यायेन प्रकारभेदनिषेधनेत्यर्थः ।

प्रेरकान्तरापेक्षायां तत्रापि तथेत्यनवस्थानात्, अग्नेरपि प्रेर्यजीवत्वसाम्येन प्रेरणस्यासम्भवाच्च नाग्निरक्षिस्थ इत्युच्यमानत्वादित्यर्थः ।

"ಅನವಸ್ಥಿತೇರಸಂಭವಾಚ್ಚ ನೇತರಃ" ಎಂಬ ಸೂತ್ರದಲ್ಲಿ 'ವಾಮನಿ' ಶಬ್ದವು ಸಕಲ ಸ್ತ್ರೀಯರನ್ನು ಪ್ರೇರಣ ಮಾಡುವ ಭಗವಂತನ ರೂಪವನ್ನು ಹೇಳುತ್ತಿದೆ. 'ಭಾಮಿನಿ' ಶಬ್ದವು ಸಕಲ ಪುರುಷರನ್ನು ಪ್ರೇರಣೆ ಮಾಡುವ ಭಗವಂತನ ರೂಪವನ್ನು ಹೇಳುತ್ತಿದೆ. ಈ ಎರಡು ಭಗವದ್ರೂಪಗಳು ಪ್ರತಿಯೊಬ್ಬರ ಎಡಗಣ್ಣು ಹಾಗೂ ಬಲಗಣ್ಣುಗಳಲ್ಲಿ ಇರುತ್ತವೆ. ಹೀಗೆ ಹೇಳಿದಾಗ ಅಗ್ನಿಯನ್ನು ಚಕ್ಷುರಂತಸ್ಥನೆಂದು ಹೇಳಲು ಸಾಧ್ಯವಿಲ್ಲ. ಹಾಗೇನಾದರೂ ವಿವಕ್ಷಿಸಿದರೆ ಅಗ್ನಿಯೂ ಸಹ ಒಬ್ಬ ಜೀವನಾಗಿರುವುದರಿಂದ ಅವನನ್ನು ಪ್ರೇರಣೆ ಮಾಡುವುದಕ್ಕಾಗಿ ಮತ್ತೊಬ್ಬ ಪ್ರೇರಕನು ಬೇಕಾಗುತ್ತದೆ. ಆ ಪ್ರೇರಕನೂ ಸಹ ವಿಷ್ಣುವಲ್ಲದ ಕಾರಣ ಮತ್ತೊಬ್ಬ ಪ್ರೇರಕನು ಬೇಕಾಗುತ್ತದೆ. ಹೀಗೆ ಅನವಸ್ಥಾದೋಷವನ್ನು ತಿಳಿಯಬೇಕು. ಆದ್ದರಿಂದ ಅಗ್ನಿಯು ಪ್ರೇರ್ಯನಾದ ಜೀವನಿಗೆ ಸಮಾನನಾಗಿರುವುದರಿಂದ ಪ್ರೇರಣೆ ಮಾಡಲು ಸಮರ್ಥನಾಗುವುದಿಲ್ಲ. ಹಾಗಾಗಿ ಅಕ್ಷಿಸ್ಥನಾದವನು ಅಗ್ನಿಯೆಂದು ಹೇಳಬಾರದು.

**प्रकाशः – टीकाया मूलमाह – तदेतदिति ।** उपपत्तेरेव प्राबल्यं, किमुतात्मशब्दसहिताया इत्येवकारार्थः । उपपत्तेर्निरवकाशत्वोक्तिसूचितं परहेतूनां सावकाशत्वं भाष्याद्युक्तं व्यक्तमाह – **नचेत्यादिना ।**

ಹೀಗೆ ಮೇಲಿನ ಅಭಿಪ್ರಾಯವನ್ನು ಸ್ಪಷ್ಟಪಡಿಸುವ ಟೀಕೆಗೆ ನ್ಯಾಯವಿವರಣವೇ ವ್ಯಾಖ್ಯೇಯವಾಗಿದೆಯೆಂದು 'ತದೇತತ್' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. 'ಉಪಪತ್ತೇರೇವ' ಎಂಬಲ್ಲಿರುವ ಏವಕಾರವು ಕೇವಲ ಯುಕ್ತಿಗೆ ಪ್ರಾಬಲ್ಯವಿರಬೇಕಾದರೆ ಆತ್ಮಶಬ್ದ ಸಹಿತವಾದ ಯುಕ್ತಿಗೆ ಪ್ರಾಬಲ್ಯವಿದೆಯೆಂದು ಪ್ರತ್ಯೇಕವಾಗಿ ಹೇಳಬೇಕೇನು? ಎಂಬುದಾಗಿ ಕೈಮುತ್ಯವನ್ನು ತೋರಿಸುತ್ತಿದೆ.

ವಿಷ್ಣುವಿನ ಲಿಂಗಗಳಿಗೆ ನಿರವಕಾಶತ್ವವನ್ನು ಹೇಳಿದ್ದರಿಂದ ಅಗ್ನಿಯ ಲಿಂಗಗಳಿಗೆ ಸಾವಕಾಶತ್ವವನ್ನು ಸೂಚಿಸಿದಂತಾಯಿತು. ಇದನ್ನು ಭಾಷ್ಯಾದಿಗಳಲ್ಲಿ ಹೇಳಿದ್ದಾರೆ. ಅದನ್ನೇ ಪ್ರಕೃತ ಗ್ರಂಥಕಾರರು 'ನಚ' ಎಂಬ ವಾಕ್ಯದಿಂದ ವಿವರಿಸುತ್ತಿದ್ದಾರೆ.

**प्रकाशः – अग्निपरोऽपीति ।** यथोक्तं न्यायविवरणटीकायां – "अग्निः प्रसिद्ध एवास्तु, "सोऽहमस्मि" इत्यादि तु अन्तर्याम्यपेक्षया सावकाशम्" इति । **बाधकादिति ।** अमृतत्वादिबाधकादित्यर्थः ।

ಗ್ರಂಥದಲ್ಲಿ 'ಅಗ್ನಿಪರೋऽಪಿ' ಎಂಬುದಾಗಿ ಹೇಳಿದ್ದಾರೆ. ಇದನ್ನೇ ನ್ಯಾಯವಿವರಣೆಯ ಟೀಕೆಯಲ್ಲಿ "ಅಗ್ನಿಃ ಪ್ರಸಿದ್ಧ ಏವಾಸ್ತು, "ಸೋऽಹಮಸ್ಮಿ" ಇತ್ಯಾದಿ "ತು ಅಂತರ್ಯಾಮ್ಯಪೇಕ್ಷಯಾ ಸಾವಕಾಶಮ್" ಎಂದು ಹೇಳಿದ್ದಾರೆ. 'ಬಾಧಕಾತ್' ಎಂಬ ಪದಕ್ಕೆ ಅಮೃತತ್ವಾದಿ ಬಾಧಕಗಳಿರುವುದರಿಂದ ಎಂದರ್ಥ.

ಅಂತರಾಧಿಕರಣ (೧-೨-೪)

**प्रकाशः – श्रुतिगतिमुक्त्वाऽभ्यासगतिमाह – अभ्यासोऽपीति ।** ''अवधारणं चान्तर्यामिणो विशेषाभावमात्रप्रतिपादनार्थम्' इति अन्यत्र टीकायामुक्तरीत्याऽवधारणगतिरपि ध्येया । उक्तं च तत्त्वप्रदीपे – ''अत्र चोक्तं छन्दोगोपनिषद्भाष्ये भगवतैव ''स एवाहमस्मि'' इत्यन्तर्यामिणोस्सर्वविशेषाभावाज्ञापनार्थम्'' इत्यादि ।

ಪೂರ್ವಪಕ್ಷಕ್ಕೆ ಆಧಾರವನ್ನಾಗಿ ಹೇಳಲ್ಪಟ್ಟ ಅಗ್ನಿಶ್ರುತಿಗೆ ಗತಿಯನ್ನು ಹೇಳಿ ಅಭ್ಯಾಸ ಪ್ರಮಾಣಕ್ಕೂ ಸಹ ಗತಿಯನ್ನು 'ಅಭ್ಯಾಸೋಽಪಿ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ''ಅವಧಾರಣಂ ಚಾಂತರ್ಯಾಮಿಣೋ ವಿಶೇಷಾಭಾವಮಾತ್ರಪ್ರತಿಪಾದನಾರ್ಥಮ್'' ಎಂಬುದಾಗಿ ಬೇರೆ ಟೀಕೆಯಲ್ಲಿ ಹೇಳಿದಂತೆ ಅವಧಾರಣಗತಿಯನ್ನೂ ಸಹ ತಿಳಿದುಕೊಳ್ಳಬೇಕು. ತತ್ತ್ವಪ್ರದೀಪದಲ್ಲಿಯೂ ಇದನ್ನೇ ಹೇಳಿದ್ದಾರೆ ''ಅತ್ರ ಚೋಕ್ತಂ'' ''ಸೋಽಹಮಸ್ಮಿ'' ಎಂಬ ಶ್ರುತಿಯನ್ನು ವ್ಯಾಖ್ಯಾನಿಸುವಾಗ ಛಾಂದ್ಯೋಗೋಪನಿಷತ್ತಿನ ಭಾಷ್ಯದಲ್ಲಿ 'ಸ ಏವಾಹಮಸ್ಮಿ' ಎಂಬುದಾಗಿ ಅಂತರ್ಯಾಮಿಗೆ ಸಕಲ ವಿಶೇಷಗಳ ಅಭಾವವನ್ನು ತಿಳಿಸುವುದಕ್ಕಾಗಿ ಎಂದು ಹೇಳಿದ್ದಾರೆ.

**प्रकाशः** – ननु विद्याशब्दाभ्यासस्य का गतिरित्यतः ''न चास्मद्विद्येत्युक्तिविरोधः'' इत्यादिटीकोक्तं प्रमेयं सङ्गृह्य विवृणोति – **धर्म्यैक्येऽपीति ।** ''यदिदमस्मिन् ब्रह्मपुरे दहरं पुण्डरीकं वेश्म'' इति छान्दोग्यस्थदहरविद्या ब्रह्मपरेति दहरनये साधयिष्यते ।

ವಿದ್ಯಾ ಶಬ್ದದ ಅಭ್ಯಾಸಕ್ಕೆ ಏನು ಗತಿ? ಎಂಬ ಪ್ರಶ್ನೆಗೆ 'ನಚ ಅಸ್ಮದ್ವಿದ್ಯೇತ್ಯುಕ್ತಿವಿರೋಧಃ'' ''ಅಸ್ಮದ್ ವಿದ್ಯಾ'' ಎಂಬ ವಾಕ್ಯದಲ್ಲಿ ವಿರೋಧ ಬರುವುದಿಲ್ಲವೆಂಬ ಟೀಕೆಯಲ್ಲಿ ಹೇಳಿದ ಪ್ರಮೇಯವನ್ನು ಸಂಗ್ರಹಿಸಿ ವಿವರಿಸುತ್ತಿದ್ದಾರೆ ''ಧರ್ಮ್ಯೈಕ್ಯೇಪಿ'' ಇತ್ಯಾದಿವಾಕ್ಯದಿಂದ. ''ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ'' ಎಂದು ಛಾಂದ್ಯೋಗ್ಯದಲ್ಲಿರುವ ದಹರವಿದ್ಯೆಯನ್ನು ಬ್ರಹ್ಮಪರವಾಗಿ ದಹರಾಧಿಕರಣದಲ್ಲಿ ಸಾಧಿಸುತ್ತಾರೆ.

**प्रकाशः** – ''प्राणो वा आशाया भूयान्'' इति तत्रैव सप्तमगता प्राणविद्या भूमाधिकरणे ब्रह्मपरेति वक्ष्यते । ''अभिविमानमात्मानं वैश्वानरमुपास्ते'' इति तत्रैव पञ्चमस्था वैश्वानरविद्या वैश्वानरनये निर्णेष्यत इति ताः ब्रह्मपरा इति भावः । **प्रकारेति ।** दहरं हृत्पद्मस्थत्वप्राणस्थत्वविश्वनरान्तरत्वादिप्रकारभेदादित्यर्थः ।

ಅದೇ ಛಾಂದೋಗ್ಯದ ಏಳನೇ ಅಧ್ಯಾಯದಲ್ಲಿ ''ಪ್ರಾಣೋ ವಾ ಆಶಾಯಾ ಭೂಯಾನ್'' ಎಂಬುದಾಗಿ ಪ್ರಾಣವಿದ್ಯೆಯನ್ನು ಬ್ರಹ್ಮಪರವೆಂದು ಭೂಮಾಧಿಕರಣದಲ್ಲಿ ಸಮರ್ಥಿಸುತ್ತಾರೆ. ''ಅಭಿವಿಮಾನಮಾತ್ಮಾನಂ

ವೈಶ್ವಾನರಮುಪಾಸ್ತೇ'' ಎಂಬುದಾಗಿ ಅದೇ ಛಾಂದೋಗ್ಯದ ಐದನೇ ಅಧ್ಯಾಯದಲ್ಲಿ ಬ್ರಹ್ಮಪರವೆಂದು ವೈಶ್ವಾನರಾಧಿಕರಣದಲ್ಲಿ ನಿರ್ಣಯಿಸುತ್ತಾರೆಂದು ತಿಳಿಯಬೇಕು. ಹೀಗೆ ಒಂದೇ ಬ್ರಹ್ಮವಿದ್ಯೆಯು ಪ್ರಕಾರ ಭೇದದಿಂದ ಬೇರೆ ಬೇರೆ ಹೆಸರನ್ನು ಹೊಂದಿದೆ. ಪ್ರಕಾರ ಭೇದವೆಂದರೆ ದಹರವೆನಿಸಿದ ಹೃತ್ಪದ್ಮಸ್ಥತ್ವ, ಪ್ರಾಣಸ್ಥ್ವ, ಸಕಲ ಮನುಷ್ಯಾಂತರ್ಗತತ್ವ ಇತ್ಯಾದಿಯಾದ ಭೇದದಿಂದ ಎಂದರ್ಥ.

**गुरुराजीयम्** – मुख्यामुख्ययोर्मुख्ये सम्प्रत्यय इति न्यायेनाग्नेरमृतत्वादे-र्मुख्यत्वाभावेन विष्णोरेव तद्भावेन मुख्यस्यैव ग्रहणं युक्तं न त्वग्नेरित्यरुच्या पक्षान्तरमाह – **उक्तार्थवादेति** ।।

पूर्वपक्षीयाणि बाधकानि परिहर्तुमाह – **न चेत्यादिना** ।। नन्वभ्यासस्य पूर्वापराविरुद्धे स्वरसप्रतिपन्नेऽर्थे तात्पर्यार्थत्वेऽप्यग्नेरादित्यस्थत्वस्यापि पूर्वोत्तराविरुद्धत्वात्स्वरसप्रतिपन्नत्वाच्च न तात्पर्यार्थत्वमभ्यासस्स्यादेवेत्यत आह – **अग्नेरिति** ।।

नन्वस्मद्विद्याऽऽत्मविद्या चेति विद्याशब्दोऽभ्यस्यत इति विद्याभेदार्थं कं ब्रह्मेत्यादिकाऽऽत्मविद्या आदित्यस्थादिविद्या त्वग्निविद्येति स्वीकार्यतया चाग्नेरवादित्यस्थत्वेऽक्षिस्थत्वमपि तस्यैवेत्यत आह – **धर्म्यैक्येऽपीति** ।।




ಕಣ್ಣಿನಲ್ಲಿರುವವನು ಭಗವಂತನೇ ಹೊರತು ಅಗ್ನಿಯಲ್ಲ. ಪ್ರತಿಯೊಬ್ಬ ಪುರುಷರ ಎಡಗಣ್ಣಿನಲ್ಲಿ ಸ್ತ್ರೀಪ್ರೇರಕವಾದ ಭಗವಂತನ 'ವಾಮನಿ' ಎಂಬ ರೂಪವಿದೆ. ಬಲಗಣ್ಣಿನಲ್ಲಿ ಪುರುಷ ಪ್ರೇರಕವಾದ 'ಭಾಮನಿ' ಎಂಬ ರೂಪವಿದೆ. ಈ ರೂಪಗಳನ್ನು ಅಗ್ನಿ ಸ್ವರೂಪವೆಂದು ಹೇಳಲು ಸಾಧ್ಯವೇ ಇಲ್ಲ. ಹಾಗೇನಾದರೂ ಹೇಳಿದರೆ ಕಣ್ಣಿನ ಒಳಗಡೆ ಕುಳಿತಿರುವ ಅಗ್ನಿಯನ್ನು ಪ್ರೇರಣೆ ಮಾಡಲು ಅನೇಕ ಜೀವಿಗಳ ಪ್ರವಾಹವೇ ಹರಿಯಬೇಕಾಗುತ್ತದೆ.

ಅಗ್ನಿದೇವತೆಯು 'ಪರಿಹ್ಯೇನಂ ಮ್ರಿಯಂತೇ' ಎಂಬ ಶ್ರುತಿ ಹೇಳುವಂತೆ ಮರಣಶೀಲನಾಗಿದ್ದಾನೆ. 'ಭೀಷಾಸ್ಮಾತ್' ಎಂಬ ಶ್ರುತಿ ಹೇಳುವಂತೆ ಭಗವಂತನಿಗೆ ಹೆದರಿ ಪಲಾಯನ ಮಾಡುತ್ತಾನೆ. ಆದ್ದರಿಂದ ಅಮೃತತ್ವ ಅಭಯತ್ವಗಳೆಲ್ಲವೂ ಸಹ ವಿಷ್ಣುವಿನ ನಿರವಕಾಶಲಿಂಗಗಳೆಂದು ಸಾಬೀತಾಗುತ್ತದೆ.

'ಸೋऽಹಮಸ್ಮಿ' ಎಂದು ಉಪದೇಶಿಸಿದವನು ಅಂತರ್ಯಾಮಿಯೇ ಹೊರತು ಅಗ್ನಿಯಲ್ಲ. ಅಗ್ನಿ ಶಬ್ದದ ಅಭ್ಯಾಸವೂ ಸಹ ಅಗ್ನಿಗೆ ಪ್ರಚೋದಕವಲ್ಲ. ಹಿಂದಿನ ಮುಂದಿನ ವಾಕ್ಯಗಳೆಲ್ಲವೂ ವಿಷ್ಣುವನ್ನು ಬೆಂಬಲಿಸುತ್ತಿರುವಾಗ ಮಧ್ಯದಲ್ಲಿರುವ ಅಭ್ಯಾಸದ ಶಕ್ತಿ ಹೀನವಾಗುತ್ತದೆ.

ಅಂತರಾಧಿಕರಣ (೧-೨-೪)

'ಅಸ್ಮದ್ವಿದ್ಯೆ' 'ಆತ್ಮವಿದ್ಯೆ' ಎಂಬ ವಿದ್ಯಾಭೇದದಿಂದ ಅಗ್ನಿಯು ಶ್ರುತಿಪ್ರತಿಪಾದ್ಯನೆಂಬ ಪೂರ್ವಪಕ್ಷದಲ್ಲಿ ಹುರುಳಿಲ್ಲ. ಏಕೆಂದರೆ ಒಬ್ಬನೇ ಬ್ರಹ್ಮನನ್ನು ವಿಷಯೀಕರಿಸುವ ವಿದ್ಯೆಗಳು ಪ್ರಕಾರಭೇದದಿಂದ ಅನೇಕ ಹೆಸರನ್ನು ಪಡೆಯಬಹುದು. ಬ್ರಹ್ಮವಿಷಯಕವಾದ ದಹರವಿದ್ಯೆ, ಪ್ರಾಣವಿದ್ಯೆ, ವೈಶ್ವಾನರವಿದ್ಯೆಗಳೇ ಇದಕ್ಕೆ ಉದಾಹರಣೆ.



## ಪ್ರಥಮಸೂತ್ರದ ವಿನ್ಯಾಸದಲ್ಲಿ ಸ್ವಾರಸ್ಯ

**तात्पर्यचन्द्रिका**

**सूत्रक्रमस्तु – आद्ये सूत्रे विषयवाक्यस्थश्रुतिलिङ्गोक्तिः ।**

**अत्र चान्तरुपपदाद्रमतेः "अमन्तात् डः" इति डप्रत्ययान्तेनान्तरशब्देनान्तस्स्थित्वा रमणमुच्यते, न त्वन्तःस्थितिमात्रं, तथात्वे हि लाघवाय श्रुत्यनुगमाय च "अन्तस्तद्धर्म" इतिवत् 'अन्तः' इत्येवावक्ष्यत्, नत्वन्तर इति । श्रुतौ चात्मशब्देनादेयं मातीति व्युत्पत्त्या रमणमुच्यते । तदुक्तमनुव्याख्याने –**

**अन्तस्स्थित्वा रमणकृदन्तरस्समुदाहृतः ।**
**रमणं चात्मशब्देनाऽदेयं मातीति चोच्यते ।**

**इति ।**

ಅನುವಾದ - ಸೂತ್ರಗಳ ವಿನ್ಯಾಸಕ್ರಮವು ಹೀಗಿದೆ - ಪ್ರಥಮ ಸೂತ್ರದಲ್ಲಿ ವಿಷಯವಾಕ್ಯದಲ್ಲೇ ಇರುವ ಶ್ರುತಿಲಿಂಗಗಳನ್ನು ಪ್ರಮಾಣವನ್ನಾಗಿ ಹೇಳಿದ್ದಾರೆ. ಆದ್ದರಿಂದ ಮೊದಲು ಉಲ್ಲೇಖಿಸಿದ್ದು ಸಾರ್ಥಕವಾಗಿದೆ.

'ಅಂತರ ಉಪಪತ್ತೇಃ' ಎಂಬ ಸೂತ್ರದಲ್ಲಿ ವ್ಯಾಕರಣ ವಿಚಾರ ಹೀಗಿದೆ - 'ಅಂತಃ' ಎಂಬ ಉಪಪದದ ಮೇಲೆ 'ರಮು' ಧಾತುವಿಗೆ 'ಇಮಂತಾತ್ ಡಃ' ಎಂಬ ಸೂತ್ರದಿಂದ 'ಡ' ಪ್ರತ್ಯಯವು ಬಂದಿದೆ. 'ಡ' ಪ್ರತ್ಯಯದಲ್ಲಿ ಅಕಾರ ಮಾತ್ರ ಉಳಿದಾಗ 'ಅಂತರ' ಎಂಬ ರೂಪವು ನಿಷ್ಪನ್ನವಾಗುತ್ತದೆ. ಇದರಿಂದ ಅಂತರ್ಯಾಮಿಯಾಗಿದ್ದು 'ರಮಣ' ಮಾಡುತ್ತಾನೆಂಬ ಅರ್ಥವು ತಿಳಿಯುತ್ತದೆ. ಹೊರತು ಕೇವಲ ಒಳಗಡೆ ಇದ್ದಾನೆಂದು ತಿಳಿಯುವುದಿಲ್ಲ. ಒಳಗಡೆ ಇದ್ದಾನೆಂಬರ್ಥವನ್ನಷ್ಟೇ ವಿವಕ್ಷಿಸುವುದಾದರೆ ಲಾಘವಕ್ಕಾಗಿ ಮತ್ತು ಶ್ರುತ್ಯನುಗಮಕ್ಕಾಗಿ 'ಅಂತಃ' ಎಂದಷ್ಟೇ ಸೂತ್ರಕಾರರು ಹೇಳುತ್ತಿದ್ದರು. 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಿ 'ಅಂತರ್ಯಾಮಿ' ಎಂಬರ್ಥದಲ್ಲಿ ಕೇವಲ

'ಅಂತಃ' ಎಂದು ಹೇಳಿದಂತೆ ಇಲ್ಲಿಯೂ ಹೇಳಬೇಕಿತ್ತು. ಹೊರತು 'ಅಂತರಃ' ಎಂದು ಹೇಳಬೇಕಾಗಿರಲಿಲ್ಲ.

ಶ್ರುತಿಯಲ್ಲಿರುವ 'ಆತ್ಮ' ಶಬ್ದಕ್ಕೆ 'ಆದೇಯಂ ಮಾತಿ' (ಶುಭವಾದ್ದನ್ನು ಅನುಭವಿಸುತ್ತಾನೆ.) ಎಂಬ ವ್ಯುತ್ಪತ್ತಿಯನ್ನು ವಿವಕ್ಷಿಸಿದಾಗ 'ರಮಣ' ಎಂಬರ್ಥವು ಆತ್ಮಶಬ್ದದಿಂದಲೇ ತಿಳಿಯುತ್ತದೆ. ಇದನ್ನೇ ಅನುವ್ಯಾಖ್ಯಾನದಲ್ಲಿ

''ಅಂತಸ್ಸ್ಥಿತ್ವಾರಮಣಕೃದಂತರಸ್ಸಮುದಾಹೃತಃ ।
ರಮಣಂ ಚಾತ್ಮಶಬ್ದೇನಾದೇಯಂ ಮಾತೀತಿ ಚೋಚ್ಯತೇ ।''

ಅಂತರ್ಯಾಮಿಯಾಗಿದ್ದು ರಮಿಸುವ ಕಾರಣ 'ಅಂತರ' ಎಂದು ಹೇಳಿದ್ದಾರೆ. 'ಆದೇಯಂ ಮಾತಿ' ಎಂಬ ವ್ಯುತ್ಪತ್ತಿಯಿಂದ ಶ್ರುತಿಯಲ್ಲಿರುವ 'ಆತ್ಮ' ಶಬ್ದವು 'ರಮಣ' ಎಂಬರ್ಥವನ್ನು ಹೇಳುತ್ತಿದೆ ಎಂದು.

**प्रकाशः –**

**श्रुतीति** । ''आत्मेति होवाच'' इत्यात्मश्रुतिः । ''एतद्ब्रह्म'' इति ब्रह्मश्रुतिः । अमृतत्वाभयत्वरूपे **लिङ्गे** ।

ವಿವರಣೆ - ಪೂರ್ವಪಕ್ಷ ಹಾಗೂ ಸಿದ್ಧಾಂತಗಳನ್ನು ಜೋಡಿಸಿದ್ದಾಯಿತು. ಪ್ರಕೃತ ಸೂತ್ರದಲ್ಲಿರುವ ಸ್ವಾರಸ್ಯವನ್ನು ತೋರಿಸುತ್ತಿದ್ದಾರೆ.

ಶ್ರುತಿಲಿಂಗೋಕ್ತಿ ಎಂಬಲ್ಲಿರುವ ಶ್ರುತಿಶಬ್ದದಿಂದ "ಆತ್ಮೇತಿ ಹೋವಾಚ'' ಎಂಬ ಆತ್ಮಶ್ರುತಿಯನ್ನು ''ಏತದ್ಬ್ರಹ್ಮ'' ಎಂಬಲ್ಲಿರುವ ಬ್ರಹ್ಮಶ್ರುತಿಯನ್ನು ವಿವಕ್ಷಿಸಬೇಕು. ಲಿಂಗ ಶಬ್ದದಿಂದ ಅಮೃತತ್ವ ಅಭಯತ್ವರೂಪವಾದ ಎರಡು ಲಿಂಗಗಳನ್ನು ವಿವಕ್ಷಿಸಬೇಕು.

**प्रकाशः** – नन्वत्र ''अन्तस्तद्धर्मोपदेशात्'' इतिवत् ''अन्तरुपपत्तेः'' इत्येव वाच्यं, न तु 'अन्तरः' इत्यत आह – **अत्र चेति** ।

'ನನ್ವತ್ರ' ಎಂಬಲ್ಲಿ 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಂತೆ 'ಅಂತರುಪಪತ್ತೇಃ' ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು. 'ಅಂತರ್ಯಾಮಿ' ಎಂಬರ್ಥದಲ್ಲಿ 'ಅಂತರಃ' ಎಂಬ ಪದವನ್ನು ಹೇಳಿದ್ದು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ಅತ್ರಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – यद्वाऽत्र क्रियाभावलिङ्गमुच्यत इत्युक्तमप्ययुक्तं, सूत्रे भावस्यैव प्रतीत्या क्रियाया अप्रतीतेरित्यत आह – **अत्र चेति** ।

ಅಥವಾ ಭಾಷ್ಯಕಾರರು ವಿಷಯಮಾಲೆಯಲ್ಲಿ ಹೇಳಿದ ಪ್ರಕಾರ ಈ ಅಧಿಕರಣವು ಕ್ರಿಯಾರೂಪವಾದ ಹಾಗೂ ಭಾವರೂಪವಾದ ಲಿಂಗವನ್ನು ಸಮನ್ವಯ ಮಾಡುತ್ತಿದೆ. ಆದರೆ ಸೂತ್ರವನ್ನು ನೋಡಿದಾಗ ಅಂತರ್ಯಾಮಿತ್ವವೆಂಬ ಭಾವರೂಪವಾದ ಲಿಂಗದ ಸಮನ್ವಯವೇ ಕಾಣಿಸುತ್ತಿದೆ ಹೊರತು ಕ್ರಿಯಾರೂಪವಾದ ಲಿಂಗದ ಸಮನ್ವಯವು ಕಾಣಿಸುತ್ತಿಲ್ಲ. ಆದ್ದರಿಂದ ಕ್ರಿಯಾರೂಪವಾದ ಮತ್ತು ಭಾವರೂಪವಾದ ಲಿಂಗವನ್ನು ಸಮನ್ವಯ ಮಾಡುತ್ತಿದ್ದಾರೆಂಬ ಭಾಷ್ಯಕಾರರ ಮಾತು ತಪ್ಪಾಯಿತಲ್ಲವೇ? ಎಂಬ ಪ್ರಶ್ನೆಗೆ 'ಅತ್ರಚ' ಎಂಬ ಮಾತಿನಿಂದ ಉತ್ತರಿಸುತ್ತಿದ್ದಾರೆ.

**प्रकाशः** – ''रमुक्रीडायां'' इत्यस्यान्तश्शब्द उपपदे सति ञमन्तत्वात् ञमन्ताड्डः'' इति उणादिसूत्रेण डप्रत्यये कृते डित्त्वादभस्यापि टेर्लोपि ''उणादयो बहुलम्'' इत्युपपदान्त्यलोपे दीर्घाभावे च 'अन्तरः' इति भवति । 'ञम्' इति प्रत्याहारः ।

ननु ''ञमन्ताड्डः'' इत्यत्र वृत्तौ ''डकार 'इत्' संज्ञा प्राप्ता बहुलवचनान्न भवति, रम्यते रमयते वा रण्डा पुनर्भूः'' इत्युक्तम् । तथाऽप्युणादेर्यथाप्रयोगं वर्णनीयत्वेन दण्डमण्डरण्डादिप्रयोगनिर्वाहायेत्संज्ञा नेत्युक्तावपि 'अन्तरः' इत्यादिनिर्वाहायेत्संज्ञा उत्सर्गप्राप्ता भवत्येवेति भावः ।

'ಅಂತರಃ' ಎಂಬ ಪದವು ಹೇಗೆ ನಿಷ್ಪನ್ನವಾಯಿತೆಂಬುದನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು - 'ರಮು ಕ್ರೀಡಾಯಾಂ' ಎಂಬ ಧಾತುವಿಗೆ 'ಅಂತರ್' ಎಂಬ ಉಪಪದವು ಸೇರಿದಾಗ 'ಞಮಂತಾಡ್ಡಃ'' ಎಂಬ 'ಉಣಾದಿ' ಸೂತ್ರದಿಂದ 'ಡ' ಪ್ರತ್ಯಯ ಬರುತ್ತದೆ. ಅನಂತರ ''ಚುಟೂ'' ಎಂಬ ಸೂತ್ರದಿಂದ 'ಡ' ಕಾರಕ್ಕೆ 'ಇತ್' ಸಂಜ್ಞೆ ಬಂದರೆ 'ಅ' ಕಾರವಷ್ಟೇ ಉಳಿಯುತ್ತದೆ. ಹೀಗಿರುವಾಗ 'ಡಿತ್ವಸಾಮರ್ಥ್ಯಾದಭಸ್ಯಾಪಿ ಟೇರ್ಲೋಪಃ' ಎಂಬಂತೆ 'ಟಿ' ಸಂಜ್ಞೆಯನ್ನು ಹೊಂದಿರುವ 'ಅಮ್' ಎಂಬುದಕ್ಕೆ ಲೋಪವು ಪ್ರಾಪ್ತವಾಗುತ್ತದೆ. ಆವಾಗ 'ರಮ್' ಧಾತುವಿನಲ್ಲಿ ಕೇವಲ 'ರ್' ಎಂದಷ್ಟೇ ಉಳಿಯುತ್ತದೆ. ಮುಂದಿರುವ 'ಡ' ಪ್ರತ್ಯಯದಲ್ಲಿ ಅಕಾರ ಮಾತ್ರ ಉಳಿದಿರುತ್ತದೆ. ಎರಡನ್ನು ಉಪಸರ್ಗದ ಜೊತೆ ಸೇರಿಸಿದಾಗ 'ಅಂತರ' ಎಂಬ ರೂಪವು ನಿಷ್ಪನ್ನವಾಗುತ್ತದೆ. 'ಞಮಂತಾಡ್ಡಃ' ಎಂಬ ಸೂತ್ರದಲ್ಲಿರುವ 'ಞಮ್' ಎಂಬುದು 'ಞಮಙಣನಮ್' ಎಂಬುದರ ಪ್ರತ್ಯಾಹಾರ ರೂಪವಾಗಿದೆ.

ಪ್ರಶ್ನೆ - 'ಅಂತರ್' ಎಂಬ ಉಪಪದಕ್ಕೆ 'ರ' ಎಂಬ 'ಡ' ಪ್ರತ್ಯಯಾಂತವಾದ ಧಾತು ಸೇರಿದಾಗ ದೀರ್ಘ ರೇಫ ಬರಬೇಕು. ಏಕೆಂದರೆ 'ರೋರಿ' ಎಂಬ ಸೂತ್ರ ಮುಂದಿರುವಾಗ ಹಿಂದಿನ ರೇಫಕ್ಕೆ ಲೋಪ ಬರುತ್ತದೆಂದು ಹೇಳಿದೆ. ಅನಂತರ 'ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ' ಎಂಬ ಸೂತ್ರದಿಂದ ರೇಪಲೋಪ ನಿಮಿತ್ತಕವಾಗಿ ಹಿಂದಿರುವ ಅಣಕ್ಷರಕ್ಕೆ ದೀರ್ಘವು ಬರುತ್ತದೆ. ಆವಾಗ 'ತ' ಕಾರಕ್ಕೆ ದೀರ್ಘ ಬಂದರೆ ''ಅಂತಾರ'' ಎಂದಾಗುತ್ತದೆ. ಹೀಗಿರುವಾಗ 'ಅಂತರ' ಎಂಬ ಪ್ರಯೋಗವು ತಪ್ಪಾಗುತ್ತದಲ್ಲವೇ?

ಉತ್ತರ - 'ರೋರಿ' ಎಂಬ ಸೂತ್ರದಿಂದ ಇಲ್ಲ 'ರೇಫ' ಲೋಪವಾಗುತ್ತಿಲ್ಲ ಹೊರತಾಗಿ 'ಉಣಾದಯೋ ಬಹುಲಮ್' ಎಂಬ ಸೂತ್ರದಿಂದ ಲೋಪ ಬರುತ್ತಿದೆ. ಒಂದು ವೇಳೆ ರೇಫನಿಮಿತ್ತಕವಾದ ರೇಫಕ್ಕೆ ಲೋಪವು ಬಂದಿದ್ದರೆ ಮಾತ್ರ ದೀರ್ಘವು ಪ್ರಾಪ್ತವಾಗುತ್ತಿತ್ತು. ಆದರೆ ಬಹುಲಗ್ರಹಣನಿಮಿತ್ತಕವಾಗಿ ಲೋಪಪ್ರಾಪ್ತವಾಗಿವುದರಿಂದ ದೀರ್ಘವು ಬರುವುದಿಲ್ಲವೆಂದು ತಿಳಿಯಬೇಕು.

ಪ್ರಶ್ನೆ - 'ರಮ್' ಎಂಬ ಧಾತುವಿಗೆ 'ಞಮಂತಾಡ್ಡಃ' ಎಂಬ ಸೂತ್ರದಿಂದ 'ಡ' ಪ್ರತ್ಯಯವು ಬರುತ್ತದೆ. ಆವಾಗ 'ಚುಟೂ' ಎಂಬ ಸೂತ್ರದಿಂದ ಡಕಾರಕ್ಕೆ 'ಇತ್' ಸಂಜ್ಞೆ ಬಂದರೆ ಮಾತ್ರ ಹಿಂದಿನ 'ಟಿ' ಸಂಜ್ಞೆಗೆ ಲೋಪ ಬರಲು ಸಾಧ್ಯ. ಆದರೆ 'ಚುಟೂ' ಎಂಬ ಸೂತ್ರದಿಂದ ಇಲ್ಲಿ 'ಡ'ಕಾರಕ್ಕೆ 'ಇತ್' ಸಂಜ್ಞೆ ಬರುವುದಿಲ್ಲ. ಆದ್ದರಿಂದಲೇ ಸೂತ್ರದಲ್ಲಿ 'ಬಹುಲಮ್' ಎಂಬ ಪದವನ್ನು ಪ್ರಯೋಗಿಸದ್ದಾರೆ. 'ಚುಟೂ' ಎಂಬ ಸೂತ್ರದ ನ್ಯಾಯವು ಔತ್ಸರ್ಗಿಕವಾದ್ದರಿಂದ ಎಲ್ಲೆಡೆ ಪ್ರಾಪ್ತವಾದರೂ ಪ್ರಕೃತದಲ್ಲಿ ಬಹುಲ ಶಬ್ದದ ಪ್ರಯೋಗವೆಂಬ ಬಾಧಕವಿರುವುದರಿಂದ ಪ್ರಾಪ್ತವಾಗುವುದಿಲ್ಲ. ಉದಾಹರಣೆ - 'ರಂಡಾ' ಎಂಬಲ್ಲಿ 'ರಮು' ಧಾತುವಿಗೆ 'ಡ' ಪ್ರತ್ಯಯವು ಬಂದಿದೆ. (ವಿಧವೆಯಾಗಿದ್ದರೂ ಮತ್ತೊಬ್ಬ ಪುರುಷನಿಂದ ಸುಖಪಡುತ್ತಾಳೆ ಮತ್ತು ಸುಖಪಡಿಸುತ್ತಾಳಾದ್ದರಿಂದ 'ರಂಡಾ' ಎನಿಸಿದ್ದಾಳೆ.) ವಸ್ತುತಃ ಇಲ್ಲಿಯೂ ಸಹ 'ರಮು' ಧಾತುವಿಗೆ 'ಞಮಂತಾಡ್ಡಃ' ಎಂಬ ಸೂತ್ರದಿಂದಲೇ 'ಡ' ಪ್ರತ್ಯಯವು ಪ್ರಾಪ್ತವಾಗಿದ್ದರೂ ವೃತ್ತಿಕಾರನೇ ಸ್ವತಃ "ಡಕಾರಸ್ಯೇತ್ಸಂಜ್ಞಾ ಪ್ರಾಪ್ತಾ ಬಹುಲವಚನಾನ್ನ ಭವತಿ, ರಮ್ಯತೇ ರಮಯತೇ ವಾ ರಂಡಾ ಪುನರ್ಭೂಃ" ಎಂದು ಹೇಳಿದ್ದಾರೆ. ಅದರಂತೆ ಪ್ರಕೃತದಲ್ಲಿಯೂ 'ಡ' ಪ್ರತ್ಯಯಕ್ಕೆ ಲೋಪವನ್ನು ಹೇಳಲು ಸಾಧ್ಯವಿರುವುದಿಲ್ಲವಲ್ಲವೇ?

ಉತ್ತರ - 'ಉಣಾದಿ' ಪ್ರತ್ಯಯಗಳನ್ನು ಪ್ರಯೋಗಕ್ಕೆ ಅನುಸಾರಿಯಾಗಿ ನಿರ್ವಹಿಸಬೇಕು. 'ದಂಡ', 'ಮಂಡ' 'ರಂಡ' ಮೊದಲಾದ ಪ್ರಯೋಗಗಳನ್ನು ನಿರ್ವಹಿಸುವುದಕ್ಕಾಗಿ 'ಡ' ಪ್ರತ್ಯಯಕ್ಕೆ ಅಲ್ಲಿ 'ಇತ್' ಸಂಜ್ಞೆಯನ್ನು ಹೇಳಿಲ್ಲ. ಆದರೆ ಪ್ರಕೃತ 'ಅಂತರ' ಎಂಬ ಪ್ರಯೋಗವನ್ನು ನಿರ್ವಹಿಸುವುದಕ್ಕಾಗಿ ನಾವು 'ಡ' ಪ್ರತ್ಯಯಕ್ಕೆ ಲೋಪವನ್ನು ಹೇಳುತ್ತೇವೆ. ಹೀಗೆ ಹೇಳುವುದು ತಪ್ಪಲ್ಲ.

**प्रकाशः** – यद्वा – आद्यस्य तृतीये 'विद्याचुञ्चुः' इत्यादिसिद्धये "षःप्रत्ययस्य" "चुटू" इति योगविभागकरणं "चुटू" इत्यस्यानित्यत्वज्ञापनार्थमिति वृत्त्यादावुक्तत्वेन 'रण्डा' 'दण्डः' इत्यादौ अभावेऽपि कचिदित्संज्ञा भवत्येव ।

ಅಥವಾ ಮತ್ತೊಂದು ಬಗೆಯಲ್ಲಿ 'ಅಂತರಃ' ಎಂಬ ಪ್ರಯೋಗವನ್ನೂ ಉಪಪಾದಿಸಬಹುದು - ಮೊದಲನೇ ಅಧ್ಯಾಯದ ಮೂರನೇ ಪಾದದಲ್ಲಿ 'ವಿದ್ಯಾಚುಂಚುಃ' ಎಂಬ ಪ್ರಯೋಗವನ್ನು ಹೀಗೆ ನಿಷ್ಪನ್ನ ಮಾಡಿದ್ದಾರೆ - 'ಷಃ ಪ್ರತ್ಯಯಸ್ಯ' ಎಂಬ ಸೂತ್ರದಲ್ಲಿ ಯಾವುದೇ ಪ್ರತ್ಯಯದಲ್ಲಿರುವ 'ಷ' ಕಾರಕ್ಕೆ 'ಇತ್ ಸಂಜ್ಞೆ' ಹೇಳಿದ್ದಾರೆ. ಅನಂತರ 'ಚುಟೂ' ಎಂಬ ಸೂತ್ರದಲ್ಲಿ ಯಾವುದೇ ಪ್ರತ್ಯಯದ ಆದಿಯಲ್ಲಿರುವ 'ಚ' ವರ್ಗಕ್ಕೂ 'ಟ' ವರ್ಗಕ್ಕೂ 'ಇತ್' ಸಂಜ್ಞೆ ಬರುತ್ತದೆಂದು ಹೇಳಿದ್ದಾರೆ.

ವಸ್ತುತಃ 'ಷಃ ಪ್ರತ್ಯಯಸ್ಯ' ಮತ್ತು 'ಚುಟೂ' ಎಂಬೆರಡು ಸೂತ್ರಗಳನ್ನು ಒಂದೇ ಸೂತ್ರವನ್ನಾಗಿ ಮಾಡಬಹುದಿತ್ತು. ಆದರೂ ಸಹ 'ಚುಟೂ' ಎಂಬ ಸೂತ್ರವನ್ನು ಯೋಗ ವಿಭಾಗ ಮಾಡಿದ್ದರಿಂದ ಒಂದು ಪ್ರಯೋಜನವನ್ನು ತಿಳಿಸಿದ್ದಾನೆ. ಏನೆಂದರೆ 'ಚುಟೂ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ 'ಇತ್' ಸಂಜ್ಞೆಯು ಅನಿತ್ಯವಾಗಿದೆಯೆಂದು.

ಹೀಗೆ ಅನಿತ್ಯತ್ವವನ್ನು ತಿಳಿಸಿದ್ದರಿಂದ 'ವಿದ್ಯಾಚುಂಚುಃ' ಎಂಬ ಪ್ರಯೋಗವು ಸಿದ್ಧವಾಗುತ್ತದೆ. (ಪ್ರಸಿದ್ಧಾರ್ಥದಲ್ಲಿ 'ಚುಂಚು' ಪ್ರತ್ಯಯ ಬರುವುದರಿಂದ 'ವಿದ್ಯಾಚುಂಚುಃ' ಎಂಬ ಪದಕ್ಕೆ ವಿದ್ಯೆಯಿಂದ ಪ್ರಸಿದ್ಧನಾದವನೆಂದರ್ಥ.) 'ವಿದ್ಯಾ' ಶಬ್ದದ ಮೇಲೆ 'ಚುಂಚು' ಪ್ರತ್ಯಯ ಬರುತ್ತದೆ. ಈ ಪ್ರತ್ಯಯದ ಆದಿಯಲ್ಲಿ 'ಚ'ಕಾರವಿರುವುದರಿಂದ 'ಚುಟೂ' ಎಂಬ ಸೂತ್ರದಿಂದ 'ಚ'ಕಾರವು ಲೋಪವಾಗಬೇಕಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಈಗಾಗಲೇ ಹೇಳಿದಂತೆ 'ಚುಟೂ' ಎಂಬ ಸೂತ್ರ ಅನಿತ್ಯವಾದ್ದರಿಂದ 'ಚುಂಚು' ಎಂಬಲ್ಲಿರುವ 'ಚ'ಕಾರಕ್ಕೆ ಲೋಪ ಬರುವುದಿಲ್ಲ.

ಆದ್ದರಿಂದ 'ರಂಡಾ', 'ದಂಡಃ' ಇತ್ಯಾದಿಗಳಲ್ಲಿ 'ಇತ್' ಸಂಜ್ಞೆ ಬಾರದಿದ್ದರೂ ಕೆಲವೆಡೆ ಬರುತ್ತದೆಂದು ತಿಳಿಯಬೇಕು. ಪ್ರಕೃತ 'ಡ' ಪ್ರತ್ಯಯದಲ್ಲಿರುವ 'ಡ' ಕಾರಕ್ಕೆ ಲೋಪ ಬರುವುದರಿಂದ 'ಅಂತರಃ' ಎಂಬ ರೂಪವು ನಿಷ್ಪನ್ನವಾಗುತ್ತದೆ.

**प्रकाशः** – ननु श्रुत्यनुक्तं कथं सूत्र्यत इत्यत आह – **श्रुतौ चेति** । आङ्पूर्वाद्ददातेर्मन्यतेश्च क्विपि सति आदेयमुपादेयं सुखं सुखसाधनं वा माति अनुभवति इति सुधोक्तनिर्वचनेनेत्यर्थः । **इति चेति** । न केवलं सूत्रे, श्रुतौ चेत्यर್थः ।

ಶ್ರುತಿಯಲ್ಲಿ ಹೇಳದ ರಮಣನನ್ನು ಸೂತ್ರದಲ್ಲಿ ಹೇಗೆ ಹೇಳಿದ್ದಾರೆ? ಎಂಬ ಪ್ರಶ್ನೆಗೆ 'ಶ್ರುತೌಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

'ಆಙ್' ಎಂಬ ಉಪಸರ್ಗದ ಮುಂದೆ 'ದಾ' ಧಾತು ಹಾಗೂ 'ಮಾ' ಧಾತುಗಳಿದ್ದಾಗ 'ಕೃತ್' ಪ್ರತ್ಯಯ ಬರುತ್ತದೆ. 'ಕೃತ್' ಪ್ರತ್ಯಯವು ಮುಂದಿದ್ದಾಗ ಹಿಂದಿರುವ ಆಕಾರಕ್ಕೆ ಲೋಪ ಬಂದು 'ಆದ್ಮನ್' ಎಂದಾಗುತ್ತದೆ. ನಿರ್ವಚನ ಪ್ರಯುಕ್ತವಾಗಿ 'ದ' ಕಾರಕ್ಕೆ ತಕಾರ ಬಂದಾಗ 'ಆತ್ಮನ್' ಎಂದಾಗಿದೆ. ಆದ್ದರಿಂದ ''ಆದೇಯಮುಪಾದೇಯಂ ಸುಖಂ ಸುಖಸಾಧನಂ ವಾ ಮಾತಿ ಅನುಭವತಿ'' ಶುಭವಾಗಿರುವ ಸುಖಸಾಧನವನ್ನು ಅನುಭವಿಸುತ್ತಾನೆಂಬ ನಿರ್ವಚನದಂತೆ ಆತ್ಮಶಬ್ದದಿಂದ ''ರಮಣ'' ಎಂಬ ಗುಣವನ್ನು ಹೇಳಿದಂತಾಗುತ್ತದೆ. ಆತ್ಮಶಬ್ದದ ಈ ನಿರ್ವಚನವು ಸುಧೆಯಲ್ಲಿ ಹೇಳಲ್ಪಟ್ಟಿದೆ.

ಶ್ಲೋಕದಲ್ಲಿರುವ 'ಇತಿಚ' ಎಂಬ ಪದಕ್ಕೆ ಕೇವಲ ಸೂತ್ರದಲ್ಲಷ್ಟೇ ಅಲ್ಲ ಶ್ರುತಿಯಲ್ಲೂ ಸಹ ರಮಣವನ್ನು ಹೇಳಿದ್ದಾರೆಂದರ್ಥ.

**प्रकाशः** – नन्वेवं सूत्रे 'अन्तरः' इत्यस्य चक्षुरन्तस्स्य आत्मेत्यर्थतया आत्मशब्दस्य प्रतिज्ञाभागप्रविष्टत्वात् कथमात्मश्रुतित्वेन हेतूकरणं, मैवं, अन्तस्स्थत्वमात्रस्यैव साध्यताविवक्षायां आत्मश्रुतेर्हेतुत्वस्याभिमतत्वात् ।

ಪ್ರಶ್ನೆ - ಸೂತ್ರದಲ್ಲಿರುವ 'ಅಂತರ' ಎಂಬ ಪದಕ್ಕೆ ಚಕ್ಷುರಂತರ್ಗತನಾದ ಆತ್ಮನೆಂಬರ್ಥವನ್ನು ಹೇಳಿದಿರಿ. ಆದ್ದರಿಂದ 'ಆತ್ಮ' ಎಂಬ ಶಬ್ದವು ಪ್ರತಿಜ್ಞೆಯಲ್ಲಿ ಸೇರಿದಂತಾಯಿತು. ಪುನಃ ಆತ್ಮ ಶ್ರುತಿಯನ್ನು ಹೇತುವೆಂದು ಹೇಗೆ ಹೇಳುತ್ತೀರಿ?

ಉತ್ತರ - ಪ್ರತಿಜ್ಞಾ ಭಾಗದಲ್ಲಿ ಆತ್ಮಶಬ್ದವನ್ನು ಸೇರಿಸಿಲ್ಲ. ಕೇವಲ ಅಂತಸ್ಥತ್ವವನ್ನಷ್ಟೇ ವಿವಕ್ಷಿಸಲಾಗಿದೆ. ಆದ್ದರಿಂದ ಆತ್ಮಶ್ರುತಿಯನ್ನು ಹೇತುವನ್ನಾಗಿ ವಿವಕ್ಷಿಸಬಹುದು.

**प्रकाशः** – अत एव भाष्ये ''चक्षुरन्तस्स्थो विष्णुरेव'' इत्येवोक्त्वा ''ब्रह्मशब्दाद्युपपत्तेश्च'' इत्युक्तम्, न्यायविवरणटीकायां च ''चक्षुरन्तस्स्थो हरिरेव अमृतत्वाभयत्वोपपत्तेरात्मादिशब्दात्'' इत्युक्तम्, सूत्रे चामृतत्वाभयत्वरूप-निरवकाशोपपत्तेरेवोक्तिः, अत्र टीकायां ''चक्षुरन्तरः'' इति सामान्योक्तिः ।

ಆದ್ದರಿಂದಲೇ ಭಾಷ್ಯದಲ್ಲಿ 'ಚಕ್ಷುರಂತಸ್ಥಃ ವಿಷ್ಣುಃ' ಚಕ್ಷುರಂತಸ್ಥನಾದವನು ವಿಷ್ಣುವೆಂದಷ್ಟೇ ಹೇಳಿದ್ದಾರೆ. ಮತ್ತು 'ಬ್ರಹ್ಮಶಬ್ದಾದ್ಯುಪಪತ್ತೇಶ್ಚ' ಬ್ರಹ್ಮಶಬ್ದ ಆತ್ಮಶಬ್ದಗಳನ್ನು ಲಿಂಗಗಳೆಂದು ಹೇಳಿದ್ದಾರೆ. ನ್ಯಾಯವಿವರಣದ ಟೀಕೆಯಲ್ಲಿಯೂ "ಚಕ್ಷುರಂತಸ್ಥೋ ಹರಿರೇವ ಅಮೃತತ್ವಾಭಯತ್ವೋಪಪತ್ತೇರಾತ್ಮಾದಿಶಬ್ದಾತ್' 'ಚಕ್ಷುರಂತರ್ಗತನಾದವನು ಹರಿಯೇ ಆಗಿದ್ದಾನೆ. ಅಮೃತತ್ವ ಅಭಯತ್ವಗಳೆಂಬ ಲಿಂಗಗಳಿರುವುದರಿಂದ ಮತ್ತು ಆತ್ಮಶಬ್ದ ಬ್ರಹ್ಮಶಬ್ದಗಳಿರುವುದರಿಂದ' ಎಂದು ಹೇಳುತ್ತಾರೆ. ಸೂತ್ರದಲ್ಲೂ ಸಹ ಅಮೃತತ್ವ ಅಭಯತ್ವವೆಂಬ ನಿರವಕಾಶಲಿಂಗಗಳನ್ನೇ ಹೇಳಿದ್ದಾರೆ. ಇದನ್ನು ವ್ಯಾಖ್ಯಾನಿಸುವ ಟೀಕೆಯಲ್ಲಿ 'ಚಕ್ಷುರಂತರಃ' ಎಂಬುದಾಗಿ ಆತ್ಮಶಬ್ದವನ್ನು ವಿವಕ್ಷಿಸದೇ ಸಾಮಾನ್ಯವಾಗಿ ಚಕ್ಷುರಂತರ್ಗತನೆಂದು ಹೇಳಿದ್ದಾರೆ. ಆದ್ದರಿಂದ ಚಕ್ಷುರಂತರ್ಗತನೆಂಬುದಷ್ಟೇ ಪ್ರತಿಜ್ಞಾ ಭಾಗವಾಗಿದೆ. ರಮಣಾರ್ಥವನ್ನು ಹೇಳುವ ಆತ್ಮಶಬ್ದವು ಹೇತುಭಾಗವಾಗಿದೆಯೆಂಬ ಸೂಕ್ಷ್ಮವನ್ನು ಗಮನಿಸಬೇಕು.




ಈ ಅಧಿಕರಣದಲ್ಲಿ ಒಟ್ಟು ಐದು ಸೂತ್ರಗಳಿವೆ. ಐದು ಸೂತ್ರಗಳ ಜೋಡಣೆಯು ಅತ್ಯಂತ ಸ್ವಾರಸ್ಯಮಯವಾಗಿದೆ. ಅದು ಹೀಗೆ - ಪ್ರಥಮ ಸೂತ್ರವು ವಿಷಯವಾಕ್ಯದಲ್ಲೇ ಇರುವ ಶ್ರುತಿಲಿಂಗಾದಿಗಳನ್ನು ಹೇಳುತ್ತಿರುವ ಕಾರಣ ಮೊದಲೇ ಉಲ್ಲೇಖಿಸಲು ಅರ್ಹವಾಗಿದೆ.

ಸೂತ್ರದಲ್ಲಿರುವ ಅಂತರ ಎಂಬ ಪದಕ್ಕೆ ಕೇವಲ ಅಂತರ್ಯಾಮಿ ಎಂದರ್ಥವಲ್ಲ. ಕಣ್ಣಿನ ಒಳಗಡೆ ಅಂತರ್ಯಾಮಿಯಾಗಿದ್ದು ರಮಿಸುತ್ತಾನೆಂದರ್ಥ. 'ಅಂತರ' ಎಂಬರಲ್ಲಿರುವ 'ಅಂತ' ಎಂಬ ಉಪಪದವು ಅಂತರ್ಯಾಮಿಯೆಂಬರ್ಥವನ್ನು ಹೇಳಿದರೆ 'ರ' ಎಂಬ ಧಾತು 'ರಮಣ' ಎಂಬರ್ಥವನ್ನು ಹೇಳುತ್ತಿದೆ. ಕೇವಲ ಅಂತರ್ಯಾಮಿಯೆಂಬರ್ಥವು ವಿವಕ್ಷಿತವಾಗಿದ್ದಲ್ಲಿ 'ಅಂತ' ಎಂಬ ಶಬ್ದವು ಸಾಕಿಗಿತ್ತು. ಈ ರಮಣ ಎಂಬರ್ಥವನ್ನು ಶ್ರುತಿಯಲ್ಲಿರುವ ಆತ್ಮಶಬ್ದವು 'ಆದೇಯಂ ಮಾತಿ' ಎಂಬ ವ್ಯುತ್ಪತ್ತಿಯಿಂದ ಸ್ಪಷ್ಟಪಡಿಸುತ್ತಿದೆ. ಆದ್ದರಿಂದ ಪ್ರಥಮಸೂತ್ರಕ್ಕೆ ಹೀಗರ್ಥ. ಕಣ್ಣಿನ ಒಳಗಡೆ ಅಂತರ್ಯಾಮಿಯಾಗಿ ರಮಿಸುವವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಅಮೃತತ್ವ, ಅಭಯತ್ವ ಮತ್ತು ಬ್ರಹ್ಮಶಬ್ದ ಆತ್ಮಶಬ್ದಗಳೆಂಬ ಲಿಂಗಗಳೆಂದು ಎಂದು.



● ● ● ● ●

## ಉಳಿದ ಸೂತ್ರಗಳ ಜೋಡಣೆಯೂ ಅತ್ಯಂತ ಸ್ವಾರಸ್ಯಮಯ

### तात्पर्यचन्द्रिका

**द्वितीये तदुत्तरवाक्यस्थलिङ्गोक्तिः ।**

**तृतीये प्रकरणोक्तिः । तत्र च ''कं ब्रह्म'' इति ब्रह्मशब्दोक्त पूर्णत्वरूपं श्रैष्ठ्यं विशिष्टत्वम् । विग्रहस्तु – सुखेन विशिष्टं इति वा, विशिष्टं च तत् सुखं चेति वा, सुखेषु विशिष्टमिति वा ?**

**तत्राऽऽद्ये सुखेन श्रैष्ठ्यं सुखस्य श्रैष्ठ्यं विना नेति सुखस्यापि तत्सिद्धिः । द्वितीये ''कडाराः कर्मधारये'' इति विशिष्टशब्दस्य परनिपातः ।**

**तृतीये ''सप्तमी'' इति योगविभागात् समासः । एवकारस्तु, तिष्ठतु तावत् ''खं ब्रह्म'' इति पूर्णज्ञानभिधानं, तन्निरपेक्षपूर्णसुखाभिधानादेवेति सूचनायेति टीकायामेवोक्तम् ।**

**चतुर्थसूत्रे प्रकरणविच्छेदाशङ्कायामुपसंहारस्थलिङ्गेनोद्धारः ।**

**पञ्चमे परपक्षे बाधकोक्तिरिति ।।**

ಅನುವಾದ - 'ಸ್ಥಾನಾದಿವ್ಯಪದೇಶಾಚ್ಚ' ಎಂಬುದು ಎರಡನೆಯ ಸೂತ್ರ. ಇದರಲ್ಲಿ ಮುಂದಿನ ವಾಕ್ಯದಲ್ಲಿರುವ ಕಣ್ಣಿನಲ್ಲಿ ಅಸಂಗವೆಂಬ ವಿಲಕ್ಷಣ ಸಾಮರ್ಥ್ಯವು ವಿಷ್ಣುವಿನ ಸನ್ನಿಧಾನದಿಂದ ಹೊಂದಿರುತ್ತದೆಂಬ ಲಿಂಗವನ್ನು ಹೇಳಿದ ಕಾರಣ ಪ್ರಥಮಸೂತ್ರದ ಆನಂತರ್ಯವು ಇದಕ್ಕೆ ಯುಕ್ತವಾಗುತ್ತದೆ.

'ಸುಖವಿಶಿಷ್ಟಾಭಿಧಾನಾದೇವ ಚ' ಎಂಬುದು ಮೂರನೆಯ ಸೂತ್ರ. ಈ ಸೂತ್ರದಲ್ಲಿ ಪ್ರಕರಣವನ್ನು ಪ್ರಮಾಣವನ್ನಾಗಿ ಹೇಳಲಾಗಿದೆ. ಪ್ರಕರಣದ ಆದಿಯಲ್ಲಿ ''ಕಂ ಬ್ರಹ್ಮ'' ಎಂಬುದಾಗಿ ಬ್ರಹ್ಮಶಬ್ದದಿಂದ ಪೂರ್ಣತ್ವರೂಪವಾದ ವಿಶೇಷವುಳ್ಳ ಸುಖವನ್ನು ಹೇಳಲಾಗಿದೆ. ಇದರಿಂದ ಬ್ರಹ್ಮನ ಸುಖವು ಶ್ರೇಷ್ಠವೆಂದು ತಿಳಿಯುತ್ತದೆ. 'ಸುಖವಿಶಿಷ್ಟ' ಎಂಬ ಪದಕ್ಕೆ ಮೂರುಬಗೆಯಲ್ಲಿ ವಿಗ್ರಹ -

೧. ಸುಖೇನ ವಿಶಿಷ್ಟಂ ಸುಖವಿಶಿಷ್ಟಂ ೨. ವಿಶಿಷ್ಟಂ ಚ ತತ್ ಸುಖಂ ಚ, ಸುಖವಿಶಿಷ್ಟಂ, ೩. ಸುಖೇಷು ವಿಶಿಷ್ಟಂ ಸುಖವಿಶಿಷ್ಟಂ.

ಇವುಗಳಲ್ಲಿ ಮೊದಲನೆಯ ವಿಗ್ರಹವನ್ನು ವಿವಕ್ಷಿಸಿದಾಗ ಸುಖದಿಂದ ಬ್ರಹ್ಮನು ಶ್ರೇಷ್ಠನಾಗಿದ್ದಾನೆಂದರೆ ಸುಖವೂ ಎಂದೂ ಸಹ ಶ್ರೇಷ್ಠವಾಗಿದೆಯೆಂದು ತಿಳಿಯುತ್ತದೆ. ಆದ್ದರಿಂದ ಬ್ರಹ್ಮನು ಹೇಗೆ ಪೂರ್ಣನೋ? ಅದರಂತೆ ಸುಖವೂ ಸಹ ಪೂರ್ಣವಾಗಿದೆ.

ಎರಡನೆಯ ಪಕ್ಷದಲ್ಲಿ 'ವಿಶಿಷ್ಟಂಚ ತತ್ ಸುಖಂಚ' ಎಂದು ವಿಗ್ರಹ ಮಾಡಿದಾಗ 'ವಿಶಿಷ್ಟ ಸುಖ' ಎಂದಗಾಬೇಕೇ ಹೊರತು, 'ಸುಖವಿಶಿಷ್ಟಂ' ಎಂದು ಹೇಗಾಯಿತು? ಎಂಬ ಪ್ರಶ್ನೆ ಬರುತ್ತದೆ. ಆದರೆ ''ಕಡಾರಾಃ ಕರ್ಮಧಾರಯೇ'' ಎಂಬ ಸೂತ್ರದಲ್ಲಿರುವ 'ಕಡಾರ' ಮೊದಲಾದ ಶಬ್ದಗಳು ಆಕೃತಿಗಣವಾದ್ದರಿಂದ ವಿಶಿಷ್ಟಶಬ್ದಕ್ಕೆ ಪರನಿಪಾತ ಮಾಡಬಹುದು. ಆದ್ದರಿಂದ 'ವಿಶಿಷ್ಟಸುಖಂ' ಎಂದು ಹೇಳಿದಂತೆ 'ಸುಖವಿಶಿಷ್ಟಂ' ಸಹ ಹೇಳಬಹುದು.

ಮೂರನೆಯ ವಿಗ್ರಹದಲ್ಲಿ 'ಸುಖೇಷು ವಿಶಿಷ್ಟಂ' ಎಂಬ ಸಪ್ತಮಿ ತತ್ಪುರುಷವನ್ನು ಹೇಗೆ ಮಾಡುತ್ತೀರಿ? ಏಕೆಂದರೆ 'ಸಪ್ತಮಿ ಶೌಂಡೈಃ' ಎಂಬ ಸೂತ್ರವು 'ಶೌಂಡ' ಮೊದಲಾದ ಶಬ್ದಗಳಿದ್ದಾಗ ಸಪ್ತಮಿತತ್ಪುರುಷ ಸಮಾಸವನ್ನು ವಿಧಿಸಿದೆಯಲ್ಲವೇ? ಎಂದು ಪ್ರಶ್ನಿಸಬಾರದು. 'ಸಪ್ತಮಿ' ಎಂಬುದನ್ನು ಪ್ರತ್ಯೇಕ ಸೂತ್ರವೆಂದು ಪರಿಗಣಿಸಿದಾಗ 'ಶೌಂಡಾದಿ' ಶಬ್ದಗಳಿದ್ದರೂ ಸಪ್ತಮಿ ತತ್ಪುರುಷವನ್ನು ಮಾಡಬಹುದೆಂದು ತಿಳಿಯುತ್ತದೆ.

ಸೂತ್ರದಲ್ಲಿರುವ ಏವಕಾರವು '''ಕಂ ಬ್ರಹ್ಮ' ಎಂಬ ಶ್ರುತಿಯಂತೆ ಪೂರ್ಣಸುಖವುಳ್ಳವನೆಂಬ ವಚನದಿಂದಲೇ ಇದು ಬ್ರಹ್ಮಪ್ರಕರಣವೆಂದು ತಿಳಿಯುತ್ತಿರುವಾಗ ಪೂರ್ಣಜ್ಞಾನವನ್ನು ಹೇಳಿರುವುದರಿಂದಲೂ ಬ್ರಹ್ಮಪ್ರಕರಣವೆಂದು ಹೇಳಬೇಕೇನು?'' ಎಂಬ ಕೈಮುತ್ಯವನ್ನು ಹೇಳುತ್ತಿದೆ.

''ಶ್ರುತೋಪನಿಷತ್ಕಗತ್ಯಭಿಧಾನಾಚ್ಚ'' ಎಂಬುದು ನಾಲ್ಕನೇ ಸೂತ್ರ - ಈ ಸೂತ್ರವು ಪ್ರಾರಂಭದಲ್ಲಿ ಬ್ರಹ್ಮನು ಪ್ರಸಕ್ತನಾಗಿದ್ದರೂ ಮುಂದೆ ಅಗ್ನಿಯ ಬಗ್ಗೆ ಪ್ರಸಕ್ತಿ ಇರುವುದರಿಂದ ಬ್ರಹ್ಮಪ್ರಕರಣಕ್ಕೆ ವಿಚ್ಛೇದ ಬರುತ್ತದೆಂಬ ಆಶಂಕೆಗೆ ಉತ್ತರಿಸುತ್ತಿದೆ. ಉಪಸಂಹಾರದಲ್ಲಿರುವ ಲಿಂಗದಿಂದಲೂ ಸಂಪೂರ್ಣ ಇದು ಬ್ರಹ್ಮನನ್ನೇ ಹೇಳುತ್ತದೆಂದು ಸಾಧಿಸುತ್ತದೆ.

''ಅನವಸ್ಥಿತೇಃ ಅಸಂಭವಾಚ್ಚ ನೇತರಃ'' ಎಂಬುದು ಐದನೆಯ ಸೂತ್ರ - ಈ ಸೂತ್ರದಲ್ಲಿ ಅನವಸ್ಥಾ ಮೊದಲಾದ ಬಾಧಕಗಳನ್ನು ಪರಪಕ್ಷದಲ್ಲಿ ಹೇಳಲಾಗಿದೆ. ಸ್ವಪಕ್ಷಸಾಧಕಗಳನ್ನು ಹೇಳಿದ

ನಂತರ ಪರಪಕ್ಷದಲ್ಲಿ ಬಾಧಕಗಳನ್ನು ಹೇಳಬೇಕಾದ ಕಾರಣ ಈ ಸೂತ್ರವು ಕೊನೆಯಲ್ಲೇ ಪ್ರಸಕ್ತವಾಗುತ್ತದೆ.

**प्रकाशः –**

**द्वितीय इति । स्थानादिसूत्रे । तत्र 'स्थानादि' इत्यस्य स्थानशक्तिरात्मशक्तिरित्यर्थः । लिङ्गेति । पुरुषसम्बन्धनिमित्तसर्पिराद्यसङ्गत्वादिलिङ्गेत्यर्थः ।**

ವಿವರಣೆ - ಪ್ರಥಮಸೂತ್ರವು ವಿಷಯವಾಕ್ಯದಲ್ಲೇ ಇರುವ ಶ್ರುತಿಲಿಂಗಗಳನ್ನು ವಿಷ್ಣು ಸಾಧಕವಾಗಿ ಹೇಳುತ್ತಿರುವ ಕಾರಣ ಮೊದಲು ಪ್ರಸಕ್ತವಾಗುತ್ತದೆ. ಅನಂತರ ಮುಂದಿನ ವಿಷಯವಾಕ್ಯದಲ್ಲಿರುವ ಸ್ಥಾನಾದಿವ್ಯಪದೇಶವೆಂಬ ಲಿಂಗವನ್ನು ಎರಡನೆಯ ಸೂತ್ರವು ಹೇಳುತ್ತಿರುವ ಕಾರಣ ಪ್ರಥಮಸೂತ್ರದ ಅನಂತರ ಪ್ರಸಕ್ತವಾಗುತ್ತದೆಂಬುದನ್ನು 'ದ್ವಿತೀಯೇ' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ. ದ್ವಿತೀಯಸೂತ್ರವೆಂದರೆ ಸ್ಥಾನಾದಿವ್ಯಪದೇಶಾಚ್ಚ ಎಂಬ ಸೂತ್ರ. 'ಸ್ಥಾನಾದಿ' ಎಂಬಲ್ಲಿರುವ ಆದಿಪದದಿಂದ ಸ್ಥಾನಶಕ್ತಿಯ ಜೊತೆಗೆ ಸ್ವರೂಪಶಕ್ತಿಯನ್ನೂ ಸಹ ವಿವಕ್ಷಿಸಬೇಕು. ಲಿಂಗ ಎಂದರೆ ಪುರುಷ ಸಂಬಂಧನಿಮಿತ್ತವಾದ ತುಪ್ಪ ಮೊದಲಾದವುಗಳ ಸಂಪರ್ಕ ಇಲ್ಲದಿರುವಿಕೆ ಎಂದರ್ಥ. ಅಂದರೆ ಪುರುಷನಾಮಕನಾದ ಪರಮಾತ್ಮನು ಚಕ್ಷುರಿಂದ್ರಿಯದಲ್ಲಿ ಅಂತರ್ಯಾಮಿಯಾಗಿದ್ದಾನೆ. ಇವನಲ್ಲಿ ಅಸಂಗಶಕ್ತಿಯಿದೆ. ಇವನ ಸನ್ನಿಧಾನದಿಂದ ಚಕ್ಷುರಿಂದ್ರಿಯಕ್ಕೂ ಸಹ ಅಸಂಗಶಕ್ತಿ ಬಂದಿರುತ್ತದೆ.

**प्रकाशः – यदत्रोक्तं श्रुतप्रकाशे – अक्ष्णोर्निर्लेपत्वं न अक्षिस्थस्य विष्णुत्वे हेतुः, तत्सम्बन्धेन काचादिलेपस्याप्यभावप्रसङ्गादिति, तन्न, "स ईशः सोऽसपत्नः"**

**यत्स्थानत्वादिदं चक्षुरसङ्गं सर्ववस्तुभिः ।**

**इत्यादिप्रागुक्तश्रुतिविरोधात् ।**

**इतिहासपुराणाभ्यां वेदं समुपबृंहयेत् ।**

**इत्युक्त्या स्मृतिवशेन श्रुत्यर्थस्य च वाच्यत्वात् ।**

**काचित्ककाचादिदोषस्य तदीयदुरदृष्टसहायेनेश्वरेणैत कारितत्वादिति ।**

ಆಕ್ಷೇಪ - "ಅಕ್ಷ್ಣೋರ್ನಿರ್ಲೇಪತ್ವಂ ನ ಅಕ್ಷಿಸ್ಥಸ್ಯ ವಿಷ್ಣುತ್ವೇ ಹೇತುಃ, ತತ್ಸಂಬಂಧೇನ ಕಾಚಾದಿಲೇಪಸ್ಯಾಪ್ಯಭಾವಪ್ರಸಂಗಾತ್" "ಚಕ್ಷುರಿಂದ್ರಿಯವು ನಿರ್ಲೇಪವೆನಿಸಲು ಅಂತರ್ಯಾಮಿಯಾದ ಅಸಂಗನಾದ ವಿಷ್ಣುವಿನ ಸನ್ನಿಧಾನವೇ ಕಾರಣವೆಂದು ಹೇಳಿದಿರಿ. ಇದು ತಪ್ಪು. ಹಾಗಾದರೆ ವಿಷ್ಣುವಿನಿಲ್ಲಿ ಕಾಚ (ಪೊರೆ), ಕಾಮಾಲೆ ಮೊದಲಾದ ದೋಷಗಳು ಇಲ್ಲದ ಕಾರಣ. ಅವನ ಸಂಪರ್ಕವಿರುವ ಕಣ್ಣಿಗೂ ಸಹ 'ಕಾಚ, ಕಾಮಾಲೆ' ಮೊದಲಾದ ದೋಷಗಳು ಬಾರದಿರಬೇಕಾದೀತು. ಆದ್ದರಿಂದ ವಿಷ್ಣು ನಿರ್ಲೇಪವಾದ ಮಾತ್ರಕ್ಕೆ ಚಕ್ಷುರಿಂದ್ರಿಯವು ನಿರ್ಲೇಪವಾಗಬೇಕಾಗಿಲ್ಲ" ಎಂದು ಶ್ರುತಪ್ರಕಾಶದಲ್ಲಿ ಆಕ್ಷೇಪಿಸಲಾಗಿದೆ.

ಸಮಾಧಾನ - ಶ್ರುತಪ್ರಕಾಶದ ಈ ವಾದಬಲ್ಲಿ ಹುರುಳಿಲ್ಲ. ಏಕೆಂದರೆ ಭಗವಂತನ ಯಾವುದೇ ಮಹಿಮೆಯು ತರ್ಕಕ್ಕೆ ನಿಲುಕುವಂತದ್ದಲ್ಲ. ಹೊರತಾಗಿ ಶ್ರುತಿಗಳು ಹೇಳುವಂತೆ ಯಥಾಸ್ಥಿತವಾದ್ದನ್ನು ತಿಳಿಯುವುದಷ್ಟೇ ನಮ್ಮ ಧರ್ಮ. ಶ್ರುತಿಗಳಾದರೂ "ಸ ಈಶಃ ಸೋऽಸಪತ್ನಃ" "ಯತ್‌ಸ್ಥಾನತ್ವಾದಿದಂ ಚಕ್ಷುರಸಂಗಂ ಸರ್ವವಸ್ತುಭಿಃ" ಎಂಬುದಾಗಿ ಭಗವಂತನು ಅಸಂಗನಾದ್ದರಿಂದ ಅಧಿಷ್ಠಾನಭೂತವಾದ ಚಕ್ಷುರಿಂದ್ರಿಯವೂ ಅಸಂಗವಾಗಿದೆಯೆಂದು ಹೇಳಿದೆ. "ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹ ಯೇತ್" ಎಂಬ ಮಾತಿನಂತೆ ಶ್ರುತ್ಯರ್ಥವನ್ನು ಸ್ಮೃತಿಗೆ ಅನುಸಾರಿಯಾಗಿ ವ್ಯಾಖ್ಯಾನಿಸಬೇಕು. ಕೆಲವೊಬ್ಬರಿಗೆ ಕಾಚಕಾಮಾಲಾದಿ ದೋಷಗಳು ಬರಬಹುದು. ಆದರೆ ಅವರ ದುರದೃಷ್ಟದಿಂದ ಭಗವಂತನೇ ಅಂತಹ ರೋಗಕ್ಕೆ ಕಾರಣನಾಗಿರುತ್ತಾನೆ. ಆದ್ದರಿಂದ ಅಸಂಗನಾದ ಭಗವಂತನು ತನ್ನಲ್ಲಿರುವ ಅಸಂಗಶಕ್ತಿಯನ್ನು ಮಾತ್ರ ಕಣ್ಣಿಗೆ ನೀಡಿ ತುಪ್ಪ ನೀರು ಮೊದಲಾದವುಗಳ ಸಂಪರ್ಕ ಕಣ್ಣಿಗೆ ಬಾರದಂತೆ ಮಾಡಿದ್ದಾನೆ ಹೊರತು ತನ್ನಲ್ಲಿರುವ ಎಲ್ಲ ಗುಣಗಳನ್ನು ಕಣ್ಣಿಗೆ ನೀಡಿರುವುದಿಲ್ಲ.

**प्रकाशः** – तृतीय इति । ''सुखविशिष्ट'' इत्यत्र उपक्रमे ''कं ब्रह्म खं ब्रह्म'' इति पूर्णसुखत्वरूपब्रह्मलक्षणाभिधानात्प्रकरणस्य वैष्णवत्वावगमादिति तत्रोच्यत इत्यर्थः ।

ननु श्रुतौ ''कं ब्रह्म'' इति सुखस्यैवोक्त्या तत्सम्बन्धाभिधानाभावात् विशिष्टपदमयुक्तमित्यतो न सम्बन्धवाचकं तदित्याह – **तत्र चेति** ।

ಮೂರನೆಯ ಸೂತ್ರದಲ್ಲಿ "ಕಂ ಬ್ರಹ್ಮ ಖಂ ಬ್ರಹ್ಮ" ಎಂಬುದಾಗಿ ಉಪಕ್ರಮದಲ್ಲಿ ಪೂರ್ಣಸುಖತ್ವವೆಂಬ ಬ್ರಹ್ಮನ ಲಕ್ಷಣವನ್ನು ಹೇಳಲಾಗಿದೆ. ಆದ್ದರಿಂದ ಸಂಪೂರ್ಣ ಪ್ರಕರಣವು ವಿಷ್ಣುಪರವೆಂದು ನಿರ್ಣಯವಾಗುತ್ತದೆ.

ಪ್ರಶ್ನೆ - "ಕಂ ಬ್ರಹ್ಮ" ಎಂಬುದಾಗಿ ಶ್ರುತಿಯಲ್ಲಿ ಸುಖವನ್ನಷ್ಟೇ ಹೇಳಲಾಗಿದೆ ಹೊರತು ಸುಖದ ಸಂಬಂಧವನ್ನು ಹೇಳಿದ್ದು ಕಾಣಿಸುವುದಿಲ್ಲ. ಹೀಗಿರುವಾಗ ಸೂತ್ರದಲ್ಲಿ ವಿಶಿಷ್ಟಪದವನ್ನು ಹೇಳಿದ್ದು ತಪ್ಪಲ್ಲವೇ?

ಉತ್ತರ - ಸೂತ್ರದಲ್ಲಿರುವ ವಿಶಿಷ್ಟ ಪದಕ್ಕೆ ಸಂಬಂಧವೆಂದರ್ಥವಲ್ಲ ಎಂಬುದಾಗಿ 'ತತ್ರಚ' ಇತ್ಯಾದಿ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः** – तत्र ब्रह्मपदेन न विष्णुरित्यभिमतं, किन्तु कं सुखं पूर्णमित्येव तस्यार्थ इति भावः । तर्हि ''विशिष्टसुखाभिधानात्'' इति विशिष्टपदस्य पूर्वनिपातः स्यात्, ''उपसर्जनं पूर्वम्'' इति पाणिनिस्मरणात्, अस्य च विशेषणत्वेनोप-सर्जनत्वादित्यत आह – **विग्रहस्त्विति** ।

''ಕಂ ಬ್ರಹ್ಮ'' ಎಂಬಲ್ಲಿರುವ ಬ್ರಹ್ಮ ಪದಕ್ಕೆ ವಿಷ್ಣುವೆಂದರ್ಥವಲ್ಲ. ಹೊರತಾಗಿ ಕಂ = ಸುಖವು, ಬ್ರಹ್ಮ = ಪೂರ್ಣವಾಗಿದೆ ಎಂದರ್ಥ.

ಪ್ರಶ್ನೆ - ಹೀಗೆ ಬ್ರಹ್ಮಪದಕ್ಕೆ ಪೂರ್ಣವೆಂಬರ್ಥವನ್ನು ಹೇಳುವುದಾದರೆ ವಿಶಿಷ್ಟ ಪದವು ವಿಶೇಷವಾಚಕವಾಗುತ್ತದೆ. ಆವಾಗ ''ವಿಶಿಷ್ಟಸುಖಾಭಿಧಾನಾತ್'' ಎಂಬುದಾಗಿ ವಿಶಿಷ್ಟಪದವು ಪೂರ್ವನಿಪಾತವಾಗುತ್ತದೆ. ''ಉಪಸರ್ಜನಂ ಪೂರ್ವಮ್'' ಎಂಬ ಪಾಣಿನಿಸೂತ್ರವು ವಿಶೇಷಣ ವಾಚಕ-ಪದಕ್ಕೆ ಪೂರ್ವನಿಪಾತವನ್ನು ಹೇಳಿದೆ. 'ವಿಶಿಷ್ಟ' ಪದವು ವಿಶೇಷಣವಾಗಿರುವುದರಿಂದ ಉಪಸರ್ಜನವಾಯಿತು. ಆದ್ದರಿಂದ 'ವಿಶಿಷ್ಟಸುಖಾಭಿಧಾನಾತ್' ಎಂದೇ ಸಮಾಸವಾಗಬೇಕು ಹೊರತು 'ಸುಖವಿಶಿಷ್ಟಾಭಿಧಾನಾತ್' ಎಂದಾಗುವುದಿಲ್ಲ. ಆದ್ದರಿಂದ ಸೂತ್ರದಲ್ಲಿ 'ಸುಖವಿಶಿಷ್ಟಾಭಿಧಾನಾತ್' ಎಂದು ಹೇಳಿದ್ದು ತಪ್ಪಲ್ಲವೇ?

ಉತ್ತರ - ಈ ಪ್ರಶ್ನೆಗೆ 'ವಿಗ್ರಹಸ್ತು' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಂದರೆ 'ಕಡರಾಃ ಕರ್ಮಧಾರಯೇ' ಎಂಬಲ್ಲಿರುವ 'ಕಡಾರ' ಪದವು ಆಕೃತಿ ಗಣವಾದ್ದರಿಂದ ವಿಶಿಷ್ಟಪದಕ್ಕೂ ಸಹ ಪರನಿಪಾತವನ್ನು ಹೇಳಬಹುದು. ಆದ್ದರಿಂದ ಸೂತ್ರದಲ್ಲಿರುವ 'ಸುಖವಿಶಿಷ್ಟಾಭಿಧಾನಾತ್' ಎಂಬ ಪ್ರಯೋಗವು ತಪ್ಪಲ್ಲ.

**प्रकाशः – सप्तमीति** । ''सप्तमी शौण्डैः'' इति सूत्रेण शौण्डादिभिरेव सप्तमीतत्पुरुषविधानात् तत्र च विशिष्टपदस्यापाठाद्योगविभागेन सप्तम्यन्तमिष्टविषये समस्यत इत्यभियुक्तोक्तेः समास इत्यर्थः । विष्णोस्सुखरूपत्वात्सुखेष्विति विग्रहप्रदर्शनम् ।

''ಸಪ್ತಮೀ ಶೌಂಡೈಃ'' ಎಂಬಲ್ಲಿ 'ಶೌಂಡ' ಮೊದಲಾದ ಶಬ್ದಗಳಿಗಷ್ಟೇ ಸಪ್ತಮೀ ತತ್ಪುರುಷವನ್ನು ವಿಧಿಸಲಾಗಿದೆ. ಶೌಂಡಾದಿ ಗಣದಲ್ಲಿ ವಿಶಿಷ್ಟ ಪದವನ್ನು ಪಠಿಸಿಲ್ಲ. ಆದ್ದರಿಂದ 'ಸಪ್ತಮೀ' ಎಂಬುದನ್ನೇ ಬೇರೆ ಸೂತ್ರವೆಂದು ಪರಿಗಣಿಸಬೇಕು. ಆವಾಗ ಯಾವುದೇ ಪದವು ಪರದಲ್ಲಿದ್ದಾಗ ನಮಗೆ ಇಚ್ಛೆ ಬಂದ ವಿಷಯದಲ್ಲಿ ಸಪ್ತಮೀ ಸಮಾಸವನ್ನು ಮಾಡಬಹುದು. ಹೀಗೆ ಜ್ಞಾನಿಗಳೇ ಒಪ್ಪಿರುವುದರಿಂದ 'ಸುಖೇಷು ವಿಶಿಷ್ಟಂ' ಎಂಬ ವಿಗ್ರಹವನ್ನು ಆಶ್ರಯಿಸಿದ್ದು ತಪ್ಪಲ್ಲ. ವಿಷ್ಣುವು ಸುಖರೂಪನಾದ್ದರಿಂದ ''ಸುಖೇಷು ವಿಶಿಷ್ಟಂ'' ಎಂಬ ವಿಗ್ರಹವನ್ನು ಪ್ರದರ್ಶಿಸಿದ್ದಾರೆ.

**प्रकाशः** – नन्वत्र सुखाभिधानादित्येव पूर्त्तौ विशिष्टपदं व्यर्थं, न व्यर्थं, सुखस्यान्यत्रापि सत्त्वेन व्यभिचारापत्त्या तन्निरासकत्वादिति सुधायामेवोक्तेरिति भावः ।

**चतुर्थ इति** । ''श्रुतोपनिषत्'' इति सूत्रे । विद्याशब्दाभ्यासो नेति भावः । **लिङ्गेनेति** । ''स एनान् ब्रह्म गमयति'' इति एतद्विद्याफलत्वेन ब्रह्मगत्यभिधान-रूपलिङ्गेनेत्यर्थः ।

ಪ್ರಶ್ನೆ - 'ಸುಖಾಭಿಧಾನಾತ್' ಎಂದು ಹೇಳಿದ್ದರಿಂದಲೇ ಉದ್ದೇಶವು ಸಿದ್ಧಿಸುವುದರಿಂದ ಪುನಃ ವಿಶಿಷ್ಟಪದವು ವ್ಯರ್ಥವಲ್ಲವೇ?

ಉತ್ತರ - ವ್ಯರ್ಥವಲ್ಲ. ಭಗವಂತನನ್ನು ಬಿಟ್ಟು ಬೇರೆಯವರಲ್ಲಿಯೂ ಸುಖವಿರುವುದರಿಂದ ವ್ಯಭಿಚಾರದೋಷವು ಬರುತ್ತದೆ. ಅದನ್ನು ನಿರಾಸ ಮಾಡುವುದಕ್ಕಾಗಿ ಭಗವಂತನಲ್ಲಿರುವ ಸುಖವು ವಿಶಿಷ್ಟಸುಖವಾಗಿದೆಯೆಂದು ಹೇಳಿದ್ದಾರೆ. ಈ ವಿಷಯವು ನ್ಯಾಯಸುಧೆಯಲ್ಲಿ ಹೇಳಲ್ಪಟ್ಟಿದೆ.

'ಶ್ರುತೋಪನಿಷತ್' ಎಂಬ ನಾಲ್ಕನೆಯ ಸೂತ್ರದಲ್ಲಿ ವಿದ್ಯಾಶಬ್ದದ ಅಭ್ಯಾಸವು ಬ್ರಹ್ಮಪ್ರಕರಣಕ್ಕೆ ವಿಚ್ಛೇದಕವಾಗಿದೆ ಎಂಬ ಆಶಂಕೆಯನ್ನು ಉಪಸಂಹಾರದಲ್ಲಿರುವ ಲಿಂಗಗದಿಂದ ಪರಿಹರಿಸಿದ್ದಾರೆ. ''ಸ ಏನಾನ್ ಬ್ರಹ್ಮ ಗಮಯತಿ'' ಎಂಬುದಾಗಿ ಬ್ರಹ್ಮನನ್ನೇ ಹೊಂದುತ್ತಾರೆಂದು ವಿದ್ಯಾಫಲವನ್ನು ಹೇಳಿದ್ದಾರೆ. ಬ್ರಹ್ಮಗತಿಯೆಂಬ ಲಿಂಗವು ಉಪಸಂಹಾರದಲ್ಲಿ ಹೇಳಲ್ಪಟ್ಟದೆಯೆಂದು ತಿಳಿಯಬೇಕು.

**गुरुराजीयम् – ।। अन्तरुपपदादिति ।।** अत्र चान्तश्शब्दसमानार्थकोऽन्त-शब्द एव विवक्षित इति वा उपपदान्त्यलोपो विवक्षित इति वा समाधानं बोध्यमिति । तेन रोरीति रेफलोपे 'द्रलोपे' इति दीर्घत्वेऽन्तार इति स्यादिति निरस्तं भवति ।। **प्रकरणोक्तिरिति ।।** प्रकरणादौ विद्यमानोपक्रमादेः प्रकरणनिश्चायकत्वादिति भावः ।




ವಿಷಯವಾಕ್ಯಗಳಲ್ಲಿರುವ ಶ್ರುತಿಲಿಂಗಗಳನ್ನು ಪ್ರಮಾಣವನ್ನಾಗಿ ಹೇಳುತ್ತಿರುವುದರಿಂದ ''ಅಂತರ ಉಪಪತ್ತೇಃ'' ಎಂಬ ಸೂತ್ರವು ಮೊದಲು ನಿಮಿತ್ತವಾಗಿವೆ. ಮುಂದಿನ ವಾಕ್ಯದಲ್ಲಿರುವ ಸ್ಥಾನಶಕ್ತಿ ಹಾಗೂ ಸ್ವರೂಪಶಕ್ತಿಗಳೆಂಬ ಲಿಂಗಗಳನ್ನು ಪ್ರತಿಪಾದಿಸುತ್ತಿರುವುದರಿಂದ 'ಸ್ಥಾನಾದಿವ್ಯಪದೇಶಾಚ್ಚ' ಎಂಬ ಸೂತ್ರವು ಎರಡನೆಯ ಸ್ಥಾನವನ್ನು ಹೊಂದಿದೆ.

ಪ್ರಕರಣದ ಪ್ರಾರಂಭದಲ್ಲಿರುವ ಬ್ರಹ್ಮನ ಲಿಂಗವನ್ನು ಪ್ರತಿಪಾದಿಸುವ ಕಾರಣ 'ಸುಖವಿಶಿಷ್ಟಾಭಿಧಾನಾದೇವಚ' ಎಂಬ ಸೂತ್ರವು ಮೂರನೆಯ ಸ್ಥಾನವನ್ನು ಅಲಂಕರಿಸಿದೆ.

ಉಪಕ್ರಮದಿಂದ ಪ್ರಾಪ್ತವಾದ ಬ್ರಹ್ಮಪ್ರಕರಣಕ್ಕೆ ವಿದ್ಯಾಭೇದವು ವಿಚ್ಛೇದಕವಾದಾಗ ಅದನ್ನು ಪರಿಹರಿಸಲು ಉಪಸಂಹಾರದಲ್ಲಿರುವ ಲಿಂಗವನ್ನು ಉಲ್ಲೇಖಿಸುವ ''ಶ್ರುತೋಪನಿಷತ್ಕಗತ್ಯಭಿಧಾನಾಚ್ಚ'' ಎಂಬ ಸೂತ್ರವು ನಾಲ್ಕನೆಯ ಸ್ಥಾನವನ್ನು ಪಡೆದಿದೆ.

ಪರಪಕ್ಷದಲ್ಲಿ ಬಾಧಕಗಳನ್ನು ಸಾಧಿಸುವುದರಿಂದ 'ಅನವಸ್ಥಿತೇರಸಂಭವಾಚ್ಚ ನೇತರಃ' ಎಂಬ ಸೂತ್ರವು ಕೊನೆಯ ಸ್ಥಾನವನ್ನು ಅಲಂಕರಿಸಿದೆ. ಹೀಗೆ ಸೂತ್ರಕಾರರ ಸೂತ್ರದ ಜೋಡಣೆ ಅತ್ಯಂತ ಸ್ವಾರಸ್ಯಮಯವಾಗಿದೆ.



● ● ● ● ●

## ಅದ್ವೈತಿಗಳಿಗೆ ರಾಮಾನುಜರಿಗೆ ಪುನರುಕ್ತಿ ದೋಷ

### तात्पर्यचन्द्रिका

**परमतद्वयेऽपीदं "अन्तस्तद्धर्म" इत्यनेन गतार्थम्, तत्राऽऽदित्यस्थत्ववदक्षिस्थत्वस्याप्युक्तेः ।**

**नच तत्रोद्गीथोपासनस्थं अक्षिवाक्यं विषयः, अत्र तूपकोसलविद्यास्थमक्षिवाक्यमित्येतावतैव अगतार्थत्वम् ।**

**श्रूयन्ते च तत्रेवात्राप्यन्यत्रासम्भवन्तोऽमृतत्वादयो ब्रह्मधर्माः, ब्रह्मशब्दश्चात्राधिकः ।**

**नचात्र "य एषोऽन्तरक्षिणि पुरुषो दृश्यते" इति प्रसिद्धवदभिधानात् दृश्यत्वोक्तेश्चाधिकाशङ्का, तत्रापि 'य एषोऽन्तरक्षिणि पुरुषो दृश्यते" इति श्रुतेः ।**[1]

(१) अन्तर उपपत्तेः

**शङ्करभाष्यम् -**

छायाजीवौ देवतेशौ वाऽसौ योऽक्षिणि दृश्यते ।
आधारदृश्यतोक्त्येशादन्येषु त्रिषु कश्चन ।।
कं खं ब्रह्म यदुक्तं प्राक् तदेवाक्षिण्युपास्यते ।
वामनीत्वादिनान्येषु नामृतत्वादिसम्भवः ।।

'य एषोऽक्षिणि पुरुषो दृश्यत एष आत्मेति होवाचैतदमृतमभयमेतद् ब्रह्मेति । तद्यद्यप्यस्मिन् सर्पिर्वोदकं वा सिञ्चति वर्त्मनी एव गच्छति' इत्यादि श्रूयते । तत्र संशयः । किमयं प्रतिबिम्बात्माक्ष्यधिकरणो निर्दिश्यतेऽथवा विज्ञानात्मा उत देवतात्मेन्द्रियस्याधिष्ठातायवेश्वर इति । किं तावत् प्राप्तम्, छायात्मा पुरुषप्रतिरूप इति । कुतः? तस्य दृश्यमानत्वप्रसिद्धेः । 'य एषोऽक्षिणि पुरुषो दृश्यते' इति च प्रसिद्धवदुपदेशात् । विज्ञानात्मनो वायं निर्देश इति युक्तम् । सहि चक्षुषा रूपं पश्यंश्चक्षुषि

सन्निहितो भवति । आत्मशब्दश्चास्मिन् पक्षेऽनुकूलो भवति । आदित्त्यपुरुषो वा चक्षुषोऽनुग्राहकः प्रतीयते, रश्मिभिरेषोऽस्मिन् प्रतिष्ठितः' इति श्रुतेः । अमृतत्वादीनां च देवतात्मन्यपि कथञ्चित् सम्भवात् । नेश्वरः, स्थानविशेषनिर्देशादित्येवं प्राप्ते ब्रूमः । परमेश्वर एवाक्षिण्यभ्यन्तरः पुरुष इवोपदिष्ट इति । कस्माद्, उपपत्तेः । उपपद्यते हि परमेश्वरे गुणजातमिहोपदिश्यमानम् । आत्मत्वं तावन्मुख्यया वृत्त्या परमेश्वर उपपद्यते । 'स आत्मा तत्त्वमसि' इति श्रुतेः । अमृतत्वाभयत्वे च तस्मिन्नसकृच्छ्रुतौ श्रूयेते । तथा परमेश्वरानुरूपमेतदक्षिस्थानम् । यथाहि परमेश्वरः सर्वदोषैरलिप्तः, अपहतपाप्मत्वादिश्रवणात् । तथाक्षिस्थानं सर्वलेपरहितमुपदिष्टम्, 'तद् यद्यप्यस्मिन् सर्पिर्वोदकं वा सिञ्चति वर्त्मनी एव गच्छति' इति श्रुतेः । संयद्वामत्वादिगुणोपदेशश्च तस्मिन्नवकल्पते । 'एतं संयद्वाम इत्याचक्षते एतं हि सर्वाणि वामान्यभिसंयन्ति' । 'एष उ एव वामनीरेष हि सर्वाणि वामानि नयति' । 'एष उ एव भामनीरेष हि सर्वेषु लोकेषु भाति' इति च । अत उपपत्तेरन्तरः परमेश्वरः ॥

**स्थानादिव्यपदेशाच्च**

कथं पुनराकाशवत् सर्वगतस्य ब्रह्मणोऽक्ष्यल्पस्थानमुपपद्यत इति । अत्रोच्यते, भवेदेषाऽनवक्लृप्तिः, यद्येतदेवैकं स्थानमस्य निर्दिष्टं भवेत् । सन्ति ह्यन्यान्यपि पृथिव्यादीनि स्थानान्यस्य निर्दिष्टानि । 'यः पृथिव्यां तिष्ठन्' इत्यादिना । तेषु हि चक्षुरपि निर्दिष्टम् 'यश्चक्षुषि तिष्ठन्' इति । 'स्थानादिव्यपदेशाद्' इत्यादिग्रहणेनैतद्दर्शयति । न केवलं स्थानमेवैकमनुचितं ब्रह्मणो निर्दिश्यमानं दृश्यते किं तर्हि नामरूपमित्येवंजातीयकमप्यनारूपस्य ब्रह्मणोऽनुचितं निर्दिश्यमानं दृश्यते 'तस्योदिति नाम' 'हिरण्यश्मश्रुः' इत्यादि । निर्गुणमपि सद् ब्रह्म नामरूपगतैर्गुणैः सगुणमुपासनार्थं तत्र तत्रोपदिश्यत इत्येतदप्युक्तमेव । सर्वगतस्यापि ब्रह्मण उपलब्ध्यर्थं स्थानविशेषो न विरुद्ध्यते, शालग्राम इव विष्णोरित्येतदप्युक्तमेव ॥

**सुखविशिष्टाभिधानादेव च**

अपि च नैवात्र विवदितव्यम्, किं ब्रह्मास्मिन् वाक्येऽभिधीयते न वेति । सुखविशिष्टाभिधानादेव ब्रह्मत्वं सिद्धम् । सुखविशिष्टं हि ब्रह्म यद्वाक्योपक्रमे प्रक्रान्तं 'प्राणो ब्रह्म कं ब्रह्म खं ब्रह्म' इति तदेवेहाभिहितम्, प्रकृतपरिग्रहस्य न्याय्यत्वात् । 'आचार्यस्तु ते गतिं वक्ता' इति च गतिमात्राभिधानप्रतिज्ञानात् । कथं पुनर्वाक्योपक्रमे सुखविशिष्टं ब्रह्म विज्ञायत इति । उच्यते 'प्राणो ब्रह्म कं ब्रह्म खं ब्रह्म' इत्येतदग्नीनां वचनं श्रुत्वोपकोसल उवाच 'विजानाम्यहं यत् प्राणो ब्रह्म कं च तु खं च न विजानामि' इति । तत्रेदं प्रतिवचनम् 'यद्वाव कं तदेव खं यदेव खं तदेव कम्' इति । तत्र खंशब्दो

भूताकाशे निरूढो लोके । यदि तस्य विशेषणत्वेन कंशब्दः सुखवाची नोपादीयेत । तथा सति केवले भूताकाशे ब्रह्मशब्दो नामादिष्विव प्रतीकाभिप्रायेण प्रयुक्त इति प्रतीतिः स्यात् । तथा कंशब्दस्य विषयेन्द्रियसम्पर्कजनिते सामये सुखे प्रसिद्धत्वात्, यदि तस्य खंशब्दो विशेषणत्वेन नोपादीयेत, लौकिकं सुखं ब्रह्मेति प्रतीतिः स्यात् । इतरेतरविशेषितौ तु कं खंशब्दौ सुखात्मकं ब्रह्म गमयतः । तत्र द्वितीये ब्रह्मशब्देऽनुपादीयमाने कं खं ब्रह्मेत्येवोच्यमाने कंशब्दस्य विशेषणत्वेनैवोपयुक्तत्वात् सुखस्य गुणस्याध्येयत्वं स्यात्, तन्मा भूदित्त्युभयोः कंखंशब्दयोर्ब्रह्मशब्दशिरस्त्वं 'कं ब्रह्म खं ब्रह्म' इति । इष्टं हि सुखस्यापि गुणस्य गुणिवद् ध्येयत्वम् । तदेवं वाक्येपक्रमे सुखविशिष्टं ब्रह्मोपदिष्टम् । प्रत्येकं च गार्हपत्यादयोऽग्नयः स्वं स्वं महिमानमुपदिश्य 'एषा सोम्य तेऽस्मद्विद्यात्मविद्या च' इत्युपसंहरन्तः पूर्वत्र ब्रह्म निर्दिष्टमिति ज्ञापयन्ति । 'आचार्यस्तु ते गतिं वक्ता' इति च गतिमात्राभिधानप्रतिज्ञानमर्थान्तरविवक्षां वारयति । यथा 'पुष्करपलाश आपो न श्लिष्यन्त एवमेवंविदि पापं कर्म न श्लिष्यते' इति चाक्षिस्थानं पुरुषं विजानतः पापेनानुपघातं ब्रुवन्नक्षिस्थानस्य पुरुषस्य ब्रह्मत्वं दर्शयति । तस्मात् प्रकृतस्यैव ब्रह्मणोऽक्षिस्थानतां संयद्वामत्वादिगुणतां चोक्त्वाऽर्चिरादिकां तद्विदो गतिं वक्ष्यामीत्युपक्रमते 'य एषोऽक्षिणि पुरुषो दृश्यत एष आत्मेति होवाच' इति ॥

**श्रुतोपनिषत्कगत्यभिधानाच्च**

इतश्चाक्षिस्थानः पुरुषः परमेश्वरः, यस्माच्छ्रुतोपनिषत्कस्य श्रुतरहस्यविज्ञानस्य ब्रह्मविदो या गतिर्देवयानाख्या प्रसिद्धा श्रुतौ 'अथोत्तरेण तपसा ब्रह्मचर्येण श्रद्धया विद्ययात्मानमन्विष्यादित्यमभिजयन्त एतद्वै प्राणानामायतनमेतदमृतमभयमेतत्परायणमेतस्मान्न पुनरावर्तन्ते' इति । स्मृतावपि 'अग्निर्ज्योतिरहः शुक्लः षण्मासा उत्तरायणम् । तत्र प्रयाता गच्छन्ति ब्रह्म ब्रह्मविदो जनाः ॥' इति । सैवेहाक्षिपुरुषविदोऽभिधीयमाना दृश्यते । 'अथ यदु चैवास्मिञ्छव्यं कुर्वन्ति यदिच नार्चिषमेवाभिसम्भवन्ति' इत्युपक्रम्य 'आदित्याच्चन्द्रमसं चन्द्रमसो विद्युतं तत्पुरुषोऽमानवः स एनान् ब्रह्म गमयत्येष देवपथो ब्रह्मपथ एतेन प्रतिपद्यमाना इमं मानवममावर्तं नावर्तन्ते' इति । तदिह ब्रह्मविद्विषयया प्रसिद्ध्या गत्याक्षिस्थानस्य ब्रह्मत्वं निश्चीयते ॥

**अनवस्थितेरसम्भवाच्च नेतरः**

यत्पुनरुक्तं छायात्मा, विज्ञानात्मा, देवतात्मा वा स्यादक्षिस्थान इति । अत्रोच्यते, न छायात्मादिरितर इह ग्रहणमर्हति । कस्माद्, अनवस्थितेः । न तावच्छायात्मनश्चक्षुषि नित्यमवस्थानं सम्भवति । यदैव हि कश्चित् पुरुषश्चक्षुरासीदति, तदा चक्षुषि पुरुषच्छाया दृश्यते, अपगते तस्मिन्न दृश्यते । 'य एषोऽक्षिणि पुरुषः' इति च श्रुतिः सन्निधानात्

स्वचक्षुषि दृश्यमानं पुरुषमुपास्यत्वेनोपदिशति । नचोपासनाकाले छायाकरं कञ्चित् पुरुषं चक्षुःसमीपे सन्निधाप्योपास्त इति युक्तं कल्पयितुम् । 'अस्यैव शरीरस्य नाशमन्वेष नश्यति' इति श्रुतिश्छायात्मनोऽप्यनवस्थितत्वं दर्शयति । असम्भवाच्च । तस्मिन्नमृतत्वादीनां गुणानां न छायात्मनि प्रतीतिः । तथा विज्ञानात्मनोऽपि साधारणे कृत्स्नशरीरेन्द्रियसम्बन्धे सति चक्षुष्येवावस्थितत्वं वक्तुं न शक्यम् । ब्रह्मणस्तु व्यापिनोऽपि दृष्ट उपलब्ध्यर्थो हृदयादिदेशविशेषसम्बन्धः । समानश्च विज्ञानात्मन्यप्यमृतत्वादीनां गुणानामसम्बन्धः । यद्यपि विज्ञानात्मा परमात्मनोऽनन्य एव, तथाप्यविद्याकामकर्मकृतं तस्मिन् मर्त्यत्वमध्यारोपितं भयं चेत्यमृतत्वाभयत्वे नोपपद्येते । संयद्वामत्वादयश्चैतस्मिन्ननैश्वर्यादनुपपन्ना एव । देवतात्मनस्तु 'रश्मिभिरेषोऽस्मिन् प्रतिष्ठितः' इति श्रुतेर्यद्यपि चक्षुष्यवस्थानं स्यात्, तथाप्यात्मत्वं तावन्न सम्भवति, पराग्रूपत्वात् । अमृतत्वादयोऽपि न सम्भवन्ति, उत्पत्तिप्रलयश्रवणात् । अमरत्वमपि देवानां चिरकालावस्थानापेक्षम् । ऐश्वर्यमपि परमेश्वरायत्तम्, न स्वाभाविकम् । 'भीषास्माद् वातः पवते, भीषोदेति सूर्यः । भीषास्मादग्निश्चेन्द्रश्च । मृत्युर्धावति पञ्चमः' इति मन्त्रवर्णात् । तस्मात् परमेश्वर एवायमक्षिस्थानः प्रत्येतव्यः । अस्मिंश्च पक्षे दृश्यत 'इति प्रसिद्धवदुपादानं शास्त्राद्यपेक्षं विद्वद्विषयं प्ररोचनार्थमिति व्याख्येयम् ॥

**भामतीव्याख्या –**

**अन्तर उपपत्तेः ॥** ननु 'अन्तस्तद्धर्मोपदेशाद्' इत्यनेनैवैतद्गतार्थम् । सन्ति खल्वत्राप्यमृतत्वाभयत्वादयो ब्रह्मधर्माः । प्रतिबिम्बजीवदेवतास्वसम्भविनः । तस्माद् ब्रह्मधमोपदेशाद् ब्रह्मैवात्र विवक्षितम् । साक्षाच्च ब्रह्मशब्दोपादानात् । उच्यते 'एष दृश्यत इत्येतत् प्रत्यक्षेऽर्थे प्रयुज्यते । परोक्षं ब्रह्म न तथा प्रतिबिम्बे तु युज्यते । उपक्रमवशात् पूर्वमितरेषां हि वर्णनम् । कृतं न्यायेन येनैव स खल्वत्रानुषज्यते । 'ऋतं पिबन्तौ' इत्यत्र हि जीवपरमात्मानौ प्रथममवगताविति तदनुरोधेन गुहाप्रवेशादयः पश्चादवगता व्याख्याताः, तद्वदिहापि 'य एषोऽक्षिणि पुरुषो दृश्यते' इति प्रत्यक्षाभिधानात् प्रथममवगते छायापुरुषे तदनुरोधेनामृतत्वाभयत्वादयः स्तुत्या कथञ्चिद् व्याख्येयाः । तत्र चामृतत्वं कतिपयक्षणावस्थानात्, अभयत्वमचेतनत्वात्, पुरुषत्वं पुरुषाकारत्वात्, आत्मत्वं कनीनिकायतनत्वात्, ब्रह्मरूपत्वमुक्तरूपामृतत्वादियोगात् । एवं वामनित्वादयोऽप्यस्य स्तुत्यैव कथञ्चिन्नेतव्याः । कं च खं चेत्यादि तु वाक्यमग्नीनां नाचार्यवाक्यं नियन्तुमर्हति । 'आचार्यस्तु ते गतिं वक्ता' इति च गत्यन्तराभिप्रायम्, नतूक्तपरिशिष्टाबिप्रायम् । तस्माच्छायापुरुष एवात्रोपास्य इति पूर्वः पक्षः । सम्भवमात्रेण तु जीवदेवते उपन्यस्ते, बाधकान्तरोपदर्शनाय चैष दृश्यत इत्यस्यात्राभावात् ।

अन्तस्तद्धर्मोपदेशादित्यनेन निराकृतत्वात् । एवम्प्राप्त उच्यते – **य एष इति** ॥ 'अनिष्पन्नाभिदाने द्वे सर्वनामपदे सती । प्राप्य सन्निहितस्यार्थं भवेतामभिधातृणी ॥' सन्निहिताश्च पुरुषात्मादिशब्दास्ते च न यावत्स्वार्थमभिदधति तावत् सर्वनामभ्यां नार्थंतुषोऽप्यभिधीयत इति कुतस्तदर्थस्यापरोक्षता । पुरुषात्मशब्दौ च सर्वनामनिरपेक्षौ स्वरसतो जीवे वा परमात्मन वा वर्तेते इति । नच तयोश्चक्षुषि प्रत्यक्षदर्शनमिति निरपेक्षपुरुषपदप्रत्यायितार्थानुरोधेन य एष इति दृश्यत इति च यथासम्भवं व्याख्येयम् । व्याख्यातं सिद्धवदुपादानं शास्त्राद्यपेक्षं विद्वद्विषयं प्ररोचनार्थम् । विदुषः शास्त्रत उपलब्धिरेव दृढतया प्रत्यक्षवदुपचर्यते प्रशंसार्थमित्यर्थः । अपिच तदेव चरमं प्रथमानुगुणतया नीयते यन्नेतुं शक्यम्, अल्पं च । इह त्वमृतत्वादयो बहवश्चाशक्याश्च नेतुम् । नहि स्वसत्ताक्षणावस्थानमात्रममृतत्वं भवति । तथा सति किं नाम नामृतं स्यादिति व्यर्थममृतपदम् । भयाभये अपि चेतनधर्मौ नाचेतने सम्भवतः । एवं वामनीत्वादयोऽप्यन्यत्र ब्रह्मणो नेतुमशक्याः । प्रत्यक्षव्यपदेशश्चोपपादितः । तदिदमुक्तम् – **उपपत्तेरिति** ॥ 'एतदमृतमभयमेतद् ब्रह्म' इत्युक्ते स्यादाशङ्का, ननु सर्वगतस्येश्वरस्य कस्माद् विशेषेण चक्षुरेव स्थानमुपदिश्यत इति, तत्परिहरति श्रुतिः 'तद् यद्यप्यस्मिन् सर्पिर्वोदकं वा सिञ्चति वर्त्मनी एव गच्छति' इति । वत्मनी पक्षस्थाने । एतदुक्तं भवति निर्लेपस्येश्वरस्य निर्लेपं चक्षुरेव स्थानमनुरूपमिति । तदिदमुक्तम् – **तथा परमेश्वरानुरूपमिति** ॥ **संयद्वामादिगुणोपदेशश्च तस्मिन् ब्रह्मणि कल्पते** घटते, समवेतार्थत्वात् । प्रतिबिम्ब्वादिषु त्वसमवेतार्थः । वामनीयानि सम्भजनीयानि शोभनीयानि पुण्यफलानि वामानि । संयन्ति सङ्गच्छमानानि वामान्यनेनेति संयद्वामः परमात्मा । तत्कारणत्वात् पुण्यफलोत्पत्तेस्तेन पुण्यफलानि सङ्गच्छन्ते । स एव पुण्यफलानि वामानि नयति लोकमिति वामनीः । एष एव भामनीः । भामानि भानानि नयति लोकमिति भामनीः । तदुक्तं श्रुत्या 'तमेव भान्तमनुभाति सर्वं तस्य भासा सर्वमिदं विभाति' इति ॥ १३ ॥

**स्थानादिव्यपदेशाच्च** ॥ आशङ्कोत्तरमिदं सूत्रम् । आशङ्कामाह – **कथं पुनरिति** ॥ स्थानिनो हि स्तानं महदृष्टम्, यथा यादसामब्धिः । तत्कथमत्यल्पं चक्षुरधिष्ठानं परमात्मनः परममहत इति शङ्कार्थः, परिहरति – **अत्रोच्यत इति** ॥ स्थानान्यादयो येषां स्थानादयो नामरूपप्रकारास्तेषां व्यपदेशात् सर्वगतस्यैकस्थाननियमो नावकल्पते । नतु नानास्थानत्वं नभस इव नानासूचीपाशादिस्थानत्वम् । विशेषतस्तु ब्रह्मणस्तानि तान्युपासनास्थानानीति तैरस्य युक्तो व्यपदेशः ॥ १४ ॥

अपिच प्रकृतानुसारादपि ब्रह्मैवात्र प्रत्येतव्यम्, नतु प्रतिबिम्बजीवदेवता इत्याह सूत्रकारः – **सुखविशिष्टाभिधानादेव च** ॥ एवं खलूपाख्यायते, उपकोसलो ह वै कामलायनः

सत्यकामे जाबाले ब्रह्मचर्यमुवास । तस्याचार्यस्य द्वादशवर्षाण्यग्नीनुपचचार । स चाचार्योऽन्यान् ब्रह्मचारिणः स्वाध्यायं ग्राहयित्वा समावर्तयामास । तमेवैकमुपकोसलं न समावर्तयति
स्म । जायया च तत्समावर्तनायार्थितोऽपि तद्वचनमवधीर्याचार्यः प्रोषितवान् । ततोऽतिदूनमानसमग्निपरिचरणकुशलमुपकोसलमुपेत्य त्रयोऽग्नयः करुणापराधीनचेतसः श्रद्दधानायास्मै दृढभक्तये समेत्य ब्रह्मविद्यामूचिरे 'प्राणो ब्रह्म कं ब्रह्म खं ब्रह्म' इति । अथोपकोसल उवाच, विजानाम्यहं प्राणो ब्रह्मेति, स हि सूत्रात्मा विभूतमत्तया ब्रह्मरूपाविर्भावाद् ब्रह्मेति । किन्तु कं च खं च ब्रह्मेत्येतन्न विजानामि । नहि विषयेन्द्रियसम्पर्कजं सुखमनित्यं लोकसिद्धं खं च भूताकाशमचेतनं ब्रह्म भवितुमर्हति । अथैनमग्नयः प्रत्यूचुः 'यद्वाव कं तदेव खं, यदेव खं तदेव कम्' इति । एवं सम्भूयोक्त्वा प्रत्येकं च स्वविषयां विद्यामूचुः 'पृथिव्यग्निरन्नमादित्यः' इत्यादिना । पुनस्त एनं सम्भूयोचुः, एषा सोम्य तेऽस्मद्विद्या प्रत्येकमुक्ता स्वविषया विद्या, आत्मविद्या चास्माभिः सम्भूय पूर्वमुक्ता प्राणो ब्रह्म कं ब्रह्म खं ब्रह्मेति, आचार्यस्तु ते गतिं वक्ता, ब्रह्मविद्येयमुक्तास्माभिर्गतिमात्रं त्ववशिष्टं नोक्तम्, तत्तु विद्याफलप्राप्तये जाबालस्तवाचार्यो वक्ष्यतीत्युक्त्वाग्नय उपरेमिरे । एवं व्यवस्थिते 'यद्वाव कं तदेव खम्, यदेव खं तदेव कम्' इत्येतद् व्याचष्टे भाष्यकारः – **तत्र खंशब्द इति ॥ प्रतीकाभिप्रायेणेति ॥** आश्रयान्तरप्रत्ययस्याश्रयान्तरे क्षेपः प्रतीकः । यथा ब्रह्मशब्दः परमात्मविषयो नामादिषु क्षिप्यते । इदमेव तद् ब्रह्म ज्ञेयं यन्नामेति । तथेदमेव तद् ब्रह्म यद्भूताकाशमिति प्रतीतिः स्यात् । नचैतत् प्रतीकत्वमिष्टम् । लौकिकस्य सुखस्य साधनपारतन्त्र्यं क्षयिष्णुता चामयस्तेन सह वर्तत इति सामयं सुखम् । तदेवं व्यतिरेके दोषमुक्त्वोभयान्वये गुणमाह – **इतरेतरविशेषितौ त्विति ॥** तदर्थयोर्विशेषितत्वाच्छब्दावपि विशेषितावुच्येते । सुखशब्दसमानाधिकरणो हि खंशब्दो भूताकाशमर्थं परित्यज्य ब्रह्मणि गुणयोगेन वर्तते । तादृशा च खेन सुखं विशिष्यमाणं सामयाद् व्यावृत्तं निरामयं भवति । तस्मादुपपन्नमुभयोपादानम् । ब्रह्मशब्दाभ्यासस्य प्रयोजनमाह – **तत्र द्वितीय इति ॥** ब्रह्मपदं कंपदस्योपरि प्रयुज्यमानं शिरः, एवं खंपदस्यापि ब्रह्मपदं शिरो ययोः कंखंपदयोस्ते ब्रह्मशिरसी, तयोर्भावो ब्रह्मशिरस्त्वम् । अस्तु प्रस्तुते किमायातमित्यत आह – **तदेवं वाक्योपक्रम इति ॥** नन्वग्निभिः पूर्वं निर्दिश्यतां ब्रह्म, 'य एषोऽक्षिणि' इत्याचार्यवाक्येऽपि तदेवानुवर्तनीयमिति तु कुत इत्याह – **आचार्यस्तु ते गतिं वक्तेति च गतिमात्राभिधानमिति ॥** यद्यप्येते भिन्नवक्तृणी वाक्ये तथापि पूर्वेण वक्त्रा एकवाक्यतां गमिते, गतिमात्राभिधानात् । किमुक्तं भवति, तुभ्यं ब्रह्मविद्यास्माभिरुपदिष्टा, तद्विदस्तु

**अत्रोक्तं भामत्यां – तत्राक्षिस्थो जीवविशेष इति पूर्वः पक्षः, अत्र तु च्छायेति । भाष्ये तु सम्भवमात्रेण जीवाद्युक्तिः । तथा च जीवविशेषस्यापि**

गतिर्नोक्ता, तां च किञ्चिदधिकमाध्येयम्, पूरयित्वाचार्यो वक्ष्यतीति । तदनेन पूर्वासम्बद्धार्थान्तरविवक्षा वारितेति । अथैवमग्निभिरुपदिष्टे प्रोषित आचार्यः कालेनाजगाम्, आगतश्च वीक्ष्योपकोसलमुवाच, ब्रह्मविद इव ते सोम्य मुखं प्रसन्नं भाति, कोऽनु त्वामनुशशासेति । उपकोसलस्तु ह्रीणो भीतश्च कोनु मामनुशिष्याद् भगवन् प्रोषिते त्वयीत्यापाततोऽपज्ञाय निर्बध्यमानो यथावग्नीनामनुशासनमवोचत् । तदुपश्रुत्य चाचार्यः सुचिरं क्लिष्ट उपकोसले समुपजातयार्द्रहृदयः प्रत्युवाच, सोम्य किल तुभ्यमग्नयो न ब्रह्म साकल्येनावोचत्, तदहं तुभ्यं साकल्येन वक्ष्यामि, यदनुभवमाहात्म्याद् 'यथा पुष्करपलाश आपो न श्लिष्यन्त एवमेवंविदि पापं कर्म न श्लिष्यते' इत्येवमुक्तवत्याचार्य आहोपकोसलः, ब्रवीतु मे भगवानिति, तस्मै होवाचाचार्योऽर्चिरादिकां गतिं वक्तुमनाः, यदुक्तमग्निभिः प्राणो ब्रह्म कं ब्रह्म खं ब्रह्मेति तत्पूरणाय 'एषोऽक्षिणि पुरुषो दृश्यते' इत्यादि । एतदुक्तं भवति, आचार्येण ये सुखं ब्रह्माक्षिस्थानं संयद्वामं वामनीभामनीत्येवगुणकं प्राणसहितमुपासते ते सर्वेऽपहतपाप्मानोऽन्यत् कर्म कुर्वन्तु मा वाकार्षुः, अर्चिषामर्चिरभिमानिनीं देवतामभिसम्भवन्ति प्रतिपद्यन्ते, अर्चिषोऽहरहर्देवताम्, अह्न आपूर्यमाणपक्षं शुक्लपक्षदेवताम्, ततः षण्मासाद्, येषु मासेषूत्तरां दिशमेति सविता, ते षण्मासा उत्तरायण तद्देवतां प्रतिपद्यन्ते, तेभ्यो मासेभ्यः संवत्सरदेवतां, तत आदित्यम्, आदित्याच्चन्द्रमसम्, चन्द्रमसो विद्युतम्, तत्र स्थितानेतान् पुरुषः कश्चिद् ब्रह्मलोकादवती र्यामानवोऽमानव्यां सृष्टौ भवः । ब्रह्मलोकभव इति यावत् । स तादृशः पुरुष एतान् सत्यलोकस्थं कार्यं ब्रह्म गमयति, स एष देवपथो देवैरर्चिरादिभिर्नेतृभिरुपलक्षित इति देवपथः, स एव च ब्रह्मणा गन्तव्येनोपलक्षित इति ब्रह्मपथः, एतेन पथा प्रतिपद्यमानाः सत्यलोकस्थं ब्रह्म इमं मानवं मनोः सर्गं किं भूतमावर्तं जन्मजरामरणपौनः पुन्यमावृत्तिस्तत्कर्तावर्तो मानवो लोकस्तं नावर्तन्ते । तथाच स्मृतिः 'ब्रह्मणा सह ते सर्वे सम्प्राप्ते प्रतिसञ्चरे । परस्यान्ते कृतात्मानः प्रविशन्ति परं पदम् ।। १५ ।।

तदनेनोपाख्यानव्याख्यानेन **श्रुतोपनिषत्कगत्यभिधानाच्च** इत्यपि सूत्रं व्याख्यातम् ।।१६।।

**अनवस्थितेरसम्भवाच्च नेतरः** ।। 'य एषोऽक्षिणि इति नित्यवच्छ्रुतमनित्ये छायापुरुषे नावकल्पते । कल्पनागौरवं चास्मिन् पक्षे प्रसज्यत इत्याह – **नचोपासनाकाल इति ।। तथा विज्ञानात्मनोऽपीति ।।** विज्ञानात्मनो हि न प्रदेशे उपासनाऽन्यत्र दृष्टचरी, ब्रह्मणस्तु तत्र श्रुतपूर्वेत्त्यर्थः । भीषा भिया । अस्माद् ब्रह्मणः । शेषमतिरोहितार्थम् ।। १७ ।।

ब्रह्मवत् परोक्षत्वात् दृश्यत्वादिकमयुक्तं, छायायां तु युक्तमित्यधिकाशङ्केति ।

तन्न, दृश्यत्वानुपपत्त्या जीवपक्षत्यागे छायायां विषयवाक्यस्थ-पुरुषत्वामृतत्वादेः, पूर्ववाक्योक्तस्य तज्ज्ञानेन पापालेपस्य च, उत्तरवाक्योक्तस्य संयद्वामत्वादेश्च सर्वथाऽप्ययुक्त्या छायापक्षस्य सुतरां त्याज्यत्वात् ।

छायायां स्तुत्यर्थममृतत्वाद्युक्तिश्चेत्, जीवेऽपि तदर्थमेव दृश्यत्वाद्युक्तिरस्तु । तस्मान्न परमते पूर्वपक्षोत्थानम् ।

अस्माकं मते तु "अन्तस्तद्धर्म" इत्यत्रेन्द्रादिश्रुत्येन्द्रादेरन्तस्स्थत्वमिति प्राप्ते, नेति सिद्धान्त, अत्र त्वग्नेश्चक्षुरन्तस्स्थत्वमभ्यासार्थवादसहितबहुश्रुतिभ्य इति प्राप्ते नेति सिद्धान्त इति भेदः ।

ಅನುವಾದ - ಅದ್ವೈತಮತದಲ್ಲಿ ಹಾಗೂ ರಾಮಾನುಜ ಮತದಲ್ಲಿ ಅಂತಸ್ಥತ್ವಾಧಿಕರಣದಿಂದ ಈ ಅಧಿಕರಣವು ಪುನರುಕ್ತವಾಗಿದೆ. ಏಕೆಂದರೆ ಅಂತಸ್ಥತ್ವಾಧಿಕರಣದಲ್ಲಿ ಆದಿತ್ಯನಲ್ಲಿದ್ದಾನೆಂದು ಹೇಳುವುದರ ಜೊತೆಗೆ ಅಕ್ಷಿಯಲ್ಲಿದ್ದಾನೆಂದೂ ಸಹ ಹೇಳಲಾಗಿದೆ.

ಪ್ರಶ್ನೆ - ಅಂತಸ್ಥತ್ವಾಧಿಕರಣದಲ್ಲಿ ಉದ್ಗೀಥೋಪಾಸನೆಯಲ್ಲಿರುವ ಅಕ್ಷಿ ವಾಕ್ಯವು ವಿಷಯವಾಗಿದೆ. ಆದರೆ ಈ ಅಧಿಕರಣದಲ್ಲಿ ಉಪಕೋಸಲವಿದ್ಯೆಯಲ್ಲಿರುವ ಅಕ್ಷಿವಾಕ್ಯವು ವಿಷಯವಾಗಿದೆ. ಹೀಗೆ ಸಮನ್ವಯವಾಗುತ್ತಿರುವ ವಾಕ್ಯಗಳು ವಿಭಿನ್ನವಾಗಿರುವುದರಿಂದ ಪುನರುಕ್ತಿಯನ್ನು ಹೇಗೆ ಹೇಳುತ್ತೀರಿ?

ಉತ್ತರ - ಕೇವಲ ವಿಷಯವಾಕ್ಯದ ಭೇದದಿಂದ ಪುನರುಕ್ತಿಯನ್ನು ಪರಿಹರಿಸಲಾಗದು. ಒಂದೊಂದು ವಾಕ್ಯಕ್ಕೂ ಒಂದೊಂದು ಅಧಿಕರಣ ಹೊರಡುವುದಾದರೆ ಶಾಸ್ತ್ರವು ಪರ್ಯವಸಾನವಾಗದಿರಬೇಕಾದೀತು. ಮತ್ತು ಅಂತಸ್ಥತ್ವಾಧಿಕರಣದ ವಿಷಯವಾಕ್ಯದಂತೆ ಈ ಅಧಿಕರಣದ ವಿಷಯವಾಕ್ಯದಲ್ಲೂ ಸಹ ಬೇರೆಡೆ ಅಸಂಭಾವಿತವಾದ ಅಮೃತತ್ವವೇ ಮೊದಲಾದ ಬ್ರಹ್ಮನ ಧರ್ಮಗಳು ಕೇಳಿಸುತ್ತಿವೆ. ಅಷ್ಟೇ ಅಲ್ಲದೆ ಅಲ್ಲಿ ಒಮ್ಮೆ ಬ್ರಹ್ಮಶಬ್ದವು ಕೇಳಿಸಿದರೆ ಇಲ್ಲಿ ಅನೇಕ ಬಾರಿ ಬ್ರಹ್ಮಶಬ್ದವು ಕೇಳಿಸುತ್ತಿದೆ. ಆದ್ದರಿಂದ ಎರಡೂ ಕಡೆ ಬ್ರಹ್ಮನ ಲಿಂಗಗಳು ಸಮಾನವಾಗಿವೆ.

ಪ್ರಶ್ನೆ - ಈ ಅಧಿಕರಣದಲ್ಲಿ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ'' ಎಂಬುದಾಗಿ ಪ್ರಸಿದ್ಧಾರ್ಥವನ್ನೂ ತಿಳಿಸುವ 'ಯಃ' ಮತ್ತು 'ಏಷಃ' ಶಬ್ದಗಳಿವೆ. ಪ್ರತ್ಯಕ್ಷವೆಂಬರ್ಥವನ್ನು ತಿಳಿಸುವ 'ದೃಶ್ಯತೇ' ಎಂಬ ಪದವಿದೆ. ಆದರೆ ಆ ಅಧಿಕರಣದಲ್ಲಿ ಇವುಗಳು ಇರುವುದಿಲ್ಲವಲ್ಲ?

ಉತ್ತರ - ಇದೂ ಸಹ ತಪ್ಪು. ಅಲ್ಲಿಯೂ ಸಹ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ''ಎಂಬುದಾಗಿ ಈ ಪದಗಳೇ ಇರುತ್ತವೆ. ಆದ್ದರಿಂದ ಅಧಿಕಾಶಂಕೆಯನ್ನು ತೋರಿಸಲಾಗದು.

ಈ ಪುನರುಕ್ತಿದೋಷವನ್ನು ಭಾಮತಿಯಲ್ಲಿ ಪರಿಹರಿಸಿದ್ದು ಕಾಣಿಸುತ್ತದೆ -

ಅಂತಸ್ಥತ್ವಾಧಿಕರಣದಲ್ಲಿ ಅಕ್ಷಿಯಲ್ಲಿರುವವನು ಜೀವವಿಶೇಷನೆಂದು ಪೂರ್ವಪಕ್ಷ. ಈ ಅಧಿಕರಣದಲ್ಲಿ ಛಾಯಾಪುರುಷನು ಅಕ್ಷಿಯಲ್ಲಿದ್ದಾನೆಂದು ಪೂರ್ವಪಕ್ಷ. ವಸ್ತುತಃ ಭಾಷ್ಯದಲ್ಲಿ ಜೀವಾದಿಗಳನ್ನೂ ಸಹ ಪೂರ್ವಪಕ್ಷ ಮಾಡಿದ್ದಾರೆ. ಆದರೆ ಅದು ಸಂಭಾವನಾ ಮಾತ್ರದಿಂದ ಎಂದು ತಿಳಿಯಬೇಕು. ಆದ್ದರಿಂದ ಬ್ರಹ್ಮನು ಹೇಗೆ ಪರೋಕ್ಷನಾಗಿದ್ದಾನೋ? ಅದರಂತೆ ಜೀವವಿಶೇಷನೂ ಸಹ ಪರೋಕ್ಷನಾದ್ದರಿಂದ ದೃಶ್ಯತ್ವಾದಿಗಳನ್ನು ಕೂಡಿಸಲಾಗದು. ಆದರೆ ಛಾಯಾಪುರುಷನು ಪ್ರತ್ಯಕ್ಷನಾದ್ದರಿಂದ ದೃಶ್ಯತ್ವಾದಿಗಳನ್ನು ಹೇಳಬಹುದು. ಹೀಗೆ ಅಧಿಕಾಶಂಕೆಯಿರುವುದರಿಂದ ಈ ಅಧಿಕರಣವು ಗತಾರ್ಥವಾಗುವುದಿಲ್ಲ ಎಂದು.

ಇದು ತಪ್ಪು. ದೃಶ್ಯತ್ವವಿಲ್ಲದ ಕಾರಣ ಜೀವಪಕ್ಷವನ್ನು ಬಿಡುವುದಾದರೆ ವಿಷಯವಾಕ್ಯದಲ್ಲೇ ಇರುವ ಪುರುಷತ್ವ, ಅಮೃತತ್ವ, ಮೊದಲಾದ ಧರ್ಮಗಳು ಮತ್ತು ಹಿಂದಿನ ವಾಕ್ಯದಲ್ಲಿರುವ ಅಕ್ಷಿಯಲ್ಲಿರುವವನ ಜ್ಞಾನದಿಂದ ಪಾಪಲೇಪವು ಮುಂದಿನ ವಾಕ್ಯದಲ್ಲಿರುವ ಸಂಯದ್ವಾಮತ್ವಾದಿಗಳು ಛಾಯಾಪುರುಷನಲ್ಲಿ ಸರ್ವಥಾ ಬರಲಾರವು. ಆದ್ದರಿಂದ ಒಂದು ಧರ್ಮವಿಲ್ಲದ ಕಾರಣ ಜೀವಪಕ್ಷವನ್ನು ಬಿಡುವುದಾದರೆ ಅನೇಕ ಧರ್ಮಗಳಿಲ್ಲದ ಕಾರಣ ಛಾಯಾಪುರುಷಪಕ್ಷವನ್ನು ಖಂಡಿತವಾಗಿಯೂ ಬಿಡಬೇಕು.

ಒಂದು ವೇಳೆ ಛಾಯಾಪುರುಷನಲ್ಲಿ ಅಮೃತತ್ವಾದಿ ಧರ್ಮಗಳನ್ನು ಸ್ತುತಿಗೋಸ್ಕರವೆಂದು ಕಥಂಚಿತ್ ಕೂಡಿಸುವುದಾದರೆ ಜೀವಪಕ್ಷದಲ್ಲಿಯೂ ಸಹ ಪ್ರಯತ್ನ ಪಟ್ಟು ದೃಶ್ಯತ್ವಾದಿಧರ್ಮಗಳನ್ನು ಏಕೆ ಕೂಡಿಸಬಾರದು? ಆದ್ದರಿಂದ ಅಂತಸ್ಥತ್ವಾಧಿಕರಣಕ್ಕಿಂತ ವಿಭಿನ್ನವಾದ ಪೂರ್ವಪಕ್ಷವು ಈ ಅಧಿಕರಣದಲ್ಲಿ ಭಾಮತಿಯ ಪ್ರಕಾರ ಹುಟ್ಟಲು ಸಾಧ್ಯವೇ ಇಲ್ಲ?

ನಮ್ಮ ಮತದಲ್ಲಿ ಈ ದೋಷವಿಲ್ಲ. ಏಕೆಂದರೆ 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಿ ಇಂದ್ರಾದಿ ಶ್ರುತಿಗಳಿಂದ ಇಂದ್ರಾದಿಗಳೇ ಅಂತಸ್ಥರೆಂದು ಪೂರ್ವಪಕ್ಷ ಮಾಡಿ ಇಂದ್ರಾದಿಗಳಲ್ಲವೆಂದು ಸಿದ್ಧಾಂತ ಮಾಡಲಾಗಿದೆ. ಆದರೆ ಈ ಅಧಿಕರಣದಲ್ಲಿ ಅಭ್ಯಾಸ, ಅರ್ಥವಾದ ಸಹಿತವಾದ ಬಹುಶ್ರುತಿಗಳಿವೆ. ಈ ಎಲ್ಲಾ ಪ್ರಮಾಣಗಳಿಂದ ಅಗ್ನಿಯು ಚಕ್ಷುರಂತಸ್ಥನೆಂದು ಪೂರ್ವಪಕ್ಷ ಮಾಡಿ ಅಗ್ನಿಯಲ್ಲವೆಂದು ಸಿದ್ಧಾಂತ ಮಾಡಲಾಗಿದೆ. ಹೀಗೆ ಎರಡೂ ಅಧಿಕರಣಗಳಿಗೆ ಬಹಳಷ್ಟು ವೈಲಕ್ಷಣ್ಯವಿರುವುದರಿಂದ ನಮ್ಮ ಸಿದ್ಧಾಂತದ ಪ್ರಕಾರ ಪುನರುಕ್ತಿದೋಷ ಬರುವುದಿಲ್ಲ.

ಪರಿಪೂರ್ಣಚಂದ್ರಿಕಾ

**प्रकाशः –**

**परमतद्वयेऽपीति । मायिनामिदधिकरणशरीरं – "य एषोऽन्तरक्षिणि पुरुषो दृश्यते" इति श्रुतोऽक्षिस्थः किं छायापुरुषः उत ब्रह्मेति संशये,**

ವಿವರಣೆ - ಮಾಯಾವಾದಿಗಳ ಪ್ರಕಾರ ಮತ್ತು ರಾಮಾನುಜರ ಪ್ರಕಾರ ಈ ಅಧಿಕರಣವು 'ಅಂತಸ್ತದ್ಧರ್ಮೋಪದೇಶಾತ್' ಎಂಬ ಅಧಿಕರಣದಿಂದ ಪುನರುಕ್ತವಾಗುತ್ತದೆ. ಮೊದಲು ಮಾಯಾವಾದಿಗಳ ಅಧಿಕರಣ ಶರೀರವನ್ನು ತಿಳಿಯೋಣ -

"ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ" ಎಂಬುದನ್ನೇ ಮಾಯಾವಾದಿಗಳೂ ಈ ಅಧಿಕರಣದಿಂದ ವಿಷಯವಾಕ್ಯವೆಂದು ಹೇಳುತ್ತಾರೆ. ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಕಣ್ಣಿನಲ್ಲಿರುವವನು ಛಾಯಾಪುರುಷನೊ? ಅಥವಾ ಬ್ರಹ್ಮನೋ? ಎಂದು ಸಂಶಯ. (ಛಾಯಾಪುರುಷ ಶಬ್ದಕ್ಕೆ ಪ್ರತಿಬಿಂಬ ಎಂದರ್ಥ. ಪರಸ್ಪರ ಇಬ್ಬರು ವ್ಯಕ್ತಿಗಳು ಎದುರುಬದುರು ನಿಂತು ಕಣ್ಣನ್ನು ನೋಡಿದಾಗ ಇಬ್ಬರ ಕಣ್ಣಿನಲ್ಲಿಯೂ ಅವರವರ ಪ್ರತಿಬಿಂಬವು ಕಾಣಿಸುತ್ತದೆ. ಈ ಪ್ರತಿಬಿಂಬವನ್ನೇ ಕಣ್ಣಿನಲ್ಲಿರುವುದೆಂದು ಮಾಯಾವಾದಿಗಳು ಪೂರ್ವಪಕ್ಷ ಮಾಡುತ್ತಾರೆ.)

**प्रकाशः – पूर्वं "ऋतं पिबन्तौ" इत्यत्र पातृत्वलिङ्गेन प्रथममवगतचेतन-द्वयानुरोधेन पश्चादवगतगुहाप्रवेशादयः कथञ्चित् व्याख्याताः । तद्वदिहापि "य एषोऽन्तरक्षिणि पुरुषो दृश्यते" इति प्रत्यक्षाभिधानात्तस्य च्छायायामेव सम्भवात्परोक्षे ब्रह्मण्यसम्भवादृश्यत्वेन प्रथममवगते छायापुरुषे तदनुरोधेन अमृतत्वाभयत्वादयः स्तुतिरूपेण कथञ्चित् व्याख्येयाः । उक्तं च भामात्याम् -**

एष दृश्यते इत्येतत्प्रत्यक्षेऽर्थे प्रयुज्यते ।
परोक्षं ब्रह्म न तथा प्रतिबिम्बे तु युज्यते ।।
उपक्रमवशात् पूर्वमितरेषां हि वर्णनम् ।
कृतं न्यायनयेनैव स खल्वत्रानुषज्यते ।।

इति । एवं प्राप्ते

ಪೂರ್ವಪಕ್ಷ - 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ಪಾತೃತ್ವಲಿಂಗವು ಮೊದಲು ತಿಳಿಯುತ್ತದೆ. ಆದ್ದರಿಂದ ಇಬ್ಬರು ಚೇತನರೇ ಈ ಶ್ರುತಿಯಿಂದ ಪ್ರತಿಪಾದ್ಯರೆಂದು ತಿಳಿಯುತ್ತದೆ. ಮೊದಲು ತಿಳಿಯುವ ಈ ವಿಚಾರವನ್ನು ಗೌರವಿಸಿ ಅನಂತರ ತಿಳಿಯುವ ಗುಹಾಪ್ರವೇಶಾದಿಗಳನ್ನು ಹೇಗಾದರೂ ವ್ಯಾಖ್ಯಾನಿಸಬಹುದು. ಅದರಂತೆ "ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ" ಎಂಬಲ್ಲಿಯೂ 'ದೃಶ್ಯತೇ' ಎಂಬುದಾಗಿ ಕಣ್ಣಿಗೆ ಕಾಣಿಸುವ ವ್ಯಕ್ತಿಯ ಜ್ಞಾನವು ಮೊದಲು ತಿಳಿಯುತ್ತದೆ. ಈ ಪ್ರತ್ಯಕ್ಷವಿಷಯತ್ವವು ಛಾಯಾಪುರುಷನಲ್ಲೇ

ಉತ್ತರ - ಇದೂ ಸಹ ತಪ್ಪು. ಅಲ್ಲಿಯೂ ಸಹ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ''ಎಂಬುದಾಗಿ ಈ ಪದಗಳೇ ಇರುತ್ತವೆ. ಆದ್ದರಿಂದ ಅಧಿಕಾಶಂಕೆಯನ್ನು ತೋರಿಸಲಾಗದು.

ಈ ಪುನರುಕ್ತಿದೋಷವನ್ನು ಭಾಮತಿಯಲ್ಲಿ ಪರಿಹರಿಸಿದ್ದು ಕಾಣಿಸುತ್ತದೆ -

ಅಂತಸ್ಥತ್ವಾಧಿಕರಣದಲ್ಲಿ ಅಕ್ಷಿಯಲ್ಲಿರುವವನು ಜೀವವಿಶೇಷನೆಂದು ಪೂರ್ವಪಕ್ಷ. ಈ ಅಧಿಕರಣದಲ್ಲಿ ಛಾಯಾಪುರುಷನು ಅಕ್ಷಿಯಲ್ಲಿದ್ದಾನೆಂದು ಪೂರ್ವಪಕ್ಷ. ವಸ್ತುತಃ ಭಾಷ್ಯದಲ್ಲಿ ಜೀವಾದಿಗಳನ್ನೂ ಸಹ ಪೂರ್ವಪಕ್ಷ ಮಾಡಿದ್ದಾರೆ. ಆದರೆ ಅದು ಸಂಭಾವನಾ ಮಾತ್ರದಿಂದ ಎಂದು ತಿಳಿಯಬೇಕು. ಆದ್ದರಿಂದ ಬ್ರಹ್ಮನು ಹೇಗೆ ಪರೋಕ್ಷನಾಗಿದ್ದಾನೋ? ಅದರಂತೆ ಜೀವವಿಶೇಷನೂ ಸಹ ಪರೋಕ್ಷನಾದ್ದರಿಂದ ದೃಶ್ಯತ್ವಾದಿಗಳನ್ನು ಕೂಡಿಸಲಾಗದು. ಆದರೆ ಛಾಯಾಪುರುಷನು ಪ್ರತ್ಯಕ್ಷನಾದ್ದರಿಂದ ದೃಶ್ಯತ್ವಾದಿಗಳನ್ನು ಹೇಳಬಹುದು. ಹೀಗೆ ಅಧಿಕಾಶಂಕೆಯಿರುವುದರಿಂದ ಈ ಅಧಿಕರಣವು ಗತಾರ್ಥವಾಗುವುದಿಲ್ಲ ಎಂದು.

ಇದು ತಪ್ಪು. ದೃಶ್ಯತ್ವವಿಲ್ಲದ ಕಾರಣ ಜೀವಪಕ್ಷವನ್ನು ಬಿಡುವುದಾದರೆ ವಿಷಯವಾಕ್ಯದಲ್ಲೇ ಇರುವ ಪುರುಷತ್ವ, ಅಮೃತತ್ವ, ಮೊದಲಾದ ಧರ್ಮಗಳು ಮತ್ತು ಹಿಂದಿನ ವಾಕ್ಯದಲ್ಲಿರುವ ಅಕ್ಷಿಯಲ್ಲಿರುವವನ ಜ್ಞಾನದಿಂದ ಪಾಪಲೇಪವು ಮುಂದಿನ ವಾಕ್ಯದಲ್ಲಿರುವ ಸಂಯದ್ವಾಮತ್ವಾದಿಗಳು ಛಾಯಾಪುರುಷನಲ್ಲಿ ಸರ್ವಥಾ ಬರಲಾರವು. ಆದ್ದರಿಂದ ಒಂದು ಧರ್ಮವಿಲ್ಲದ ಕಾರಣ ಜೀವಪಕ್ಷವನ್ನು ಬಿಡುವುದಾದರೆ ಅನೇಕ ಧರ್ಮಗಳಿಲ್ಲದ ಕಾರಣ ಛಾಯಾಪುರುಷಪಕ್ಷವನ್ನು ಖಂಡಿತವಾಗಿಯೂ ಬಿಡಬೇಕು.

ಒಂದು ವೇಳೆ ಛಾಯಾಪುರುಷನಲ್ಲಿ ಅಮೃತತ್ವಾದಿ ಧರ್ಮಗಳನ್ನು ಸ್ತುತಿಗೋಸ್ಕರವೆಂದು ಕಥಂಚಿತ್ ಕೂಡಿಸುವುದಾದರೆ ಜೀವಪಕ್ಷದಲ್ಲಿಯೂ ಸಹ ಪ್ರಯತ್ನ ಪಟ್ಟು ದೃಶ್ಯತ್ವಾದಿಧರ್ಮಗಳನ್ನು ಏಕೆ ಕೂಡಿಸಬಾರದು? ಆದ್ದರಿಂದ ಅಂತಸ್ಥತ್ವಾಧಿಕರಣಕ್ಕಿಂತ ವಿಭಿನ್ನವಾದ ಪೂರ್ವಪಕ್ಷವು ಈ ಅಧಿಕರಣದಲ್ಲಿ ಭಾಮತಿಯ ಪ್ರಕಾರ ಹುಟ್ಟಲು ಸಾಧ್ಯವೇ ಇಲ್ಲ?

ನಮ್ಮ ಮತದಲ್ಲಿ ಈ ದೋಷವಿಲ್ಲ. ಏಕೆಂದರೆ 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಿ ಇಂದ್ರಾದಿ ಶ್ರುತಿಗಳಿಂದ ಇಂದ್ರಾದಿಗಳೇ ಅಂತಸ್ಥರೆಂದು ಪೂರ್ವಪಕ್ಷ ಮಾಡಿ ಇಂದ್ರಾದಿಗಳಲ್ಲವೆಂದು ಸಿದ್ಧಾಂತ ಮಾಡಲಾಗಿದೆ. ಆದರೆ ಈ ಅಧಿಕರಣದಲ್ಲಿ ಅಭ್ಯಾಸ, ಅರ್ಥವಾದ ಸಹಿತವಾದ ಬಹುಶ್ರುತಿಗಳಿವೆ. ಈ ಎಲ್ಲಾ ಪ್ರಮಾಣಗಳಿಂದ ಅಗ್ನಿಯು ಚಕ್ಷುರಂತಸ್ಥನೆಂದು ಪೂರ್ವಪಕ್ಷ ಮಾಡಿ ಅಗ್ನಿಯಲ್ಲವೆಂದು ಸಿದ್ಧಾಂತ ಮಾಡಲಾಗಿದೆ. ಹೀಗೆ ಎರಡೂ ಅಧಿಕರಣಗಳಿಗೆ ಬಹಳಷ್ಟು ವೈಲಕ್ಷಣ್ಯವಿರುವುದರಿಂದ ನಮ್ಮ ಸಿದ್ಧಾಂತದ ಪ್ರಕಾರ ಪುನರುಕ್ತಿದೋಷ ಬರುವುದಿಲ್ಲ.

ಪರಿಪೂರ್ಣಚಂದ್ರಿಕಾ

**प्रकाशः –**

परमतद्वयेऽपीति । मायिनामिदधिकरणशरीरं – ''य एषोऽन्तरक्षिणि पुरुषो दृश्यते'' इति श्रुतोऽक्षिस्थः किं छायापुरुषः उत ब्रह्मेति संशये,

**ವಿವರಣೆ** - ಮಾಯಾವಾದಿಗಳ ಪ್ರಕಾರ ಮತ್ತು ರಾಮಾನುಜರ ಪ್ರಕಾರ ಈ ಅಧಿಕರಣವು 'ಅಂತಸ್ತದ್ಧರ್ಮೋಪದೇಶಾತ್' ಎಂಬ ಅಧಿಕರಣದಿಂದ ಪುನರುಕ್ತವಾಗುತ್ತದೆ. ಮೊದಲು ಮಾಯಾವಾದಿಗಳ ಅಧಿಕರಣ ಶರೀರವನ್ನು ತಿಳಿಯೋಣ -

''ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ'' ಎಂಬುದನ್ನೇ ಮಾಯಾವಾದಿಗಳೂ ಈ ಅಧಿಕರಣದಿಂದ ವಿಷಯವಾಕ್ಯವೆಂದು ಹೇಳುತ್ತಾರೆ. ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಕಣ್ಣಿನಲ್ಲಿರುವವನು ಛಾಯಾಪುರುಷನೊ? ಅಥವಾ ಬ್ರಹ್ಮನೋ? ಎಂದು ಸಂಶಯ. (ಛಾಯಾಪುರುಷ ಶಬ್ದಕ್ಕೆ ಪ್ರತಿಬಿಂಬ ಎಂದರ್ಥ. ಪರಸ್ಪರ ಇಬ್ಬರು ವ್ಯಕ್ತಿಗಳು ಎದುರುಬದುರು ನಿಂತು ಕಣ್ಣನ್ನು ನೋಡಿದಾಗ ಇಬ್ಬರ ಕಣ್ಣಿನಲ್ಲಿಯೂ ಅವರವರ ಪ್ರತಿಬಿಂಬವು ಕಾಣಿಸುತ್ತದೆ. ಈ ಪ್ರತಿಬಿಂಬವನ್ನೇ ಕಣ್ಣಿನಲ್ಲಿರುವುದೆಂದು ಮಾಯಾವಾದಿಗಳು ಪೂರ್ವಪಕ್ಷ ಮಾಡುತ್ತಾರೆ.)

**प्रकाशः –** पूर्वं ''ऋतं पिबन्तौ'' इत्यत्र पातृत्वलिङ्गेन प्रथममवगतचेतन-द्वयानुरोधेन पश्चादवगतगुहाप्रवेशादयः कथञ्चित् व्याख्याताः । तद्वदिहापि ''य एषोऽन्तरक्षिणि पुरुषो दृश्यते'' इति प्रत्यक्षाभिधानात्तस्य च्छायायामेव सम्भवात्परोक्षे ब्रह्मण्यसम्भवादृश्यत्वेन प्रथममवगते छायापुरुषे तदनुरोधेन अमृतत्वाभयत्वादयः स्तुतिरूपेण कथञ्चित् व्याख्येयाः । उक्तं च भामात्याम् -

एष दृश्यते इत्येतत्प्रत्यक्षेऽर्थे प्रयुज्यते ।
परोक्षं ब्रह्म न तथा प्रतिबिम्बे तु युज्यते ।।
उपक्रमवशात् पूर्वमितरेषां हि वर्णनम् ।
कृतं न्यायनयेनैव स खल्वत्रानुषज्यते ।।

इति । एवं प्राप्ते

**ಪೂರ್ವಪಕ್ಷ** - 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ಪಾತೃತ್ವಲಿಂಗವು ಮೊದಲು ತಿಳಿಯುತ್ತದೆ. ಆದ್ದರಿಂದ ಇಬ್ಬರು ಚೇತನರೇ ಈ ಶ್ರುತಿಯಿಂದ ಪ್ರತಿಪಾದ್ಯರೆಂದು ತಿಳಿಯುತ್ತದೆ. ಮೊದಲು ತಿಳಿಯುವ ಈ ವಿಚಾರವನ್ನು ಗೌರವಿಸಿ ಅನಂತರ ತಿಳಿಯುವ ಗುಹಾಪ್ರವೇಶಾದಿಗಳನ್ನು ಹೇಗಾದರೂ ವ್ಯಾಖ್ಯಾನಿಸಬಹುದು. ಅದರಂತೆ ''ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ'' ಎಂಬಲ್ಲಿಯೂ 'ದೃಶ್ಯತೇ' ಎಂಬುದಾಗಿ ಕಣ್ಣಿಗೆ ಕಾಣಿಸುವ ವ್ಯಕ್ತಿಯ ಜ್ಞಾನವು ಮೊದಲು ತಿಳಿಯುತ್ತದೆ. ಈ ಪ್ರತ್ಯಕ್ಷವಿಷಯತ್ವವು ಛಾಯಾಪುರುಷನಲ್ಲೇ

ಯುಕ್ತವಾಗುವುದರಿಂದ ಮೊದಲು ತಿಳಿಯಲ್ಪಟ್ಟಿದ್ದಾನೆ. ಆದ್ದರಿಂದ ಮೊದಲು ಪ್ರಾಪ್ತವಾದ ಛಾಯಾಪುರುಷನ ತಿಳುವಳಿಕೆಗೆ ಮನ್ನಣೆ ನೀಡಿ ಅನಂತರ ತಿಳಿಯುವ ಅಮೃತತ್ವ ಅಭಯತ್ವಾದಿಗಳನ್ನು ಛಾಯಾಪುರುಷನಿಗೆ ಅನುಸಾರಿಯಾಗಿ ಅರ್ಥೈಸಬೇಕು. ಅಂದರೆ ಛಾಯಾಪುರುಷನಲ್ಲಿ ಅಮೃತತ್ವ ಅಭಯತ್ವಗಳು ಯಥಾರ್ಥವಾಗಿ ಇಲ್ಲದಿದ್ದರೂ ಕೇವಲ ಸ್ತೋತ್ರ ಮಾಡುತ್ತಿರುವುದರಿಂದ ಯುಕ್ತವಾಗುತ್ತದೆಂದು 'ಕಥಂಚಿತ್' ವ್ಯಾಖ್ಯಾನಿಸಬೇಕು. ಇದನ್ನೇ ಭಾಮತಿಯಲ್ಲಿ ಹೇಳಿದ್ದಾರೆ -

ಏಷ ದೃಶ್ಯತೇ ಇತ್ಯೇತತ್ಪ್ರತ್ಯಕ್ಷೇಽರ್ಥೇ ಪ್ರಯುಜ್ಯತೇ ।
ಪರೋಕ್ಷಂ ಬ್ರಹ್ಮ ನ ತಥಾ ಪ್ರತಿಬಿಂಬೇ ತು ಯುಜ್ಯತೇ ॥
ಉಪಕ್ರಮವಶಾತ್ ಪೂರ್ವಮಿತರೇಷಾಂ ಹಿ ವರ್ಣನಮ್ ।
ಕೃತಂ ನ್ಯಾಯನಯೇನೈವ ಸ ಖಲ್ವತ್ರಾನುಷಜ್ಯತೇ ॥

'ಏಷಃ ದೃಶ್ಯತೇ' ಎಂಬುದಾಗಿ ಶ್ರುತಿಯು ಪ್ರತ್ಯಕ್ಷ ಸಿದ್ಧವಾದ ವ್ಯಕ್ತಿಯನ್ನು ಪ್ರತಿಪಾದಿಸುತ್ತಿದೆ. ಬ್ರಹ್ಮನು ಪರೋಕ್ಷನಾದ್ದರಿಂದ ಅವನಲ್ಲಿ ಈ ಪ್ರಯೋಗವು ಕೂಡುವುದಿಲ್ಲ. ಆದರೆ ಛಾಯಾಪುರುಷನಲ್ಲಿ ಪ್ರತ್ಯಕ್ಷ ವಿಷಯತ್ವವು ಕೂಡುತ್ತದೆ. ಹೀಗೆ ಉಪಕ್ರಮಕ್ಕೆ ಅನುಗುಣವಾಗಿ ಉಳಿದ ಅಮೃತತ್ವಾದಿಗಳನ್ನು ಅರ್ಥೈಸಬೇಕು. ಹೀಗೆ ಯಾವ ನ್ಯಾಯವನ್ನು ಹಿಂದಿನ ಗುಹಾಧಿಕರಣದಲ್ಲಿ ಹೇಳಲ್ಪಟ್ಟಿದೆಯೋ? ಆ ನ್ಯಾಯವನ್ನೇ ಅನುಷಂಗ ಮಾಡಬೇಕು. ಇಷ್ಟು ಪೂರ್ವಪಕ್ಷ.

**प्रकाशः** – ब्रह्मैव, अमृतत्वाभयत्वादेस्तस्मिन्नेवोपपत्तेः, नच दृश्यत्वेन प्रथमावगतच्छायैवात्रोच्यत इति वाच्यम्, दृश्यते' इत्येतस्मादपि पूर्वं चेतनवाचिपुरुषपदेन परमात्मन एवावगतत्वात् । 'य एषः' इति सर्वनामशब्दौ सन्निहितपुरुषपदार्थं प्राप्य निराकाङ्क्षौ । 'दृश्यते' इत्येतदपि सन्निहितपुरुषपदार्थं प्राप्य निराकाङ्क्षम् । पुरुषे च तद्विषयकशास्त्रजन्यज्ञानस्यातिस्फुटत्वात् दृश्यत्वोपचारः । तदुक्तं भामत्यां –

अनिष्पन्नाभिधाने द्वे सर्वनामपदे सती ।
प्राप्य सन्निहितस्यार्थं भवेतामभिधातृणी ।।

इति ।

ಬ್ರಹ್ಮನೇ 'ಯ ಏಷಃ' ಎಂಬ ಶ್ರುತಿಯಿಂದ ಪ್ರತಿಪಾದ್ಯನು. ಅಮೃತತ್ವ ಅಭಯತ್ವಾದಿಲಿಂಗಗಳು ಅವನಲ್ಲೇ ಯುಕ್ತವಾಗುತ್ತದೆ. ಪ್ರಥಮ ಪ್ರಾಪ್ತವಾದ ಪ್ರತ್ಯಕ್ಷವಿಷಯನಾದ ಛಾಯಾಪುರುಷನನ್ನೇ ವಿವಕ್ಷಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. 'ದೃಶ್ಯತೇ' ಎಂಬ ಪದಕ್ಕಿಂತ ಮೊದಲು ಚೇತನವಾಚಿಯಾದ ಪುರುಷ ಪದವು ಕೇಳಿಸುತ್ತಿದೆ. ಈ ಪುರುಷ ಪದದಿಂದ ಪರಮಾತ್ಮನೇ ತಿಳಿಯುತ್ತಾನೆ. 'ಯ ಏಷಃ' ಎಂಬ ಸರ್ವನಾಮ ಶಬ್ದಗಳು ಸನ್ನಿಹಿತನಾದ ಪುರುಷಪದಪ್ರತಿಪಾದ್ಯನಲ್ಲಿ ಅನ್ವಯವನ್ನು ಹೊಂದಿ. ನಿರಾಕಾಂಕ್ಷಿತವಾಗಿವೆ. ಪುರುಷಪದವಿಲ್ಲದಿದ್ದರೆ 'ಯ ಏಷಃ' ಎಂಬ ಪದವು ಯಾರನ್ನು ಹೇಳುತ್ತಿದೆ ಎಂಬ

ಆಕಾಂಕ್ಷೆಯೇ ಶಾಂತವಾಗುತ್ತಿರಲಿಲ್ಲ. ಇದರಂತೆ 'ದೃಶ್ಯತೇ' ಎಂಬ ಪದವೂ ಸಹ ಸನ್ನಿಹಿತನಾದ ಪುರುಷಪದಾರ್ಥದಲ್ಲಿ ಅನ್ವಯವನ್ನು ಹೊಂದಿ ನಿರಾಕಾಂಕ್ಷಿತವಾಗಿದೆ.

ಹಾಗಾದರೆ ಪರೋಕ್ಷನಾದ ಬ್ರಹ್ಮನಲ್ಲಿ 'ದೃಶ್ಯತೇ' ಎಂಬ ಪ್ರತ್ಯಕ್ಷಪದ ಪ್ರಯೋಗವು ಹೇಗೆ ಕೂಡುತ್ತದೆ? ಎಂದು ಶಂಕಿಸಬಾರದು. ಬ್ರಹ್ಮವಿಷಯಕವಾದ ಶಾಸ್ತ್ರಜನ್ಯಜ್ಞಾನವು ಅತ್ಯಂತ ಸ್ಪಷ್ಟವಾಗಿರುವುದರಿಂದ ಶ್ರುತಿಯು ಔಪಚಾರಿಕವಾಗಿ 'ದೃಶ್ಯತೇ' ಎಂದು ಹೇಳಿದೆ. ಇದನ್ನೇ ಭಾಮತಿಯಲ್ಲಿ ಹೀಗೆ ಹೇಳಿದ್ದಾರೆ - 'ಯ ಏಷಃ' ಎಂಬೆರಡು ಸರ್ವನಾಮಪದಗಳು ಸಾಕಾಂಕ್ಷಿತವಾಗಿರುವಾಗ ಸನ್ನಿಹಿತವಾದ ಪುರುಷಪದಾರ್ಥದಲ್ಲಿ ಅನ್ವಯವನ್ನು ಹೊಂದಿ ನಿರಾಕಾಂಕ್ಷಿತವಾಗಿದೆ ಎಂದು.

**प्रकाशः** – यद्यपि भाष्ये – 'किं प्रतिबिम्ब उत जीवः अथेन्द्रियास्याधिष्ठातृदेवता उत परमात्मा' इति कोटिचतुष्टयं प्रदर्शितं, तथाऽपि भामत्यां जीवदेवतयोरधिकाशङ्काऽयोगात् 'सम्भवमात्रेण जीवदेवते भाष्ये उपन्यस्ते' इत्युक्त्वा कोटिद्वयमेव प्रदर्शितम् ।

ವಸ್ತುತಃ ಶಾಂಕರ ಭಾಷ್ಯದಲ್ಲಿ "ಕಿಂ ಪ್ರತಿಬಿಂಬ ಉತ ಜೀವಃ ಅಥೇಂದ್ರಿಯಾಸ್ಯಾಧಿಷ್ಠಾತೃದೇವತಾ ಉತ ಪರಮಾತ್ಮಾ" ಪ್ರತಿಬಿಂಬನೋ? ಅಥವಾ, ಇಂದ್ರನೋ? ಅಥವಾ ಅಧಿಷ್ಠಾತೃ ದೇವತೆಯೋ? ಅಥವಾ ಪರಮಾತ್ಮನೋ? ಎಂಬುದಾಗಿ ನಾಲ್ಕು ಬಗೆಯ ಸಂಶಯಕೋಟಿಯನ್ನು ತೋರಿಸಿದ್ದಾರೆ. ಆದರೆ ಗ್ರಂಥಕಾರರು ಎರಡೇ ಕೋಟಿಗಳನ್ನು ತೋರಿಸಿದ್ದಾರಲ್ಲಾ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಭಾಮತಿಯಲ್ಲಿ "ಜೀವದೇವತಯೋರಧಿಕಾಶಂಕಾಽಯೋಗಾತ್ "ಸಂಭವಮಾತ್ರೇಣ ಜೀವದೇವತೇ ಭಾಷ್ಯೇ ಉಪನ್ಯಸ್ತೇ" ವಸ್ತುತಃ ಜೀವ ಹಾಗೂ ದೇವತೆಗಳ ಪಕ್ಷದಲ್ಲಿ ಅಧಿಕಾಶಂಕೆಯು ಇಲ್ಲದ ಕಾರಣದಿಂದ ಕೇವಲ ಸಂಭವಾನ ಪೂರ್ವಕವಾಗಿ ಜೀವ ಹಾಗೂ ದೇವತೆಗಳೆಂಬ ಕೋಟಿಗಳು ಶಂಕರಭಾಷ್ಯದಲ್ಲಿ ಹೇಳಿರುತ್ತಾರೆ." ಹೀಗೆ ಭಾಮತಿಯಲ್ಲಿ ಹೇಳಿರುವ ಪ್ರಯುಕ್ತ ಗ್ರಂಥಕಾರರು ಎರಡೇ ಕೋಟಿಗಳನ್ನು ಪ್ರದರ್ಶಿಸಿರುತ್ತಾರೆ.

**प्रकाशः** – रामानुजीयानां तु – किमक्ष्याधारः पुरुषः प्रतिबिम्बजीवदेवताविशेषेष्वन्यतम उत परमात्मेति संशये, 'य एषः' इति पदाभ्यां प्रसिद्धत्वेन 'दृश्यते' इत्यभिधानाच्चोपक्रमानुगुण्येनान्यस्य स्तुत्यर्थत्वेन नेयत्वात् प्रतिबिम्बादिष्वन्यतम इति प्राप्ते,

ರಾಮಾನುಜರ ಅಧಿಕರಣ ಶರೀರ ಹೀಗಿದೆ - ಅಕ್ಷಿಗೆ ಆಧಾರನಾದ ಪುರುಷನು, ಪ್ರತಿಬಿಂಬನೋ? ಅಥವಾ ಜೀವನೋ? ಅಥವಾ ದೇವತೆಯೋ? ಅಥವಾ ಪರಮಾತ್ಮನೋ? ಎಂದು ಸಂಶಯ. 'ಯ ಏಷಃ' ಎಂಬೆರಡು ಪದಗಳಿರುವುದರಿಂದ ಪ್ರಸಿದ್ಧಾರ್ಥದಲ್ಲಿರುವ 'ದೃಶ್ಯತೇ' ಎಂಬ ಪದವಿರುವುದರಿಂದ ಪ್ರತಿಬಿಂಬಾದಿ ಮೂವರಲ್ಲಿ ಯಾರಾದರೂ ಒಬ್ಬರು 'ಅಕ್ಷಿಗೆ' ಆಧಾರರಾಗಿರುತ್ತಾರೆ. ಉಪಕ್ರಮಕ್ಕೆ ಅನುಸಾರಿಯಾಗಿ ಉಳಿದ ಅಮೃತತ್ವಾದಿಗಳನ್ನು ಶ್ರುತಿಪರವಾಗಿ ಅರ್ಥೈಸಬೇಕೆಂದು ಪೂರ್ವಪಕ್ಷ.

ಅಂತರಾಧಿಕರಣ (೧-೨-೪)

**प्रकाशः** – निरुपाधिकात्मत्वामृतत्वाभयत्वब्रह्मत्वसंयद्वामत्वादीनां परमात्मन्येवोपपत्तेः, प्रसिद्धत्वेन निर्देशस्य ''यश्चक्षुषि तिष्ठन्'' इत्यादिश्रुत्यन्तरे प्रसिद्धत्वेनोपपत्तेः, आपरोक्ष्यस्य च तदुपासनानिष्ठयोग्यापेक्षयोपपत्तेः परमात्मैवाक्षिस्थ इति सिद्धान्त इति तत्र मतद्वयस्यैकरूप्येणान्तर्नयसुधावाक्यानि विवृण्वन् मिलित्वा दोषमाह – **गतार्थमिति** ।

ನಿರೂಪಾಧಿಕತ್ವ, ಆತ್ಮತ್ವ, ಅಮೃತತ್ವ, ಅಭಯತ್ವ, ಸಂಯದ್ವಾಮತ್ವ ಮೊದಲಾದ ಲಿಂಗಗಳೆಲ್ಲವೂ ಪರಮಾತ್ಮನಲ್ಲೇ ಉಪಪನ್ನವಾಗುವುದರಿಂದ ಪರಮಾತ್ಮನೇ ಅಕ್ಷಿಸ್ಥನಾಗಿದ್ದಾನೆ. 'ಯಃ ಚಕ್ಷುಷು ತಿಷ್ಠನ್' ಇತ್ಯಾದಿಯಾಗಿ ಬೇರೆ ಶ್ರುತಿಯಿಂದ 'ದೃಶ್ಯತೇ' ಎಂಬ ಪದವು ಪ್ರಸಿದ್ಧನೆಂದಷ್ಟೇ ಹೇಳುತ್ತಿದೆ. 'ಯ ಏಷಃ' ಎಂಬೆರಡು ಪದಗಳು ಮತ್ತು 'ದೃಶ್ಯತೇ' ಎಂಬ ಪದವು ಪರಮಾತ್ಮನನ್ನು ಉಪಾಸನಾ ಮಾಡುವ ಅಧಿಕಾರವುಳ್ಳವರಿಗೆ ಅಪರೋಕ್ಷನಾಗುತ್ತಾನೆಂದಷ್ಟೇ ಹೇಳುತ್ತಿದೆ. ಆದ್ದರಿಂದ ಪರಮಾತ್ಮನೇ ಅಕ್ಷಿಸ್ಥನೆಂದು ಸಿದ್ಧಾಂತ.

ಹೀಗೆ ಅದ್ವೈತಿಗಳು ಹಾಗೂ ರಾಮಾನುಜರು ಒಂದೇ ರೀತಿಯಲ್ಲೇ ಈ ಅಧಿಕರಣವನ್ನು ರಚಿಸಿರುತ್ತಾರೆ. ಆದ್ದರಿಂದ ಇಬ್ಬರಿಗೂ ಒಟ್ಟಿಗೆ ಗ್ರಂಥಕಾರರು 'ಗತಾರ್ಥಮ್' ಇತ್ಯಾದಿ ವಾಕ್ಯದಿಂದ ದೋಷವನ್ನು ಹೇಳುತ್ತಿದ್ದಾರೆ. ಮತ್ತು ಅಂತಸ್ಥತ್ವಾಧಿಕರಣದ ಸುಧಾವಾಕ್ಯವನ್ನು ವಿವರಿಸುತ್ತಿದ್ದಾರೆ.

**प्रकाशः** – ननु तत्र ''य एषोऽन्तरादित्ये हिरण्मयः पुरुषो दृश्यते'' इत्यादित्यस्थत्वमुक्तं, इह तु अक्षिस्थत्वमुच्यत इति वा, तत्राद्याध्यायगतो-द्गीथोपासनागतवाक्यं विषयः, इह तु चतुर्थाध्यायगतोपकोसलविद्यास्थवाक्यं विषय इति वाक्यभेदेन वा,

तत्र ''सैवर्क् तत्साम तदुक्थं तद्यजुस्तद्ब्रह्म'' इत्यादिसार्वात्म्यादेरिवात्र ब्रह्मलिङ्गाभावेन वा, 'य एषः' इति प्रसिद्धत्वेन 'दृश्यते' इत्यपरोक्षत्वेनात्र निर्देशेन तद्वाक्यवैलक्षण्येन विशेषशङ्कासत्त्वेन वा पौनरुक्त्यनिरासः सेत्स्यतीत्यतः, आद्यं निराचष्टे – **तत्रेति** ।

ಆಕ್ಷೇಪ - ಅಂತಸ್ಥತ್ವಾಧಿಕರಣದಿಂದ ಪುನರುಕ್ತಿಯನ್ನು ಹೇಳಲಾಗದು. ಏಕೆಂದರೆ ಒಟ್ಟು ನಾಲ್ಕು ಬಗೆಯಲ್ಲಿ ಅಂತಸ್ಥತ್ವಾಧಿಕರಣದಿಂದ ವೈಲಕ್ಷಣ್ಯವನ್ನು ಇಲ್ಲಿ ತಿಳಿಯಬಹುದು -

೧) ಅಂತಸ್ಥತ್ವಾಧಿಕರಣದಲ್ಲಿ ''ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ'' ಎಂಬ ವಾಕ್ಯದಿಂದ ಬ್ರಹ್ಮನು ಆದಿತ್ಯನಲ್ಲಿದ್ದಾನೆಂದು ಸಮರ್ಥಿಸಲಾಗಿದೆ. ಆದರೆ ಈ ಅಧಿಕರಣದಲ್ಲಿ ಕಣ್ಣಿನಲ್ಲಿದ್ದಾನೆಂದು ಸಮರ್ಥಿಸಲಾಗಿದೆ.

೨) ಅಂತಸ್ಥತ್ವಾಧಿಕರಣದಲ್ಲಿ ಛಾಂದೋಗ್ಯದ ಮೊದಲನೆಯ ಅಧ್ಯಾಯದಲ್ಲಿ 'ಉದ್ಗಿಥೋಪಾಸನೆ'ಯನ್ನು ಹೇಳುವ ವಾಕ್ಯವು ವಿಷಯವಾಗಿದೆ. ಈ ಅಧಿಕರಣದಲ್ಲಿ ಛಾಂದೋಗ್ಯದ ನಾಲ್ಕನೆಯ ಅಧ್ಯಾಯದಲ್ಲಿರುವ ಉಪಕೋಸಲವಿದ್ಯೆಯಲ್ಲಿರುವ ವಾಕ್ಯವು ವಿಷಯವಾಗಿದೆ.

೩) ಅಂತಸ್ಥತ್ವಾಧಿಕರಣದಲ್ಲಿ "ಸೈವರ್ಕ್ ತತ್ಸಾಮ ತದುಕ್ಥಂ ತದ್ಯಜುಸ್ತದ್ಬ್ರಹ್ಮ' ಎಂಬುದಾಗಿ ಸರ್ವಾತ್ಮಕತ್ವವೇ ಮೊದಲಾದ ಬ್ರಹ್ಮಲಿಂಗಗಳು ಕೇಳಿಸುತ್ತಿವೆ. ಆದರೆ ಈ ಅಧಿಕರಣದಲ್ಲಿ ಅಂತಹ ಬ್ರಹ್ಮಲಿಂಗಗಳು ಇರುವುದಿಲ್ಲ.

೪) "ಯಃ ಏಷಃ " ಎಂಬ ಪದಗಳು 'ಪ್ರಸಿದ್ಧ' ಎಂಬರ್ಥವನ್ನು 'ದೃಶ್ಯತೇ' ಎಂಬ ಪದವು ಅಪರೋಕ್ಷ ಎಂಬರ್ಥವನ್ನು ಹೇಳುತ್ತವೆಂದು ಇಲ್ಲಿ ನಿರ್ದೇಶಿಸಲಾಗಿದೆ. ಆದರೆ ಅಲ್ಲಿ ಇದನ್ನು ಹೇಳದ ಕಾರಣ ಆ ವಾಕ್ಯಕ್ಕಿಂತ ವಿಲಕ್ಷಣವಾದ ಶಂಕೆಯನ್ನು ಮಾಡಿದಂತಾಗುತ್ತದೆ. ಈ ಎಲ್ಲಾ ಕಾರಣಗಳಿಂದ ಪುನರುಕ್ತಿಯನ್ನು ಪರಿಹರಿಸಬಹುದಲ್ಲವೇ?

**प्रकाशः** – "इत्यधिदैवतं" इत्युक्त्वा अनन्तरं "अथाध्यात्मं" इत्युपक्रम्य "य एषोऽन्तरक्षिणि पुरुषो दृश्यते सैव ऋक् तत्साम" इत्यादिश्रवणात् । उदाहृतं चैतत् त्वयाऽपि तत्रेति भावः ।

ಸಮಾಧಾನ - ಈ ನಾಲ್ಕು ವಿಧವಾದ ವೈಲಕ್ಷಣ್ಯವನ್ನು ಸಮರ್ಥಿಸಲಾಗದು. ಮೊದಲನೆಯ ಪಕ್ಷವನ್ನು 'ತತ್ರ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಏಕೆಂದರೆ 'ಇತ್ಯಧಿದೈವತಂ' ಎಂದು ಹೇಳದೆ "ಅಥಾಧ್ಯಾತ್ಮಂ" ಎಂದು ಪ್ರಾರಂಭಿಸಿ. "ಯ ಏಷೋऽಂತರಕ್ಷಿಣಿ ಪುರುಷೋ ದೃಶ್ಯತೇ ಸೈವ ಋಕ್ ತತ್ಸಾಮ" ಇತ್ಯಾದಿಯಾಗಿ ಅಂತಸ್ಥತ್ವಾಧಿಕರಣದಲ್ಲಿ ಅಕ್ಷಿಸ್ಥತ್ವವೂ ಸಹ ಕೇಳಿಸುತ್ತಿದೆ. ಸ್ವತಃ ಅದ್ವೈತಿಗಳೇ ಹಾಗೇ ಉದಾಹರಿಸಿದ್ದಾರೆ.

**प्रकाशः** – द्वितीयं निराह – **नचेति** । **एतावतैवेति** । तथात्वे वाक्यानन्त्येन प्रतिवाक्यमधिकरणारम्भे शास्त्रापर्यवसानं स्यादिति भावः ।

तृतीयं निराह – **श्रूयन्ते चेति** ।

ದ್ವಿತಿಯಂ ನಿರಾಹ - ಎರಡನೆಯ ಪಕ್ಷವನ್ನು 'ನಚ ತತ್ರ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಕೇವಲ ವಾಕ್ಯಭೇದದಿಂದಲೇ ಅಧಿಕರಣಭೇಧವನ್ನು ಒಪ್ಪುವುದಾದರೆ ಪ್ರತಿಯೊಂದು ವಾಕ್ಯಕ್ಕೂ ಒಂದೊಂದು ಅಧಿಕರಣಗಳನ್ನು ರಚಿಸಬೇಕಾದ್ದರಿಂದ ಶಾಸ್ತ್ರಕ್ಕೆ ಅಪರ್ಯವಸಾನ ದೋಷವು ಬರುತ್ತದೆ. ಮೂರನೇ ಪಕ್ಷವನ್ನು 'ಶ್ರೂಯಂತೇ ಚ' ಎಂಬುದರಿಂದ ನಿರಾಕರಿಸುತ್ತಿದ್ದಾರೆ.

**प्रकाशः** – **ब्रह्मशब्दश्चेति** । यद्यपि तत्रापि "तद्यजुस्तद्ब्रह्म" इत्यस्ति ब्रह्मशब्दः, तथाऽपि 'ब्रह्मणः शब्दो ब्रह्मशब्दः' इत्यात्मशब्दश्चात्राधिक इत्यर्थ इत्याहुः ।

ಪ್ರಶ್ನೆ - ಗ್ರಂಥಕಾರರು "ಬ್ರಹ್ಮಶಬ್ದಶ್ಚಾತ್ರಾಧಿಕಃ" ಬ್ರಹ್ಮಶಬ್ದವು ಈ ಅಧಿಕರಣದಲ್ಲಿಯೇ ಅಧಿಕವಾಗಿದೆಯೆಂದಿದ್ದಾರೆ. ಇದು ಹೇಗೆ ಸರಿ? ಏಕೆಂದರೆ ಅಂತಸ್ಥತ್ವಾಧಿಕರಣದಲ್ಲಿಯೂ 'ತದ್ಯಜುಸ್ತದ್ಬ್ರಹ್ಮ' ಎಂಬುದಾಗಿ ಬ್ರಹ್ಮಶಬ್ದವು ಕೇಳಿಸುತ್ತಿದೆ. ಹೀಗಿರುವಾಗ ಇಲ್ಲಿ ಮಾತ್ರ ಬ್ರಹ್ಮಶಬ್ದವು ಅಧಿಕವಾಗಲು ಹೇಗೆ ಸಾಧ್ಯ ?

ಉತ್ತರ - ಈ ಪ್ರಶ್ನೆಗೆ ನಮ್ಮಲ್ಲೇ ಒಬ್ಬೊಬ್ಬರು ಒಂದೊಂದು ಬಗೆಯಲ್ಲಿ ಉತ್ತರಿಸಿದ್ದಾರೆ - 'ಬ್ರಹ್ಮಣಃ ಶಬ್ದೋ ಬ್ರಹ್ಮಶಬ್ದಃ' ಎಂಬ ವಿಗ್ರಹವನ್ನು ಆಶ್ರಯಿಸಿದಾಗ ಬ್ರಹ್ಮನಿಗೆ ಸಂಬಂಧಪಟ್ಟ ಆತ್ಮಶಬ್ದವು ಇಲ್ಲಿ ಅಧಿಕವಾಗಿದೆ ಎಂದು ಕೆಲವರ ವ್ಯಾಖ್ಯಾನ.

**प्रकाशः** – अन्ये तु लेखकदोषमूलोऽयं, "आत्मशब्दश्चात्राधिकः" इत्येव पाठ इत्याहुः । अत एवान्तर्नयसुधायां - "सन्ति च तत्राप्यमृतत्वादयो ब्रह्मधर्माः" इत्येवोक्तम् । अपरे तु - "ब्रह्मशब्दश्च" इति यथाश्रुत एव पाठः । अयमर्थः "कं ब्रह्म खं ब्रह्म" इत्युपक्रमे द्विर्ब्रह्मशब्दः, "एतदमृतमभयमेतद्ब्रह्म" इति मध्ये, "स एनान् ब्रह्म गमयति" इत्यन्ते च ब्रह्मशब्दश्रवणात् ब्रह्मशब्दश्चात्राधिको बहुल इत्यर्थ इत्याहुः ।

ಚಂದ್ರಿಕಾ ಗ್ರಂಥದಲ್ಲಿ ಈ ವಾಕ್ಯವೇ ಇರುವುದಿಲ್ಲ. ಇದು ಕೇವಲ ಲೇಖಕನ ದೋಷದಿಂದ ಬೆಳೆದುಬಂದಿದೆ. "ಆತ್ಮಶಬ್ದಶ್ಚಾತ್ರಾಧಿಕಃ" ಎನ್ನುವುದೇ ಸರಿಯಾದ ಪಾಠವೆಂದು ಇನ್ನು ಕೆಲವರ ವ್ಯಾಖ್ಯಾನ. ಆದ್ದರಿಂದಲೇ ಅಂತಸ್ಥತ್ವಾಧಿಕರಣದ ನ್ಯಾಯಸುಧೆಯಲ್ಲಿ "ಸಂತಿ ಚ ತತ್ರಾಪ್ಯಮೃತತ್ವಾದಯೋ ಬ್ರಹ್ಮಧರ್ಮಾಃ" ಅಮೃತತ್ವವೇ ಮೊದಲಾದ ಬ್ರಹ್ಮನ ಧರ್ಮಗಳು ಅಲ್ಲಿಯೂ ಕಾಣಸುತ್ತಿವೆ ಎಂದು ಹೇಳಿದ್ದಾರೆ.

'ಬ್ರಹ್ಮಶಬ್ದಶ್ಚ' ಎಂಬ ಯಥಾಶ್ರುತವಾದ ಪಾಠವೇ ಸರಿಯಾಗಿದೆ. ಇದರ ಅಭಿಪ್ರಾಯವೇನೆಂದರೆ 'ಕಂ ಬ್ರಹ್ಮ ಖಂ ಬ್ರಹ್ಮ' ಎಂಬುದಾಗಿ ಉಪಕ್ರಮದಲ್ಲಿ ಎರಡು ಬಾರಿ ಬ್ರಹ್ಮಶಬ್ದವು ಕೇಳಿಸುತ್ತಿದೆ. ಪುನಃ ಮಧ್ಯದಲ್ಲಿ "ಏತದಮೃತಮಭಯಮೇತದ್ಬ್ರಹ್ಮ" ಎಂಬುದಾಗಿ ಬ್ರಹ್ಮಶಬ್ದವು ಕೇಳಿಸುತ್ತಿದೆ. ಕೊನೆಯಲ್ಲೂ ಸಹ "ಸ ಏನಾನ್ ಬ್ರಹ್ಮ ಗಮಯತಿ" ಎಂಬುದಾಗಿ ಬ್ರಹ್ಮಶಬ್ದವು ಕೇಳಿಸುತ್ತಿದೆ. ಹೀಗೆ ಬ್ರಹ್ಮಶಬ್ದವು ಇಲ್ಲಿ ಅಧಿಕವಾಗಿ ಅಂದರೆ ಅನೇಕ ಬಾರಿ ಕೇಳಿಸುತ್ತಿದೆ. ಆದರೆ ಅಂತಸ್ಥತ್ವಾಧಿಕರಣದಲ್ಲಿ ಅನೇಕ ಬಾರಿ ಬ್ರಹ್ಮಶಬ್ದವು ಕೇಳಿಸುತ್ತಿಲ್ಲವೆಂದು ಇನ್ನು ಕೆಲವರು ಸ್ವರಸವಾಗಿ ವ್ಯಾಖ್ಯಾನಿಸುತ್ತಾರೆ.

**प्रकाशः** – चतुर्थं प्रत्याह – न चात्रेति । एवं मतद्वयसाधारण्येन पौनरुक्त्यमुपपाद्य यद्भामत्यां गतार्थत्वमाशङ्क्य समाहितं, तदनूद्य निराह – **अत्रोक्तमिति । छायेति ।** प्रतिबिम्ब इत्यर्थः ।

**कथं तर्हि भाष्ये जीवदेवते अप्युपन्यस्ते इत्यत उक्तम् – भाष्य इति ।** तदीयभाष्ये । किमतो यद्येवमित्यतः ततो विशेषशङ्कामाह – **तथा चेति ।**

ನಾಲ್ಕನೆಯ ಪಕ್ಷವನ್ನು 'ನಚಾತ್ರ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಹೀಗೆ ಉಭಯಮತ ಸಾಧಾರಣವಾಗಿ ಪುನರುಕ್ತಿದೋಷವನ್ನು ತೋರಿಸಿ ಭಾಮತಿಯಲ್ಲಿ ಪುನರುಕ್ತಿಯನ್ನು ಆಶಂಕಿಸಿ ನೀಡಿದ ಸಮಾಧಾನವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಅತ್ರೋಕ್ತಂ' ಇತ್ಯಾದಿ ವಾಕ್ಯದಿಂದ. 'ಛಾಯಾ' ಶಬ್ದಕ್ಕೆ 'ಪ್ರತಿಬಿಂಬ' ಎಂದರ್ಥ.

ಹಾಗಾದರೆ ಶಂಕರಭಾಷ್ಯದಲ್ಲಿ ಜೀವ ಹಾಗೂ ದೇವತೆಗಳನ್ನು ಏಕೆ ಉಲ್ಲೇಖಿಸಿದ್ದಾರೆ? ಎಂಬ ಪ್ರಶ್ನೆಗೆ 'ಭಾಷ್ಯ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ಭಾಷ್ಯ' ಎಂಬ ಪದಕ್ಕೆ ಶಾಂಕರಭಾಷ್ಯದಲ್ಲಿ ಎಂದರ್ಥ. ಇದರಿಂದೇನು ಹೇಳಿದಂತಾಯಿತು? ಎಂಬ ಪ್ರಶ್ನೆಗೆ 'ತಥಾಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः – पूर्ववाक्येति ।** ''अहं तु ते तद्वक्ष्यामि तद्यथा पुष्करपलाश आपो न श्लिष्यन्त एवमेवंविदि पापं कर्म न श्लिष्यत इति । ब्रवीतु मे भगवानिति तस्मै स होवाच य एषोऽन्तरक्षिणि पुरुषो दृश्यते'' इति श्रवणादक्षिस्थज्ञानेन पापालेपस्य पूर्ववाक्योक्तस्यायुक्तयेत्यर्थः ।

''ಅಹಂ ತು ತೇ ತದ್ವಕ್ಷ್ಯಾಮಿ ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂ ವಿದಿ ಪಾಪಂ ಕರ್ಮ ನ ಶ್ಲಿಷ್ಯತೇ ಇತಿ । ಬ್ರವೀತು ಮೇ ಭಗವಾನಿತಿ ತಸ್ಮೈ ಸ ಹೋವಾಚ ಯ ಏಷೋऽಂತರಕ್ಷಿಣಿ ಪುರುಷೋ ದೃಶ್ಯತೇ'' ಎಂದು ಕೇಳಿಸುತ್ತಿರುವುದರಿಂದ ಕಣ್ಣಿನಲ್ಲಿರುವ ಜ್ಞಾನದಿಂದ ಪಾಪವು ಬರುವುದಿಲ್ಲವೆಂದು ಹಿಂದಿನ ವಾಕ್ಯದಲ್ಲಿ ಹೇಳಿದ್ದು ಅಯುಕ್ತವಾದ್ದರಿಂದ ಎಂದು 'ಪೂರ್ವವಾಕ್ಯೋಕ್ತಸ್ಯ' ಎಂಬ ಶಬ್ದದ ಅರ್ಥ.

**प्रकाशः –** ''एष उ एव वामनिरेष हि सर्वाणि वामानि नयति'' इत्यत्र त्वदुक्तरीत्या पुण्यफलोत्पत्तिकारणत्वादिरूपसंयद्वामत्वादेरित्यर्थः । ननूक्तममृतत्वादिकं स्तुत्यैव कथञ्चिन्नेयमिति, तत्राह – **छायायामिति ।**

**जीवेऽपीति** । अविद्यमानकथनस्योभयत्र तुल्यत्वात् । तथा च न ततो विशेषाशङ्केति भावः ।

''ಏಷ ಉ ಏವ ವಾಮನಿರೇಷ ಹಿ ಸರ್ವಾಣಿ ವಾಮಾನಿ ನಯತಿ'' ಎಂಬಲ್ಲಿ ಅದ್ವೈತಿಗಳೇ ಹೇಳಿದಂತೆ ಪುಣ್ಯಫಲೋತ್ಪತ್ತಿ ಕಾರಣತ್ವವೇ ಮೊದಲಾದ ಸ್ವರೂಪವುಳ್ಳ ಸಂಯದ್ವಾಮತ್ವಾದಿಗಳು ಸರ್ವಥಾ ಅಯುಕ್ತವಾಗುತ್ತವೆಂದು ತಿಳಿಯಬೇಕು. ಅಮೃತತ್ವಾದಿಗಳೆಲ್ಲವೂ ಅಕ್ಷಿಸ್ಥನಾದ ಪುರುಷನಲ್ಲಿ ಶ್ರುತಿಪ್ರಯುಕ್ತವಾಗಿ ಕಥಂಚಿತ್ ವ್ಯಾಖ್ಯಾನಿಸಬಹುದಲ್ಲವೇ? ಎಂಬ ಪ್ರಶ್ನೆಗೆ 'ಛಾಯಾಯಾಂ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

'ಜೀವೇಽಪಿ' ಎಂದರೆ ಛಾಯಾಪುರುಷನಲ್ಲಿ ಇಲ್ಲದೇ ಇರುವಂತಹ ಧರ್ಮವನ್ನು ಶ್ರುತಿಪರವಾಗಿ ಹೇಳಿದಂತೆ ಜೀವನಲ್ಲೂ ಸಹ ಹೇಳಬಹುದಲ್ಲವೇ? ಆದ್ದರಿಂದ ಅಂಸತ್ಥತ್ವಾಧಿಕರಣದ ಪೂರ್ವಪಕ್ಷಕ್ಕಿಂತ ಇಲ್ಲಿನ ಪೂರ್ವಪಕ್ಷದಲ್ಲಿ ಏನೂ ವ್ಯತ್ಯಾಸವಿರುವುದಿಲ್ಲವೆಂದು ಸ್ಪಷ್ಟವಾಗಿ ತಿಳಿಯಬೇಕು.

**प्रकाशः** – ननु भवन्मतेऽपि ''ब्रह्मेन्द्रमग्निं जगतः प्रतिष्ठां'' इत्यग्निश्रुत्याऽग्नेः ''अन्तः प्रविष्टं कर्तारं'' इत्यादौ अन्तस्स्थत्वमिति प्राप्ते, विष्णोरेवेति तत्रैवोक्तत्वादिह पुनरग्नेः अन्तस्स्थत्वशङ्काऽयोगात्पौनरुक्त्यमित्यत आह – **अस्माकमिति** । तत्रान्तस्स्थत्वसामान्यमिह चक्षुरन्तस्स्थत्वं, तत्रेन्द्रादीनामनेकेषां इह त्वग्नेरेव, तत्र श्रुतिमात्रेण इह त्वभ्यासादिभिरिति महान् भेद इत्यर्थः ।

ಆಕ್ಷೇಪ - ನಮ್ಮ ಮತದಂತೆ ನಿಮಗೂ ಸಹ ಅಂತಸ್ಥತ್ವಾಧಿಕರಣದಿಂದ ಈ ಅಧಿಕರಣಕ್ಕೆ ವೈಲಕ್ಷಣ್ಯವನ್ನು ತೋರಿಸಲಾಗದು. ಏಕೆಂದರೆ 'ಬ್ರಹ್ಮೇಂದ್ರಮಗ್ನಿಂ ಜಗತಃ ಪ್ರತಿಷ್ಠಾಂ'' ಎಂಬುದಾಗಿ ಅಗ್ನಿಶ್ರುತಿಯಿಂದ ಅಗ್ನಿಗೆ ''ಅಂತಃ ಪ್ರವಿಷ್ಟಂ ಕರ್ತಾರಂ'' ಇತ್ಯಾದಿಯಾಗಿ ಅಂತಸ್ಥತ್ವವನ್ನು ಆಶಂಕಿಸಿ ವಿಷ್ಣುವೇ ಅಂತಸ್ಥನಾಗಿದ್ದನೆಂದು ಪೂರ್ವಪಕ್ಷ ಮಾಡುತ್ತೀರಿ. ಪುನಃ ಈ ಅಧಿಕರಣದಲ್ಲಿಯೂ ಅಗ್ನಿಯು ಅಂತಸ್ಥನೆಂದು ಆಶಂಕಿಸುತ್ತಿರುವುದರಿಂದ ಪುನರುಕ್ತಿ ಬರುತ್ತದಲ್ಲವೆ ?

ಸಮಾಧಾನ - ಈ ಪ್ರಶ್ನೆಗೆ 'ಅಸ್ಮಾಕಂ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ನಮ್ಮ ಸಿದ್ಧಾಂತದಲ್ಲಿ ಎರಡು ಅಧಿಕರಣಗಳಿಗೆ ಬಹಳಷ್ಟು ವ್ಯತ್ಯಾಸಗಳಿವೆ. ಅಲ್ಲಿ ಅಂತಸ್ಥತ್ವವೆಂಬ ಸಾಮಾನ್ಯಧರ್ಮ. ಸಮನ್ವಯದ ಇಲ್ಲಿ 'ಚಕ್ಷುರಂತಸ್ಥತ್ವ' ಎಂಬ ವಿಶೇಷ ಧರ್ಮದ ಸಮನ್ವಯ. ಅಲ್ಲಿ ಇಂದ್ರ ಶಬ್ದವೇ ಮೊದಲಾದ ಅನೇಕ ಶಬ್ದಗಳ ಸಮನ್ವಯ. ಇಲ್ಲಿ ಕೇವಲ ಅಗ್ನಿಯೆಂಬ ಶಬ್ದದ ಸಮನ್ವಯ. ಅಲ್ಲಿ ಕೇವಲ ಶ್ರುತಿಯಿಂದ ಪೂರ್ವಪಕ್ಷ. ಇಲ್ಲಿ ಅಭ್ಯಾಸವೇ ಮೊದಲಾದ ಅನೇಕ ಪ್ರಮಾಣಗಳಿಂದ ಪೂರ್ವಪಕ್ಷ. ಹೀಗೆ ಬಹುಬಗೆಯಲ್ಲಿ ವೈಲಕ್ಷಣ್ಯವಿರುವಾಗ ಪುನರುಕ್ತಿಯನ್ನು ನಮಗೆ ಹೇಗೆ ತಾನೇ ಆಕ್ಷೇಪಿಸುತ್ತೀರಿ?

**गुरुराजीयम्** – **इत्येतावतैवेति** ।। अन्यथा विषयवाक्यभेदमात्रेणाधिकरण-भेदेऽतिप्रसङ्गस्स्यादित्यर्थः । अस्तु वा सुखसम्बद्धत्वमेव सुखविशिष्टत्वम् । तथापि तत्किं शुद्धस्य किं वा विशिष्टस्येति विकल्प्य क्रमेण दूषयति – **त्वन्मत इत्यादिना**।।

गतेरित्यनूद्य प्राप्तेरिति व्याख्यानम् – **यच्चेति** ।। अनेनानवस्थितेरिति द्वेधा व्याख्यातम् ।। **सदा चक्षुष्यवस्थित्यभावादिति** ।। यदैव हि कश्चित्पुरुषश्चक्षुरासीदति तदा चक्षुषि पुरुषच्छाया दृश्यते । अपगते तस्मिन्न दृश्यत इति भावः ।। एवं **सूत्रान्तरेऽपीति** ।।



ಅದ್ವೈತ ಮತದ ಪ್ರಕಾರ ಮತ್ತು ರಾಮಾನುಜ ಮತದ ಪ್ರಕಾರ ಈ ಅಧಿಕರಣವು ಪುನರುಕ್ತವಾಗಿದೆ. ಏಕೆಂದರೆ ಪ್ರಥಮಾಧ್ಯಾಯದ ಮೊದಲನೆಯ ಪಾದದಲ್ಲಿರುವ ಅಂತಸ್ಥತ್ವಾಧಿಕರಣವನ್ನು ಇವರಿಬ್ಬರು ಅಂತರಧಿಕರಣವೆಂದೇ ಗುರುತಿಸುತ್ತಾರೆ. ಮತ್ತು ಇಲ್ಲಿಯಂತೆ ಅಲ್ಲಿಯೂ ಸಹ ಛಾಂದೋಗ್ಯದ ಪ್ರಥಮಾಧ್ಯಾಯದ ವಾಕ್ಯವನ್ನು ಬ್ರಹ್ಮಪರವೆಂದು ಸಿದ್ಧಾಂತ ಮಾಡುತ್ತಾರೆ. ಅಲ್ಲಿ 'ಅತ ಯ ಏಷೋ ಅಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬ ವಾಕ್ಯವನ್ನೇ ಬ್ರಹ್ಮಪರವೆಂದು ಸಿದ್ಧಾಂತ ಮಾಡಿದ ಮೇಲೆ ಪುನಃ ಇಲ್ಲಿ ಆಕ್ಷೇಪಕ್ಕೆ ಅವಕಾಶವೇ ಇರುವುದಿಲ್ಲ.

ಇನ್ನು ಭಾಮತಿಯಲ್ಲಿ ಅಕ್ಷಿಯಲ್ಲಿರುವ ಜೀವವಿಶೇಷನು ಆ ಅಧಿಕರಣದ ಪೂರ್ವಪಕ್ಷಕ್ಕೆ ವಿಷಯನಾಗಿದ್ದಾನೆ. ಈ ಅಧಿಕರಣದ ಪೂರ್ವಪಕ್ಷಕ್ಕೆ ಛಾಯಾಪುರುಷನು ವಿಷಯನಾಗಿದ್ದಾನೆ. ಈ ಅಧಿಕರಣದ ವಿಷಯವಾಕ್ಯದಲ್ಲಿ ದೃಶ್ಯತ್ವಾದಿಗಳು ಕೇಳಿಸುತ್ತಿರುವುದರಿಂದ ಜೀವವಿಶೇಷನಲ್ಲಿ ದೃಶ್ಯತ್ವಾದಿಗಳು ಅಸಂಭಾವಿತವಾಗಿವೆ. ಆದರೆ ಛಾಯಾಪುರುಷನು ಪ್ರತ್ಯಕ್ಷಸಿದ್ಧನಾದ್ದರಿಂದ ದೃಶ್ಯತ್ವಕ್ಕೆ ಆಧಾರನಾಗಿದ್ದಾನೆಂದು ಅಭ್ಯಧಿಕಾಶಂಕೆಯನ್ನು ತೋರಿಸಿದೆ.

ಭಾಮತಿಯ ಈ ಧೋರಣೆ ಸರಿಯಿಲ್ಲ. ಕೇವಲ ದೃಶ್ಯತ್ವವೆಂಬ ಒಂದು ಹೇತು ಇಲ್ಲದ ಕಾರಣ ಜೀವಪಕ್ಷವನ್ನು ಬಿಡುವುದಾದರೆ ಪುರುಷತ್ವ, ಅಮೃತತ್ವ, ಸಂಯದ್ವಾಮತ್ವವೇ ಮೊದಲಾದ ಅನೇಕ ಧರ್ಮಗಳಿಲ್ಲದ ಛಾಯಾಪುರುಷ ಪಕ್ಷವನ್ನು ಖಂಡಿತವಾಗಿಯೂ ಬಿಡಬೇಕು. ಛಾಯಾಪುರುಷನಲ್ಲಿ ಸ್ತೋತ್ರ ಮಾಡುವುದಕ್ಕಾಗಿ ಅಮೃತ ಅಭಯ ಮೊದಲಾದ ಶಬ್ದಗಳನ್ನು ಪ್ರಯೋಗಿಸಲಾಗಿದೆಯೆಂದು ಹೇಳುವುದಾದರೆ ಜೀವಪಕ್ಷದಲ್ಲಿಯೂ ಇದು ಸಮಾನ. ಆದ್ದರಿಂದ ಯಾವುದೇ ಪ್ರಕಾರದಲ್ಲಿಯೂ ಅಭ್ಯಧಿಕಾಶಂಕೆಯನ್ನು ತೋರಿಸಲು ಸಾಧ್ಯವಿಲ್ಲದ ಕಾರಣ ಪುನರುಕ್ತಿದೋಷವನ್ನು ತಪ್ಪಿಸಿಕೊಳ್ಳಲಾಗದು.



## ಅದ್ವೈತಿಗಳ ಸೂತ್ರಾರ್ಥ ನಿರಾಕರಣೆ

### तात्पर्यचन्द्रिका

परसिद्धान्तोऽप्ययुक्तः । यतः ।

कार्यब्रह्मपरत्वं चेदमृतत्वाद्यसम्भवः ।
अकार्यपरता चेत्स्यादर्चिरादेरसम्भवः ॥१॥

नहि कार्यब्रह्मणश्चतुर्मुखस्यामृतत्वाभयत्वापरिच्छिन्नसुखत्वादिर्हेतुर्युक्तः, न वा तत्साध्यं चक्षुरन्तस्स्थत्वं युक्तं,

तस्य "यश्चक्षुषि तिष्ठन्" इत्यादिभिरकार्यब्रह्मभूतान्तर्यामिधर्मत्वात् । अकार्यब्रह्मपरत्वे तु श्रुतौ "तेऽर्चिषमभिसम्भवन्ति" इति, सूत्रे च "श्रुतोपनिषत्क" इति अर्चिराद्युक्तिर्न स्यात्, त्वन्मते तस्य कार्यब्रह्ममार्गत्वात् ।

यच्चोक्तं परममहतो ब्रह्मणोऽत्यल्पं चक्षुरधिष्ठानं नेति शङ्कानिरासार्थं स्थानादिसूत्रमिति

तन्न, "अर्भकौकस्त्वात्" इत्यनेनास्याः परिहृतत्वात् ।

यच्च तृतीयसूत्रे – सुखविशिष्टत्वं सुखसम्बद्धत्वम् । तथा च "कं ब्रह्म" इति सुखविशिष्टस्य ब्रह्मणः प्रक्रान्तत्वादक्षिवाक्येऽपि ब्रह्मैवोच्यत इत्यर्थ इत्युक्तम्,

तन्न, सुखसम्बन्धस्य जीवेऽपि सत्त्वेन वाक्यशेषोक्तं सुखनिष्ठमपरिच्छिन्नत्वरूपश्रैष्ठ्यमेव सूत्रस्थविशिष्टशब्दार्थ इति वक्तव्यत्वात्' त्वन्मते ब्रह्मणः सुखमात्रत्वेन तत्सम्बन्धाभावाच्च । विशिष्टस्यापि न वाक्यशेषोक्तापरिच्छिन्नसुखसम्बन्धः ।

यत्तु 'श्रुतोपनिषत्कस्य' । श्रुतरहस्यस्य ब्रह्मविदः श्रुत्यन्तरे प्रसिद्धा या अर्चिरादिमार्गरूपा गतिः, तस्या इहाभिधानादिति चतुर्थसूत्रव्याख्यानं,

तन्न, त्वन्मते अर्चिरादेरुपासकगतित्वेन ब्रह्मविद्गतित्वाभावात् । किञ्च "कगत्यभिधानात्" इति सूत्रे "स एनान् ब्रह्म गमयति" इति श्रुत्युक्तगतेः प्राप्तेः "कं ब्रह्म" इति श्रुतौ कशब्दनिर्दिष्टब्रह्मविषयत्वोक्तौ श्रुत्यनुसरणसिद्धिः, ब्रह्मप्राप्तिसाधनविद्यायाः साक्षाद्ब्रह्मविषयत्वसिद्धिश्च विद्यातत्साध्यप्राप्त्योरेकविषयत्वनियमात्, नतु मार्गस्यार्चिरादित्वमात्रोक्तौ । व्यर्थश्च "शेषाद्विभाषा" इति वैभाषिकः कप्रत्ययः । सूत्रस्थगतिशब्दश्च न मार्गे स्वरसः ।

यच्च च्छायायाः सदा चक्षुष्यवस्थित्यभावात्, जीवस्य च कृत्स्नशरीरेन्द्रियसम्बन्धिनश्चक्षुष्येवावस्थित्यभावात्, अमृतत्वादीनां छायादावसम्भवाच्च नेतर इति पञ्चमसूत्रव್याख्यानम्,

तन्न, अनवस्थितिशब्दस्य प्रसिद्धार्थत्यागात् । सदाशब्दादेरध्याहार्यत्वाच्च । कृत्स्नसम्बन्धेऽपि जीवस्य ब्रह्मण इवोपासनार्थं चक्षुस्स्थानोक्तिसम्भवाच्च । ''उपपत्तेः'' इत्यनेनैवान्यत्रामृतत्वाद्यसम्भवस्यार्थादुक्तत्वेन ''असम्भवात्'' इत्यस्य वैयर्थ्याच्च । एवं सूत्रान्तरेऽप्यनुपपत्तिरूह्या ।।[1]

---

(१) श्रीभाष्य – अन्तर उपपत्तेः

इदमामनन्ति च्छन्दोगाः 'य एषोऽन्तरक्षिणि पुरुषो दृश्यते । एष आत्मेति होवाच एतदमृतमेतदभयमेतद्ब्रह्म' (छा. ४-१५-१) इति । तत्र सन्देहः किमयमक्ष्याधारतया निर्दिश्यमानः पुरुषः प्रतिबिम्बात्मा, उत चक्षुरिन्द्रियाधिष्ठाता देवताविशेषः, उत जीवात्मा, अथ परमात्मा? इति । किं युक्तम्? प्रतिबिम्बात्मेति । कुतः? प्रसिद्धवन्निर्देशात्, 'दृश्यते' इत्यपरोक्षाभिधानाच्च । जीवात्मा वा, तस्यापि हि चक्षुषि विशेषेण सन्निधानात् प्रसिद्धिरुपपद्यते । उन्मीलितं हि चक्षुरुद्वीक्ष्य जीवात्मनश्शरीरे स्थितिगती निश्चिन्वन्ति । 'रश्मिभिरेषोऽस्मिन् प्रतिष्ठितः' इति श्रुतिप्रसिद्ध्या चक्षुःप्रतिष्ठो देवताविशेषो वा; एष्वेव प्रसिद्धवन्निर्देशोपपत्तेरेषामन्यतमः इति प्राप्ते प्रचक्ष्महे – **अन्तर उपपत्तेः** ।। अक्ष्यन्तरः परमात्मा । कुतः? 'एष आत्मेति होवाचैतदमृतमेतदभयमेतद् ब्रह्म एतं संयद्वाम इत्याचक्षते । एतं हि सर्वाणि वामान्यभिसंयन्ति एष उ एव वामनीः । एष हि सर्वाणि वामानि नयति । एष उ एव भामनीः । एष हि सर्वेषु लोकेषु भाति' इत्येषां गुणानां परमात्मन्येवोपपत्तेः ।। १३ ।।

**स्थानादिव्यपदेशाच्च ।। १४ ।।**

चक्षुषि स्थितिनियमनादयः परमात्मन एव 'यश्चक्षुषि तिष्ठन्' इत्येवमादौ व्यपदिश्यन्ते । अतश्च 'य एषोऽक्षिणि पुरुषः' इति स एव प्रतीयते; अतः प्रसिद्धवन्निर्देशश्च परमात्मन्युपपद्यते । तत एव 'दृश्यते' इति साक्षात्कारव्यपदेशोऽपि योगिभिर्दृश्यमानत्वादुपपद्यते ।। १४ ।।

**सुखविशिष्टाभिधानादेव च ।। १५ ।।**

इतश्चाक्ष्याधारः पुरुषोत्तमः 'कं ब्रह्म खं ब्रह्म' इति प्रकृतस्य सुखविशिष्टस्य ब्रह्मणः उपासनस्थानविधानार्थं संयद्वामत्वादिगुणविधानार्थं च 'य एषोऽक्षिणि पुरुषः' इत्यभिधानात् । एवकारो नैरपेक्ष्यं हेतोर्द्योतयति ।

नन्वग्निविद्याव्यवधानात् 'कं ब्रह्म' इति प्रकृतं ब्रह्म नेह सन्निधत्ते । तथाहि, अग्नयः 'प्राणो ब्रह्म कं ब्रह्म खं ब्रह्म' इति ब्रह्मविद्यामुपदिश्य 'अथ हैनं गार्हपत्योऽनुशशास' इत्यारभ्याग्नीनामुपासनमुपदिदिशुः । नचाग्निविद्या ब्रह्मविद्याङ्गमिति शक्यं वक्तुम् ।

ब्रह्मविद्याफलानन्तर्गततद्विरोधिसर्वायुःप्राप्तिसन्तत्यविच्छेदादिफलश्रवणात् उच्यते; 'प्राणो ब्रह्म' 'एतदमृतमेतदभयमेतद्ब्रह्म' इत्युभयत्र ब्रह्मसंशब्दनात् । 'आचार्यस्तु ते गतिं वक्ता' इत्यग्निवचनाच्च गत्युपदेशात् पूर्वं ब्रह्मविद्याया असमाप्तेस्तन्मध्यगताग्निविद्या ब्रह्मविद्याङ्गमिति निश्चीयते । 'अथ हैनं गार्हपत्योऽनुशशास' इति ब्रह्मविद्याधिकृतस्यैवाग्निविद्योपदेशाच्च । किञ्च 'व्याधिभिः परिपूर्णोऽस्मि' इति ब्रह्मप्राप्तिव्यतिरिक्तानानाविधकामोपहतिपूर्वकगर्भ-जन्मजरामरणादिभवभयोपतप्तायोपकोसलाय 'एषा सोम्य ते अस्मद्विद्यात्मविद्या च' इति समुच्चित्योपदेशान्मोक्षैकफलात्मविद्याङ्गत्वमग्निविद्यायाः प्रतीयते । एवं चाङ्गत्वेऽवगते सति फलानुकीर्तनमर्थवाद इति गम्यते । नचात्र मोक्षविरोधिफलं किञ्चिच्छ्रूयते, 'अपहते पापकृत्यां लोकी भवति सर्वमायुरेति ज्योग्जीवति नास्यावरपुरुषाः क्षीयन्ते उप वयं तं भुञ्जामोऽस्मिंश्च लोकेऽमुष्मिंश्च' इत्यमीषां फलानां मोक्षाधिकृतस्यानुगुणत्वात् । अपहते पापकृत्याम् ब्रह्मप्राप्तिविरोध पापं कर्मापहन्ति । लोकी भवति तद्विरोधिनि पापे निरस्ते ब्रह्मलोकं प्राप्नोति । सर्वमायुरेति ब्रह्मोपासनसमाप्तेर्यावदायुरपेक्षितम्, तत्सर्वमेति । ज्योग्जीवति व्याध्यादिभिरनुपहतो यावद् ब्रह्मप्राप्ति जीवति । नास्यावरपुरुषाः क्षीयन्ते अस्य शिष्यप्रशिष्यादयः पुत्रपौत्रादयोऽपि ब्रह्मविद एव भवन्ति । 'नास्याब्रह्मवित्कुले भवति' इति च श्रुत्यन्तरे ब्रह्मविद्याफलत्वेन श्रूयते । उप वयं तं भुञ्जामोऽस्मिंश्च लोकेऽमुष्मिंश्च वयम् अग्नयस्तमेनमुपभुञ्जामः यावद्ब्रह्मप्राप्ति विघ्नेभ्यः परिपालयाम इति । अतोऽग्निविद्यायाः ब्रह्मविद्याङ्गत्वेन तत्सन्निधानाविरोधात् सुखविशिष्टं प्रकृतमेव ब्रह्मोपासन स्थानविधानार्थं गुणविधानार्थं चोच्यते । ननु 'आचार्यस्तु ते गतिं वक्ता' इति गतिमात्र-परिशेषणादाचार्येण गतिरेवोपदेश्येति गम्यते, तत्कथं स्थानगुणविध्यर्थतोच्यते । तदभिधीयते 'आचार्यस्तु ते गतिं वक्ता' इत्यस्यायमभिप्रायः; ब्रह्मविद्यामनुपदिश्य प्रोपुषि गुरौ तदलाभादनाश्वासमुपकोसलमुज्जीवयितुं स्वपरिचरणप्रीता गार्हपत्यादयो गुरोरग्नयस्तस्मै ब्रह्मस्वरूपमात्रं तदङ्गभूतां चाग्निविद्यामुपदिश्य 'आचार्याद्ध्येव विद्या विदिता साधिष्ठं प्रापत्' इति श्रुत्यर्थमालोच्य साधुतमत्वप्राप्त्यर्थमाचार्यं एवास्य संयद्वामत्वादिगुणकं ब्रह्म तदुपासनस्थानमर्चिरादिकां च गतिमुपदिशत्विति मत्वा 'आचार्यस्तु ते गतिं वक्ता' इत्यवोचन् । गतिग्रहणमुपदेश्यविद्याशेषप्रदर्शनार्थम् । अत एवाचार्योऽपि 'अहं तु ते तद्वक्ष्यामि यथा पुष्करपलाश आपो न श्लिष्यन्ते एवमेवंविदि पापं कर्म न श्लिष्यते' इत्युपक्रम्य संयद्वामत्वादिकल्याणगुणविशिष्टं ब्रह्माक्षिस्थानोपास्यमर्चिरादिकाञ्च गतिमुपदिदेश । अतः 'कं ब्रह्म खं ब्रह्म' इति सुखविशिष्टस्य प्रकृतस्यैव ब्रह्मणोऽत्राभिधा नादयमक्ष्याधारः परमात्मा ।। १५ ।।

ननु च 'कं ब्रह्म खं ब्रह्म' इति परं ब्रह्माभिहितमिति कथमवगम्यते?

यस्येहाक्ष्याधारतयाऽभिधानं ब्रूषे । यावता 'कं ब्रह्म खं ब्रह्म' इति प्रसिद्धाकाश-लौकिकसुखयोरेव ब्रह्मदृष्टिर्विधीयत इति प्रतिभाति 'नाम ब्रह्म' 'मनो ब्रह्म' इत्यादिवचनसारूप्यात् । तत्राह –

**अत एव च स ब्रह्म ॥ १६ ॥**

यतस्तत्र 'यदेव कं तदेव खम्' इति सुखविशिष्टस्याकाशस्याभिधानम् । अत एव खशब्दाभिधेयस्सः आकाशः परं ब्रह्म । एतदुक्तं भवति; अग्निभिः 'प्राणो ब्रह्म कं ब्रह्म खं ब्रह्म' इत्युक्ते उपकोसल उवाच 'विजानाम्यहं यत्प्राणो ब्रह्म कं च तु खं च न विजानामि' इति । अस्यायमभिप्रायः । न तावत् प्राणादिप्रतीकोपासनमग्निभिरभिहितम्, जन्मजरामरणादिभवभयभीतस्य मुमुक्षोर्ब्रह्मोपदेशाय प्रवृत्तत्वात्, अतो ब्रह्मैवोपास्यमुपदिष्टम् । तत्र प्रसिद्धैः प्राणादिभिस्समानाधिकरणं ब्रह्म निर्दिष्टम्, तेषु च प्राणविशिष्टत्वं जगद् विधरणयोगेन वा प्राणशरीरतया प्राणस्य नियन्तृत्वेन वा ब्रह्मण उपपद्यत इति 'विजानाम्यहं यत्प्राणो ब्रह्म' इत्युक्तवान् । तथा सुखावकाशयोरपि ब्रह्मणः शरीरतया तन्नियाम्यत्वेन विशेषणत्वम्; उतान्योन्यव्यवच्छेदकतया निरतिशयानन्दरूप-ब्रह्मस्वरूपसमर्पणपरत्वेन वा? तत्र पृथग्भूतयोः शरीरतया विशेषणत्वे वैषयिकसुखभूताका शयोर्नियामकत्वं ब्रह्मणः स्यादिति स्वरूपावगतिर्न स्यात् । अन्योन्यव्यवच्छेदकत्वे अपरिच्छिन्नानन्दैकस्वरूपत्वं ब्रह्मणः स्यादित्यन्यतरप्रकारनिर्दिधारयिषया 'कं च तु खं च न विजानामि' इत्युक्तवान् ।

उपकोसलस्येममाशयं जानन्तोऽग्नयः 'यद्वा व कं तदेव खं यदेव खं तदेव कं' इत्यूचिरे । ब्रह्मणस्सुखरूपत्वमेवापरिच्छिन्नमित्यर्थः । अतः प्राणशरीरतया प्राणविशिष्टं यद् ब्रह्म तदेवापरिच्छिन्नसुखरूपं चेति निगमितम् । 'प्राणञ्च हास्मै तदाकाशं चोचुः' इति । अतः 'कं ब्रह्म खं ब्रह्म' इत्यत्रापरिच्छिन्नसुखं ब्रह्म प्रतिपादितमिति परं ब्रह्मैव तत्र प्रकृतम्, तदेव चात्राक्ष्याधारतयाऽभिधीयत इत्यक्ष्याधारः परमात्मा ।। १६ ।।

**श्रुतोपनिषत्कगत्यभिधानाच्च ॥ १७ ॥**

श्रुतोपनिषत्कस्य अधिगतपरमपुरुषयाथात्म्यस्यानुसन्धेयतया श्रुत्यन्तरप्रतिपाद्यमाना अर्चिरादिका गतिर्या तामपुनरावृत्तिलक्षणपरमपुरुषप्रासिकरीमुपकोसलायाक्षिपुरुषं श्रुतवते 'तेऽर्चिषमेवाभिसम्भवन्त्यर्चिषोऽहरह आपूर्यमाणपक्षम्' इत्यारभ्य 'चन्द्रमसो विद्युतं तत्पुरुषोऽमानवस्स एनान् ब्रह्म गमयत्येष देवपथो ब्रह्मपथ एतेन प्रतिपद्यमाना इमं मानवमावर्तं नावर्तन्ते' इत्यन्तेनोपदिशति; अतोऽप्ययमक्षिपुरुषः परमात्मा ।। १७ ।।

**अनवस्थितेरसम्भवाच्च नेतरः ॥ १८ ॥**

प्रतिबिम्बादीनामक्षिणि नियमेनानवस्थानादमृतत्वादीनां च निरुपाधिकानां तेष्वसम्भवान्न

**अत्र केषाञ्चिन्मतं परमताच्च विशिष्टमिति तद्दूषणेनैव दूषितम् । कैश्चिदत्र "अत एव च स ब्रह्म" इति सूत्रं ईक्षत्यधिकरणे "प्रतिज्ञाविरोधात्" इति सूत्रवत् प्रक्षिप्तमिति तदुपेक्ष्यम् ।**

**अत्रापि "अनवस्थितेरसम्भवाच्च नेतरः" इति जीवनिषेधात् भेदधीः ॥**

ಅನುವಾದ - ಅದ್ವೈತಿಗಳ ಸಿದ್ಧಾಂತವು ಅಯುಕ್ತವಾಗಿದೆ.

ಕಾರ್ಯಬ್ರಹ್ಮಪರತ್ವಂ ಚೇದಮೃತತ್ವಾದ್ಯಸಂಭವಃ ।
ಅಕಾರ್ಯಪರತಾ ಚೇತ್ಸ್ಯಾದರ್ಚಿರಾದೇರಸಂಭವಃ ॥

ಕಾರ್ಯಬ್ರಹ್ಮಪರವಾದರೆ ಅಮೃತತ್ವಾದಿಗಳು ಅಸಂಭಾವಿತವಾಗುತ್ತವೆ. ಅಕಾರ್ಯಬ್ರಹ್ಮಪರವಾದರೆ ಅರ್ಚಿರಾದಿ ಮಾರ್ಗದ ದಮನವು ಅಸಂಭಾವಿತವಾಗುತ್ತವೆ.

ಕಾರ್ಯಬ್ರಹ್ಮನಾದ ಚತುರ್ಮುಖ ಬ್ರಹ್ಮನಲ್ಲಿ ಅಮೃತತ್ವ, ಅಭಯತ್ವ, ಅಪರಿಚ್ಛಿನ್ನತ್ವ, ಸುಖತ್ವ ಮೊದಲಾದ ಹೇತುಗಳು ಅಯುಕ್ತವಾಗುತ್ತವೆ. ಇವುಗಳು ಅಯುಕ್ತವಾದ್ದರಿಂದಲೇ ಇವುಗಳಿಂದ ಸಾಧ್ಯವಾದ ಚಕ್ಷುರಂತಸ್ಥತ್ವವು ಅಯುಕ್ತವಾಗುತ್ತದೆ. ಏಕೆಂದರೆ ಚಕ್ಷುರಂತಸ್ಥತ್ವವು "ಯಶ್ಚಕ್ಷುಷಿ ತಿಷ್ಠನ್" ಇತ್ಯಾದಿ ಮಾತುಗಳಿಂದ ಅಕಾರ್ಯಬ್ರಹ್ಮನಾದ ಅಂತರ್ಯಾಮಿಯ ಧರ್ಮವಾಗಿದೆ. ಅಕಾರ್ಯಬ್ರಹ್ಮಪರವಾದರೆ ಶ್ರುತಿಯಲ್ಲಿ "ತೇಽರ್ಚಿಷಮಭಿಸಂಭವಂತಿ" ಎಂಬುದಾಗಿ ಮತ್ತು ಸೂತ್ರದಲ್ಲಿ "ಶ್ರುತೋಪನಿಷತ್ಕ" ಎಂಬುದಾಗಿ ಅರ್ಚಿರಾದಿಮಾರ್ಗಗಮನವನ್ನು ಹೇಳಿದ್ದು ಅಯುಕ್ತವಾಗುತ್ತದೆ. ಏಕೆಂದರೆ ನಿಮ್ಮ ಮತದಲ್ಲಿ ಅರ್ಚಿರಾದಿಮಾರ್ಗಗಮನವು ಕಾರ್ಯಬ್ರಹ್ಮನ ಮಾರ್ಗವಾಗಿರುತ್ತದೆ.

ಇನ್ನು 'ಸ್ಥಾನಾದಿವ್ಯಪದೇಶಾತ್' ಎಂಬ ಎರಡನೆಯ ಸೂತ್ರವ್ಯಾಖ್ಯಾನವೂ ಸಹ ಸಮಂಜಸವಲ್ಲ. ಪರಮಮಹತ್ಪರಿಮಾಣವುಳ್ಳ ಬ್ರಹ್ಮನು ಅತ್ಯಂತ ಅಲ್ಪವಾದ ಚಕ್ಷುರಾದ್ಯಧಿಷ್ಠಾನಗಳಲ್ಲಿ ನೆಲೆಸಲು

---

परमात्मन इतरः, छायादिरक्षिपुरुषो भवितुमर्हति । प्रतिबिम्बस्य तावत् पुरुषान्तर-सन्निधानायत्तत्वान्न नियमेनावस्थानसम्भवः । जीवस्यापि सर्वेन्द्रियव्यापारानुगुणत्वाय सर्वेन्द्रियकन्दभूते स्थानविशेषे वृत्तिरिति चक्षुषि नावस्थानम् । देवतायाश्च 'रश्मिभिरेषोऽस्मिन् प्रतिष्ठितः' इति रश्मिद्वारेणावस्थानवचनाद्देशान्तरावस्थितस्यापि इन्द्रियाधिष्ठानोपपत्तेर्न चक्षुष्यवस्थानम् । सर्वेषामेवैषां निरुपाधिकामृतत्वादयो न सम्भवन्त्येव; तस्मादक्षिपुरुषः परमात्मा ॥ १९ ॥

इति अन्तराधिकरणम्

ಪರಿಪೂರ್ಣಚಂದ್ರಿಕಾ

ಸಾಧ್ಯವಿಲ್ಲ. ಈ ಆಶಂಕೆಯನ್ನು ನಿರಾಸ ಮಾಡುವುದಕ್ಕಾಗಿ 'ಸ್ಥಾನಾದಿ' ಸೂತ್ರವು ಹೊರಟಿದೆಯೆಂದು ವ್ಯಾಖ್ಯಾನಿಸುತ್ತಾರೆ. ಇದು ತಪ್ಪು. ಈ ಶಂಕೆಯ ನಿವಾರಣೆಯನ್ನು ಸರ್ವಗತತ್ವಾಧಿಕರಣದಲ್ಲಿರುವ 'ಅರ್ಭಕೌಕಸ್ತ್ವಾತ್' ಎಂಬ ಸೂತ್ರದಿಂದಲೇ ಪರಿಹರಿಸಿದ್ದಾಗಿದೆ.

'ಸುಖವಿಶಿಷ್ಟಾಭಿಧಾನಾತ್' ಎಂಬ ಮೂರನೇ ಸೂತ್ರದಲ್ಲಿರುವ ಸುಖವಿಶಿಷ್ಟಪದಕ್ಕೆ ಸುಖದ ಸಂಬಂಧವನ್ನು ಹೊಂದಿರುತ್ತಾನೆ. ಆದ್ದರಿಂದ "ಕಂ ಬ್ರಹ್ಮ" ಎಂಬುದಾಗಿ ಸುಖವಿಶಿಷ್ಟನಾದ ಬ್ರಹ್ಮನು ಪ್ರಾರಂಭದಲ್ಲಿ ಉಕ್ತನಾದ್ದರಿಂದ ಅಕ್ಷಿವಾಕ್ಯದಲ್ಲೂ ಸಹ ಅಂತಹ ಬ್ರಹ್ಮನೇ ಪ್ರತಿಪಾದ್ಯನಾಗುತ್ತಾನೆಂದು ವ್ಯಾಖ್ಯಾನಿಸುತ್ತಾರೆ.

ಇದೂ ಸಹ ತಪ್ಪು. ಸುಖದ ಸಂಬಂಧವು ಜೀವನಲ್ಲೂ ಇರುವುದರಿಂದ ಸುಖವಿಶಿಷ್ಟಪದಕ್ಕೆ ಕೇವಲ ಸುಖಸಂಬಂಧ ಎಂಬರ್ಥವನ್ನು ಹೇಳಲಾಗದು ಹೊರತಾಗಿ ವಾಕ್ಯಶೇಷದಲ್ಲಿ ಹೇಳಲ್ಪಟ್ಟ ಸುಖದಲ್ಲಿರುವ ಅಪರಿಚ್ಛಿನ್ನತ್ವವೆಂಬ ಶ್ರೇಷ್ಠತ್ವವನ್ನೇ ಸೂತ್ರದಲ್ಲಿರುವ ವಿಶಿಷ್ಟಶಬ್ದದ ಅರ್ಥವನ್ನಾಗಿ ಹೇಳಬೇಕು. ನಿಮ್ಮ ಮತದಲ್ಲಿ ಬ್ರಹ್ಮನು ಕೇವಲ ಸುಖಸ್ವರೂಪನಾದ್ದರಿಂದ ಸುಖದ ಸಂಬಂಧವನ್ನೇ ಹೇಳಲಾಗದೆಂಬುದು ಮತ್ತೊಂದು ದೋಷ. ಇನ್ನು ವಿಶಿಷ್ಟಬ್ರಹ್ಮನಿಗೆ ಸುಖದ ಸಂಬಂಧವನ್ನು ಹೇಳಬಹುದು. ಆದರೆ ವಾಕ್ಯಶೇಷದಲ್ಲಿ ಹೇಳಲ್ಪಟ್ಟ ಅಪರಿಚ್ಛಿನ್ನವಾದ ಸುಖದ ಸಂಬಂಧವನ್ನು ವಿಶಿಷ್ಟಬ್ರಹ್ಮನಲ್ಲಿ ಹೇಳಲು ಸಾಧ್ಯವೇ ಇಲ್ಲ.

ಇದರಂತೆ ನಾಲ್ಕನೆಯ ಸೂತ್ರದಲ್ಲಿರುವ 'ಶ್ರುತೋಪನಿಷತ್ಕ' ಎಂಬ ಪದಕ್ಕೆ ಶ್ರುತವಾದ ರಹಸ್ಯವಿದ್ಯೆಯನ್ನು ಅರಿತ ಬ್ರಹ್ಮಜ್ಞಾನಿಗೆ, ಎಂದು ವ್ಯಾಖ್ಯಾನಿಸುತ್ತಾರೆ. ಇಂತಹ ಬ್ರಹ್ಮಜ್ಞಾನಿಗೆ ಶ್ರುತ್ಯಂತರದಲ್ಲಿ ಪ್ರಸಿದ್ಧವಾದ ಯಾವ ಅರ್ಚಿರಾದಿಮಾರ್ಗವೆಂಬ ಗತಿಯಿದೆಯೋ ಅದನ್ನು ಇಲ್ಲಿ ಹೇಳಿರುವುದರಿಂದ ಅಕ್ಷಿಸ್ಥನಾದವನು ಬ್ರಹ್ಮನಾಗುತ್ತಾನೆಂದು ನಾಲ್ಕನೆಯ ಸೂತ್ರಕ್ಕೆ ವ್ಯಾಖ್ಯಾನಿಸುತ್ತಾರೆ.

ಇದೂ ಕೂಡ ಸರಿಯಿಲ್ಲ. ನಿಮ್ಮ ಮತದಲ್ಲಿ ಅರ್ಚಿರಾದಿಮಾರ್ಗವು ಉಪಾಸಕನಿಗಷ್ಟೇ ದೊರೆಯುತ್ತದೆ ಹೊರತು ಬ್ರಹ್ಮಜ್ಞಾನಿಗೆ ದೊರೆಯುವುದಿಲ್ಲ. ಅಷ್ಟೇ ಅಲ್ಲದೆ ಸೂತ್ರದಲ್ಲಿ 'ಕಗತ್ಯಭಿಧಾನಾತ್' ಎಂದು ಅನ್ವಯ ಮಾಡುವುದೇ ಸೂಕ್ತ ಹೊರತು 'ಶ್ರುತೋಪನಿಷತ್ಕ' ಎನ್ನುವುದು ಸೂಕ್ತವಲ್ಲ. 'ಕಗತ್ಯಭಿಧಾನಾತ್' ಎಂದು ಹೇಳಿದಾಗ 'ಸ ಏನಾನ್ ಬ್ರಹ್ಮ ಗಮಯತಿ'' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮಗತಿಗೆ 'ಕಂ ಬ್ರಹ್ಮ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ 'ಕ' ಶಬ್ದ ನಿರ್ದಿಷ್ಟವಾದ ಬ್ರಹ್ಮವಿಷಯತ್ವವನ್ನು ಹೇಳಿದಾಗ ಶ್ರುತಿಯನ್ನು ಅನುಸರಿಸಿದಂತಾಗುತ್ತದೆ. ಬ್ರಹ್ಮಪ್ರಾಪ್ತಿ ಸಾಧನವಾದ ವಿದ್ಯೆಗೆ ಸಾಕ್ಷಾತ್ ಬ್ರಹ್ಮವಿಷಯತ್ವವನ್ನು ಹೇಳಿದಂತಾಗುತ್ತದೆ. ವಿದ್ಯೆಗೂ ತತ್ಸಾಧ್ಯವಾದ ಪ್ರಾಪ್ತಿಗೂ ಏಕವಿಷಯತ್ವವೆಂಬ ನಿಯಮವಿರುವುದರಿಂದ ನಮ್ಮ ವ್ಯಾಖ್ಯಾನವೇ ಸಾಧುವಾಗಿದೆ. ಹೊರತು ಮಾರ್ಗಕ್ಕೆ ಅರ್ಚಿರಾದಿತ್ವವನ್ನು ಹೇಳಿದ ಮಾತ್ರದಿಂದ ಈ ಪ್ರಯೋಜನವು ದೊರೆಯುವುದಿಲ್ಲ.

ಅಂತರಾಧಿಕರಣ (೧-೨-೪)

ಮತ್ತು "ಶೇಷಾದ್ವಿಭಾಷಾ" ಎಂಬ ಸೂತ್ರದಲ್ಲಿ 'ಕ' ಪ್ರತ್ಯಯವನ್ನು ವಿಕಲ್ಪವಾಗಿ ಹೇಳಿರುವುದರಿಂದ ಬಹುವ್ರೀಹಿಸಮಾಸ ಮಾಡಿದರೂ ಸಹ 'ಕ' ಪ್ರತ್ಯಯವು ವ್ಯರ್ಥವಾಗುತ್ತದೆ. ಮತ್ತು ನಿಮ್ಮ ವ್ಯಾಖ್ಯಾನದಲ್ಲಿ ಸೂತ್ರದಲ್ಲಿರುವ 'ಗತಿ' ಶಬ್ದಕ್ಕೆ ಮಾರ್ಗವೆಂಬರ್ಥವು ಅಸ್ವರಸವಾಗುತ್ತದೆ.

'ಅನವಸ್ಥಿತೇಽರಸಂಭವಾಚ್ಚ' ಎಂಬ ಕೊನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡಲಾಗಿದೆ. ಛಾಯೆಯು ನಿರಂತರವಾಗಿ ಚಕ್ಷುರಿಂದ್ರಿಯದಲ್ಲಿ ಇರುವುದಿಲ್ಲ. ಜೀವನಾದರೂ ಸಹ ಸಕಲ ಶರೀರೇಂದ್ರಿಯಗಳ ಸಂಬಂಧವನ್ನು ಹೊಂದಿರುವ ಕಾರಣ ಕೇವಲ ಚಕ್ಷುರಿಂದ್ರಿಯದಲ್ಲಿ ಇರಲಾರನು. ಮತ್ತು ಅಮೃತತ್ವಾದಿಗಳು ಛಾಯಾಪುರುಷನಲ್ಲಾಗಲೀ, ಜೀವನಲ್ಲಾಗಲೀ ಅಸಂಭಾವಿತವಾದ್ದರಿಂದ 'ನೇತರಃ' = ಇತರ ಪದಾರ್ಥಗಳು ಚಕ್ಷುರಿಂದ್ರಿಯದಲ್ಲಿ ಇರಲು ಸಾಧ್ಯವಿಲ್ಲ ಎಂದು.

ಇದೂ ಸಹ ತಪ್ಪು. 'ಅನವಸ್ಥಿತಿ' ಶಬ್ದಕ್ಕೆ ಅಪ್ರಮಾಣಿಕವಾದ ಅನಂತ ವ್ಯಕ್ತಿಗಳನ್ನು ಕಲ್ಪಿಸುವಿಕೆ ಎಂಬರ್ಥವೇ ಲೋಕದಲ್ಲಿ ಪ್ರಸಿದ್ಧವಾಗಿದೆ ಹೊರತು "ಇರುವುದಿಲ್ಲ" ಎಂಬರ್ಥವು ಪ್ರಸಿದ್ಧವಾಗಿಲ್ಲ. ಮತ್ತು 'ಸದಾ' ಶಬ್ದ 'ಚಕ್ಷುಷ್ಯೇವ' ಎಂಬ ಶಬ್ದ ಇವುಗಳನ್ನೆಲ್ಲಾ ಅಧ್ಯಾಹಾರ ಮಾಡಬೇಕಾಗುತ್ತದೆ. ಮತ್ತು "ಉಪಪತ್ತೇಃ" ಎಂಬುದರಿಂದಲೇ ಬ್ರಹ್ಮನನ್ನು ಬಿಟ್ಟು ಬೇರೆ ಕಡೆ ಅಮೃತತ್ವ ಮೊದಲಾದವುಗಳು ಅಸಂಭಾವಿತವೆಂಬರ್ಥ ತಿಳಿಯುವುದರಿಂದ ಪುನಃ 'ಅಸಂಭವಾತ್' ಎಂಬ ಪದವು ವ್ಯರ್ಥವಾಗುತ್ತದೆ. ಇದೇ ರೀತಿಯಾಗಿ ಬೇರೆ ಅಧಿಕರಣದಲ್ಲಿರುವ ಸೂತ್ರಗಳಲ್ಲಿಯೂ ಅನುಪಪತ್ತಿಯನ್ನು ತಿಳಿಯಬೇಕು. ಅಥವಾ ಪ್ರಥಮ ಸೂತ್ರದಲ್ಲಿ ಅನುಪಪತ್ತಿಯನ್ನು ತಿಳಿಯಬೇಕು.

ರಾಮಾನುಜರ ಮತವು ಅದ್ವೈತಮತಕ್ಕಿಂತ ಏನೂ ವ್ಯತ್ಯಾಸವಿಲ್ಲದ ಕಾರಣ ಅದ್ವೈತಮತದ ನಿರಾಕರಣೆಯಿಂದಲೇ ಇವರ ಮತವನ್ನೂ ಸಹ ನಿರಾಕರಿಸಿದಂತಾಯಿತು.

ಇನ್ನು ಕೆಲವರು 'ಅತ ಏವ ಚ ಸ ಬ್ರಹ್ಮ' ಎಂಬ ಸೂತ್ರವನ್ನು ಈ ಅಧಿಕರಣದಲ್ಲಿ ಸೇರಿಸುತ್ತಾರೆ. ಆದರೆ ಈಕ್ಷತ್ಯಧಿಕರಣದಲ್ಲಿ 'ಪ್ರತಿಜ್ಞಾವಿರೋಧಾತ್' ಎಂಬ ಸೂತ್ರವನ್ನು ಸೇರಿಸಿದ್ದು ಹೇಗೆ ಪ್ರಕ್ಷಿಪ್ತವಾಗಿದೆಯೋ ಅದರಂತೆ ಇದೂ ಸಹ ಪ್ರಕ್ಷಿಪ್ತವಾಗಿದೆಯೆಂದು ಉಪೇಕ್ಷಿಸಬೇಕು.

ಉಳಿದ ಅಧಿಕರಣಗಳಂತೆ ಈ ಅಧಿಕರಣದಲ್ಲೂ ಸಹ 'ಅನವಸ್ಥಿತೇರಸಂಭವಾತ್' 'ನೇತರಃ' ಎಂಬುದಾಗಿ ಜೀವನನ್ನು ನಿಷೇಧ ಮಾಡಿ ಬ್ರಹ್ಮನನ್ನು ಅಕ್ಷಿಸ್ಥನೆಂದು ಹೇಳಿದ್ದರಿಂದ ಜೀವಬ್ರಹ್ಮರಿಗೆ ಭೇದವನ್ನೇ ಅದ್ವೈತಿಗಳು ಸಾಧಿಸಿದಂತಾಗುತ್ತದೆ.

**प्रकाशः –**

परसिद्धान्तोऽपीति । स प्राज्ञया विवृतः । 'यतः' इत्यस्य श्लोकेन अन्वयः । किमत्र कार्यं ब्रह्मोच्यतेऽथाकार्यं ब्रह्मेति सिद्धान्त्यत इति विकल्पौ हृदि कृत्वा

क्रमेण निराह – **कार्येति** ।

पूर्वार्धं व्यनक्ति – **न हीति** । तस्य संसारित्वेन मृतिभयादेरवर्जनीयत्वादिति भावः । न वेत्येतदुपपादयति – **तस्येति** ।

उत्तरार्धं व्यनक्ति – **अकार्येति** । तदीयार्थानुरोधेन कप्रत्ययान्ततया सूत्रप्रतीकग्रहणम् । सूत्रार्थस्त्वग्रे व्यक्तः ।

ವಿವರಣೆ - ಅದ್ವೈತಿಗಳ ಸಿದ್ಧಾಂತವೂ ಸಹ ಸರಿಯಿಲ್ಲ. ಅದ್ವೈತಿಗಳ ಸಿದ್ಧಾಂತವನ್ನು ಈ ಹಿಂದೆ ವಿವರಿಸಿದ್ದಾಗಿದೆ. 'ಯತಃ' ಎಂಬ ಪದಕ್ಕೆ ಶ್ಲೋಕದ ಜೊತೆಗೆ ಅನ್ವಯ.

ಬ್ರಹ್ಮನನ್ನು ಕಾರ್ಯಸ್ವರೂಪನೆನ್ನುತ್ತಿರೋ? ಅಥವಾ ಅಕಾರ್ಯಸ್ವರೂಪನೆಂದು ಸಿದ್ಧಾಂತ ಮಾಡುತ್ತೀರೋ? ಎಂಬ ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಕ್ರಮವಾಗಿ ನಿರಾಕರಿಸುತ್ತಿದ್ದಾರೆ 'ಕಾರ್ಯಬ್ರಹ್ಮ' ಇತ್ಯಾದಿ ಶ್ಲೋಕದಿಂದ.

ಶ್ಲೋಕದ ಪೂರ್ವಾರ್ಧವನ್ನು 'ನಹಿ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಕಾರ್ಯಬ್ರಹ್ಮನು ಸಂಸಾರಿಯಾಗಿರುವುದರಿಂದ ಮರಣ ಭಯ ಮೊದಲಾದವುಗಳನ್ನು ಅವನು ಬಿಟ್ಟಿರುವುದಿಲ್ಲ. 'ನ ವಾ' ಎಂಬುದನ್ನು 'ತಸ್ಯ' ಎಂಬ ವಾಕ್ಯದಿಂದ ಉಪಪಾದಿಸುತ್ತಿದ್ದಾರೆ.

ಶ್ಲೋಕದ ಉತ್ತಾರಾರ್ಧವನ್ನು 'ಅಕಾರ್ಯಬ್ರಹ್ಮ' ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ವಸ್ತುತಃ 'ಶ್ರುತೋಪನಿಷನಿತ್' ಎಂದು ಪ್ರತೀಕ ಗ್ರಹಣ ಮಾಡಬೇಕಿತ್ತು. ಏಕೆಂದರೆ 'ಕ' ಶಬ್ದಕ್ಕೆ ಗತಿಯೆನ್ನುವಲ್ಲಿ ಅನ್ವಯ. ಆದರೆ ಅದ್ವೈತಿಗಳ ಪ್ರಕಾರ 'ಕ' ಶಬ್ದಕ್ಕೆ 'ಶ್ರುತೋಪನಿಷತ್' ಪದದ ಜೊತೆಗೆ ಅನ್ವಯವಿರುವುದರಿಂದ 'ಶ್ರುತೋಪನಿಷತ್ಕ' ಎಂದು ಪ್ರತೀಕವನ್ನು ಗ್ರಹಣ ಮಾಡಿದ್ದಾರೆ. ಅದ್ವೈತಿಗಳ ಸೂತ್ರಾರ್ಥವು ಮುಂದೆ ಸ್ಪಷ್ಟವಾಗುತ್ತದೆ.

**प्रकाशः** – एवमधिकरणशरीरं निरस्य सूत्रार्थान् निराचिकीर्षुराद्ये मन्मत इव क्रियालिङ्गपरत्वाभावेन ''अन्तस्तद्धर्म'' इतिवत् ''अन्तरुपपत्तेः'' इत्येव निर्देशः स्यादिति प्रतिज्ञादूषणं ''सूत्रक्रमस्तु'' इत्यत्रोक्तदिशा व्यक्तं, ''कार्यब्रह्म'' इत्यादिना ''उपपत्तेः'' इति हेत्वंशो दूषित इति मत्वा वा, अग्रे तत्र दोषोत्प्रेक्षामतिदिदिक्षुर्वा, द्वितीयसूत्रार्थमनूद्य निराह – **यच्चेति** ।

ಇಲ್ಲಿಯ ತನಕ ಅದ್ವೈತಿಗಳ ಅಧಿಕರಣಶರೀರವನ್ನು ನಿರಾಕರಿಸಿದ್ದಾಯಿತು. ಪ್ರಕೃತ ಅವರ ಸೂತ್ರಾರ್ಥವನ್ನು ನಿರಾಕರಿಸುತ್ತಿದ್ದಾರೆ. ಮೊದಲನೆಯ ಸೂತ್ರವನ್ನು ನಮ್ಮ ಮತದ ಪ್ರಕಾರ ಕ್ರಿಯಾಲಿಂಗಸಮನ್ವಯರೂಪವೆಂದು ಹೇಳುವುದಿಲ್ಲ ಹೊರತಾಗಿ ಒಳಗಿರುವಿಕೆ ಎಂಬ ಧರ್ಮವನ್ನಷ್ಟೇ

ಹೇಳುತ್ತಾರೆ. ಈ ಅರ್ಥವನ್ನು ವಿವಕ್ಷಿಸಿದಾಗ "ಅಂತರುಪಪತ್ತೇಃ" ಎಂದು ನಿರ್ದೇಶಿಸಿದರೆ ಸಾಕು. 'ಅಂತರ ಉಪಪತ್ತೇಃ' ಎಂಬ 'ರ' ಶಬ್ದದ ಅವಶ್ಯಕತೆ ಇರುವುದಿಲ್ಲ. ಆದ್ದರಿಂದ ಸೂತ್ರದ ಪ್ರತಿಜ್ಞೆಯೇ ಅದ್ವೈತಿಗಳ ಪ್ರಕಾರ ತಪ್ಪಾಗುತ್ತದೆಂದು 'ಸೂತ್ರಕ್ರಮಸ್ತು' ಇತ್ಯಾದಿ ಹಿಂದಿನ ಗ್ರಂಥದಿಂದಲೇ ತಿಳಿಸಿದಂತಾಯಿತು. ಇನ್ನು 'ಉಪಪತ್ತೇಃ' ಎಂಬ ಹೇತ್ವಂಶವು 'ಕಾರ್ಯಬ್ರಹ್ಮ' ಇತ್ಯಾದಿ ಗ್ರಂಥದಿಂದ ದೂಷಿಸಿದಂತಾಯಿತು ಎಂಬ ಅಭಿಪ್ರಾಯದಿಂದ ಪ್ರತ್ಯೇಕವಾಗಿ ಇಲ್ಲಿ ಗ್ರಂಥಕಾರರು ಪ್ರಥಮ ಸೂತ್ರವನ್ನು ದೂಷಣೆ ಮಾಡಿಲ್ಲ. ಮುಂದಿನ 'ಸ್ಥಾನಾದಿವ್ಯಪದೇಶಾಚ್ಚ' ಇತ್ಯಾದಿ ಸೂತ್ರಗಳನ್ನು ದೂಷಿಸಲು ಹೊರಟದ್ದಾರೆ. ಮೊದಲು ಎರಡನೆಯ ಸೂತ್ರಾರ್ಥವನ್ನು ಅನುವಾದ ಮಾಡಿ 'ಯಚ್ಚ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

**प्रकाशः** – शङ्कानिरासायेदं सूत्रं, न त्वस्माकमिवाक्षिस्थस्य ब्रह्मत्वे हेत्वन्तरपरं, ''यः पृथिव्यां तिष्ठन्'' इति प्रक्रम्य ''यश्चक्षुषि तिष्ठन्'' इति यदन्तर्यामिस्थानं निदिष्टं तस्यैवोपासनार्थं ''य एषोऽन्तरक्षिणि'' इति व्यपदेशात् ।

ಪ್ರಥಮಸೂತ್ರದ ಮೇಲೆ ಬರುವ ಅನುಪಪತ್ತಿಯ ಪರಿಹಾರಕ್ಕಾಗಿ ಎರಡನೆಯ ಸೂತ್ರವು ಹೊರಟಿದೆಯೆಂದು ಅದ್ವೈತಿಗಳು ಹೇಳುತ್ತಾರೆ. ಹೊರತು ನಾವು ಹೇಳುವಂತೆ ಅಕ್ಷಿಸ್ಥನಾದವನು ಬ್ರಹ್ಮನೆಂಬ ವಿಷಯದಲ್ಲಿ ಈ ಸೂತ್ರವು ಮತ್ತೊಂದು ಹೇತುವನ್ನು ಹೇಳುತ್ತಿದೆಯೆಂದು ವ್ಯಾಖ್ಯಾನಿಸುವುದಿಲ್ಲ.

ಎಲ್ಲೆಡೆ ಇರುವ ಬ್ರಹ್ಮನು ಅತ್ಯಲ್ಪಸ್ಥಾನವಾದ ಚಕ್ಷುರಿಂದ್ರಿಯದಲ್ಲಿ ಇರದಿದ್ದರೂ ಕೇವಲ ಉಪಾಸನೆಗೋಸ್ಕರ ಅಕ್ಷಿಸ್ಥನೆಂದು ಶ್ರುತಿಯು ಹೇಳುತ್ತಿದೆಯೆಂಬುದಾಗಿ ಎರಡನೆಯ ಸೂತ್ರದಲ್ಲಿ ವ್ಯಾಖ್ಯಾನಿಸುತ್ತಾರೆ. ಅಂದರೆ 'ಯಃ ಪೃಥಿವ್ಯಾಂ ತಿಷ್ಠನ್' ಎಂದು ಉಪಕ್ರಮವಾದ ಪ್ರಕರಣದಲ್ಲಿ 'ಯಶ್ಚಕ್ಷುಷಿ ತಿಷ್ಠನ್' ಎಂಬುದಾಗಿ ಚಕ್ಷುಸ್ಸಿನ ಅಂತರ್ಯಾಮಿಯಾಗಿರುವನೆಂಬ ಸ್ಥಾನವನ್ನು ನಿರ್ದೇಶಿಸಿದ್ದು ಕೇವಲ ಉಪಾಸನೆಗೋಸ್ಕರ "ಯ ಏಷೋಽಂತರಕ್ಷಿಣಿ" ಎಂದು ಹೇಳಿರುವುದರಿಂದ.

**प्रकाशः** – आदिपदेन ''तस्योदिति नाम'' ''हिरण्यश्मश्रुः'' इत्याद्युक्तनाम-रूपादेरपि उपासनार्थं व्यपदेशादिति गृह्यते । 'अस्याः' अल्पस्थानत्वशङ्कायाः ।

उपलक्षणमेतत्, नामरूपादेर्जीवेऽपि सम्भवेन ब्रह्मत्वे तस्य हेतूकरणायोगाच्च-शब्दायोगाच्चेत्यपि ध्येयम् ।

ಗ್ರಂಥದಲ್ಲಿ 'ಸ್ಥಾನಾದಿಸೂತ್ರಂ' ಎಂಬಲ್ಲಿರುವ ಆದಿಪದದಿಂದ "ತಸ್ಯೋದಿತಿ ನಾಮ" "ಹಿರಣ್ಯಶ್ಮಶ್ರುಃ" ಎಂಬಲ್ಲಿ ಹೇಳಲ್ಪಟ್ಟ "ಉತ್" ಎಂಬ ನಾಮೋಪಾಸನೆಯನ್ನು "ಹಿರಣ್ಯಶ್ಮಶ್ರುಃ" ಎಂಬ ರೂಪದ ಉಪಾಸನೆಯನ್ನು ವಿವಕ್ಷಿಸಬೇಕು. 'ಅಸ್ಯಾಃ' ಎಂಬ ಪದಕ್ಕೆ ಅಲ್ಪಸ್ಥಾನತ್ವವೆಂಬ ಶಂಕೆಯೆಂದರ್ಥ.

ಪರಿಪೂರ್ಣಚಂದ್ರಿಕಾ

ಕೇವಲ ಉಪಾಸನೆಗೋಸ್ಕರ ಚಕ್ಷುರಂತಸ್ಥತ್ವವನ್ನು ಹೇಳುವ ಅವಶ್ಯಕತೆಯಿಲ್ಲ. ಅರ್ಭಕೌಕಸ್ತ್ವದ ಸೂತ್ರದಿಂದಲೇ ಇದು ಸಿದ್ಧವಾಗುತ್ತದೆಂಬ ದೋಷವನ್ನು ಗ್ರಂಥದಲ್ಲಿ ಹೇಳಲಾಗಿದೆ. ಇದು ಕೇವಲ ಉಪಲಕ್ಷಣವಾಗಿದೆ. 'ನಾಮೋಪಾಸನೆ' ಹಾಗೂ 'ರೂಪೋಪಾಸನೆ'ಗಳನ್ನು ಜೀವನಲ್ಲಿಯೂ ಹೇಳಬಹುದಾದ್ದರಿಂದ ಬ್ರಹ್ಮನೆನಿನಸಲು ಈ ಉಪಾಸನೆಗಳು ಕಾರಣವಾಗುವುದಿಲ್ಲ. ಆದ್ದರಿಂದಲೇ "ಸ್ಥಾನಾದಿವ್ಯಪದೇಶಾಚ್ಚ" ಎಂಬ ಸೂತ್ರದಲ್ಲಿ ಮತ್ತೊಂದು ಹೇತುವೆಂದು ತಿಳಿಸುವ 'ಚ' ಶಬ್ದವು ಅಯುಕ್ತವಾಗುತ್ತದೆಂದು ತಿಳಿಯಬೇಕು.

**प्रकाशः – वाक्यशेषोक्तमिति ।** तन्मते "यद्वाव कं तदेव खं यदेव खं तदेव कं" इति वाक्यशेषे "कं ब्रह्म" इत्युक्तशब्दस्य लौकिकसुखपरत्वनिरासायापरिच्छिन्नवाचिना खशब्देन विशेषणात्सुखस्यापरिच्छिन्नत्वं लभ्यत इत्यङ्गीकारादेवमुक्तम् ।

ननु शुद्धस्य तदभावेऽपि विशिष्टस्य ब्रह्मणः सुखसम्बन्धो नायुक्त इत्यत आह **– विशिष्टस्येति ।**

ಅದ್ವೈತಿಗಳು 'ಸುಖವಿಶಿಷ್ಟಾಭಿಧಾನಾದೇವಚ' ಎಂಬ ಮೂರನೇ ಸೂತ್ರವನ್ನು ಹೀಗೆ ವ್ಯಾಖ್ಯಾನಿಸುತ್ತಾರೆ. - ಪ್ರಕರಣದ ಆರಂಭದಲ್ಲಿ "ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ" ಎಂದು ಸುಖವಿಶಿಷ್ಟನಾದ ಬ್ರಹ್ಮನನ್ನು ಹೇಳಿರುವುದರಿಂದಲೂ ಪ್ರಕೃತ ಶ್ರುತಿಯಲ್ಲಿ ಹೇಳಲ್ಪಟ್ಟ ಅಕ್ಷಿಸ್ಥನು ಪರಬ್ರಹ್ಮನೇ ಆಗುತ್ತಾನೆ. ಆದ್ದರಿಂದಲೇ ಅಗ್ನಿದೇವತೆಯು ತನ್ನ ಮಹತ್ವವನ್ನು ಹೇಳಿ ಮೊದಲು ಪ್ರಸ್ತುತನಾದ ಬ್ರಹ್ಮನ ಬಗ್ಗೆಯೂ ಹೇಳಿ 'ಅಸ್ಮದ್ವಿದ್ಯಾ ಆತ್ಮವಿದ್ಯಾ' ಎಂದು ಉಪದೇಶಿಸಲಾಗಿದೆ. ಕೊನೆಯಲ್ಲಿ ವಿದ್ಯೆ ಫಲಿಸಬೇಕಾದ್ದರಿಂದ ನಿನ್ನ ಗುರುಗಳು ವಿದ್ಯೆಯಿಂದುಂಟಾಗುವ ಫಲವನ್ನು ಉಪದೇಶಿಸಲಾಗಿದೆ. ಮುಂದೆ ಗುರುಗಳು ಪದ್ಮಪತ್ರದಂತೆ ಅಕ್ಷಿಸ್ಥನಲ್ಲಿರುವ ಜ್ಞಾನದಿಂದ ಪಾಪದ ಅಲೇಪ ಹಾಗೂ ಬ್ರಹ್ಮನ ಪ್ರಾಪ್ತಿಯು ಉಂಟಾಗುತ್ತದೆಂದು ಉಪದೇಶಿಸುತ್ತಾರೆ.

ಹೀಗೆ ವ್ಯಾಖ್ಯಾನಿಸುವಾಗ "ಯದ್ವಾವ ಕಂ ತದೇವ ಖಂ ಯದೇವ ಖಂ ತದೇವ ಕಂ" ಎಂಬ ವಾಕ್ಯಶೇಷದಲ್ಲಿ "ಕಂ ಬ್ರಹ್ಮ" ಎಂಬಲ್ಲಿರುವ 'ಕ' ಶಬ್ದವು ಲೌಕಿಕಸುಖವನ್ನು ಹೇಳುತ್ತದೆಂಬ ಭ್ರಾಂತಿ ಬರುತ್ತದೆ. ಅದನ್ನು ನಿರಾಸ ಮಾಡುವುದಕ್ಕಾಗಿ ಅಪರಿಚ್ಛಿನ್ನತ್ವವನ್ನು ಸುಖದಲ್ಲಿ ವಿಶೇಷಣವನ್ನಾಗಿ ಹೇಳುವ 'ಖ' ಶಬ್ದವನ್ನು ಶ್ರುತಿಯು ಹೇಳಿದೆ. ಇದರಿಂದ ಸುಖವು ಅಪರಿಚ್ಛಿನ್ನವಾಗಿದೆಯೆಂಬರ್ಥವು ತಿಳಿಯುತ್ತದೆಂದು ಹೇಳಬೇಕು. ಇಲ್ಲದಿದ್ದರೆ ಕೇವಲ ಸುಖಸಂಬಂಧವನ್ನು ಹೇಳಿದಂತಾಗಿ ಜೀವನೂ ಸಹ ಅಕ್ಷಿಸ್ಥನಾಗಬೇಕಾಗುತ್ತದೆ.

ಶುದ್ಧಬ್ರಹ್ಮನಿಗೆ ಸುಖದ ಸಂಬಂಧವು ಬಾರದಿದ್ದರೂ ವಿಶಿಷ್ಟಬ್ರಹ್ಮನಿಗೆ ಸುಖದ ಸಂಬಂಧವನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ವಿಶಿಷ್ಟಸ್ಯಾಪಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः – श्रुत्यन्तर इति ।** "अथोत्तरेण तपसा ब्रह्मचर्येण श्रद्धया विद्ययाऽऽत्मानमन्विष्याऽऽदित्यमभिजयन्ते एतद्वै प्राणानामायतनं एतदमृतमभयमेतत् परायणमेतस्मान्न पुनरावर्तन्ते" इति वाजसनेयप्रसिद्धेत्यर्थः । **इहेति ।** "यदु चैवास्मिन् शव्यं कर्म कुर्वन्ति यदु च नार्चिषमेवाभिसम्भवन्ति" इत्यादिनेत्यर्थः ।

'ಶ್ರುತೋಪನಿಷತ್ಕಗತ್ಯಭಿಧಾನಾಚ್ಚ' ಎಂಬ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ - ಶ್ರುತೋಪನಿಷತ್ಕಸ್ಯ = ರಹಸ್ಯವಿದ್ಯೆಯನ್ನು ತಿಳಿದ ಬ್ರಹ್ಮಜ್ಞಾನಿಯು ಶ್ರುತ್ಯಂತರದಲ್ಲಿ ಪ್ರಸಿದ್ಧವಾದ ಅರ್ಚಿರಾದ - ಮಾರ್ಗವೆಂಬ ಗತಿಯನ್ನು ಹೊಂದುತ್ತಾನೆಂದು ಶ್ರುತ್ಯಂತರದಲ್ಲಿ ಹೇಳಲಾಗಿದೆ. ಆದ್ದರಿಂದ ಪ್ರಕೃತ ಶ್ರುತಿಯಲ್ಲಿ ಅಕ್ಷಿಸ್ಥನಾದವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಯಾರು ಬ್ರಹ್ಮಜ್ಞಾನಿಯಲ್ಲವೋ ಅವನಿಗೆ ಅರ್ಚಿರಾದಿ ಮಾರ್ಗದಲ್ಲಿ ಪ್ರವೇಶವಿರುವುದಿಲ್ಲವೆಂದು.

ಶ್ರುತ್ಯಂತರವೆಂದರೆ "ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾऽऽತ್ಮಾನಮನ್ವಿಷ್ಯಾऽऽದಿತ್ಯಮಭಿಜಯಂತೇ ಏತದ್ವೈ ಪ್ರಾಣಾನಾಮಾಯತನಂ ಏತದಮೃತಮಭಯಮೇತತ್ ಪರಾಯಣಮೇತಸ್ಮಾನ್ನ ಪುನರಾವರ್ತಂತೇ" ಎಂಬ ವಾಜಸನೇಯ ಶ್ರುತಿಯಲ್ಲಿ ಪ್ರಸಿದ್ಧವಾದ ಮಾರ್ಗೋಪದೇಶವೆಂದರ್ಥ. 'ಇಹ' ಎಂದರೆ "ಯದು ಚೈವಾಸ್ಮಿನ್ ಶವ್ಯಂ ಕರ್ಮ ಕುರ್ವಂತಿ ಯದು ಚ ನಾರ್ಚಿಷಮೇವಾಭಿಸಂಭವಂತಿ" ಎಂಬ ಶ್ರುತಿಯಲ್ಲಿ ಎಂದರ್ಥ.

**प्रकाशः** – प्रमेयानुपपत्तिमुक्त्वा सूत्रास्वारस्यमाह – **किञ्चेति । इति सूत्र इति ।** सूत्रव्यक्तीकरण इत्यर्थः । कथं साक्षाद्ब्रह्मविषयत्वमित्यत आह – **विद्येति ।** न ह्यन्यविद्ययाऽन्यप्राप्तिर्युक्तेति भावः । **न त्विति ।** तत्सिद्धिरिति सम्बन्धः । वक्तव्यं चैवमेव, अन्यथा 'श्रुतोपनिषत्कत्यभिधानात्, इत्येतावता पूर्णत्वेन कशब्दवैयर्थ्यात्, नच बहुव्रीहिसमासान्तानुपादाने अपशब्दता स्यादिति वाच्यं, तस्य विकल्पितत्वेन कप्रत्ययं विनाऽपि वक्तुं शक्यत्वादित्याह – **व्यर्थश्चेति ।। न स्वरस इति ।** तस्य भावार्थकक्तिन्नन्तस्य प्राप्त्यर्थत्वेन मार्गे तद्धेतुत्वादिना कथञ्चिद्वक्तव्यत्वादिति भावः ।

ಪ್ರಮೇಯದಲ್ಲಿ ಅನುಪಪತ್ತಿಯನ್ನು ಹೇಳಿ ಸೂತ್ರದ ಅಸ್ವಾರಸ್ಯವನ್ನು 'ಕಿಂಚ' ಎಂಬ ಗ್ರಂಥದಿಂದ ತೋರಿಸುತ್ತಿದ್ದಾರೆ. 'ಇತಿ ಸೂತ್ರೇ' ಅಂದರೆ 'ಶ್ರುತೋಪನಿಷತ್ಕಗತ್ಯಭಿಧಾನಾತ್' ಎಂದು ವಿಭಾಗ ಮಾಡಿದರೆ ಎಂದರ್ಥ. ಇದರಿಂದ ಸಾಕ್ಷಾತ್ ಬ್ರಹ್ಮವಿಷಯತ್ವವು ಹೇಗೆ ತಿಳಿಯುತ್ತದೆ ? ಎಂದು ಪ್ರಶ್ನಿಸಿದರೆ 'ವಿದ್ಯಾ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಮತ್ತೊಬ್ಬನ ವಿದ್ಯೆಯಿಂದ ಇನ್ನೊಬ್ಬನನ್ನು ಹೊಂದಲು ಸಾಧ್ಯವಿಲ್ಲವೆಂದು ಅಭಿಪ್ರಾಯ. 'ನತು'' ಎಂಬ ಪದಕ್ಕೆ 'ತತ್ಸಿದ್ಧಿಃ' ಎಂಬಲ್ಲಿ ಅನ್ವಯ. ಹೀಗೆ ನಮ್ಮ ಪ್ರಕಾರವೇ

ಸೂತ್ರದ ಅನ್ವಯವನ್ನು ವಿವಕ್ಷಿಸಬೇಕು. ಇಲ್ಲದಿದ್ದರೆ "ಶ್ರುತೋಪನಿಷತ್ಕಗತ್ಯಭಿಧಾನಾತ್" ಎಂಬುದರಿಂದಲೇ ನಿಮ್ಮ ಉದ್ದೇಶವು ಈಡೇರುವಾಗ 'ಕ' ಶಬ್ದವು ವ್ಯರ್ಥವಾಗುತ್ತದೆ.

ಬಹುವ್ರೀಹಿ ಸಮಾಸವನ್ನು ತಿಳಿಸುವುದಕ್ಕಾಗಿ 'ಕ' ಶಬ್ದವು ಸಾರ್ಥಕವಲ್ಲವೇ? ಎಂದು ಪ್ರಶ್ನಿಸಬಾರದು. ಬಹುವ್ರೀಹಿ ಸಮಾಸವನ್ನು ವಿಧಿಸುವ ಸೂತ್ರದಲ್ಲಿ 'ಕ' ಶಬ್ದವನ್ನು ವಿಕಲ್ಪವಾಗಿ ವಿಧಿಸಿದ್ದರಿಂದ 'ಕ' ಶಬ್ದವನ್ನು ಹೇಳಲೇಬೇಕೆಂಬ ನಿಯಮವಿಲ್ಲ. ಈ ಅಭಿಪ್ರಾಯದಿಂದ 'ವ್ಯರ್ಥಶ್ಚ' ಇತ್ಯಾದಿ ವಾಕ್ಯವು ಹೊರಟಿದೆ.

'ನ ಸ್ವರಸಃ' ಎಂದರೆ 'ಗತಿ' ಶಬ್ದವು ಭಾವಾರ್ಥದಲ್ಲಿರುವ 'ಕ್ತಿನ್' ಪ್ರತ್ಯಯಾಂತವಾಗಿದೆ. ಆದ್ದರಿಂದ 'ಗತಿ' ಶಬ್ದಕ್ಕೆ 'ಪ್ರಾಪ್ತಿ' ಎಂಬ ಅರ್ಥವಿರುವುದರಿಂದ ಅರ್ಚಿರಾದಿ ಮಾರ್ಗದಲ್ಲಿ ಹೇತುವೆಂದು ಕಥಂಚಿತ್ ಹೇಳಬೇಕು. ಇದು ಸ್ವರಸವಲ್ಲ.

**प्रकाशः – प्रसिद्धार्थेति** । अपर्यवसितानेकव्यक्तिकल्पनारूपानवस्थाने प्रसिद्धत्वादित्यर्थः । **सदेति** । सदाशब्दस्य "चक्षुष्येव" इत्यस्य 'अमृतत्वादीनां' इत्यस्य चाध्याहारादित्यर्थः । आद्यसूत्रस्थोपपत्तेरित्यंशेन "असम्भवात्" इत्यंशस्य पौनरुक्त्यमाह – **उपपत्तेरिति** ।

'ಅನವಸ್ಥಾ' ಶಬ್ದಕ್ಕೆ ಅಪರ್ಯವಸಿತವಾದ ಎಂಬ ಅನೇಕ ವ್ಯಕ್ತಿ ಕಲ್ಪನೆಯೆಂಬ ಅರ್ಥವು ಪ್ರಸಿದ್ಧವಾಗಿದೆ. ಇದನ್ನು ಬಿಟ್ಟು ಚಕ್ಷುರಿಂದ್ರಿಯದಲ್ಲಿ ಅವಸ್ಥಿತನಾಗುವುದಿಲ್ಲ ಎಂಬರ್ಥವನ್ನು ಹೇಳುವುದು ಸರಿಯಲ್ಲವೆಂದು ತಿಳಿಯಬೇಕು. 'ಸದಾ' ಎಂದರೆ ಸೂತ್ರದಲ್ಲಿ 'ಸದಾ' ಎಂಬ ಶಬ್ದವನ್ನು 'ಚಕ್ಷುಷ್ಯೇವ' ಎಂಬ ಶಬ್ದವನ್ನು 'ಅಮೃತತ್ವಾದೀನಾಂ' ಎಂಬ ಪದವನ್ನೂ ಸಹ ಅಧ್ಯಾಹಾರ ಮಾಡಿಕೊಳ್ಳಬೇಕಾದ ಪ್ರಸಂಗ ಬರುತ್ತದೆಂದರ್ಥ.

ಮೊದಲನೆಯ ಸೂತ್ರದಲ್ಲಿರುವ 'ಉಪಪತ್ತೇಃ' ಎಂಬ ಅಂಶದಿಂದ 'ಅಸಂಭವಾತ್' ಎಂಬ ಅಂಶವು ಪುನರುಕ್ತವಾಗಿದೆಯೆಂದು 'ಉಪಪತ್ತೇಃ' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – एवमुक्तमार्थिकपौनरुक्त्यमधिकरणान्तरस्थसूत्रेष्वप्यनुसन्धेयमित्याह – **एवमिति** । "अतद्धर्माभिलापात्" "अतच्छब्दात्" इत्यादौ सूत्रान्तर इति भावः ।

यद्वा – स्थानादिसूत्रचतुष्टयेऽनुपपत्तिमुक्त्वा आद्यसूत्रेऽप्यनुपपत्तिरूह्येत्याह – **एवमिति** । सा च विवृता प्रागस्माभिः ।। **तद्दूषणेनैवेति** ।

ಈ ರೀತಿಯಾಗಿ ಆರ್ಥಿಕ ಪುನರುಕ್ತಿಯನ್ನು ಬೇರೆ ಅಧಿಕರಣಗಳಲ್ಲಿರುವ ಸೂತ್ರಗಳಲ್ಲಿಯೂ ತಿಳಿಯಬೇಕೆಂಬುದಾಗಿ 'ಏವಂ' ಎಂಬ ಗ್ರಂಥದಿಂದ ಹೇಳಿದ್ದಾರೆ. ಬೇರೆ ಅಧಿಕರಣಗಳಲ್ಲಿರುವ ಸೂತ್ರಗಳೆಂದರೆ 'ಅತದ್ಧರ್ಮಾಭಿಲಾಪಾತ್', 'ಅತಚ್ಛಬ್ದಾತ್' ಇತ್ಯಾದಿ ಸೂತ್ರಗಳು.

ಅಂತರಾಧಿಕರಣ (೧-೨-೪)

ಅಥವಾ ಇದೇ ಅಧಿಕರಣದಲ್ಲಿರುವ ಸ್ಥಾನಾದಿ ನಾಲ್ಕು ಸೂತ್ರಗಳಲ್ಲಿ ಅನುಪಪತ್ತಿಯನ್ನು ಹೇಳಿ ಮೊದಲನೆಯ ಸೂತ್ರದಲ್ಲಿಯೂ ಸಹ ಈ ಅನುಪಪತ್ತಿಯನ್ನು ಊಹಿಸಿಕೊಳ್ಳಬೇಕೆಂದು 'ಏವಂ' ಇತ್ಯಾದಿ ಗ್ರಂಥ ಹೇಳುತ್ತಿದೆ. ಈಗಾಗಲೇ ಅನುಪಪತ್ತಿಯನ್ನು ನಾವು ವಿವರಿಸಿದ್ದಾಗಿದೆ. ಇವರ ಮತವನ್ನು ನಿರಾಕರಿಸಿದ್ದರಿಂದಲೇ ರಾಮಾನುಜರ ಸೂತ್ರಾರ್ಥಗಳನ್ನೂ ಸಹ ನಿರಾಕರಿಸಿದಂತಾಯಿತು.

**प्रकाशः** – एतेन सुधादौ पृथग्रामनुजमतादूषणे बीजं सूचितम् । तथाहि – पौनरुक्त्यं तन्मतेऽप्युपपादितमेव । पूर्वपक्षानुदयश्च पूर्वस्माद्विशेषहेत्वभावेन स्पष्टः । आद्यसूत्रे 'अन्तः' इत्येव निर्देशप्रसङ्गादन्तरशब्दास्वारस्यम् ।

ಹೀಗೆ ಹೇಳಿದ್ದರಿಂದ ನ್ಯಾಯಸುಧೆಯಲ್ಲಿ ಪ್ರತ್ಯೇಕವಾಗಿ ರಾಮಾನುಜಮತವನ್ನು ದೂಷಿಸಬೇಕಾಗಿಲ್ಲವೆಂದು ಸೂಚಿಸಿದ್ದಾರೆ. ಅಂದರೆ ಅದ್ವೈತಮತವನ್ನು ನಿರಾಕರಿಸಿದ್ದರಿಂದಲೇ ರಾಮಾನುಜಮತವನ್ನೂ ಸಹ ನಿರಾಕರಿಸಿದಂತಾಯಿತು. ಅದು ಹೀಗೆ - ಅಂತಸ್ಥತ್ವಾಧಿಕರಣದಿಂದ ಪುನರುಕ್ತಿ ದೋಷವು ಅದ್ವೈತಿಗಳಿಗೆ ಹೇಗೆ ಇದೆಯೋ? ಅದರಂತೆ ರಾಮಾನುಜರಿಗೂ ಸಹ ಇದೆಯೆಂದು ಈ ಹಿಂದೆಯೇ ಉಪಪಾದಿಸಿದ್ದಾಗಿದೆ. ಮತ್ತು ಅಂತಸ್ಥತ್ವಾಧಿಕರಣದ ಪೂರ್ವಪಕ್ಷಕ್ಕಿಂತ ವಿಭಿನ್ನವಾದ ಪೂರ್ವಪಕ್ಷವನ್ನು ಈ ಅಧಿಕರಣದಲ್ಲಿ ಹೇಳದ ಕಾರಣ ಎರಡೂ ಅಧಿಕರಣಗಳಿಗೆ ಭೇದಕವಾದ ಧರ್ಮಗಳಿಲ್ಲವೆಂಬುದು ಸ್ಪಷ್ಟವಾಗಿದೆ.

ಮತ್ತು ಪ್ರಥಮಸೂತ್ರದಲ್ಲಿ ಅಂತರ್ಗತನೆಂಬರ್ಥವನ್ನಷ್ಟೇ ಇವರೂ ಸಹ ಹೇಳುವುದರಿಂದ 'ಅಂತಃ' ಎಂದಷ್ಟೇ ಸೂತ್ರದಲ್ಲಿ ನಿರ್ದೇಶಿಸಿದರೆ ಸಾಕು. 'ರ' ಶಬ್ದಕ್ಕೆ ಸಾರ್ಥಕ್ಯವಿರುವುದಿಲ್ಲ. 'ಅಂತರಃ' ಎಂಬ ಶಬ್ದವು ಅಸ್ವರಸವಾಗುತ್ತದೆ.

**प्रकाशः** – यच्चोक्तं "स्थानादिव्यपदेशाच्च" इत्यस्य 'स्थानं' स्थितिः, आदिपदेन नियमनादिकमुच्यते, चक्षुषि स्थितिनियमनादीनां परमात्मन एव "यश्चक्षुषि तिष्ठन्" इत्यादौ व्यपदेशाच्चेत्यर्थ इति,

ಇನ್ನು ಎರಡನೆಯ "ಸ್ಥಾನಾದಿವ್ಯಪದೇಶಾಚ್ಚ" ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ. 'ಸ್ಥಾನ' ಶಬ್ದಕ್ಕೆ ಸ್ಥಿತಿಯೆಂದರ್ಥ. ಆದಿಪದದಿಂದ ನಿಯಮನಾದಿಗಳನ್ನು ವಿವಕ್ಷಿಸಬೇಕು. ಆದ್ದರಿಂದ ಚಕ್ಷುರಿಂದ್ರಿಯದಲ್ಲಿ ಸ್ಥಿತಿ, ನಿಯಮನ ಮೊದಲಾದವನ್ನು ನಡೆಸುವವನು ಪರಮಾತ್ಮನೇ ಆಗಿದ್ದಾನೆಂದು "ಯಶ್ಚಕ್ಷುಷಿ ತಿಷ್ಠನ್" ಎಂಬ ಶ್ರುತಿಯು ಹೇಳುತ್ತಿದೆಯೆಂದು ಅರ್ಥ.

**प्रकाशः** – तन्न, अस्मद्रीत्या स्ववाक्यगतहेतूक्तिपरत्वसम्भवे श्रुत्यन्तरप्रदर्शनपरत्वायोगात् । स्थानशब्दस्याधिष्ठानपरत्वप्रसिद्ध्या प्रसिद्धार्थत्यागाऽऽपाताच्च । प्रतिपत्त्येकमात्रयोर्लाघवेन 'स्थित्यादि' इति निर्देशापाताच्च ।

ಇದು ತಪ್ಪು. ನಮ್ಮ ಮತದ ಪ್ರಕಾರ ವಿಷಯವಾಕ್ಯದಲ್ಲೇ ಇರುವ ಹೇತುವನ್ನು ಸೂತ್ರವು ಸಮರ್ಥಿಸುತ್ತಿದೆ ಎಂದು ಹೇಳಲು ಬರುವಾಗ ಬೇರೆ ಶ್ರುತಿಯನ್ನು ವಿವಕ್ಷಿಸುವುದು ತಪ್ಪಾಗುತ್ತದೆ. ಮತ್ತು 'ಸ್ಥಾನ' ಶಬ್ದಕ್ಕೆ 'ಅಧಿಷ್ಠಾನ' ಎಂಬರ್ಥವು ಪ್ರಸಿದ್ಧವಾಗಿರುವಾಗ ಅಪ್ರಸಿದ್ಧಾರ್ಥವನ್ನು ಸ್ವೀಕರಿಸುವುದು ಸರಿಯಲ್ಲ.

ಮತ್ತು ನಿಮ್ಮ ಪ್ರಕಾರ ವ್ಯಾಖ್ಯಾನಿಸುವುದಾದರೆ 'ಸ್ಥಾನಾದಿ' ಎಂದು ಹೇಳುವುದಕ್ಕಿಂತ 'ಸ್ಥಿತ್ಯಾದಿ' ಎಂದೇ ಸೂತ್ರದಲ್ಲಿ ಹೇಳಬೇಕು. ಹೀಗೆ ಹೇಳಿದಾಗ ಸ್ಥಿತಿ, ನಿಯಮನಗಳು ಬುದ್ಧಿಯಲ್ಲಿ ಕೂಡಲೇ ಉಪಸ್ಥಿತವಾಗುತ್ತವೆ. ಮತ್ತು 'ಸ್ಥಾನಾದಿ' ಎಂಬ ಪದಕ್ಕಿಂತ 'ಸ್ಥಿತ್ಯಾದಿ' ಎಂಬ ಪದದಲ್ಲಿ ಏಕಮಾತ್ರಾಕಾಲದಿಂದ ಲಾಘವವೂ ಇದೆ. ಹೀಗೆ ಅಲ್ಪಾಕ್ಷರತ್ವದ ಲಾಭಕ್ಕೋಸ್ಕರವೂ ಸಹ 'ಸ್ಥಿತ್ಯಾದಿ' ಎಂದು ನಿರ್ದೇಶಿಸುವುದೇ ಸೂಕ್ತ.

**प्रकाशः** – यदपि ''कं ब्रह्म'' इति प्रकृतस्य सुखत्वविशिष्टस्य सुखविशिष्टस्य वा ब्रह्मणो ''य एषोऽन्तरक्षिणि'' इत्यादिनोपासनास्थानविधानार्थं संयद्वामत्वादि-गुणविधानार्थं चाभिधानाच्चेति तृतीयार्थ इति,

ಮೂರನೆಯ ಸೂತ್ರಕ್ಕೆ ರಾಮಾನುಜರು ಹೀಗೆ ವ್ಯಾಖ್ಯಾನಿಸುತ್ತಾರೆ - ''ಕಂ ಬ್ರಹ್ಮ'' ಎಂಬುದಾಗಿ ಸುಖತ್ವವಿಶಿಷ್ಟನಾದ ಅಥವಾ ಸುಖವಿಶಿಷ್ಟನಾದ ಬ್ರಹ್ಮನು ಪ್ರಕೃತನಾಗಿದ್ದಾನೆ. ಇಂತಹ ಬ್ರಹ್ಮನಿಗೆ ''ಯ ಏಷೋಽಂತರಕ್ಷಿಣಿ'' ಇತ್ಯಾದಿ ವಾಕ್ಯದಲ್ಲಿ ಉಪಾಸನಾಸ್ಥಾನವನ್ನು ವಿಧಾನ ಮಾಡುವುದಕ್ಕೋಸ್ಕರ ಸಂಯದ್ವಾಮತ್ವಾದಿಗುಣಗಳನ್ನು ವಿಧಾನ ಮಾಡುತ್ತಿದ್ದಾರೆ. ಇದರಿಂದ ಅಕ್ಷಿಸ್ಥನಾದವನು ಬ್ರಹ್ಮನೆಂದು ತಿಳಿಯುತ್ತದೆ.

**प्रकाशः** – तन्न, भावप्रधानताकल्पनापातात् । ''कं ब्रह्म'' इति सुखमात्राभिधानेन सुखसम्बन्धाभिधानाभावेन विशिष्टपदायोगाच्च । सुखसम्बन्ध-मात्रस्य व्यभिचारित्वेन त्वद्रीत्या ''यदेव कं तदेव खं'' इति वाक्यशेषोक्ता-परिच्छिन्नत्वरूपश्रैष्ठ्यस्यैव विशिष्टशब्दार्थन्त्वेन वक्तव्यत्वाच्च ।

ಇದು ತಪ್ಪು. ಸುಖತ್ವವಿಶಿಷ್ಟನಾದ ಬ್ರಹ್ಮನನ್ನು ಹೇಳಿದರೆ ಭಾವಪ್ರಧಾನವನ್ನು ಕಲ್ಪಿಸಬೇಕೆಂಬ ಅಸ್ವಾರಸ್ಯವಿದೆ. ಸುಖವಿಶಿಷ್ಟನೆಂಬ ಬ್ರಹ್ಮನನ್ನು ಹೇಳಿದರೆ ಸುಖಸಂಬಂಧವನ್ನು ಹೇಳಿದಂತಾಗುತ್ತದೆ. ಆವಾಗ ಅದ್ವೈತಮತದಂತೆ ವಿಶಿಷ್ಟಪದವು ವ್ಯರ್ಥವಾಗುತ್ತದೆ.

ಮತ್ತು ಸುಖಸಂಬಂಧವನ್ನು ಹೇತುವನ್ನಾಗಿ ಮಾಡಿದರೆ ವ್ಯಭಿಚಾರದೋಷವೂ ಬರುತ್ತದೆ. ಅದನ್ನು ಪರಿಹರಿಸುವುದಕ್ಕಾಗಿ 'ಯದೇವ ಕಂ ತದೇವ ಖಂ' ಎಂಬ ವಾಕ್ಯಶೇಷದಲ್ಲಿ ಹೇಳಲ್ಪಟ್ಟ ಅಪರಿಚ್ಛಿನ್ನತ್ವವೆಂಬ ಶ್ರೇಷ್ಠತ್ವವನ್ನು ಸುಖದಲ್ಲಿ ವಿಶೇಷಣವನ್ನಾಗಿ ಹೇಳಬೇಕು. ಹೀಗೆ ಹೇಳಿದಾಗ ನಮ್ಮ ಪ್ರಕಾರವೇ ವಿಶಿಷ್ಟಶಬ್ದದ ಅರ್ಥವನ್ನು ವ್ಯಾಖ್ಯಾನಿಸಿದಂತಾಗುತ್ತದೆ.

## ಅಂತರಾಧಿಕರಣ (೧-೨-೪)

**प्रकाशः** – "कं ब्रह्म खं ब्रह्म" इत्युक्तयोः कखयोर्भेदशङ्कया "कं च खं च तु न विजानामि" इति प्रश्ने कखशब्दोक्तयोः आनन्दज्ञानयोर्न भेद इति भावेन "यदेव कं तदेव खं" इति वाक्यशेषस्य प्रवृत्तत्वेन तेनापरिच्छिन्नत्वालाभाद्ब्रह्मशब्देनैव सुखेऽपरिच्छिन्नत्वरूपवैशिष्टयस्यैवौचित्याच्च ।

ಅಷ್ಟೇ ಅಲ್ಲದೆ ಉಪನಿಷತ್ತಿಗೆ ಹೇಳಿದ ಅರ್ಥವೂ ಸಹ ತಪ್ಪಾಗುತ್ತದೆ. 'ಯದ್ವಾವ ಕಂ ತದೇವ ಖಂ' ಎಂಬಲ್ಲಿರುವ 'ಖ' ಪದಕ್ಕೆ ಅಪರಿಚ್ಛಿನ್ನತ್ವವೆಂಬ ಅರ್ಥವನ್ನು ನೀವು ಹೇಳುತ್ತಿದ್ದೀರಿ. ಇದು ಸರಿಯಲ್ಲ. ಏಕೆಂದರೆ "ಕಂ ಬ್ರಹ್ಮ ಖಂ ಬ್ರಹ್ಮ" ಎಂದು ಹೇಳಿದಾಗ 'ಕ' ಕಾರಕ್ಕೂ 'ಖ' ಕಾರಕ್ಕೂ ಭೇದವಿದೆಯೆಂಬ ಸಂಶಯದಿಂದ "ಕಂ ಚ ಖಂ ಚ ತು ನ ವಿಜಾನಾಮಿ" ಎಂಬುದಾಗಿ 'ಕ' ಕಾರದ ಮತ್ತು 'ಖ'ಕಾರದ ಅರ್ಥವನ್ನು ತಿಳಿದಿಲ್ಲವೆಂದು ಉಪಕೋಸಲನು ಪ್ರಶ್ನಿಸುತ್ತಾನೆ. ಆ ಸಂದರ್ಭದಲ್ಲಿ 'ಕ' ಕಾರಕ್ಕೆ ಆನಂದವೆಂದರ್ಥ. 'ಖ' ಕಾರಕ್ಕೆ ಜ್ಞಾನವೆಂದರ್ಥ ತಿಳಿಯುತ್ತದೆ. ಆದ್ದರಿಂದ ಎರಡಕ್ಕೂ ಭೇದವಿಲ್ಲವೆಂಬ ಅಭಿಪ್ರಾಯದಿಂದ "ಯದೇವ ಕಂ ತದೇವ ಖಂ" ಎಂಬ ವಾಕ್ಯಶೇಷವು ಪ್ರವೃತ್ತವಾಗಿವೆ. ಆದ್ದರಿಂದ ಅಪರಿಚ್ಛಿನ್ನತ್ವ ಎಂಬ ಅರ್ಥವು ದೊರೆಯುವುದಿಲ್ಲ. ಮತ್ತು ಬ್ರಹ್ಮಶಬ್ದದಿಂದಲೇ ಸುಖದಲ್ಲಿ ಅಪರಿಚ್ಛಿನ್ನತ್ವವೆಂಬ ವೈಶಿಷ್ಟ್ಯವು ತಿಳಿಯುತ್ತದೆಂದು ಹೇಳುವುದೇ ಉಚಿತವಾಗಿದೆ.

**प्रकाशः** – यदपि, श्रुतोपनिषत्कस्याधिगतपरमपुरुषयाथात्म्यस्यानुसन्धेयतया या प्रातिपाद्यमाना अर्चिरादिका गतिः, तामपुनरावृत्तिलक्षणपरमपुरुषप्राप्तिकरीमुपकोसलायाक्षिपुरुषं श्रुतवते "तेऽर्चिषमभिसम्भवन्ति" इत्यारभ्य "इमं मानवमावर्तं नावर्तन्ते" इत्यभिधानाच्चेति चतुर्थार्थ इति,

ರಾಮಾನುಜರ ಮೂರನೇ ಸೂತ್ರಾರ್ಥ ಹೀಗಿದೆ - ಯಾವ ವ್ಯಕ್ತಿಯು 'ಶ್ರುತೋಪನಿಷತ್ಕ' ಆಗಿದ್ದಾನೋ? ಅಂದರೆ ಪರಮಪುರುಷನಾದ ಭಗವಂತನನ್ನು ಯಥಾರ್ಥವಾಗಿ ತಿಳಿದಿದ್ದಾನೋ? ಅಂತಹವನು ಅರ್ಚಿರಾದಿಮಾರ್ಗವನ್ನು ಸ್ಮರಣೆ ಮಾಡಿಕೊಳ್ಳಬೇಕು. ಹೀಗೆ ಬ್ರಹ್ಮಜ್ಞಾನಿಗಳಿಗೆ ಅನುಸಂಧೇಯವಾದ ಯಾವ ಅರ್ಚಿರಾದಿ ಮಾರ್ಗಗಳನ್ನು ಹೇಳಿದ್ದಾರೋ ಅಂತಹ ಪುನರಾವರ್ತಿಯಿಲ್ಲದ ಅರ್ಚಿರಾದಿ ಮಾರ್ಗಗಳ ಪ್ರಾಪ್ತಿಯನ್ನು ಉಪಕೋಸಲನಿಗೆ ಉಪದೇಶಿಸಲಾಗಿದೆ. ಈಗಾಗಲೇ ಅಕ್ಷಿಸ್ಥಪುರುಷನ ಬಗ್ಗೆ ತಿಳಿದಿರುವ ಉಪಕೋಸಲನಿಗೆ "ತೇऽರ್ಚಿಷಮಭಿಸಂಭವಂತಿ" "ಇಮಂ ಮಾನವಮಾವರ್ತಂ ನಾವರ್ತಂತೇ" ಎಂಬಲ್ಲಿಯ ತನಕ ಅರ್ಚಿರಾದಿಮಾರ್ಗಗಳನ್ನು ಉಪದೇಶಿಸಿದರೆ ಅಕ್ಷಿಸ್ಥನಾದವನು ಬ್ರಹ್ಮನೇ ಆಗಿದ್ದಾನೆಂದು ನಿರ್ಣಯವಾಗುತ್ತದೆ.

**प्रकाशः** – तन्न, श्रुत्यननुगमात्, कशब्दवैयर्थ्यात्, गतिशब्दास्वारस्याच्च ।

ಇದು ತಪ್ಪು. ಹೀಗೆ ಹೇಳಿದರೆ ಸೂತ್ರಕ್ಕೆ ಶ್ರುತಿಯಿಂದ ಅನುಗುಣ್ಯ ಬರುವುದಿಲ್ಲ. ಮತ್ತು ಸೂತ್ರದಲ್ಲಿರುವ 'ಕ' ಶಬ್ದಕ್ಕೆ ಅರ್ಥವೇ ಇಲ್ಲ. 'ಗತಿ' ಶಬ್ದಕ್ಕೆ ಮಾರ್ಗವೆಂಬರ್ಥವನ್ನು ಮಾಡುವುದೂ ಸಹ ಅಸ್ವರಸವಾಗಿದೆ. ಆದ್ದರಿಂದ ಸೂತ್ರದ ವ್ಯಾಖ್ಯಾನವೂ ಸಹ ಅಸಮಂಜಸವಾಗಿದೆ.

**प्रकाशः** – यच्च प्रतिबिम्बादीनां नियमेन चक्षुष्यनवस्थितेरमृतत्वादीनां निरुपाधिकानां तेष्वसम्भवान्न च्छायादिरितरोऽक्षिस्थ इति आद्यद्वितीयसूत्रोक्त-हेत्वोरितरत्र व्यतिरेक कथनार्थमन्तिममिति,

ಬಿಂಬ ಮೊದಲಾದವು ನಿಯಮೇನ ಚಕ್ಷುರಿಂದ್ರಿಯದಲ್ಲಿ ನಿಂತಿರುವುದಿಲ್ಲ. ಮತ್ತು ಅಮೃತತ್ವಾದಿಗಳು ಈ ಪ್ರತಿಬಿಂಬಾದಿಗಳಲ್ಲಿ ಅಸಂಭಾವಿತವಾಗಿವೆ. ಆದ್ದರಿಂದ ಬ್ರಹ್ಮನಿಗಿಂತ ಭಿನ್ನವಾದ ಛಾಯಾದಿಗಳು ಅಕ್ಷಿಸ್ಥವಾಗುವುದಿಲ್ಲ. ಆದ್ದರಿಂದ ಮೊದಲೆರಡು ಸೂತ್ರಗಳಲ್ಲಿ ಹೇಳಲ್ಪಟ್ಟ ಹೇತುಗಳು ಅಮೃತತ್ವ ನಿಯಾಮಕತ್ವ ಮೊದಲಾದ ಹೇತುಗಳು ಛಾಯಾದಿಗಳಲ್ಲಿ ಬರುವುದಿಲ್ಲವೆಂದು ತಿಳಿಸುವುದಕ್ಕಾಗಿ ಈ ಕೊನೆಯ ಸೂತ್ರವು ಹೊರಟಿದೆಯೆಂದು ವ್ಯಾಖ್ಯಾನಿಸುತ್ತಾರೆ.

**प्रकाशः** – तन्न, प्रत्यधिकरणं सिद्धान्तहेतूनां पूर्वपक्षाभिमतेऽर्थे व्यतिरेककथनाय सूत्रान्तरस्यावश्यकतापत्तेः । अर्थाद्व्यतिरेकसिद्धाविहापि परमात्मन्युपपत्तिस्थिति-कथनाभ्यां अन्यत्रासम्भवानवस्थित्योर्लाभेनाद्यद्वितीयाभ्यां पौनरुक्त्याच्च ।

ಇದೂ ಸಹ ತಪ್ಪು. ಸಿದ್ಧಾಂತ ಹೇತುಗಳೆಲ್ಲವೂ ಪೂರ್ವಪಕ್ಷಿಗೆ ಅಭಿಮತವಾದಲ್ಲಿ ಬರುವುದಿಲ್ಲವೆಂದು ಸೂಚಿಸುವುದಕ್ಕಾಗಿ ಮತ್ತೊಂದು ಸೂತ್ರವು ಹೊರಡಬೇಕೆಂದು ಹೇಳಿದರೆ ಪ್ರತಿಯೊಂದು ಅಧಿಕರಣದಲ್ಲಿಯೂ ಹೀಗೆಯೇ ಮಾಡಬೇಕಾದೀತು.

ಉಳಿದ ಅಧಿಕರಣಗಳಲ್ಲಿ ಸಿದ್ಧಾಂತ ಹೇತುಗಳು ಪೂರ್ವಪಕ್ಷಿಗೆ ಅಭಿಮತವಾದ ಅರ್ಥದಲ್ಲಿ ಬರುವುದಿಲ್ಲವೆಂದು ತಿಳಿಯುತ್ತಿರುವುದು ಹೇಳುವುದಾದರೆ ಈ ಅಧಿಕರಣದಲ್ಲಿಯೂ ಸಹ ಹಾಗೆಯೇ ಹೇಳಬಹುದು. ಪರಮಾತ್ಮನಲ್ಲಿ ಸ್ಥಿತಿ ಮೊದಲಾದವುಗಳು ಇರುತ್ತವೆಂದು ಹೇಳಿದ್ದರಿಂದಲೇ ಛಾಯಾದಿಗಳಲ್ಲಿರುವುದಿಲ್ಲವೆಂದು ತಿಳಿಯುವಾಗ ಪುನಃ ಅದೇ ವಿಚಾರವನ್ನು ಐದನೆಯ ಸೂತ್ರ ಹೇಳಿದರೆ ಪುನರುಕ್ತಿದೋಷ ಬರುತ್ತದೆ.

**प्रकाशः** – आद्यद्वितीयसूत्रोक्तव्यतिरेकोक्तिपरत्वे 'असम्भवादनवस्थितेश्च' इति । विन्यासापत्तेश्च । अनवस्थितिशब्दस्य प्रसिद्धार्थत्यागाच्च । सदाशब्दादेरध्याहार्यत्वाच्चेति दूषितमित्यर्थः ।

ಮತ್ತು ಮೊದಲೆರಡು ಸೂತ್ರಗಳಲ್ಲಿರುವ ಉಪಪತ್ತಿಯನ್ನು ಈ ಸೂತ್ರವು ಪೂರ್ವಪಕ್ಷಿಗೆ ಅಭಿಮತವಾದ ಅರ್ಥದಲ್ಲಿಲ್ಲವೆಂದು ಹೇಳುತ್ತಿದೆಯೆಂದಾದರೆ ಅದಕ್ಕನುಗುಣವಾಗಿ 'ಅಸಂಭವಾದನವಸ್ಥಿತೇಶ್ಚ' ಎಂದೇ ಸೂತ್ರದ ವಿನ್ಯಾಸ ಇರಬೇಕಿತ್ತು.

ಅದ್ವೈತಿಗಳಂತೆ ಇವರೂ ಸಹ 'ಅನವಸ್ಥಿತಿ' ಶಬ್ದಕ್ಕೆ ಅಪ್ರಮಾಣಿಕವಾದ ಅನಂತವ್ಯಕ್ತಿಕಲ್ಪನೆಯೆಂಬ ಪ್ರಸಿದ್ಧಾರ್ಥವನ್ನು ಬಿಟ್ಟು ಅಪ್ರಸಿದ್ಧಾರ್ಥವನ್ನು ಹೇಳಿದಂತಾಗುತ್ತದೆ. ಮತ್ತು ಸದಾಶಬ್ದಾದಿಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕಾದೀತೆಂಬ ದೋಷವು ತಪ್ಪಿದ್ದಲ್ಲ.

ಅಂತರಾಧಿಕರಣ (೧-೨-೪)

**प्रकाशः** – ननु ''कं ब्रह्म खं ब्रह्म'' इति निरतिशयानन्दं ब्रह्मेत्यभिहितमिति कथं ज्ञायते, यतो ''नाम ब्रह्म'' इत्यादाविव ''कं ब्रह्म खं ब्रह्म'' इति प्रसिद्धसुखाकाशयोरेव ब्रह्मदृष्टिर्विधीयते इत्याशङ्कायां, पूर्ववाक्यस्य ब्रह्मपरत्वोपपादकं ''अत एव च स ब्रह्म'' इति चतुर्थसूत्रमित्युक्तं रामानुजभाष्ये । तत्कुतो न व्याक्रियते नापि दूष्यत इत्यत आह – **कैश्चिदिति** ।

''ಕಂ ಬ್ರಹ್ಮ ಖಂ ಬ್ರಹ್ಮ'' ಎಂಬ ಶ್ರುತಿಯಿಂದ ಬ್ರಹ್ಮನು ನಿರತಿಶಯಾನಂದನಾಗಿದ್ದಾನೆಂದು ಹೇಗೆ ತಿಳಿಯುತ್ತದೆ. ಏಕೆಂದರೆ 'ನಾಮ ಬ್ರಹ್ಮ' ಇತ್ಯಾದಿ ಸ್ಥಳದಲ್ಲಿ ನಾಮದಲ್ಲಿ ಬ್ರಹ್ಮನನ್ನು ಉಪಾಸನೆ ಮಾಡಬೇಕೆಂದು ಹೇಗೆ ಹೇಳಲಾಗುತ್ತದೋ ಅದರಂತೆ ''ಕಂ ಬ್ರಹ್ಮ'' ಎಂಬುದರಿಂದ ಪ್ರಸಿದ್ಧವಾದ ಸುಖದಲ್ಲಿ ಬ್ರಹ್ಮನನ್ನು ಉಪಾಸಿಸಬೇಕೆಂದು. ''ಖಂ ಬ್ರಹ್ಮ'' ಎಂಬುದರಿಂದ ಪ್ರಸಿದ್ಧವಾದ ಆಕಾಶದಲ್ಲಿ ಬ್ರಹ್ಮನನ್ನು ಉಪಾಸಿಸಬೇಕೆಂದು ಶ್ರುತಿಯು ವಿಧಿಸುತ್ತಿದೆಯಲ್ಲವೇ? ಎಂದು ಆಶಂಕಿಸಿ ನಾಲ್ಕನೆಯ ಸೂತ್ರವು ಉತ್ತರಿಸುತ್ತಿದೆ. ''ಕಂ ಬ್ರಹ್ಮ'' ಎಂಬ ಹಿಂದಿನ ವಾಕ್ಯವು ಬ್ರಹ್ಮಪರವಾಗಿರುವುದರಿಂದ ಈ ವಾಕ್ಯವೂ ಸಹ ಬ್ರಹ್ಮಪರವಾಗುತ್ತದೆಂದು ಈ ಸೂತ್ರವು ಸಾಧಿಸುತ್ತದೆ. ನಾಲ್ಕನೆಯ ಸೂತ್ರವೆಂದರೆ 'ಶ್ರುತೋಪನಿಷತ್' ಎಂಬ ಸೂತ್ರವಲ್ಲ ಹೊರತು ''ಅತ ಏವ ಚ ಸ ಬ್ರಹ್ಮ'' ಎಂಬುದೆಂದು ತಿಳಿಯಬೇಕು. ರಾಮಾನುಜರ ಈ ಸೂತ್ರದ ವ್ಯಾಖ್ಯಾನವನ್ನಾಗಲೀ ದೂಷಣವನ್ನಾಗಲೀ ಏಕೆ ಮಾಡಲಿಲ್ಲ ? ಎಂಬ ಪ್ರಶ್ನೆಗೆ ಗ್ರಂಥಕಾರರು 'ಕೈಶ್ಚಿತ್' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಂದರೆ ಈ ಸೂತ್ರವು ಪ್ರಕ್ಷಿಪ್ತವಾದ್ದರಿಂದ ಪರಿಗಣಿಸಬೇಕಾಗಿಲ್ಲ.

**प्रकाशः** – **ईक्षतीति** । एतेन तत्रापि ''प्रतिज्ञाविरोधात्'' इति पञ्चमसूत्रं प्रक्षिप्तमेवेत्युक्तं भवति । पूर्ववाक्यस्य ब्रह्मपरत्वोपपादनं च भाष्याद्युक्तदिशा बोध्यमिति भावः । अद्वैतमते प्रतिकूलमिदमित्याह – **अत्रापीति** । मिथ्याभेदपरत्वं च निरसिष्यत इति भावः ॥

ಗ್ರಂಥದಲ್ಲಿ 'ಈಕ್ಷತಿ' ಎಂದಿದೆ. ಅಂದರೆ ಈಕ್ಷತ್ಯಧಿಕರಣದಲ್ಲೂ ಸಹ 'ಪ್ರತಿಜ್ಞಾವಿರೋಧಾತ್' ಎಂಬ ಸೂತ್ರವು ಪ್ರಕ್ಷಿಪ್ತವೆಂದು ತಿಳಿಯಬೇಕು.

ಪೂರ್ವವಾಕ್ಯವು ಹೇಗೆ ಬ್ರಹ್ಮಪರವಾಗಿದೆಯೆಂಬುದನ್ನು ತಿಳಿಸಲು ಪ್ರಕ್ಷಿಪ್ತಸೂತ್ರದ ಅವಶ್ಯಕತೆ ಇಲ್ಲ. ಭಾಷ್ಯ ಟೀಕೆಗಳಲ್ಲಿ ಹೇಳಿದಂತೆ ಈ ಸೂತ್ರವಿಲ್ಲದಿದ್ದರೂ ಸುಲಭವಾಗಿ ತಿಳಿಯಬಹುದು.

ಈ ಅಧಿಕರಣವು ಅದ್ವೈತಿಗಳಿಗೆ ಅನುಕೂಲವಾಗಿಲ್ಲವೆಂದಷ್ಟೇ ಅಲ್ಲ. ಪ್ರತಿಕೂಲವೇ ಆಗಿದೆಯೆಂದು 'ಅತ್ರಾಪಿ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ವ್ಯಾವಹಾರಿಕಭೇದವನ್ನು ಮುಂದೆ ನಿರಾಕರಿಸುತ್ತೇವೆಂದು ತಿಳಿಯಬೇಕು.

**प्रकाशः** – यत्कश्चिदाह – ''अनवस्थितेः'' इत्यतः प्राक्तनमेकमधिकरणम् । ''अनवस्थितेः'' इति त्वधिकरणान्तरम् । आद्यस्याक्षिवाक्यं विषयः । अन्त्यस्य तु –

अङ्गुष्ठमात्रः पुरुषोऽङ्गुष्ठं च समाश्रितः ।
ईशः सर्वस्य जगतः ............... ॥

इत्यादीति । तत्राद्ये अक्षिस्थः छायापुरुषजीवान्यतरोऽथ शिव इति संशये जीवादिरिति प्राप्ते, शिव इति सिद्धान्त इति,

ಶೈವರ ಅಧಿಕರಣಶರೀರ ಹೀಗಿದೆ - 'ಅನವಸ್ಥಿತೇಃ' ಎಂಬ ಮೊದಲಿನ ಸೂತ್ರವು ಒಂದು ಅಧಿಕರಣವಾಗಿದೆ. 'ಅನವಸ್ಥಿತೇಃ' ಎಂಬುದೇ ಬೇರೆ ಅಧಿಕರಣವಾಗಿದೆ. ಮೊದಲನೆಯ ಅಧಿಕರಣಕ್ಕೆ 'ಅಕ್ಷಿ' ವಾಕ್ಯವು ವಿಷಯ. ಎರಡನೇ ಅಧಿಕರಣಕ್ಕೆ ''ಅಂಗುಷ್ಠಮಾತ್ರಃ ಪುರುಷೋಽಂಗುಷ್ಠಂ ಚ ಸಮಾಶ್ರಿತಃ । ಈಶಃ ಸರ್ವಸ್ಯ ಜಗತಃ'' ಎಂಬುದು ವಿಷಯವಾಕ್ಯ. ಮೊದಲನೆಯ ಅಧಿಕರಣದಲ್ಲಿ ಅಕ್ಷಿಯಲ್ಲಿರುವವನು ಛಾಯಾಪುರುಷನೋ? ಜೀವನೋ? ಅಥವಾ ಶಿವನೋ? ಎಂದು ಸಂಶಯ. ಜೀವ ಅಥವಾ ಛಾಯಾಪುರುಷರೇ ಅಕ್ಷಿಸ್ಥರೆಂದು ಪೂರ್ವಪಕ್ಷ. ಶಿವನು ಅಕ್ಷಿಸ್ಥನೆಂದು ಸಿದ್ಧಾಂತ.

**प्रकाशः** – तन्न, अन्तर्नयेन पौनरुक्त्यात्, तत्राक्षिस्थत्वस्याप्युक्तेः । वाक्यभेद-मात्रेणाधिकरणभेदायोगात् । अमृतत्व, अभयत्व, संयद्वामत्व, वामनित्व, भामनित्वादीनां लिङ्गानां, पुष्करपलाशवाक्योक्तपापाश्लेषरूपस्य, अर्चिरादिवाक्योक्त ब्रह्मप्राप्तिरूपफलस्य, ''कं ब्रह्म'' इति प्रकरणस्य च ब्रह्मत्वसाधकस्य, च सत्त्वेन ततोऽप्याधिक्येन संशयस्यैवानुदयात् ।

ಇದು ತಪ್ಪು. ಅಂತಸ್ಥತ್ವಾಧಿಕರಣದಿಂದ ಪುನರುಕ್ತಿ ದೋಷವು ಇವರಿಗೂ ಸಹ ತಪ್ಪಿದ್ದಲ್ಲ. ಏಕೆಂದರೆ ಶಿವನು ಅಕ್ಷಿಯಲ್ಲಿದ್ದಾನೆಂದು ಅಲ್ಲಿಯೇ ಹೇಳಿದ್ದಾಗಿದೆ. ಅಷ್ಟೇ ಅಲ್ಲದೆ ಕೇವಲ ವಾಕ್ಯಭೇದ ಮಾತ್ರದಿಂದ ಅಧಿಕರಣಗಳಿಗೆ ಭೇದವನ್ನು ಒಪ್ಪುವುದಾದರೆ ಶಾಸ್ತ್ರಕ್ಕೆ ಅಪರ್ಯವಸಾನ ದೋಷವು ಬರುತ್ತದೆ. ಮತ್ತು ''ಅಮೃತತ್ವ, ಅಭಯತ್ವ, ಸಂಯದ್ವಾಮತ್ವ, ವಾಮನಿತ್ವ, ಭಾಮನಿತ್ವ'' ಮೊದಲಾದ ಲಿಂಗಗಳು ಪುಷ್ಕರಪಲಾಶ ವಾಕ್ಯದಲ್ಲಿ ಹೇಳಲ್ಪಟ್ಟ ಪಾಪಾಶ್ಲೇಷವೆಂಬ ಅರ್ಚಿರಾದಿವಾಕ್ಯದಲ್ಲಿ ಹೇಳಲ್ಪಟ್ಟ ''ಬ್ರಹ್ಮಪ್ರಾಪ್ತಿ'' ಎಂಬ ಫಲ ''ಕಂ ಬ್ರಹ್ಮ'' ಎಂಬ ಪ್ರಕರಣ ಇವುಗಳೆಲ್ಲವೂ ಬ್ರಹ್ಮತ್ವಸಾಧಕವಾಗಿರುವಾಗ ಇದಕ್ಕಿಂತ ಹೆಚ್ಚಿನ ಪ್ರಮಾಣಗಳನ್ನು ಶಿವಪರವಾಗಿ ನಿಮಗೆ ತೋರಿಸಲಾಗದು. ಆದ್ದರಿಂದ ಸಂಶಯ ಹುಟ್ಟಲು ಸಾಧ್ಯವೇ ಇಲ್ಲ.

ಅಂತರಾಧಿಕರಣ (೧-೨-೪)

**प्रकाशः – यदत्रोक्तं शिवार्कमणिदीपिकायां – अक्ष्याधारत्वस्य स्वमहिमप्रतिष्ठे शिवे मुख्यत्वायोगात्, रूपविशेषावच्छेदेनौपचारिकत्वकल्पने बाधाकाभावात्, आत्मब्रह्मश्रुत्योः संयद्वामत्वादिगुणश्रवणस्य च इतिशब्दशिरस्कत्वेन ''मनो ब्रह्मेति'' इत्यादिवदतस्मिंस्तद्रूपप्रत्ययपरत्वावगमात्, तत्सहचारेणामृतत्वादिश्रवणस्यापि तन्मात्रपरत्वावगमात्, अमृतत्वादेर्मुक्तौ सत्त्वेन भाविभावाभिप्रायेणोपपत्तेश्चेत्यादि-प्रकारेण ब्रह्मप्रापकाणां अन्यथासिद्धेः, जीवे चाक्षिस्थत्वस्य मुख्यस्य सम्भवात् जीव एवाक्षिस्थ इति विशेषशङ्केति,**

ಶಿವಾರ್ಕಮಣಿದೀಪಿಕೆಯಲ್ಲಿ ಹೀಗೆ ಸಮರ್ಥಿಸಿದ್ದಾರೆ - ಅಭ್ಯಧಿಕಾಶಂಕೆ ಇರುವುದರಿಂದ ಪೂರ್ವಪಕ್ಷವು ಉದಯವಾಗುತ್ತದೆ. ಶಿವನು ತನ್ನ ಮಹಿಮೆಯಿಂದ ತನ್ನಲ್ಲೇ ಇರುವುದರಿಂದ ಅಕ್ಷಿಯು ಶಿವನಿಗೆ ಆಧಾರವಾಗಿಲ್ಲ. ಆದ್ದರಿಂದ ಅಕ್ಷಿಸ್ಥತ್ವವನ್ನು ಜೀವನಲ್ಲಿ ಹೇಳಬಹುದೇ ಹೊರತು ಶಿವನಿಗೆ ಮುಖ್ಯವಾಗಿ ಹೇಳಲಾಗದು. ಈ ಒಂದು ಶಿವನಲಿಂಗದಿಂದ ಉಳಿದೆಲ್ಲಾ ಬ್ರಹ್ಮನ ಲಿಂಗವನ್ನು ಅನ್ಯಥಾಸಿದ್ಧವೆಂದು ಹೇಳಬಹುದು. ವಾಮನಿ ಭಾಮನಿ ಎಂಬಲ್ಲಿ 'ಇತಿ' ಶಬ್ದವು ಇರುವುದರಿಂದ ಕೇವಲ ಉಪಾಸನೆಗೋಸ್ಕರವೆಂದು ತಿಳಿಯುತ್ತದೆ. ಯಾರು ಹಾಗಿಲ್ಲವೋ ಅವರನ್ನು ಹಾಗೆ ತಿಳಿಯುವುದೇ ಉಪಾಸನೆ ಎನಿಸುತ್ತದೆ. ಹೀಗೆ ಉಪಾಸನೆಗೋಸ್ಕರ ಸಂಯದ್ವಾಮತ್ವ, ವಾಮನತ್ವ ಮೊದಲಾದವುಗಳನ್ನು ಮಿಥ್ಯಾಭೂತವೆಂದು ಹೇಳಬಹುದು. ಇದರ ಸಹಚರ್ಯದಿಂದ ಅಮೃತತ್ವ, ಅಭಯತ್ವಗಳನ್ನು ಹೇಳುವಾಕ್ಯದಲ್ಲಿ 'ಇತಿ' ಶಬ್ದವಿಲ್ಲದಿದ್ದರೂ ಉಪಾಸನಾಪರವಾಗಿ ವ್ಯಾಖ್ಯಾನಿಸಬಹುದು. ಅಥವಾ ಜೀವನಿಗೆ ಈಗ ಅಮೃತತ್ವಾದಿಗಳಿಲ್ಲದಿದ್ದರೂ ಮುಂದೆ ಮೋಕ್ಷದಲ್ಲಿ ಅಮೃತತ್ವಾದಿಗಳು ಬರುವುದರಿಂದಲೂ ಕೂಡಿಸಬಹುದು. ಆದ್ದರಿಂದ ಬ್ರಹ್ಮಪ್ರಾಪಕವಾದ ಧರ್ಮಗಳೆಲ್ಲವೂ ಜೀವನಲ್ಲಿ ಅನ್ಯಥಾಸಿದ್ಧವಾಗಿವೆ. ಹೀಗೆ ಅಕ್ಷಿಸ್ಥನಾದವನು ಜೀವನೇ ಆಗಿದ್ದಾನೆಂದು ಮುಖ್ಯಾರ್ಥವನ್ನು ಸ್ವೀಕರಿಸಲು ಬರುವಾಗ ಶಿವನು ಅಕ್ಷಿಸ್ಥನೆಂದು ಹೇಳಬಾರದು. ಹೀಗೆ ಅಧಿಕಾಶಂಕೆಯು ಬರುವುದರಿಂದ ಈ ಅಧಿಕರಣ ಹೊರಟಿದ್ದು ಸಾರ್ಥಕವಾಗಿದೆ.

**प्रकाशः – तत्तुच्छं, एकेन लिङ्गेन श्रुतिलिङ्गादीनां बहूनामन्यथानयनायोगात् । स्वमहिमप्रतिष्ठस्याप्यादित्याद्यन्तस्स्थत्वस्यार्भकौकस्त्वस्य च प्रागेवोक्तत्वात् । ''हृदि ह्येष आत्मा'' इत्यादिना जीवस्य सदा हृदिस्थत्वाद्रूपादिग्रहणकाले चक्षुस्संयोगाङ्गीकारेऽपि नित्यं तत्रावस्थानाभावेन ''य एषोऽन्तरक्षिणि'' इति नित्यवच्छ्रवणविरोधात् । एककालावच्छेदेनौपचारिकत्वावश्यम्भावाच्च ।**

ಇದು ಸರಿಯಲ್ಲ. ಸ್ವಮಹಿಮಪ್ರತಿಷ್ಠಾನವೆಂಬ ಒಂದೇ ಲಿಂಗದಿಂದ ಅನೇಕ ಶ್ರುತಿಲಿಂಗಾದಿಗಳಿಗೆ ಅನ್ಯಥಾಸಿದ್ಧಿಯನ್ನು ಕಲ್ಪಿಸುವುದು ಅಸಾಧುವಾಗಿದೆ. ಮತ್ತು ಸ್ವಮಹಿಮೆಯಲ್ಲಿ ಪ್ರತಿಷ್ಠಿತನಾಗಿದ್ದರೂ ಉಳಿದ ಅಧಿಷ್ಠಾನದಲ್ಲಿದ್ದಾನೆಂದು ನೀವೇ ಒಪ್ಪಿದ್ದೀರಿ. ಅಂತಸ್ಥತ್ವಾಧಿಕರಣದಲ್ಲಿ ಆದಿತ್ಯನಲ್ಲಿದ್ದಾನೆಂದು ಹೇಳಿದ್ದೀರಿ. 'ಅರ್ಭಕೌಕಸ್ತ್ವಾತ್' ಎಂಬ ಸೂತ್ರದಲ್ಲಿ ಅಲ್ಪಸ್ಥಾನದಲ್ಲಿದ್ದಾನೆಂದು ಹೇಳಿದ್ದೀರಿ. ಮತ್ತು 'ಹೃದಿ ಹ್ಯೇಷ ಆತ್ಮಾ'

ಇತ್ಯಾದಿಯಾಗಿ ಜೀವನು ನಿರಂತರವಾಗಿ ಹೃದಯದಲ್ಲಿರುತ್ತಾನೆಂದು ಪ್ರಮಾಣವಿರುವುದರಿಂದ ಕಣ್ಣಿನಲ್ಲಿದ್ದಾನೆಂದು ಹೇಳುವುದು ತಪ್ಪಾಗುತ್ತದೆ.

ಹಾಗಾದರೆ ನಿಮ್ಮ ಸಿದ್ಧಾಂತದಲ್ಲಿ ಜಾಗ್ರದವಸ್ಥಾಕಾಲದಲ್ಲಿ ಕಣ್ಣಿನಲ್ಲಿರುತ್ತಾನೆಂದು ಹೇಗೆ ಒಪ್ಪಿದ್ದೀರಿ? ಮತ್ತು ರೂಪಾದಿ ವಿಷಯಗಳನ್ನು ಗ್ರಹಿಸುವಾಗ ಚಕ್ಷುಸ್ಸಂಯೋಗಾದಿಗಳನ್ನು ಜೀವನಿಗೆ ಒಪ್ಪಲೇಬೇಕಲ್ಲವೇ? ಎಂದು ಪ್ರಶ್ನಿಸಬಾರದು.

ಜೀವನಿಗೆ ಜಾಗ್ರದವಸ್ಥಾಕಾಲದಲ್ಲಿ ಮತ್ತು ರೂಪಾದಿವಿಷಯಗಳನ್ನು ಗ್ರಹಿಸುವ ಕಾಲದಲ್ಲಿ ಚಕ್ಷುಸ್ಸಂಯೋಗವನ್ನು ನಾವು ಒಪ್ಪುತ್ತೇವೆ. ಆದರೆ ನಿರಂತರವಾಗಿ ಚಕ್ಷುರಿಂದ್ರಿಯದಲ್ಲೇ ಇರುತ್ತಾನೆಂದು ಹೇಳುವುದಿಲ್ಲ. "ಯ ಏಷೋಽನ್ತರಕ್ಷಿಣಿ ಪುರುಷೋ ದೃಶ್ಯತೇ" ಎಂಬ ವಾಕ್ಯದಿಂದ ನಿರಂತರವಾಗಿ ಚಕ್ಷುರಿಂದ್ರಿಯದಲ್ಲೇ ಇರುತ್ತಾನೆಂದು ಶ್ರುತಿಯಿಂದ ತಿಳಿಯುತ್ತಿದೆ. ಆದ್ದರಿಂದ ಈ ಶ್ರುತಿಯ ವಿರೋಧವನ್ನು ಪರಿಹರಿಸಬೇಕೆಂದರೆ "ಹೃದಿ ಹ್ಯೇಷ ಆತ್ಮಾ" ಎಂಬ ಶ್ರುತಿಯು ಕೇವಲ ಒಂದು ಕಾಲದಲ್ಲಿ ಮಾತ್ರ ಜೀವನು ಹೃದಯದಲ್ಲಿದ್ದಾನೆಂದು ಹೇಳುತ್ತಿದೆಯೆನ್ನಬೇಕು. ಅದರಂತೆ ಚಕ್ಷುರಿಂದ್ರಿಯದಲ್ಲೂ ಸಹ ಯಾವುದಾದರೊಂದು ಕಾಲದಲ್ಲಿರುತ್ತಾನೆಂದೇ ಹೇಳಬೇಕು. ಈ ಸಮಾಧಾನವನ್ನು ಶಿವನ ಪಕ್ಷದಲ್ಲೂ ಹೇಳಬಹುದಾದ್ದರಿಂದ ಅಧಿಕಾಶಂಕೆಗೆ ಅವಕಾಶವಿಲ್ಲ.

**प्रकाशः** – यदपि "य एषः" इति प्रसिद्धत्वेन निर्देशादक्षिस्थत्वस्य शिवे प्रसिद्ध्यभावात् जीवादिरिति तदपि न, जीवेऽप्यप्रसिद्धेः । अन्तरधिकरणविषयवाक्य एवाक्षिस्थत्वस्य प्रसिद्धेश्च ।

यत्तु सर्वपापोद्गतत्वेन आदित्यान्तर्वर्त्येव ब्रह्म नाक्ष्यन्तर्वर्तीत्यधिकाशङ्केति, तदसारं, "यन्नाम तन्नाम" इत्यादिनाऽऽदित्याक्ष्यन्तस्स्थयोरेकधर्मकत्वस्य तत्र श्रुतावेवोक्तेः, सर्वपापोद्गतत्वस्याक्षिस्थेऽपि सिद्धेरिति दिक् ॥

"ಯ ಏಷಃ" ಎಂಬ ಶ್ರುತಿಯಿಂದ ಪ್ರಸಿದ್ಧನಾದವನನ್ನು ನಿರ್ದೇಶ ಮಾಡಿದ್ದರಿಂದ ಅಕ್ಷಿಸ್ಥನಾದವನು ಜೀವನಾಗುತ್ತಾನೆ ಹೊರತು ಶಿವನಾಗುವುದಿಲ್ಲವೆಂಬ ಹೇಳಿಕೆಯೂ ತಪ್ಪು. ಏಕೆಂದರೆ ಶಿವನು ಹೇಗೆ ಅಪ್ರಸಿದ್ಧನೋ? ಅದರಂತೆ ಜೀವನೂ ಸಹ ಅಪ್ರಸಿದ್ಧನೇ ಆಗಿದ್ದಾನೆ. ಮತ್ತು ಅಂತರಧಿಕರಣದ ವಿಷಯವಾಕ್ಯದಲ್ಲೇ ಶಿವನು ಅಕ್ಷಿಸ್ಥನೆಂದು ಪ್ರಸಿದ್ಧನಾಗಿದ್ದಾನೆ.

ಇನ್ನು ಸರ್ವಪಾಪರಹಿತನಾದ್ದರಿಂದ ಆದಿತ್ಯನಲ್ಲಿರುವ ಬ್ರಹ್ಮನೇ ಅಕ್ಷಿಯಲ್ಲಿರಲು ಸಾಧ್ಯವಿಲ್ಲವೆಂಬ ಅಧಿಕಾಶಂಕೆಗೂ ಅವಕಾಶವಿಲ್ಲ. ಏಕೆಂದರೆ 'ಯನ್ನಾಮ ತನ್ನಾಮ' ಇತ್ಯಾದಿಯಾಗಿ ಆದಿತ್ಯನಲ್ಲಿರುವವನಿಗೂ ಅಕ್ಷಿಯಲ್ಲಿರುವವನಿಗೂ ಒಂದೇ ಧರ್ಮಗಳನ್ನು ಅದೇ ಶ್ರುತಿಯಲ್ಲಿ ಹೇಳಲಾಗಿದೆ. ಸರ್ವಪಾಪರಾಹಿತ್ಯವೆಂಬ ಧರ್ಮವು ಆದಿತ್ಯಸ್ಥನಲ್ಲಿ ಹೇಳಿದಂತೆ ಅಕ್ಷಿಸ್ಥನಲ್ಲಿಯೂ ಸಿದ್ಧವಾಗಿದೆ. ಹೀಗೆ ಶೈವಮತದ ನಿರಾಕರಣೆಯನ್ನು ತಿಳಿಯಬೇಕು. ಇದು ಕೇವಲ ದಿಕ್‌ಪ್ರದರ್ಶನ.

ಅಂತರಾಧಿಕರಣ (೧-೨-೪)

**प्रकाशः – किञ्च ''स हरिः स परः परोवरीयान् यदिदं चक्षुषि सर्पिर्वा उदकं वा सिञ्चति वर्त्मनी एव गच्छति स वामनः स भामनः'' इत्यादिसमाख्याश्रुत्या,**

**यत्स्थानत्वादिदं चक्षुरसङ्गं सर्ववस्तुभिः ।**
**स वामनः .................. ॥**

**इत्यादिस्मृत्या शिवपरत्वसिद्धान्तस्य विरोधश्च ।**

**ज्ञानानन्दात्मकं पूर्णं परं ब्रह्म स्वयं हरिः ।**
**नैजानन्दबलोद्रेकः कमित्युक्तो मनीषिभिः ।**

**इत्यादिस्मृत्याऽस्य प्रकरणस्यापि वैष्णवत्वबोधिन्या विरोधश्च इति ।**

''ಸ ಹರಿಃ ಸ ಪರಃ ಪರೋವರೀಯಾನ್ ಯದಿದಂ ಚಕ್ಷುಷಿ ಸರ್ಪಿರ್ವಾ ಉದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ ಸ ವಾಮನಃ ಸ ಭಾಮನಃ'' ''ಪರೋವರೀಯನಾದ, ಶ್ರೇಷ್ಠನಾದ ಶ್ರೀಹರಿಯೇ ಚಕ್ಷುರಿಂದ್ರಿಯದಲ್ಲಿದ್ದಾನೆ. ಅವನ ಸನ್ನಿಧಾನದ ಬಲದಿಂದ ತುಪ್ಪ, ನೀರು ಮೊದಲಾದ ಯಾವುದೇ ಪದಾರ್ಥಗಳ ಸಂಪರ್ಕ ಚಕ್ಷುರಿಂದ್ರಿಯಕ್ಕೆ ಉಂಟಾಗುವುದಿಲ್ಲ''. ಇತ್ಯಾದಿಯಾಗಿ ಸಮಾಖ್ಯಾಶ್ರುತಿಯಲ್ಲಿ ಮತ್ತು ಏನೇ ಪದಾರ್ಥ ಕಣ್ಣಿಗೆ ಬಿದ್ದರೂ ಕಣ್ಣೀರಿನ ಮೂಲಕ ಹೊರಗೆ ಹೋಗುತ್ತದೆ. ಶ್ರೀಹರಿಯು ಎಡಗಣ್ಣಿನಲ್ಲಿ 'ವಾಮನ' ಎಂಬ ರೂಪದಿಂದ ಬಲಗಣ್ಣಿನನಲ್ಲಿ 'ಭಾಮನ' ಎಂಬ ರೂಪದಿಂದ ನೆಲೆಸಿದ್ದಾನೆ. ಇತ್ಯಾದಿ ಎಂಬ ಶ್ರುತಿಯಲ್ಲಿ ಶ್ರೀಹರಿಯೇ ಚಕ್ಷುರಂತಸ್ಥನೆಂದು ನಿರ್ಣಯವಾಗಿದೆ. ಇದರಿಂದ ಶಿವಪರತ್ವಸಿದ್ಧಾಂತಕ್ಕೆ ವಿರೋಧ ಬರುತ್ತದೆ.

ಯತ್‌ಸ್ಥಾನತ್ವಾದಿದಂ ಚಕ್ಷುರಸಂಗಂ ಸರ್ವವಸ್ತುಭಿಃ ।
ಸ ವಾಮನಃ .................... ॥

ಶ್ರೀಹರಿಯ ಸನ್ನಿಧಾನದಿಂದ ಚಕ್ಷುರಿಂದ್ರಿಯವು ಸಕಲ ವಸ್ತುಗಳಿಂದ ಅಸಂಗವಾಗಿದೆ. ಅಂತಹ 'ಶ್ರೀಹರಿಯೇ' 'ವಾಮನ' ಎನಿಸಿದ್ದಾನೆ.

ಜ್ಞಾನಾನಂದಾತ್ಮಕಂ ಪೂರ್ಣಂ ಪರಂ ಬ್ರಹ್ಮ ಸ್ವಯಂ ಹರಿಃ ।
ನೈಜಾನಂದಬಲೋದ್ರೇಕಃ ಕಮಿತ್ಯುಕ್ತೋ ಮನೀಷಿಭಿಃ ।

ಜ್ಞಾನಾನಂದಾತ್ಮಕನು ಪರಿಪೂರ್ಣನೂ ಶ್ರೇಷ್ಠನೂ ಆಗಿರುವ ಶ್ರೀಹರಿಯು ಸ್ವಾಭಾವಿಕವಾದ ಆನಂದ ಹಾಗೂ ಬಲಗಳ ಉದ್ರೇಕದಿಂದ 'ಕಂ' ಎಂಬ ಪದದಿಂದ ಪ್ರತಿಪಾದ್ಯನಾಗಿದ್ದಾನೆಂದು ಜ್ಞಾನಿಗಳು ಹೇಳುತ್ತಾರೆ. ಇತ್ಯಾದಿ ಸ್ಮೃತಿಯಿಂದ ಚಕ್ಷುಸ್ಥತ್ವವನ್ನು ಪ್ರತಿಪಾದಿಸುವ ಪ್ರಕರಣವು ವಿಷ್ಣುಪರವೆಂದು ತಿಳಿಯುತ್ತದೆ. ಇಂತಹ ವೈಷ್ಣವ ಪ್ರಕರಣದಿಂದ ರುದ್ರನು ಚಕ್ಷುರಂತರ್ಗತನಾಗಿದ್ದಾನೆಂಬ ನಿಮ್ಮ ಸಿದ್ಧಾಂತಕ್ಕೆ ವಿರೋಧ ಬರುತ್ತದೆ.

**प्रकाशः** – सूत्रे 'अन्तरः' इति निर्देशायोगः । 'उपपत्तेः' इति हेतुरप्ययुक्तः, ''रुद्रस्य शिर उत्पिपेष'' ''स्तुहि श्रुतं गर्तसदं युवानं'' इत्यादिना मृतिपारतन्त्र्यादेरप्युक्तत्वेनामृतत्वादेः रुद्रेऽनुपपत्तेः । ''तमेतास्सप्ताक्षितय उपतिष्ठन्ते या अक्षन्लोहिन्यो राजयस्ताभिरेनं रुद्रोऽन्वायत्तः'' इत्यादौ रुद्रस्याक्षिस्थोपासकत्वोक्तेश्चेति । एवं सूत्रान्तरेऽप्यनुपपत्तेरूहः कार्यः ।

ಮತ್ತು ಶೈವರ ಸೂತ್ರವ್ಯಾಖ್ಯಾನವೂ ಅಸಾಧುವಾಗಿದೆ. ಇವರಿಗೂ ಸಹ ಸೂತ್ರದಲ್ಲಿರುವ 'ಅಂತರ' ಎಂಬ ಪದಕ್ಕೆ ಸಾರ್ಥಕ್ಯವನ್ನು ನಿರೂಪಿಸಲಾಗದು. 'ಉಪಪತ್ತೇಃ' ಎಂಬ ಹೇತುವೇ ಅನುಪಪನ್ನವಾಗುತ್ತದೆ. ಏಕೆಂದರೆ ಈ ಹೇತುವು 'ಅಮೃತತ್ವ', 'ಅಭಯತ್ವ' ಮೊದಲಾದವುಗಳನ್ನು ಚಕ್ಷುರಂತಸ್ಥನಿಗೆ ಹೇಳುತ್ತಿದೆ. ಆದರೆ ''ರುದ್ರಸ್ಯ ಶಿರ ಉತ್ಪಿಪೇಷ'' ಇತ್ಯಾದಿ ಶ್ರುತಿಗಳಲ್ಲಿ 'ರುದ್ರನ ತಲೆ ತುಂಡಾಯಿತು' 'ಭಯಪಟ್ಟನು' ಮತ್ತು ಪರತಂತ್ರನಾಗಿದ್ದಾನೆಂದು ಹೇಳಲ್ಪಟ್ಟಿದೆ. ಆದ್ದರಿಂದ ''ಸ್ತುಹಿ ಶ್ರುತಂ ಗರ್ತಸದಂ ಯುವಾನಂ'' ಅಮೃತತ್ವಾದಿಗಳು ರುದ್ರನಲ್ಲಿ ಕೂಡುವುದಿಲ್ಲ.

ಅಷ್ಟೇ ಅಲ್ಲದೆ ''ತಮೇತಾಸ್ಸಪ್ತಾಕ್ಷಿತಯ ಉಪತಿಷ್ಠಂತೇ ಯಾ ಅಕ್ಷನ್ಲೋಹಿನ್ಯೋ ರಾಜಯಸ್ತಾಭಿರೇನಂ ರುದ್ರೋऽನ್ವಾಯತ್ತಃ'' ಎಂಬ ಶ್ರುತಿಯಲ್ಲಿ ಕಣ್ಣಿನಲ್ಲಿರುವ ಕೆಂಪು ಗೆರೆಗಳಲ್ಲಿ ರುದ್ರನು ನೆಲೆಸಿ ಚಕ್ಷುರಿಂದ್ರಿಯದಲ್ಲಿರುವ 'ವಿಶ್ವ' ಎಂಬ ಭಗವಂತನ ರೂಪವನ್ನು ಉಪಾಸನೆ ಮಾಡುತ್ತಾನೆಂದು ಶ್ರುತಿ ಹೇಳುತ್ತಿವೆ. ಹೀಗೆ ಚಕ್ಷುರಂತರ್ಗತನಾದ ಭಗವಂತನನ್ನು ಉಪಾಸನೆ ಮಾಡುವ ರುದ್ರನು ತಾನೇ ಚಕ್ಷುರಂತರ್ಗತನಾಗಲು ಸಾಧ್ಯವಿಲ್ಲ. ಇದೇರೀತಿಯಾಗಿ ಉಳಿದ ಸೂತ್ರಗಳಲ್ಲೂ ಸಹ ಅನುಪಪತ್ತಿಗಳನ್ನು ತಿಳಿದುಕೊಳ್ಳಬೇಕು.

**प्रकाशः** – यदपि ''अनवस्थितेः'' इत्यधिकरणान्तरमिति, तन्न, बाधकोक्त्याऽपेक्षितपरपक्षनिरासपरत्वेन पूर्वशेषत्वसम्भवेऽन्यथात्वायोगात् । ''ईशस्सर्वस्य जगतः'' इति ब्रह्मलिङ्गसत्त्वेन तेन प्राणाग्निहोत्रप्रकरणबाधसम्भवेन अङ्गुष्ठमात्रत्वस्य च ''हृद्यपेक्षया'' इत्यत्र वक्ष्यमाणत्वेन संशयायोगात् । ''विदेहि रुद्रो रुद्रियं महित्वं'' इति पराधीनपदप्राप्त्युक्त्या सर्वजगदीशत्वायोगाच्च । 'अङ्गुष्ठमात्रस्तल्लिङ्गात्' इति निर्देष्टव्ये परमतप्रतिक्षेपरूपतया प्रधानसूत्रनिर्देशायोगाच्चेत्यादि ध्येयम् ।।

ಇನ್ನು ಶೈವರು ''ಅನವಸ್ಥಿತೇಃ ಅಸಂಭವಾಚ್ಚ'' ಎಂಬ ಕೊನೆಯ ಸೂತ್ರವನ್ನು ಮತ್ತೊಂದು ಅಧಿಕರಣವನ್ನಾಗಿ ಪರಿಗಣಿಸುತ್ತಾರೆ. ಆದರೆ ಪರಪಕ್ಷದಲ್ಲಿ ಬಾಧಕವನ್ನು ಹೇಳುವುದಕ್ಕೋಸ್ಕರ ಈ ಸೂತ್ರವು ಹೊರಟಿದೆಯೆಂದೇ ವ್ಯಾಖ್ಯಾನಿಸಲು ಬರುವಾಗ, ಮತ್ತೊಂದು ಅಧಿಕರಣವನ್ನಾಗಿ ವಿಂಗಡಿಸುವುದರಲ್ಲಿ ಅರ್ಥವಿಲ್ಲ. ಮತ್ತು ಸೂತ್ರಕ್ಕೆ ಯಾವವಾಕ್ಯವನ್ನು ವಿಷಯವನ್ನಾಗಿ ಹೇಳುತ್ತಾರೋ. ಆ ವಾಕ್ಯದಲ್ಲಿ

'ಈಶಸ್ಸರ್ವಸ್ಯ ಜಗತಃ'' ಎಂಬ ಬ್ರಹ್ಮನ ಲಿಂಗವೇ ಕೇಳಿಸುತ್ತಿದೆ. ಇದರಿಂದ 'ಪ್ರಾಣಾಗ್ನಿಹೋತ್ರ' ಪ್ರಕರಣಕ್ಕೆ ಬಾಧ ಬರುತ್ತದೆ. 'ಅಂಗುಷ್ಠಮಾತ್ರತ್ವಸ್ಯ' ಎಂಬ ಒಂದೇ ಲಿಂಗವು ಸಂಶಯಕ್ಕೆ ಕಾರಣವಾಗುವುದಿಲ್ಲ. ''ಹೃದ್ಯಪೇಕ್ಷಯಾತ್'' ಎಂಬ ಮುಂದೆ ಹೇಳುವ ಸೂತ್ರದಂತೆ ಪರಮಾತ್ಮನಲ್ಲೇ ಅಂಗುಷ್ಠಪರಿಮಾಣವು ಉಪಪನ್ನವಾಗುತ್ತದೆ.

''ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ'' ಎಂಬಲ್ಲಿ ರುದ್ರನಿಗೆ ಪರಾಧೀನವಾದ ಪದವು ಪ್ರಾಪ್ತವಾಗುತ್ತದೆಂದು ಹೇಳಿರುವುದರಿಂದ ಸಕಲ ಜಗತ್ತಿಗೆ ಈಶ್ವರನಾಗಲು ಸಾಧ್ಯವಿಲ್ಲ. ಅಷ್ಟೇ ಅಲ್ಲದೆ ಮೊದಲು ಸ್ವಪಕ್ಷಸಾಧಕ ಪ್ರಮಾಣವನ್ನು ಹೇಳಬೇಕಾದ್ದರಿಂದ 'ಅಂಗುಷ್ಠಮಾತ್ರಸ್ತಲ್ಲಿಂಗಾತ್'' ಎಂದೇ ಸೂತ್ರವಿರಬೇಕು. ಹೊರತು ಪ್ರಥಮಪ್ರಾಪ್ತವಾದ ಪ್ರಧಾನಸೂತ್ರದಲ್ಲೇ ಪರಮತಪ್ರತಿಕ್ಷೇಪವನ್ನು ಮಾಡುವುದು ಸರಿಯಲ್ಲವೆಂದು ತಿಳಿಯಬೇಕು.

**ಗುರುರಾಜಿಯಮ್** – यथाऽन्तर उपपत्तेरित्यत्रोपपत्तेरित्यनेनैवान्यत्रानुपपत्तेरुक्तत्वादऽन्यत्रानुपपत्तेः परस्यानवस्थितेरिति पञ्चमसूत्रवैयर्थ्यं एवमेतज्जातीयके द्रष्टव्य इत्यर्थः ।

## ಸಾರ

ಅದ್ವೈತಿಗಳ ಸಿದ್ಧಾಂತರಚನೆಯೂ ಸರಿಯಿಲ್ಲ. ಅಕ್ಷಿಸ್ಥನಾದವನು ಕಾರ್ಯಬ್ರಹ್ಮನಾದ ಚತುರ್ಮುಖನೆಂದು ಹೇಳಿದರೆ ಅವನಲ್ಲಿ 'ಅಮೃತತ್ವ', 'ಅಭಯತ್ವ' ಮೊದಲಾದ ಧರ್ಮಗಳು ಬರುವುದಿಲ್ಲ. ಅಕಾರ್ಯಬ್ರಹ್ಮನಾದರೆ ಅವನ ಉಪಾಸನೆಯಿಂದ ಅರ್ಚಿರಾದಿಮಾರ್ಗಗಮನವನ್ನು ಹೇಳಿದ್ದು ಅಯುಕ್ತವಾಗುತ್ತದೆ. ಏಕೆಂದರೆ ಕಾರ್ಯಬ್ರಹ್ಮನನ್ನು ಉಪಾಸನೆ ಮಾಡುವವರು ಮಾತ್ರ ಅರ್ಚಿರಾದಿಮಾರ್ಗದಲ್ಲಿ ಹೋಗುತ್ತಾರೆ. ಇದರಂತೆ ಅದ್ವೈತಿಗಳ ಸೂತ್ರ ವ್ಯಾಖ್ಯಾನವೂ ಸಮಂಜಸವಲ್ಲ.

೧. ''ಅಂತರ ಉಪಪತ್ತೇಃ'' ಎಂಬಲ್ಲಿ 'ರ' ಶಬ್ದವು ವ್ಯರ್ಥವಾಗುತ್ತದೆ. 'ಅಮೃತತ್ವಾದಿ' ಉಪಪತ್ತಿಗಳು ಕಾರ್ಯಬ್ರಹ್ಮನಲ್ಲಾಗಲೀ ಅಕಾರ್ಯಬ್ರಹ್ಮನಲ್ಲಾಗಲೀ ಕೂಡುವುದಿಲ್ಲ.

೨. ''ಸ್ಥಾನಾದಿವ್ಯಪದೇಶಾಚ್ಚ'' ಎಲ್ಲೆಡೆ ವ್ಯಾಪ್ತನಾದ ಪರಬ್ರಹ್ಮನು ಅಲ್ಪಸ್ಥಾನದಲ್ಲಿದ್ದಾನೆಂದು ''ಅರ್ಭಕೌಕಸ್ತ್ವಾತ್'' ಎಂಬ ಸೂತ್ರದಿಂದಲೇ ಸಮರ್ಥಿಸಿದ್ದಾಗಿದೆ. ಅದೇ ವಿಷಯವನ್ನು ಪ್ರತಿಪಾದಿಸುವ ಈ ಸೂತ್ರಕ್ಕೆ ಸಾರ್ಥಕ್ಯವಿಲ್ಲ.

೩. ''ಸುಖವಿಶಿಷ್ಟಾಭಿಧಾನಾದೇವಚ'' ಸುಖವಿಶಿಷ್ಟ ಶಬ್ದಕ್ಕೆ ಸುಖ ಸಂಬಂಧವೆಂಬರ್ಥವನ್ನು ಹೇಳಿದರೆ ಜೀವನಲ್ಲಿ ಹೇತು ವ್ಯಭಿಚರಿತವಾಗುತ್ತದೆ. ಅಪರಿಚ್ಛಿನ್ನತ್ವವೆಂಬ ಶ್ರೇಷ್ಠಸುಖದ ಸಂಬಂಧವನ್ನು ವಿವಕ್ಷಿಸಿದರೆ ಸುಖಸ್ವರೂಪನಾದ ನಿಮ್ಮ ಬ್ರಹ್ಮನಲ್ಲಿ ಸುಖಸಂಬಂಧ ಬರುವುದಿಲ್ಲ. ವಿಶಿಷ್ಟಬ್ರಹ್ಮನಲ್ಲಿ ಸುಖಸಂಬಂಧವಿದ್ದರೂ ಸುಖವು ಅಪರಿಚ್ಛಿನ್ನವಾಗಿಲ್ಲ.

೪. ''ಶ್ರುತೋಪನಿಷತ್ಕಭಿಧಾನಾತ್''ಅರ್ಚಿರಾದಿ ಮಾರ್ಗವು ಬ್ರಹ್ಮನನ್ನು ಮಿಥ್ಯಾಭೂತವಾಗಿ ಯಾರು ಉಪಾಸನೆ ಮಾಡುತ್ತಾನೋ ಅಂತಹವನಿಗೆ ಮಾತ್ರ ದೊರೆಯುತ್ತದೆಂಬುದು ನಿಮ್ಮ ಸಿದ್ಧಾಂತ. ನಿಜವಾದ ಬ್ರಹ್ಮಜ್ಞಾನಿಗೆ ಈ ಯಾವ ಮಾರ್ಗಗಳೂ ಸಹ ದೊರೆಯುವುದಿಲ್ಲ. ಆದ್ದರಿಂದ ಅರ್ಚಿರಾದಿಮಾರ್ಗ ಗಮನಕ್ಕೆ ಪರಬ್ರಹ್ಮನು ವಿಷಯನಾಗಲು ಸಾಧ್ಯವಿಲ್ಲದ ಕಾರಣ ಅಕ್ಷಿಸ್ಥನು ಬ್ರಹ್ಮನಾಗುವುದಿಲ್ಲ. ಮತ್ತು 'ಶ್ರುತೋಪನಿಷತ್ಕಸ್ಯ' ಎಂದು ಪದವಿಭಾಗ ಮಾಡುವುದಾದರೆ ಸೂತ್ರದಲ್ಲಿರುವ 'ಕ' ಶಬ್ದವು ವ್ಯರ್ಥವಾಗುತ್ತದೆ. ಸೂತ್ರದಲ್ಲಿರುವ 'ಗತಿ' ಶಬ್ದಕ್ಕೆ 'ಮಾರ್ಗ' ಎಂಬರ್ಥವೂ ಅಸ್ವರಸವಾಗಿದೆ.

೫. ''ಅನವಸ್ಥಿತೇರಸಂಭವಾಚ್ಚ ನೇತರಃ'' ಅನವಸ್ಥಾಶಬ್ದಕ್ಕೆ ಅಪ್ರಮಾಣಕವಾದ ಅನಂತ ವ್ಯಕ್ತಿ ಕಲ್ಪನೆಯೆಂಬ ದೋಷವು ಅರ್ಥವೆಂದು ಎಲ್ಲರೂ ಒಪ್ಪಿದ್ದಾರೆ. ಇದನ್ನು ಬಿಟ್ಟು ಚಕ್ಷುರಿಂದ್ರಿಯದಲ್ಲಿ ಛಾಯಾಪುರುಷನು ಅವಸ್ಥಿತನಾಗಿಲ್ಲ ಎಂಬರ್ಥವನ್ನು ಹೇಳುವುದು ತಪ್ಪಾಗುತ್ತದೆ. ಮತ್ತು ಸದಾಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳುವುದು ತಪ್ಪು. ಅಷ್ಟೇ ಅಲ್ಲದೆ 'ಉಪಪತ್ತೇಃ' ಎಂಬ ಮೊದಲನೇ ಸೂತ್ರದಿಂದಲೇ ಛಾಯಾಪುರುಷಾದಿಗಳಲ್ಲಿ ಅಮೃತತ್ವಾದಿಗಳು ಇರುವುದಿಲ್ಲವೆಂದು ತಿಳಿಯಲು ಬರುವಾಗ ಪುನಃ ಅದೇ ವಿಚಾರಕ್ಕಾಗಿ ಕೊನೆಯ ಸೂತ್ರ ಹೊರಡುವುದು ವ್ಯರ್ಥ. ಈ ಎಲ್ಲಾ ಕಾರಣಗಳಿಂದ ಅದ್ವೈತಿಗಳ ಸೂತ್ರವ್ಯಾಖ್ಯಾನವು ಅಸಾಧುವಾಗಿದೆ.

ರಾಮಾನುಜರೂ ಸಹ ಅದ್ವೈತಮತದ ಸಿದ್ಧಾಂತಕ್ಕೆ ಜೋತುಬಿದ್ದಿದ್ದಾರೆ. ಅವರನ್ನು ಪ್ರತ್ಯೇಕವಾಗಿ ನಿರಾಕರಿಸಬೇಕಿಲ್ಲ. ಇನ್ನು ರಾಮಾನುಜರ ಮತದಲ್ಲಿ ಹೊಸವಿಚಾರವೆಂದರೆ 'ಅತ ಏವ ಚ ಸ ಬ್ರಹ್ಮ' ಎಂಬ ಪ್ರಕ್ಷಿಪ್ತವಾದ ಸೂತ್ರವನ್ನು ನಾಲ್ಕನೆಯ ಸೂತ್ರವೆಂದು ಪರಿಗಣಿಸುತ್ತಾರೆ. ಆದರೆ ಯಾವರೀತಿಯಾಗಿ ಈಕ್ಷತ್ಯಧಿಕರಣದಲ್ಲಿ 'ಪ್ರತಿಜ್ಞಾವಿರೋಧಾತ್' ಎಂಬ ಸೂತ್ರವನ್ನು ಪ್ರಕ್ಷಿಪ್ತವಾದ್ದರಿಂದ ಉಪೇಕ್ಷಿಸಲಾಗಿತ್ತೋ ಆದರಂತೆ ಇದನ್ನೂ ಸಹ ಉಪೇಕ್ಷಿಸಬೇಕು.

ಅದ್ವೈತಿಗಳು ಏನೇ ವ್ಯಾಖ್ಯಾನಿಸಿದರೂ ಎಲ್ಲಾ ಅಧಿಕರಣಗಳಂತೆ ಇಲ್ಲಿಯೂ ಸಹ ಜೀವಬ್ರಹ್ಮಭೇದವನ್ನೇ ಒಪ್ಪಿಕೊಂಡಂತಾಯಿತು. ಚಕ್ಷುರಿಂದ್ರಿಯದಲ್ಲಿ ಜೀವನು ನೆಲೆಸಿಲ್ಲ ಬ್ರಹ್ಮನು ನೆಲೆಸಿದ್ದಾನೆಂದು ಅವರು ಸಾಧಿಸಿದ ಮೇಲೆ ಪುನಃ ಜೀವಬ್ರಹ್ಮಭೇದವನ್ನು ಬಾಯಿಬಿಟ್ಟು ಹೇಳಬೇಕಾಗಿಲ್ಲ.



## ಅಂತರಾಧಿಕರಣ (೧-೨-೪)

तात्पर्यचन्द्रिका

टीकाक्षरार्थस्तु – अग्नेरेवादित्यस्थत्वमुच्यतेऽत एवेति । अग्नेरादित्यस्थत्वस्योच्यमानत्वादेवेत्यर्थः । अनेन, "अतोऽक्ष्यादित्ययोरैक्यात्" इति भाष्यस्थोऽतश्शब्दः सन्निहितेन 'ऐक्यात्' इत्यनेन नान्वेति, प्रकृतस्य, 'अतः' इत्यनेन परामृष्टस्यादित्यस्थत्वस्यैक्ये हेतुत्वायोगात्, किन्तु व्यवहितेन "अत्राप्यग्निरेवोच्यते" इत्यनेन अन्वेतीत्युक्तं भवति ।

वक्रसङ्गत्याऽधिकरणारम्भ इति । यद्यपि विष्णुज्ञानान्मोक्ष इत्युक्तं, तद्युक्तं, "तद्यथा" इत्यत्र अक्षिस्थस्याग्नेर्ज्ञानान्मोक्षश्रवणादिति ऋजुसङ्गत्यैवाधिकरणमारभ्य अग्नेरेवाक्षिस्थत्वमिति पूर्वपक्षे आदित्यस्थत्वं हेतूकर्तुं शक्यम् । पूर्वपक्षे तस्य हेतूकरणं वक्रसङ्गत्याऽधिकरणारम्भेऽपि समम् ।

तथाऽपि यथा सिद्धान्ते आदित्यदेवताया आदित्यमण्डलस्थत्वेऽपि अमृत्वादि-हेतुभिरिदमक्षिस्थत्वं ब्रह्मण एव, तथा पूर्वपक्षोऽग्नेरादित्यमण्डलस्थत्वेऽप्यक्षिस्थत्वं ब्रह्मण एवेत्यादित्यस्थत्वस्य विष्णौ समन्वयो न सिध्येत् ।

आदित्यस्थो विष्णुः, ततश्चार्थादक्षिस्थोऽपि स एवेत्यानन्दमयाधिकरणोक्त-मादित्यदेवतास्थत्वादिकमयुक्तं,

अग्नेरेवाक्ष्यादित्यदेवतास्थत्वादिति वक्रसङ्गत्याऽधिकरणारम्भे तु, पूर्वोक्तस्य विष्णावादित्यदेवतास्थत्वस्येह पूर्वपक्षे आक्षेपात्तन्निरासस्य च विष्णावेवाऽऽदित्यस्थ-त्वमिति सिद्धान्ताभिप्रायं विना असिद्धेः तत्समन्वयः सिध्यतीति भावः ।

यद्वा – आदित्यस्थत्वस्य पूर्वपक्षे हेतुमात्रत्वेनोक्तौ पूर्वपक्षहेतुरपि सिद्धान्तिना समन्वेतव्य इति नियमाभावान्न तत्समन्वयसिद्धिः । उक्तादित्यस्थत्वाक्षेपमुखेन तु

पूर्वपक्षे, सिद्धान्ते तत्समन्वयोऽपि कर्तव्य इति "य एष आदित्ये पुरुषो दृश्यते" इति वाक्यमपि ब्रह्मणि समन्वितं भवतीति भावः ।

अग्नीनामिति बहुवचनमिति । भाष्ये बहुवचनादिकम्, "अथ हैनं गार्हपत्योऽनुशशास य एष आदित्ये पुरुषो दृश्यते सोऽहमस्मि" "अथ हैनमन्वाहार्यपचनोऽनुशशासाय एव चन्द्रमसि पुरुषो दृश्यते सोऽहमस्मि" "अथ हैनमाहवनीयोऽनुशशास य एष विद्युति पुरुषो दृश्यते सोऽहमस्मि" इति श्रवणात्, गार्हपत्यादीनां त्रयाणां क्रमेणादित्यादित्रितयस्थत्वम्, तथा च प्रसिद्धगार्हपत्यस्यैवाक्षिस्थत्वमिति प्रदर्शनार्थं,

नतु त्रयाणामक्षिस्थत्वप्रदर्शनार्थमित्यर्थः । ह्वयाम्यग्निमित्यादाविवेति । यथा "ह्वयाम्यग्निं प्रथमं स्वस्तये" इत्यत्राग्नेरुपक्रमेऽपि "सवितारमूतये" "हिरण्ययेन सविता रथेन" इत्यादिसवितृश्रुतिलिङ्गादिना तत्प्रकरणं सावित्रम्, अत एवोक्तमनुक्रमणिकायां – "ह्वयाम्येकादश सावित्रम्" इति, तथाऽत्रापि ब्रह्मण उपक्रमेऽपि "अस्मद्धिया" इत्यग्नेरुक्तत्वात् अग्नीनामेवेदं प्रकरणमित्यर्थः । तत्तत्प्रेरकत्वेनेति । श्रुतौ वामनिभामनिशब्दाभ्यां स्त्रीपुरुषरूपसर्वप्रेरकताया उक्तत्वादिति भावः ।

उक्तं हि तत्त्वप्रदीपे - "वामं सौन्दर्यं भामं तेजः तत्प्रधानत्वात् स्त्रीपुरुषा वामभामशब्दशब्दिताः, तन्नेता वामनिर्भामनिः" इति । दिव्यदृष्टिगोचर इति । ततश्च श्रुतौ "य एषोऽन्तरक्षिणि" "पुरुषो दृश्यते" इति दृश्यत्वायुक्तिर्युक्तेति भावः ॥

॥ इति श्रीब्रह्मण्यतीर्थपूज्यश्रीपादशिष्यव्यासतीर्थविरचिता
तात्पर्यचन्द्रिकायां अन्तराधिकरणं सम्पूर्णम् ॥

ಅನುವಾದ - ಟೀಕೆಯ ಕಠಿಣಪದಾರ್ಥ ಹೀಗಿದೆ - ಟೀಕೆಯಲ್ಲಿ ''ಅಗ್ನೇರೇವಾದಿತ್ಯಸ್ಥತ್ವ-ಮುಚ್ಯತೇऽತ ಏವ'' ಎಂದು ಹೇಳಿದ್ದಾರೆ. ಇಲ್ಲಿರುವ 'ಅತ ಏವ' ಎಂಬ ಪದಕ್ಕೆ 'ಅಗ್ನಿಗೆ ಆದಿತ್ಯಸ್ಥತ್ವವನ್ನು ಹೇಳಿದ್ದರಿಂದಲೇ' ಎಂದರ್ಥ. ಹೀಗೆ ಹೇಳಿದ್ದರಿಂದ ''ಅತಃ ಅಕ್ಷ್ಯಾದಿತ್ಯಯೋರೈಕ್ಯಾತ್'' ಎಂದು ಭಾಷ್ಯದಲ್ಲಿರುವ 'ಅತಃ' ಶಬ್ದಕ್ಕೆ ಸನ್ನಿಹಿತವಾದ 'ಐಕ್ಯಾತ್'' ಎಂಬಲ್ಲಿ ಅನ್ವಯ ಮಾಡಬಾರದು. ಏಕೆಂದರೆ ಪ್ರಕೃತವಾದ 'ಅತಃ' ಎಂಬುದರಿಂದ ಪರಾಮರ್ಶಿಸಲ್ಪಟ್ಟ ಆದಿತ್ಯಸ್ಥತ್ವವು ಐಕ್ಯವಿಷಯದಲ್ಲಿ ಹೇತುವಾಗುವುದಿಲ್ಲ. ಹೊರತಾಗಿ ವ್ಯವಹಿತವಾದ 'ಅತ್ರಾಪ್ಯಗ್ನಿರೇವೋಚ್ಯತೇ' ಎಂಬುದಾಗಿ ಅನ್ವಯ ಮಾಡಬೇಕು. ಆದ್ದರಿಂದ ಯಾವ ಕಾರಣದಿಂದ ಅಗ್ನಿ ಮೊದಲಾದವರಿಗೆ ಆದಿತ್ಯಸ್ಥತ್ವವು ಹೇಳಲ್ಪಟ್ಟಿದೆಯೋ? ಆ ಕಾರಣದಿಂದ 'ಯ ಏಷಃ' ಎಂಬ ವಾಕ್ಯದಲ್ಲೂ ಸಹ ಅಗ್ನಿಯೇ ಪ್ರತಿಪಾದ್ಯನಾಗುತ್ತಾನೆಂದು ಹೇಳಿದಂತಾಗುತ್ತದೆ. ಅಗ್ನಿಯು ಆದಿತ್ಯಸ್ಥನಾದ ಮಾತ್ರದಿಂದ ಈ ಶ್ರುತಿಯಲ್ಲಿ ಅಗ್ನಿಯೇ ಏಕೆ ಪ್ರತಿಪಾದ್ಯನಾಗುತ್ತಾನೆ ? ಎಂಬ ಪ್ರಶ್ನೆಗೆ ''ಅಕ್ಷ್ಯಾದಿತ್ಯಯೋರೈಕ್ಯಾತ್'' ಅಕ್ಷಿ ಹಾಗೂ ಆದಿತ್ಯರಿಗೆ ಐಕ್ಯವಿರುವುದರಿಂದ ಎಂದು ಉತ್ತರಿಸಿದ್ದಾರೆಂದು ತಿಳಿಯಬೇಕು.

ವಸ್ತುತಃ ವಿಷ್ಣುಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳಿದ್ದಾರೆ. ಇದು ತಪ್ಪು. ಏಕೆಂದರೆ ''ತದ್ಯಥಾ'' ಎಂಬ ಶ್ರುತಿಯಲ್ಲಿ ಚಕ್ಷುರಿಂದ್ರಿಯದಲ್ಲಿರುವ ಅಗ್ನಿಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳಿದ್ದಾರೆ. ಇದರಿಂದ ಋಜುಸಂಗತಿಯನ್ನು ಹೇಳಿದಂತಾಗುತ್ತದೆ. ಹೀಗೆ ಋಜುಸಂಗತಿಯ ಮುಖಾಂತರವೇ ಅಧಿಕರಣವನ್ನು ಪ್ರಾರಂಭಿಸಿ ಅಕ್ಷಿಸ್ಥನಾದವನು ಅಗ್ನಿಯೇ ಆಗಿದ್ದಾನೆಂದು ಪೂರ್ವಪಕ್ಷವು ಮಾಡಬಹುದು. ಈ ಪೂರ್ವಪಕ್ಷಕ್ಕೆ ಆದಿತ್ಯಸ್ಥತ್ವವನ್ನು ಹೇತುವನ್ನಾಗಿ ಮಾಡಬಹುದು. ಇದನ್ನು ಬಿಟ್ಟು ವಕ್ರಸಂಗತಿಯನ್ನು ಆಶ್ರಯಿಸಿ ಅಧಿಕರಣವನ್ನು ಆರಂಭಿಸಿದರೂ ಸಹ ಆದಿತ್ಯಸ್ಥತ್ವವನ್ನು ಹೇತುವನ್ನಾಗಿ ಮಾಡಲೇಬೇಕೆಂಬುದು ಸಮಾನ.

ನಮ್ಮ ಸಿದ್ಧಾಂತದಲ್ಲಿ ಆದಿತ್ಯಮಂಡಲಸ್ಥತ್ವವು ಸೂರ್ಯದೇವತೆಗೆ ಇದೆಯೆಂದು ಒಪ್ಪಿದ್ದೇವೆ. ಆದರೂ ಸಹ ಅಮೃತತ್ವಾದಿ ಹೇತುಗಳಿಂದ ಅಕ್ಷಿಸ್ಥನಾದವನು ಬ್ರಹ್ಮನೇ ಆಗಿದ್ದಾನೆಂದು ಹೇಳುತ್ತೇವೆ. ಆದ್ದರಿಂದ ಬ್ರಹ್ಮನಿಗೆ ಅಕ್ಷಿಸ್ಥತ್ವವು ಸಿದ್ಧವಾಗುತ್ತದೆ ಹೊರತು ಆದಿತ್ಯಸ್ಥಿತತ್ವವು ಸಿದ್ಧವಾಗುವುದಿಲ್ಲ. ಆದರಂತೆ ಪೂರ್ವಪಕ್ಷಿಯ ಪ್ರಕಾರ ಅಗ್ನಿಯು ಆದಿತ್ಯಮಂಡಲಸ್ಥಿತನಾಗಲಿ; ಆದರೆ ಅಕ್ಷಿಸ್ಥನಾದವನು ಬ್ರಹ್ಮನೇ ಆಗುತ್ತಾನೆ. ಆದ್ದರಿಂದ ಆದಿತ್ಯಸ್ಥತ್ವವೆಂಬ ಲಿಂಗವು ವಿಷ್ಣುವಿನಲ್ಲಿ ಸಮನ್ವಯವೇ ಆಗುವುದಿಲ್ಲ. ಆದ್ದರಿಂದ ನೇರವಾದ ಸಂಗತಿಯನ್ನು ಹೇಳಬಾರದು. ಹೊರತು ವಕ್ರವಾದ ಸಂಗತಿಯನ್ನೇ ಹೇಳಬೇಕು.

ಆದಿತ್ಯಸ್ಥನಾದವನು ವಿಷ್ಣುವಾದರೆ ಅರ್ಥಾತ್ ಅಕ್ಷಿಸ್ಥನಾದವನೂ ಸಹ ವಿಷ್ಣುವೇ ಆಗುತ್ತಾನೆಂದು ಆನಂದಮಯಾಧಿಕರಣದಲ್ಲಿ ಹೇಳಲ್ಪಟ್ಟಿದೆ. ಅಲ್ಲಿ ಹೇಳುತ್ತಿರುವ ಆದಿತ್ಯದೇವತಾಸ್ಥತ್ವಾದಿಗಳು ಅಯುಕ್ತವಾಗಿವೆಯೆಂದು ಇಲ್ಲಿ ಪೂರ್ವಪಕ್ಷಿಯು ಆಕ್ಷೇಪಿಸುತ್ತಿದ್ದಾನೆ. ಏಕೆಂದರೆ ಅಕ್ಷಿದೇವತಾಸ್ಥನು ಆದಿತ್ಯದೇವತಾಸ್ಥನು ಅಗ್ನಿಯೇ ಆಗಿದ್ದಾನೆಂಬ ವಕ್ರಸಂಗತಿಯನ್ನು ಹೇಳುತ್ತಿದ್ದಾನೆ. ಹೀಗೆ ಅಗ್ನಿಗೆ ಎರಡೂ ಧರ್ಮಗಳನ್ನು ಹೇಳುವುದೇ ವಕ್ರಸಂಗತಿಯೆನಿಸುತ್ತದೆ. ಹೀಗೆ ಅಧಿಕರಣವನ್ನು ಪ್ರಾರಂಭಿಸಿದಾಗ ಆನಂದಮಯಾಧಿಕರಣದಲ್ಲಿ ಹೇಳಲ್ಪಟ್ಟ ವಿಷ್ಣುವಿಗೆ ಆದಿತ್ಯದೇವತಾಸ್ಥತ್ವವು ಈ ಅಧಿಕರಣದ ಪೂರ್ವಪಕ್ಷದಲ್ಲಿ ಆಕ್ಷೇಪಿಸಿದಂತಾಗುತ್ತದೆ. ಅದನ್ನು ನಿರಾಸಮಾಡುವುದಕ್ಕಾಗಿ ವಿಷ್ಣುವೇ ಆದಿತ್ಯಸ್ಥನಾಗಿದ್ದಾನೆಂದು ಸಿದ್ಧಾಂತದ ಅಭಿಪ್ರಾಯವಿಲ್ಲದೆ ಸಿದ್ಧವಾಗುವುದಿಲ್ಲ. ಆದ್ದರಿಂದ ವಿಷ್ಣುವಿಗೆ ಕೇವಲ ಅಕ್ಷಿಸ್ಥನೆಂಬ ಧರ್ಮವನ್ನೇ ಸಮನ್ವಯ ಮಾಡದೆ ಆದಿತ್ಯಸ್ಥತ್ವದ ಧರ್ಮವನ್ನು ಸಮನ್ವಯ ಮಾಡಲು ಬರುವುದಿಲ್ಲ.

ಅಥವಾ ಪೂರ್ವಪಕ್ಷದಲ್ಲಿ ಆದಿತ್ಯಸ್ಥತ್ವವನ್ನು ಕೇವಲ ಹೇತುವನ್ನಾಗಿ ಹೇಳಲಾಗಿದೆ. ಪೂರ್ವಪಕ್ಷಿಯು ಯಾವುದನ್ನೆಲ್ಲಾ ಹೇತುವನ್ನಾಗಿ ಮಾಡುತ್ತಾನೋ ಅದನ್ನೆಲ್ಲಾ ಸಿದ್ಧಾಂತದಲ್ಲಿ ಸಮನ್ವಯ ಮಾಡಬೇಕೆಂಬ ನಿಯಮವಿಲ್ಲ. ಆದ್ದರಿಂದ ಆದಿತ್ಯಸ್ಥತ್ವದ ಸಮನ್ವಯವು ಸಿದ್ಧವಾಗುವುದಿಲ್ಲ. ಆದರೆ ಪೂರ್ವಪಕ್ಷಿಯು ಯಾವುದನ್ನು ಆಕ್ಷೇಪಿಸುತ್ತಾನೋ? ಅದನ್ನು ಸಮನ್ವಯ ಮಾಡಲೇಬೇಕು. ಅಕ್ಷಿಸ್ಥತ್ವವು ವಿಷ್ಣುವಿನಲ್ಲಿ ಕೂಡದ ಕಾರಣ ಆದಿತ್ಯಸ್ಥತ್ವವೂ ಸಹ ವಿಷ್ಣುವಿನಲ್ಲಿ ಬರುವುದಿಲ್ಲವೆಂದು ಪೂರ್ವಪಕ್ಷಿಯು ಆಕ್ಷೇಪ ಮಾಡಿದರೆ ಆವಾಗ ಸಿದ್ಧಾಂತದಲ್ಲಿ ಆದಿತ್ಯಸ್ಥತ್ವದ ಸಮನ್ವಯವನ್ನು ಮಾಡಲೇಬೇಕು. ಆದ್ದರಿಂದ 'ಯ ಏಷ ಆದಿತ್ಯೇ ಪುರುಷಃ ದೃಶ್ಯತೇ'' ಎಂಬ ವಾಕ್ಯವೂ ಸಹ ಬ್ರಹ್ಮನಲ್ಲಿ ಸಮನ್ವಯವಾಗುತ್ತದೆಂದು ತಿಳಿಯಬೇಕು.

ಟೀಕೆಯಲ್ಲಿ 'ಅಗ್ನೀನಾಮಿತಿ ಬಹುವಚನಮಿತಿ' ಎಂಬ ಮಾತಿದೆ. ಇದಕ್ಕೆ ಹೀಗರ್ಥ - ಭಾಷ್ಯದಲ್ಲಿ ಬಹುವಚನ ಮತ್ತು ಆದಿಪದದಿಂದ ''ಅಥ ಹೈನಂ ಗಾರ್ಹಪತ್ಯೋಽನುಶಶಾಸಾ ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ'' ''ಅಥ ಹೈನಮನ್ವಾಹಾರ್ಯಪಚನೋಽನುಶಶಾಸ ಯ ಏಷ ಚಂದ್ರಮಸಿ ಪುರುಷೋ ದೃಶ್ಯತೇ ಸೋಽಹಮಸ್ಮಿ'' ''ಅಥ ಹೈನಮಾಹವನೀಯೋಽನುಶಶಾಸ ಯ ಏಷ ವಿದ್ಯುತೋ ಪುರುಷೋ ದೃಶ್ಯತೇ ಸೋಹಮಸ್ಮಿ'' ಎಂಬ ಶ್ರುತಿಯಲ್ಲಿ ಅನೇಕ ಬಾರಿ ಅಗ್ನಿಶಬ್ದಗಳು ಕೇಳಿಸುತ್ತಿವೆ. ಈ ಶ್ರುತಿಯಿಂದ ಗಾರ್ಹಪತ್ಯಾಗ್ನಿಯು ಆದಿತ್ಯನಲ್ಲಿದ್ದಾನೆಂದು 'ಅನ್ವಹಾರ್ಯಪಚನ' ಎಂಬ ಅಗ್ನಿಯು ಚಂದ್ರನಲ್ಲಿದ್ದಾನೆಂದು 'ಆಹವನೀಯ' ಎಂಬ ಅಗ್ನಿಯು 'ವಿದ್ಯುತ್'ನಲ್ಲಿದ್ದಾನೆಂದು ತಿಳಿಯುತ್ತದೆ. ಇಲ್ಲಿ ಮೂರು ಅಗ್ನಿಗಳಿಗೂ ಚಕ್ಷುರಿಂದ್ರಿಯಸ್ಥತ್ವವು ತಿಳಿಯುವುದಿಲ್ಲ. ಹೊರತಾಗಿ ಯಾವ ಗಾರ್ಹಪತ್ಯಾಗ್ನಿಯು ಆದಿತ್ಯನಲ್ಲಿದ್ದಾನೋ ಅವನೇ ಚಕ್ಷುರಿಂದ್ರಿಯಲ್ಲಿದ್ದಾನೆಂದು ತಿಳಿಯುತ್ತದೆ. ಈ ಶ್ರುತಿಯಲ್ಲಿ ಅನೇಕ ಬಾರಿ ಅಗ್ನಿಶಬ್ದವು ಕೇಳಿಸುತ್ತಿದೆಯೆಂಬ ಅಭಿಪ್ರಾಯದಿಂದ ಬಹುವಚನವನ್ನು

ಪ್ರಯೋಗಿಸಿದ್ದಾರೆ ಹೊರತು ಮೂರೂ ಅಗ್ನಿಗಳು ಅಕ್ಷಿಸ್ಥರಾಗಿದ್ದಾರೆಂದು ತೋರಿಸುವುದಕ್ಕಾಗಿ ಬಹುವಚನವನ್ನು ಪ್ರಯೋಗಿಸಿಲ್ಲ.

ಟೀಕೆಯಲ್ಲಿ "ಹ್ವಯಾಮ್ಯಗ್ನಿಮಿತ್ಯಾದಾವಿವ" ಯಾವರೀತಿಯಾಗಿ "ಹ್ವಯಾಮ್ಯಗ್ನಿಂ ಪ್ರಥಮಂ ಸ್ವಸ್ತಯೇ" ಎಂಬಲ್ಲಿ ಅಗ್ನಿಯು ಉಪಕ್ರಮದಲ್ಲಿ ಶ್ರುತನಾಗಿದ್ದರೂ ಮುಂದೆ "ಸವಿತಾರಮೂತಯೇ" "ಹಿರಣ್ಯಯೇನ ಸವಿತಾ ರಥೇನ" ಎಂದು ಸವಿತೃಶ್ರುತಿ ಹಾಗೂ ಸವಿತೃಲಿಂಗಗಳು ಇರುವುದರಿಂದ ಸವಿತೃಪರವೆಂದು ಹೇಗೆ ನಿರ್ಣಯವಾಗಿದೆಯೋ? ಆದ್ದರಿಂದಲೇ ಅನುಕ್ರಮಣಿಕಾದಲ್ಲಿ "ಹ್ವಯಾಮ್ಯೇಕಾದಶ ಸಾವಿತ್ರಮ್" ಎಂದು ಹೇಳಲಾಗಿದೆ. ಪ್ರಕೃತದಲ್ಲಿಯೂ ಸಹ 'ಕಂ ಬ್ರಹ್ಮ' 'ಖಂ ಬ್ರಹ್ಮ' ಎಂಬುದಾಗಿ ಉಪಕ್ರಮದಲ್ಲಿ ಬ್ರಹ್ಮನು ಪ್ರಸಕ್ತನಾಗಿದ್ದರೂ ಮುಂದೆ 'ಅಸ್ಮದ್ವಿದ್ಯಾ' ಇತ್ಯಾದಿಯಾಗಿ ಅಗ್ನಿಯು ಪ್ರತಿಪಾದ್ಯನಾದ್ದರಿಂದ ಅಗ್ನಿಯೇ ಈ ಪ್ರಕರಣದಲ್ಲಿ ಹೇಳಲ್ಪಟ್ಟಿದ್ದಾನೆಂದು ತಿಳಿಯಬೇಕು.

ಟೀಕೆಯಲ್ಲಿ 'ತತ್ತತ್ಪ್ರೇರಕತ್ವೇನ' ಎಂದಿದೆ. ಆದರೆ ಶ್ರುತಿಯಲ್ಲಿರುವ 'ವಾಮ' ಹಾಗೂ 'ಭಾಮ' ಶಬ್ದಗಳಿಂದ ಸ್ತ್ರೀಪುರುಷರೆಂಬ ಸಕಲ ಚೇತನರಿಗೆ ಪ್ರೇರಕನಾಗಿದ್ದಾನೆಂದು ಹೇಳಲಾಗಿದೆ. ಇದನ್ನೇ ತತ್ವಪ್ರದೀಪದಲ್ಲಿ - "ವಾಮಂ ಸೌಂದರ್ಯಂ ಭಾಮಂ ತೇಜಃ ತತ್ಪ್ರಧಾನತ್ವಾತ್ ಸ್ತ್ರೀಪುರುಷಾ ವಾಮಭಾಮಶಬ್ದಶಬ್ದಿತಾಃ, ತನ್ನೇತಾ ವಾಮನಿರ್ಭಾಮನಿಃ" 'ವಾಮ' ಶಬ್ದಕ್ಕೆ 'ಸೌಂದರ್ಯ' ಎಂದರ್ಥ. 'ಭಾಮ' ಶಬ್ದಕ್ಕೆ 'ತೇಜಸ್ಸು' ಎಂದರ್ಥ. ಇವುಗಳನ್ನೇ ಪ್ರಧಾನವನ್ನಾಗಿ ಹೊಂದಲ್ಪಟ್ಟ ಸ್ತ್ರೀಪುರುಷರು 'ವಾಮ ಭಾಮ' ಶಬ್ದಗಳಿಂದ ಲಕ್ಷಣಯಾ ಪ್ರತಿಪಾದ್ಯರಾಗುತ್ತಾರೆ. ಅವರನ್ನು ನಿಯಮನ ಮಾಡುವವನೇ ವಾಮನೀ ಭಾಮನಿಯೆನಿಸುತ್ತಾನೆಂದು ಹೇಳಿದ್ದಾರೆ.

ಟೀಕೆಯಲ್ಲಿ 'ದ್ಯಿವದ್ದೃಷ್ಟಿಗೋಚರಃ' ಎಂದಿದೆ. ಅಂದರೆ ಶ್ರುತಿಯಲ್ಲಿ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ" ಎಂಬುದಾಗಿ ದೃಶ್ಯತ್ವವನ್ನು ಭಗವಂತನಿಗೆ ಹೇಳಲಾಗಿದೆ. ಅಂದರೆ ಅಪರೋಕ್ಷ ಜ್ಞಾನಕ್ಕೆ ವಿಷಯನಾಗುತ್ತಾನೆಂದರ್ಥ. ಆದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ದೃಶ್ಯತ್ವವು ಯುಕ್ತವಾಗಿದೆಯೆಂದು ತಿಳಿಯಬೇಕು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಂತರಾಧಿಕರಣವು ಸಂಪೂರ್ಣವಾಯಿತು.

**प्रकाशः —**

"यतः "य एष आदित्ये पुरुषः सोऽहमस्मि स एवाहमस्मि" इति अग्नेरेवाऽऽदित्यस्थत्वमुच्यते अत एव" इति टीकावाक्यस्य पर्यवसितमर्थं वदन् यदेतच्छब्दाभ्यां वक्रवाक्यरचने भाष्ययोजनं फलमाह — अग्नेरिति ।

ಟೀಕೆಯಲ್ಲಿ ಕೆಲವು ಕಠಿಣಪದಗಳ ಅರ್ಥವನ್ನು ತಿಳಿಯಬೇಕು. "ಯತಃ 'ಯ ಏಷ ಆದಿತ್ಯೇ ಪುರುಷಃ ಸೋಽಹಮಸ್ಮಿ ಸ ಏವಾಹಮಸ್ಮಿ' ಇತಿ ಅಗ್ನೇರೇವಾಽಽದಿತ್ಯಸ್ಥತ್ವಮುಚ್ಯತೇ ಅತ ಏವ" ಎಂಬ ಟೀಕಾವಾಕ್ಯಕ್ಕೆ ಪರ್ಯವಸಿತವಾದ ಅರ್ಥವನ್ನು ಹೇಳುತ್ತಿದ್ದಾರೆ. ವಸ್ತುತಃ ಈ ವಾಕ್ಯದಲ್ಲಿ "ಯತಃ" "ಅತಃ" ಎಂಬ ಶಬ್ದಗಳನ್ನು ಉಲ್ಲೇಖಿಸಬೇಕಾಗಿರಲಿಲ್ಲ. ಏಕೆಂದರೆ "ಪರ್ವತಃ ವಹ್ನಿಮಾನ್ ಧೂಮಾತ್" ಎಂದು ಸುಲಭವಾಗಿಯೇ ಪರ್ವತದಲ್ಲಿ ವಹ್ನಿಯಿದೆಯೆಂದು ತಿಳಿಯಲು ಬರುವಾಗ "ಯತಃ ಪರ್ವತಃ ಧೂಮವಾನ್ ತತೋ ವಹ್ನಿಮಾನ್" ಎಂದು ವಕ್ರವಾಗಿ ವಾಕ್ಯಪ್ರಯೋಗ ಮಾಡುವುದು ತಪ್ಪಾಗುತ್ತದೆ. ಅದರಂತೆ ಇಲ್ಲಿಯೂ ಸಹ "ಯ ಏಷಃ ಆದಿತ್ಯೇ ಪುರುಷಃ ಸೋಽಹಮಸ್ಮಿ ಸ ಏವಾಹಮಸ್ಮಿ" ಇತಿ ಅಗ್ನೇರೇವಾಽಽದಿತ್ಯಸ್ಥತ್ವಸ್ಯ 'ಉಚ್ಯಮಾನತ್ವಾತ್' ಎಂದು ಸುಲಭವಾಗಿಯೇ ಹೇಳಲು ಬರುವಾಗ "ಯತಃ" ಎಂಬ ಪದವನ್ನು ಮತ್ತು 'ಏತತ್' ಶಬ್ದವನ್ನು ಏಕೆ ಹೇಳಿದ್ದಾರೆ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಈ ರೀತಿಯಾಗಿ ಹೇಳಿದ್ದಕ್ಕೆ ಭಾಷ್ಯದ ವಾಕ್ಯವನ್ನು ಯೋಜನೆ ಮಾಡಿದಂತಾಗುತ್ತದೆ. ಈ ಪ್ರಯೋಜನಕ್ಕೋಸ್ಕರ ಟೀಕೆಯಲ್ಲಿ 'ಯತಃ' 'ಅತಃ' ಎಂಬ ಪದಗಳನ್ನು ಉಪಯೋಗಿಸಿದ್ದಾರೆಂದು 'ಅಗ್ನಿಃ' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः** – ''य एष आदित्ये पुरुषः'' इत्यादावग्नीनामेवादित्यस्थत्वमुच्यते । अतोऽक्ष्यादित्ययोरैक्यात् ''य एषोऽन्तरक्षिणि पुरुषो दृश्यते'' इत्यत्राप्यग्निरेवोच्यते'' इति भाष्यस्येत्यर्थः ।

"ಯ ಏಷ ಆದಿತ್ಯೇ ಪುರುಷಃ" ಎಂಬಲ್ಲಿ ಅಗ್ನ್ಯಾದಿಗಳಿಗೆ ಆದಿತ್ಯಸ್ಥತ್ವವನ್ನು ಹೇಳಲಾಗಿದೆ. ಆದ್ದರಿಂದ ಅಗ್ನಿ ಹಾಗೂ ಆದಿತ್ಯಮಂಡಲಕ್ಕೆ ಐಕ್ಯವಿರುವುದರಿಂದ "ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ" ಎಂಬಲ್ಲೂ ಅಗ್ನಿಯೇ ಪ್ರತಿಪಾದ್ಯನಾಗುತ್ತಾನೆಂದು ಭಾಷ್ಯದಲ್ಲಿರುವ ವಾಕ್ಯಗಳಿಗೆ ಯೋಜನೆಯನ್ನು ತಿಳಿಯಬೇಕು.

**प्रकाशः** – ''अत्राऽऽदित्यस्थत्वलिङ्गस्यापि विष्णौ समन्वयसिद्ध्यर्थं वक्रसङ्गत्याऽधिकरणारम्भः'' इत्यत्र का नाम ऋजुसङ्गतिः, का च वक्रा, कथञ्च ऋजुसङ्गतौ तत्समन्वयस्यासिद्धिः, वक्रायान्तु तत्सिद्धिरिति न ज्ञायतेऽतो द्वेधाभिप्रायमाह – **वक्रेति** ।

ಮತ್ತೊಂದೆಡೆ ಟೀಕೆಯಲ್ಲಿ "ಅತ್ರಾಽಽದಿತ್ಯಸ್ಥತ್ವಲಿಂಗಸ್ಯಾಪಿ ವಿಷ್ಣೌ ಸಮನ್ವಯಸಿದ್ಧ್ಯರ್ಥಂ ವಕ್ರಸಂಗತ್ಯಾಽಧಿಕರಣಾರಂಭಃ" "ಈ ಅಧಿಕರಣದಲ್ಲಿ ಆದಿತ್ಯಸ್ಥವೆಂಬ ಲಿಂಗವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುವುದಕ್ಕಾಗಿ ವಕ್ರಸಂಗತಿಯಿಂದ ಅಧಿಕರಣವನ್ನು ಪ್ರಾರಂಭಿಸಿದ್ದಾರೆ" ಎಂದು ಹೇಳಿದ್ದಾರೆ. ಈ

ಟೀಕಾಮಾತಿಗೆ ಏನರ್ಥ? 'ಋಜುಸಂಗತಿ' ಎಂದರೆ ಯಾವುದು? ವಕ್ರಸಂಗತಿಯೆಂದರೆ ಯಾವುದು? ಋಜುಸಂಗತಿಯನ್ನು ವಿವಕ್ಷಿಸಿದರೆ ಆದಿತ್ಯಸ್ಥತ್ವವು ಏಕೆ ಸಮನ್ವಯವಾಗುವುದಿಲ್ಲ? ವಕ್ರಸಂಗತಿಯನ್ನು ಆಶ್ರಯಿಸಿದರೆ ಆದಿತ್ಯಸ್ಥತ್ವವು ಹೇಗೆ ಸಮನ್ವಯವಾಗುತ್ತದೆ? ಹೀಗೆ ಟೀಕಾ ಮಾತನ್ನು ನೋಡಿದಾಗ ಸ್ಪಷ್ಟವಾಗಿ ಏನು ಹೇಳುತ್ತಿದ್ದಾರೆಂದೇ ತಿಳಿಯುವುದಿಲ್ಲ. ಆದ್ದರಿಂದ ಗ್ರಂಥಕಾರರು ಎರಡು ಬಗೆಯಲ್ಲಿ ಟೀಕೆಯ ಅಭಿಪ್ರಾಯವನ್ನು 'ವಕ್ರಸಂಗತ್ಯಾ' ಇತ್ಯಾದಿ ವಾಕ್ಯದಿಂದ ನಿರೂಪಿಸುತ್ತಿದ್ದಾರೆ.

**प्रकाशः – उक्तमिति** । "तन्निष्ठस्य मोक्षोपदेशात्" "नेतरोऽनुपपत्तेः" इत्यादाविति भावः । "तद्यथा पुष्करपलाश आपो न श्लिष्यन्त एवमेवंविदि पापं कर्म न श्लिष्यते" इति तज्ज्ञानात्सर्वपापाश्लेषे मोक्षस्यापि तदन्यथानुपपत्त्या सिद्धेर्मोक्षश्रवणादित्युक्तम् । **आदित्यमण्डलस्थत्वेऽपीति** । तस्य सिद्धान्तेऽनुमतत्वादिति भावः ।

'ಉಕ್ತಂ' ಎಂದರೆ 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' ಮತ್ತು 'ನೇತರೋಽನುಪಪತ್ತೇಃ' ಎಂಬ ಆನಂದಮಯಾಧಿಕರಣದ ಸೂತ್ರಗಳಲ್ಲಿ ವಿಷ್ಣುಜ್ಞಾನದಿಂದಲೇ ಮೋಕ್ಷವೆಂದು ಹೇಳಲಾಗಿದೆ. ಅದು ಹೀಗೆ -

"ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ" ಕಮಲಪತ್ರಕ್ಕೆ ನೀರಿನ ಸಂಪರ್ಕ ಹೇಗೆ ಆಗುವುದಿಲ್ಲವೋ? ಅದರಂತೆ ಅಗ್ನಿಯ ಜ್ಞಾನದಿಂದ ಪಾಪಕರ್ಮವು ಲೇಪವಾಗುವುದಿಲ್ಲ ಎಂಬುದಾಗಿ ಸರ್ವಪಾಪದ ಸಂಪರ್ಕರಾಹಿತ್ಯವನ್ನು ಈ ಶ್ರುತಿಯಲ್ಲಿ ಹೇಳಲಾಗಿದೆ. ಮೋಕ್ಷವನ್ನು ಒಪ್ಪದೆ ಸರ್ವಪಾಪದ ಸಂಪರ್ಕರಾಹಿತ್ಯವು ಕೂಡುವುದಿಲ್ಲವಾದ್ದರಿಂದ ಅನ್ಯಥಾನುಪಪತ್ತಿ ಪ್ರಮಾಣದಿಂದ ಈ ಶ್ರುತಿಯು ಮೋಕ್ಷವನ್ನು ಹೇಳುತ್ತಿದೆ. ಹೀಗೆ ಹೇಳಿದ್ದರಿಂದ ಆನಂದಮಯಾಧಿಕರಣದಲ್ಲಿ ಹೇಳಲ್ಪಟ್ಟ ವಿಷ್ಣುಜ್ಞಾನದಿಂದ ಮೋಕ್ಷವಾಗುತ್ತದೆಂಬ ಸಿದ್ಧಾಂತವು ಅಯುಕ್ತವಾಗಿದೆಯೆಂದು ಈ ಅಧಿಕರಣದ ಪೂರ್ವಪಕ್ಷ. 'ಆದಿತ್ಯಮಂಡಲಸ್ಥತ್ವೇಪಿ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಆದಿತ್ಯಮಂಡಲಸ್ಥತ್ವವನ್ನು ಆದಿತ್ಯದೇವತೆಗೆ ಸಿದ್ಧಾಂತದಲ್ಲಿ ಒಪ್ಪಲಾಗಿದೆಯೆಂದು ತಿಳಿಯಬೇಕು.

**प्रकाशः** – वक्रसङ्गतिप्रकारं वदन् तत्र समन्वयसिद्धिप्रकारमाह – **आदित्यस्य इति** । "–"यश्चासावादित्ये" इत्यानन्दमयस्यादित्यस्थत्वमुक्तं, ततश्चार्थादक्षिस्थत्वमप्युक्तं" इत्यादिटीकावाक्यस्यार्थानुवादोऽयमिति । यदानन्दमयाधिकरणोक्तमादित्यदेवतास्थत्वमार्थिकमक्षिस्थत्वं च, तदयुक्तमित्यर्थः ।

ಇಲ್ಲಿಯ ತನಕ ಋಜುಸಂಗತಿಯನ್ನು ಹೇಳಿದಾಗ ಆದಿತ್ಯಸ್ಥತ್ವದ ಸಮನ್ವಯವು ಸಿದ್ಧವಾಗುವುದಿಲ್ಲವೆಂದು ಹೇಳಿದರು. ಈಗ ವಕ್ರಸಂಗತಿಯ ಪ್ರಕಾರವನ್ನು ಹೇಳುತ್ತಾ ಆದಿತ್ಯಸ್ಥತ್ವದ ಸಮನ್ವಯವು ಸಿದ್ಧವಾಗುತ್ತದೆಂದು

'ಆದಿತ್ಯಸ್ಥಃ' ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. "-"ಯಶ್ಚಾಸಾವಾದಿತ್ಯೇ" ಇತ್ಯಾನಂದಮಯಸ್ಯಾದಿತ್ಯಸ್ಥತ್ವಮುಕ್ತಂ, ತತಶ್ಚಾರ್ಥಾದಕ್ಷಿಸ್ಥತ್ವಮಪ್ಯುಕ್ತಂ' 'ಯಶ್ಚಾಸಾವಾದಿತ್ಯೇ' ಎಂಬುದಾಗಿ ಆನಂದಮಯನಿಗೆ ಆದಿತ್ಯಸ್ಥತ್ವವು ಹೇಳಲ್ಪಟ್ಟಿತು. ಆರ್ಥಿಕವಾಗಿ ಅಕ್ಷಿಸ್ಥತ್ವವನ್ನು ಹೇಳಲಾಗಿತ್ತು. ಇತ್ಯಾದಿಯಾದ ಟೀಕೆಯ ಅರ್ಥವನ್ನೇ ಇಲ್ಲಿ ಅನುವಾದ ಮಾಡಿದ್ದಾರೆ. ಅಂದರೆ ಆನಂದಮಯಾಧಿಕರಣದಲ್ಲಿ ಹೇಳಲ್ಪಟ್ಟ ಆದಿತ್ಯದೇವತಾಸ್ಥತ್ವವು ಮತ್ತು ಆರ್ಥಿಕವಾಗಿ ತಿಳಿಯಲ್ಪಟ್ಟ ಅಕ್ಷಿಸ್ಥತ್ವವು ಅಯುಕ್ತವಾಗಿದೆಯೆಂದರ್ಥ.

**प्रकाशः – अक्ष्यादित्यदेवतास्थत्वादितीति । अत्रायं क्रमः – अग्नेरेवाक्षिदेवतास्थत्वम्, कुत एतत्, "योऽसावादित्ये पुरुषः सोऽहमस्मि" इति अक्ष्यभिन्नादित्यदेवतास्थत्वादित्येवं वक्रसङ्गत्येत्यर्थः । एतच्च प्राचीनटीकारीत्या अक्ष्यादित्यशब्दयोः देवतापरत्वमुपेत्य सङ्गत्युपपादनमिति ध्येयम् ।**

ಗ್ರಂಥದಲ್ಲಿ 'ಅಕ್ಷ್ಯಾದಿತ್ಯದೇವತಾಸ್ಥತ್ವಾತ್' ಎಂದು ಹೇಳಿದ್ದಾರೆ. ಇದರಿಂದ ತಿಳಿಯಬೇಕಾದ ಕ್ರಮ ಹೀಗಿದೆ - ಅಗ್ನಿಯೇ ಅಕ್ಷಿದೇವತಾಸ್ಥನಾಗಿದ್ದಾನೆ. ಏಕೆಂದರೆ "ಯೋಽಸಾವಾದಿತ್ಯೇ ಪುರುಷಃ ಸೋಽಹಮಸ್ಮಿ" ಎಂಬುದಾಗಿ ಚಕ್ಷುರಿಂದ್ರಿಯಕ್ಕಿಂತ ಅಭಿನ್ನವಾದ ಆದಿತ್ಯದೇವತೆಯಲ್ಲಿದ್ದಾನೆಂದು ವಕ್ರಸಂಗತಿಯನ್ನು ಹೇಳುವುದರಿಂದ ಎಂದು ಅರ್ಥ. ಇದನ್ನು ಪ್ರಾಚೀನಟೀಕಾ ಪ್ರಕಾರ ಅಕ್ಷಿ ಹಾಗೂ ಆದಿತ್ಯಶಬ್ದಗಳಿಗೆ ದೇವತಾಪರತ್ವವನ್ನು ಅಂಗೀಕರಿಸಿ ಸಂಗತಿಯನ್ನು ಉಪಪಾದಿಸಿದ್ದಾರೆ.

**प्रकाशः – ननु पूर्वत्र 'यश्चासावादित्ये" इत्यादित्यस्थत्वं नाम विष्णोरादित्यदेवतास्थत्वम् । यदाहुस्तैत्तिरीयभाष्ये –**

**स विष्णुस्सर्वजीवेषु नृषु देवेषु च स्थितः ।**
**एक एव ........................ ।।**

**इत्यादि उक्तं च प्राक् भेदव्यपदेशाच्च" इत्यत्र टीकायां – "स यश्चायमित्यानन्दमयस्यापकृष्टोत्कृष्टजीवेषु पुरुषादित्यपदोपलक्षितेषु स्थितिकथनात्" इति । तथा च तत्रार्थादापाद्यमानमक्षिस्थत्वमप्यक्षिदेवतास्थत्वमेवेतीहाक्ष्यादिशब्दस्य देवतापरत्वपक्षे सङ्गत्युपपादनसम्भवेऽपि, टीकाकृत्पक्षेऽक्ष्यादिशब्दस्य जडपरत्वेनान्यस्याक्षिस्थत्वे प्राचीनमप्यग्नेरेवेति कथमाक्षेप इति चेत्**

ಆಕ್ಷೇಪ - 'ಯಶ್ಚಾಸಾವಾದಿತ್ಯೇ' ಎಂಬುದಾಗಿ ಆನಂದಮಯಾಧಿಕರಣದಲ್ಲಿ ಹೇಳಲ್ಪಟ್ಟ 'ಆದಿತ್ಯ' ಶಬ್ದಕ್ಕೆ 'ಆದಿತ್ಯದೇವತೆ' ಎಂದೇ ಅರ್ಥ. ಏಕೆಂದರೆ ತೈತ್ತಿರೀಯ ಭಾಷ್ಯದಲ್ಲಿ 'ಸ ವಿಷ್ಣುಸ್ಸರ್ವಜೀವೇಷು ನೃಷು

ದೇವೇಷು ಚ ಸ್ಥಿತಃ । ಏಕ ಏವ ...... ॥' ಎಂಬುದಾಗಿ ದೇವತೆಗಳಲ್ಲಿ ವಿಷ್ಣು ಇದ್ದಾನೆಂದು ವ್ಯಾಖ್ಯಾನಿಸಿದ್ದಾರೆ. ಮತ್ತು "ಭೇದವ್ಯಪದೇಶಾಚ್ಚ' ಎಂಬ ಸೂತ್ರದ ಟೀಕೆಯಲ್ಲಿ - "ಸ ಯಶ್ಚಾಯಮಿತ್ಯಾನಂದಮಯಸ್ಯಾಪ-ಕೃಷ್ಟೋತ್ಕೃಷ್ಟಜೀವೇಷು ಪುರುಷಾದಿತ್ಯಪದೋಪಲಕ್ಷಿತೇಷು ಸ್ಥಿತಿಕಥನಾತ್" 'ಸ ಯಶ್ಚಾಯಮ್' ಎಂಬ ಸೂತ್ರದಲ್ಲಿ ಆನಂದಮಯನು ಉತ್ಕೃಷ್ಟಜೀವರಲ್ಲಿ ಹಾಗೂ ಉಪಕೃಷ್ಟಜೀವರಲ್ಲಿ ಇದ್ದಾನೆಂದು ಹೇಳಲಾಗಿದೆ. ಇಲ್ಲಿ ಪುರುಷಪದಕ್ಕೆ ಅಪಕೃಷ್ಟಜೀವರೆಂದು ಆದಿತ್ಯಶಬ್ದಕ್ಕೆ ಉತ್ಕೃಷ್ಟಜೀವರೆಂದು ಅರ್ಥ. ಆದ್ದರಿಂದ ಆನಂದಮಯಾಧಿಕರಣದಲ್ಲಿ ಅರ್ಥಾತ್ ಆಪಾದ್ಯಮಾನವಾದದ್ದು ಅಕ್ಷಿಸ್ಥದೇವತಾಸ್ಥತ್ವವೇ ಆಗಿದೆ. ಹೀಗೆ 'ಅಕ್ಷ್ಯಾದಿ' ಶಬ್ದಕ್ಕೆ ದೇವತಾಪರವೆಂದು ಪ್ರಾಚೀನ ಟೀಕಾ ಪಕ್ಷವನ್ನು ವಿವಕ್ಷಿಸಿದಾಗ ಇಲ್ಲಿಯ ತನಕ ಹೇಳಿದ ವಕ್ರಸಂಗತಿಯು ಉಪಪನ್ನವಾಗುತ್ತದೆ. ಆದರೆ ಟೀಕಾರಾಯರ ಪಕ್ಷದಲ್ಲಿ 'ಅಕ್ಷ್ಯಾದಿ' ಶಬ್ದಗಳು ಜಡಪರವಾಗಿರುವುದರಿಂದ ಇಲ್ಲಿ ಹೇಳಲ್ಪಟ್ಟ 'ಅಕ್ಷಿಸ್ಥನು' ಅಗ್ನಿಯಾದರೆ ಆನಂದಮಯಾಧಿಕರಣದಲ್ಲಿ ಹೇಳಲ್ಪಟ್ಟ 'ಅಕ್ಷಿಸ್ಥನು' ಅಗ್ನಿಯೇ ಆಗಬೇಕೆಂದು ಆಕ್ಷೇಪಿಸಲಾಗದು. ಏಕೆಂದರೆ ಇಲ್ಲಿರುವ 'ಅಕ್ಷಿ' ಶಬ್ದಕ್ಕೆ 'ಜಡ' ಎಂದರ್ಥ. ತೈತ್ತೀರಿಯದಲ್ಲಿರುವ 'ಅಕ್ಷಿ' ಶಬ್ದಕ್ಕೆ 'ದೇವತೆ' ಎಂದರ್ಥ. ದೇವತಾಂತರ್ಗತನಾದವನು ಪರಮಾತ್ಮನಾದರೂ ಜಡವಾದ ಅಕ್ಷಿಯಲ್ಲಿರುವವನು ಅಗ್ನಿಯೇ ಆಗಬಹುದಲ್ಲವೇ?

**प्रकाशः – अत्राहुः – वामनिभामनिशब्दोक्तसर्वस्त्रीपुंप्रेरकत्वेनाग्नेस्तदक्षिस्थत्वे स एव पूर्वत्राप्युक्तादित्यमण्डलस्थ आपन्न इति तेनैवोपपत्तौ तत्रस्थतया किमीश्वरेणेत्याक्षेप इति ।**

ಸಮಾಧಾನ - ಇಲ್ಲಿ ಕೆಲವರು ಹೀಗೆ ಸಮಾಧಾನವನ್ನು ಹೇಳುತ್ತಾರೆ - ಛಾಂದೋಗ್ಯದಲ್ಲಿರುವ 'ಅಕ್ಷಿ' ಶಬ್ದವು ಜಡಪರವಾದರೂ ಸಹ ಬಾಧಕವಿಲ್ಲ. ಶ್ರುತಿಯಲ್ಲಿರುವ 'ವಾಮನಿ ಭಾಮನಿ' ಶಬ್ದಗಳಿಂದ ಸಕಲ ಸ್ತ್ರೀ ಪುರುಷರ ಪ್ರೇರಕನು ಅಗ್ನಿಯಾಗಿದ್ದಾನೆಂದು ತಿಳಿಯುತ್ತದೆ. ಹೀಗೆ ಸರ್ವಸಮರ್ಥನಾದ ಅಗ್ನಿಯು ಅಕ್ಷಿಸ್ಥನಾಗಿರುವಾಗ ಇಂತಹ ಅಗ್ನಿಯೇ ತೈತ್ತೀರಿಯದಲ್ಲಿ ಹೇಳಲ್ಪಟ್ಟ ಜಡವಾದ ಆದಿತ್ಯಮಂಡಲದಲ್ಲಿಯೂ ಇದ್ದಾನೆಂದು ಆಕ್ಷೇಪಿಸಬಹುದು. ಆದ್ದರಿಂದ ಅಗ್ನಿದೇವತೆಯಿಂದಲೇ ಎಲ್ಲವೂ ನಿರ್ವಾಹವಾಗುವಾಗ ಈಶ್ವರನು ಬೇಕಾಗಿಲ್ಲ.

**प्रकाशः – "–'अग्नीनां' इति बहुवचनमादिपदद्वयं च बह्वग्निश्रुतिसूचनाय प्रयुक्तम्" इति वाक्यस्य तात्पर्यमाह – अग्नीनामिति ।**

**सुखविशिष्टसूत्रे "न चोपक्रमविरोधः, "ह्रयाम्यग्निं" इत्यादाविवोपपत्तेः" इत्युक्तम् । तद् दुर्गमत्वात् व्यनक्ति – यथेति ।**

'ಅಗ್ನೀನಾಂ' ಎಂಬುದಾಗಿ ಶ್ರುತಿಯಲ್ಲಿ ಬಹುವಚನವಿದೆ ಮತ್ತು ಎರಡು ಬಾರಿ ಆದಿಪದವನ್ನು ಶ್ರುತಿಯು ಉಲ್ಲೇಖಿಸಿದೆ. ಇದರಿಂದ ಅನೇಕ ಅಗ್ನಿಶ್ರುತಿಯಿದೆಯೆಂದು ಭಾಷ್ಯದಲ್ಲಿ ಹೇಳಿದ್ದಾರೆ. ಅದರ ತಾತ್ಪರ್ಯವನ್ನು 'ಅಗ್ನೀನಾಂ' ಎಂಬ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

'ಸುಖವಿಶಿಷ್ಟಸೂತ್ರದಲ್ಲಿ "ನ ಚೋಪಕ್ರಮವಿರೋಧಃ, "ಹ್ವಯಾಮ್ಯಗ್ನಿಂ" ಎಂಬ ಟೀಕಾಮಾತಿದೆ. ಇದರ ಅರ್ಥವು ಸ್ಪಷ್ಟವಾಗಿ ತಿಳಿಯದ ಕಾರಣ 'ಯಥಾ' ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – ''अनवस्थितेः'' इति सूत्रटीकायां ''तत्तत्प्रेरकत्वेन तत्तचक्षुस्स्थितेरभिप्रेतत्वात्'' इत्युक्तम् । श्रुतौ प्रेरकत्वबोधकपदाश्रवणात्कथमेतदित्यत आह – **श्रुताविति** ।

"ಅನವಸ್ಥಿತೇಃ" ಎಂಬ ಶ್ರುತಿಯಲ್ಲಿ "ತತ್ತತ್ಪ್ರೇರಕತ್ವೇನ ತತ್ತಚ್ಚಕ್ಷುಸ್ಸ್ಥಿತೇರಭಿಪ್ರೇತತ್ವಾತ್" ಆಯಾ ಜೀವರನ್ನು ಪ್ರೇರಣೆ ಮಾಡುತ್ತಾ ಪ್ರತಿಯೊಬ್ಬರ ಕಣ್ಣಿನಲ್ಲಿ ನೆಲೆಸಿದ್ದಾನೆಂದು ಹೇಳಲಾಗಿದೆ. ಶ್ರುತಿಯಲ್ಲಿ ಪ್ರೇರಕತ್ವವನ್ನು ತಿಳಿಸುವ ಪದವು ಕೇಳಿಸದಿದ್ದರೂ ಟೀಕೆಯಲ್ಲಿ 'ತತ್ತತ್ಪ್ರೇರಕತ್ವೇನ' ಎಂದು ಹೇಗೆ ವ್ಯಾಖ್ಯಾನಿಸಿದರು? ಎಂಬ ಪ್ರಶ್ನೆಗೆ 'ಶ್ರುತೌ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – उपसंहारे ''विष्णुरेवाक्ष्यादित्यस्थो दिव्यदृष्टिगोचरः'' इत्युक्तम् । तस्य प्रयोजनमाह – **ततश्चेति** । शिष्टमुपन्यासमुखेन स्पष्टीकृतमिति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे अन्तराधिकरणं सम्पूर्णम् ।।**

ಟೀಕೆಯ ಕೊನೆಯಲ್ಲಿ- "ವಿಷ್ಣುರೇವಾಕ್ಷ್ಯಾದಿತ್ಯಸ್ಥೋ ದಿವ್ಯದೃಷ್ಟಿಗೋಚರಃ" ವಿಷ್ಣುವೇ ಅಕ್ಷಿಸ್ಥನೂ ಆದಿತ್ಯಸ್ಥನೂ ಆಗಿದ್ದಾನೆಂಬುದು ದಿವ್ಯದೃಷ್ಟಿಗೆ ತಿಳಿಯುತ್ತದೆಂದು ಹೇಳಿದ್ದಾರೆ. 'ದಿವ್ಯದೃಷ್ಟಿಗೋಚರಃ' ಎಂಬ ಪದವನ್ನು ಏಕೆ ಬಳಸಿದ್ದಾರೆಂಬುದಕ್ಕೆ 'ತತಶ್ಚ' ಎಂಬ ವಾಕ್ಯದಿಂದ ಪ್ರಯೋಜನವನ್ನು ತೋರಿಸಿದ್ದಾರೆ.

ಟೀಕೆಯ ಉಳಿದ ಕಠಿಣಪದಾರ್ಥಗಳನ್ನು ಉಪನ್ಯಾಸ ಶೈಲಿಯಿಂದ ವ್ಯಾಖ್ಯಾನ ಮಾಡುವಾಗಲೇ ಸ್ಪಷ್ಟಪಡಿಸಿದ್ದಾಗಿದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅಂತರಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – तथापि यथा सिद्धान्त इति ।। विष्णोरादित्यस्थत्वानाक्षेपो हि आदित्यस्थत्वं विष्णोरिति सिद्धान्त्यभिप्रायस्य पूर्वपक्षिणं प्रति ज्ञापकाभावात् । सिद्धान्ते आदित्यमण्डलस्थत्वमादित्यदेवताया एवेति पूर्वपक्षी ज्ञात्वा पूर्वपक्षं कुर्यात् । तस्य चैवमनुसन्धानं स्यादित्यनुवादोऽयमित्यवगन्तव्यम् ।

एवं च पूर्वपक्ष इत्यादिकं नासङ्गतम् । सिद्धान्तफलाक्षेपस्यैव पूर्वपक्षफलत्वान्मोक्ष दत्ववदादित्यस्थत्वस्याक्षेपस्य कर्तुमशक्यत्वादादित्यस्थत्वादक्षिस्थोऽग्निरिति पूर्वपक्षे कृते अग्नेरादित्यस्थत्वेऽप्यक्षिस्थत्वं ब्रह्मण एवेत्येवं सिद्धान्तस्य कर्तुं शक्यत्वेनाग्नेरादित्यस्थत्वनिराकरणपूर्वकं विष्णौ तस्यासमर्थने यत्रादित्यस्थत्वं तत्राग्निस्थत्वामिति व्याप्तोस्सिद्धान्तिनं प्रत्यभावेनानैकान्तिकहेतुं पूर्वपक्षी न कुर्यादित्यर्थः ।

इदं च पूर्वपक्षे हेतूकृतस्य सिद्धान्तिना समन्वयोऽवश्यं वाच्य इति नियममङ्गीकृत्योक्तम् । शास्त्रदृष्ट्येत्यादौ तथा दर्शनात् । तथापि विकारशब्दादित्यादौ तददर्शनात्पक्षान्तरमाह – **यद्वेति** ।।

यद्वा ननु ऋजुसङ्गत्याऽधिकरणारम्भेत्यादित्यस्थत्वस्य हेतूकृतत्वेऽपि । पूर्वपक्षिणा हेतूकृतस्यापि सिद्धान्तिना समन्वेतव्यत्वे नियमाभावादादित्यस्थत्वलिङ्गसमन्वयोऽपि सेत्स्यतीत्येव वक्रसङ्गत्याऽधिकरणारम्भोऽनुपपन्न एवेत्यरुचेराह – **यद्वेति** ।। तत्तत्प्रेरकत्वेनेति टीकायामन्यथाऽनवस्थितेः सूत्रानुपपत्तेरिति तात्पर्यं द्रष्टव्यम् ।। छ ।।

।। इति श्रीकेशवभट्टारकेण विरचितायां भावदीपिकायां
अन्तराधिकरणम् सम्पूर्णम् ।। ।।

# ೦೪-ಅಂತರಾಧಿಕರಣ

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣಪಂಚಿಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳೀ,
ಸೂತ್ರಾರ್ಥರತ್ನಾವಳೀ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

## अन्तराधिकरणम् - ४

ॐ अन्तर उपपत्तेः ॐ ॥ १-२-१३ ॥

ॐ स्थानादिव्यपदेशाच्च ॐ ॥ १-२-१४ ॥

ॐ सुखविशिष्टाभिधानादेव च ॐ ॥ १-२-१५ ॥

ॐ श्रुतोपनिषत्कगत्यभिधानाच्च ॐ ॥ १-२-१६ ॥

ॐ अनवस्थितेरसम्भवाच्च नेतरः ॐ ॥ १-२-१७ ॥

'सोऽहमस्मि, स एवाहमस्मि' इत्याद्यभ्यासार्थवादसहितबहुश्रुतिभ्योऽपि, निरवकाशोपपत्तेरेव प्राबल्यम् ॥

ನ್ಯಾಯವಿವರಣೆ ಅನುವಾದ

'ಸೋಽಹಮಸ್ಮಿ, ಸ ಏವಾಹಮಸ್ಮಿ' ಅಭ್ಯಾಸ ಅಥವಾ ಅರ್ಥವಾದದಿಂದ ಸಹಿತವಾದ ಬಹುಶ್ರುತಿಗಳು ಅಗ್ನಿಯನ್ನು ಪ್ರತಿಪಾದಿಸಬಹುದು. ಆದರೆ ಇವುಗಳಿಗಿಂತಲೂ ವಿಷ್ಣುವಿನಲ್ಲಿ ಪ್ರಸಿದ್ಧವಾದ ನಿರವಕಾಶವಾದ ಉಪಪತ್ತಿಗಳೇ ಪ್ರಬಲವಾಗಿವೆ. ಆದ್ದರಿಂದ ಚಕ್ಷುರಿಂದ್ರಿಯದಲ್ಲಿ ಅಂತರ್ಯಾಮಿಯಾಗಿ ರಮಣ ಮಾಡುವವವನು ಈಶ್ವರನೇ ಆಗಿದ್ದಾನೆ.

ಇಲ್ಲಿ ನ್ಯಾಯವಿವರಣದಲ್ಲಿ ಅಂತರಾಧಿಕರಣವು ಸಮಾಪ್ತವಾಯಿತು.

ನ್ಯಾಯವಿವರಣಕ್ಕೆ ಪಂಚಿಕಾ

'य एषोऽन्तरक्षिणि पुरुषो दृश्यते' इत्यत्राक्षिस्थत्वेनाग्निरेवोच्यते । 'य एष आदित्ये पुरुषः सोऽहमस्मि' इत्यग्निना अक्ष्यादित्यस्थत्वेनात्मना उपदिष्टत्वात् । अक्ष्यादित्ययोरेकविधत्वात् ।

'ಯ ಏಷೋಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬ ಶ್ರುತಿಯಲ್ಲಿ ಚಕ್ಷುರಿಂದ್ರಿಯಲ್ಲಿದ್ದಾನೆಂದು ಪ್ರತಿಪಾದಿತನಾಗಿದವನು ಅಗ್ನಿಯೇ ಆಗಿದ್ದಾನೆ. ಏಕೆಂದರೆ 'ಯ ಏಷ ಆದಿತ್ಯೇ ಪುರುಷಃ ಸೋऽಹಮಸ್ಮಿ' ಎಂಬಲ್ಲಿ ಅಗ್ನಿಯು ತಾನು ಚಕ್ಷುರಿಂದ್ರಿಯದಲ್ಲಿಯೂ ಆದಿತ್ಯಮಂಡಲದಲ್ಲಿಯೂ ಇದ್ದೇನೆಂದು ಹೇಳಿಕೊಂಡಿದ್ದಾನೆ. ಅಕ್ಷಿ ಹಾಗೂ ಆದಿತ್ಯರಲ್ಲಿ ಏಕವಿಧತ್ವವಿರುವುದರಿಂದ ಒಬ್ಬನೇ ಎರಡೂ ಕಡೆ ಇದ್ದಾನೆಂದು ಹೇಳಬೇಕು.

नचात्रोपदिष्टो नाग्निरिति युक्तम् । 'अथ हाग्नयः समूदिरे', 'आहवनीयोऽनुशशास' इत्यादि बहुशोऽग्निश्रुतिसद्भावात् । नचाग्न्यादिश्रुतिरीश्वरविषयाः त्रेताग्निविषयतायाः स्फुटं प्रतीतेः ।

ಇಲ್ಲಿ ಉಪದೇಶಿಸುತ್ತಿರುವವನು ಅಗ್ನಿಯಲ್ಲವೆಂದು ಹೇಳಬಾರದು. ಏಕೆಂದರೆ 'ಅಥ ಹಾಗ್ನಯಃ ಸಮೂದಿರೇ', 'ಆಹವನಿಯೋऽನುಶಶಾಸ' ಇತ್ಯಾದಿಯಾಗಿ ಅನೇಕ ಬಾರಿ ಅಗ್ನಿಶಬ್ದವು ಕೇಳಿಸುತ್ತಿದೆ. ಅಗ್ನಿಶ್ರುತಿಯು ಈಶ್ವರಪರವಾಗಿದೆಯೆಂದು ಹೇಳಬಾರದು. ಏಕೆಂದರೆ ಆಹವನೀಯವೇ ಮೊದಲಾದ ಮೂರು ಅಗ್ನಿಗಳನ್ನು ಪ್ರತಿಪಾದಿಸುತ್ತಿರುವುದು ಸ್ಪಷ್ಟವಾಗಿ ಕಾಣಿಸುತ್ತಿದೆ.

'आत्मा मे भद्रसेनः' इतिवत्, 'सोऽहमस्मि' इत्युपचारः किं न भवेदिति चेन्न । 'सोऽहमस्मि' इत्यस्यार्थस्याभ्यासात् । 'अपहते पापकृत्याम्' इत्याद्यर्थवादाच्च । अभ्यासार्थवादयोश्च तात्पर्यलिङ्गयोरुपचारविरोधित्वात् ।

'ಆತ್ಮಾ ಮೇ ಭದ್ರಸೇನಃ' 'ಭದ್ರಸೇನನು ನನ್ನ ಆತ್ಮ' ಎಂದು ಹೇಳಿದಂತೆ 'ಸೋऽಹಮಸ್ಮಿ' ಎಂಬ ಅಗ್ನಿಯ ಉಪದೇಶವೂ ಸಹ ಏಕೆ ಔಪಚಾರಿಕವಾಗಬಾರದು? ಎಂದು ಪ್ರಶ್ನಿಸಬಾರದು. 'ಸೋऽಹಮಸ್ಮಿ' ಎಂಬುದಾಗಿ ಅನೇಕ ಬಾರಿ ಅಗ್ನಿಯು 'ಅಹಂ' ಎಂದು ಪ್ರಯೋಗಿಸಿದ್ದರಿಂದ ಅಭ್ಯಾಸ ಪ್ರಮಾಣದ ಆಧಾರದಿಂದ ಅಗ್ನಿಯೇ ಚಕ್ಷುರಂತಸ್ಥನೆಂದು ನಿರ್ಣವಾಗುತ್ತದೆ. ಮತ್ತು 'ಅಪಹತೇ ಪಾಪಕೃತ್ಯಾಂ' ಎಂಬ ಅರ್ಥವಾದ ಪ್ರಮಾಣದ ಆಧಾರದಿಂದಲೂ ಅಗ್ನಿಯೇ

ಚಕ್ಷುರಂತಸ್ಥನಾಗಿದ್ದಾನೆ. ಅಭ್ಯಾಸ ಹಾಗೂ ಅರ್ಥವಾದವೆಂಬ ತಾತ್ಪರ್ಯಲಿಂಗಗಳು ಔಪಚಾರಿಕ ಪ್ರಯೋಗಕ್ಕೆ ವಿರೋಧಿಯಾಗಿವೆ.

**नच 'प्राणो वा अहमस्मि' इतिवदन्तर्याम्यपेक्षयेति वाच्यम् । 'सोऽहमस्मि' इत्युक्त्वा पुनः 'स एवाऽहमस्मि' इति सावधारणमुक्तत्वात् । अवधारणेन च प्रकारान्तराणां सर्वेषां व्यावर्तितत्वात् । अत एवात्मादिशब्दोऽप्यमुख्यार्थोऽङ्गीकार्य इत्येवं प्राप्ते**

ಅಂತಿಮಪ್ರಾಣಾಧಿಕರಣದಲ್ಲಿ 'ಪ್ರಾಣೋ ವಾ ಅಹಮಸ್ಮಿ' ಎಂಬುದನ್ನು ಅಂತರ್ಯಾಮ್ಯಪೇಕ್ಷೆಯಿಂದ ಹೇಳಿದಂತೆ ಇಲ್ಲಿಯೂ ಸಹ ಅಗ್ನಿಯು ಹೇಳಲ್ಪಟ್ಟ 'ಅಹಂ' ಶಬ್ದವನ್ನು ಅಂತರ್ಯಾಮಿಪರವಾಗಿ ಕೂಡಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಸೋऽಹಮಸ್ಮಿ' ಎಂದು ಹೇಳಿ ಪುನಃ 'ಸ ಏವಾऽಹಮಸ್ಮಿ' ಎಂಬುದಾಗಿ ಅವಧಾರಣಸಹಿತವಾಗಿ ಅಹಂಶಬ್ದವನ್ನು ಪ್ರಯೋಗಿಸಿದ್ದರಿಂದ ಅಂತರ್ಯಾಮಿಪರವಾಗಿ ಅರ್ಥೈಸಬಾರದು. ಅವಧಾರಣದಿಂದ ಬೇರೆ ಎಲ್ಲಾ ಪ್ರಕಾರಗಳನ್ನು ವ್ಯಾವೃತ್ತಿ ಮಾಡಲಾಗಿದೆ. ಆದ್ದರಿಂದಲೇ ಶ್ರುತಿಯಲ್ಲಿರುವ ಆತ್ಮ ಮೊದಲಾದ ಶಬ್ದಗಳಿಗೆ ಅಗ್ನಿಯಲ್ಲಿ ಅಮುಖ್ಯಾರ್ಥವನ್ನು ಹೇಳಬೇಕೆಂದು ಪೂರ್ವಪಕ್ಷ.

**समाहितम् । चक्षुरन्तःस्थो विष्णुरेव, अमृताभयत्वोपपत्तेः । आत्मादिशब्दात् स्थानादिसामर्थ्याभिधानादेश्चेति । तत्र पूर्वोत्तरपक्षयोरुभयोरपि प्रमाणवत्त्वात् कथं निर्णय इत्यत आह – सोऽहमिति ।।**

ಈ ಪೂರ್ವಪಕ್ಷಕ್ಕೆ ಸಮಾಧಾನ ಹೀಗಿದೆ - ಚಕ್ಷುರಿಂದ್ರಿಯದಲ್ಲಿ ನೆಲೆಸಿರುವವನು ವಿಷ್ಣುವೇ ಆಗಿದ್ದಾನೆ. ಇದರಿಂದ ಅಮೃತತ್ವ ಅಭಯತ್ವ ಮೊದಲಾದವುಗಳನ್ನೂ ಸಹ ಉಪಪಾದಿಸಿ-ದಂತಾಗುತ್ತದೆ. ಆತ್ಮ ಮೊದಲಾದ ಶಬ್ದಗಳ ಬಲದಿಂದ ವಿಷ್ಣುವೇ ಚಕ್ಷುರಂತಸ್ಥನೆಂದು ನಿರ್ಣಯವಾಗುತ್ತದೆ. ಮತ್ತು ವಿಷ್ಣುವಿನಲ್ಲಿರುವ ಅಸಂಗ ಎಂಬ ಶಕ್ತಿಯು ಚಕ್ಷುರಿಂದ್ರಿಯದಲ್ಲಿ ಬಂದಿರುವುದು ಮತ್ತೊಂದು ಕಾರಣ.

ಪೂರ್ವಪಕ್ಷ ಹಾಗೂ ಸಿದ್ಧಾಂತಗಳಿಗೆ ಸಮಾನವಾದ ಪ್ರಮಾಣಗಳಿರುವಾಗ ಹೇಗೆ ನಿರ್ಣಯಿಸುವುದು ? ಎಂಬ ಪ್ರಶ್ನೆಗೆ 'ಸೋऽಹಮಸ್ಮಿ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

उपपत्तेर्निरवकाशत्वं वदता, 'सोऽहमस्मि' इत्यादेः सावकाशत्वं सूचितम् । उपपत्तेरेव, किमुतात्मशब्दसहितायाः । तथाहि, अग्निः प्रसिद्ध एवास्तु, 'सोऽहस्मि' इत्यादि तु अन्तर्याम्यपेक्षया सावकाशम् । अवधारणं चान्तर्यामिणो विशेषाभाव-प्रतिपादनार्थम् । तथैवाभ्यासादिकं तात्पर्यद्योतकम् । उपपत्त्यादेस्तु निरवकाशत्वं स्फुटमेवेति ॥

ವಿಷ್ಣುವಿನಲ್ಲಿರುವ ಉಪಪತ್ತಿಗಳು ನಿರವಕಾಶಗಳಾಗಿವೆ ಎಂದು ಹೇಳಿದ್ದರಿಂದ 'ಸೋಽಹಮಸ್ಮಿ' ಎಂಬ ಅಭ್ಯಾಸ ಹಾಗೂ ಅರ್ಥವಾದಗಳಿಂದ ಸಹಿತವಾದ ಶ್ರುತಿಯು ಸಾವಕಾಶವಾಗಿದೆಯೆಂದು ಸೂಚಿಸಿದಂತಾಯಿತು. ಉಪಪತ್ತಿಯಿಂದಲೇ ನಿರ್ಣಯವಾಗುವಾಗ ಆತ್ಮ ಮೊದಲಾದ ಶ್ರುತಿಯ ಆಧಾರವಿರುವುದರಿಂದ ವಿಷ್ಣುವೇ ಚಕ್ಷುರಂತಸ್ಥನೆಂದು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ.

ಅದು ಹೀಗೆ - ಪ್ರಸಿದ್ಧನಾದ ಅಗ್ನಿಯು ಉಪದೇಶಿಸಿದ್ದಾನೆಂದು ವಿವಕ್ಷಿಸಿದ್ದರೂ 'ಸೋಽಹಮಸ್ಮಿ' ಎಂಬ ಮಾತು ಅಂತರ್ಯಾಮಿಯನ್ನು ಪ್ರತಿಪಾದಿಸುವ ಮೂಲಕ ಸಾವಕಾಶವಾಗುತ್ತದೆ. ಅವಧಾರಣೆಯೂ ಅಂತರ್ಯಾಮಿಯಲ್ಲಿ ವಿಶೇಷವಿಲ್ಲವೆಂದು ತಿಳಿಸುತ್ತಿದೆ. ಇದರಂತೆ ಅಭ್ಯಾಸಾದಿಗಳೂ ಸಹ ತಾತ್ಪಾರ್ಯದ್ಯೋತಕವಾಗಿವೆ. ವಿಷ್ಣುವಿನಲ್ಲಿರುವ ಉಪಪತ್ಯಾದಿಗಳು ನಿರವಕಾಶವಾಗಿವೆಯೆಂಬುದು ಸ್ಪಷ್ಟವಾದ ವಿಷಯ.

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣೆಯ ಟೀಕೆಯ
ಕನ್ನಡಾನುವಾದದಲ್ಲಿ ಅಂತರಾಧಿಕರಣವು ಸಮಾಪ್ತವಾಯಿತು.

****

श्रीमदानन्दतीर्थभगवत्पादाचार्यविरचितम्

# अणुभाष्यम्

## अन्तराधिकरणम् -४

**नियन्ता**

ಅಣುಭಾಷ್ಯ - ಸಕಲ ಪ್ರಾಣಿಗಳ ಚಕ್ಷುರಿಂದ್ರಿಯದಲ್ಲಿ ನೆಲೆಸಿ ವಿಹರಿಸುತ್ತಾ ನಿಯಮನ ಮಾಡುವ ಪುರುಷನು ವಿಷ್ಣುವೇ ಆಗಿದ್ದಾನೆ..

***

श्री राघवेन्द्रतीर्थविरचिता

# तत्वमञ्जरी

## अन्तराधिकरणम् -४

नन्वथापि पूर्णानन्दो विष्णुरेवेत्येतदयुक्तम् । तस्य 'यश्चासावादित्ये' इत्यादित्यस्थत्वोक्तेः । आदित्यस्स्थस्य च 'य एष आदित्ये पुरुषः सोऽहमस्मि' इत्यग्निना स्वात्मतादात्म्योक्तेः । आदित्यस्थस्यैव चाग्नेः 'य एषोऽन्तरक्षणि पुरुषो दृश्यते एष आत्मा' इत्यक्षिस्थत्वमुच्यते । 'आदित्यश्चक्षुर्भूत्वा अक्षिणी प्राविशद्' इति श्रुत्या आदित्याक्ष्णोरेकदेवताधिष्ठानत्वात् । अतो ह्यादित्यस्थः पूर्णानन्दोऽप्यग्निरेवेत्यतः प्राप्तम् – अन्तर उपपत्तेरिति सूत्रपञ्चकम् ।।

ಆದರೂ ಸಹ ಆನಂದಮಯಾಧಿಕರಣದಲ್ಲಿ ಪ್ರತಿಪಾದಿಸಲ್ಪಟ್ಟ ವಿಷ್ಣುವೇ ಪೂರ್ಣಾನಂದನೆಂಬ ವಿಷಯವು ಅಯುಕ್ತವಾಗಿವೆ. ಏಕೆಂದರೆ 'ಯಶ್ಚಾಸಾವಾದಿತ್ಯೇ' ಎಂಬ ಶ್ರುತಿಯಲ್ಲಿ

ಆದಿತ್ಯನಲ್ಲಿರುವವನು ಪೂರ್ಣಾನಂದನಾಗಿದ್ದಾನೆಂದು ಹೇಳಲಾಗಿದೆ. 'ಯ ಏಷ ಆದಿತ್ಯೇ ಪುರುಷಃ' ಎಂಬ ಶ್ರುತಿಯಲ್ಲಿ ಅಗ್ನಿಯು ಆದಿತ್ಯನಲ್ಲಿರುವವನು ತಾನೇ ಎಂದು ಹೇಳಿಕೊಂಡಿದ್ದಾನೆ. ಆದ್ದರಿಂದ ಈ ಆದಿತ್ಯನಲ್ಲಿರುವ ಅಗ್ನಿಯೇ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬುದಾಗಿ ಅಕ್ಷಿಸ್ಥನಾಗಿದ್ದಾನೆಂದು ಹೇಳಲಾಗಿದೆ. 'ಆದಿತ್ಯಶ್ಚಕ್ಷುರ್ಭೂತ್ವಾ' ಎಂಬ ಶ್ರುತಿಯಲ್ಲಿ ಅಕ್ಷಿ ಹಾಗೂ ಆದಿತ್ಯ ಶ್ರುತಿಯಲ್ಲಿ ಒಬ್ಬನೇ ದೇವತೆಯಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ಆದಿತ್ಯನಲ್ಲಿರುವವನು ಅಗ್ನಿಯೇ ಆಗಿದ್ದಾನೆ. ಪೂರ್ಣಾನಂದನೂ ಸಹ ಇವನೇ ಆಗಿದ್ದಾನೆ. ಈ ಪೂರ್ವಪಕ್ಷಕ್ಕೆ ಉತ್ತರ ನೀಡಲು 'ಅಂತರ ಉಪಪತ್ತೇಃ' ಇತ್ಯಾದಿ ಐದು ಸೂತ್ರಗಳು ಹೊರಟಿವೆ.

तदर्थः – **नियन्ता चेति** ।। पूर्ववदनुषङ्गः । सर्वगः सन् अन्तरक्षणीति श्रुतसर्वप्राणिचक्षुरन्तस्थः सन् 'एष वामनिः' इत्यादिनोक्तो नियन्ता वामभामशब्दित सौन्दर्यतेजःप्रधानसर्वस्त्रीपुंसनियमकर्ता सम्पूर्णानन्दत्वेनोक्तादित्यस्थः एकः स्वतन्त्रो विष्णुरेव । नत्वग्निः ।

ಈ ಅಧಿಕರಣದ ಸಾರವನ್ನೇ ಅಣುಭಾಷ್ಯದಲ್ಲಿ 'ನಿಯಂತಾ ಚ' ಎಂದು ಸಂಗ್ರಹಿಸಿದ್ದಾರೆ. ಹಿಂದಿನ ಅಧಿಕರಣದಂತೆ ಈ ಅಧಿಕರಣದಲ್ಲಿಯೂ 'ಸರ್ವಗಃ' ಎಂಬುದನ್ನು 'ಲಿಂಗೈಃ ಸರ್ವೈರ್ಯುತೋ ಹಿ' ಎಂಬುದನ್ನು ಅನ್ವಯ ಮಾಡಿಕೊಳ್ಳಬೇಕು. 'ಸರ್ವಗಃ ಸನ್' ಎಂಬ ಶಬ್ದಕ್ಕೆ 'ಅಂತರಕ್ಷಿಣಿ' ಇತ್ಯಾದಿ ಶ್ರುತಿಯಲ್ಲಿ ಹೇಳಿದಂತೆ ಎಲ್ಲಾ ಪ್ರಾಣಿಗಳ ಕಣ್ಣಿನಲ್ಲಿ ನಿಯಾಮಕನಾಗಿದ್ದಾನೆಂದು ಅರ್ಥ. ಅಂದರೆ 'ಏಷ ವಾಮನಿಃ' ಇತ್ಯಾದಿ ಶ್ರುತಿಯಲ್ಲಿ ಹೇಳಿದ ವಾಮ ಹಾಗೂ ಭಾಮ ಶಬ್ದಗಳಿಂದ ತಿಳಿಯುವ ಸ್ತ್ರೀ ಹಾಗೂ ಪುರುಷರ ಸೌಂದರ್ಯ ಮತ್ತು ತೇಜಸ್ಸುಗಳನ್ನು ನೀಡುವವನಾಗಿದ್ದಾನೆ. ಆದ್ದರಿಂದಲೇ ಸ್ತ್ರೀ ಹಾಗೂ ಪುರುಷರಿಗೆ ನಿಯಾಮಕನಾಗಿದ್ದಾನೆ. ಸಂಪೂರ್ಣ ಆನಂದವುಳ್ಳವನು ಸ್ವತಂತ್ರನೂ ವಿಷ್ಣುವೇ ಆಗಿದ್ದಾನೆ ಹೊರತು ಅಗ್ನಿಯಲ್ಲ.

कुतः ? **लिङ्गैः सर्वैर्युतो हि** ।। 'एतदमृतमभयमेतद् ब्रह्म' 'तद् यथा पुष्करपलाश आपो न श्लिष्यन्ते' इति, 'तद् यदस्मिन् सर्पिर्वोदकं वा' इति, 'संयद्वाम इत्याचक्षते', 'एतं सर्वाणि वामानि संयन्ति', 'एष उ एव वामनिः', 'कं ब्रह्म खं ब्रह्म', 'स एनान् ब्रह्म गमयति' इत्यादिना उक्तैः अमृतत्व-अभयत्व-पापाश्लेषहेतुवेदनत्व - स्वाश्रयचक्षुरसङ्गत्व - आपादकत्व - संयद्वामत्व - पूर्णानन्दत्व - पूर्णज्ञानत्वादिभिः तत्प्रकरणस्थैः सर्वैर्लिङ्गैर्युतत्वादित्यर्थः । तैर्लिङ्गैर्युतो नियन्ता विष्णुरेव । तेषां भायदिशा वैष्णवत्वसिद्धेरिति वा ।

ಏಕೆಂದರೆ 'ಲಿಂಗೈಃ ಸರ್ವೈರ್ಯುತೋ ಹಿ' ಎಂಬುದರಿಂದ ಉತ್ತರಿಸುತ್ತಿದ್ದಾರೆ. 'ಏತದಮೃತಮಭಯಮೇತದ್ ಬ್ರಹ್ಮ' 'ತದ್ ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತೇ' 'ತದ್ ಯದಸ್ಮಿನ್ ಸರ್ಪಿರ್ವೋದಕಂ ವಾ' 'ಸಂಯದ್ವಾಮ ಇತ್ಯಾಚಕ್ಷತೇ' 'ಏತಂ ಸರ್ವಾಣಿ ವಾಮಾನಿ ಸಂಯಂತಿ', 'ಏಷ ಉ ಏವ ವಾಮನಿಃ', 'ಕಂ ಬ್ರಹ್ಮ ಖಂ ಬ್ರಹ್ಮ', 'ಸ ಏನಾನ್ ಬ್ರಹ್ಮ ಗಮಯತಿ' ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟ ಅಮೃತತ್ವ, ಅಭಯತ್ವ, ಪಾಪಲೇಪವಿಲ್ಲದಂತೆ ಮಾಡುವ ಜ್ಞಾನ-ವಿಷಯತ್ವ ತನಗೆ ಆಶ್ರಯವಾದ ಚಕ್ಷುಸ್ಸಿಗೆ ದೊರಕಿಸುವಂತಹ ಅಸಂಗತ್ವ, ಸಂಯದ್ವಾಮತ್ವ, ಪೂರ್ಣಾನಂದತ್ವ ಮೊದಲಾದ ಈ ಪ್ರಕರಣದಲ್ಲಿರುವ ಎಲ್ಲಾ ಲಿಂಗಗಳು ವಿಷ್ಣುವನ್ನೇ ಪ್ರತಿಪಾದಿಸುತ್ತದೆ. ಇವೆಲ್ಲವೂ ವಿಷ್ಣುವಿನ ಲಿಂಗಗಳೇ ಆಗಿವೆಯೆಂದು ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಗಳಿಂದ ಸ್ಪಷ್ಟವಾಗುತ್ತದೆ.

अत्रापि स इत्युक्तिः 'योऽग्निनामा सोऽहमस्मि' इति तच्छब्देनादित्यस्थमुद्दिश्य पादान्त्यप्राणनयन्यायेनाहमस्मीति स्वान्तर्यामितादात्म्येनोक्तः स एव विष्णुः 'य एषोऽन्तरक्षणि' इत्यक्षिस्थो नियन्तेति सूचयितुम् ।

'ಸೋऽಹಮಸ್ಮಿ' ಎಂಬ ಶ್ರುತಿಯಲ್ಲಿರುವ 'ಸ' ಎಂಬ ಪದದಿಂದ ಆದಿತ್ಯಸ್ಥನಾದವನನ್ನು ನಿರ್ದೇಶಿಸಿ 'ಯೋऽಗ್ನಿನಾಮಾ ಸೋऽಹಮಸ್ಮಿ' ಎಂಬುದಾಗಿ ಅಗ್ನಿಯ ಅಂತರ್ಯಾಮಿಯ ಜೊತೆಗೆ ತಾದಾತ್ಮ್ಯವನ್ನು ಹೇಳಿದ್ದರಿಂದ ವಿಷ್ಣುವೇ 'ಯ ಏಷೋऽಂತರಕ್ಷಿಣಿ' ಶ್ರುತಿಯಲ್ಲಿ ಹೇಳಿದ ಅಕ್ಷಿಸ್ಥನಾದ ನಿಯಾಮಕನೆಂದು ತಿಳಿಯುತ್ತದೆ. ಅದನ್ನೇ 'ಸಃ' ಎಂಬ 'ತತ್' ಶಬ್ದವು ಅನುವಾದ ಮಾಡುತ್ತಿದೆ.

अत्रान्तर इति वाच्ये नियन्तेत्युक्तिः 'एष उ एव वामनिः' इत्यादिनोक्त-नियन्तृत्वरूपेणैव अक्ष्यन्तस्थत्वमिति द्योतयितुम् । तेनाग्नेरक्षिस्थतया नियन्तृत्वे जीवत्वसाम्येन नियामकान्तरापेक्षायामनवस्थितिः । नियम्यजीवसाम्येन नियामकत्वासम्भवश्चेति सूचितम् । स्वतन्त्रेशोक्तौ न दोष इति सूचयितुं एक इति ।

ಈ ಅಧಿಕರಣದ ಸಾರವನ್ನು ಅಣುಭಾಷ್ಯದಲ್ಲಿ 'ಅಂತರಃ' ಎಂದು ಸಂಗ್ರಹಿಸಬೇಕಿತ್ತು. ಆದರೆ 'ನಿಯಂತಾ' ಎಂದು ಸಂಗ್ರಹಿಸಿದ್ದಾರೆ. ಇದರ ಉದ್ದೇಶ ಏನೆಂದರೆ 'ಏಷ ಉ ಏವ ವಾಮನಿಃ' ಇತ್ಯಾದಿ ಶ್ರುತಿಯಲ್ಲಿ ಹೇಳಿದ ಪ್ರಕಾರ ಸೌಂದರ್ಯ ಮತ್ತು ತೇಜಸ್ಸುಗಳಿಗೆ ವಿಷ್ಣು ನಿಯಾಮಕನಾಗಿದ್ದಾನೆ

ಎಂದು ತಿಳಿಸುವುದೇ ಉದ್ದೇಶವಾಗಿದೆ. ಹೀಗೆ ಹೇಳಿದ್ದರಿಂದ ಅಗ್ನಯೇ ಅಕ್ಷಿಸ್ಥನಾಗಿ ಸೌಂದರ್ಯ ಮತ್ತು ತೇಜಸ್ಸೇ ಪ್ರಧಾನವಾಗಿವುಳ್ಳ ಸ್ತ್ರೀ ಪುರುಷರನ್ನು ನಿಯಮನ ಮಾಡುವುದಾದರೆ ಉಳಿದ ಜೀವರುಗಳಂತೆ ಇವನೂ ಸಹ ಜೀವನೇ ಆಗಿರುವುದರಿಂದ ಮತ್ತೊಬ್ಬ ನಿಯಾಮಕನ ಅಪೇಕ್ಷೆ ಬರುತ್ತದೆ. ಆ ನಿಯಾಮಕನಿಗೆ ಮತ್ತೊಬ್ಬ ನಿಯಾಮಕನು ಬೇಕಾಗುವುದರಿಂದ ಅನವಸ್ಥಾದೋಷ ಬರುತ್ತದೆ. ಮತ್ತು ನಿಯಮ್ಯರಾದ ಜೀವರಿಗೂ ಅಗ್ನಿಗೂ ಜೀವತ್ವಧರ್ಮದಿಂದ ಸಾಮ್ಯವಿರುವ ಕಾರಣ ಅಗ್ನಿಯೂ ಸಹ ನಿಯಮ್ಯನೇ ಆಗುತ್ತಾನೆ ಹೊರತು ನಿಯಾಮಕನಾಗಲಾರನೆಂದು ಸೂಚಿಸಿದಂತಾಯಿತು. ಆದ್ದರಿಂದ ಸ್ವತಂತ್ರನಾದ ಪರಮಾತ್ಮನು ಅಕ್ಷ್ಯಂತಸ್ಥನಾಗಿ ನಿಯಾಮಕನೆಂದು ಹೇಳಿದರೆ ಈ ಯಾವ ದೋಷಗಳೂ ಸಹ ಬರುವುದಿಲ್ಲವೆಂದು 'ಅಂತರಃ' ಎಂದು ಹೇಳದೆ 'ನಿಯಂತಾ' ಎಂದು ಹೇಳಿದ್ದಾರೆ.

यत्तु अनुभाष्ये–

एतद्भावाभिधं लिङ्गं क्रियालिङ्गे ततः परम् ।
अन्तर्याम्यन्तरश्चेति क्रिया भावाख्यमुच्यते ॥

इति क्रियारूपं भावरूपं लिङ्गमत्रोच्यत इत्युक्तम् । तत्र चक्षुरन्तःस्थितिरूपभावस्य सर्वग इत्यनुवृत्त्या स्पष्टत्वान्नियमनरूपं क्रियाख्यं लिङ्गमेवोपात्तम् – नियन्तेति ॥ तत्र क्रियापदेन 'अन्तःस्थित्वा रमणकृद्' इत्यनुभाष्यदिशा न रमणरूपक्रियैव विवक्षिता, किन्तु नियमनरूपक्रियापि । अत एव क्रियेति सामान्योक्तिः ॥

ಅನುವ್ಯಾಖ್ಯಾನದಲ್ಲಿ -

ಏತದ್ಭಾವಾಭಿಧಂ ಲಿಂಗಂ ಕ್ರಿಯಾಲಿಂಗೇ ತತಃ ಪರಮ್ ।
ಅಂತರ್ಯಾಮ್ಯಂತರಶ್ಚೇತಿ ಕ್ರಿಯಾ ಭಾವಾಖ್ಯಮುಚ್ಯತೇ ॥

ಎಂಬುದಾಗಿ ಈ ಅಧಿಕರಣದಲ್ಲಿ ಕ್ರಿಯಾ ಮತ್ತು ಭಾವರೂಪವಾದ ಲಿಂಗಗಳ ಸಮನ್ವಯವೆಂದು ಹೇಳಿದ್ದಾರೆ. ಈ ಎರಡೂ ಲಿಂಗಗಳಲ್ಲಿ ಚಕ್ಷುರಂತಸ್ಥಿತತ್ವವೆಂಬ ಭಾವರೂಪವಾದ ಲಿಂಗವು ಪ್ರತಿಪಾದಿಸಲ್ಪಟ್ಟಿದೆಯೆಂದು 'ಸರ್ವಗಃ' ಎಂಬ ಶಬ್ದದ ಅನುವೃತ್ತಿಯಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ನಿಯಮನ ರೂಪವಾದ ಕ್ರಿಯಾರೂಪವಾದ ಲಿಂಗವನ್ನಷ್ಟೇ 'ನಿಯಂತಾ' ಎಂದು ಸಂಗ್ರಹಿಸಿದ್ದಾರೆ. ಇಲ್ಲಿ ಕ್ರಿಯಾರೂಪವಾದ ಲಿಂಗವೆಂದರೆ 'ಅಂತಸ್ಥಿತ್ವಾ ರಮಣಕೃತ್' ಎಂದು ಅನುವ್ಯಾಖ್ಯಾನದಲ್ಲಿ

ಸೂಚಿಸಿದ ಪ್ರಕಾರ ರಮಣ ರೂಪವಾದ ಕ್ರಿಯೆಯ ಜೊತೆಗೆ ನಿಯಮನ ಎಂಬ ಕ್ರಿಯಾರೂಪವಾದ ಸಮನ್ವಯವನ್ನೂ ಸಹ ಮಾಡಲಾಗಿದೆ. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ ಕ್ರಿಯಾ ಎಂದು ಸಾಮಾನ್ಯವಾಗಿ ಹೇಳಿದ್ದಾರೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ಅಂತರಾಧಿಕರಣವು ಮುಗಿಯಿತು.

***

**श्री राघवेन्द्रतीर्थविरचिता**

# तन्त्रदीपिका

## अन्तराधिकरणम् -४

**ॐ अन्तर उपपत्तेः ॐ ।। १-२-१३ ।।**

अत्र नये चक्षुरन्तःस्थितिरूपभावयुक्तरमणरूपक्रियालिङ्गं समन्वीयते । तत्त्वित्यस्ति ।

ಈ ಅಧಿಕರಣದಲ್ಲಿ ಚಕ್ಷುರಂತಸ್ಥಿತತ್ವ ಭಾವರೂಪವಾದ ಧರ್ಮದಿಂದ ಸಹಿತವಾದ ರಮಣ ಎಂಬ ಕ್ರಿಯಾರೂಪವಾದ ಲಿಂಗದ ಸಮನ್ವಯವನ್ನು ಮಾಡುತ್ತಿದ್ದಾರೆ. ಇಲ್ಲಿಯೂ ಸಹ 'ತತ್' ಎಂಬ ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು

'य एषोऽन्तरक्षिणि पुरुषो दृश्यते एष आत्मा' इत्युक्तोऽन्तरश्चक्षुरन्तःस्थित्वा रममाणो ब्रह्मैव न त्वग्निः । 'एतदमृतमभयमेतद् ब्रह्म'. इत्युक्तामृतत्वाभयत्व-लिङ्गब्रह्मशब्दानां तत्रैवोपपत्तेरित्यर्थः ।

ಪರಿಪೂರ್ಣಚಂದ್ರಿಕಾ

'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬ ಛಾಂದೋಗ್ಯದಲ್ಲಿ ಹೇಳಲ್ಪಟ್ಟಿರುವ ಅಂತರಃ = ಚಕ್ಷುರಿಂದ್ರಿಯದ ಒಳಗಡೆ ನೆಲೆಸಿ ಕ್ರೀಡಿಸುವವನು ಬ್ರಹ್ಮನೇ ಆಗಿದ್ದಾನೆ ಹೊರತು. ಅಗ್ನಿಯಲ್ಲ. ಉಪಪತ್ತೇಃ = 'ಏತದಮೃತಮಭಯಮೇತದ್ ಬ್ರಹ್ಮ' ಎಂಬಲ್ಲಿ ಪ್ರತಿಪಾದ್ಯವಾದ ಅಮೃತತ್ವ ಅಭಯತ್ವ ಮೊದಲಾದ ಲಿಂಗಗಳು. ಬ್ರಹ್ಮಶಬ್ದ ಮೊದಲಾದ ಶ್ರುತಿಗಳು ಬ್ರಹ್ಮನಲ್ಲಿಯೇ ಉತ್ಪನ್ನವಾಗುವುದರಿಂದ ಎಂದು ಸೂತ್ರಾರ್ಥ.

'अन्तरक्षिणि' इति श्रुतावन्तःस्थत्वोक्तावपि 'एष आत्मा' इत्यात्मपदेनाऽदेयं मातीति रमणस्याप्युक्तेः अन्तरुपपदाद् रमतेर्ञमन्तात् डप्रत्ययेनान्तर इति निरदिक्षत् । अत एव तदित्यनुवृत्तावपि पुंनिर्देशः ॥

'ಅಂತರಕ್ಷಿಣಿ' ಎಂಬ ಸೂತ್ರದಲ್ಲಿ ಚಕ್ಷುರಂತಸ್ಥತ್ವ ಎಂಬ ಲಿಂಗವು ಕೇಳಿಸುತ್ತಿದೆ. ಆದರೂ ಸಹ 'ಏಷ ಆತ್ಮಾ' ಎಂದು ಆತ್ಮ ಪದದಿಂದ 'ಆದೇಯಂ ಮಾತಿ' ಎಂಬ ವ್ಯುತ್ಪತ್ತಿಯನ್ನು ಆಶ್ರಯಿಸಿದಾಗ ರಮಣ ಎಂಬ ಕ್ರಿಯೆಯೂ ಸಹ ಹೇಳಲ್ಪಟ್ಟಿದೆಯೆಂದು ತಿಳಿಯುತ್ತದೆ. ಆದ್ದರಿಂದ 'ಅಂತರ್' ಎಂಬ ಉಪಪದದಿಂದ ಕೂಡಿದ ಞಮಂತವಾದ 'ರಮ್' ಧಾತುವಿಗೆ ಡಪ್ರತ್ಯಯವನ್ನು ಸೇರಿಸಿದಾಗ 'ಅಂತರಃ' ಎಂಬ ಪದವು ನಿಷ್ಪನ್ನವಾಗುತ್ತದೆ. ಇದನ್ನೇ ಸೂತ್ರಕಾರರು ಉಲ್ಲೇಖಿಸಿದ್ದಾರೆ. ಆದ್ದರಿಂದಲೇ ಈ 'ತತ್' ಎಂಬುದು ಅನುವೃತ್ತವಾಗಿದ್ದರೂ 'ಅಂತರಃ' ಎಂದು ಪುಲ್ಲಿಂಗದಿಂದ ನಿರ್ದೇಶಿಸಿದ್ದಾರೆ.

इतश्चैवमित्याह –

**ॐ स्थानादिव्यपदेशाच्च ॐ ॥ १-२-१४ ॥**

स्थानमक्षि । आदिपदात् तदधिष्ठातृ गृह्यते । स्थानादिशब्दात् स्थानादिशक्तिरुपलक्ष्यते । स्थानरूपाक्षिशक्तेरधिष्ठातृशक्तेश्च व्यपदेशाच्चान्तरो ब्रह्मैवेत्यर्थः ।

ಮತ್ತೊಂದು ಕಾರಣದಿಂದಲೂ 'ಅಂತರಃ' ಎನಿಸಿದವನು ಬ್ರಹ್ಮನೇ ಆಗಿದ್ದಾನೆಂದು ಹೇಳುತ್ತಿದ್ದಾರೆ.

ಓಂ ಸ್ಥಾನಾದಿವ್ಯಪದೇಶಾತ್ ಓಂ (೧-೨-೧೪)

ಸ್ಥಾನ ಶಬ್ದಕ್ಕೆ ಅಕ್ಷಿಯೆಂದರ್ಥ. ಆದಿ ಪದದಿಂದ ಚಕ್ಷುರಿಂದ್ರಿಯಕ್ಕೆ ಆಶ್ರಯನಾದ ಪರಮಾತ್ಮನನ್ನು ಸ್ವೀಕರಿಸಬೇಕು. ಸ್ಥಾನಾದಿ ಶಬ್ದದಿಂದ ಅಸಂಗ ಎಂಬ ಸ್ಥಾನಾದಿಶಕ್ತಿಗಳನ್ನು ಉಪಲಕ್ಷಣಯಾ ತೆಗೆದುಕೊಳ್ಳಬೇಕು. ಸ್ಥಾನವೆಂಬ ಅಕ್ಷಿಯ ಮತ್ತು ಅದಕ್ಕೆ ಆಶ್ರಯನಾದ ಭಗವಂತನ ಶಕ್ತಿಯ ಉಲ್ಲೇಖವಿರುವುದರಿಂದ ಅಂತರ ಎನಿಸಿದವನು ಬ್ರಹ್ಮನೇ ಆಗುತ್ತಾನೆಂದು ಸೂತ್ರಾರ್ಥ.

'तद् यदस्मिन् सर्पिर्वोदकं वा सिञ्चति' इत्यादिनाऽक्ष्णोऽसङ्गत्वशक्तिरुच्यते । एवं 'एतं संयद्वाम इत्याचक्षते' इत्यादिनाऽक्ष्यन्तःस्थस्य संयद्वामत्वशक्तिश्चोच्यते ।

तद्द्वयमक्ष्यन्तःस्थस्य ब्रह्मत्व एव युक्तमिति भावः ।।

'ತದ್ ಯದಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ' ಇತ್ಯಾದಿ ಶ್ರುತಿಯಲ್ಲಿ ಅಕ್ಷಿಗೆ ಅಸಂಗತ್ವ ಶಕ್ತಿಯು ಹೇಳಲ್ಪಟ್ಟಿದೆ. ಇದೇ ರೀತಿಯಾಗಿ 'ಏತಂ ಸಂಯದ್ವಾಮ ಇತ್ಯಾಚಕ್ಷತೇ' ಇತ್ಯಾದಿ ಶ್ರುತಿಯಿಂದ ಅಕ್ಷಿಯಲ್ಲಿರುವವನಿಗೆ ಸಂಯದ್ವಾಮತ್ವಶಕ್ತಿಯು ಹೇಳಲ್ಪಟ್ಟಿದೆ. ಈ ಎರಡೂ ಶಕ್ತಿಗಳು ಅಕ್ಷಿಯಲ್ಲಿರುವವನು ಬ್ರಹ್ಮನೆಂದು ಅಂಗೀಕರಿಸಿದರೆ ಮಾತ್ರ ಯುಕ್ತವಾಗುತ್ತವೆ.

प्रकरणबलाच्चैवमित्याह –

**ॐ सुखविशिष्टाभिधानादेव च ॐ ।। १-२-१५ ।।**

विशिष्टं च तत्सुखं च सुखविशिष्टं 'कडाराः कर्मधारये' इति परनिपातः । सुखेन विशिष्टमिति वा, सुखेषु विशिष्टमिति वा सुखविशिष्टम् । 'कं ब्रह्म खं ब्रह्म' इत्युपक्रमे कं सुखं ब्रह्म पूर्णमिति पूर्णत्वविशिष्टसुखरूपत्वाभिधानाच्चान्तरो ब्रह्मैवेत्यर्थः ।

ಪ್ರಕರಣದ ಬಲದಿಂದಲೂ ಅಕ್ಷಿಯಲ್ಲಿರುವವನು ಭಗವಂತನೇ ಆಗಿದ್ದಾನೆಂದು ಹೇಳುತ್ತಿದ್ದಾರೆ.

ಓಂ ಸುಖವಿಶಿಷ್ಟಾಭಿಧಾನಾದೇವ ಚ ಓಂ (೧-೨-೧೫)

'ವಿಶಿಷ್ಟಂ ಚ ತತ್ಸುಖಂ ಚ ಸುಖವಿಶಿಷ್ಟಂ' ಎಂದು ವಿಗ್ರಹ. 'ಕಡಾರಾಃ ಕರ್ಮಧಾರಯೇ' ಎಂಬ ಸೂತ್ರದಿಂದ ವಿಶಿಷ್ಟಪದವು ಸಮಾಸದಲ್ಲಿ ಪರನಿಪಾತವನ್ನು ಹೊಂದಿದೆ. ಅಥವಾ 'ಸುಖೇನವಿಶಿಷ್ಟಂ ಸುಖವಿಶಿಷ್ಟಂ' ಎಂದು ಅಥವಾ 'ಸುಖೇಷು ವಿಶಿಷ್ಟಂ ಸುಖವಿಶಿಷ್ಟಂ' ಎಂದೂ ಸಹ ವಿಗ್ರಹವನ್ನು ಮಾಡಬಹುದು. 'ಕಂ ಬ್ರಹ್ಮ' 'ಖಂ ಬ್ರಹ್ಮ' ಎಂದು ಉಪಕ್ರಮದಲ್ಲಿ 'ಕಂ ಸುಖನು, ಬ್ರಹ್ಮ ಪೂರ್ಣನು' ಎಂಬುದಾಗಿ ಪೂರ್ಣತ್ವವಿಶಿಷ್ಟವಾದ ಸುಖರೂಪತ್ವವನ್ನು ಹೇಳಿರುವುದರಿಂದಲೂ ಅಂತರನು ಬ್ರಹ್ಮನೇ ಆಗುತ್ತಾನೆಂದು ಸೂತ್ರಾರ್ಥ.

एवेत्यनेन तिष्ठतु तावत् खं ब्रह्मेति पूर्णज्ञानाभिधानमित्याह । विशिष्टेति जीवे व्यभिचारनिरासाय ।।

ಪರಿಪೂರ್ಣಚಂದ್ರಿಕಾ

'ಏವ' ಎಂದು ಹೇಳಿದ್ದರಿಂದ 'ಖಂ ಬ್ರಹ್ಮ' ಎಂದು ಪೂರ್ಣಜ್ಞಾನವೆಂದು ಹೇಳಿರುವುದು ಹಾಗೆಯೇ ಇರಲಿ ಎಂದು ತಿಳಿಸಿದ್ದಾರೆ. ವಿಶಿಷ್ಟ ಎಂಬ ಪದವನ್ನೂ ಹೇಳಿದ್ದರಿಂದ ಬ್ರಹ್ಮನಲ್ಲಿರುವ ಸುಖಪೂರ್ಣತ್ವವು ಜೀವನಲ್ಲಿ ಬರುವುದಿಲ್ಲವೆಂದು ವ್ಯಭಿಚಾರವನ್ನು ಪರಿಹರಿಸಿದ್ದಾರೆ.

अस्तु कं ब्रह्मेत्युक्ता ब्रह्मविद्या । अक्षिविद्या त्वग्निपराऽस्त्वित्यत आह –

**ॐ श्रुतोपनिषत्कगत्यभिधानाच्च ॐ ।। १-२-१६ ।।**

श्रुतेत्युपलक्षणम् । केति ब्रह्मवायू तन्त्रेणोक्तौ । 'प्राणो ब्रह्म कं ब्रह्म' इति तयोः प्रकृतत्वात् । श्रुतोपनिषदां श्रुतमतध्यातैतद्विद्यानां पुंसां केन वायुना कस्य ब्रह्मणो गतेः प्राप्तेः 'स एनान् ब्रह्म गमयति' इत्यभिधानाच्चान्तरो ब्रह्मैवेत्यर्थः ।

अन्यविद्याश्रवणादिनाऽन्यप्राप्तेरयोगादिति भावः ।।

'ಕಂ ಬ್ರಹ್ಮ' ಎಂದು ಹೇಳಿರುವುದು ಬ್ರಹ್ಮವಿದ್ಯೆಯೆಂದು ಒಪ್ಪೋಣ ಆದರೆ ಅಕ್ಷಿ ವಿದ್ಯೆ ಮಾತ್ರ ಅಗ್ನಿಪರವೇ ಆಗಲಿ ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಿದ್ದಾರೆ.

ಓಂ ಶ್ರುತೋಪನಿಷತ್ಕಗತ್ಯಭಿಧಾನಾಚ್ಚ ಓಂ (೧-೨-೧೬)

ಶ್ರುತ ಎಂಬುದು ಉಪಲಕ್ಷಣವಾಗಿದೆ. 'ಕಂ ಬ್ರಹ್ಮ' ಎಂಬುದರಿಂದ ಬ್ರಹ್ಮವಾಯುಗಳು ಪ್ರಕೃತರಾದ್ದರಿಂದ ಒಮ್ಮೆ ಉಚ್ಚರಿಸಿದ 'ಕ' ಶಬ್ದದಿಂದಲೇ ಬ್ರಹ್ಮವಾಯುಗಳಿಬ್ಬರೂ ಪ್ರತಿಪಾದ್ಯರಾಗಿದ್ದಾರೆ. ಶ್ರುತೋಪನಿಷದಾಂ = ಆಕ್ಷಿವಿದ್ಯೆ, ಶ್ರವಣ, ಮನನ, ಧ್ಯಾನ ಇವುಗಳನ್ನು ಮಾಡಿದ ಪುರುಷರಿಗೆ ಕೇನ = ವಾಯುವಿನಿಂದ, ಕಸ್ಯ = ಬ್ರಹ್ಮನ, ಗತೇಃ = ಪ್ರಾಪ್ತಿಯು, ಅಭಿಧಾನಾತ್ = 'ಸ ಏನಾನ್ ಬ್ರಹ್ಮ ಗಮಯತಿ' ಎಂದು ಹೇಳಿರುವುದರಿಂದಲೂ ಅಂತರ ಎನಿಸಿದವನು ಬ್ರಹ್ಮನೇ ಆಗುತ್ತಾನೆಂದು ಸೂತ್ರಾರ್ಥ. ಒಬ್ಬರ ವಿದ್ಯೆಯಿಂದ ಮತ್ತೊಬ್ಬರನ್ನು ಹೊಂದುವುದು ಸಾಧ್ಯವಿಲ್ಲವೆಂದು ತಿಳಿಯಬೇಕು.

विपक्षे बाधकेनाप्येवमित्याह –

**ॐ अनवस्थितेरसम्भवाच्च नेतरः ॐ ।। १-२-१७ ।।**

अन्तर इतरोऽग्निर्न । किन्तु ब्रह्मैव । कुतः? अनवस्थितेः । जीवस्थाग्नेर्जीवान्तरप्रेरकत्वे तस्यापि प्रेरकान्तरेण भाव्यम् । तस्यापि तथेत्यनवस्थानात् । अङ्गीकृत्य चेदमुदितम् । अग्नेरपि प्रेर्येण जीवत्वसाम्येन प्रेरणासम्भवाच्चेत्यर्थः ।।

ಅಂತರಾಧಿಕರಣ (೧-೨-೪)

'ಅಂತರ' ಎಂಬ ಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನೆಂದು ಒಪ್ಪದಿದ್ದರೆ ಬಾಧಕವಿದೆಯೆಂದು ಹೇಳುತ್ತಿದ್ದಾರೆ.

ಓಂ ಅನವಸ್ಥಿತೇರಸಂಭವಾಚ್ಚ ನೇತರಃ ಓಂ (೧-೨-೧೭)

ಅಂತರನು ಇತರಃನ = ಬ್ರಹ್ಮನಿಗಿಂತ ಭಿನ್ನನಾದ ಅಗ್ನಿಯಲ್ಲ. ಹೊರತು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಅನವಸ್ಥಿತೇಃ = ಜೀವನೇ ಆದ ಅಗ್ನಿಗೆ ಜೀವಾಂತರಪ್ರೇರಕತ್ವವನ್ನು ಒಪ್ಪಿದರೆ ಅವನಿಗೂ ಮತ್ತೊಬ್ಬ ಪ್ರೇರಕನ ಅವಶ್ಯಕತೆ ಇದೆ. ಆ ಪ್ರೇರಕನಿಗೂ ಮತ್ತೊಬ್ಬ ಪ್ರೇರಕನು ಬೇಕಾಗಿರುವುದರಿಂದ ಅನವಸ್ಥಾ ದೋಷ ಬರುತ್ತದೆ. ಅಗ್ನಿಗೆ ಪ್ರೇರಕತ್ವವನ್ನು ಒಪ್ಪಿದಾಗ ಅನವಸ್ಥಾವನ್ನು ಹೇಳಿದ್ದಾರೆ. ಆದರೆ ಅಗ್ನಿಯು ಪ್ರೇರಕನೇ ಅಲ್ಲ. ಹೊರತಾಗಿ ಪ್ರೇರ್ಯನಾದ ಜೀವನಿಂದ ಸಮಾನಧರ್ಮವುಳ್ಳವನಾದ್ದರಿಂದ ಪ್ರೇರಣೆಯೇ ಇವನಿಗೆ ಅಸಂಭಾವಿತವಾಗಿದೆ. ಈ ಕಾರಣದಿಂದಲೂ ಅಗ್ನಿಯು ಅಂತರ ಎನಿಸಲು ಸಾಧ್ಯವಿಲ್ಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಅಂತರಾಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावलिः

## अन्तराधिकरणम् -४

ॐ अन्तर उपपत्तेः ॐ ।। १-२-१३ ।।

ॐ स्थानादिव्यपदेशाच्च ॐ ।। १-२-१४ ।।

ॐ सुखविशिष्टाभिधानादेव च ॐ ।। १-२-१५ ।।

ॐ श्रुतोपनिषत्कगत्यभिधानाच्च ॐ ।। १-२-१६ ।।

ॐ अनवस्थितेरसम्भवाच्च नेतरः ॐ ।। १-२-१७ ।।

अत्र चक्षुरन्तस्थस्याभयस्यान्यत्वे प्राचीनोऽप्यभयत्वेनोक्तोऽन्यः स्यादिति पूर्वोक्ताक्षेपात् सङ्गतिः ।

ಈ ಅಧಿಕರಣದಲ್ಲಿ ಚಕ್ಷುರಿಂದ್ರಿಯದಲ್ಲಿ ನೆಲೆಸಿರುವ ಅಭಯಸ್ವರೂಪನಾದವನು ಅನ್ಯನಾದರೆ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಅಭಯಸ್ವರೂಪನೂ ಸಹ ಅನ್ಯನೇ ಆಗುತ್ತಾನೆಂದು ಆಕ್ಷೇಪ ಮಾಡಿ ಉತ್ತರಿಸುತ್ತಿರುವುದರಿಂದ ಆಕ್ಷೇಪಿಕೀ ಸಂಗತಿಯನ್ನು ತಿಳಿಯಬಹುದು.

छान्दोग्ये चतुर्थेऽध्याये 'य एषोऽन्तरक्षिणि पुरुषो दृश्यते एष आत्मेति होवाच एतदमृतमभयमेतद् ब्रह्म' इति श्रुतोऽक्ष्यन्तस्थ आत्मा किमग्निरुत विष्णुरिति सन्देहः ।

ಛಾಂದೋಗ್ಯದ ಚತುರ್ಥಾಧ್ಯಾಯದಲ್ಲಿ 'ಯ ಏಷೋಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ ಏತದಮೃತಮಭಯಮೇತದ್ ಬ್ರಹ್ಮ' ಎಂಬ ವಾಕ್ಯವು ಕೇಳಿಸುತ್ತಿದೆ. ಇದರಲ್ಲಿ ಕೇಳಿಸುತ್ತಿರುವ ಚಕ್ಷುರಿಂದ್ರಿಯದಲ್ಲಿರುವ ಆತ್ಮನು ಅಗ್ನಿಯೋ ? ಅಥವಾ ವಿಷ್ಣುವೋ ? ಎಂದು ಸಂದೇಹ.

अग्निरिति पूर्वः पक्षः । 'य एष आदित्ये पुरुषः सोऽहमस्मि, स एवाहमस्मि' इति गार्हपत्याख्याग्निना स्वात्मनः आदित्यस्थत्वोक्तेः 'आदित्यश्चक्षुर्भूत्वा' इत्यादिश्रुत्या अक्ष्यादित्ययोरेकदैवत्यत्वाद् 'अथ हाग्नयः समूदिरे' इत्यग्निश्रुतिबाहुल्याच्च ।

ಅಗ್ನಿಯೇ ಪ್ರತಿಪಾದ್ಯನೆಂದು ಪೂರ್ವಪಕ್ಷ. ಏಕೆಂದರೆ 'ಯ ಏಷ ಆದಿತ್ಯೇ ಪುರುಷಃ ಸೋऽಹಮಸ್ಮಿ, ಸ ಏವಾಹಮಸ್ಮಿ'' ಎಂಬುದಾಗಿ ಗಾರ್ಹಪತ್ಯಾಗ್ನಿಯಿಂದ ತಾನು ಅಭಿನ್ನನೆಂದು ಆದಿತ್ಯನಲ್ಲಿರುವವನೆಂದು ಹೇಳಿದ್ದರಿಂದ 'ಆದಿತ್ಯಚಕ್ಷುರ್ಭೂತ್ವಾ' ಇತ್ಯಾದಿ ಶ್ರುತಿಯ ಪ್ರಮಾಣದಂತೆ ಅಕ್ಷಿ ಹಾಗೂ ಆದಿತ್ಯರಲ್ಲಿ ಒಬ್ಬನೇ ಇದ್ದಾನೆಂದು ತಿಳಿಯುತ್ತದೆ. ಈ ಕಾರಣದಿಂದ ಮತ್ತು 'ಅಥ ಹಾಗ್ನಯಃ ಸಮೂದಿರೇ' ಎಂಬ ಅಗ್ನಿಶ್ರುತಿಯ ಬಾಹುಲ್ಯದಿಂದಲೂ ಅಗ್ನಿಯೇ ಪ್ರತಿಪಾದ್ಯನೆಂದು ಸ್ಪಷ್ಟವಾಗುತ್ತದೆ.

